



ಆನ್ನ ಕಿರೀಲ್ಲೊವ್ನ ಜಲೋಮೊವ, ಮಾಕ್ಸಿಂ ಗೋರ್ಕಿಯವರ 'ತಾಯಿ' ಕಾದಂಬರಿಯ ನಾಯಕಿ ಪೆಲಗೇಯ ನೀಲೊವ್ನ ವ್ಲಾಸೊವಳ ಮೂಲವ್ಯಕ್ತಿ.

ಪ್ಯೋತರ್ ಜಲೋಮೊವ್ ಮತ್ತು ಅವರ ಪತ್ನಿ ಜೊಸೆಫೀನ ಜಲೋಮೊ ಪ್ಯೋತರ್ ಜಲೋಮೊವ್ ಪಾವೆ ವ್ಲಾಸೊವ್‌ನ ಪಾತ್ರದ ಮೂಲವ್ಯ

"ನೀಲೊವ್ನ ಜೀವಂತ ವ್ಯಕ್ತಿಯೆ? ಕ್ರಾಂತಿಯ ಸಿದ್ಧತೆ ಮತ್ತು ನಿಷಿದ್ಧ ಕ್ರಾಂತಿ ಚಟುವಟಿಕೆಗಳಲ್ಲಿ ಅನೇಕ ತಾಯಂದಿರೂ ಕೂಡ ಭಾಗವಹಿಸಿದರು ನೀಲೊವ್ನ – ಪ್ಯೋತರ್ ಜಲೋಮೊವ್‌ನ ತಾಯಿಯ ಭಾವಚಿತ್ರಣ. ಆ ಸಂಘಟನೆಯಲ್ಲಿ ಕೆಲಸಮಾಡುತ್ತಿದ್ದಳು, ಪಾದಚಾರಿ ಸನ್ಯಾಸಿನಿಯ ವೇಷಧರಿ ಕ್ರಾಂತಿಸಾಹಿತ್ಯವನ್ನು ಹಂಚುತ್ತಿದ್ದಳು.... ಆಕೆ ಅಪರೂಪ ವ್ಯಕ್ತಿಯಲ್ಲ.

ಪಾವೆಲ್ ವ್ಲಾಸೊವ್ ಕೂಡ ವಿರಳ ವ್ಯಕ್ತಿಯೇನಲ್ಲ. ವಾಸ್ತವವಾಗಿ ಅಂತಹ ಯುವಕರೇ ಬೊಲ್ಶೆವಿಕರ ಪಕ್ಷ ರಚಿಸಿದರು."

ಎಂ. ಗೋರ್ಕಿ

ಇಡೀ ವಿಶ್ವಸಾಹಿತ್ಯ ಇತಿಹಾಸದಲ್ಲಿ ಕೇವಲ ಕೆಲವೇ ಸಾಹಿತ್ಯ ಕೃತಿಗಳು ಮಕ್ಸೀಂ ಗೋರ್ಕಿಯವರ ಈ ಪುಸ್ತಕದ ರೀತಿ ಭಾರಿ ಸಂಖ್ಯೆಯ ಓದುಗರನ್ನು ಪಡೆದು ಪರಿಣಾಮಕಾರಿಯಾಗಿ ಮತ್ತು ನೇರವಾಗಿ ಮಿಲಿಯಾಂತರ ಜನರ ಮೇಲೆ ಪ್ರಭಾವ ಬೀರಿವೆ. 1905-1907ರಲ್ಲಿ ನಡೆದ ಪ್ರಥಮ ರಷ್ಯಾ ಕ್ರಾಂತಿಯ ಸಮಯದಲ್ಲಿ ರಚಿತವಾದ ಈ ಕಾದಂಬರಿ, ಇದುವರೆಗೂ ವಿವಿಧ ದೇಶಗಳ ಓದುಗರ ಅಚ್ಚುಮೆಚ್ಚಿನ ಪುಸ್ತಕವಾಗಿದೆ. ಈ ಪುಸ್ತಕ 127 ವಿದೇಶಿ ಮತ್ತು ಸೋವಿಯತ್ ಒಕ್ಕೂಟದ ಜನಾಂಗಗಳ ಭಾಷೆಗಳಲ್ಲಿ ಮಿಲಿಯಾಂತರ ಪ್ರತಿಗಳಲ್ಲಿ ಪ್ರಕಟವಾಗಿದೆ.

"ಈ ಪುಸ್ತಕ ಅತ್ಯಾವಶ್ಯಕವಾದದ್ದು ; ಅನೇಕ ಶ್ರಮಿಕರು ತಮಗರಿಯದಂತೆಯೇ ಸಹಜ ಪ್ರವೃತ್ತಿಯಿಂದ ಕ್ರಾಂತಿಕಾರಿ ಚಳವಳಿಯಲ್ಲಿ ಭಾಗ ವಹಿಸಿದ್ದಾರೆ. ಈಗ ಅವರು 'ತಾಯಿ' ಕಾದಂಬರಿಯನ್ನು ಓದಿ ಬಹಳ ಪ್ರಯೋಜನ ಪಡೆಯುತ್ತಾರೆ.... ಅತ್ಯಂತ ಸಕಾಲಿಕ ಪುಸ್ತಕ" ಎಂದು ವಿ. ಐ. ಲೆನಿನ್ ಈ ಕಾದಂಬರಿಯ ಕುರಿತು ಹೇಳಿದರು.

'ತಾಯಿ' ಕಾದಂಬರಿಯ ಪ್ರಸಕ್ತ ಆವೃತ್ತಿ ಖ್ಯಾತ ಸೋವಿಯತ್ ಸಾಹಿತ್ಯ ವಿಮರ್ಶಕ ಬರೀಸ್ ಬ್ಯಾಲಿಕ್ ಅವರ ಮುನ್ನುಡಿಯನ್ನೂ 'ತಾಯಿ' ಕಾದಂಬರಿಯ ಪಾತ್ರಗಳ ಮೂಲವ್ಯಕ್ತಿಗಳಾದ ಅನ್ನ ಜಲೋಮೊವ ಮತ್ತು ಆಕೆಯ ಪುತ್ರ ಪ್ರಮುಖ ಕ್ರಾಂತಿಕಾರಿ ಪ್ಯೋತರ್ ಜಲೋಮೊವ್ ಅವರ ನಿಜ ಜೀವನ ಗತಿಯನ್ನು ತಿಳಿಸುವ ಹಿನ್ನುಡಿಯನ್ನೂ ಹೊಂದಿದೆ.

ಘಟನೆ ನಡೆದ ಸಮಯದ ಸಾಕ್ಷ್ಯನಿರೂಪಣ ಛಾಯಾಚಿತ್ರಗಳನ್ನೂ ಮತ್ತು ಲೇಖಕರ ಚಿತ್ರಗಳನ್ನು ಸೇರಿಸಲಾಗಿದೆ.

# ಮಕ್ಸೀಂ ಗೋರ್ಕಿ

# ತಾಯಿ



ರಾದುಗ ಪ್ರಕಾಶನ
ಮಾಸ್ಕೋ

# ಪರಿವಿಡಿ

# ಮುನ್ನುಡಿ

'ತಾಯಿ' ಪುಸ್ತಕದ ಕಥೆ ತುಂಬ ಅಸಾಮಾನ್ಯವಾದುದು. ಇದರಷ್ಟು ಅಪಾರ ಸಂಖ್ಯೆಯ ಓದುಗರನ್ನು ಹೊಂದಿರುವ ಹಾಗೂ ಲಕ್ಷಾಂತರ ಜನರ ಆಗುಹೋಗುಗಳ ಮೇಲೆ ನೇರ ಪ್ರಭಾವ ಬೀರಿರುವ ಪುಸ್ತಕಗಳು ಜಾಗತಿಕ ಸಾಹಿತ್ಯೇತಿಹಾಸದಲ್ಲಿ ಕೆಲವೇ ಎನ್ನಬಹುದು.

ಈ ಕಾದಂಬರಿಯ ಹಸ್ತಪ್ರತಿ ಓದಿದನಂತರ ವಿ. ಐ. ಲೆನಿನ್ ಇದೊಂದು ಅತ್ಯವಶ್ಯ ಪುಸ್ತಕ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಅಪಾರ ಸಂಖ್ಯೆಯಲ್ಲಿ ಕಾರ್ಮಿಕರು ಕ್ರಾಂತಿಕಾರಿ ಚಳವಳಿಯಲ್ಲಿ ಸ್ವಪ್ರೇರಣೆಯಿಂದ ಭಾಗವಹಿಸಿದರು, ಈಗವರು 'ತಾಯಿ' ಕಾದಂಬರಿಯನ್ನೋದಿ ತುಂಬ ಪ್ರಯೋಜನ ಪಡೆದುಕೊಳ್ಳುವರು; ಇದೊಂದು ಅತ್ಯಂತ ಸಕಾಲಿಕ ಪುಸ್ತಕ ಎಂದರವರು.

ಗೋರ್ಕಿಯವರು 'ತಾಯಿ' ಬರೆಯಲು ನಿರ್ಧರಿಸಿದುದು 1902ರಲ್ಲಿ, ನಿಝ್ನಿ-ನೋವ್ಗೊರೊದ್‌ನ ಕಾರ್ಮಿಕರು ವಾಸಿಸುತ್ತಿದ್ದ ಉಪನಗರ ಸೋರ್ಮೋವೊನಲ್ಲಿ ನಡೆದ ಮೇ ದಿನದ ಪ್ರದರ್ಶನದನಂತರ. ಈ ಪ್ರದರ್ಶನವೂ, ಅದರಲ್ಲಿ ಭಾಗವಹಿಸಿದ್ದವರನ್ನು ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿದುದೂ, ರಶಿಯದಾದ್ಯಂತ ವಿಶಾಲ ಪ್ರತಿಕ್ರಿಯೆ ಉಂಟುಮಾಡಿದವು. ಅನಂತರ 1935ರಲ್ಲಿ ಗೋರ್ಕಿಯವರು ಸೋರ್ಮೋವೊ ಕಾರ್ಮಿಕರಿಗೆ ಕಳುಹಿಸಿದ ತಂತೀಸಂದೇಶದಲ್ಲಿ ಅಂದಿನ ಮೇ ದಿನ ಪ್ರದರ್ಶನವನ್ನು ನೆನಪಿಗೆ ತಂದು "ಅದೊಂದು ಮಹೋನ್ನತ ಚಾರಿತ್ರಿಕ ಪ್ರಾಮುಖ್ಯತೆಯ ದಿನ," "ಶ್ರಮಜೀವಿ ವರ್ಗವು ತನ್ನ ಭೀಕರ ಶತ್ರುವಿನೊಂದಿಗೆ ನಡೆಸಿದ ಮೊದಲ ಘರ್ಷಣೆಯ ದಿನ, ಶ್ರಮಜೀವಿ ವರ್ಗ ತನ್ನ ಅತುಲ ಪರಾಕ್ರಮ ತೋರಿದ ದಿನ" ಎಂದು ಬಣ್ಣಿಸಿದರು.

ಗೋರ್ಕಿಯವರು ಆ ಪ್ರದರ್ಶನದಲ್ಲಿ ಭಾಗವಹಿಸಿದ್ದ ಅನೇಕರನ್ನು, ಅವರಲ್ಲಿ ಪ್ರದರ್ಶನದ ಧ್ವಜಧಾರಿಯಾಗಿದ್ದ ಸೋರ್ಮೋವೊ ಸೋಷಲ್ ಡೆಮೊಕ್ರಾಟಿಕ್ ಸಂಘಟನೆಯ ನಾಯಕರಲ್ಲೊಬ್ಬನಾಗಿದ್ದ ಕಾರ್ಮಿಕ ಪ್ಯೋತ್ರ್ ಜಲೋಮೊವ್ ಮತ್ತು ಅವನ ತಾಯಿ ಆನ್ನ ಕಿರೀಲ್ಲೊವ್ನ ಜಲೋಮೊವಳನ್ನು ವೈಯಕ್ತಿಕವಾಗಿ ತಿಳಿದಿದ್ದರು

ಇವರೇ ಕಾದಂಬರಿಯ ಪಾವೆಲ್ ವ್ಲಾಸೊವ್ ಹಾಗೂ ಪೆಲಗೇಯ ನೀಲೊವ್ನ ವ್ಲಾಸೊವ ಪಾತ್ರಗಳಿಗೆ ಮೂಲವ್ಯಕ್ತಿಗಳು. ಆದರೂ ಈ ಇಬ್ಬರ ವ್ಯಕ್ತಿಚಿತ್ರಗಳೂ ಕಾದಂಬರಿಯಲ್ಲಿ ಬರುವ ಉಳಿದ ಪಾತ್ರಗಳ ಹಾಗೂ ದೃಶ್ಯಗಳ ಚಿತ್ರಣವೂ, ನಿಜ ಜನರ ಹಾಗೂ ಘಟನೆಗಳ ತದ್ರೂಪ ಛಾಯಾಚಿತ್ರಣವೇನೂ ಅಲ್ಲ.

ನೀಲೊವ್ನಳ ಪಾತ್ರವು "ಪ್ಯೋತ್ರ್ ಜಲೋಮೊವ್‌ನ ತಾಯಿಯ ಭಾವಚಿತ್ರಣ" ಎಂದು ಬರೆಯುತ್ತ ಗೋರ್ಕಿ 1911ರಲ್ಲಿ ತಮ್ಮ ಪತ್ರಗಳೊಂದರಲ್ಲಿ ಹೀಗೆ ವಿವರಿಸಿದರು: "ಈಕೆಯೇನೂ ಅಪರೂಪದ ವ್ಯಕ್ತಿಯಲ್ಲ. ಕದೋಮ್‌ತ್ಸೆವ್ ಕುಟುಂಬದ ತಾಯಿಯ ನೆನಪು ಮಾಡಿಕೊಳ್ಳಿ. ಆಕೆ ಕಾವಲುಗಾರರ ಕಣ್ಣು ತಪ್ಪಿಸಿ ಜೈಲಿನೊಳಕ್ಕೆ ಒಂದು ಬಾಂಬು ಸಾಗಿಸಿದಳೆಂದು ಆಕೆಯನ್ನು ಉಫಾದಲ್ಲಿ ವಿಚಾರಣೆಗೆ ಗುರಿಪಡಿಸಲಾಯಿತು. ಈ ಬಾಂಬನ್ನು ಉಪಯೋಗಿಸಿಕೊಂಡೇ ಜೈಲಿನ ಗೋಡೆಯನ್ನು ಸಿಡಿಸಿ ಒಳಗಿದ್ದ ಕಾರ್ಮಿಕ ಕ್ರಾಂತಿಕಾರಿಗಳು ತಪ್ಪಿಸಿಕೊಂಡಿದ್ದರು. ಹೀಗೆ ತಮ್ಮ ಮಕ್ಕಳ ಜೊತೆಯಲ್ಲೇ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಯಾದ ಹತ್ತಾರು ತಾಯಂದಿರ ಹೆಸರುಗಳನ್ನು ಫ಼ಾನು ನೀಡಬಲ್ಲೆ. ಅವರಲ್ಲಿ ಕೆಲವರು ನನಗೆ ವೈಯಕ್ತಿಕವಾಗಿಯೂ ತಿಳಿದಿದ್ದಾರೆ."

1933ರಲ್ಲಿ ಗೋರ್ಕಿ ಸ್ಮರಿಸಿಕೊಳ್ಳುತ್ತಾರೆ: "ಕಾರ್ಮಿಕರ ಬಗೆಗೆ ಕೃತಿ ರಚಿಸಬೇಕೆಂಬ ವಿಚಾರ ನನಗೆ ಹೊಳೆದುದು ನೀಝ್ನಿ-ನೋವ್ಗೊರೊದ್‌ನಲ್ಲಿ, ಸೋರ್ಮೊವೊ ಪ್ರದರ್ಶನದನಂತರ, ವಿಷಯ ಸಂಗ್ರಹಣೆ ಮಾಡಿ ಟಿಪ್ಪಣಿ ಹಾಕಿಕೊಂಡೆ. ಸಾವ್ವ ಮೊರೋಜೊವ್, ತಮಗೆ ಕಾರ್ಮಿಕರು ಬರೆದಿದ್ದ ಸುಮಾರು ಇಪ್ಪತ್ತು ಅತ್ಯಂತ ಸ್ವಾರಸ್ಯಕರ ಪತ್ರಗಳನ್ನು ನನಗೆ ಕೊಟ್ಟರು ಮತ್ತು ಕಾರ್ಖಾನೆ ಜೀವನದಲ್ಲಿ ತಾವು ಕಂಡ ಅನೇಕ ಸ್ವಾರಸ್ಯಕರ ಘಟನೆಗಳನ್ನೂ ತಿಳಿಸಿದರು.... ಹೀಗೆ ನಾನು ಸಂಗ್ರಹಿಸಿದ ಸಾಮಗ್ರಿ 1905ರ ಜನವರಿ 9ರನಂತರ ಹೇಗೋ ಕಣ್ಮರೆಯಾಯಿತು. ಬಹುಶಃ ಪೋಲೀಸರು ನನಗೆ ಹಿಂದಿರುಗಿಸಲಿಲ್ಲವೆಂದು ಕಾಣುತ್ತದೆ...."

ಮಕ್ಸೀಂ ಗೋರ್ಕಿಯವರು 'ತಾಯಿ' ಕಾದಂಬರಿಯ ರಚನಾ ಕಾರ್ಯವನ್ನು 1906ರ ಜೂನ್‌ನಲ್ಲಿ ಅಮೆರಿಕದಲ್ಲಿದ್ದಾಗ ಪ್ರಾರಂಭಿಸಿದರು. ಅಲ್ಲಿಯೇ ಸೆಪ್ಟೆಂಬರ್ ಆದಿಯ ಹೊತ್ತಿಗೆ ಅದರ ಮೊದಲ ಭಾಗವನ್ನು ಮುಗಿಸಿದರು; ಎರಡನೆಯ ಭಾಗವನ್ನು ಇಟಲಿಯ ಕಾಪ್ರಿ ದ್ವೀಪದಲ್ಲಿದ್ದಾಗ ಡಿಸೆಂಬರ್ ಹೊತ್ತಿಗಾಗಲೇ ಮುಗಿಸಿದ್ದರು. 'ತಾಯಿ' ಮೊದಲು ಇಂಗ್ಲಿಷಿನಲ್ಲಿ 1906ರ ಡಿಸೆಂಬರ್-1907ರ ಫೆಬ್ರುವರಿಯಲ್ಲಿ ನ್ಯೂಯಾರ್ಕ್‌ನಲ್ಲಿ 'ಆಪ್ಲ್‌ಟನ್ ಮ್ಯಾಗಜೀನ್'ನಲ್ಲಿ ಪ್ರಕಟವಾಯಿತು. 1907ರಲ್ಲಿ ಈ ಕಾದಂಬರಿ 'ಜ್ನಾನಿಯೆ' ('ಜ್ಞಾನ') ಸಂಗ್ರಹದ 16-21ನೇ ಸಂಪುಟಗಳಲ್ಲಿ ಪ್ರಕಟವಾಯಿತು. 1917ಕ್ಕೆ ಮುನ್ನ 'ತಾಯಿ'ಯನ್ನು ರಶಿಯದಲ್ಲಿ ಸೆನ್ಸಾರ್‌ಷಿಪ್ ಮೊಟಕುಮಾಡಿದ ರೂಪದಲ್ಲಷ್ಟೆ ಮುದ್ರಿಸಲು ಸಾಧ್ಯವಿದ್ದಿತು. ಅದರ ಕರ್ತೃವಿನ ಮೇಲೆ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲಾಯಿತು.

ಇದಕ್ಕೆ ಸಂಬಂಧಿಸಿ 'ವೇದೊಮೊಸ್ತಿ ಎಸ್ಪಿ ಗ್ರದೊನಚಾಲ್‌ಸ್ತ್ವ' ('ಸೆಂಟ್ ಪೀಟರ್ಸ್‌ಬರ್ಗ್ ನಗರಸಭೆಯ ಬುಲೆಟಿನ್')ನಲ್ಲಿ ಒಂದು ಕೌತುಕಪೂರ್ಣ ವಿವರಣೆ ಪ್ರಕಟವಾಯಿತು (ಅದು ಜಗದ್ವಿಖ್ಯಾತ ಲೇಖಕರೊಬ್ಬರಿಗೆ ಸಂಬಂಧಿಸಿದ್ದಿತು, ಅವರ ವಾಸಸ್ಥಳ ಎಷ್ಟು ಸುವಿಖ್ಯಾತವಾಗಿದ್ದಿತೆಂದರೆ ಕಾಪ್ರಿಯ ಬದಲು ಕ್ರೀಟ್ ಎಂಬ ವಿಳಾಸವಿದ್ದ ಪತ್ರಗಳೂ ಅವರಿಗೆ ತಲುಪುತ್ತಿದ್ದವು, ಎಂಬುದನ್ನು ನೆನಪಿನಲ್ಲಿಟ್ಟಿರೋಣ): "ಸೆಂಟ್ ಪೀಟರ್ಸ್‌ಬರ್ಗ್ ಪ್ರಾಂತೀಯ ನ್ಯಾಯಾಲಯದಲ್ಲಿ, ನೀಝ್ನಿ-ನೋವ್ಗೊರೊದ್‌ನ ಬಣ್ಣಗಾರನಾದ, ಪೋಲೀಸರಿಗೆ ಬೇಕಾಗಿದ್ದ ಅಲೆಕ್ಸೇಯ್ ಮಕ್ಸೀಮೊವಿಚ್ ಪೆಷ್ಕೋವ್ (ಮಕ್ಸೀಂ ಗೋರ್ಕಿ)ನ ಮೇಲೆ ದೋಷಾರೋಪಣೆ."

ಕಾದಂಬರಿ ಕೂಡಲೇ ಅತ್ಯಂತ ಜನಪ್ರಿಯವಾಯಿತು. 1907-1908ರ ಹೊತ್ತಿಗಾಗಲೇ ಅದು ಅಮೆರಿಕ, ಬ್ರಿಟನ್, ಬಲ್ಗೇರಿಯಾ, ಜರ್ಮನಿ, ಹಾಲೆಂಡ್, ಡೆನ್‌ಮಾರ್ಕ್, ಸ್ಪೈನ್, ಇಟಲಿ, ಸೇರ್ಬಿಯಾ, ಟರ್ಕಿ, ಫಿನ್ಲೆಂಡ್, ಫ್ರಾನ್ಸ್, ಸ್ವೀಡನ್ ಮತ್ತಿತರ ದೇಶಗಳಲ್ಲಿ ಪ್ರಕಟವಾಯಿತು. ಕೆಲವು ದೇಶಗಳಲ್ಲಿ ಕಾದಂಬರಿಯ ಹಲವು ಆವೃತ್ತಿಗಳು ಮೊದಲು ವೃತ್ತಪತ್ರಿಕೆ ಅಥವಾ ನಿಯತಕಾಲಿಕಗಳಲ್ಲಿ ಪ್ರಕಟವಾಗಿ ಅನಂತರ ಪ್ರಧಾನ ಆವೃತ್ತಿ ಕಾಣಿಸಿಕೊಂಡಿತು. ಎ. ವಿ. ಲುನಚಾರ್ಸ್ಕಿ ಹೀಗೆ ಬರೆದಿದ್ದಾರೆ: "ಕಾರ್ಮಿಕ ಪತ್ರಿಕೆಗಳು, ಹೆಚ್ಚಾಗಿ ಜರ್ಮನ್ ಪತ್ರಿಕೆಗಳು, ಈ ಕಾದಂಬರಿಗೆ ಬೆಂಬಲ ನೀಡಿದವು, ತಮ್ಮ ವೃತ್ತಪತ್ರಿಕೆಗಳಿಗೆ ಪುರವಣಿಗಳಾಗಿ ಅಥವ ಲಘು ಲೇಖನಗಳ ರೂಪದಲ್ಲಿ ಲಕ್ಷಾಂತರ ಪ್ರತಿಗಳಲ್ಲಿ ಮುದ್ರಿಸಿ ಹಂಚಿದವು. ಐರೋಪ್ಯ ಶ್ರಮಜೀವಿಗಳಿಗೆ 'ತಾಯಿ' ಕೈಪಿಡಿಯಾಯಿತು."

ಐರೋಪ್ಯ ಶ್ರಮಜೀವಿಗಳಿಗಷ್ಟೆ ಅಲ್ಲ, ಅನಂತರ ಇತರ ಖಂಡಗಳ ಕೋಟ್ಯಾಂತರ ಓದುಗರಿಗೂ ಅದು ಕೈಪಿಡಿಯಾಯಿತು ಎಂದು ನಾವು ಸೇರಿಸಬಹುದು.

'ತಾಯಿ' ಕಾದಂಬರಿ ಕೋಟ್ಯಾಂತರ ಓದುಗರ ಮೆಚ್ಚಿನ ಸರಳ ಕೃತಿಯಾಗಿರುವುದು ಸಹಜ. ಅದೇ ಸಮಯ ಎದ್ದು ಕಾಣುವಂಥ ಅನನ್ಯತೆಯಲ್ಲೂ, ದಿಟ್ಟತನದ ಹೊಸ ರೂಪದಲ್ಲೂ, ಈ ರೂಪಕ್ಕೆ ತಕ್ಕದಾಗಿದ್ದ ಅದರ ವಸ್ತುಸಂಪತ್ತಿನಲ್ಲೂ ಅದು ಅತ್ಯಂತ ಸಂಕೀರ್ಣ ಕೃತಿಯಾಗಿದೆ. ಯಾವುದು ಇದರ ಈ ವಸ್ತುಸಂಪತ್ತು? ಈ ಪ್ರಶ್ನೆ ಮೊದಲ ನೋಟಕ್ಕೆ ಕಾಣುವಷ್ಟು ಸರಳವೇನಲ್ಲ.

'ತಾಯಿ' ಕಾದಂಬರಿ ಕಾರ್ಮಿಕ ವರ್ಗದ ಜೀವನ, ನಿರಂಕುಶ ಪ್ರಭುತ್ವ ಹಾಗೂ ಬೂರ್ಷ್ವಾಸೀಯ ವಿರುದ್ಧ ಅದರ ಹೋರಾಟ, ಅದರ ಕ್ರಾಂತಿಕಾರಿ ಜಾಗೃತಿಯ ಬೆಳವಣಿಗೆ, ಕಾರ್ಮಿಕರ ಮಧ್ಯದಿಂದಲೇ ನಾಯಕರು, ಮುಖಂಡರು ಕಾಣಿಸಿಕೊಂಡುದು, ಇವನ್ನೆಲ್ಲ ಚಿತ್ರಿಸುತ್ತದೆ ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಇವೆಲ್ಲ ವಾಸ್ತವವಾಗಿ ನಿಜವಾದವು. ಆದರೆ ಅಂಥ ಹೇಳಿಕೆ ತೀರ ಸರ್ವಸಾಮಾನ್ಯವಾದುದು. ಅದರ ವಸ್ತುಸಂಪತ್ತು ವಿಶಿಷ್ಟವಾಗಿ ಏಕೆ ಕಲಾತ್ಮಕ ರೂಪದಲ್ಲಿ ಮಾತ್ರ ಹೊರಬಂದಿತು ಎಂಬುದನ್ನು ಅರ್ಥಮಾಡಿಕೊಳ್ಳಲು ಅದು ಅಷ್ಟಾಗಿ ಸಹಾಯವಾಗದು. ಅಲ್ಲದೆ

ಹೊಸ ಪ್ರಶ್ನೆಗಳೂ ಉದ್ಭವಿಸುತ್ತವೆ – ಕಾರ್ಮಿಕ ವರ್ಗದ ಜೀವನ ಕುರಿತಾದ ಈ ಕಾದಂಬರಿಯಲ್ಲಿ ಕಾರ್ಮಿಕರ ದುಡಿಮೆಯು ಚಿತ್ರಣವೇ ಇಲ್ಲವೇಕೆ? ಗೋರ್ಕಿಯವರ ಆರಂಭಿಕ ಕಥೆ ಕಾದಂಬರಿಗಳಲ್ಲಿ ಕಾಣಬರುವಂತೆ ಇದರಲ್ಲಿ ಶ್ರಮಿಕರ ದುಡಿಮೆಯು ಪ್ರತ್ಯೇಕ ದೃಶ್ಯಗಳೂ ಇಲ್ಲವೇಕೆ? 'ತಾಯಿ' ಕೃತಿಯು ನಾಯಕಪಾತ್ರಗಳು ಕೆಲಸ ಮಾಡುವ ಕಾರ್ಖಾನೆಯು ಹೆಸರು ಕೂಡ ನಮಗೆ ತಿಳಿಯದು.

ನಮ್ಮ ಗಮನ ಸೆಳೆಯುವ ಮತ್ತೊಂದು ಸಂಗತಿ ಎಂದರೆ – ಶ್ರಮಜೀವಿಗಳ ವರ್ಗಹೋರಾಟವನ್ನು ಚಿತ್ರಿಸುವ ಈ ಕಾದಂಬರಿಯಲ್ಲಿ ಏಕೈಕ ಬಂಡವಾಳಗಾರನ ಚಿತ್ರಣವೂ ಇಲ್ಲದಿರುವುದು ಹಾಗೂ ಬೂರ್ಷ್ವಾಸೀಯ ಮತ್ತು ನಿರಂಕುಶ ಆಡಳಿತದ ನಾನಾ ಸೇವಕರನ್ನು – ಕಾರ್ಖಾನೆಯು ಡೈರೆಕ್ಟರ್, ಟೈಂ-ಕೀಪರ್ ಆಗಿ ಕೆಲಸ ಮಾಡುವ ರಹಸ್ಯ ಪೋಲೀಸ್ ಏಜೆಂಟ್, ಪೋಲೀಸು, ಸೈನಿಕರು, ನ್ಯಾಯಾಧೀಶರು ಮುಂತಾದವರನ್ನು – ಉದಾತ್ತಗುಣಸಂಪನ್ನ ನಾಯಕರ ಚಿತ್ರಣಕ್ಕೆ ವ್ಯತಿರಿಕ್ತವಾಗಿ, ಅವರ ಆಂತರಿಕ ಜಗತ್ತಿನ ದೃಷ್ಟಿಕೋನದಿಂದ ಚಿತ್ರಿಸಿಲ್ಲದಿರುವುದು; ಅವರಲ್ಲಿ ಬಹುಮಂದಿ ಹೆಸರುಗಳನ್ನು ಸಹ ಹೊಂದಿಲ್ಲ.

ಗೋರ್ಕಿಯವರಿಗೆ ಈ ವರ್ಗದ ಜನರ ಪರಿಚಯವಿರಲಿಲ್ಲವೆಂದು ಹೇಳಲಾಗದು. 1890ರ ವರ್ಷಗಳಲ್ಲಿ ರಚಿಸಿದ ಕಥೆಗಳಲ್ಲಿ, ಅದರಲ್ಲೂ ವಿಶೇಷವಾಗಿ 'ಫೊಮಾ ಗೊರ್ದೇಯೆವ್'ನಲ್ಲಿ ಅವರು ವರ್ತಕರ ಹಾಗೂ ಕೈಗಾರಿಕೋದ್ಯಮಿಗಳ ಸುಸ್ಪಷ್ಟ ಚಿತ್ರಣಮಾಲೆಯನ್ನೇ ನೀಡಿದ್ದಾರೆ. 'ಶತ್ರುಗಳು' ಎಂಬ ನಾಟಕದಲ್ಲಿ ಗೋರ್ಕಿಯವರು ಎರಡು ಪರಸ್ಪರವಿರುದ್ಧ ಶಿಬಿರಗಳನ್ನೂ ಒಂದೊಂದೂ ನಾಯಕಪಾತ್ರದ ವೈಯಕ್ತಿಕತೆ ಹಾಗೂ ಮಾನಸಿಕ ಜಗತ್ತಿನ ಆಳವಾದ ಒಳನೋಟದೊಂದಿಗೆ ಚಿತ್ರಿಸಿದ್ದಾರೆ. ಆದರೆ ಈ ರೀತಿಯ ಒಳನೋಟ 'ತಾಯಿ'ಯಲ್ಲೇಕೆ ಇಲ್ಲ?

ಕಾದಂಬರಿಯು ವಸ್ತುವನ್ನು ತೀರ ಸರ್ವಸಾಮಾನ್ಯವಾದ ಮಾತುಗಳಲ್ಲಿ ನಿರೂಪಿಸಿದಾಗ ಉದ್ಭವಿಸುವ ಮತ್ತೊಂದು ಪ್ರಶ್ನೆಯೂ ಬಹುಶಃ ಇನ್ನೂ ಹೆಚ್ಚಿನ ಪ್ರಾಮುಖ್ಯತೆಯದಾಗಿದೆ. ಗೋರ್ಕಿಯವರು ಕ್ರಾಂತಿಕಾರಿ ಜಾಗೃತಿಯ ಬೆಳವಣಿಗೆಯನ್ನೂ ಶ್ರಮಜೀವಿ ವರ್ಗದ ಮುಂಚೂಣಿ ದಳ ರೂಪಿತವಾದುದನ್ನೂ ವಿವರಿಸಬಯಸಿದ್ದರೆ, ಕಾದಂಬರಿ "ಕಾರ್ಮಿಕನೊಬ್ಬನ ವಿಧವೆ, ಕಾರ್ಮಿಕನೊಬ್ಬನ ತಾಯಿ" ಪೆಲಗೇಯು ನೀಲೊವ್ನ ವ್ಲಾಸೊವಳ ಸುತ್ತ ಏಕೆ ಕೇಂದ್ರೀಕೃತವಾಗಿದೆ, ಅವಳ ಮಗ "ಉಕ್ಕಿನ ಮನುಷ್ಯ" ಪಾವೆಲ್ ವ್ಲಾಸೊವ್‌ನ ಅಥವಾ ಬೇರೆ ಯಾವುದೇ ಕ್ರಾಂತಿಕಾರಿ ನಾಯಕನ ಸುತ್ತ ಕೇಂದ್ರೀಕೃತವಾಗಿಲ್ಲವೇಕೆ?

ಆದರೆ ಕಾದಂಬರಿ ಚಿತ್ರಿಸುವುದು ಕೇವಲ ಕ್ರಾಂತಿಕಾರಿ ಹೋರಾಟವನ್ನಲ್ಲ; ಆ ಹೋರಾಟದ ಸಮಯದಲ್ಲಿ ಮಾನವನಲ್ಲಾಗುವ ಒಳ ಬದಲಾವಣೆಗಳ ಪ್ರಕ್ರಿಯೆ, ಅದರ ಶುದ್ಧೀಕರಣ ಜ್ವಾಲೆಯಲ್ಲಿ ಮಾನವ ದ್ವಿತೀಯ ಜನ್ಮ ಪಡೆಯುವುದು, ಎಂಬುದನ್ನು ಅರ್ಥಮಾಡಿಕೊಳ್ಳುವುದು ಮುಖ್ಯ. ಈ ದ್ವಿತೀಯ – ಆತ್ಮಿಕ – ಜನ್ಮ

ನೀಲೊವ್ನಳಂಥ ವ್ಯಕ್ತಿಯಲ್ಲಿ ಉಂಟಾದಾಗ ವಿಶೇಷವಾಗಿ ಸ್ಪಷ್ಟವೂ ಸೂಚಕವೂ ಆಗಿರುತ್ತದೆ, ಏಕೆಂದರೆ ಅವಳು ಮುಬ್ಬುಗೆಯ ಹೊರೆಗಳಿಂದ – ವರ್ಗ, ಕುಟುಂಬ ಹಾಗೂ ಆತ್ಮಿಕ ಹೊರೆಗಳಿಂದ – ತನ್ನನ್ನು ಬಿಡುಗಡೆ ಮಾಡಿಕೊಳ್ಳಬೇಕು; ಏಕೆಂದರೆ ಅವಳು ಶೋಷಿತ ಜನಸಮೂಹಕ್ಕೆ ಸೇರಿದವಳಷ್ಟೆ ಅಲ್ಲ, ಒಬ್ಬ ಹೆಂಗಸೂ ಹೌದು ಅದೂ ಧರ್ಮದ ಪ್ರಭಾವಕ್ಕೆ ಸಿಕ್ಕಿದ್ದವಳು.

ನೀಲೊವ್ನಳಿಗೆ ವಯಸ್ಸು ನಲವತ್ತೇ ಆದರೂ ತಾನೊಬ್ಬ ಮುದುಕಿ ಎಂದೇ ಅವಳ ಭಾವನೆ. ಏಕೆಂದರೆ ಅವಳು ನಿಜವಾದ ಬಾಲ್ಯವನ್ನಾಗಲೀ ತಾರುಣ್ಯವನ್ನಾಗಲೀ ಅನುಭವಿಸಿ ಕಂಡವಳಲ್ಲ, ಜಗತ್ತನ್ನು "ಅರಿಯುವ" ಆನಂದದ ಅನುಭವ ಪಡೆದವಳಲ್ಲ. ಅವಳಿಗೆ ನಲವತ್ತಕ್ಕೂ ಮೀರಿ ವಯಸ್ಸಾದಾಗ, ಪ್ರಪ್ರಥಮ ಬಾರಿಗೆ ಅವಳು ಜಗತ್ತಿನ ಅರ್ಥ ಹಾಗೂ ಸೌಂದರ್ಯವನ್ನು ತನ್ನ ಸ್ವಂತ ಬಾಳಿನ ಅರ್ಥವನ್ನು, ಕಂಡುಕೊಂಡಾಗ ಇವೆಲ್ಲ ಅವಳಿಗೆ ಅನುಭವವಾಗುತ್ತವೆ. ಕಾದಂಬರಿಯ ಅನೇಕ ನಾಯಕಪಾತ್ರಗಳು ಅಂಥ "ಜೀವನ ದರ್ಶನ"ವನ್ನು ಒಂದಲ್ಲ ಒಂದು ರೀತಿಯಲ್ಲಿ ಪಡೆಯುತ್ತಾರೆ, ಆದರೆ ನೀಲೊವ್ನಳ ಮಟ್ಟಿಗೆ ಆ ಅನುಭವ ವಿಶೇಷವಾಗಿ ವಿಷಾದಮಯವಾದುದು ಹಾಗೂ ಕಷ್ಟಕರವಾದುದು ಆಗಿರುತ್ತದೆ.

ಪಾವೆಲ್ ವ್ಲಾಸೊವ್ ಒಬ್ಬ "ಉಕ್ಕಿನ ಮನುಷ್ಯ," ಒಬ್ಬ "ಅಪರೂಪದ ವ್ಯಕ್ತಿ," "ರಮ್ಯಕಥೆಗಳಲ್ಲಿ ಬರುವಂಥ ವ್ಯಕ್ತಿ." ಆದರೆ ಅವನಿಗೂ ಆಂತರಿಕ ಪುನರುಜ್ಜೀವನ ಅವಶ್ಯ. ಅವನು ಅನವಶ್ಯವಾದ ಸಾಹಸೀದಾತನವನ್ನು, "ಸನ್ಯಾಸಿಯ ನಿಷ್ಠುರತೆಯನ್ನು," ಅವನು "ಮುಗಿದಂತೆ" ಎಂದು ಅವನ ತಾಯಿ ಹೇಳಲು ಅವಕಾಶ ಮಾಡಿಕೊಡುವ ಎಲ್ಲವನ್ನೂ ಕಿತ್ತೊಗೆಯಬೇಕು. ಮೊದಲು ಅವನು ತನ್ನ ಭಾವನೆಗಳನ್ನು, ಅದರಲ್ಲೂ ವಿಶೇಷವಾಗಿ ಪ್ರೇಮಭಾವನೆಯನ್ನು ವ್ಯಕ್ತಪಡಿಸಲು ಹೆದರುತ್ತಾನೆ. ಇವನ ಸ್ನೇಹಿತ ಅಂದ್ರೇಯ್ ನಹೋದ್ಕ ಇವನಿಗೆ ತೀರ ವಿರುದ್ಧ. ಅವನು ಭಾವನಾತ್ಮಕ ಹಗಲುಗನಸಿನ, ಮೃದುಸ್ವಭಾವದ ಅತಿಶಯಕ್ಕೆ ಸಿಕ್ಕಿಬಿದ್ದವನು. ಈ ಲಕ್ಷಣಗಳ ಜೊತೆಗೆ ಯೋಧನೊಬ್ಬನ ದೃಢತೆ ಹಾಗೂ ಸ್ಥಿರಸಂಕಲ್ಪಗಳು ಕೂಡಿಕೊಂಡಾಗ ಆ ವ್ಯಕ್ತಿತ್ವ ಅದ್ಭುತವಾಗಿರುತ್ತದೆ. ರೀಬಿನ್‌ನು ಬುದ್ಧಿಜೀವಿಗಳ ಬಗೆಗೆ ಹೊಂದಿದ್ದ ಅಪನಂಬಿಕೆಯನ್ನು ಹೋಗಲಾಡಿಸಿಕೊಳ್ಳಬೇಕಾಯಿತು; ವೆಸೊವ್‌ಶ್ಚಿಕೋವ್ ಎಲ್ಲ ಜನರ ಬಗೆಗೂ ಹೊಂದಿದ್ದ ಅಪನಂಬಿಕೆಯನ್ನು ಹೋಗಲಾಡಿಸಿಕೊಳ್ಳಬೇಕಾಯಿತು (ಎಲ್ಲ ಜನರೂ ಒಬ್ಬರಿಗೊಬ್ಬರು ಶತ್ರುಗಳೇ ಎಂದು ದೃಢವಾಗಿ ನಂಬಿದ್ದ ಅವನಿಗೆ "ಸಂಗಾತಿ" ಎಂಬ ಪದವನ್ನು ಅನಿರೀಕ್ಷಿತವಾಗಿ ಹೊಸ ವಿಶಾಲವಾದ ಅರ್ಥದಲ್ಲಿ ಬಳಸಿದುದು ಒಂದು ಮಹತ್ತರ ಜ್ಞಾನೋದಯವಾಗಿ ಭಾಸವಾಗುತ್ತದೆ).

ತನ್ನ ಭಾವನೆಗಳನ್ನೆಲ್ಲ ಮುಚ್ಚಿಟ್ಟುಕೊಂಡಿರುವಂತೆ, ಪ್ರತಿಯೊಂದರ ಬಗೆಗೂ ಪ್ರತಿಯೊಬ್ಬರ ಬಗೆಗೂ ಹೆದರಿಕೆಯಿಂದ ಬಾಳುವುದನ್ನು ಜೀವನದಿಂದ ಕಲಿತಿದ್ದ

"ಮೃದುಸ್ವಭಾವದ, ವಿಷಣ್ಣಳಾದ ಹಾಗೂ ವಿಧೇಯಳಾದ" ನೀಲೊವ್ನ ಈ ಎಲ್ಲ ಆಂತರಿಕ ಬದಲಾವಣೆಗಳನ್ನೂ ಪಲ್ಲಟಗಳನ್ನೂ ಅನುಭವಿಸುತ್ತಾಳೆ. ನೀಲೊವ್ನಳು ತನ್ನ ಮಗನಂತೆ ಕ್ರಾಂತಿಕಾರಿ ಮಾರ್ಗ ಹಿಡಿಯುವುದು ಮೊದಲು ತನ್ನ ಮಾತೃಪ್ರೇಮದಿಂದ ಪ್ರೇರಿತಳಾದನಂತರ, ಎಂಬ ಸಂಗತಿ ಅವಳ ವ್ಯಕ್ತಿತ್ವವನ್ನು ಕುಂದಾಗಿಸುತ್ತದೆಯೆ? ಇಲ್ಲ. ಪ್ರೇಮ ಅವಳನ್ನು ಹೋರಾಟದ ಮಾರ್ಗ ಹಿಡಿಯುವಂತೆ ಬಲಾತ್ಕರಿಸುತ್ತದೆ, ಹೋರಾಟ ಅವಳಿಗೆ ತಾಯಿಯಾದ ಅವಳ ಸಂತೋಷ ಹಾಗೂ ಜವಾಬ್ದಾರಿಯನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡುತ್ತದೆ. "ವ್ಯಕ್ತಿಯೊಬ್ಬ ತನ್ನ ತಾಯಿಯನ್ನು ಆತ್ಮಿಕವಾಗಿಯೂ ತನ್ನ ತಾಯಿ ಎಂದು ಕರೆಯಬಲ್ಲವನಾದರೆ, ಅದು ನಿಜಕ್ಕೂ ಅಪೂರ್ವ ಆನಂದ" ಎನ್ನುತ್ತಾನೆ ಪಾವೆಲ್ ವ್ಲಾಸೊವ್. ನೀಲೊವ್ನ ಮತ್ತು ಅವಳ ಮಗನ ನಡುವಿನ ಈ ಆತ್ಮಿಕ ಬಾಂಧವ್ಯದ ಬೆಳವಣಿಗೆಯೊಂದಿಗೆ ಅವಳ ತಾಯ್ತನದ ಭಾವನೆಯೂ ಬೆಳೆಯುತ್ತದೆ, "ಸಂಗಾತಿಗಳು" ಎಂಬ ಮಹೋನ್ನತ ಪದದಿಂದ (ಕಾದಂಬರಿಯ ಮೊದಲ ಇಂಗ್ಲಿಷ್ ಆವೃತ್ತಿಗೆ ಇದೇ ಶೀರ್ಷಿಕೆಯಾಗಿದ್ದಿತು) ಆವೃತರಾದ ಎಲ್ಲ ಜನರನ್ನೂ ಒಳಗೊಳ್ಳುವಂತೆ ಅದು ವ್ಯಾಪಿಸುತ್ತದೆ.

ಕ್ರಾಂತಿಯು ನಿಜಕ್ಕೂ ಮಾನವೀಯವಾದ ಎಲ್ಲ ಭಾವನೆಗಳನ್ನು, ಅವುಗಳಲ್ಲಿ ಅತ್ಯಂತ ಉದಾತ್ತವಾದ ತಾಯ್ತನ ಹಾಗೂ ಭ್ರಾತೃತ್ವದ ಭಾವನೆಗಳನ್ನು, ಎಚ್ಚರಗೊಳಿಸುತ್ತದೆ. "ತಾಯಿ – ಎಲ್ಲವನ್ನೂ ಗೆಲ್ಲಬಲ್ಲ ಜೀವನದ ಅಕ್ಷಯ ಆಕರವಾದ ಮಹಾಮಾತೆ – ಆಕೆಯನ್ನು ಹಾಡಿ ಹೊಗಳೋಣ!" ಎಂದು ಗೋರ್ಕಿ ತಮ್ಮ 'ಇಟಾಲಿಯನ್ ಕಥೆಗಳು' ಪುಸ್ತಕದ ಕಥೆಯೊಂದರಲ್ಲಿ ಉದ್ಗರಿಸಿದ್ದಾರೆ. "ಹೆಂಗಸನ್ನು – ಸಾವು ಯಾವ ಶಕ್ತಿಯ ಮುಂದೆ ವಿಧೇಯವಾಗಿ ತಲೆಬಾಗಿಸುತ್ತದೋ ಆ ಶಕ್ತಿಯಾದ ತಾಯಿಯನ್ನು – ಹಾಡಿ ಹೊಗಳೋಣ!" ಮಕ್ಸೀಂ ಗೋರ್ಕಿಯವರು ಮಾತೆಯರ ಒಂದು ಇಡೀ ಚಿತ್ರಮಾಲೆಯನ್ನೇ ಸೃಜಿಸಿದರು. ಅವರಲ್ಲಿ ಒಬ್ಬೊಬ್ಬರೂ ಜೀವನೀಡುವ ಜೀವಸಮರ್ಥಿಸುವ ಆದಿಶಕ್ತಿಯ ಸಂಕೇತಗಳಾಗಿದ್ದಾರೆ. ಅಂಥ ತಾಯಂದಿರಲ್ಲಿ ಅತ್ಯದ್ಭುತಳಾದವಳೆಂದರೆ 'ತಾಯಿ' ಕಾದಂಬರಿಯ ಪ್ರಧಾನ ನಾಯಕಿ.

ಮಾನವ ಮನೋಭಾವ ಚಿಂತನೆಗಳಲ್ಲಿ ಆಗುತ್ತಿದ್ದ ಕ್ರಾಂತಿಕಾರಿ ಪರಿವರ್ತನೆಗಳ ಮೇಲೆ, ಆತ್ಮಿಕ ಜೀವನದ ಪ್ರಕ್ರಿಯೆಗಳ ಮೇಲೆ ಗಮನವನ್ನು ಕೇಂದ್ರೀಕರಿಸಿ ಗೋರ್ಕಿಯವರು ಈ ಪ್ರಕ್ರಿಯೆಗಳ ಹಾಗೂ ಪರಿವರ್ತನೆಗಳ ವಾಸ್ತವಿಕ ಹಿನ್ನೆಲೆಯನ್ನು ತೋರಿಸಿಕೊಟ್ಟರು. ಮಾನವನನ್ನು ದಾಸ್ಯತನಕ್ಕೊಳಪಡಿಸುವ ಬಾಹ್ಯ ಶಕ್ತಿಗಳ ವಿರುದ್ಧ ಹೋರಾಟವಷ್ಟೆ ಆತನ ಅಂತರ್ಯವನ್ನು ಬಿಡುಗಡೆ ಮಾಡಬಲ್ಲುದು, ಪರಿಶುದ್ಧಗೊಳಿಸಬಲ್ಲುದು ಎಂದು 'ತಾಯಿ'ಯ ನಾಯಕಪಾತ್ರಗಳ ಆಗುಹೋಗುಗಳು ಮನವೊಪ್ಪುವಂತೆ ತೋರಿಸಿಕೊಡುತ್ತವೆ. "ಜನರ ಹೃದಯ ಪೂರ್ಣ ಸ್ವಚ್ಛವಾಗಬೇಕು" ಎನ್ನುತ್ತಾನೆ ರೀಬಿನ್. "ಒಬ್ಬ ಮನುಷ್ಯ ಹೇನು ತುಂಬಿ ಕೊಳಕಾದಾಗ, ಅವನನ್ನು ಬಚ್ಚಲು ಮನೆಗೆ ಎಳಕೊಂಡು ಹೋಗಿ, ಚೆನ್ನಾಗಿ ಮೈಯುಜ್ಜಿ ಸ್ನಾನ ಮಾಡಿಸಿ,

ಚೊಕ್ಕಟವಾದ ಬಟ್ಟೆ ಹಾಕಬೇಕು. ಆಗ ಅವನನ್ನು ನೋಡೋಹಾಗಿರುತ್ತೆ, ಅಲ್ವೆ?... ಆದರೆ ಆ ಮನುಷ್ಯನ ಅಂತರ್ಯವನ್ನು ಚೊಕ್ಕಟ ಮಾಡೋದು ಹ್ಯಾಗೆ?"

ಗೋರ್ಕಿಯವರು ಈ ಪ್ರಶ್ನೆಗೆ, ಕ್ರಾಂತಿಕಾರಿ ಹೋರಾಟದ ಶುದ್ಧೀಕರಣ ಜ್ವಾಲೆಯನ್ನು ಹಾಡಿಹೊಗಳುವ ಮೂಲಕ, ಹೊಸ ಸಾಮಾಜಿಕ ವ್ಯವಸ್ಥೆಯ ವಾಹಕಗಳಷ್ಟೆ ಅಲ್ಲ ಮೂಲಭೂತವಾಗಿ ಹೊಸತಾದ ಸಂಬಂಧಗಳ ಹೊಸ ನೈತಿಕ ಸಂಹಿತೆಯ ವಾಹಕಗಳೂ ಆದ ಸಮಾಜವಾದಿ ವಿಚಾರಗಳ ನಿಜಕ್ಕೂ ಉದಾತ್ತವಾದ ಅರ್ಥವನ್ನು ತೋರಿಸಿಕೊಡುವ ಮೂಲಕ ಉತ್ತರ ನೀಡುತ್ತಾರೆ. ನೀಲೊವ್ನಳು ಕ್ರಾಂತಿಕಾರಿ ನಿಕೊಲಾಯ್ ಇವಾನೊವಿಚ್‌ನನ್ನು ಮೊದಲ ಬಾರಿಗೆ ಕಂಡಾಗ, ಆತ "ಬಲು ದೂರದಿಂದ ಬಂದ ಹಾಗೆ, ಜನರು ಸುಲಭವಾದ ಪ್ರಾಮಾಣಿಕವಾದ ಜೀವನ ನಡೆಸುತ್ತಿರುವ ಒಂದು ರಾಜ್ಯದಿಂದ ಬಂದ ಹಾಗೆ...." ಅವಳಿಗೆ ಕಂಡುಬಂದ. ಮತ್ತೆ ಮೇ ದಿನದ ಪ್ರದರ್ಶನದನಂತರ ಮತ್ತು ಪಾವೆಲ್‌ನ ಬಂಧನವಾದನಂತರ ನೀಲೊವ್ನ ಕಾರ್ಮಿಕರ ಉಪನಗರದಿಂದ ಮುಖ್ಯನಗರಕ್ಕೆ, ನಿಕೊಲಾಯ್ ಇವಾನೊವಿಚ್‌ನ ಬಳಿಗೆ, ಸಂಪೂರ್ಣವಾಗಿ ಕ್ರಾಂತಿಗಾಗಿ ದುಡಿಯುತ್ತಿದ್ದ ಕ್ರಾಂತಿಕಾರಿಗಳ ಬಳಿಗೆ, ಬಂದಾಗ ತಾನು ಭವಿಷ್ಯತ್ತಿನ ದ್ವೀಪವೊಂದಕ್ಕೆ ಬಂದುದಾಗಿಯೇ ಭಾವಿಸುತ್ತಾಳೆ.

ತಮ್ಮ ನಾಯಕಪಾತ್ರಗಳ ಗುಣಗಾನ ಮಾಡುವಾಗಲೇ ಗೋರ್ಕಿ ಕಟ್ಟುನಿಟ್ಟಾದ ಗಂಭೀರ ವಾಸ್ತವವಾದಿಯೂ ಆಗಿದ್ದಾರೆ. "ಭವಿಷ್ಯತ್ತಿನ ದ್ವೀಪ"ದ ಸುತ್ತ ಅದರ ಶತ್ರು ಸಮಾಜ ಇನ್ನೂ ಸುತ್ತುವರೆದಿದೆ, ಅದು ಹೊಸ ಜನತೆಯ ದೈಹಿಕ ಅಸ್ತಿತ್ವಕ್ಕಷ್ಟೆ ಅಲ್ಲ, ಅದರ ಆಂತರಿಕ ಜಗತ್ತಿಗೂ ಅಪಾಯ ತಂದೊಡ್ಡಿದೆ, ಎಂದೂ ಅವರು ಸೂಚಿಸುತ್ತಾರೆ. "ಅವರು ಜನರಿಗೆ ಚಿತ್ರಹಿಂಸೆ ಕೊಡುತ್ತಾರೆಯೆ?" ಎಂದು ನೀಲೊವ್ನ ಸೈನಿಕರನ್ನು ಹಾಗೂ ಜೈಲರುಗಳನ್ನು ಕುರಿತು ತನ್ನ ಮಗನನ್ನು ಕೇಳುತ್ತಾಳೆ. "ಮೈ ಹರಿದು ಮೂಳೆ ಮುರೀತಾರೆಯೇ? ಅಯ್ಯೋ....ಅದನ್ನೆಲ್ಲಾ ನೆನಸ್ಕೊಂಡರೆ.... ಎಷ್ಟೊಂದು ಭಯಂಕರ, ಪಾವೆಲ್!" ಇದಕ್ಕೆ ಅವಳ ಮಗ ಉತ್ತರಿಸುತ್ತಾನೆ: "ಅವರು ವ್ಯಕ್ತಿತ್ವವನ್ನೇ ಮುರೀತಾರಮ್ಮ. ವ್ಯಕ್ತಿತ್ವದ ಮೇಲೆ ಅವರು ತಮ್ಮ ಕೊಳಕು ಕೈ ಇಟ್ಟಾಗ ಎಲ್ಲದಕ್ಕಿಂತಲೂ ಹೆಚ್ಚು ನೋವಾಗುತ್ತೆ...."

ಹಳೆಯ ಜಗತ್ತು ತನ್ನ ನಿಷ್ಣಾತ ಆಯುಧವಾದ ಅಂಜಿಕೆಯ ನೆರವಿನಿಂದ, ಎಚ್ಚರಗೊಳ್ಳುತ್ತಿರುವ ಪುನರ್‌ಜನ್ಮ ಪಡೆಯುತ್ತಿರುವ ಆತ್ಮಗಳನ್ನು ನಿದ್ರಾವಸ್ಥೆಗೆ ತಳ್ಳಲು ಹಾಗೂ ಕೊಲ್ಲಲು ಯತ್ನಿಸುತ್ತದೆ. "ನಮ್ಮನ್ನು ಹಾಳುಮಾಡಿರೋದು ಈ ಹೆದರಿಕೆಯೇ!" ಎನ್ನುತ್ತಾನೆ ಪಾವೆಲ್ ಅವನ ಬಗೆಗೆ ಚಿಂತಾಕ್ರಾಂತಳಾದ ತಾಯಿಯನ್ನು ಸಮಾಧಾನಪಡಿಸುತ್ತ. "ಹೆದರದೆ ಹೇಗಿರಲಿ ನಾನು? ಇಡೀ ಜೀವಮಾನವೆಲ್ಲಾ ಹೆದರಿಕೆಯಲ್ಲೇ ಕಳೆದೆ. ದಿಗಿಲು ತುಂಬಿಸಿಕೊಂಡೇ ಈ ಜೀವ ಬೆಳೆದಿರೋದು," ಎಂದು ನೀಲೊವ್ನ ವಿವರಣೆ ನೀಡುತ್ತಾಳೆ. ಸೈನಿಕರು ಮೊದಲ ಬಾರಿಗೆ ಅವಳ ಮನೆ ಝಡ್ತಿ ಮಾಡಿದಾಗ ಅವಳಿಗೆ ಅಂಜಿಕೆಯಷ್ಟೆ ಆಗುತ್ತದೆ. ಆದರೆ ಎರಡನೆಯ ಬಾರಿ ಝಡ್ತಿ ನಡೆ

ದಾಗ ಅವಳಿಗೆ ಅಷ್ಟಾಗಿ ಅಂಜಿಕೆಯಾಗಲಿಲ್ಲ.... "ಈ ಬೂದು ಬಣ್ಣದ ನಿಶಾಚರ ಅತಿಥಿಗಳ ಬಗ್ಗೆ ಆಕೆಯು ದ್ವೇಷ ಹೆಚ್ಚಿತ್ತು. ಈ ದ್ವೇಷದೆದುರಲ್ಲಿ ಆಕೆಯು ಹೆದರಿಕೆಯೆಲ್ಲ ನಶಿಸಿಹೋಗಿತ್ತು."

ನೀಲೊವ್ನಳಿಗೆ ಮತ್ತೆ ಅನೇಕ ಬಾರಿ ಅಂಜಿಕೆಯಾಗುತ್ತದೆ. ಆದರೆ ಶತ್ರುಗಳ ಬಗೆಗೆ ಅವಳಲ್ಲಿ ಮೂಡಿಬಂದ ದ್ವೇಷ ಭಾವನೆ ಅಂಜಿಕೆಯನ್ನು ಅದುಮಿ ಹಿಡಿಯುತ್ತದೆ. ಹೋರಾಟದ ಉದಾತ್ತ ಗುರಿಗಳನ್ನು ಮನಗಂಡಂತೆ ಈ ದ್ವೇಷ ಭಾವನೆಯೂ ಹೆಚ್ಚು ಹೆಚ್ಚಾಗಿ ಅರ್ಥಪೂರ್ಣವಾಗತೊಡಗುತ್ತದೆ. "ಈಗ ನನಗೆ ಯಾವುದರ ಅಂಜಿಕೆಯೂ ಇಲ್ಲ" – ಎನ್ನುತ್ತಾಳೆ ನೀಲೊವ್ನ ತನ್ನ ಮಗನ ವಿಚಾರಣೆಯನಂತರ. ಆದರೂ ಅಂಜಿಕೆ ಅವಳ ಆತ್ಮದಲ್ಲಿ ಇನ್ನೂ ಸಂಪೂರ್ಣವಾಗಿ ನಾಶವಾಗಿಲ್ಲ. ರೈಲ್ವೇ ನಿಲ್ದಾಣದಲ್ಲಿ ಮಫ್ತಿ ಪೋಲೀಸರು ಅವಳ ಗುರುತು ಹಚ್ಚಿದಾಗ ಅವಳಿಗೆ ಮತ್ತೆ "ಯಾವುದೋ ದುಷ್ಟ ಶಕ್ತಿ ತನ್ನನ್ನು ಒತ್ತಿ ಕೆಳಕ್ಕೆ ತಳ್ಳುತ್ತಿದ್ದಂತೆ, ಸಾವಿನ ಭಯದಲ್ಲಿ ಮುಳುಗಿಸಿದಂತೆ" ಭಾಸವಾಗುತ್ತದೆ. ಮಗನ ಭಾಷಣವನ್ನು ಮುದ್ರಿಸಿದ್ದ ಕರಪತ್ರಗಳಿದ್ದ ಪೆಟ್ಟಿಗೆಯನ್ನು ಅಲ್ಲೇ ಬಿಟ್ಟು ಓಡಿಹೋಗೋಣವೇ ಎಂಬ ಬಯಕೆ ಒಂದು ಘಳಿಗೆ ಅವಳಲ್ಲಿ ಉಂಟಾಗುತ್ತೆ. ಅದು ಒಂದು ಘಳಿಗೆಯಷ್ಟೆ. ಆಮೇಲೆ ನೀಲೊವ್ನ ಆ ದುಷ್ಟ ಶಕ್ತಿ ಅಂಜಿಕೆಯ ಮೇಲೆ ಕೊನೆಯ ಪ್ರಹಾರ ನೀಡುತ್ತಾಳೆ. "ತನ್ನ ಹೃದಯವನ್ನು ಭಾರಿಯಾದ ಅಮೋಘವಾದ .ಯತ್ನಕ್ಕೆ ಸಿದ್ಧಗೊಳಿಸಿ ಅವಳು ಈ ಎಲ್ಲ ಸಣ್ಣಪುಟ್ಟ ಬಯಕೆಯ ಕಿಡಿಗಳನ್ನೂ ನಂದಿಸುತ್ತಾಳೆ. ಅವಳ ಇಡೀ ದೇಹ ಕಂಪಿಸುತ್ತದೆ. 'ಎಷ್ಟು ನಾಚಿಕೆಗೇಡು' ಎಂದವಳು ತನಗೆ ತಾನೇ ಹೇಳಿಕೊಳ್ಳುತ್ತಾಳೆ. "ಮಗನನ್ನು ಅವಮಾನಗೊಳಿಸುವುದೆ ! ನನಗೆ ಯಾರ ಅಂಜಿಕೆಯೂ ಇಲ್ಲ."" ಇದು ಅಂಜಿಕೆಯ ವಿರುದ್ಧ ಹೋರಾಟದ, ಅದರ ಮೇಲೆ ದಿಗ್ವಿಜಯ ಸಾಧಿಸಿದ, ಒಂದು ನಿಜವಾದ ಸ್ತುತಿಗೀತೆಯಾಗಿದೆ.

ಮಾನವ ಆತ್ಮಗಳ ಕ್ರಾಂತಿಕಾರಿ ಪರಿವರ್ತನೆಯ ಚಿತ್ರಣವನ್ನು ನೀಡುವಾಗಲೇ ಗೋರ್ಕಿ, ಒಡೆತನದ ಅಹಂಕಾರ ಸ್ವಾರ್ಥ ಅಭಿಲಾಷೆಗಳು ಮೇಲುಗೈ ಪಡೆಯುವುದು ಮನುಷ್ಯನ ಎಲ್ಲ ಮಾನವೀಯ ಲಕ್ಷಣಗಳನ್ನೂ ನಾಶಪಡಿಸುತ್ತದೆ ಎಂಬ ವಿಚಾರವನ್ನೂ ಪ್ರತಿಪಾದಿಸುತ್ತಾರೆ. ಜೀವನದಲ್ಲಿ ಮೇಲುಗೈ ಪಡೆಯುತ್ತಿದ್ದ ಹಾಗೇ ಬೂರ್ಷ್ವಾಸೀ ಹೊಸ ಆದರ್ಶಗಳನ್ನು ಉಂಟುಮಾಡುವ ಮತ್ತು ಅವುಗಳಿಂದ ಜನರನ್ನು ಸ್ಫೂರ್ತಿಗೊಳಿಸುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ ಎಂದು ಗೋರ್ಕಿ ಹೇಳುತ್ತಾರೆ. ಬೂರ್ಷ್ವಾಸೀಯೂ ಅದರ ಸೇವಕರೂ, ನಿರಂಕುಶ ಪ್ರಭುತ್ವದಂಥ ಅದರ ಸೇವಕರೂ ಸಹ, ಸೈದ್ಧಾಂತಿಕವಾಗಿಯೂ ಆತ್ಮಿಕವಾಗಿಯೂ ನಿರ್ವೀರ್ಯರಾದವರೆಂಬ ವಿಚಾರ 'ತಾಯಿ'ಯಲ್ಲಿ ಅತ್ಯಂತ ನೇರವಾಗಿ ಹಾಗೂ ಕ್ರಮಬದ್ಧ ರೀತಿಯಲ್ಲೂ ಪಾವೆಲ್ ವ್ಲಾಸೊವ್ ನ್ಯಾಯಾಲಯದಲ್ಲಿ ಮಾಡಿದ "ಕಾರ್ಯಕ್ರಮ" ಭಾಷಣದಲ್ಲಿ ವ್ಯಕ್ತಪಟ್ಟಿದೆ.

ಇಲ್ಲಿ ಒಂದು ವಿಷಯ ಮತ್ತೆ ಒತ್ತಿಹೇಳಬೇಕು. ಎಂ. ಗೋರ್ಕಿಯವರು

ತಮ್ಮ ನಾಯಕಪಾತ್ರಗಳನ್ನು ರಚಿಸುವಾಗ ಅವುಗಳ ಮಾತೃಕೆಗಳಿಂದ ತುಂಬ ದೂರ ಸರಿದರು, ಜೀವನ ಒದಗಿಸಿದ ಸಾಮಗ್ರಿಗಳನ್ನು ಬಳಸಿಕೊಂಡು ಅವುಗಳನ್ನು ದಿಟ್ಟ ತನದಿಂದ ತಮ್ಮ ಸೈದ್ಧಾಂತಿಕ ಹಾಗೂ ಕಲಾತ್ಮಕ ಕಾರ್ಯಭಾರಗಳನ್ನು ಪೂರೈಸ ಲನುವಾಗುವಂತೆ ಮಾದರಿಗಳನ್ನಾಗಿ ಪರಿವರ್ತಿಸಿದರು.

ಪ್ಯೋತ್ರ್ ಜಲೋಮೊವ್‌ನೂ, 1902ರಲ್ಲಿ ಸೋರ್ಮೊವೊನಲ್ಲಿ ಮೇ ದಿನದ ಪ್ರದರ್ಶನದಲ್ಲಿ ಭಾಗವಹಿಸಿದ್ದ ಅವನ ಸಂಗಾತಿಗಳೂ, ವಿಚಾರಣೆಯ ಸಮಯದಲ್ಲಿ ನ್ಯಾಯಾಲಯದಲ್ಲಿ ಮಾಡಿದ ಭಾಷಣಗಳನ್ನು ಲೆನಿನ್ ಅತ್ಯುನ್ನತವಾಗಿ ಮೌಲ್ಯನಿರ್ಣ ಯಿಸಿದ್ದರು. ಆದರೂ ಗೋರ್ಕಿಯವರು ಕಾದಂಬರಿಯ ಕಲಾತ್ಮಕ ಅಗತ್ಯತೆಗಳನ್ನು ಪೂರೈಸಲೋಸುಗ ಅವರ ಭಾಷಣಗಳ ಸ್ಥಳದಲ್ಲಿ ತಾವೇ ಬರೆದ, ಅದೇ ವಿಚಾರ ಗಳನ್ನು ಬೇರೆ ರೀತಿಯಲ್ಲಿ ವ್ಯಕ್ತಪಡಿಸಿದ, ಭಾಷಣಗಳನ್ನು ಅಳವಡಿಸಿದರು.

ಪಾವೆಲ್‌ನು ಮನುಷ್ಯನ ವ್ಯಕ್ತಿತ್ವದತ್ತ ಕ್ರೂರ ನಿಷ್ಠುರ ಮನೋಭಾವ ಹೊಂದಿದ್ದ ಬೂರ್ಷ್ವಾ ಸಮಾಜದ ವಿರೋಧಿಯಾಗಿ, "ಅಂಥ ಸಮಾಜವು ವ್ಯಕ್ತಿಯ ಮೇಲೆ ಹೊರಿಸಿರೋ ಎಲ್ಲಾ ರೀತಿಯ ಶಾರೀರಿಕ ಮತ್ತು ನೈತಿಕ ದಾಸ್ಯಕ್ಕಿದಿರಾಗಿ, ಸ್ವಾರ್ಥದ ದುರಾಶೆಯ ಹಿತಕ್ಕೋಸ್ಕರ ಮಾನವ ಜೀವಿಗಳನ್ನು ಮರ್ದಿಸುವ ಎಲ್ಲಾ ವಿಧಾನ ಗಳಿಗಿದಿರಾಗಿ, ನಾವು ಹೋರಾಡ್ತೇವೆ." ಅವನು ಈ ಸಮಾಜದ ಆತ್ಮಿಕ ತೇಜೋ ವಧೆಯನ್ನು ಬಯಲಿಗೆಳೆಯುತ್ತಾನೆ: "ವಾಸ್ತವವಾಗಿ, ನಮ್ಮ ಒಡೆಯರಾಗಿರೋ ನೀವೆಲ್ಲ ನಮಗಿಂತಲೂ ಹೆಚ್ಚಿನ ಗುಲಾಮರು. ನೀವು ಮಾನಸಿಕವಾಗಿ ಬಂಧಿತ ರಾಗಿದ್ದೀರಿ – ನಾವು ಶಾರೀರಕವಾಗಿ ಮಾತ್ರ.... ನೀವೇ ನೋಡಿ. ನೈತಿಕವಾಗಿ ನಿಮ್ಮ ವರ್ಗವನ್ನ ರಕ್ಷಿಸೋ ಸಾಮರ್ಥ್ಯ ಉಳ್ಳೋರು ನಿಮ್ಮಲ್ಲಿ ಒಬ್ಬರೂ ಇಲ್ಲ. ಚಾರಿತ್ರಿಕ ನ್ಯಾಯದ ಮಹಾ ತುಳಿತದ ಒತ್ತಡದಿಂದ ನಿಮ್ಮನ್ನ ರಕ್ಷಿಸಿಕೊಳ್ಳುವಂಥ ಎಲ್ಲಾ ವಾದಗಳನ್ನೂ ನೀವು ಈಗಾಗಲೇ ಮುಗಿಸಿಬಿಟ್ಟಿದ್ದೀರಿ. ಹೊಸ ವಿಚಾರಗಳನ್ನ ಸೃಷ್ಟಿ ಮಾಡಲು ನೀವು ಸಮರ್ಥರಾಗಿಲ್ಲ. ಆಧ್ಯಾತ್ಮಿಕವಾಗಿ ನೀವು ಬರಡಾಗಿದ್ದೀರಿ.... ನಿಮ್ಮ ಶಕ್ತಿಯು, ಬಂಗಾರವನ್ನ ಮತ್ತಷ್ಟು ಪಾಲು ಹೆಚ್ಚಿಸೋ ಯಾಂತ್ರಿಕ ಶಕ್ತಿ. ಅದು ನಿಮ್ಮನ್ನು ಗುಂಪುಗಳಾಗಿ ಒಡೀತದೆ. ಆ ಗುಂಪುಗಳು ಒಂದನ್ನೊಂದು ನುಂಗ್ತವೆ. ನಮ್ಮ ಶಕ್ತಿ, ಮಹತ್ವ ಸದಾ ಹೆಚ್ಚುತ್ತಲೇ ಇರುವ, ದುಡಿಯುವ ಜನರೆಲ್ಲರ ಸೌಹಾ ರ್ದತೆಯ ತಿಳಿವಳಿಕೆಯಲ್ಲಿ ಅಡಕವಾಗಿವೆ.... ನೀವು, ಬದುಕಿನಿಂದ ಮನುಷ್ಯನನ್ನ ಹರಿದೆಳೆದು ಆತನನ್ನ ನಾಶಗೊಳಿಸಿದ್ದೀರಿ. ಸಮಾಜವಾದ, ನೀವು ನಾಶ ಗೊಳಿಸಿದ ಪ್ರಪಂಚವನ್ನೆತ್ತಿಕೊಂಡು, ಒಂದು ಮಹಾ ಅಖಂಡ ವಲಯವಾಗಿ ಪುನಃ ಕಟ್ತದೆ. ಹೀಗೆ ಆಗಿಯೇ ಆಗ್ತದೆ!"

ಎಂ. ಗೋರ್ಕಿಯವರು ತಮ್ಮ 'ಶತ್ರುಗಳು' ಎಂಬ ನಾಟಕದ, ತುಲನಾತ್ಮಕ ವಾಗಿ ಸಣ್ಣವಾದ, ದೃಶ್ಯಗಳಲ್ಲಿ ಶೋಷಣ ವ್ಯವಸ್ಥೆಯ ಪ್ರತಿಪಾದಕರ ಆಂತರಿಕ ಚಿತ್ರಣವನ್ನು ಉಜ್ವಲವಾಗಿ ಮೂಡಿಸಿದ್ದಾರೆ. ಆದರೆ ಅವರೇ 'ತಾಯಿ' ಕಾದಂಬರಿ

ಯಲ್ಲಿ ಏಕೆ ಅಂಥ ಪಾತ್ರಗಳ ವಿವರವಾದ ಮಾನಸಿಕ ವಿಶ್ಲೇಷಣೆ ನೀಡಹೋಗಿಲ್ಲ? – ಕಲಾವಿದರ ಈ ಕೃತಿರಚನೆಯ ಮೂಲೋದ್ದೇಶ ಇದಕ್ಕೆ ಕಾರಣ ಎಂದು ವಿವರಿಸ ಬಹುದು. ಅದು ಆ ಕಾಲಕ್ಕೆ ಎಷ್ಟು ಹೊಸದಾಗಿ ಎಷ್ಟು ಅನನ್ಯವಾಗಿ ಇದ್ದಿತೆಂದರೆ ಅದನ್ನು ಅಷ್ಟು ಸುಲಭವಾಗಿ ಅರ್ಥಮಾಡಿಕೊಂಡು ಮೆಚ್ಚಲು ಸಾಧ್ಯವಿರಲಿಲ್ಲ. ಮೊದಲನೆಯದಾಗಿ ಶತ್ರುಗಳ ಜಗತ್ತನ್ನು, ಬೇರೆಲ್ಲವುಗಳಂತೆಯೇ, ಇಲ್ಲಿ ಮುಖ್ಯ ವಾಗಿ ನೀಲೊವ್ನಳ ಮನಸ್ಸಿನ ಕನ್ನಡಿಯ ಮೂಲಕ ತೋರಿಸಲಾಗಿದೆ. ಆತ್ಮರಹಿತ ವಾದ, ಸುಗ್ರಾಹ್ಯ ಮಾತುಗಳಿಗೆ ಮೀರಿದ ಯಾವುದೋ ಶಕ್ತಿ ತನ್ನ ಪುನಶ್ಚೇತನ ಗೊಳ್ಳುತ್ತಿರುವ ಆತ್ಮದೊಳಕ್ಕೆ ಭೇದಿಸಿಕೊಂಡು ನುಗ್ಗಬಯಸುತ್ತಿದೆ, ಎಂದು ಆ ರೂಪ ದಲ್ಲಿ ತನ್ನ ಶತ್ರುಗಳನ್ನು ಕಾಣುವುದು ನೀಲೊವ್ನಳೇ. "ನಿರ್ವಿಕಾರ ಮುಖದ ಜನರ ಏಕಪ್ರಕಾರವಾದ ಬೂದು ಗೋಡೆಯಿತ್ತು," – ಮೇ ದಿನದ ಪ್ರದರ್ಶನದ ಮಾರ್ಗ ದಲ್ಲಿ ಅಡ್ಡಗಟ್ಟಿ ನಿಂತಿದ್ದ ಸೈನಿಕರ ಸಾಲನ್ನು ನೀಲೊವ್ನಳು ಕಂಡುದು ಹೀಗೆಯೇ. ಆದರೆ ಕ್ರಾಂತಿಯ ಶತ್ರುಗಳೆಲ್ಲರೂ ಆವಳಿಗೆ ವಾಸ್ತವವಾಗಿ ಕಾಣುವುದು ಒಂದೇ ರೀತಿಯಾಗಿಯೇ, ಅಥವಾ ಬಹುಮಟ್ಟಿಗೆ ಅದೇ ಬೂದು ಬಣ್ಣದ ಗೋಡೆ ಯಂತೆಯೇ. ಆದ್ದರಿಂದಲೇ ಆತ್ಮವಿನಾಶಕ ಅಂಜಿಕೆ ಅವಳ ಮನಸ್ಸಿನೊಳಕ್ಕೆ ಮತ್ತೆ ಮತ್ತೆ ಭೇದಿಸಿಕೊಂಡು ನುಗ್ಗುತ್ತದೆ. ಕೊನೆಗೆ ಈ ಭಯದ ಸ್ಥಳದಲ್ಲಿ ನಿರ್ಭಯ ಸ್ಥಾಪಿತವಾಗುತ್ತದೆ. ಅದು ನೀಲೊವ್ನಳ ಅಂತಃಸಾಕ್ಷಿಯಲ್ಲಿ ಹೊಸ ಅಂಶವು ಅಂತಿಮ ವಿಜಯ ಸಾಧಿಸಿದ ಸಂಕೇತವಾಗುತ್ತದೆ.

ಎರಡನೆಯದಾಗಿ, ಗೋರ್ಕಿಯವರು ಈ ವಿಧಾನ ಅನುಸರಿಸಿದುದಕ್ಕೆ ಕಾದಂಬ ರಿಯ ಇಡೀ ಕಲಾತ್ಮಕ ಮೈಕಟ್ಟೇ ಕಾರಣವಾಗಿದೆ. ಇದರಲ್ಲಿ ರೊಮಾಂಟಿಕ್ ಶೈಲಿಯ ಅಂಶಗಳು ಅತ್ಯಂತ ಮುಖ್ಯ ಪಾತ್ರ ನಿರ್ವಹಿಸುತ್ತವೆ. ಅವು ಕಾದಂಬರಿಯನ್ನು ಒಂದು ವಿಶೇಷ ಉನ್ನತ ಮಟ್ಟಕ್ಕೆ ಒಯ್ಯುತ್ತವೆ, ಅದಕ್ಕೆ ವೀರಗಾಥವೊಂದರ ಅಥವಾ ಜಾನಪದ ಕಥೆಯೊಂದರ ಮಟ್ಟು ಹಾಗೂ ಮೆರುಗನ್ನು ನೀಡುತ್ತವೆ.

ಈ ಕಾದಂಬರಿಯಲ್ಲಿ ರೊಮಾಂಟಿಕ್ ಶೈಲಿಯು ವಾಸ್ತವಿಕ ಶೈಲಿಯೊಂದಿಗೆ ಸಾಮರಸ್ಯವಾಗಿ ಮಿಳಿತವಾಗಿದೆ, ಎರಡೂ ಎರಡು ಶೈಲಿ ಮಟ್ಟಗಳಲ್ಲಿ ಸಾಗಿಹೋಗು ತ್ತವೆ. ಮೇ ಮೊದಲ ತೇದಿಯ ಬೆಳಗಿನಂದು ನೀಲೊವ್ನ ನೋಡಿದಳು: "ಮ್ಲಾನವಾದ ನೀಲ ಆಕಾಶದ ಅಗಲಕ್ಕೆ, ನಸುಗೆಂಪಿನ, ಮತ್ತು ಬಿಳಿಯ ಮೋಡಗಳ ಗುಂಪು ತೇಲಿ ಹೋಗುತ್ತಿತ್ತು. ಕಾರಖಾನೆಯ ಉರಿಯ ಗರ್ಜನೆಗೆ ಹೆದರಿ ಹಾರಿಹೋಗುವ ಸಹ ಸ್ರಾರು ಹಕ್ಕಿಗಳ ಹಾಗೆ ತಾಯಿ ಮೋಡಗಳನ್ನೆ ನೋಡುತ್ತ, ತನ್ನದೇ ವಿಚಾರಗಳಿಗೆ ಕಿವಿಗೊಡುತ್ತ ಕುಳಿತಳು. ಈ ಮುಗಿಲು-ಪಕ್ಷಿಗಳು ತಾಯಿಯ ಆತ್ಮದ ಒಳಗೆ ನಡೆಯುತ್ತಿದ್ದ ವಿರುದ್ಧಭಾವನೆಗಳ ತುಮುಲವನ್ನು ಭಾವನಾತ್ಮಕವಾಗಿ ವ್ಯಕ್ತ ಪಡಿಸುತ್ತವೆ. ಇನ್ನೂ ಆಗಬೇಕಾಗಿದ್ದುದಕ್ಕಾಗಿ ಆಕೆಯ ಹಂಬಲ (ಅನಂತರ ರೆಕ್ಕೆಗಳನ್ನು ಬಿಚ್ಚಿ ಹರಡಿಕೊಂಡಿರುವ ಮುಗಿಲ-ಹಕ್ಕಿಯೊಂದರ ಪ್ರತಿಮೆ ಬರುತ್ತದೆ) ಹಾಗೂ

ತನ್ನ ಮಗನಿಗೂ ಅವನ ಸಂಗಾತಿಗಳಿಗೂ ಏನಾಗುವುದೋ. ಎಂಬ ಚಿಂತೆ ಕಳವಳ, ಇವುಗಳ ತುಮುಲದ ಪ್ರತೀಕ ಅದು. ಆದರೆ ಅದಾದನಂತರ ನೀಲೊವ್ನಳು ಕೇಳಿದ ಮಾತುಗಳು – "...ಮೋಡಗಳು ಚಲಿಸುತ್ತಿವೆ. ಈ ಮೋಡಗಳು ಇಂದು ಅನಗತ್ಯ ವಾಗಿವೆ...." ಎಂಬ ಮಾತುಗಳು – ಅವಳನ್ನು ಕೂಡಲೇ ಭೂಮಿಗೆ, ಬಹಳ ಕಾಲ ಕಾದಿದ್ದ ದಿನದ ಕೆಲಸಗಳಿಗೆ, ಕರೆತರುತ್ತವೆ.

'ತಾಯಿ' ಒಂದು ಹೊಸ ಮಾದರಿಯ ಕೃತಿ. ಅಂದರೆ ಅದರ ವಸ್ತು ಹಾಗೂ ಸಮಸ್ಯೆಗಳನ್ನು ಗೋರ್ಕಿಯವರೇ ಮೊದಲು ಎತ್ತಿದುದು ಎಂದೇನೂ ಅದರ ಅರ್ಥವಲ್ಲ. ಅವರು 19ನೆಯ ಶತಮಾನದ ಮಹಾ ವಾಸ್ತವಿಕತಾವಾದಿ ಸಾಹಿತ್ಯದ ಪರಂಪರೆಗಳನ್ನೇ, ಅದರಲ್ಲೂ ವಿಶೇಷವಾಗಿ ಆ ಸಾಹಿತ್ಯದ ಮಹೋನ್ನತ ಪ್ರತಿನಿಧಿ ಲೆವ್ ತೊಲ್‌ಸ್ಟಾಯ್‌ರ ಪರಂಪರೆಗಳನ್ನೇ, ಮತ್ತಷ್ಟು ಬೆಳೆಸಿದರು. ತೊಲ್ ಸ್ಟಾಯ್‌ರು ತಮ್ಮ 'ಪುನರುತ್ಥಾನ' ಕಾದಂಬರಿಯಲ್ಲೂ ಇತರ ಕೃತಿಗಳಲ್ಲೂ ಮಾನವನ ಆಂತರಿಕ ಜೀರ್ಣೋದ್ಧಾರದ, ಅವನ ನೈತಿಕ ಶುದ್ಧೀಕರಣದ, ಅವನ ದ್ವಿತೀಯ ಜನ್ಮದ ಸಮಸ್ಯೆಯನ್ನು ಎತ್ತಿದ್ದರು. ಈ ಸಮಸ್ಯೆಯೇ 'ತಾಯಿ' ಕೃತಿಯ ಕರ್ತೃವಿನ ಮನಸ್ಸನ್ನೂ ಸೂರೆಗೊಂಡಿದ್ದಿತು. ಆದರೆ ಈ ಸಮಸ್ಯೆಯು ಬಗೆಗೆ ಗೋರ್ಕಿ ಯವರ ಮನೋಧರ್ಮ, ತೊಲ್‌ಸ್ಟಾಯ್‌ರ ಬಗೆಗೆ ಅವರು ಹೊಂದಿದ್ದ ಸಂಕೀರ್ಣ ಮನೋಧರ್ಮವನ್ನೇ ತೋರ್ಪಡಿಸುವಂಥದಾಗಿದೆ. ಗೋರ್ಕಿಯವರು ತೊಲ್ ಸ್ಟಾಯ್‌ರೊಂದಿಗೆ ಅತ್ಯಂತ ನಿಕಟ ಹಾಗೂ ಎಡೆಬಿಡದ ಸಂಬಂಧ ಹೊಂದಿದ್ದರೂ ತೊಲ್‌ಸ್ಟಾಯ್‌ರ ಕೆಲವು ವಿಚಾರಗಳನ್ನು ದೃಢವಾಗಿ ತಿರಸ್ಕರಿಸಿದ್ದರು.

ಮಾನವನ ನೈತಿಕ ಆತ್ಮಶುದ್ಧಿಯೇ ಅವನ 'ಪುನರುತ್ಥಾನ,' ಸುಳ್ಳುತಟವಟಗಳಿಂದ ತುಂಬಿದ ಶೋಷಕ ಸಮಾಜ ಕಲುಷಿತಗೊಳಿಸಿದ ಆತ್ಮದ ವಿಮೋಚನೆಯೇ 'ಪುನ ರುತ್ಥಾನ' ಎಂದು ಲೆವ್ ತೊಲ್‌ಸ್ಟಾಯ್ ಅರ್ಥಮಾಡಿದ್ದರು. ತೊಲ್‌ಸ್ಟಾಯ್‌ರ ಕಲಾತ್ಮಕ ಕೃತಿಗಳಲ್ಲಿ (ಅವರ ನೈತಿಕ ಹಾಗೂ ಧಾರ್ಮಿಕ ಕೃತಿಗಳಿಗೆ ಪ್ರತಿಯಾಗಿ) ಆಂತರಿಕ ಶುದ್ಧೀಕರಣದ ವಿವರಣೆಗಳ ಜೊತೆಗೇ ನಾವು ಹಳೆಯ ಜಗತ್ತಿನ ಸಾಮಾ ಜಿಕ ಹಾಗೂ ನೈತಿಕ ಅಡಿಪಾಯಗಳ ನಿರ್ಭೀತ ಟೀಕೆಯನ್ನೂ ಕಾಣುತ್ತೇವೆ. ಆದರೆ ಕ್ರಾಂತಿಕಾರಿ ಹೋರಾಟವನ್ನೂ "ದುಷ್ಟಶಕ್ತಿಯನ್ನು ಹಿಂಸೆಯಿಂದ ಪ್ರತಿರೋಧಿಸುವ" ಎಲ್ಲ ವಿಚಾರವನ್ನೂ ನಿರಾಕರಿಸಿದ ತೊಲ್‌ಸ್ಟಾಯ್‌ರ ಬೋಧೆ ಅವರ ಕಲಾತ್ಮಕ ಕೃತಿಗಳ ಮೇಲೂ ಪರಿಣಾಮ ಬೀರಿತು. ಉನ್ನತ ವರ್ಗಗಳ ಸುಳ್ಳು ಮೋಸದ ಜುಗುಪ್ಸೆ ತರುವಂಥ ವಿಚಾರ ರೀತಿಯನ್ನು ಸಾಮಾನ್ಯ ಜನರ ಆರೋಗ್ಯವಂತ ಹಾಗೂ ನೈಜ ಸಹಜಸ್ಫೂರ್ತಿಯನ್ನೂ ಪ್ರತ್ಯೇಕಿಸಿ ತೋರಿಸುವುದಕ್ಕಿಂತ ಆಚೆ, ಕೃತಕ ಭಾವನೆ ಗಳನ್ನೂ ಕೃತಕ ಜೀವನವನ್ನೂ ಸೃಜಿಸುವ ಮೃತ ವಿಚಾರವಾದಿ 'ಮನಸ್ಸ'ನ್ನೂ ಸತ್ಯ ನ್ಯಾಯಗಳಿಗಾಗಿ ಸ್ವಪ್ರೇರಣೆಯ ಪ್ರಯತ್ನದಿಂದ ತುಂಬಿದ ಜೀವಂತ "ಹೃದಯ" ವನ್ನೂ ಪ್ರತ್ಯೇಕಿಸಿ ತೋರಿಸುವುದಕ್ಕಿಂತ ಆಚೆ, ಅವರು ಹೋಗಲಿಲ್ಲ, ಹೋಗದಾದರು.

ಎಂ. ಗೋರ್ಕಿಯವರು ಸುಳ್ಳುತಟವಟದ ಬುದ್ಧಿಶಕ್ತಿಯನ್ನು ಸತ್ಯಕ್ರಾಂತಿಕಾರಿ ಮನಸ್ಸಿನಿಂದ ಪ್ರತ್ಯೇಕಿಸಿ ತೋರಿಸಿದರಷ್ಟೆ ಅಲ್ಲ ಹಳೆಯ ಸಾಮಾಜಿಕ ವ್ಯವಸ್ಥೆಯನ್ನು ಮೂಲೋತ್ಪಾಟನೆ ಮಾಡುವ, ಇತರ ವಿಧಾನಗಳು ವಿಫಲವಾದಲ್ಲಿ ಮತ್ತು ಶತ್ರುಗಳು ಬಲಾತ್ಕರಿಸಿದಲ್ಲಿ ಹಿಂಸಾಚರಣೆಯಿಂದಾದರೂ ಸರಿ ನಿಷ್ಕರುಣೆಯಿಂದ ಮೂಲೋತ್ಪಾಟನೆ ಮಾಡುವ, ಅವಶ್ಯತೆಯನ್ನು ಒತ್ತಿ ತಿಳಿಸಿದರು. ಗೋರ್ಕಿಯವರು ಸ್ವಯಂ ಸ್ಫೂರ್ತಿಯ ಪ್ರತಿಭಟನೆಯಿಂದ ಪ್ರಜ್ಞಾಪೂರ್ಣ ಹೋರಾಟದವರೆಗೆ ಮಾನವನ ವಿಕಾಸವನ್ನು ತೋರಿಸಿದರು ('ತಾಯಿ'ಯ ಬಗೆಗೆ ಲೆನಿನ್‌ರ ಮೌಲ್ಯ ನಿರ್ಣಯವನ್ನು ನೆನಪಿಸಿಕೊಳ್ಳೋಣ).

'ತಾಯಿ' ಕಾದಂಬರಿಯಲ್ಲಿ, ಅದಕ್ಕೆ ಮುನ್ನ ರಚಿಸಿದ ಕೃತಿಗಳಲ್ಲಿನಂತೆಯೇ ('ಸಾಮಾನ್ಯ ಪಟ್ಟಣಿಗರು,' 'ತಳ ಮಟ್ಟದಲ್ಲಿ,' 'ಶತ್ರುಗಳು') ಮತ್ತು ಅನಂತರ ಬರೆದ ಕೃತಿಗಳಲ್ಲಿನಂತೆಯೇ (ತಮ್ಮ ಮೂರು ಸಂಪುಟಗಳ ಆತ್ಮಕಥೆಯಲ್ಲಿ, 'ವಿ. ಐ. ಲೆನಿನ್' ಎಂಬ ಪ್ರಬಂಧದಲ್ಲಿ ಮತ್ತು ಇತರ ಕೃತಿಗಳಲ್ಲಿನಂತೆಯೇ) ಅವರು ನೈಜ ಹಾಗೂ ಮಿಥ್ಯ ಮಾನವತಾವಾದದ ಪ್ರಶ್ನೆಯನ್ನು ಎತ್ತಿದ್ದಾರೆ. ಪತ್ತೇದಾರ ಇಸಾಯ್‌ನನ್ನು ಕೊಲ್ಲುವುದನ್ನು ತಾನು ತಪ್ಪಿಸಲಾರದೆ ಹೋದೆನಲ್ಲ ಎಂಬ ಯೋಚನೆ ಅಂದ್ರೇಯ್ ನಹೋದ್ಕನನ್ನು ಕಾಡಿಸುತ್ತದೆ. ಆದರೆ ಅದು ಅವಶ್ಯವಿತ್ತು, ಏಕೆಂದರೆ ಆ ಪತ್ತೇದಾರನನ್ನು ಉಳಿಯಬಿಟ್ಟಿದ್ದರೆ ಅದು ಅನೇಕ ಒಳ್ಳೆಯ ಸತ್ಯಸಂಧ ಜನರ ಬಂಧನಕ್ಕೆ ಸಾವಿಗೆ ದಾರಿಯಾಗುತ್ತಿತ್ತು, ಎಂಬುದನ್ನು ಅನಂತರ ಅವನು ಮನಗಾಣುತ್ತಾನೆ. ಆದರೂ, ತಾನೂ ಈ ಕಾರ್ಯದಲ್ಲಿ ಭಾಗವಹಿಸಿದನಲ್ಲಾ ಎಂಬ ವಿಚಾರ ಅವನನ್ನು ಪೀಡಿಸುತ್ತದೆ. ಇದು ದೃಢತೆಯ ಅಭಾವವನ್ನು ತೋರಿಸುತ್ತದಷ್ಟೆ ಅಲ್ಲ (ಈ ದೌರ್ಬಲ್ಯ ನಹೋದ್ಕನಲ್ಲಿ ಅಂತರ್ಗತವಾಗಿರುತ್ತದೆ, ಇದು ಅವನ ಭಾವನೆಗಳನ್ನು ಉಲ್ಬಣಗೊಳಿಸುತ್ತದೆ) ಗೋರ್ಕಿಯವರ ಪ್ರೀತಿಪಾತ್ರ ನಾಯಕ ಪಾತ್ರಗಳಲ್ಲೆಲ್ಲ ಅಂತರ್ಗತವಾದ ಗಾಢವಾಗಿ ಉದಾತ್ತ ಗುಣಸಂಪನ್ನವಾದ ಒಂದಂಶವನ್ನೂ ತೋರಿಸುತ್ತದೆ. ಅದು ಹಿಂಸೆಯ ಬಗೆಗೆ – ಅದು ಕ್ರಾಂತಿಕಾರಿ ಹಿಂಸೆಯಾದರೂ ಸರಿಯೆ – ಮನೋಧರ್ಮ. ಈ ಹಿಂಸೆಯನ್ನು ಬಲಾತ್ಕಾರವಾಗಿ ಮಾಡಬೇಕಾಗಿ ಬಂದುದು, ತಾತ್ಕಾಲಿಕವಾದುದು, ಎಲ್ಲ ಹಿಂಸಾಚರಣೆಯೂ ಅನವಶ್ಯ ಹಾಗೂ ಅಸಾಧ್ಯವಾಗಿರುವಂಥ ನವ ಜಗತ್ತಿನ ನಿರ್ಮಾಣಕ್ಕಾಗಿ ಅವಶ್ಯವಾಗಿ ಆದುದು, ಎಂಬ ಮನೋಧರ್ಮ.

ನೈಜ ಹಾಗೂ ಮಿಥ್ಯ ಮಾನವತಾವಾದದ ಪ್ರಶ್ನೆಯನ್ನು 'ತಾಯಿ'ಯಲ್ಲಿ ಎತ್ತುತ್ತ ಎಂ. ಗೋರ್ಕಿಯವರು, ಹಿಂಸೆಯ ವಿರುದ್ಧ ಪ್ರತಿಭಟನೆ ಕೂಡದೆಂಬ ಹಾಗೂ ಸರ್ವ-ಕ್ಷಮತ್ವದ ಮನವಿಗಳನ್ನು ತಪ್ಪೆಂದು ಸಿದ್ಧಪಡಿಸಿ ತೋರಿಸಿದರಷ್ಟೆ ಅಲ್ಲ, ಕ್ರಾಂತಿಯೂ ಕ್ರಾಂತಿಕಾರಿಗಳೂ ಮಾನವತಾವಾದವನ್ನು ತಿರಸ್ಕರಿಸುತ್ತಾರೆಂದು ಆರೋಪಿಸುವ ಯತ್ನಗಳನ್ನೂ ಅಲ್ಲಗಳೆದರು. ಕ್ರಾಂತಿಕಾರಿ ಹೋರಾಟವು ಮನುಷ್ಯ

ನಲ್ಲಿನ ಕೀಳು ಪ್ರವೃತ್ತಿಗಳನ್ನು ಅವನಲ್ಲಿರುವ ಪಶುತ್ವವನ್ನು ಹೊಡೆದೆಬ್ಬಿಸುತ್ತದೆ ಎಂದು ಸಾಧಿಸಿ ತೋರುವಂಥ ಪರಿಸ್ಥಿತಿಗಳನ್ನೂ ಪ್ರತಿಮೆಗಳನ್ನೂ ಸೃಜಿಸಲು ಎಲ್ಲ ರೀತಿ ನೀತಿಗಳ – ಕಾಳ ಶತಕರಿಂದ (ಬ್ಲಾಕ್ ಹಂಡ್ರೆಡ್ಸ್) ಹಿಡಿದು ಅರಾಜಕತಾ ವಾದಿಗಳ ವರೆಗಿನ – ಬೂರ್‌ಷ್ವಾ ಲೇಖಕರು ತಮ್ಮೆಲ್ಲ ಯತ್ನಮಾಡುತ್ತಿದ್ದಾಗ, 'ತಾಯಿ' ಕಾದಂಬರಿಯು ಮನುಷ್ಯನನ್ನು ನಿಜವಾಗಿಯೂ ಮನುಷ್ಯನನ್ನಾಗಿ ಮಾಡಲು, ಅವ ನಲ್ಲಿರುವ ಪಶುತ್ವವನ್ನೆಲ್ಲ ಹೋಗಲಾಡಿಸಿ ಅವನನ್ನು ಪರಿಶುದ್ಧ ಮಾನವನನ್ನಾಗಿ ಮಾಡಲು, ಈ ಕ್ರಾಂತಿಕಾರಿ ಹೋರಾಟವಷ್ಟೆ ಏಕೈಕ ಸಾಧನವೆಂದು ತೋರಿಸಿ ಕೊಟ್ಟಿತು. ಕೆಲವೊಮ್ಮೆ ಕ್ರಾಂತಿಕಾರಿ ಹೋರಾಟ ಉಗ್ರರೂಪ ತಳೆದಲ್ಲಿ, ಇತಿಹಾಸದ ಪುರೋಗಮನವನ್ನು ನಿಲ್ಲಿಸಲು ಯಾವುದೇ ರೀತಿಯ ಹಿಂಸಾಚರಣೆಗೂ ಯಾವುದೇ ರೀತಿಯ ಪಾತಕಕ್ಕೂ ಸಿದ್ಧರಾಗಿರುವವರೇ ದೂಷಣಾರ್ಹರು, ಎಂದು ಕಾದಂಬರಿ ತೋರಿಸಿಕೊಡುತ್ತದೆ.

ಅನೇಕ ವರ್ಷಗಳನಂತರ 'ವಿ. ಐ. ಲೆನಿನ್' ಎಂಬ ತಮ್ಮ ಪ್ರಬಂಧದಲ್ಲಿ ಎಂ. ಗೋರ್ಕಿ ("ದ್ವೇಷಿಸಲು ತುಂಬ ಬಳಲಿರುವಂಥ ಹೃದಯ ಎಂದೂ ಪ್ರೇಮಿ ಸುವುದನ್ನು ಕಲಿಯದು" ಎಂಬ ನೆಕ್ರಾಸೊವ್‌ನ ಸುಪ್ರಸಿದ್ಧ ಮಾತುಗಳನ್ನೇ ವಿಶ ದೀಕರಿಸುತ್ತ) ಹೀಗೆ ಬರೆದರು: "ಜೀವನವು ಎಷ್ಟು ವಿಪರೀತವಾಗಿ ತೊಡಕಿನ ದಾಗಿದೆಯೆಂದರೆ, ದ್ವೇಷಿಸಲು ಶಕ್ತರಾಗದೆ ಯಾರೂ ಪ್ರಾಮಾಣಿಕವಾಗಿ ಪ್ರೇಮಿಸಲೂ ಶಕ್ತರಾಗರು. ಆಗಲೇ ಈ ಅವಶ್ಯತೆಯೇ – ಮಾನವ ಆತ್ಮವನ್ನು ವಿಭಜಿಸಬೇಕಾಗಿ ಬಂದಿರುವ ಆವಶ್ಯಕತೆ, ದ್ವೇಷಿಸುವ ಮೂಲಕ ಪ್ರೇಮಿಸುವ ಅನಿವಾರ್ಯತೆ – ಮಾನವನನ್ನು ಆಮೂಲಾಗ್ರವಾಗಿ ವಿರೂಪಗೊಳಿಸಬೇಕಾಗಿ ಬಂದಿರುವ ಆವಶ್ಯಕತೆ, ಇಂದಿನ ಜೀವನ ಪರಿಸ್ಥಿತಿಗಳನ್ನು ಸರ್ವನಾಶಕ್ಕೀಡುಮಾಡಿದೆ."

ಮಾನವ ಆತ್ಮವನ್ನು ಕ್ರೂರ ಯಾತನೆಯ ವಿಭಜನೆಗೆ ಗುರಿಮಾಡಿರುವ ಜಗ ತ್ತನ್ನು ನಾಶಮಾಡುವುದು – ಇದನ್ನೇ ಸಮಾಜವಾದಿ ಕ್ರಾಂತಿ ಉಂಟುಮಾಡು ವುದು. ಮಾನವೀಯತೆಯೇ ಈ ಕ್ರಾಂತಿಯ ಸಾರಸರ್ವಸ್ವ. ಮಾನವೀಯತೆಯನ್ನು ಕ್ರಾಂತಿಯಿಂದ ಪ್ರತ್ಯೇಕಿಸಿದಲ್ಲಿ ಅದು ನೈಜ ಮಾನವೀಯತೆಯಾಗದು. ಅಂತೆಯೇ ಕ್ರಾಂತಿಯನ್ನು ಮಾನವೀಯತೆಯಿಂದ ಪ್ರತ್ಯೇಕಿಸಿದಲ್ಲಿ ಅದು ನೈಜ ಕ್ರಾಂತಿಯಾಗದು.

ಎರಡು ವಿಷಯಗಳು ಗೋರ್ಕಿಯವರ ಇಡೀ ಸೃಜನಾತ್ಮಕ ಉದ್ಯಮದ ಮುಖ್ಯ ಭಾವಗಳಾಗಿವೆ: "ವ್ಯಕ್ತಿತ್ವ ನಾಶ"ದ ವಿಷಯ, "ಆತ್ಮ ಪುನರುತ್ಥಾನ"ದ ವಿಷಯ. ಜನತೆಯಿಂದ, ಸಮಾಜದಿಂದ, ಇತಿಹಾಸದ ಪುರೋಗಮನದಿಂದ ಪ್ರತ್ಯೇಕವಾಗಿ ನಿಲ್ಲುವ ಮನುಷ್ಯ ತನ್ನ ವ್ಯಕ್ತಿತ್ವವನ್ನು ಅನಿವಾರ್ಯವಾಗಿಯೇ ಬರಿದು ಮಾಡಿಕೊಳ್ಳುತ್ತಾನೆ, ನಾಶಪಡಿಸಿಕೊಳ್ಳುತ್ತಾನೆ. ಈ ಮನುಷ್ಯ ದೈಹಿಕವಾಗಿ ನಾಶ ವಾಗುವುದಕ್ಕೆ ತುಂಬ ಮುಂಚಿತವಾಗಿಯೇ ನೈತಿಕವಾಗಿ ನಾಶವಾಗುತ್ತಾನೆ. ಈ ವಿಷಯ ಗೋರ್ಕಿಯವರ 'ಕ್ಲಿಮ್ ಸಮ್ಗಿನ್‌ನ ಬಾಳು' ಎಂಬ ಕೃತಿಯಲ್ಲಿ ಅತ್ಯಂತ ಪೂರ್ಣವಾಗಿ

ಬಿಂಬಿತವಾಗಿದೆ. ಆದರೆ ತನ್ನ ಭವಿತವ್ಯವನ್ನು ಜನತೆಯ ಭವಿತವ್ಯದೊಂದಿಗೆ ಒಂದಾಗಿಸಿದ ಮನುಷ್ಯ ಇತಿಹಾಸದ ನ್ಯಾಯನಿಷ್ಠ ನಿರ್ಮಾಪಕನಾಗುತ್ತಾನೆ, ಆತ್ಮ ಪುನರುತ್ಥಾನ ಪಡೆಯುತ್ತಾನೆ. ಅವನು ಅಮರತ್ವದ ಹಕ್ಕಿಗೆ ಬಾಧ್ಯನಾಗುತ್ತಾನೆ. ಈ ವಿಷಯ 'ತಾಯಿ' ಕಾದಂಬರಿಯಲ್ಲಿ ಅತ್ಯಂತ ಸ್ಫುಟವಾಗಿ ಬಿಂಬಿತವಾಗಿದೆ.

ಕಾದಂಬರಿಯ ಕೊನೆಯಲ್ಲಿ – ಅದರ ದುರಂತ ಮುಕ್ತಾಯದಲ್ಲಿ – "ಅವರು ಜೀವಂತ ಆತ್ಮವನ್ನ ಕೊಲ್ಲಲಾರರು!" ಎಂಬ ಅದ್ಭುತ ಮಾತುಗಳು ಬರುವುದು ಆಕಸ್ಮಿಕವೇನಲ್ಲ. ಅವು ಮಾನವನಲ್ಲೂ ಅವನ ಭವಿಷ್ಯತ್ತಿನಲ್ಲೂ ಸಂಪೂರ್ಣ ಭರವಸೆ ವ್ಯಕ್ತಪಡಿಸುವ ಮಾತುಗಳಾಗಿವೆ.

ಬರೀಸ್ ಬ್ಯಾಲಿಕ್,
ಪ್ರಾಧ್ಯಾಪಕರು, ಡಿ. ಎಸ್‌ಸಿ.
(ಭಾಷೆ ಮತ್ತು ಸಾಹಿತ್ಯ ಶಾಸ್ತ್ರ)

೧

ಪ್ರತಿದಿನವೂ ಕಾರಖಾನೆಯ ಸಿಳ್ಳು, ಕೂಲಿಕಾರರ ವಸತಿಯ ಮೇಲಿನ ತೈಲ ಮಯವಾದ ಕೊಳಕು ಗಾಳಿಯಲ್ಲಿ, ನಡುಗುತ್ತ ಕಿರಿಚುತ್ತಿದ್ದಿತು. ಅದರ ಕರೆಗೆ ಕೂಲಿ ಕಾರರು ವಿಧೇಯರಾಗಿ ಓಗೊಡುತ್ತಿದ್ದರು. ನಶಿಸಿಹೋದ ಬಲವನ್ನು ಪುನಃ ದೊರ ಕಿಸಿಕೊಡುವ ನಿದ್ದೆಯಿಂದ, ಹೊತ್ತಿಗೆ ಮುಂಚೆಯೇ ಅವರು ಎದ್ದು ಬೂದು ಬಣ್ಣದ ಸಣ್ಣ ಮನೆಗಳಿಂದ, ಬೆದರಿದ ಜಿರಲೆಗಳಂತೆ ತೂರಾಡುತ್ತಾ ಹೊರಬರುತ್ತಿದ್ದರು. ಆ ಚಳಿಯ ಮಸಕು ಮುಂಜಾವಿನಲ್ಲಿ ಹಾಸುಗಲ್ಲಿಲ್ಲದ ಆ ಬೀದಿಯಲ್ಲಿ, ಕಾರಖಾನೆಯ ಎತ್ತರವಾದ ಕಲ್ಲು ಮಾಳಿಗೆಗಳಿಗೆ ಅವರು ಅವಸರದಿಂದ ಹೋಗುತ್ತಿದ್ದರು. ಆ ಕಾರಖಾನೆಯಾದರೋ ಅಚಲ ಆತ್ಮವಿಶ್ವಾಸದಿಂದ ಅವರ ಬರವನ್ನು ಇದಿರು ನೋಡುತ್ತಿತ್ತು. ಕೆಸರು ತುಂಬಿದ ಆ ಬೀದಿಯುದ್ದಕ್ಕೂ ಕಾರಖಾನೆಯ ಹತ್ತಾರು ಚಚ್ಚೌಕದ ಕಿಟಿಕಿಗಳು ಬೆಳಕು ಬೀರುತ್ತಿದ್ದುವು. ಪಾದಗಳ ತಳದಲ್ಲಿ ಕೆಸರು ಚಪಚಪನೆ ಬಡಿಯುತ್ತಿತ್ತು. ನಿದ್ರಾಸಕ್ತಸ್ವರಗಳಿಂದ ಹೊರಟ ಗಡಸು ಶಾಪಗಳಿಂದಲೂ ಉದ್ಗಾರ ಗಳಿಂದಲೂ ವಾತಾವರಣ ತುಂಬಿತ್ತು. ಈ ಜನರ ಕಿವಿಗಳಿಗಾದರೋ ಬೇರೆ ಸ್ವರ ಗಳು ಕೇಳಿಸುತ್ತಿದ್ದುವು; ಯಂತ್ರಗಳ ವಿಕಟ ಸಂಗೀತ ಮತ್ತು ಆವಿಯ ಸುಯ್‌ಸುಯ್ ಗೊಣಗಾಟ. ಕಪ್ಪಾದ ಹೊಗೆಕೊಳವೆಗಳು ಬಹಳ ಎತ್ತರದವರೆಗೂ ಹಬ್ಬಿ, ದಪ್ಪನೆಯ ಬಡಿಗೆಗಳಂತೆ, ಆ ವಸತಿ ಪ್ರದೇಶದ ಮೇಲೆ ಭಯಾನಕವಾಗಿ ಬಾಗಿ ನೋಡುತ್ತಿ ದ್ದುವು.

ಸಂಜೆ ಮುಳುಗುವ ಸೂರ್ಯನ ಬೇಸತ್ತ ಪ್ರತಿಬಿಂಬ ಮನೆಯ ಕಿಟಿಕಿಗಳ ಮೇಲೆ ಬೀಳುವ ಹೊತ್ತಿಗೆ ಲೋಹವನ್ನು ಬೇರ್ಪಡಿಸಿ ಕಲ್ಮಷವನ್ನು ಹೊರತಳ್ಳಿದ ಹಾಗೆ ಕಾರಖಾನೆ ತನ್ನ ಶಿಲಾಉದರದಿಂದ ಜನರನ್ನು ಹೊರಹಾಕಿತು. ಮತ್ತೊಮ್ಮೆ ಅವರು ಕೊಳಕು ಬೀದಿಗಳನ್ನೇರಿ ನಡೆದರು. ಮೈಯೆಲ್ಲ ಎಣ್ಣೆಯ ಜಿಗುಟು, ಕಪ್ಪು ಬಳಿದ ಮುಖ, ಹಸಿದ ಹಲ್ಲುಗಳ ಚಕಚಕಿಸುವ ಹೊಳಪು, ಶರೀರವೆಲ್ಲ ಯಂತ್ರ ದೆಣ್ಣೆಯ ಅಂಟಿನ ದುರ್ಗಂಧ. ಈಗ ಅವರ ಮಾತುಗಳಲ್ಲಿ ಒಂದು ಬಗೆಯ ಉತ್ಸಾ

ಹವಿದ್ದಿತು; ಸಂತೋಷ ಧ್ವನಿಗೊಳ್ಳುತ್ತಿದ್ದಿತು. ಇನ್ನೊಂದು ದಿನದ ಕೆಲಸ ಮುಗಿದ ಹಾಗಾಗಿತ್ತು. ಮನೆಯಲ್ಲಿ ರಾತ್ರಿಯೂಟ ಮತ್ತು ವಿಶ್ರಾಂತಿ ಅವರಿಗಾಗಿ ಕಾದಿದ್ದುವು.

ಅವರ ಹಗಲೆಲ್ಲವನ್ನೂ ಕಾರಖಾನೆ ಕಬಳಿಸಿತ್ತು. ಅದರ ಯಂತ್ರಗಳು ಕಾರ್ಮಿಕರ ಶಕ್ತಿಯನ್ನು ತಮಗೆ ಅಗತ್ಯವಿದ್ದಷ್ಟು ಹೀರಿದ್ದುವು. ಒಂದು ಕುರುಹನ್ನೂ ಹಿಂದೆ ಬಿಡದೆ ಕಳೆದುಹೋಯಿತು ಆ ದಿನ. ಮಾನವ ತನ್ನ ಗೋರಿಯತ್ತ ಮತ್ತೊಂದು ಹೆಜ್ಜೆಯನ್ನು ಮುಂದಿರಿಸಿದ್ದ. ಆದರೆ ಈಗ ಆತ ನಿರೀಕ್ಷಿಸುವುದು ವಿಶ್ರಾಂತಿಯ ಸವಿಯನ್ನು, ಹೊಗೆ ತುಂಬಿದ ಪಾನಮಂದಿರದ ಸುಖವನ್ನು. ಅಷ್ಟರಲ್ಲೇ ತೃಪ್ತಿ ಆತನಿಗೆ.

ರಜಾದಿನಗಳಲ್ಲಿ ಜನರು ಹತ್ತು ಗಂಟೆಯವರೆಗೂ ನಿದ್ರಿಸುತ್ತಿದ್ದರು. ಸದ್ಗೃಹಸ್ಥ ದಂಪತಿಗಳು ತಮ್ಮ ಅತ್ಯುತ್ತಮ ಉಡುಪನ್ನು ಧರಿಸಿ ದೇವಪ್ರಾರ್ಥನೆಗೆ ಹೋಗುತ್ತಿದ್ದರು. ಹೋಗುತ್ತ ಅವರು ಮತದ ಬಗೆಗೆ ದುರ್ಲಕ್ಷ್ಯದಿಂದಿರುವುದಕ್ಕಾಗಿ ಎಳೆಯರನ್ನು ಛೀಗಳೆಯುತ್ತಿದ್ದರು. ಪ್ರಾರ್ಥನೆಯ ತರುವಾಯ ಮನೆಗೆ ಮರಳಿ, ತಿಂದು, ಸಂಜೆಯವರೆಗೂ ಮತ್ತೊಮ್ಮೆ ನಿದ್ರಿಸುತ್ತಿದ್ದರು.

ಹಲವು ವರ್ಷಗಳಿಂದ ಬೆಳೆದುಬಂದ ಬಳಲಿಕೆಯಿಂದ ಅವರ ಹಸಿವು ಮಾಯವಾಗಿತ್ತು. ಹಸಿವನ್ನು ತೀಕ್ಷ್ಣಗೊಳಿಸಲೆಂದು ಅವರು ಕುಡಿಯುತ್ತಿದ್ದರು. ಕುಡಿದು, ವೋಡ್ಕ*ದ ಹರಿತವಾದ ಕಡಿತದಿಂದ ಹೊಟ್ಟೆಯುರಿಯುವಂತೆ ಮಾಡಿಕೊಳ್ಳುತ್ತಿದ್ದರು.

ಸಂಜೆ ಹೊತ್ತು ಬೀದಿಗಳಲ್ಲಿ ಅವರು ಅಲೆಯುತ್ತಿದ್ದರು. ರಬ್ಬರಿನ ಮೇಲ್ ಬೂಟುಗಳಿದ್ದವರು, ನೆಲ ಒಣಗಿದ್ದರೂ ಸರಿಯೆ, ಅವುಗಳನ್ನು ಧರಿಸಿಕೊಳ್ಳುವರು. ಛತ್ರಿಯಿದ್ದವರು, ಮಳೆ ಇಲ್ಲದಿದ್ದರು ಕೂಡ, ಅದನ್ನು ಹಿಡಿದು ಬರುವರು.

ಸ್ನೇಹಿತರನ್ನು ಸಂಧಿಸಿದಾಗ ಅವರು ತಮ್ಮ ಕಾರಖಾನೆಯ ವಿಷಯ, ಯಂತ್ರಗಳ ವಿಷಯ, ಮಾತನಾಡುತ್ತಿದ್ದರು; ಮೇಸ್ತ್ರಿಯ ಬಗೆಗೆ ದೂರುತ್ತಿದ್ದರು. ಅವರ ಯೋಚನೆ ಮಾತುಕತೆಯೆಲ್ಲ ತಮ್ಮ ಕೆಲಸಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ ಮಾತ್ರ. ಎಂದಾದರೊಮ್ಮೆ, ಅವರ ದಿನಗಳ ಬೇಸರದ ಏಕನಾದವನ್ನು, ಅಸ್ಪಷ್ಟವಾದ, ಸತ್ವಹೀನವಾದ ಯೋಚನೆಯ ಕಿಡಿಗಳು ಭೇದಿಸುತ್ತಿದ್ದುವು. ಮನೆಗೆ ಹಿಂದಿರುಗಿದೊಡನೆ ಗಂಡಸರು ತಮ್ಮ ಹೆಂಡತಿಯರೊಡನೆ ಜಗಳ ಹೂಡುತ್ತಿದ್ದರು. ಆಗಾಗ್ಗೆ ಅವರನ್ನು ಹೊಡೆಯುತ್ತಿದ್ದರು. ತಮ್ಮ ಮುಷ್ಟಿಗಳಿಗೆ ನೋವಾದರೂ ಹೊಡೆತ ನಿಲ್ಲಿಸುತ್ತಿರಲಿಲ್ಲ. ಯುವಕರು ಮದ್ಯದಂಗಡಿಗಳಿಗೆ ಆಗಾಗ ಹೋಗುತ್ತಿದ್ದರು; ಅಥವಾ ಅವರಿವರ ಮನೆಗಳಲ್ಲಿ ಕುಡಿತಕೂಟಗಳನ್ನೇರ್ಪಡಿಸುತ್ತಿದ್ದರು. ಆಗ ಅಲ್ಲಿ, ಕೈಹಾರ್ಮೋನಿಯಂ ಬಾರಿಸುತ್ತ, ಒರಟಾದ ಅಸಹ್ಯ ಗೀತೆಗಳನ್ನು ಹಾಡುತ್ತ, ಕುಣಿದು ಗದ್ದಲವೆಬ್ಬಿಸುತ್ತಿದ್ದರು; ಅಮಲೇರುವಂತೆ ಕುಡಿಯುತ್ತಿದ್ದರು. ಮೊದಲೇ ಆಯಾಸಗೊಂಡವ

---

*ವೋಡ್ಕ – ರಷ್ಯಾದ ವಿಶಿಷ್ಟ ಮಾದಕ ಪಾನೀಯ. – ಅನು.

ರಾದ್ದರಿಂದ ಮದ್ಯ ಬಲು ಬೇಗನೆ ತಲೆಗೇರುತ್ತಿತ್ತು. ಆಗ ಅವರೆದೆಗಳಲ್ಲಿ, ದೂಷಿತ ವಾದ ಅರಿಯಲಸಾಧ್ಯವಾದ ಸಂತಾಪ ಬಾಧಿಸುತ್ತಿತ್ತು; ಹೊರಹೊಮ್ಮಲು ಅದು ಅವಕಾಶ ಬೇಡುತ್ತಿತ್ತು. ಸಣ್ಣ ನೆಪ ದೊರೆತರೂ ಸಾಕು, ಕ್ರೂರ ಮೃಗಗಳ ಹಾಗೆ ಅವರು ಒಬ್ಬರಮೇಲೊಬ್ಬರು ಬೀಳುತ್ತಿದ್ದರು. ಹೀಗೆ ತಮ್ಮ ಮನಶ್ಶಾಂತಿಗಾಗಿ ಪ್ರತಿ ಯೊಂದು ಸಣ್ಣ ಸಂದರ್ಭವನ್ನೂ ಅವರು ಉಪಯೋಗಿಸುತ್ತಿದ್ದರು. ಅದರ ಪರಿ ಣಾಮವಾಗಿ ರಕ್ತಮಯ ಕಲಹಗಳಾಗುತ್ತಿದ್ದುವು. ಕೆಲವೊಮ್ಮೆ ತೀವ್ರ ಗಾಯಗಳಲ್ಲಿ, ಒಮ್ಮೊಮ್ಮೆ ಸಾವಿನಲ್ಲೂ, ಆ ಕಲಹಗಳು ಅವಸಾನ ಹೊಂದುತ್ತಿದ್ದುವು.

ಅವರೊಳಗಿನ ಪರಸ್ಪರ ಸಂಬಂಧಗಳಲ್ಲಿ ಪ್ರಾಮುಖ್ಯವಾಗಿದ್ದುದು, ಒಬ್ಬರ ಕುರಿತು ಇನ್ನೊಬ್ಬರಿಗಿದ್ದ ಮುಚ್ಚುಮರೆಯ ಅಸೂಯಾ ಭಾವನೆ. ಈ ಭಾವನೆಯು ವಾಸಿಮಾಡಲಸಾಧ್ಯವಾದ ಅವರ ತೋಳಿನ ಬಳಲಿಕೆಯಷ್ಟೇ ಹಳೆಯದಾಗಿತ್ತು. ಈ ಮನೋಭಾವನೆಯ ರೋಗವನ್ನು ಪಿತ್ರಾರ್ಜಿತವಾಗಿ ಪಡೆದೇ ಅವರು ಹುಟ್ಟು ತ್ತಿದ್ದರು. ಕರಿಯ ನೆರಳಿನಂತೆ ಆ ಭಾವನೆ, ಗೋರಿಯವರೆಗೂ ಅವರನ್ನು ಹಿಂಬಾಲಿ ಸುತ್ತಿತ್ತು. ಇದರ ಫಲವಾಗಿಯೇ ಅವರು ಗುರಿಯಿಲ್ಲದ ತುಚ್ಛವಾದ ವಿವೇಕ ಶೂನ್ಯವಾದ ಕ್ರೂರ ಕೃತ್ಯಗಳನ್ನು ಮಾಡುತ್ತಿದ್ದರು.

ಹಬ್ಬದ ದಿನಗಳಲ್ಲಿ ಯುವಕರು ರಾತ್ರೆ ತಡವಾಗಿ ಮನೆಗೆ ಬರುತ್ತಿದ್ದರು. ಹರಿದ ಬಟ್ಟೆಗಳು, ಮೈತುಂಬ ಕೆಸರು ಧೂಳು, ಏಟಿನಿಂದ ಕಪ್ಪುಗಟ್ಟಿದ ಕಣ್ಣುಗಳು ಮತ್ತು ರಕ್ತಮಯವಾದ ಮೂಗುಗಳು; ಕೆಲವೊಮ್ಮೆ ಅವರು, ತಮ್ಮ ಮಿತ್ರರಿಗೆ ತಾವು ಕೊಟ್ಟ ಏಟುಗಳ ಬಗೆಗೆ ಜಂಭ ಕೊಚ್ಚಿಕೊಳ್ಳುತ್ತ ಬರುತ್ತಿದ್ದರು. ಒಮ್ಮೊಮ್ಮೆ ದುಮ್ಮಾನದಿಂದ, ಸಿಟ್ಟಿನಿಂದ, ತಮಗಾದ ಅವಮಾನಗಳ ಬಗೆಗೆ ದುಃಖಿಸುತ್ತ, ಬರುತ್ತಿದ್ದರು. ಅಮಲೇರಿರುತ್ತಿತ್ತು. ನೋಡಿದರೆ ಮನಕರಗುವಂತೆ, ದುರವಸ್ಥೆ ಯಲ್ಲಿ, ಜುಗುಪ್ಸೆ ಹುಟ್ಟಿಸುವ ಹಾಗೆ ಇರುತ್ತಿದ್ದರು. ಒಮ್ಮೊಮ್ಮೆ ಕುಡಿದು ಪ್ರಜ್ಞೆ ತಪ್ಪಿದ ಸ್ಥಿತಿಯಲ್ಲಿ ಬೇಲಿಯ ನೆರಳಲ್ಲಿ ತೆವಳುತ್ತಿದ್ದಾಗಲೋ, ಮದ್ಯದಂಗಡಿಗಳಲ್ಲಿ ನೆಲದ ಮೇಲೆ ಬಿದ್ದಿದ್ದಾಗಲೋ, ತಮ್ಮ ಮಕ್ಕಳನ್ನು ತಾಯ್ತಂದೆಯರು ಹುಡುಕಿ, ಮನೆಗೆ ಕರೆದುಕೊಂಡು ಬರುತ್ತಿದ್ದರು. ತರುವಾಯ ಹಿರಿಯರು ಅವರನ್ನು ಬಾಯಿಗೆ ಬಂದಂತೆ ಬಯ್ದು, ಅಮಲೇರಿ ಜೋಲುಬಿದ್ದಿದ್ದ ಅವರ ಶರೀರಗಳನ್ನು ಮೇಲಿಂದ ಮೇಲೆ ಗುದ್ದಿ, ನಂತರ ಸ್ವಲ್ಪ ಹೆಚ್ಚುಕಡಮೆ ವಾತ್ಸಲ್ಯಪೂರ್ವಕವಾಗಿ ಅವರನ್ನು ಮಲಗಿಸುತ್ತಿದ್ದರು. ಮತ್ತೆ ಮುಂಜಾನೆ, ಕಾರಖಾನೆಯ ಸಿಳ್ಳಿನ ಕೋಪದ ಕಿರಿಚಾಟ ಉಷಃಕಾಲವನ್ನು ಭೇದಿಸಿ ಕರಿಯ ಪ್ರವಾಹದ ಹಾಗೆ ಧಾವಿಸಿ ಬಂದಾಗ, ಅವರನ್ನು ಮರೆಯದೆ ಎಬ್ಬಿಸುತ್ತಿದ್ದರು.

ತಮ್ಮ ಮಕ್ಕಳನ್ನು ಅವರು ಜೋರಾಗಿ ಹೊಡೆಯುತ್ತಿದ್ದರು, ಬೈಯುತ್ತಿದ್ದರು. ಆದರೆ ಯುವಕರ ಕಲಹಕುಡಿತವೆಲ್ಲ ಸ್ವಾಭಾವಿಕವೆಂದೇ ಅವರಿಗೆ ತೋರುತ್ತಿತ್ತು. ಹೆತ್ತವರು ತಾವು ಚಿಕ್ಕವರಿದ್ದಾಗ ಅದೇ ರೀತಿ ಹೊಡೆದಾಡಿ, ಮಿತಿಮೀರಿ ಕುಡಿಯುತ್ತಿ

ವ್ವರು. ಅವರ ತಾಯ್ತಂದೆಯರು ಅವರನ್ನೂ ಹೊಡೆಯುತ್ತಿದ್ದರು. ಯಾವಾಗಲೂ ಹಾಗೆಯೇ ಇದ್ದಿತು ಜೀವನ. ಅದು ವರ್ಷಾಂತರಗಳ ಕಲ್ಮಷ ಪ್ರವಾಹದಂತೆ ಬಲು ನಿಧಾನವಾಗಿ ಏಕಪ್ರಕಾರವಾಗಿ ಮುಂದು ಮುಂದಕ್ಕೆ ಹರಿಯುತ್ತಲೇ ಇತ್ತು. ತಲೆ ತಲಾಂತರಗಳ ಯೋಚನೆ ಮತ್ತು ವರ್ತನೆಯ ಅಭ್ಯಾಸಗಳು ಭದ್ರಪಡಿಸಿದ್ದ ಬದ ಲಾಗದ ಹಾದಿಯಲ್ಲೇ ಜೀವನ ಸಾಗುತ್ತಿತ್ತು. ಅದರಲ್ಲೇನಾದರೂ ಬದಲಾವಣೆಯನ್ನು ಸಾಧಿಸಬೇಕೆಂಬ ಎಳ್ಳಿನಷ್ಟು ಆಸೆಯೂ ಒಬ್ಬರಿಗೂ ಇರಲಿಲ್ಲ.

ಒಮ್ಮೊಮ್ಮೆ ಎಲ್ಲಿಂದಲೋ ಅಪರಿಚಿತ ಜನರು ಕಾರಖಾನೆಯ ವಸತಿ ಪ್ರದೇಶಕ್ಕೆ ಬರುತ್ತಿದ್ದರು; ಮೊದಮೊದಲು ಅವರು ಹೊಸಬರೆಂಬ ಅಂಶ ಎಲ್ಲರ ಗಮನ ವನ್ನು ಸೆಳೆಯುತ್ತಿತ್ತು. ತಾವು ಆ ವರೆಗೆ ಕೆಲಸ ಮಾಡಿದ ಜಾಗಗಳ ಕತೆಗಳನ್ನು ಅವರು ಹೇಳುತ್ತಿದ್ದರು. ಆ ಕತೆಗಳಿಂದಾಗಿ ಅವರ ಬಗೆಗೆ ಹುಟ್ಟುತ್ತಿದ್ದ ಆಸಕ್ತಿ, ಸ್ವಲ್ಪ ಕಾಲ ಉಳಿಯುತ್ತಿತ್ತು. ಆದರೆ ಈ ಹೊಸತನ ಬಹಳ ಕಾಲವಿರುತ್ತಿರಲಿಲ್ಲ, ರೂಢಿ ಯಾದೊಡನೆ, ಅವರ ಕಡೆಗೆ ಯಾರೂ ವಿಶೇಷ ಗಮನವನ್ನು ಹರಿಸುತ್ತಿರಲಿಲ್ಲ. ದುಡಿ ಯುವ ಜನರ ಜೀವನವು ಎಲ್ಲಾ ಕಡೆಯಲ್ಲೂ ಒಂದೇ ರೀತಿ ಎಂಬುದು, ಆ ಹೊಸ ಬರ ಮಾತಿನಿಂದ ಸ್ಪಷ್ಟವಾಗುತ್ತಿತ್ತು. ಅದು ನಿಜವೆಂದಾದಮೇಲೆ ಮಾತನಾಡಲು ಬೇರೇನು ಉಳಿದಹಾಗಾಯಿತು?

ಆದರೆ ಈ ಜನರಲ್ಲಿ ಕೆಲವರು, ಆ ವಸತಿಪ್ರದೇಶದಲ್ಲಿ ಆ ವರೆಗೆ ಯಾರೂ ಕೇಳಿ ಅರಿಯದ ವಿಷಯಗಳ ಬಗೆಗೆ ಒಮ್ಮೊಮ್ಮೆ ಮಾತನಾಡುತ್ತಿದ್ದರು. ಅಂಥವರೊಡನೆ ಯಾರೂ ವಾದಿಸುತ್ತಿರಲಿಲ್ಲ. ಆದರೆ ಪ್ರತಿಯೊಬ್ಬರೂ ಒಂದು ಬಗೆಯ ಅಪನಂಬಿಕೆ ಯಿಂದಲೇ ಆ ಮಾತಿಗೆ ಕಿವಿಗೊಡುತ್ತಿದ್ದರು. ಹೊಸಬರ ಮಾತು ಕೆಲವರಲ್ಲಿ ಕುರುಡು ಸಿಟ್ಟನ್ನು ಕೆರಳಿಸುತ್ತಿತ್ತು. ಇನ್ನಿತರರು ಅಸ್ಪಷ್ಟವಾಗಿ ಹೆದರುತ್ತಿದ್ದರು. ಬೇರೆ ಕೆಲ ವರಲ್ಲಿ ಆಸೆಯ ಒಂದು ಎಳೆಯ ಕುಡಿ ಚಿಗುರಿದ ಹಾಗಾಗುತ್ತಿತ್ತು. ಆದರೆ ಅವರು ಜೀವನವನ್ನು ಮತ್ತಷ್ಟು ಸಂಕಟಮಯಗೊಳಿಸುವಂಥ ಆ ಅನಾವಶ್ಯಕ ಭೀತಿಯನ್ನು ಹೊಡೆದೋಡಿಸಲು ಮತ್ತಷ್ಟು ಕುಡಿಯುತ್ತಿದ್ದರು.

ಒಬ್ಬಾತನಲ್ಲಿ ಏನಾದರೂ ಅಸಾಧಾರಣವಾದುದು ಕಂಡುಬಂದರೆ ಅದು ಅವನ ದುರ್ಗುಣವೆಂದೇ ಕಾರ್ಮಿಕರು ಭಾವಿಸಿ ಅವನ ವಿಷಯದಲ್ಲಿ ಕಾರಣವಿಲ್ಲದೆ ಎಚ್ಚರಿ ಕೆಯಿಂದಿರುತ್ತಿದ್ದರು. ಅವರ ಜೀವನ ಕಷ್ಟದ್ದು ನಿಜ. ಆದರೆ ಶಾಂತವಾದದ್ದು, ಕ್ಷೋಭೆ ಇಲ್ಲದ್ದು. ಅಂಥ ನೀರಸ ಜೀವನದ ಕ್ರಮಬದ್ಧತೆಯನ್ನು ಆ ವ್ಯಕ್ತಿ ಎಲ್ಲಾದರೂ ತಪ್ಪಿಸುವನೇನೋ ಎಂಬ ಭೀತಿ ಅವರಿಗೆ. ಸದಾ ಕಾಲದಲ್ಲಿಯೂ ಜೀವನದ ಸಮಭಾರ ವನ್ನು ಹೊರುವುದು ಅವರಿಗೆ ರೂಢಿಯಾಗಿದ್ದಿತು. ಅದಕ್ಕೆ ಪರಿಹಾರವಿದ್ದೀತೆಂಬ ಭರವಸೆಯೇ ಅವರಿಗೆ ಇರಲ್ಲಿಲ್ಲ. ಯಾವುದೇ ಬದಲಾವಣೆ ಬಂತೆಂದರೆ ತಮ್ಮ ಕಷ್ಟ ಹೆಚ್ಚುವುದೆಂದೇ ಅವರಿಗೆ ತೋರುತ್ತಿತ್ತು.

ಹೊಸ ವಿಚಾರಗಳನ್ನು ಮುಂದಿಡುವವರನ್ನು, ದುಡಿಯುವ ಜನರು ಸದ್ದಿ

ಲ್ಲದೆ ದೂರವಿಟ್ಟು, ಅವರಿಂದ ತಪ್ಪಿಸಿಕೊಳ್ಳುತ್ತಿದ್ದರು. ಆದ್ದರಿಂದಲೇ ಹೊಸಬರೂ ಮರೆಯಾಗುತ್ತಿದ್ದರು. ಅವರು ಬೇರೆ ಕಡೆಗಳಿಗೆ ಹೊರಟುಹೋಗಬೇಕಾಗುತ್ತಿತ್ತು. ಆ ಕಾರಖಾನೆಯಲ್ಲಿಯೇ ಅವರು ದುಡಿಯಲು ಉಳಿದಂಥ ಸಂದರ್ಭಗಳಲ್ಲಿ, ಅವರು ಇತರ ಸಹೋದ್ಯೋಗಿಗಳ ರೀತಿಗೆ ಮಾರ್ಪಡುತ್ತಿದ್ದರು; ಇಲ್ಲವೆ ಬೇರೆಯಾಗಿಯೇ ದೂರ ವಾಸಿಸುತ್ತಿದ್ದರು....

ಸುಮಾರು ಐವತ್ತು ವರ್ಷಗಳ ಅಂಥ ಜೀವನದ ತರುವಾಯ ಮನುಷ್ಯ ಸಾಯುತ್ತಿದ್ದನು.

೨

ಮಿಹಯಿಲ್ ವ್ಲಾಸೊವ್ ಹೀಗೆಯೇ ಜೀವಿಸುತ್ತಿದ್ದ. ಮೈತುಂಬ ಕೂದಲಿತ್ತು ಅವನಿಗೆ. ದಪ್ಪವಾದ ಹುಬ್ಬುಗಳಡಿಯಿಂದ ತಿರಸ್ಕಾರದ ದೃಷ್ಟಿಯನ್ನು ಬೀರುತ್ತ ಸಂಶಯದ ನೋಟದಿಂದ ನೋಡುತ್ತಿದ್ದ ಸಣ್ಣ ಕಣ್ಣುಗಳಿದ್ದುವು. ಗಂಟು ಮುಖ. ಆತ ಕಾರಖಾನೆಯಲ್ಲಿ ಅತ್ಯುತ್ತಮ ಮೆಕ್ಯಾನಿಕ್. ವಸತಿ ಪ್ರದೇಶದಲ್ಲಿ ಉಳಿದೆಲ್ಲರಿಗಿಂತ ಹೆಚ್ಚು ಬಲಶಾಲಿ. ಮೇಲಧಿಕಾರಿಗಳೊಡನೆ ಅವನು ಒರಟಾಗಿ ನಡೆದುಕೊಳ್ಳುತ್ತಿದ್ದನು. ಆ ಕಾರಣದಿಂದಲೇ ಆತನಿಗೆ ಹೆಚ್ಚು ಸಂಪಾದನೆ ಇರಲಿಲ್ಲ. ಪ್ರತಿ ರಜಾ ದಿನದಲ್ಲಿಯೂ ಯಾರಾದರೊಬ್ಬನನ್ನು ಆತ ಹೊಡೆಯುತ್ತಿದ್ದ. ಆದ್ದರಿಂದಲೇ, ಯಾರಿಗೂ ಬೇಕಾದವನಾಗಿರಲಿಲ್ಲ ಆತ. ಎಲ್ಲರೂ ಅತನಿಗೆ ಹೆದರುತ್ತಿದ್ದರು. ಆದರೆ, ಅವನಿಗೆ ಬುದ್ಧಿ ಕಲಿಸಬೇಕೆಂಬ ಯಾವ ಯತ್ನವೂ ಫಲಕಾರಿಯಾಗುತ್ತಿರಲಿಲ್ಲ. ತನ್ನ ಮೇಲೆ ಯಾರೋ ಕೈ ಮಾಡಲು ಯತ್ನಿಸುತ್ತಿರುವರೆಂಬುದನ್ನು ಮನಗಂಡಕೂಡಲೇ ವ್ಲಾಸೊವ್, ಒಂದು ದಪ್ಪ ಕಲ್ಲನ್ನೋ ಹಲಗೆಯನ್ನೋ ಕಬ್ಬಿಣದ ಸರಳನ್ನೋ ಹಿಡಿದು ತನ್ನೆರಡು ಕಾಲುಗಳನ್ನೂ ಅಗಲಿಸಿ ಊರಿನಿಂತು, ಮೌನದಿಂದಲೇ ಶತ್ರುವಿನ ಬರವನ್ನು ಇದಿರುನೋಡುತ್ತಿದ್ದ. ಅವನ ರೋಮಮಯವಾಗಿದ್ದ ತೋಳುಗಳ, ಕಣ್ಣುಗಳಿಂದ ಕುತ್ತಿಗೆಯವರೆಗೆ ಹಬ್ಬಿದ್ದ ದಟ್ಟವಾದ ಕಪ್ಪು ಗಡ್ಡವುಳ್ಳ, ಆ ಯುದ್ಧೋನ್ಮುಖ ಚಹರೆಯ ದರ್ಶನವೊಂದೇ ಸಾಕಿತ್ತು. ಯಾರೇ ಆದರೂ ಹೆದರಿಹೋಗುತ್ತಿದ್ದರು. ಆದರೆ ಜನರು ವಿಶೇಷತಃ ಹೆದರುತ್ತಿದ್ದುದು ಆತನ ಕಣ್ಣುಗಳಿಗೆ. ಸಣ್ಣದಾಗಿ, ತೀಕ್ಷ್ಣವಾಗಿ, ಉಕ್ಕಿನ ಬೈರಿಗೆ ಕೊರೆಯುತ್ತಿದ್ದಂತೆ ಕಾಣುತ್ತಿದ್ದ ಕಣ್ಣುಗಳು ಅವು. ಆ ಕಣ್ಣುಗಳ ನೋಟಕ್ಕೆ ಒಬ್ಬ ತುತ್ತಾದರೆ ಸಾಕು, ಭಯ ದಯೆಯ ಸುಳಿವೇ ಇಲ್ಲದೆ ಇರಿಯಲು ಮುಂದೆ ಬಂದಂಥ ಕ್ರೂರ ಶಕ್ತಿಗೆದುರಾಗಿ ತಾನು ನಿಂತಂತೆ ಭಾಸವಾಗುತ್ತಿತ್ತು.

"ಹೊರಡಿ, ಸೂಳೆ ಮಕ್ಕಳಿರಾ," ಎಂದವನು ಗಡಸು ಧ್ವನಿಯಲ್ಲಿ ಹೇಳುತ್ತಿದ್ದ. ಆಗ ಅವನ ಹಳದಿಯ ಹಲ್ಲುಗಳು ಗಡ್ಡದ ನಡುವೆ ಹೊಳೆಯುತ್ತಿದ್ದುವು. ಜನರು ಹೊರಟುಹೋಗುತ್ತ ಹೇಡಿಗಳಂತೆ ಬೈಗಳ ಮಳೆ ಕರೆಯುತ್ತಿದ್ದರು.

ಆ ಜನರು ಹೋಗುತ್ತಿದ್ದಂತೆ, "ಸೂಳೆ ಮಕ್ಕಳು !" ಎಂದಷ್ಟೇ ಆತ ಕೂಗುತ್ತಿದ್ದನು. ತಿರಸ್ಕಾರದಿಂದ ಆತನ ಕಣ್ಣುಗಳು ಇರಿಯುವ ಸೂಜಿಯಂತೆ ತೀಕ್ಷ್ಣವಾಗಿರುತ್ತಿದ್ದುವು. ಆಮೇಲೆ ಅವರನ್ನು ಆತ ತಲೆಯೆತ್ತಿ ಹಿಂಬಾಲಿಸುತ್ತ ಆಹ್ವಾನದ ಧ್ವನಿಯಲ್ಲಿ ಕೂಗುತ್ತಿದ್ದ:

"ಹುಂ ! ಸಾಯುವ ಆಸೆ ಯಾರಿಗಿದೆ?"

ಆ ಆಸೆ ಯಾರಿಗೂ ಇರಲಿಲ್ಲ.

ಅವನು ಮಾತನಾಡುತ್ತಿದ್ದುದು ಬಲು ಕಡಮೆ. "ಸೂಳೆ ಮಗನೇ" ಎನ್ನುವುದು ಅವನ ಮೆಚ್ಚುಗೆಯ ಪದವಾಗಿತ್ತು. ಪೋಲೀಸರು, ಕಾರ್ಖಾನೆಯ ತನ್ನ ಮೇಲಧಿಕಾರಿಗಳು ಇವರೆಲ್ಲರ ಬಗೆಗೆ ಅದೇ ಪದವನ್ನು ಆತ ಬಳಸುತ್ತಿದ್ದ. ತನ್ನ ಹೆಂಡತಿಯನ್ನು ಯಾವಾಗಲೂ "ಹಾದರಗಿತ್ತಿ" ಎಂದೇ ಅವನು ಕರೆಯುತ್ತಿದ್ದುದು.

"ಏಯ್, ಹಾದರಗಿತ್ತಿ ! ಇಲ್ಲಿ ನನ್ನ ಷರಾಯಿ ಹರಿದಿರೋದು ಕಾಣಿಸಲಿಲ್ಲ ನಿನಗೆ? "

ಒಮ್ಮೆ ಹೀಗಾಯಿತು. ಅವನ ಮಗ ಪಾವೆಲ್, ಹದಿನಾಲ್ಕು ವರ್ಷದವನು ಆಗ, ಇನ್ನೇನು, ತಂದೆ ಮಗನ ಕೂದಲು ಹಿಡಿದೆಳೆಯಬೇಕು ಎನ್ನುವಷ್ಟರಲ್ಲೆ ಪಾವೆಲ್, ದೊಡ್ಡ ಸುತ್ತಿಗೆಯನ್ನೆತ್ತಿಕೊಂಡು, "ದೂರ ಸರಿ !" ಎಂದಿಷ್ಟೇ ಹೇಳಿದ.

"ಏನಂದೆ?" ಎನ್ನುತ್ತ ತಂದೆ, ನೆರಳು ತನ್ನ ಮರದ ಬಳಿಗೆ ಕಿರಿದಾಗುತ್ತ ಹೋಗುವಂತೆ, ಎತ್ತರದ ತೆಳ್ಳನೆಯ ಮಗನ ಕಡೆಗೆ ಸಾಗಿದ.

"ಇಷ್ಟರವರೆಗೆ ಸಹಿಸಿದ್ದಾಯಿತು, ಸಾಕಿನ್ನು !" ಎನ್ನುತ್ತ ಪಾವೆಲ್ ಸುತ್ತಿಗೆಯನ್ನೆತ್ತಿದ.

ತಂದೆ ಮಗನತ್ತ ಒಮ್ಮೆ ನೋಡಿ ತನ್ನ ರೋಮಮಯವಾದ ಕೈಗಳನ್ನು ಬೆನ್ನ ಹಿಂದೆಯೇ ಬಚ್ಚಿಟ್ಟುಕೊಂಡ.

"ಒಳ್ಳೆಯದು," ಎನ್ನುತ್ತ ಆತ ತುಸು ನಕ್ಕ.

ಆಮೇಲೆ ದೀರ್ಘ ನಿಟ್ಟುಸಿರು ಬಿಡುತ್ತ ಹೇಳಿದ:

"ನೀನು ಸೂಳೆ ಮಗನೇ ಸರಿ !"

ಅದಾದ ಸ್ವಲ್ಪ ದಿನಗಳಲ್ಲೆ ಆತ ತನ್ನ ಹೆಂಡತಿಗೆ ಹೇಳಿದ್ದೂ ಆಯಿತು:

"ಇನ್ನು ಹಣಕ್ಕಾಗಿ ನನ್ನನ್ನೇನೂ ಕೇಳಬೇಡ, ಇವತ್ತಿನಿಂದ ಪಾವೆಲ್ ನಿನ್ನ ಪೋಷಕ."

"ನೀನು ಸಂಪಾದಿಸಿದ್ದನ್ನೆಲ್ಲ ಕುಡಿದು ಮುಗಿಸ್ತಿಯೇನೋ ಹಾಗಾದರೆ?" ಎಂದು, ಧೈರ್ಯಪಡುತ್ತ, ಆಕೆ ಉತ್ತರವಿತ್ತಳು.

"ಹಾದರಗಿತ್ತಿ ! ನೀನ್ಯಾರೆ ಕೇಳೋಳು? ಬೇಕಾದರೆ ಬೇರೊಬ್ಬಳನ್ನ ಕೂಡಾ ಇಟ್ಟುಕೋತೀನಿ."

ಬೇರೆಯವಳನ್ನೇನೂ ಇಟ್ಟುಕೊಳ್ಳಲಿಲ್ಲ ಆತ ಆದರೆ ಅಂದಿನಿಂದ ತಾನು

ಸಾಯುವ ತನಕ, ಸುಮಾರು ಎರಡು ವರ್ಷಗಳ ಕಾಲ, ಮಗನನ್ನು ಲಕ್ಷಿಸಲೇ ಇಲ್ಲ. ಅವನೊಡನೆ ಎಂದೂ ಮಾತನಾಡಲಿಲ್ಲ.

ಅವನ ಬಳಿ ಒಂದು ನಾಯಿಯಿದ್ದಿತು. ಅದು ಅವನಂತೆಯೇ ದೊಡ್ಡದಾಗಿತ್ತು. ದಟ್ಟವಾದ ಕೂದಲಿತ್ತು ಅದಕ್ಕೆ. ಪ್ರತಿದಿನವೂ ಬೆಳಗ್ಗೆ ಆತ ಕಾರಖಾನೆಗೆ ಹೋದಾಗ ಅದು ಅವನನ್ನು ಹಿಂಬಾಲಿಸುತ್ತಿತ್ತು. ಪ್ರತಿ ಸಂಜೆ ಹೊರ ಬಾಗಿಲ ಬಳಿ ಅವನಿಗಾಗಿ ಕಾದಿರುತ್ತಿತ್ತು. ವ್ಲಾಸೊವ್ ತನ್ನ ರಜಾದಿನಗಳನ್ನು ಹೆಂಡದಂಗಡಿಗಳ ಅಲೆದಾಟ ದಲ್ಲಿಯೇ ಕಳೆಯುತ್ತಿದ್ದ. ಮೌನವಾಗಿ, ತಾನು ಯಾರನ್ನೋ ಹುಡುಕುತ್ತಿರುವ ವನಂತೆ ಜನರ ಮುಖಗಳನ್ನೇ ದಿಟ್ಟಿಸಿ ನೋಡುತ್ತ, ಹೋಗುತ್ತಿದ್ದ. ಆ ದಿನವೆಲ್ಲಾ ನಾಯಿಯೂ ತನ್ನ ಪೊದೆಗೂದಲಿನ ಬಾಲವನ್ನಾಡಿಸುತ್ತ ಯಜಮಾನನನ್ನು ಹಿಂಬಾ ಲಿಸುತ್ತಿತ್ತು. ಕಡೆಗೆ ವ್ಲಾಸೊವ್ ಅಮಲೇರಿ ಮನೆಗೆ ಬಂದು ಊಟಕ್ಕೆ ಕುಳಿತಾಗ, ತನ್ನ ತಟ್ಟೆಯಿಂದಲೇ ಆ ನಾಯಿಗೂ ಉಣಬಡಿಸುತ್ತಿದ್ದ. ಅವನು ಅದನ್ನೆಂದೂ ಬೈದಿರಲಿಲ್ಲ; ಅದಕ್ಕೆಂದೂ ಹೊಡೆದಿರಲಿಲ್ಲ. ಆದರೆ ಪ್ರೀತಿಯಿಂದ ಎಂದೂ ಅದರ ಮೈದಡವಿಯೂ ಇರಲಿಲ್ಲ. ಊಟದ ತರುವಾಯ, ಮೇಜಿನ ಮೇಲಿಂದ ತನ್ನ ಹೆಂಡತಿ ತಟ್ಟೆ ಬಟ್ಟಲುಗಳನ್ನೆತ್ತುವುದು ತಡವಾಯಿತೆಂದರೆ, ತಾನೇ ಅವುಗಳನ್ನು ನೆಲಕ್ಕೆ ಬಿಸಾಡುತ್ತಿದ್ದ. ಆ ಮೇಲೆ ವೋಡ್ಕದ ಸೀಸೆಯೊಂದನ್ನು ತನ್ನೆದುರು ಇರಿಸಿ ಕೊಂಡು, ಗೋಡೆಗೊರಗಿ ಕಣ್ಮುಚ್ಚಿ, ಬಾಯ್ದೆರೆದು, ಯಾರಿಗೇ ಆದರೂ ನಡುಕ ಹುಟ್ಟಿಸುವಂಥ ಅಳುಸ್ವರದಲ್ಲಿ ಹಾಡುತ್ತಿದ್ದ. ಅವನ ಶೋಕದ ಅಸಹ್ಯ ಶಬ್ದಗಳು ಮೀಸೆಗಳ ನಡುವೆ ಸಿಲುಕಿಕೊಳ್ಳುತ್ತಿದ್ದುವು. ಜಗಿಯುತ್ತಿದ್ದ ರೊಟ್ಟಿಯ ಚೂರು ಗಳನ್ನಾತ ಹೊರಕ್ಕೆ ಉಗಿಯುತ್ತಿದ್ದ. ಗಡ್ಡ ಮೀಸೆಗಳನ್ನು ದಪ್ಪನೆಯ ತನ್ನ ಬೆರಳು ಗಳಿಂದ ನೇವರಿಸುತ್ತ ಹಾಡುತ್ತಲೇ ಇರುತ್ತಿದ್ದ ಆತ. ಅವನ ಹಾಡಿನ ಪದಗಳು ಅಸ್ಪಷ್ಟವಾಗಿರುತ್ತಿದ್ದುವು; ಅವುಗಳಿಗೆ ಅರ್ಥವಿರುತ್ತಿರಲಿಲ್ಲ. ಆ ರಾಗವಾದರೋ, ಚಳಿ ಗಾಲದಲ್ಲಿ ತೋಳಗಳು ಗೋಳಾಡುವುದನ್ನು ನೆನಪಿಗೆ ತರುತ್ತಿತ್ತು. ವೋಡ್ಕ ಮುಗಿ ಯುವವರೆಗೂ ಅವನು ಹಾಡುತ್ತಿದ್ದ. ಆಮೇಲೆ ಹಾಗೆಯೇ ಬೆಂಚಿನ ಮೇಲು ರುಳಿಕೊಂಡು, ಇಲ್ಲವೆ ಮೇಜಿನ ಮೇಲೆ ತಲೆ ಇರಿಸಿಕೊಂಡು, ಮುಂಜಾನೆ ಸಿಳ್ಳು ಕೇಳಿ ಬರುವವರೆಗೂ ನಿದ್ರಿಸುತ್ತಿದ್ದ. ನಾಯಿ ಅವನ ಪಕ್ಕದಲ್ಲಿಯೇ ಮಲಗಿರುತ್ತಿತ್ತು.

ಆತ ಸತ್ತುದು ಅಂಡವಾಯುವಿನಿಂದ. ಐದು ದಿನಗಳವರೆಗೆ ಅವನು ಹಾಸಿಗೆ ಯಲ್ಲಿ ಹೊರಳಾಡಿದ. ಮುಖ ಕಪ್ಪಾಗಿತ್ತು. ಕಣ್ಣುಗಳು ಮುಚ್ಚಿದ್ದುವು. ಕಟ ಕಟನೆ ಆತ ಹಲ್ಲು ಕಡಿಯುತ್ತಿದ್ದ.

"ನನಗೆ ಸ್ವಲ್ಪ ಪಾಷಾಣ ಕೊಡು. ಅಂತೂ ನನ್ನನ್ನು ಮುಗಿಸು," ಎಂದು ಆಗ ಒಮ್ಮೊಮ್ಮೆ ತನ್ನ ಹೆಂಡತಿಗೆ ಆತ ಹೇಳುತ್ತಿದ್ದ.

ಪೋಲ್ಟೀಸು ಕಟ್ಟಿರೆಂದು ಡಾಕ್ಟರು ಹೇಳಿದರು. ಅಲ್ಲದೆ, ಮಿಹ

ಯಾಲನಿಗೆ ಶಸ್ತ್ರಚಿಕಿತ್ಸೆಯಾಗಬೇಕೆಂದೂ ಆ ದಿನವೇ ಅವನನ್ನು ಆಸ್ಪತ್ರೆಗೆ ಸಾಗಿಸಬೇಕೆಂದೂ ತಿಳಿಸಿದರು.

ಉಸಿರಿಗಾಗಿ ಬಾಯ್ಬಿಡುತ್ತ ಆಗ ಮಿಹಯೀಲ್ ಹೇಳಿದ್ದಿದು:

"ಹೋಗಾಚೆ ! ನಿನ್ನ ಸಹಾಯ ಇಲ್ಲದೇನೇ ನಾನು ಸಾಯ್ತೀನಿ. ಸೂಳೆ ಮಗನೆ !"

ಡಾಕ್ಟರು ಹೊರಟುಹೋದ ಮೇಲೆ ಹೆಂಡತಿ ಕಣ್ಣೀರಿಡುತ್ತ, "ಶಸ್ತ್ರಚಿಕಿತ್ಸೆಗೆ ಒಪ್ಪಿಕೋ," ಎಂದು ದೈನ್ಯದಿಂದ ಬೇಡಿಕೊಂಡಳು.

"ನನಗೆ ವಾಸಿಯಾದರೆ, ಇನ್ನೂ ಹೆಚ್ಚಿನ ತೊಂದರೆ ನಿನಗೆ!" ಎಂದು ಆತ ಉತ್ತರವಿತ್ತ, ಆಕೆಯು ಕಡೆಗೆ ಮುಷ್ಟಿ ಹಿಡಿಯುತ್ತಾ.

ಮಾರನೆಯ ದಿನ ಬೆಳಿಗ್ಗೆ, ಕಾರಖಾನೆಯ ಸಿಳ್ಳಿನ ಕರೆ ಬಂದ ಕ್ಷಣದಲ್ಲಿಯೇ ಆತ ತೀರಿಕೊಂಡ. ಶವದಾನಿಯೊಳಗೆ ಮಲಗಿಸಿದರು ಅವನನ್ನು. ಬಾಯಿ ತೆರೆದಿತ್ತು; ಅಸಂತೋಷದ ಸಿಟ್ಟಿನಿಂದ ಹುಬ್ಬು ಗಂಟಿಕ್ಕಿತ್ತು. ಹೆಂಡತಿ, ಮಗ ಮತ್ತು ನಾಯಿ, ಕಾರಖಾನೆಯಲ್ಲಿ ಕೆಲಸದಿಂದ ವಜಾ ಆಗಿದ್ದ ಒಬ್ಬ ಹಳೆಯ ಕೇಡಿಯೂ ಕುಡುಕನೂ ಆದ ದನೀಲ ವೆಸೊವ್ಶ್ಚಿಕೋವ್ ಮತ್ತು ಆ ವಸತಿ ಪ್ರದೇಶದ ಕೆಲವು ಭಿಕ್ಷುಕರು – ಇಷ್ಟೆಲ್ಲ ಜನ ಅವನ ಶವಸಂಸ್ಕಾರವನ್ನು ನಡೆಸಿದರು. ಅವನ ಹೆಂಡತಿ ಸ್ವಲ್ಪ ಹೊತ್ತು ಅತ್ತಳು. ಬಲು ನಿಶ್ಶಬ್ದವಾಗಿ ಅತ್ತಳು. ಪಾವೆಲ್ ಅಳಲೇ ಇಲ್ಲ. ಈ ಮಸಣ ಯಾತ್ರೆಯನ್ನು ಸಂಧಿಸಿದ ಆ ವಸತಿಯ ಜನರು ಕ್ಷಣ ಕಾಲ ನಿಂತು, ಶಿಲುಬೆಯ ವಂದನೆ ಮಾಡುತ್ತ, "ಆತ ಹೋದನೆಂದು ಪೆಲಗೇಯಗೆ ನಿಜವಾಗಿಯೂ ಸಂತೋಷವಾಗಿರಲೇಬೇಕು," ಎಂದರು.

ಮತ್ತೆ ಕೆಲವರು ದನಿಗೂಡಿಸಿದರು:

"ಅವನು ಬಾಳಿದ್ದೂ ನಾಯಿಯಂತೆ, ಸತ್ತದ್ದೂ ನಾಯಿಯಂತೆ."

ಶವದಾನಿಯನ್ನು ಹೂತಿಟ್ಟ ಮೇಲೆ ಜನರು ಹೊರಟುಹೋದರು. ಆದರೆ ನಾಯಿ ಮಾತ್ರ, ಮೌನವಾಗಿ ಗೋರಿಯನ್ನು ಮೂಸುತ್ತ, ಆ ಹಸಿ ಮಣ್ಣಿನ ಮೇಲೆ ಹಾಗೆಯೇ ಕುಳಿತಿತ್ತು. ಕೆಲವು ದಿನಗಳ ಬಳಿಕ ಯಾರೋ ಅದನ್ನು ಕೊಂದರು....

೩

ತಂದೆಯ ನಿಧನದ ಎರಡು ವಾರಗಳ ತರುವಾಯ ಒಂದು ಭಾನುವಾರ ಸಂಜೆ ಪಾವೆಲ್ ವ್ಲಾಸೊವ್, ಮಿತಿಮೀರಿ ಕುಡಿದು ಮನೆಗೆ ಬಂದ. ತೂರಾಡುತ್ತಾ ಮನೆಯೊಳಕ್ಕೆ ಬಂದು ಮೇಜಿನ ಬಳಿ ಇದ್ದ ತಂದೆ ಕುಳಿತುಕೊಳ್ಳುತ್ತಿದ್ದ ಆಸನದ ಮೇಲೆ ಉರುಳಿಕೊಂಡ. ತಂದೆ ಮಾಡುತ್ತಿದ್ದಂತೆ ಮುಷ್ಟಿಯಿಂದ ಮೇಜಿನ ಮೇಲೆ ಗುದ್ದುತ್ತ, ತಾಯಿಗೆ ಗದರಿಸಿ ಹೇಳಿದ:

"ಊಟ !"

ತಾಯಿ ಮಗನ ಹತ್ತಿರ ಬಂದು ಕುಳಿತು, ತನ್ನ ತೋಳುಗಳಿಂದ ಅವನನ್ನು ಆವರಿಸಿ, ಆತನ ತಲೆಯನ್ನು ತನ್ನ ಎದೆಗೆ ಆನಿಸಿಕೊಂಡಳು. ಆದರೆ ಆತ ಅವಳನ್ನು ಹಿಡಿದು ದೂರಕ್ಕೆ ನೂಕಿದ.

"ಅಮ್ಮಾ! ಊಟದ ತಯಾರಿಯಾಗಲಿ!" ಎಂದು ಅಸಹ್ಯವೆನಿಸುವಂತೆ ವರ್ತಿಸಿದ.

"ಅವಿವೇಕಿ!" ಎನ್ನುತ್ತಾ ತಾಯಿ ವ್ಯಸನದಿಂದಲೂ ಪ್ರೀತಿಯಿಂದಲೂ ಅವನ ಕೈಯನ್ನು ಹಿಂದಕ್ಕೆ ಇಳಿಸಿದಳು.

ತನ್ನ ದಪ್ಪನೆಯ ನಾಲಿಗೆಯನ್ನು ಪ್ರಯಾಸದಿಂದ ತಿರುಗಿಸುತ್ತಾ ಪಾವೆಲ್, "ನಾನಿನ್ನು ಪೈಪ್ ಸೇದ್–ತೀನಿ.... ಅಪ್ ಪನ ಪೈಪ್‌ಕೊಡೂ ಊ ಊ!" ಎಂದ.

ಅವನು ಅಮಲೇರಿ ಬಂದಿದ್ದುದು ಅದೇ ಮೊದಲು. ವೋಡ್ಕ ಅವನ ಶರೀರವನ್ನು ಬಲಗುಂದಿಸಿತ್ತು. ಆದರೆ ಆತನನ್ನು ಪ್ರಜ್ಞಾಹೀನನನ್ನಾಗಿ ಮಾಡಿರಲಿಲ್ಲ. "ನಾನು ಕುಡಿದಿದ್ದೇನೆಯೇ? ನನಗೆ ಅಮಲೇರಿದೆಯೇ?" ಎಂಬ ಪ್ರಶ್ನೆ ಅವನ ತಲೆಯಲ್ಲಿ ಬಾರಿ ಬಾರಿಗೂ ಪ್ರತಿಧ್ವನಿಸುತ್ತಿತ್ತು.

ತಾಯಿ ತೋರಿಸಿದ ಪ್ರೀತಿಯನ್ನು ಕಂಡು ಆತ ತಬ್ಬಿಬ್ಬಾದ. ಆಕೆಯ ದುಃಖಪೂರಿತ ದೃಷ್ಟಿ ಅವನನ್ನು ಮರುಕಗೊಳಿಸಿತು. ಅಳಬೇಕನ್ನಿಸಿತು ಅವನಿಗೆ. ಈ ಇಚ್ಛೆಯನ್ನು ತಡೆಹಿಡಿಯುವುದಕ್ಕಾಗಿಯೇ ಆತ, ತಾನು ವಸ್ತುತಃ ಇದ್ದುದಕ್ಕಿಂತಲೂ ಹೆಚ್ಚು ಅಮಲೇರಿದವನಂತೆ ನಟಿಸಿದ.

ಒದ್ದೆಯಾದ ಕೆದರಿದ ಅವನ ಕೂದಲನ್ನು ತಾಯಿ ನೇವರಿಸಿದಳು.

"ನೀನು ಹೀಗೆ ಮಾಡಬಾರದಿತ್ತು," ಎಂದು ಶಾಂತವಾಗಿ ಹೇಳಿದಳಾಕೆ.

ಅವನಿಗೆ ಬವಳಿ ಬಂದ ಹಾಗಾಯಿತು. ಎಲ್ಲವೂ ವಾಂತಿಯಾಗಿ ಹೋಯಿತು. ತಾಯಿ ಹಾಸಿಗೆಯ ಮೇಲೆ ಅವನನ್ನು ಮಲಗಿಸಿದಳು. ನಿಸ್ತೇಜವಾಗಿದ್ದ ಆ ಹಣೆಯ ಮೇಲೆ ಒಂದು ಒದ್ದೆ ಟವಲನ್ನಿಟ್ಟಳು. ಇದರಿಂದ ಸ್ವಲ್ಪ ಅಮಲಿಳಿದ ಹಾಗಾಯಿತು. ಆದರೂ ತನ್ನ ಸುತ್ತಲೆಲ್ಲ ವಸ್ತುಗಳು ಈಸಾಡುತ್ತಲೇ ಇದ್ದಂತೆ ಕಾಣಬರುತ್ತಿತ್ತು ಅವನಿಗೆ. ಕಣ್ಣೆವೆಗಳು ತುಂಬ ಭಾರವಾಗಿದ್ದುವು. ಒಂದು ರೀತಿಯ ಅಸಹ್ಯ ಕಹಿ ರುಚಿಯಿತ್ತು ಬಾಯಲ್ಲಿ. ತನ್ನ ಕಣ್ಣೆವೆಗಳ ಮೂಲಕ, ತಾಯಿಯ ವಿಶಾಲ ಮುಖದ ಮೇಲೆ ಆತ ದೃಷ್ಟಿ ಬೀರಿದ.

"ನನಗಿನ್ನೂ ಅನುಭವ ಸಾಲದು ಎಂಬುದು ಸ್ಪಷ್ಟ. ಬೇರೆಯವರು ಕುಡಿಯೋದಿಲ್ಲವೆ? ಅವರಿಗೇನೂ ಆಗೋದಿಲ್ಲ. ನನಗೆ ಮಾತ್ರ ಈ ರೀತಿ...." ಎಂದೆಲ್ಲ ಆತ ಯೋಚಿಸಿದ.

ಎಲ್ಲಿಂದಲೋ ದೂರದಿಂದ ಅವನ ತಾಯಿಯ ಮೆಲುಸ್ವರ ಕೇಳಿಬಂತು:

"ಹೀಗೆ ಕುಡಿಯೋಕೆ ಶುರು ಮಾಡಿದರೆ, ನೀನು ಎಂದಾದರೂ ನನ್ನ ಸಾಕೋಮುಂಟೆ?"

"ಎಲ್ಲರೂ ಕುಡೀತಾರೆ," ಎಂದಾತ ಕಣ್ಣುಗಳನ್ನು ಬಿಗಿಯಾಗಿ ಮುಚ್ಚಿಕೊಂಡೇ ಉತ್ತರ ಕೊಟ್ಟ.

ತಾಯಿ ನಿಟ್ಟುಸಿರುಬಿಟ್ಟಳು. ಅವನು ಹೇಳಿದ್ದೂ ನಿಜ. ಆಕೆಗೂ ಗೊತ್ತಿತ್ತು. ಒಂದು ಬಿಂದು ಸುಖವನ್ನು ಜನರು ಹೀರಿಕೊಳ್ಳುವುದು ಸಾಧ್ಯವಿದ್ದ ಜಾಗವೆಂದರೆ ಪಾನಮಂದಿರವೊಂದೇ.

ಆದರೂ ಆಕೆ ಹೇಳಿದಳು:

"ನಿನಗೆ ಕುಡಿಯುವ ಚಟ ಬೇಡ. ನಿಮ್ಮಿಬ್ಬರ ಪಾಲಿಗಿಂತಲೂ ಹೆಚ್ಚಾಗಿಯೇ ನಿಮ್ಮಪ್ಪ ಕುಡಿದು ಹೋದ. ಅವನ ಕೈಲಿ ನಾನು ಅನುಭವಿಸಿದ್ದು ಸಾಲದೆ? ನಿನ್ನ ತಾಯಿ ಮೇಲೆ ರವಷ್ಟಾದರೂ ದಯ ತೋರಿಸಬಾರದೇನೋ...."

ಆ ದುಃಖಪೂರ್ಣವಾದ ಮೃದು ಮಾತುಗಳನ್ನು ಕೇಳುತ್ತ ಪಾವೆಲ್‌ಗೆ ಹಿಂದಿನ ದಿನಗಳ ನೆನಪಾಯ್ತು. ತನ್ನ ತಂದೆ ಬದುಕ್ಕಿದ್ದಷ್ಟು ಕಾಲ, ಮನೆಯಲ್ಲಿ ತಾಯಿಯ ಸುಳಿವೇ ಕಾಣುತ್ತಿರಲಿಲ್ಲ. ಯಾವಾಗಲೂ ಮೌನವಾಗಿ ಇರುತ್ತಿದ್ದಳಾಕೆ. ಬಡಿತದ ಭೀತಿಯಲ್ಲೇ ದಿನ ನೂಕುತ್ತಿದ್ದಳು. ತಾನಾದರೂ ಅಷ್ಟೆ. ತಂದೆಯ ಭೇಟಿಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಸಾಧ್ಯವಿದ್ದಷ್ಟು ಮಟ್ಟಿಗೂ ಮನೆಯಿಂದ ಹೊರಗೇ ಉಳಿಯುತ್ತಿದ್ದ. ಆದುದರಿಂದ ಅವನು ತಾಯಿಗೆ ಹೊಂದಿಕೊಳ್ಳದೆಯೇ ಬೆಳೆದ. ಈಗ ಕ್ರಮೇಣ ಅಮಲು ಇಳಿದ ಹಾಗೆ, ಅವನು ಆಕೆಯನ್ನು ಬಲು ಆಸ್ಥೆಯಿಂದ ವೀಕ್ಷಿಸಿದ.

ಆಕೆ ಎತ್ತರವಾಗಿದ್ದಳು. ಸ್ವಲ್ಪ ಬಾಗಿದ ಮೈ. ಶ್ರಮದ ದುಡಿತದಿಂದಲೂ ಗಂಡನ ಹೊಡೆತದಿಂದಲೂ ಆಕೆಯ ದೇಹ ಹಣ್ಣಾಗಿತ್ತು. ಸದ್ದಿಲ್ಲದೆ, ಸ್ವಲ್ಪ ಪಕ್ಕಕ್ಕೆ ವಾಲಿಕೊಂಡೇ ಅವಳು ನಡೆಯುತ್ತಿದ್ದಳು – ತಾನು ಯಾವುದನ್ನಾದರೂ ಕೆಡವ ಬಹುದೆಂಬ ಭೀತಿ ಇದ್ದ ಹಾಗೆ. ಆಕೆಯ ಅಗಲವಾದ ದುಂಡು ಮುಖ ತುಂಬಿಕೊಂಡಿತ್ತು, ಸುಕ್ಕುಗಟ್ಟಿತ್ತು. ಅಂಜಿಕೆ ಮತ್ತು ದುಃಖಗಳಿಂದ ತುಂಬಿದ್ದ ಕಪ್ಪನೆಯ ಕಣ್ಣುಗಳು ಮುಖಕ್ಕೆ ಕಳೆಕೊಟ್ಟಿದ್ದುವು. ಆ ವಸತಿ ಪ್ರದೇಶದ ಹೆಚ್ಚು ಜನ ಹೆಂಗಸರಿಗೆಲ್ಲ ಇದ್ದ ಕಣ್ಣುಗಳೇ ಅಂಥವು. ಆಕೆಯ ಬಲಗಡೆಯ ಹುಬ್ಬಿನ ಮೇಲೊಂದು ಆಳವಾದ ಗಾಯದ ಗುರುತಿತ್ತು. ಹುಬ್ಬನ್ನು ಸ್ವಲ್ಪ ಎತ್ತಿದ ಹಾಗಾಗಿತ್ತು ಇದರಿಂದ. ಬಲ ಕಿವಿಯು ಕೂಡಾ ಎಡ ಕಿವಿಗಿಂತ ಸ್ವಲ್ಪ ಎತ್ತರವಾಗಿದೆಯೇನೋ ಎಂಬ ಭಾವನೆ ಹುಟ್ಟುತ್ತಿತ್ತು. ಹೀಗಾಗಿ, ಕೆಟ್ಟ ಸುದ್ದಿಯನ್ನೇ ಯಾವಾಗಲೂ ಅಂಜಿಯಂಜಿ ಕೇಳುತ್ತಿರುವಂಥ ಮುಖ ಮುದ್ರೆ ಆಕೆಗೆ ಬಂದಿತ್ತು. ಆಕೆಯ ದಪ್ಪನೆಯ ಕರಿಗೂದಲಿನ ನಡುವೆ ಅಲ್ಲಲ್ಲಿ ನೆರೆ ಕೂದಲು ಹೊಳೆಯುತ್ತಿತ್ತು. ಕೋಮಲತೆಯ, ದುಃಖದ, ಮೂಕ ವಿಧೇಯತೆಯ ಮೂರ್ತ ಸ್ವರೂಪವಾಗಿದ್ದಳಾಕೆ.

ಆಕೆಯ ಕೆನ್ನೆಗಳ ಮೇಲಿಂದ ನಿಧಾನವಾಗಿ ಕಣ್ಣೀರು ಹರಿಯುತ್ತಿತ್ತು.

ಮಗ ಮೆಲ್ಲನೆ ಹೇಳಿದ:

"ಅಳಬೇಡಮ್ಮ. ನನಗೇನಾದರೂ ಕುಡಿಯೋಕೆ ಕೊಡು."

"ಸ್ವಲ್ಪ ಮಂಜುಗಡ್ಡೆ ಹಾಕಿದ ನೀರು ತರ್ತೀನಿ, ಇರು."

ಆದರೆ, ಆಕೆ ನೀರು ತರುವುದರಲ್ಲೇ ಆತನಿಗೆ ನಿದ್ರೆ ಹತ್ತಿತ್ತು. ಒಂದು ಕ್ಷಣ ಆಕೆ ಅವನನ್ನು ನೋಡುತ್ತ ನಿಂತಳು. ಕೈಯಲ್ಲಿದ್ದ ಲೋಟ ನಡುಗುತ್ತಿತ್ತು. ಅದರೊಳಗಿದ್ದ ಮಂಜುಗಡ್ಡೆ, ಲೋಟದ ಬದಿಗೆ ತಗಲುತ್ತಿದ್ದಿತು.... ಆಕೆ ಲೋಟವನ್ನು ಮೇಜಿನ ಮೇಲಿಟ್ಟಳು. ಪವಿತ್ರ ದೇವಮೂರ್ತಿಗಳ ಮುಂದೆ ಸದ್ದಿಲ್ಲದೆ ಮೊಣಕಾಲೂರಿದಳು. ಹೊರಗೆ ಕಿಟಿಕಿಯಾಚೆಯಿಂದ ಕುಡುಕರ ಗದ್ದಲ ಕೇಳಿಸುತ್ತಿತ್ತು. ಶರತ್ಕಾಲದ ಸಂಜೆಯ ಆ ಚಳಿಗತ್ತಲೆಯಲ್ಲಿ ಹಾರ್ಮೋನಿಯಂ ಗೊರಗುಟ್ಟುತ್ತಿತ್ತು. ಯಾರೋ ಒಬ್ಬ ಗಟ್ಟಿಯಾಗಿ ಹಾಡುತ್ತಿದ್ದ ಬೇರೆ ಇನ್ನೊಬ್ಬನು ಬೈಗಳ ಮಳೆಗರೆಯುತ್ತಿದ್ದನು. ಸ್ತ್ರೀಯರ ಬಳಲಿದ್ದ ಸಿಟ್ಟಿಗೆದ್ದಿದ್ದ ಸ್ವರಗಳು ಅಶಾಂತವಾಗಿ ಅಲೆಯುತ್ತಿದ್ದುವು.

ವ್ಲಾಸೊವ್‌ರ ಸಣ್ಣ ಮನೆಯಲ್ಲಿ ಜೀವನವು ಮೊದಲಿಗಿಂತಲೂ ಹೆಚ್ಚು ಶಾಂತವಾಗಿ ಸದ್ದಿಲ್ಲದೆ ಸಾಗುತ್ತಿತ್ತು. ಇತರ ಮನೆಗಳಲ್ಲಿ ಇದ್ದುದಕ್ಕಿಂತ ಸ್ವಲ್ಪ ಮಟ್ಟಿಗೆ ಭಿನ್ನವಾಗಿಯೇ ಇತ್ತು ಆ ಜೀವನ. ಅವರ ಮನೆ ಇದ್ದುದು ವಸತಿ ಪ್ರದೇಶದ ಒಂದು ಕೊನೆಯಲ್ಲಿ. ಕಡಿದಾದ, ಅಷ್ಟೇನೂ ಎತ್ತರವಲ್ಲದ, ಒಂದು ಏರಿಯ ಮೇಲೆ, ಕೆಳಗೆ ಜೌಗು ಪ್ರದೇಶಕ್ಕೆ ಇಳಿಯುವ ಹಾದಿ ಅದು. ಮನೆಯ ಮೂರರಲ್ಲೊಂದು ಪಾಲು ಜಾಗದಲ್ಲಿ, ಅಡುಗೆ ಮನೆಯೂ ವಿಭಜಿಸಿ ಮಾಡಿದ್ದ ಒಂದು ಸಣ್ಣ ಕೊಠಡಿಯೂ ಇದ್ದುವು. ಆ ಕೊಠಡಿಯಲ್ಲಿ ತಾಯಿ ಮಲಗುತ್ತಿದ್ದಳು. ಉಳಿದ ಮೂರರಲ್ಲೆರಡು ಭಾಗದಲ್ಲಿ ಒಂದು ಚಚ್ಚೌಕದ ಕೊಠಡಿ. ಅದಕ್ಕೆರಡು ಕಿಟಕಿಗಳು. ಒಂದು ಮೂಲೆಯಲ್ಲಿ ಪಾವೆಲ್‌ನ ಮಂಚ. ಮತ್ತೊಂದರಲ್ಲಿ ಒಂದು ಮೇಜು, ಎರಡು ಬೆಂಚು. ಇನ್ನುಳಿದ ಪೀಠೋಪಕರಣಗಳೆಂದರೆ-ಕೆಲವು ಕುರ್ಚಿಗಳು, ಸಣ್ಣ ಕನ್ನಡಿಯೊಂದಿದ್ದ ಅಲಮಾರು, ಅವರ ಬಟ್ಟೆಗಳಿದ್ದ ಒಂದು ಪೆಟ್ಟಿಗೆ, ಗೋಡೆಯ ಮೇಲೆ ಒಂದು ಗಡಿಯಾರ ಮತ್ತು ಮೂಲೆಯಲ್ಲಿ ಎರಡು ದೇವಪ್ರತಿಮೆ ಫಲಕಗಳು.

ಯುವಕರು ಏನೇನು ಮಾಡಬೇಕೋ ಅದನ್ನೆಲ್ಲ ಪಾವೆಲ್ ಮಾಡಿದ. ತನಗಾಗಿ ಒಂದು ಕೈ ಹಾರ್ಮೋನಿಯಂ ಕೊಂಡುಕೊಂಡ. ಗಂಜಿ ಹಚ್ಚಿದ ಮುನ್ನಿಲುವಿನ ಅಂಗಿಯನ್ನೂ ಥಳಥಳಿಸುವ ಒಂದು 'ಟೈ'ಯನ್ನೂ ಒಂದು ಬೆತ್ತವನ್ನೂ ರಬ್ಬರಿನ ಮೇಲ್ ಬೂಟುಗಳನ್ನೂ ಕೊಂಡುತಂದ. ಹೀಗೆ ಅವನೂ ತನ್ನ ಸಮವಯಸ್ಕರಂತೆಯೇ ಆದ. ಸಂಜೆ ಕೂಟಗಳಿಗೆ ಹೋಗುತ್ತಿದ್ದನಾತ. ಬಾಲ್ ನೃತ್ಯ ವಿಶೇಷಗಳಾದ 'ಕ್ವಾಡ್ರಿಲ್' ಹಾಗೂ 'ಪೋಲ್ಕ' ನರ್ತಿಸಲು ಕಲಿತ. ರಜಾ ದಿನಗಳ ಸಂಜೆ ಪಾನಮತ್ತನಾಗಿ ಮನೆಗೆ ಬರುತಿದ್ದ. ಆದರೆ ವೋಡ್ಕ ಯಾವಾಗಲೂ ಅವನನ್ನು ನರಳಾಟಕ್ಕೀಡುಮಾಡುತ್ತಿತ್ತು. ಮಾರನೆಯ ಬೆಳಿಗ್ಗೆ ಎದ್ದಾಗಲೆಲ್ಲ ಅವನಿಗೆ ತಲೆನೋವು ಇರುತ್ತಿತ್ತು; ಎದೆಯುರಿಯುತ್ತಿತ್ತು; ಮೋರೆ ಸಪ್ಪಗಿದ್ದು ಯಾತನೆ ಸೂಸುತ್ತಿತ್ತು.

ಒಮ್ಮೆ ಅವನ ತಾಯಿ ಕೇಳಿದಳು:

"ಏನಪ್ಪ ನಿನ್ನೆ ರಾತ್ರಿ, ಮೋಜು ಜೋರಾಗಿತ್ತೆ?"

ಭಿನ್ನನಾಗಿ ಸಿಡುಕಿನಿಂದ ಅವನು ಉತ್ತರವಿತ್ತ:

"ಹೊಲಸು! ಇದಕ್ಕಿಂತ, ಮೀನು ಹಿಡಿಯೋಕೆ ಹೋಗೋದು ಮೇಲು. ಅಥವಾ ಒಂದು ಬಂದೂಕು ಕೊಂಡುಕೊಂಡು ಬೇಟೆಗೆ ಹೋದರೂ ಸರಿಯೆ."

ಅವನು ಶ್ರದ್ಧೆಯಿಂದ ಕೆಲಸ ಮಾಡುತ್ತಿದ್ದ. ಒಂದು ದಿನವೂ ತಪ್ಪುತ್ತಿರಲಿಲ್ಲ. ಅಥವಾ ಒಮ್ಮೆಯೂ ತಡವಾಗಿ ಕೆಲಸಕ್ಕೆ ಬಂದುದಕ್ಕಾಗಿ ಜುಲ್ಮಾನೆ ಹಾಕಿಸಿಕೊಳ್ಳು ತ್ತಿರಲಿಲ್ಲ. ಆತ ಮಿತಭಾಷಿ. ಅವನ ತಾಯಿಯ ರೀತಿಯ ದೊಡ್ಡ ನೀಲಿಗಣ್ಣುಗಳಲ್ಲಿ ಅತೃಪ್ತಿ ಇತ್ತು. ಬಂದೂಕವನ್ನೂ ಆತ ಕೊಳ್ಳಲಿಲ್ಲ. ಮೀನು ಹಿಡಿಯುವುದಕ್ಕೂ ಹೋಗಲಿಲ್ಲ. ಆದರೆ ಇತರರೆಲ್ಲರಿಗಿಂತ ಬೇರೆಯಾದ ಹಾದಿಯಲ್ಲಿ ಆತ ಸಾಗುತ್ತಿದ್ದಾ ನೆಂಬುದು ಬೇಗನೆ ಸ್ಪಷ್ಟವಾಯಿತು. ಅವನು ಕುಡಿತಕೂಟಗಳಿಗೆ ಹೋಗುವುದು ಕಡಮೆಯಾಯಿತು. ರಜಾದಿನಗಳಲ್ಲಿ ಅವನು ಮಾಯವಾದರೂ ಮನೆಗೆ ಬಂದಾಗ ಕುಡಿದ ಅಮಲಿನಲ್ಲಿರುತ್ತಿರಲಿಲ್ಲ. ಮಗನ ಶ್ಯಾಮಲವರ್ಣದ ಮುಖವು ತೆಳ್ಳಗಾಗು ತ್ತಿದ್ದುದನ್ನು ಕಣ್ಣುಗಳು ಹೆಚ್ಚು ಗಂಭೀರವಾಗುತ್ತಿದ್ದುದನ್ನೂ ತುಟಿಗಳು ಬಿಗಿ ಯಾಗಿ ದಿಟ್ಟತನದ ರೇಖೆಯಾಗಿ ಸಂಕ್ಷಿಪ್ತಗೊಂಡುದನ್ನೂ ತಾಯಿಯ ತೀಕ್ಷ್ಣ ದೃಷ್ಟಿ ಕಂಡುಕೊಂಡಿತು. ತನಗೇನೋ ಅನ್ಯಾಯವಾದವನ ಹಾಗೆ ಅಥವಾ ಅನಾರೋಗ್ಯ ದಿಂದ ಕ್ಷೀಣಿಸುತ್ತಿದ್ದವನ ಹಾಗೆ, ಆತ ತೋರುತ್ತಿದ್ದ. ಮೊದಲಾದರೆ, ಸ್ನೇಹಿತರು ಆಗಾಗ್ಗೆ ಅವನ ಮನೆಗೆ ಬರುತ್ತಿದ್ದರು. ಈಗ ಆತ ಸಾಮಾನ್ಯವಾಗಿ ಮನೆಯಲ್ಲಿ ಇಲ್ಲದ್ದನ್ನು ಕಂಡು, ಅವರು ಬರುವುದನ್ನು ನಿಲ್ಲಿಸಿದರು. ತನ್ನ ಮಗನು ಕಾರಖಾನೆಯ ಇತರ ಯುವಕರಿಗಿಂತ ಭಿನ್ನನಾಗಿದ್ದುದನ್ನು ಕಂಡು ತಾಯಿಗೆ ಸಂತೋಷವಾಯಿತು. ಆದರೆ, ಸುತ್ತಲಿನ ಜೀವನದ ಕರಿಯ ಪ್ರವಾಹದಲ್ಲಿ ತೇಲದೆ ಆತ ಪ್ರತ್ಯೇಕವಾಗಿ ಹಟದಿಂದ ತನ್ನ ಹಾದಿಯನ್ನು ತಾನೇ ಕಾಣತೊಡಗಿದ್ದನ್ನು ಕಂಡು ಆಕೆಗೆ ಹೆದ ರಿಕೆಯೂ ಆಯಿತು.

ಕೆಲವೊಮ್ಮೆ ಆಕೆ ಕೇಳುವಳು:

"ನಿಜಕ್ಕೂ ಸ್ವಸ್ಥವಾಗಿದೀಯ ಪಾಷ*?"

"ಓಹೋ ಚೆನ್ನಾಗಿದ್ದೀನಿ," ಎಂದು ಅವನು ಉತ್ತರಿಸುವನು.

"ಎಷ್ಟೊಂದು ಸೊರಗಿದ್ದೀಯ!" ಎಂದವಳು ನಿಟ್ಟುಸಿರುಬಿಡುವಳು.

ಅವನು ಮನೆಗೆ ಪುಸ್ತಕಗಳನ್ನು ತರುವುದು ಪ್ರಾರಂಭವಾಯಿತು. ರಹಸ್ಯ ವಾಗಿ ಅವುಗಳನ್ನಾತ ಓದುತ್ತಿದ್ದ. ಓದಿಯಾದೊಡನೆಯೇ ಅವುಗಳನ್ನು ಎಲ್ಲಿಯೋ ಬಚ್ಚಿಡುತ್ತಿದ್ದ. ಒಮ್ಮೊಮ್ಮೆ ಯಾವುದಾದರೂ ಪುಸ್ತಕದಿಂದ ಏನನ್ನೋ ಬರೆದು ಕೊಳ್ಳುತ್ತಿದ್ದ. ಹಾಗೆ ಬರೆದುದನ್ನೂ ಗೋಪ್ಯವಾಗಿ ಇಡುತಿದ್ದ.

---

*ಅಕ್ಕರೆಯಿಂದ ತಾಯಿ ಪಾವೆಲ್‌ನನ್ನು ಪಾಷ ಎಂದು ಕರೆಯುತ್ತಿದ್ದಳು, ನಮ್ಮಲ್ಲಿ ಕೃಷ್ಣಮೂರ್ತಿಯನ್ನು ಕಿಟ್ಟ ಎಂದು ಕರೆಯುವ ರೀತಿ. – ಅನು.

ಅವರು ಪರಸ್ಪರ ಮಾತಾಡುವುದು ಕಡಮೆಯಾಯಿತು. ಒಬ್ಬರನ್ನೊಬ್ಬರು ಕಾಣುವುದೂ ಕಡಮೆಯಾಯಿತು. ಬೆಳಿಗ್ಗೆ ಅವನು ಸದ್ದಿಲ್ಲದೆ ಚಹಾ ಕುಡಿದು ತನ್ನ ಕೆಲಸಕ್ಕೆ ಹೋಗುತ್ತಿದ್ದ. ಮಧ್ಯಾಹ್ನ ಊಟಕ್ಕೆ ಮನೆಗೆ ಬರುತ್ತಿದ್ದ. ಆ ಸಮಯದಲ್ಲಿ ಅವರು ಆಡುತ್ತಿದ್ದುದು ಚಿಲ್ಲರೆ ಮಾತು. ಆಮೇಲೆ ಸಂಜೆಯವರೆಗೆ ಅವನನ್ನು ಕಾಣುವ ಹಾಗಿರಲಿಲ್ಲ. ಸಂಜೆ ಸ್ನಾನಮಾಡಿ, ಊಟವಾದಮೇಲೆ, ಬಹಳ ಹೊತ್ತಿನ ತನಕ ಅವನು ತನ್ನ ಪುಸ್ತಕಗಳನ್ನು ಓದುತ್ತಲೇ ಇರುತ್ತಿದ್ದ. ಪ್ರತಿ ರಜಾದಿನವೂ ಬೆಳಿಗ್ಗೆ ಮನೆ ಬಿಡುತ್ತಿದ್ದ. ಮರಳುತ್ತಿದ್ದುದು ರಾತ್ರೆ ಬಹಳ ಹೊತ್ತಾದ ಮೇಲೆ. ಅವನು ಪಟ್ಟಣಕ್ಕೆ ಹೋಗುತ್ತಿದ್ದನೆಂಬುದೂ ಒಮ್ಮೊಮ್ಮೆ ನಾಟಕ ನೋಡುತ್ತಿದ್ದನೆಂಬುದೂ ಅವಳಿಗೆ ಗೊತ್ತಿತ್ತು. ಆದರೆ ಇವನನ್ನು ಕಾಣಲೆಂದು ಒಮ್ಮೆಯಾದರೂ ಪಟ್ಟಣ ದಿಂದ ಯಾರೂ ಬರುತ್ತಿರಲಿಲ್ಲ. ದಿನ ಕಳೆದಂತೆ ಮಗನು ಬಲು ಕಡಮೆ ಮಾತ ನಾಡುತ್ತಿದ್ದಂತೆ ಆಕೆಗೆ ತೋರುತ್ತಿತ್ತು. ಅಲ್ಲದೆ ತನಗೆ ಅರ್ಥವಾಗದ ಹೊಸ ಪದಗಳನ್ನು ಅವನು ಬಳಸುತ್ತಿದ್ದುದನ್ನು ಆಕೆ ಗಮನಿಸಿದಳು. ಅದೇ ಹೊತ್ತಿಗೆ, ಮೊದಲು ಉಪಯೋಗಿಸುತ್ತಿದ್ದ ಒರಟಾದ ಕಟು ವಾಕ್ಯಗಳೂ ಅವನ ಮಾತಿನಿಂದ ಮಾಯ ವಾದುವು. ಅವನ ನಡತೆಯ ಹೊಸ ವಿವರಗಳೂ ಆಕೆಯ ಲಕ್ಷ್ಯವನ್ನು ಸೆಳೆದುವು. ಡಾಂಭಿಕತನದ ಉಡುಪನ್ನು ಆತ ಧರಿಸುವುದು ನಿಂತಿತು. ಶರೀರ ಮತ್ತು ಬಟ್ಟೆ ಬರೆಯ ಶುಚಿತ್ವದ ಬಗ್ಗೆ ಹೆಚ್ಚು ಆಸ್ಥೆವಹಿಸತೊಡಗಿದ. ಅವನ ಚಲನವಲನ ಹೆಚ್ಚು ಹಗುರವಾಯಿತು, ಶುಚಿಯಾಯಿತು. ಅವನ ನಡತೆ ಹೆಚ್ಚು ಸರಳವಾಯಿತು, ಒರ ಟುತನ ಹೋಯಿತು. ಹೀಗಿದ್ದರೂ, ವಿವರಿಸಲು ಬಾರದ ಈ ಎಲ್ಲ ಬದಲಾವಣೆಯನ್ನು ಕಂಡು ತಾಯಿ ಚಿಂತೆಗೊಳಗಾದಳು. ತನ್ನೊಡನೆ ಮಗನಿಗಿದ್ದ ಸಂಬಂಧದಲ್ಲೂ ಆಕೆ ಹೊಸ ವಿಶೇಷಗಳನ್ನು ಕಂಡಳು. ಒಮ್ಮೊಮ್ಮೆ ಅವನು ಮನೆಯಲ್ಲಿ ಕಸ ಗುಡಿಸು ತ್ತಿದ್ದ; ರಜಾ ದಿನಗಳಲ್ಲಿ ತನ್ನ ಹಾಸಿಗೆಯನ್ನು ಸರಿಪಡಿಸುತ್ತಿದ್ದ; ಸಾಮಾನ್ಯವಾಗಿ ಆಕೆಯ ಕೆಲಸದಲ್ಲಿ ಸಹಾಯ ಮಾಡುತ್ತಿದ್ದ. ಆ ವಸತಿ ಪ್ರದೇಶದಲ್ಲಿ ಬೇರೆ ಯಾರೂ ಎಂದೂ ಹಾಗೆ ಮಾಡುತ್ತಿರಲಿಲ್ಲ.

ಒಂದು ದಿನ ಒಂದು ಚಿತ್ರವನ್ನು ಮನೆಗೆ ತಂದು ಗೋಡೆಯ ಮೇಲೆ ತೂಗು ಹಾಕಿದ. ಆ ಚಿತ್ರದಲ್ಲಿ ಮೂವರು, ಉತ್ಸಕತೆಯಿಂದ ಮೆಲ್ಲನೆ ರಸ್ತೆಯ ಮೇಲೆ ನಡೆಯುತ್ತ, ಗಂಭೀರವಾದ ಮಾತುಕತೆಯಲ್ಲಿ ಮಗ್ನರಾಗಿದ್ದರು.

"ಪುನರ್ಜನ್ಮ ಹೊಂದಿದ ಕ್ರಿಸ್ತ, ಎಮ್ಮಾಸ್‌ಗೆ ಹೋಗುವ ಬೀದಿಯ ಮೇಲೆ ಸಾಗಿದ್ದಾನೆ," ಎಂದು ಪಾವೆಲ್ ವಿವರಿಸಿದ.

ಆ ಚಿತ್ರ ನೋಡಿ ತಾಯಿಗೆ ಸಂತೋಷವಾಯಿತು. ಆದರೆ ಮನಸ್ಸಿನೊಳಗೇ ಯೋಚಿಸಿದಳಾಕೆ:

"ಕ್ರಿಸ್ತನ ಮೇಲೆ ಅಷ್ಟು ಪ್ರೀತಿ ಇದೆ ಎಂದಾದರೆ ಚರ್ಚಿಗೆ ಈತ ಎಂದೂ ಹೋಗುವುದಿಲ್ಲ ಯಾಕೆ?"

ಪಾವೆಲ್‌ನ ಗೆಳೆಯನಾಗಿದ್ದ ಒಬ್ಬ ಬಡಗಿ ಮಾಡಿಕೊಟ್ಟ ಸುಂದರವಾದ ಶೆಲ್ಫಿನ ಮೇಲೆ ಪುಸ್ತಕಗಳ ಸಂಖ್ಯೆ ಬೆಳೆಯಿತು. ಒಂದು ಬಗೆಯ ಹಿತಕರ ಸ್ವರೂಪ ಬಂತು ಕೊಠಡಿಗೆ.

ಸಾಮಾನ್ಯವಾಗಿ ಆಕೆಯನ್ನು ಅವನು ಬಹುವಚನದಲ್ಲಿ ಹಾಗೂ 'ಅಮ್ಮಾ' ಎಂದು ಸಂಬೋಧಿಸುತ್ತಿದ್ದ. ಆದರೆ ಒಮ್ಮೊಮ್ಮೆ ಇನ್ನೂ ಹೆಚ್ಚು ಪ್ರೇಮದ ಪದ ಗಳನ್ನು ಬಳಸುತ್ತಿದ್ದ.

"ನನ್ನ ವಿಷಯ ಚಿಂತಿಸ್ತಾ ಕೂತಿರ್ಬೇಡಮ್ಮಿ. ಈ ರಾತ್ರಿ ತಡವಾಗಿ ಮನೆಗೆ ಬರ್ತೀನಿ."

ಅಂಥ ಮಾತು ಆಕೆಗೆ ಪ್ರಿಯವಾಗಿತ್ತು. ಅದರಲ್ಲಿ ಬಲಶಾಲಿಯಾದ ಗಂಭೀರವಾದ ಏನನ್ನೋ ಅವಳು ಗ್ರಹಿಸಿದಳು.

ಆದರೆ ಆಕೆಯ ಗಾಬರಿ ಹೆಚ್ಚುತ್ತಲಿತ್ತು. ಕಾರಣವೇನೆಂಬುದು ಸ್ಪಷ್ಟವಾಗಲೇ ಇಲ್ಲ. ಅಸಾಧಾರಣವಾದುದೇನೋ ಇದೆ ಎಂಬ ಗ್ರಹಿಕೆಯಿಂದ ಅವಳ ಹೃದಯ ಭಾರವಾಯಿತು. ಒಮ್ಮೊಮ್ಮೆ ತನ್ನ ಮಗನ ಬಗೆಗೆ ಅತೃಪ್ತಿಯೂ ಆಗುತ್ತಿತ್ತು. ಆಗ ಆಕೆ ಯೋಚಿಸುತ್ತಿದ್ದಳು:

"ಬೇರೆಯವರು ಸಾಕಷ್ಟು ಸ್ವಾಭಾವಿಕವಾಗಿ ನಡೆದುಕೊಳ್ಳುತ್ತಾರೆ. ಆದರೆ ಇವನು 'ಸಂನ್ಯಾಸಿ'ಯ ಹಾಗಿದ್ದಾನೆ. ಅಷ್ಟೊಂದು ಗಂಭೀರವಾಗಿದ್ದಾನೆ. ಇದು ಅವನ ವಯಸ್ಸಿಗೆ ತಕ್ಕುದಲ್ಲ."

ಪುನಃ ಆಕೆ ಯೋಚಿಸುವಳು:

"ಬಹುಶಃ ಎಲ್ಲಿಯೋ ಒಬ್ಬಳು ಹುಡುಗಿಯ ಗೆಳೆತನ ಕಟ್ಟಿಕೊಂಡಿರಬಹುದು."

...ಆದರೆ ಹುಡುಗಿಯರ ಗೆಳೆತನಕ್ಕೆ ಹಣಬೇಕು. ಅವನಾದರೋ, ಹೆಚ್ಚು ಕಡಮೆ ಸಂಪಾದನೆಯನ್ನೆಲ್ಲ ನನ್ನ ಕೈಗೆ ತಂದೊಪ್ಪಿಸುತ್ತಿದ್ದ....

ಹೀಗೆಯೇ ವಾರಗಳು ಮಾಸಗಳು ದಾಟಿದುವು. ಎರಡು ವರ್ಷಗಳು ಕಳೆದುವು. ಅಸ್ಪಷ್ಟ ಯೋಚನೆಗಳಿಂದಲೂ ಸದಾ ಹೆಚ್ಚುತ್ತಲಿದ್ದ ಹೆದರಿಕೆಯಿಂದಲೂ ತುಂಬಿದ, ಈ ವಿಚಿತ್ರವಾದ ಸದ್ದಿಲ್ಲದ ಬದುಕಿನ ಎರಡು ವರ್ಷಗಳು ಉರುಳಿದುವು.

## ೪

ಒಂದು ದಿನ ಸಂಜೆ ಊಟದ ತರುವಾಯ ಪಾವೆಲ್ ಕಿಟಕಿಯ ತೆರೆಯನ್ನು ಮುಚ್ಚಿದ. ಕುಳಿತಲ್ಲೇ ಮೇಲ್ಗಡೆ ಇದ್ದ ಮೊಳೆಗೆ ತಗಡಿನ ದೀಪವನ್ನು ತಗುಲಿಸಿ, ಮೂಲೆಯಲ್ಲಿ ಕುಳಿತು, ಓದಲಾರಂಭಿಸಿದ. ಎಂಜಲು ಮುಸುರೆಯನ್ನೆಲ್ಲ ತೊಳೆದಾದ ಮೇಲೆ ಅವನ ತಾಯಿ, ಅಡುಗೆಮನೆಯಿಂದ ಹೊರಬಂದು ಮೆಲ್ಲನೆ ಅವನ ಬಳಿಗೆ

ಹೋದಳು. ಅವನು ತಲೆಯೆತ್ತಿ, "ಏನು?" ಎನ್ನುವ ಭಂಗಿಯಲ್ಲಿ ಆಕೆಯನ್ನು ನೋಡಿದ.

"ಏನೂ ಇಲ್ಲ, ಪಾಷ, ಏನೂ ಇಲ್ಲಪ್ಪ," ಎಂದು ತೊದಲುತ್ತ ಆಕೆ ಅಡುಗೆ ಮನೆಯ ಕಡೆಗೆ ಧಾವಿಸಿದಳು. ಆಕೆಯ ಹುಬ್ಬುಗಳು ಅಳುಕಿನಿಂದ ಮಿಡಿಯುತ್ತಿದ್ದುವು, ಆದರೆ, ಯೋಚನೆಗಳ ತಾಕಲಾಟ ಸ್ವಲ್ಪ ಹೊತ್ತು ನಡೆದ ಮೇಲೆ, ಕೈ ತೊಳೆದುಕೊಂಡು, ಆಕೆ ಮತ್ತೊಮ್ಮೆ ಮಗನ ಬಳಿಗೆ ಬಂದಳು.

"ಯಾವಾಗ ನೋಡಿದರೂ ಓದ್ತಾ ಇದ್ದೀಯಲ್ಲಾ – ಅದೇನು ಕೇಳೋಣಾಂತ," ಎಂದು ಆಕೆ ಮೆಲ್ಲನೆ ಹೇಳಿದಳು.

ಆತ ಪುಸ್ತಕವನ್ನು ಮುಚ್ಚಿದ.

"ಕೂತುಕೋ, ಅಮ್ಮಾ!"

ತಾಯಿ ಅಡ್ಡಾದಿಡ್ಡಿಯಾಗಿ ಕುಳಿತುಕೊಂಡಳು. ಬೆನ್ನನ್ನು ನೇರವಾಗಿ ನಿಂದು ೂಂಡಳು. ಏನೋ ಮಹತ್ವದ ವಿಷಯಕ್ಕೆ ಕಿವಿಗೊಡಲು ಸಿದ್ಧಳಾದಳು.

ಪಾವೆಲ್ ಆಕೆಯ ಕಡೆ ನೋಡದೆಯೇ ಇಳಿಧ್ವನಿಯಲ್ಲಿ ಮಾತನಾಡಿದ. ಅದೇಕೊ, ಬಲು ತೀಕ್ಷ್ಣವಾಗಿಯೂ ಇತ್ತು ಆ ಸ್ವರ.

"ನಾನು ಓದುತ್ತಿರೋದು ನಿಷಿದ್ಧ ಪುಸ್ತಕಗಳು. ನಮ್ಮ ವಿಷಯವಾಗಿ – ಕೂಲಿಕಾರರ ವಿಷಯವಾಗಿ – ಸತ್ಯ ಹೇಳುತ್ತವೆ ಅಂತಲೇ ಈ ಪುಸ್ತಕಗಳನ್ನು ನಿಷೇಧಿಸಿದ್ದಾರೆ. ಅವನ್ನು ಅಚ್ಚುಹಾಕಿರೋದು ಗುಪ್ತವಾಗಿ, ಕಣ್ಣು ತಪ್ಪಿಸಿ. ನನ್ನ ಬಳಿ ಇವು ಸಿಕ್ಕಿದುವೆಂದರೆ ನನ್ನನ್ನು ಜೈಲಿಗೆ ಸೇರಿಸ್ತಾರೆ – ಜೈಲಿಗೆ, ಸತ್ಯ ತಿಳಿಯಬೇಕಂತೀನಲ್ಲಾ ಅದಕ್ಕೆ. ತಿಳೀತೆ?"

ಒಮ್ಮೆಲೆ, ಉಸಿರಾಡುವುದೂ ಕಷ್ಟವಾಗಿ ತೋರಿತು ತಾಯಿಗೆ. ಆಕೆ ತನ್ನ ಕಣ್ಣುಗಳನ್ನು ಅಗಲವಾಗಿ ತೆರೆದು ಮಗನನ್ನು ನೋಡಿದಳು. ಅವನೊಬ್ಬ ಅಪರಿಚಿತನ ಹಾಗೆ ಕಂಡುಬಂದ ಆಕೆಗೆ. ಆತನ ಸ್ವರವೂ ಬೇರೆಯಾಗಿತ್ತು – ಆಳವಾಗಿ, ತುಂಬಿಕೊಂಡು, ಮಾರ್ದನಿ ಕೊಡುವಂತಿತ್ತು. ಅವನು ತನ್ನ ಎಳೆ ಮೀಸೆಯ ಮೇಲೆ ಕೈಯಾಡಿಸುತ್ತ, ತಗ್ಗಿಸಿದ ಹುಬ್ಬುಗಳಡಿಯಿಂದ, ಒಂದೇ ಸಮನೆ ವಿಚಿತ್ರವಾಗಿ ಕೋಣೆಯ ಮೂಲೆಯನ್ನು ನೋಡುತ್ತ ಕುಳಿತ. ಮಗನಿಗೆ ಏನು ಅಪಾಯ ತಟ್ಟುವುದೋ ಎಂದು ಅವಳಿಗೆ ಹೆದರಿಕೆಯಾಯಿತು; ಕನಿಕರವೂ ಉಂಟಾಯಿತು.

"ನೀನು ಯಾಕೆ ಹಾಗೆ ಮಾಡಬೇಕು, ಪಾಷ?" ಎಂದು ಅವಳು ಕೇಳಿದಳು.

ತನ್ನ ತಲೆಯೆತ್ತಿ ಆಕೆಯನ್ನು ಆತ ನೋಡಿದ.

"ಯಾಕೆ ಅಂದರೆ? ಸತ್ಯ ತಿಳಿಯುವ ಆಸೆ ಇರೋದರಿಂದಲೇ ಹಾಗೆ ಮಾಡೋದು," ಎಂದು ಮೆಲ್ಲನೆ ಶಾಂತವಾಗಿ ಆತ ಉತ್ತರವಿತ್ತ.

ಮೃದುವಾಗಿದ್ದರೂ ದೃಢವಾಗಿತ್ತು ಅವನ ಸ್ವರ. ಕಣ್ಣುಗಳಲ್ಲಿ ಒಂದು ಬಗೆಯ ಹಟ ಮಿಂಚುತ್ತಿತ್ತು. ಜೀವಮಾನವೆಲ್ಲ ಗುಪ್ತವಾದ ಭಯಾನಕವಾದ ಯಾವು

ದಕ್ಕೂ ಅಂಟಿಕೊಂಡಿರಲು ತನ್ನ ಮಗ ಪ್ರತಿಜ್ಞಾಬದ್ಧನಾಗಿದ್ದಾನೆ, ಎನ್ನಿಸಿತು ತಾಯಿಗೆ. ಬಾಳಿನಲ್ಲಿ ಪ್ರತಿಯೊಂದು ವಿಷಯವೂ ಅನಿವಾರ್ಯವೆಂದೇ ಅವಳು ತಿಳಿದಿದ್ದಳು. ಪ್ರತಿಯೊಂದಕ್ಕೂ ಮರುಮಾತಾಡದೆ ತಲೆಬಾಗುವುದು ಆಕೆಗೆ ಅಭ್ಯಾಸವಾಗಿತ್ತು. ಹೀಗಾಗಿ ಈಗ ಆಕೆ ಕೇವಲ ಸದ್ದಿಲ್ಲದೆ ಅಳತೊಡಗಿದಳು. ದುಃಖ ಬಯಕೆಗಳಿಂದ ಮುದುಡಿಕೊಂಡಿದ್ದ ಆ ಹೃದಯದಿಂದ ಮಾತು ಹೊರಡುತ್ತಿರಲಿಲ್ಲ.

"ಅಳಬೇಡಮ್ಮ," ಎಂದು ಪಾವೆಲ್ ಮೃದುವಾಗಿ ಪ್ರೀತಿಯಿಂದ ಸಂತೈಸಿದ. ಆದರೆ ಆಕೆಗೆ, ಮಗನು ತನ್ನಿಂದ ಬೀಳ್ಕೊಡುತ್ತಿದ್ದ ಹಾಗೆ ತೋರಿತು.

"ಸ್ವಲ್ಪ ಯೋಚಿಸಿ ನೋಡಮ್ಮ. ಎಂತ ಬಾಳ್ವೆ ನಮ್ಮದು? ನಲ್ವತ್ತು ವರ್ಷ ವಯಸ್ಸಾಯಿತು ನಿನಗೆ. ಜೀವನದಲ್ಲಿ ನೀನೇನು ಸಾಧಿಸಿದೆ? ಅಪ್ಪ ನಿನಗೆ ಹೊಡೀತಿದ್ದ. ತನ್ನ ಸಂಕಟವನ್ನು, ಜೀವನದ ಎಲ್ಲಾ ಕಹಿಯನ್ನು, ಮರೆಯೋಕೆ ಆ ರೀತಿ ಹೊಡೀತಿದ್ದ. ಹಾಗೆಂತ, ಈಗ ನಾನು ತಿಳಕೊಂಡಿದ್ದೇನೆ. ಆ ನರಳಾಟ ಸಹಿಸೋಕೆ ಅವನಿಂದ ಆಗ್ತಿರಲಿಲ್ಲ. ಅದೆಲ್ಲಾ ಯಾಕೆ ಎಲ್ಲಿಂದ ಬರ್ತಿದೆ ಎಂತ ಆತ ತಿಳಕೊಳ್ಳಲೂ ಇಲ್ಲ. ಮೂವತ್ತು ವರ್ಷ ಆತ ದುಡಿದ. ಕಾರ್ಖಾನೆಯಲ್ಲಿ ಎರಡೇ ವಿಭಾಗ ಇದ್ದಾಗ ಆತ ಕೆಲಸ ಶುರು ಮಾಡಿದ್ದು – ಈಗ ಏಳು ವಿಭಾಗಗಳಿವೆ."

ಕುತೂಹಲದಿಂದ, ಆದರೆ ಭೀತಿಯಿಂದ, ಅವನ ಮಾತನ್ನು ಆಕೆ ಕೇಳಿದಳು. ಪ್ರಿಯವಾದ ಬೆಳಕೊಂದು ಅವಳ ಮಗನ ಕಣ್ಣುಗಳಲ್ಲಿ ಉರಿಯುತ್ತಿತ್ತು. ಮೇಜಿನ ಮೇಲೆ ಎದೆಯೊರಗಿಸಿ, ಕಣ್ಣೀರು ಹನಿಯಾಡಿದ ತಾಯಿಯ ಮುಖದತ್ತ ಬಾಗಿ, ತಾನು ತಿಳಿದಿದ್ದ ಸತ್ಯದ ಬಗ್ಗೆ ತನ್ನ ಮೊದಲ ಭಾಷಣವನ್ನಾತ ಮಾಡಿದ. ತನ್ನ ಯೌವನದ ಎಲ್ಲ ಬಲದಿಂದ, ತನ್ನ ತಿಳಿವಳಿಕೆಯ ಬಗ್ಗೆ ಹೆಮ್ಮೆಪಟ್ಟು, ಅದರ ಸತ್ಯತೆಯಲ್ಲಿ ಸಂಪೂರ್ಣ ನಂಬಿಕೆಯಿಟ್ಟಿರುವ ವಿದ್ಯಾರ್ಥಿಯ ಅಮಿತ ಉತ್ಸಾಹದಿಂದ, ಆತ ಮಾತಾಡಿದ. ತನಗೆ ಸ್ಪಷ್ಟವಾಗಿದ್ದ ವಿಷಯಗಳನ್ನು ಕುರಿತು ಮಾತಾಡಿದ. ತಾಯಿಗೆ ಮನವರಿಕೆ ಮಾಡಿಕೊಡುವುದಕ್ಕಿಂತ ಹೆಚ್ಚಾಗಿ ತನ್ನನ್ನೇ ಆತ ಪರೀಕ್ಷಿಸಿಕೊಂಡಹಾಗಿತ್ತು. ಬೇಕಾದ ಶಬ್ದ ದೊರೆಯದೆ, ಒಮ್ಮೊಮ್ಮೆ ಆತ ಮಾತು ನಿಲ್ಲಿಸುತ್ತಿದ್ದ. ಆಗ, ಕಂಬನಿಯ ಪರದೆಯಿಂದ ಹೊಳೆಯುತ್ತಿದ್ದ ದಯಾಪೂರ್ಣ ಕಣ್ಣುಗಳ, ವ್ಯಾಕುಲತೆಯ ಮುಖದ, ಅರಿವಾಗುತ್ತಿತ್ತು ಅವನಿಗೆ. ಭೀತಿಯಿಂದಲೂ ಆಶ್ಚರ್ಯದಿಂದಲೂ ಆ ಕಣ್ಣುಗಳು ಆತನನ್ನು ನೋಡುತ್ತಿದ್ದುವು. ತಾಯಿಯ ಬಗ್ಗೆ ಅವನಿಗೆ ಕನಿಕರವೆನಿಸಿತು. ಮತ್ತೆ ಆತ ಮಾತಾಡತೊಡಗಿದ. ಆದರೆ ಈ ಸಾರಿ ಆಕೆಯ ವಿಷಯವಾಗಿ, ಮಾತನಾಡಿದ.

ಆತ ಕೇಳಿದ:

"ಇಷ್ಟರವರೆಗೆ ಯಾವ ಸಂತೋಷ ಅನುಭವಿಸಿದೆ ನೀನು? ಈವರೆಗಿನ ಜೀವನದಲ್ಲಿ ನೀನು ಸವಿಯಾದ ನೆನಪಿಟ್ಟುಕೊಳ್ಳುವಂಥಾದ್ದು ಏನಿದೆ?"

ಕಿವಿಗೊಟ್ಟು ಕೇಳುತ್ತ ವ್ಯಸನದಿಂದ ತಲೆಯಾಡಿಸಿದಳಾಕೆ. ಹೊಸತಾದ, ಏನೆಂದು

ತಿಳಿಯದ, ಸಂತೋಷದ, ದುಃಖದ, ಯಾವುದೋ ಅನುಭವವಾಯಿತು ಅವಳಿಗೆ. ಆ ಅನುಭವ ಆಕೆಯ ನೋಯುತ್ತಿದ್ದ ಹೃದಯವನ್ನು ಮೃದುವಾಗಿ ತಡವುತ್ತಿತ್ತು. ತನ್ನ ಬಗೆಗೆ, ತನ್ನ ಜೀವನದ ಬಗೆಗೆ, ಯಾರಾದರೂ ಮಾತಾಡಿದ್ದನ್ನು ಆಕೆ ಕೇಳಿದ್ದು ಅದೇ ಮೊದಲ ಸಲ. ಎಂದೋ ಬಿಟ್ಟುಕೊಟ್ಟಿದ್ದ ಅಸ್ಪಷ್ಟ ಯೋಚನೆಗಳನ್ನು ಆ ಶಬ್ದಗಳು ಮತ್ತೆ ಕೆರಳಿಸಿದುವು. ಜೀವನ ಕುರಿತಾದ ಅತೃಪ್ತಿಯ ಮರಣಾಸನ್ನ ಅನುಭವವನ್ನು, ಕಳೆದುಹೋದ ದೂರದ ಯೌವನದ ಯೋಚನೆ ಭಾವನೆಗಳನ್ನು, ಆ ಶಬ್ದಗಳು ಮೆಲ್ಲನೆ ಸಜೀವಗೊಳಿಸಿದವು. ಹಿಂದೆ ತನ್ನ ಗೆಳತಿಯರೊಂದಿಗೆ ಬಾಳಿನ ಬಗ್ಗೆ ಆಕೆ ಮಾತಾಡಿದ್ದಳು. ಆದರೆ ಆಕೆಯ ಎಲ್ಲ ಗೆಳತಿಯರು – ಆಕೆ ಕೂಡ – ತಮ್ಮ ಹೃದಯಗಳನ್ನು ತೋಡಿಕೊಂಡಿದ್ದರೇ ಹೊರತು, ತಮ್ಮ ಬಾಳಿನ ಸಂಕಷ್ಟಗಳ, ಗೋಳಿನ ಕಾರಣವನ್ನು ಪರಿಶೀಲಿಸುವ ಗೋಜಿಗೆ ಹೋಗಿರಲಿಲ್ಲ. ಆದರೆ ಈಗ ಆಕೆಯ ಮಗ ಎದುರಲ್ಲಿ ಕುಳಿತಿದ್ದ. ಅವನ ಕಣ್ಣುಗಳು, ಮುಖ, ಮಾತು ವ್ಯಕ್ತಪಡಿಸಿದ್ದೆಲ್ಲವೂ ಆಕೆಯ ಹೃದಯವನ್ನು ಕಲಕುತ್ತಿದ್ದುವು. ತನ್ನ ತಾಯಿಯ ಬಾಳನ್ನು ಇಷ್ಟು ಚೆನ್ನಾಗಿ ತಿಳಿದುಕೊಂಡ, ತನ್ನ ಸಂಕಷ್ಟಗಳ ಬಗ್ಗೆ ತನ್ನೊಡನೆ ಮಾತಾಡಿದ, ತನ್ನ ಬಗೆಗೆ ಕನಿಕರಿಸಿದ, ಆ ಮಗನ ಕುರಿತಾದ ಹೆಮ್ಮೆ, ಆಕೆಯ ಹೃದಯದಲ್ಲಿ ತುಂಬಿ ಬಂತು.

ತಾಯಂದಿರ ವಿಷಯದಲ್ಲಿ ಸಾಮಾನ್ಯವಾಗಿ ಯಾರೂ ಕನಿಕರ ತೋರುವುದಿಲ್ಲ.

ಅದು ಗೊತ್ತಿತ್ತು ಆಕೆಗೆ. ಸ್ತ್ರೀಯರ ಬಾಳನ್ನು ಕುರಿತು ಆತ ಹೇಳಿದ್ದೆಲ್ಲವೂ ಕಹಿಯಾಗಿತ್ತು. ತೀರ ಪರಿಚಿತ ಸತ್ಯವಾಗಿತ್ತು. ಆ ಮಾತುಗಳು ಆಕೆಯ ಹೃದಯದಲ್ಲಿ ಸಿಕ್ಕುಗಟ್ಟಿದ್ದ ಭಾವನೆಗಳನ್ನು ಕದಡಿದುವು. ಅವ್ಯಾಜ ಪ್ರೇಮದಿಂದ ಆ ಹೃದಯ ಅರಳಿತು.

"ಇದಕ್ಕೆ ನೀನೇನು ಮಾಡಬೇಕೆಂದಿದ್ದೀಯ?" ಎಂದಾಕೆ ನಡುವೆ ಮಾತಾಡಿದಳು.

"ಮೊದಲು ಕಲಿಯೋದು. ಆಮೇಲೆ ಬೇರೆಯವರಿಗೆ ಕಲಿಸೋದು. ನಾವು ಕೂಲಿಕಾರರು ಕಲಿಯಬೇಕು. ನಮ್ಮ ಬಾಳ್ವೆ ಯಾಕೆ ಇಷ್ಟೊಂದು ಕಷ್ಟಮಯವಾಗಿದೆ ಎಂಬುದನ್ನು ನಾವರಿತುಕೊಳ್ಳಬೇಕು."

ಯಾವಾಗಲೂ ತೀಕ್ಷ್ಣವಾದ ಗಂಭೀರವಾದ ಅವನ ನೀಲಿಗಣ್ಣುಗಳು, ಈಗ ಮೃದುವಾದ ಕೋಮಲವಾದ ಪ್ರಭೆಯಿಂದ ತುಂಬಿದ್ದನ್ನು ಕಂಡು ಆಕೆಗೆ ಸಂತೋಷವಾಯಿತು. ಕೆನ್ನೆಯ ಸುಕ್ಕುಗಳ ಮೇಲಿಂದ ಕಂಬನಿ ಉರುಳುತ್ತಲೇ ಇದ್ದರೂ ಮೆಲ್ಲನೆ ಕಿರುನಗೆಯೊಂದು ಆಕೆಯ ತುಟಿಗಳನ್ನು ಕೊಂಕಿಸಿತು. ಬಾಳ್ವೆಯ ಕಹಿಯನ್ನು ಸ್ಪಷ್ಟವಾಗಿ ಕಾಣುತ್ತಿದ್ದ ತನ್ನ ಮಗನ ಬಗ್ಗೆ ಹೆಮ್ಮೆಯ ಭಾವನೆ ಒಂದೆಡೆ. ಆತನಿನ್ನೂ ಎಳೆಯ; ಇತರರೆಲ್ಲರಿಗಿಂತಲೂ ಭಿನ್ನವಾಗಿ ಆತ ಮಾತಾಡುತ್ತಿದ್ದಾನೆ; ಆಕೆಯನ್ನೂ ಒಳಗೊಂಡು ಪ್ರತಿಯೊಬ್ಬರಿಗೂ ಸ್ವಾಭಾವಿಕವಾಗಿದ್ದ ಈ ಜೀವನದ ವಿರುದ್ಧ ಆತನೊಬ್ಬನೇ ಹೋರಾಟ ಕೈಗೊಂಡಿದ್ದಾನೆ ಎಂಬ ಅರಿವು ಇನ್ನೊಂದೆಡೆ. ಇವೆರಡರ ನಡುವೆ ಆಕೆ ತೊಳಲಾಡಿದಳು.

"ನೀನೊಬ್ಬನೇ ಏನು ಮಾಡಬಲ್ಲೆ, ನನ್ನ ಕಂದ?" ಎಂದು ಹೇಳಬೇಕೆನಿಸುತ್ತಿತ್ತು ಆಕೆಗೆ.

ಆದರೆ ತಾಯಿ ಮಾತಾಡಲಿಲ್ಲ. ತನ್ನಿಂದ ಸ್ವಲ್ಪ ಪ್ರತ್ಯೇಕವಾದಂತೆ ಕಂಡರೂ ಆತ ಒಮ್ಮೆಲೆ ಬುದ್ಧಿವಂತನಾಗಿ ಕಾಣಿಸಿಕೊಂಡಿದ್ದ. ನಡುವೆ ಹಾಗೆ ಮಾತಾಡಿ, ಆತನ ಬಗೆಗೆ ತಾನನುಭವಿಸುತ್ತಿದ್ದ ಮೆಚ್ಚುಗೆಯನ್ನು ಕೆಡಿಸಲು ಆಕೆ ಇಷ್ಟಪಡಲಿಲ್ಲ.

ತನ್ನ ತಾಯಿಯ ತುಟಿಗಳ ಮೇಲಿದ್ದ ಕಿರುನಗೆಯನ್ನು, ಆ ಮುಖದ ತಲ್ಲೀನತೆಯನ್ನು, ಆ ಕಣ್ಣುಗಳು ಸೂಸುತಿದ್ದ ಪ್ರೀತಿಯನ್ನು, ಪಾವೆಲ್ ನೋಡಿದ. ತನ್ನ ಮಾತಿನ ಸಾಮರ್ಥ್ಯವನ್ನು ಕುರಿತಾದ ಯುವ ಅಭಿಮಾನ, ಆತ್ಮವಿಶ್ವಾಸವನ್ನು ವೃದ್ಧಿಗೊಳಿಸಿತು. ಒಮ್ಮೆ ಮುಗುಳ್ನಗುತ್ತ, ಮತ್ತೊಮ್ಮೆ ಹುಬ್ಬು ಗಂಟಿಕ್ಕುತ್ತ, ಉದ್ವೇಗದಿಂದ ಆತ ಮಾತಾಡಿದ. ಒಮ್ಮೊಮ್ಮೆ ಆ ಶಬ್ದಗಳು ದ್ವೇಷದ ಉರಿಕಾರುತ್ತಿದ್ದುವು. ಗಡುಸಾದ ಪ್ರತಿಧ್ವನಿಸುವ ಶಬ್ದಗಳನ್ನು ಕೇಳಿದಾಗ ತಾಯಿ ಭೀತಳಾದಳು. ತನ್ನ ತಲೆಯಾಡಿಸಿ ಮೆಲ್ಲನೆ ಕೇಳುತ್ತಿದ್ದಳಾಕೆ:

"ಅದು ನಿಜವಾಗಿಯೂ ಹಾಗಿದೆಯೆ, ಪಾಷ?"

"ಹೌದು," ಎಂದು ಆತ ದೃಢವಾಗಿ ಉತ್ತರಕೊಡುತ್ತಿದ್ದ.

ಬೇರೆ ಕೆಲ ಜನರಿದ್ದರು. ಜನತೆಗೆ ಸಹಾಯಮಾಡುವ ಉದ್ದೇಶದಿಂದ ಅವರು ಜನರ ನಡುವೆ ಸತ್ಯವನ್ನು ಪ್ರಸಾರ ಮಾಡುತ್ತಿದ್ದರು. ಅದಕ್ಕಾಗಿ ಅವರನ್ನು, ಬದುಕಿನ ವೈರಿಗಳು ಮೃಗಗಳಂತೆ ಬೇಟೆಯಾಡಿ ಜೈಲಿಗೆಸೆಯುತ್ತಿದ್ದರು. ದೇಹಶ್ರಮದ ದಂಡನೆ ವಿಧಿಸುತ್ತಿದ್ದರು. ಅಂಥ ಜನರ ಬಗ್ಗೆ ಪಾವೆಲ್ ತಾಯಿಗೆ ತಿಳಿಯಹೇಳಿದ.

ಉದ್ರೇಕಗೊಂಡು ಆತನೆಂದ:

"ಅಂಥವರನ್ನು ನಾನು ನೋಡಿದೀನಿ. ಅವರು ನಮ್ಮ ಜಗತ್ತಿನ ಅತ್ಯುತ್ತಮ ವ್ಯಕ್ತಿಗಳು."

ಆ ಜನರ ಕುರಿತಾದ ಯೋಚನೆ ಮತ್ತೆ ಆಕೆಯನ್ನು ಭೀತಳಾಗಿ ಮಾಡಿತು. ಇದೆಲ್ಲಾ ನಿಜವೆ? ಎಂದು ಮತ್ತೊಮ್ಮೆ ಮಗನನ್ನು ಕೇಳಬೇಕೆಂದು ತೋರಿತು ಆಕೆಗೆ. ಆದರೆ ಕೇಳುವ ಧೈರ್ಯವಾಗಲಿಲ್ಲ. ತನಗೆ ಅರ್ಥವಾಗದೆ ಹೋದರೂ, ತನ್ನ ಮಗನು ಅಂಥ ಅಪಾಯಕಾರಿ ವಿಷಯಗಳನ್ನು ಮಾತಾಡುವಂತೆ, ಯೋಚಿಸುವಂತೆ ಕಲಿಸಿಕೊಟ್ಟ ಆ ಜನರ ಕುರಿತಾದ ಕಥೆಗಳನ್ನಾಕೆ ಉಸಿರು ಹಿಡಿದು ಕೇಳಿದಳು. ಕೊನೆಗೆ ತಾಯಿ ಎಂದಳು:

"ಇನ್ನೇನು ಬೆಳಗಾಗುವ ಹೊತ್ತು. ಹೋಗಿ ಮಲಗು – ನೀನು ಸ್ವಲ್ಪ ನಿದ್ದೆ ಮಾಡೋದು ವಾಸಿ."

"ಹುಂ, ಈಗಲೇ ಮಲಕೋತೀನಿ," ಎಂದಾತ ಒಪ್ಪಿದ. ಆಮೇಲೆ ಆಕೆಯ ಬಳಿ ಬಾಗುತ್ತ ಕೇಳಿದ: "ನಾನು ಹೇಳಿದ್ದು ಅರ್ಥವಾಯ್ತೆ?"

"ಆಯ್ತು," ಎಂದು, ನಿಟ್ಟುಸಿರುಬಿಡುತ್ತ, ಕಣ್ಣೀರಿಡುತ್ತಾ ಆಕೆ ಹೇಳಿದಳು: "ಇದರಿಂದ ನೀನು ಹಾಳಾಗ್ತಿ, ಪಾಷ!"

ಎದ್ದು ನಿಂತು ಆತ ಶತಪಥ ಹಾಕಿದನು.

"ಸರಿ! ನಾನು ಮಾಡ್ತಿರೋದೇನು, ಹೋಗ್ತಿರೋದೆಲ್ಲಿಗೆ – ಇದೆಲ್ಲಾ ನಿನಗೆ ಗೊತ್ತಾದಹಾಗಾಯಿತು. ನಿನಗೆಲ್ಲಾ ಹೇಳಿದೀನಿ. ಅಮ್ಮ, ನನ್ನ ನೀನು ಪ್ರೀತಿಸೋದಾದರೆ, ನನಗೆ ಅಡ್ಡಿ ಬರಬೇಡ."

"ಅಯ್ಯೋ! ನನ್ನ ಕಂದ! ನೀನು ಹೇಳದೇ ಇದ್ದಿದ್ದರೇ ವಾಸಿಯಾಗಿತ್ತು.",

ಆತ ಆಕೆಯ ಕೈ ಹಿಡಿದು ಬಿಗಿಯಾಗಿ ಅದುಮಿದ.

'ಅಮ್ಮ' ಎಂದು ಕರೆದಾಗ ಆತ ತೋರಿಸಿದ ಪ್ರೀತಿಯ ಭಾವನೆ, ವಿಚಿತ್ರವಾಗಿ ಎಂದೂ ಇಲ್ಲದ ರೀತಿಯಲ್ಲಿ ಹಾಗೆ ಕೈಯನ್ನು ಬಿಗಿಹಿಡಿದುದು, ಇವುಗಳಿಂದ ಆಕೆಯ ಕಂಠ ಒತ್ತರಿಸಿ ಬಂತು.

ಬಿಕ್ಕುತ್ತ ಆಕೆ, "ನನ್ನದೇನೂ ಅಡ್ಡಿ ಇಲ್ಲವಪ್ಪ. ನೀನು ಮಾತ್ರ ಹುಷಾರಾಗಿರು, ಎಚ್ಚರದಿಂದಿರು," ಎಂದಷ್ಟೇ ಹೇಳಿದಳು.

ತನ್ನ ಮಗನಿಗೆ ಒದಗುವ ಅಪಾಯವೇನೆಂದು ಆಕೆಗೆ ತಿಳಿದಿರಲಿಲ್ಲ.

"ನೀನು ದಿನದಿಂದ ದಿನಕ್ಕೆ ಸೊರಗ್ತಾ ಇದ್ದೀಯೆ," ಎಂದಳಾಕೆ.

ಅವನ ಎತ್ತರವಾದ ಬಲಿಷ್ಟ ದೇಹವನ್ನೊಮ್ಮೆ ಆಕೆ ಆತ್ಮೀಯತೆಯಿಂದ ಪ್ರೇಮದಿಂದ ದಿಟ್ಟಿಸಿ ನೋಡಿದಳು.

"ನಿನ್ನಿಚ್ಛೆಯಂತೆಯೇ, ನಿನಗೆ ಸರಿತೋರಿದ ಹಾಗೆಯೇ ಇರಪ್ಪಾ. ನಾನು ಯಾವತ್ತೂ ಅಡ್ಡಿ ಬರೋದಿಲ್ಲ. ಆದರೆ ಒಂದೇ ಕೇಳಿಕೆ ನನ್ನದು. ಜನರೊಡನೆ ಮಾತಾಡುವಾಗ ಎಚ್ಚರಿಕೆಯಿಂದಿರು. ನಿನಗೆ ಜನರ ವಿಷಯದಲ್ಲಿ ಭಯ ಇರಬೇಕು. ಅವರು ಒಬ್ಬರನ್ನೊಬ್ಬರು ದ್ವೇಷಿಸ್ತಾರೆ. ದುರಾಶೆ ಮತ್ತು ಹೊಟ್ಟೆಕಿಚ್ಚಿನಲ್ಲೇ ಅವರು ಬದುಕೋದು. ಒಬ್ಬರನ್ನೊಬ್ಬರು ನೋಯಿಸೋದೆಂದರೆ ಖುಷಿ ಅವರಿಗೆ. ಅವರನ್ನು ಬಯಲಿಗೆಳೆದು ಖಂಡಿಸೋಕೆ ಒಮ್ಮೆ ನೀನು ಶುರು ಮಾಡಿದೆ ಎಂದರೆ ಅವರು ನಿನ್ನನ್ನು ದ್ವೇಷಿಸಿ ಧ್ವಂಸ ಮಾಡೋದು ಖಂಡಿತ."

ಬಾಗಿಲ ಬಳಿ ನಿಂತು ನೋವಿನ ಈ ಮಾತುಗಳನ್ನು ಮಗನು ಕೇಳಿದ. ಆಕೆ ಮಾತು ಮುಗಿಸಿದಾಗ ಮುಗುಳ್ನಕ್ಕನಾತ. ಆತ ಹೇಳಿದ:

"ನೀನು ಹೇಳೋದು ಸರಿ. ಜನರು ಕೆಟ್ಟವರು. ಆದರೆ, ಪ್ರಪಂಚದಲ್ಲಿ ನ್ಯಾಯ ಅನ್ನೋದು ಒಂದಿದೆ ಎಂತ ನಾನು ತಿಳಿದಾಗ, ಜನ ಒಳ್ಳೆಯವರ ಹಾಗೆ ಕಂಡರು."

ಮುಗುಳ್ನಕ್ಕು ಆತ ಮುಂದುವರಿಸಿದ:

"ಅದು ಹೇಗಾಯಿತೋ ನನಗೇ ತಿಳೀದು. ಚಿಕ್ಕವನಿದ್ದಾಗ ಪ್ರತಿಯೊಬ್ಬರಿಗೂ ನಾನು ಹೆದರ್ತಿದ್ದೆ. ದೊಡ್ಡವನಾದ ಹಾಗೆ ಪ್ರತಿಯೊಬ್ಬರನ್ನೂ ದ್ವೇಷಿಸೋಕೆ ಶುರು ಮಾಡ್ದೆ. ಕೆಲವರನ್ನು ದ್ವೇಷಿಸಿದ್ದು ಅವರ ಹೇಯತನಕ್ಕಾಗಿ. ಉಳಿದವರನ್ನು – ಯಾಕೋ ತಿಳೀದು – ಹೀಗೇ ಸುಮ್ಮನೆ. ಆದರೆ ಈಗ ಪ್ರತಿಯೊಂದೂ ಬೇರೆಯಾಗಿ ಕಾಣಿಸ್ತಿದೆ. ಹೀಗೆ ತೋರೋದಕ್ಕೆ, ಜನತೆಯ ಬಗೆಗೆ ನನಗಿರುವ ಕನಿಕರ ಕಾರಣವಿರ

ಬಹುದು. ಹೊಲಸಾಗಿ ಇರೋದಕ್ಕೆ ಪ್ರತಿಯೊಬ್ಬನೂ ಜವಾಬ್ದಾರನಲ್ಲ ಎಂದು ತಿಳಿದಾಗ ಹ್ಯಾಗೋ ನನ್ನ ಹೃದಯ ಮೃದುವಾಯ್ತು."

ಮಾತಾಡುವುದನ್ನಾತ ನಿಲ್ಲಿಸಿದ. ತನ್ನ ಹೃದಯದೊಳಗಿನ ಸ್ವರಕ್ಕೆ ಕಿವಿಗೊಡುತ್ತಿದ್ದ ಹಾಗೆ, ಶಾಂತವಾಗಿ ವಿಚಾರಪೂರ್ಣವಾಗಿ ಆತ ಹೇಳಿದ:

"ನೋಡಮ್ಮ – ಇದು ಸತ್ಯದ ಗತಿ."

ಮಗನನ್ನು ನೋಡುತ್ತ, "ಓ ದೇವರೇ!" ಎಂದು ಉದ್ಗಾರವೆತ್ತಿ, "ಇದು ಅಪಾಯದ ಬದಲಾವಣೆ, ಮಗೂ," ಎಂದಳಾಕೆ.

ಆತ ನಿದ್ದೆ ಹೋದಾಗ, ಸದ್ದಿಲ್ಲದೆ ಆಕೆ ತನ್ನ ಹಾಸಿಗೆಯಿಂದೆದ್ದು ಬಂದು ಅವನ ಬಳಿಗೆ ಹೋದಳು. ಮೇಲುಮುಖವಾಗಿ ಪಾವೆಲ್ ಮಲಗಿದ್ದ. ಆತನ ಕರಿಯ ಮುಖದ ಕಟುವಾದ ಹಟವಾದಿಯಾಗಿದ್ದ ರೂಪುರೇಖೆಗಳು ಬಿಳಿಯ ತಲೆದಿಂಬಿನ ಮೇಲೆ ತೀಕ್ಷ್ಣವಾಗಿ ಎದ್ದು ಕಾಣಿಸುತ್ತಿದ್ದುವು. ತಾಯಿ, ಬರಿಗಾಲಿನಲ್ಲಿ, ತನ್ನ ರಾತ್ರಿಯ ಉಡುಗೆಯಲ್ಲಿ, ಅಲ್ಲೇ ನಿಂತಳು. ಕೈಗಳು ಎದೆಗೊತ್ತಿಕೊಂಡಿದ್ದುವು. ತುಟಿಗಳು ಸದ್ದಿಲ್ಲದೆ ಚಲಿಸುತ್ತಿದ್ದವು. ಕೆನ್ನೆಗಳ ಮೇಲಿಂದ ಭಾರವಾದ ಕಣ್ಣಹನಿಗಳು ನಿಧಾನವಾಗಿ ಕೆಳಕ್ಕೆ ಉರುಳುತ್ತಿದ್ದವು.

೫

ಮತ್ತೆ ಮೌನದ ಆ ಬಾಳು ಮುಂದೆ ಸಾಗಿತು. ಪರಸ್ಪರ ದೂರವಿದ್ದಂತೆ ಕಂಡರೂ ಹತ್ತಿರವೇ ಇದ್ದ ಅನುಭವವಾಗುತ್ತಿತ್ತು ಅವರಿಗೆ.

ವಾರದ ನಡುವೆಯೊಮ್ಮೆ ಒಂದು ಹಬ್ಬದ ದಿನ ಬಂತು. ಆ ಹೊತ್ತು ಮನೆ ಬಿಟ್ಟು ಹೊರಟಾಗ ಪಾವೆಲ್, ತಾಯಿಯ ಕಡೆ ತಿರುಗಿ ಹೇಳಿದ:

"ಶನಿವಾರ ಪಟ್ಟಣದಿಂದ ನನ್ನ ಕೆಲವು ಸ್ನೇಹಿತರು ಬರ್‍ತಾರೆ."

"ಪಟ್ಟಣದಿಂದ," ಎಂದು ಪುನರುಚ್ಚಾರ ಮಾಡುತ್ತ ಆತನ ತಾಯಿ, ಒಮ್ಮೆಲೆ, ಕಣ್ಣೀರಿಡತೊಡಗಿದಳು.

"ಏನಮ್ಮ ಅದು?" ಎಂದು ಪಾವೆಲ್ ಅಸಮಾಧಾನದಿಂದ ಕೇಳಿದ.

ಮುಂಗವಚದಿಂದ ಆಕೆ ಕಣ್ಣೊರೆಸಿಕೊಂಡಳು.

"ನಂಗೊತ್ತಿಲ್ಲ.... ಅಂಥಾದ್ದೇನೂ ಇಲ್ಲ," ಎಂದಾಕೆ ಬಿಸುಸುಯ್ಯುತ್ತ ಹೇಳಿದಳು.

"ಹೆದರಿಕೆಯಾ?"

"ಹುಂ," ಎಂದು ಒಪ್ಪಿಕೊಂಡಳಾಕೆ.

ಅವನು ಆಕೆಯ ಕಡೆಗೆ ಬಾಗಿ, ತನ್ನ ತಂದೆ ಮಾತನಾಡುತ್ತಿದ್ದ ಗಡಸು ರೀತಿಯ ಸ್ವರದಲ್ಲೇ ಹೇಳಿದ:

"ನಮ್ಮನ್ನು ಹಾಳುಮಾಡಿರೋದು ಈ ಹೆದರಿಕೆಯೇ. ನಮ್ಮ ಮೇಲೆ ದರ್ಬಾರು

ಮಾಡುವವರು ಈ ಹೆದರಿಕೆಯಿಂದ ಲಾಭ ಪಡೀತಾರೆ. ನಮ್ಮನ್ನು ಇನ್ನೂ ಜಾಸ್ತಿ ಹೆದರಿಸ್ತಲೇ ಇರ್ತಾರೆ."

ತಾಯಿಗೆ ಕೆಡುಕೆನಿಸಿತು.

"ಸಿಟ್ಟಾಗಬೇಡ!" ಎಂದು ಆಕೆ ರೋದಿಸಿದಳು. "ಹೆದರದೆ ಹೇಗಿರಲಿ ನಾನು? ಇಡೀ ಜೀವಮಾನವೆಲ್ಲಾ ಹೆದರಿಕೆಯಲ್ಲೇ ಕಳೆದೆ. ದಿಗಿಲು ತುಂಬಿಸಿಕೊಂಡೇ ಈ ಜೀವ ಬೆಳೆದಿರೋದು."

"ಕ್ಷಮಿಸಮ್ಮ, ಅವರು ಬರ್ತಾರೆ. ಬೇರೆ ಉಪಾಯವಿಲ್ಲ," ಎಂದು ಆತ ಮೃದುವಾಗಿ ನುಡಿದ.

ಇದಿಷ್ಟು ಹೇಳಿ ಅವನು ಹೊರಟು ಹೋದ.

ಮೂರು ದಿನ ಆಕೆಯ ಹೃದಯ ಕಂಪಿಸಿತು. ಆ ಅಪರಿಚಿತ ಭಯಂಕರ ಜನರು ತನ್ನ ಮನೆಗೆ ಬರುವರೆಂಬುದನ್ನು ನೆನೆಸಿಕೊಂಡಾಗಲೆಲ್ಲಾ ಪ್ರತಿ ಬಾರಿಯೂ ಗುಂಡಿಗೆಯ ಬಡಿತ ನಿಂತ ಹಾಗೆ ಆಕೆಗೆ ಭಾಸವಾಗುತ್ತಿತ್ತು. ತನ್ನ ಮಗನು ಸಾಗುತ್ತಿದ್ದ ಹೊಸ ಹಾದಿಯನ್ನು ತೋರಿಸಿಕೊಟ್ಟವರು ಅವರೇ...

ಶನಿವಾರ ಸಂಜೆ ಪಾವೆಲ್ ಕಾರಖಾನೆಯಿಂದ ಮನೆಗೆ ಬಂದು, ಸ್ನಾನಮಾಡಿ ಬಟ್ಟೆ ಬದಲಾಯಿಸಿ, ಪುನಃ ಹೊರಗೆ ಹೋದ.

ಹೋಗುತ್ತ, ತಾಯಿಯತ್ತ ನೋಡದೆಯೇ, ಆತ ಹೇಳಿದ:

"ಯಾರಾದರೂ ಬಂದರೆ, ನಾನು ಬೇಗನೇ ವಾಪಸು ಬರ್ತೀನೀಂತ ಹೇಳಮ್ಮ. ಸದ್ಯ ಹೆದರ್ಕೋಬೇಡ."

ಬಲಹೀನಳಾಗಿ ಆಕೆ ಬೆಂಚಿನ ಮೇಲೆ ಕುಸಿದು ಕುಳಿತಳು.

"ಬಹುಶಃ ಅವರು ಬಂದಾಗ ನೀನು ಎಲ್ಲಾದರೂ ಹೊರಹೋಗೋದು ವಾಸಿಯೇನೋ," ಎಂದು ಆತ ಸೂಚನೆ ಇತ್ತ.

ಆ ಮಾತುಗಳಿಂದ ಆಕೆಗೆ ನೋವಾಯಿತು.

"ಬೇಡ. ಯಾಕೆ ಹೋಗಲಿ?"

ಅದು ನವೆಂಬರ್ ತಿಂಗಳ ಕೊನೆ. ಮಧ್ಯಾಹ್ನ ಹೆಪ್ಪುಗಟ್ಟಿದ ನೆಲದ ಮೇಲೆ ಒಣಮಂಜು ಬಿದ್ದಿತ್ತು. ಮಗನು ಹೊರಗೆ ಹೋಗುತ್ತಿದ್ದಂತೆ ಅವನ ಪಾದಗಳ ಕೆಳಗೆ ಸಿಲುಕಿ ಮಂಜು ಕರಕ್ಕೆನ್ನುತ್ತಿದ್ದುದು ಆಕೆಗೆ ಕೇಳಿಸುತ್ತಿತ್ತು. ಕಿಟಕಿಯ ಗಾಜುಗಳಿಗೆ ಕತ್ತಲು ಆತುಕೊಂಡಿತ್ತು – ಯಾವನೋ ವೈರಿ ಅವಿತು ಕುಳಿತ ಹಾಗೆ. ತನ್ನೆರಡೂ ಕೈಗಳಿಂದ ಬೆಂಚನ್ನು ಬಿಗಿಹಿಡಿದು ಬಾಗಿಲಿನತ್ತ ದೃಷ್ಟಿ ಹರಿಸುತ್ತ ಆಕೆ ಕಾದು ಕುಳಿತಳು....

ಕತ್ತಲೆಯಲ್ಲಿ, ಸುತ್ತ ಎಲ್ಲಾ ಕಡೆಯಿದಲೂ ವಿಚಿತ್ರ ಉಡುಪುಗಳನ್ನುಟ್ಟ ಕೆಟ್ಟ ಜನರು ನುಸುಳಿ ಬರುತ್ತಿದ್ದಂತೆ, ಆಕೆಗೆ ಭಾಸವಾಗುತ್ತಿತ್ತು. ಕಳ್ಳ ಹೆಜ್ಜೆಗಳು ಮನೆಗೆ ಸುತ್ತಿ ಬರುತ್ತಿದ್ದಂತೆ, ಬೆರಳುಗಳು ಗೋಡೆಗಳನ್ನು ಮುಟ್ಟಿ ನೋಡುತ್ತಿದ್ದಂತೆ, ಅನಿಸುತ್ತಿತ್ತು.

ಯಾರೋ ಒಬ್ಬರು ಒಂದು ರಾಗವನ್ನು ಸಿಳ್ಳು ಹಾಕುತ್ತಿದ್ದುದು ಆಕೆಗೆ ಕೇಳಿಸಿತು. ಮೌನವನ್ನು ಮುರಿದು ಬಳ್ಳಿಯಂತೆ ಬೆಳೆಯುತ್ತಿತ್ತು ಆ ಸ್ವರ; ದುಃಖ ಪ್ರದವಾಗಿತ್ತು, ಇಂಪಾಗಿತ್ತು; ಏನನ್ನೋ ಹುಡುಕುವಂತೆ ಕತ್ತಲೆಯ ಶೂನ್ಯದಲ್ಲಿ ಅಲೆದಾಡುತ್ತಿತ್ತು. ಸಮೀಪ ಬಂದು ಆ ಸ್ವರ ಒಮ್ಮೆಲೆ ಆ ಕಿಟಕಿಯ ಬಳಿಯಲ್ಲೆ ನಿಂತು ಹೋಯಿತು. ಗೋಡೆಯ ಮರವನ್ನು ಒಳಹೊಕ್ಕು ಮರೆಯಾಯಿತೇನೋ ಎಂಬಂತೆ ಕಂಡಿತು ಆ ಸ್ವರ.

ಬಾಗಿಲ ಹಾದಿಯ ಬಳಿ ಹೊಯ್ದಾಟದ ಹೆಜ್ಜೆಗಳ ಸದ್ದು ಕೇಳಿಬಂದಿತು. ತಾಯಿ ಎಚ್ಚೆತ್ತು ಎದ್ದು ನಿಂತಳು. ಆಕೆಯ ಹುಬ್ಬುಗಳು ಗಾಬರಿಯಿಂದ ಗಂಟಿಕ್ಕಿದ್ದುವು.

ಬಾಗಿಲು ತೆರೆಯಿತು. ಮೊದಲು ದೊಡ್ಡದಾದ ಒರಟು ರೋಮದ, ಟೋಪಿ ಧರಿಸಿದ್ದ ತಲೆಯೊಂದು ಕಾಣಿಸಿಕೊಂಡಿತು. ಆಮೇಲೆ ತಗ್ಗಾದ ಬಾಗಿಲಿನ ಮೂಲಕ ಎತ್ತರದ ದೇಹವೊಂದು ಬಾಗಿ ಒಳ ಬಂದಿತು. ಅನಂತರ ಆತ ನೇರವಾಗಿ ಸೆಟೆದು ನಿಂತು, ಬಲತೋಳನ್ನೆತ್ತಿ ವಂದಿಸುತ್ತ, ಗಟ್ಟಿಯಾಗಿ ಉಸಿರುಬಿಡುತ್ತ, "ನಮಸ್ಕಾರ," ಎಂದನು.

ತಾಯಿ ಉತ್ತರ ಕೊಡದೆ ತಲೆಬಾಗಿ ನಮಸ್ಕರಿಸಿದಳು.

"ಪಾವೆಲ್ ಮನೇಲಿದಾನೆಯೋ?"

ಬಂದಿದ್ದವನು ನಿಧಾನವಾಗಿ ತನ್ನ ಉಣ್ಣೆಯ ಮೇಲುಅಂಗಿಯನ್ನು ಬಿಚ್ಚಿ, ಕಾಲೊಂದನ್ನು ಎತ್ತಿ, ತನ್ನ ಟೋಪಿಯಿಂದ ಬೂಟಿನ ಮೇಲಿದ್ದ ಮಂಜಿನ ಕಣಗಳನ್ನು ತೊಡೆದುಹಾಕಿದನು. ಇನ್ನೊಂದು ಕಾಲನ್ನೂ ಎತ್ತಿ ಹಾಗೆಯೇ ಮಾಡಿದನಾತ. ಆಮೇಲೆ ಟೋಪಿಯನ್ನು ಮೂಲೆಗೆಸೆದು ಕೊಠಡಿಗೆ ತನ್ನ ಉದ್ದನೆಯ ಕಾಲುಗಳನ್ನಿಡುತ್ತಾ ನಡೆಯತೊಡಗಿದ. ಕುರ್ಚಿಯನ್ನು ಗಟ್ಟಿಯಾಗಿದೆಯೆ ಎಂದು ಪರೀಕ್ಷಿಸುವ ರೀತಿಯಲ್ಲಿ ಮುಟ್ಟಿ, ಅದರ ಮೇಲೆ ಕುಳಿತು, ಬಾಯಿಯನ್ನು ಕೈಯಿಂದ ಮುಚ್ಚಿಕೊಳ್ಳುತ್ತಾ ಆತ ಆಕಳಿಸಿದ. ಚೆನ್ನಾದ ಆಕೃತಿಯ ಕಿರಿದಾಗಿ ಕ್ರಾಪ್ ಮಾಡಿದ ತಲೆಯಿತ್ತು ಅವನಿಗೆ. ಕೊನೆಗಳನ್ನು ಇಳಿಬಿಟ್ಟ ಮೀಸೆಯ ಹೊರತಾಗಿ ಮುಖವನ್ನೆಲ್ಲ ನುಣ್ಣನೆ ಕ್ಷೌರಮಾಡಿಕೊಂಡಿದ್ದ. ತನ್ನ ವಿಶಾಲವಾದ ಬೂದು ಬೊಗಸೆಗಣ್ಣುಗಳಿಂದ ಆತ ಕೊಠಡಿಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ. ಕಾಲ ಮೇಲೆ ಕಾಲು ಹಾಕಿ, ಹಿಂದಕ್ಕೂ ಮುಂದಕ್ಕೂ ಕುರ್ಚಿಯಲ್ಲಿ ಓಲಾಡುತ್ತಾ, "ಈ ಗುಡಿಸಲು ನಿಮ್ಮ ಸ್ವಂತದ್ದೇ ಅಥವಾ ಬಾಡಿಗೇದೆ?" ಎಂದು ಕೇಳಿದ.

"ಬಾಡಿಗೇದು," ಎಂದು ತಾಯಿ ಆತನಿಗಿದಿರಾಗಿ ಕುಳಿತಲ್ಲಿಂದಲೇ ಉತ್ತರ ಕೊಟ್ಟಳು.

"ಅಷ್ಟೇನೂ ಒಳ್ಳೇ ಗುಡಿಸಲಲ್ಲ," ಎಂದು ಆತ ಅಭಿಪ್ರಾಯಪಟ್ಟ.

"ಪಾಷ ಬೇಗನೆ ಬರ್ತ್ತಾನೆ, ಸ್ವಲ್ಪ ಕಾದಿರಿ."

"ಕಾಯ್ತಾನೇ ಇದೀನಿ,"ಎಂದು ಆ ಎತ್ತರದ ಮನುಷ್ಯ ಶಾಂತವಾಗಿ ಉತ್ತರವಿತ್ತ.

ಅವನ ಶಾಂತ ಸ್ವಭಾವ, ಮೃದು ಸ್ವರ, ಸರಳ ಮುಖ ಕಂಡು ತಾಯಿ ಧೈರ್ಯ ಗೊಂಡಳು. ಆತನ ದೃಷ್ಟಿ ನಿಚ್ಚಳವಾಗಿತ್ತು, ಸ್ನೇಹಪೂರ್ಣವಾಗಿತ್ತು. ಆ ತಿಳಿಗಣ್ಣುಗಳ ಆಳದಲ್ಲಿ ತಮಾಷೆಯ ಕಿಡಿಗಳು ಕುಣಿಯುತ್ತಿದ್ದುವು. ಎಲುಬು ಎದ್ದು ಕಾಣುತ್ತಿದ್ದ, ಕುಗ್ಗಿದ, ನಿಡುಗಾಲಿನ ಮೈಕಟ್ಟಿನ, ಆ ಇಡೀ ವ್ಯಕ್ತಿತ್ವದಲ್ಲಿ ಯಾವುದೋ ಗೆಲುವಿನ ಆಕರ್ಷಣೆಯಿದ್ದಿತು. ಆತ ತೊಟ್ಟಿದ್ದುದು ಒಂದು ನೀಲಿ ಅಂಗಿ. ಅಗಲವಾದ ಕರಿಯ ಷರಾಯಿಯ ಅಂಚು, ಬೂಟುಗಳೊಳಕ್ಕೆ ಸೇರಿಕೊಂಡಿತ್ತು. ಅವನು ಯಾರು? ಬಂದುದೆಲ್ಲಿಂದ? ಬಹಳ ದಿನಗಳಿಂದ ತನ್ನ ಮಗನ ಪರಿಚಯವೆ? ಎಂದೆಲ್ಲ ಕೇಳ ಬೇಕೆಂದು ಆಕೆಗೆ ಮನಸ್ಸಾಯಿತು. ಆದರೆ ಇದಕ್ಕಿದ್ದಂತೆ ಆತನೇ ಮುಂದಕ್ಕೆ ಬಾಗಿ ಆಕೆಯ ಹಣೆಯತ್ತ ನೋಡುತ್ತ ಅಂದ:

"ಅವ್ವಾ, ನಿನ್ನ ಹಣೆಗೆ ಇಂಥ ಹೊಡೆತ ಕೊಟ್ಟೋರು ಯಾರು?"

ಅವನ ಸ್ವರ ಸೌಮ್ಯವಾಗಿತ್ತು. ಕಣ್ಣುಗಳಲ್ಲಿ ಸ್ವಯಂವ್ಯಕ್ತವಾದ ಮುಗುಳ್ನ ಗೆಯಿತ್ತು. ಆದರೆ ಆಕೆಗೆ ಮಾತ್ರ ಆ ಪ್ರಶ್ನೆಯಿಂದ ಮನನೊಂದಿತು.

"ನಿನಗೆ ಯಾಕಪ್ಪ ಆ ವಿಷಯ?" ಎಂದು ಆಕೆ, ತುಟಿ ಬಿಗಿದಿದ್ದರೂ ಶಾಂತ ವಿನಯದಿಂದ, ಕೇಳಿದಳು.

ತನ್ನ ಇಡೀ ದೇಹವನ್ನೇ ಆಕೆಯ ಕಡೆಗೆ ವಾಲಿಸಿ ಅವನು ಹೇಳಿದ:

"ಸಿಟ್ಟಾಗಬೇಡಿ. ನನ್ನ ಸಾಕು ತಾಯಿಗೂ ನಿನ್ನಂಥದೇ ಗಾಯದ ಕಲೆಯಿತ್ತು. ಅದಕ್ಕಾಗಿಯೇ ಕೇಳಿದೆ. ಆ ಏಟು ಕೊಟ್ಟವನು ಆಕೆಯ ಸಹವಾಸಿ. ಒಬ್ಬ ಚಮ್ಮಾರ ಆತ. ಆ ಮನುಷ್ಯ, ತನ್ನ ಮರದ ಮೊಚ್ಚೆಯ ಅಚ್ಚಿನಿಂದ ಹೊಡೆದಿದ್ದ. ಆಕೆ ಅಗಸ ರವಳು, ಆತ ಮೋಚಿ. ನನ್ನನ್ನು ದತ್ತು ತೆಗೆದುಕೊಂಡ ನಂತರ ಅವನು ಎಲ್ಲೋ ಆಕೆಗೆ ಗಂಟುಬಿದ್ದ, ಮಹಾ ಕುಡುಕ! ಪಾಪ! ಆಕೆ ಕೊನೆತನಕ ಗೋಳು ಅನುಭವಿಸ ಬೇಕಾಯಿತು. ಆಕೆಗೆ ಎಂಥ ಏಟು ಕೊಡುತ್ತಿದ್ದ! ಹುಂ. ಹೆದರಿಕೆಯಿಂದಲೇ ನನ್ನ ಚರ್ಮ ಬಿರುಕು ಬಿಡುತ್ತಿತ್ತು!"

ಆ ವಿಶ್ವಾಸದ ಮಾತುಗಳಿಂದ ತಾಯಿಯ ಸಿಟ್ಟು ಮಾಯವಾಯಿತು. ಅಷ್ಟು ಸಿಡುಕಾಗಿ ತಾನು ಉತ್ತರ ಕೊಟ್ಟುದಕ್ಕೆ ಪಾವೆಲ್ ಕೋಪಿಸಿಕೊಳ್ಳಬಹುದೆಂದು ಆಕೆಗೆ ಭಯವಾಯಿತು. ಅಪರಾಧಿಯ ಕಿರುನಗೆಯೊಂದಿಗೆ ಆಕೆ ಹೇಳಿದಳು:

"ನನಗೇನೂ ಬೇಸರವಾಗಲಿಲ್ಲ. ಆದರೆ ನೀವು ಇದ್ದಕ್ಕಿದ್ದ ಹಾಗೆ ಕೇಳಿದ್ರಿ ನೋಡಿ.... ನನಗೆ ಈ ಉಡುಗೊರೆ ಕೊಟ್ಟವನೂ ನನ್ನ ಯಜಮಾನನೇ. ಕೈಬಿಟ್ಟು ಹೋದ. ಆತನ ಆತ್ಮಕ್ಕೆ ಶಾಂತಿ ದೊರೀಲಿ!... ಯಾವ ಜನ ನೀವು, ತತಾರ್* ಜನಾಂಗವೆ?"

---

*ಹಳೆಯ ಬಟ್ಟೆಯುಟ್ಟವರಿಗೆ ಸಾಮಾನ್ಯವಾಗಿ 'ತತಾರ್' ಎನ್ನುತ್ತಿದ್ದರು. ಅದು ಒಂದು ಜನಾಂಗವೂ ಹೌದು. – ಅನು.

ಆ ಮನುಷ್ಯ, ಕಾಲುಗಳನ್ನು ಕೊಡವಿಕೊಂಡು ಅಗಲವಾಗಿ ಹಲ್ಕಿರಿದ. ಆ ನಗೆಗೆ ಅವನ ಕಿವಿಗಳೂ ಚಲಿಸಿದುವು. ಆದರೆ ಆಮೇಲೆ ಅವನು ಗಂಭೀರನಾದ.

"ಇಲ್ಲ, ಇನ್ನೂ ತಿತಾರ್ ಆಗಿಲ್ಲ," ಎಂದ.

ಆ ತಮಾಷೆ ಅರ್ಥವಾಯಿತು ತಾಯಿಗೆ. ಆಕೆ ಮುಗುಳ್ನಕ್ಕು ವಿವರಿಸಿದಳು:

"ರಷ್ಯಾದವರ ಮಾತು ಇದ್ದ ಹಾಗಿಲ್ಲ ನಿಮ್ಮದು, ಅದಕ್ಕೇ ಹೇಳ್ದೆ."

ಅತಿಥಿ ನಗುತ್ತ ಉತ್ತರವಿತ್ತ:

"ರಷ್ಯಾದವರ ಮಾತಿಗಿಂತಲು ಅದು ಮೇಲು. ನಾನು ಹೊಹೋಲ್.* ಕಾನಿವ್ ನನ್ನ ಊರು."

"ಬಹಳ ದಿನವಾಯ್ತೆ ಇಲ್ಲಿಗೆ ಬಂದು?".

"ಸುಮಾರು ಒಂದು ವರ್ಷ ಕಾಲ ಶಹರದಲ್ಲಿದ್ದೆ. ಒಂದು ತಿಂಗಳ ಹಿಂದೆ ಈ ಕಾರ್ಖಾನೆಗೆ ಬಂದೆ. ಇಲ್ಲಿ ಕೆಲವರು ಒಳ್ಳೇ ಜನರಿದ್ದಾರೆ – ನಿನ್ನ ಮಗ ಮತ್ತು ಬೇರೆ ಕೆಲವರು. ಇನ್ನು ಇಲ್ಲೇ ಇರ್ತಿನಿ ಅಂತ ಕಾಣುತ್ತೆ," ಎಂದು ಮೀಸೆಯನ್ನು ತೀಡುತ್ತ, ಆತ ಹೇಳಿದ.

ಅವನ ನಡತೆ ತುಂಬ ಮೆಚ್ಚುಗೆಯಾಯಿತು ತಾಯಿಗೆ. ತನ್ನ ಮಗನ ಬಗ್ಗೆ ಆತ ಹೇಳಿದ ಒಳ್ಳೆಯ ಮಾತುಗಳಿಗಾಗಿ ಏನಾದರೂ ಪ್ರತಿಫಲ ಕೊಡಬೇಕೆಂದು ಆಕೆ ಬಯಸಿದಳು.

"ಸ್ವಲ್ಪ ಚಹಾ ತಗೋತೀರಾ?" ಎಂದು ಕೇಳಿದಳು.

ಭುಜಗಳನ್ನು ಕುಪ್ಪಳಿಸಿ ಆತ ಉತ್ತರವಿತ್ತ:

"ನನಗೊಬ್ಬನಿಗೇ ಯಾಕೆ? ಉಳಿದವರೂ ಬರೋ ತನಕ ಕಾದಿರಿ. ಆಮೇಲೆ ನಮಗೆಲ್ಲರಿಗೂ ಔತಣ ನೀಡುವಿರಂತೆ."

ಆ ಮಾತುಗಳು ಮತ್ತೆ ತಾಯಿಗೆ ಹೆದರಿಕೆಯ ನೆನಪು ಮಾಡಿಕೊಟ್ಟವು.

"ಉಳಿದವರೂ ಇವನ ಹಾಗೆಯೇ ಇದ್ದರೆ!" ಎಂದು ಆಕೆ ಮನದಲ್ಲಿಯೇ ಆಶಿಸಿದಳು.

ಬಾಗಿಲ ಹಾದಿಯಲ್ಲಿ ಮತ್ತೊಮ್ಮೆ ಹೆಜ್ಜೆಗಳ ಸಪ್ಪಳವಾಯಿತು. ಯಾರೋ ಅವಸರ ಅವಸರವಾಗಿ ಬಾಗಿಲು ತೆರೆದರು. ತಾಯಿ ಮತ್ತೆ ಎದ್ದು ನಿಂತಳು. ಆದರೆ ಆಶ್ಚರ್ಯ ಆಕೆಗೆ – ಅಡುಗೆಮನೆಯೊಳಕ್ಕೆ ಕಾಲಿಟ್ಟುದು ಒಬ್ಬ ಹುಡುಗಿ. ಗಿಡ್ಡ ಶರೀರ; ರೈತರ ಸರಳ ಮುಖಭಾವವಿತ್ತು; ತನ್ನ ತೆಳು ಬಿಳುಪಾದ ಕೂದಲನ್ನು ಒಂದೇ ಜಡೆಯಾಗಿ ಹೆಣೆದುಕೊಂಡಿದ್ದಳು.

"ತಡವಾಯಿತೆ?" ಎಂದು ಆ ಹುಡುಗಿ ಮೆಲ್ಲನೆ ಕೇಳಿದಳು.

---

*ಹೊಹೋಲ್ – ಉಕ್ರೇನಿಯನ್ ಎಂದರ್ಥ. – ಅನು.

"ಇಲ್ಲ, ಇಲ್ಲ," ಎಂದು ಹೊಹೋಲ್ ಬಾಗಿಲಿನಾಚೆ ದೃಷ್ಟಿ ಹಾಯಿಸುತ್ತಾ ಉತ್ತರವಿತ್ತ; "ನಡೆದು ಬಂದೆಯಾ?"

"ಹೌದು ಮತ್ತೆ."

ಆ ಹುಡುಗಿ ತಾಯಿಯತ್ತ ತಿರುಗಿದಳು.

"ಪಾವೆಲ್‌ನ ತಾಯಿ ನೀವೇನಾ? ನಮಸ್ಕಾರಾನಮ್ಮ. ನನ್ನ ಹೆಸರು ನತಾಷ."

"ತಂದೆ ಕಡೆ ಹೆಸರು?" ಎಂದು ತಾಯಿ ಕೇಳಿದಳು.

"ವಸೀಲ್ಯೆವ್ನ.* ನಿಮ್ಮ ಹೆಸರು?"

"ಪೆಲಗೇಯ ನೀಲೊವ್ನ."

"ಈಗ ನಾವು ಪರಿಚಿತರಾದಹಾಗಾಯಿತು."

ಹುಡುಗಿಯ ಕಡೆಗೆ ಮುಗುಳ್ನಗು ಸೂಸುತ್ತಾ, "ಹೌದು," ಎಂದು ತಾಯಿ, ಸ್ವಲ್ಪ ಉಸಿರು ಹಿಡಿದು ಹೇಳಿದಳು.

ಹುಡುಗಿಗೆ ಓವರ್‌ಕೋಟನ್ನು ಕಳಚಲು ನೆರವಾಗುತ್ತಾ ಹೊಹೋಲ್, "ಹೊರಗೆ ಚಳಿಯಾಗಿತ್ತೆ?" ಎಂದು ಕೇಳಿದ.

"ಎಂಥ ಚಳಿ! ಹೊಲಗಳನ್ನು ದಾಟಿ ಬರೋದೆಂದರೆ...."

ಆಕೆಯ ಸ್ವರ ಸ್ಪಷ್ಟವಾಗಿತ್ತು. ಸಣ್ಣ ಬಾಯಿ. ತುಂಬುದುಟಿಗಳು. ದುಂಡು ದುಂಡಗೆ ಇದ್ದಳು. ತನ್ನ ಮೇಲುಡುಪನ್ನೆಲ್ಲಾ ಬದಿಗಿರಿಸಿ, ಅವಳು ತನ್ನ ಗುಲಾಬಿ ಕೆನ್ನೆಗಳನ್ನು ಚಳಿಯ ಸೆಳೆತಕ್ಕೆ ಸಿಕ್ಕಿ ನೋಯುತ್ತಿದ್ದ ಪುಟ್ಟ ಕೈಗಳಿಂದ ತೀಡಿದಳು. ವೇಗವಾಗಿ, ತನ್ನ ಪಾದರಕ್ಷೆಯ ಹಿಮ್ಮಡಿಯಿಂದ ಟಪ್ ಟಪ್ ಎಂದು ನೆಲದ ಮೇಲೆ ಸದ್ದು ಮಾಡುತ್ತಾ ಇನ್ನೊಂದು ಕೋಣೆಯನ್ನು ಹೊಕ್ಕಳು.

"ರಬ್ಬರಿನ ಮೇಲ್‌ಬೂಟ್‌ಗಳನ್ನು ಧರಿಸಿಕೊಂಡಿಲ್ಲ ಆಕೆ," ಎಂದು ತಾಯಿ ಮನಸ್ಸಿನಲ್ಲೇ ಅಂದುಕೊಂಡಳು.

"ಬರ್‌ರ್," ಎಂದಳು ಹುಡುಗಿ ನಡುಗುತ್ತ, "ಓ – ಎಷ್ಟೊಂದು ಚಳಿ. ಮೈ ಸೆಟೆದುಕೊಂಡಿದೆ."

ಅಡುಗೆ ಮನೆಯೊಳಕ್ಕೆ ಧಾವಿಸುತ್ತ ತಾಯಿ ಹೇಳಿದಳು:

"ಇಗೋ.... ಚಹಾ ಮಾಡಲು ಸಮೊವಾರ್** ಹಚ್ತೀನಿ.... ಒಂದು ನಿಮಿಷ."

ಬಹಳ ಕಾಲದಿಂದ ಈ ಹುಡುಗಿ ತನಗೆ ಗೊತ್ತಿದ್ದ ಹಾಗೆ, ತಾಯಂದಿರ ಸುಂದರ ವಾದ ಸಹಾನುಭೂತಿಯ ಪ್ರೀತಿಯಿಂದ ಆಕೆಯನ್ನು ತಾನು ಪ್ರೀತಿಸುತ್ತಿದ್ದ ಹಾಗೆ,

---

*ವಸೀಲಿಯ್ ಎಂಬಾತನ ಮಗಳು. – ಅನು.

**ಸಮೊವಾರ್ – ಚಹಾ ಮಾಡಲು ನೀರನ್ನು ಕುದಿಸಲು ರಷ್ಯನ್ನರು ಬಳಸುವ ವಿಶಿಷ್ಟ ಪಾತ್ರೆ. ಪಾತ್ರೆಯ ಮಧ್ಯಭಾಗದಲ್ಲಿ ಇಜ್ಜಿಲು ಹಾಕಿ ಉರಿಸಲು ಕೊಳವೆ ಇರುತ್ತದೆ. ಕೊಳವೆಯ ಸುತ್ತಲಿರುವ ನೀರು ಕಾಯುತ್ತದೆ. – ಸಂ.

ತಾಯಿಗೆ ತೋರಿತು. ಪಕ್ಕದ ಕೊಠಡಿಯಲ್ಲಿ ನಡೆಯುತ್ತಿದ್ದ ಸಂಭಾಷಣೆಗೆ ಕಿವಿಗೊಡುತ್ತ ಆಕೆ ಮುಗುಳ್ನಕ್ಕಳು.

"ನಹೋದ್ಕ! ಇದೇನು ಮಂಕುಹಿಡಿದವನಂತೆ ಇದ್ದೀಯ?" ಎಂದು ಹುಡುಗಿ ಕೇಳಿದಳು.

"ಅಂಥಾದೇನೂ ಇಲ್ಲ," ಎಂದು ಹೊಹೋಲ್ ಮೆಲ್ಲನೆ ಉತ್ತರವಿತ್ತ; "ಈ ವಿಧವೆಗೆ ಸೊಗಸಾದ ಕಣ್ಣುಗಳಿವೆ. ಪ್ರಾಯಶಃ ನನ್ನ ತಾಯಿಯ ಕಣ್ಣುಗಳೂ ಹಾಗೆಯೇ ಇರಬಹುದೇನೋ ಎಂದು ಯೋಚಿಸುತ್ತಿದ್ದೆ. ಆಗಾಗ್ಗೆ ತಾಯಿಯ ಯೋಚನೆ ನನಗೆ. ಆಕೆ ಬದುಕಿರಬೇಕೆಂದೇ ನನಗೆ ಅನಿಸುತ್ತೆ."

"ಆದರೆ ಆಕೆ ತೀರಿಕೊಂಡಳೂಂತ ಹೇಳಿದ್ದಿಯಲ್ಲ?"

"ತೀರಿಕೊಂಡದ್ದು ನನ್ನ ಸಾಕುತಾಯಿ. ನಾನು ಹೇಳುತ್ತಿರೋದು ನನ್ನ ಸ್ವಂತ ತಾಯಿ ವಿಚಾರ. ಬಹುಶಃ ಕೀವ್ ನಗರದ ಬೀದಿಗಳಲ್ಲೆಲ್ಲಾ ಆಕೆ ಭಿಕ್ಷೆ ಬೇಡುತ್ತಿರಬಹುದು. ವೋಡ್ಕ ಕುಡೀತಿರಬಹುದು. ಅಮಲೇರಿದಾಗಲೆಲ್ಲಾ ಪೋಲೀಸರು ಆಕೆಯ ಮುಖಕ್ಕೆ ಹೊಡೀತಿರಬಹುದು....."

"ಪಾಪ! ದುರದೃಷ್ಟದ ಹುಡುಗ ಸಹೃದಯಿ," ಎಂದು ತಾಯಿ ನಿಟ್ಟುಸಿರು ಬಿಡುತ್ತ ಯೋಚಿಸಿದಳು.

ನತಾಷ ಏನನ್ನೋ ಬೇಗನೆ ತೀವ್ರವಾಗಿ ಮೃದುವಾಗಿ ಉದ್ವಿಗ್ನತೆಯಿಂದ ಹೇಳಿದಳು. ಹೊಹೋಲ್‌ನ ಸ್ವರ ಮತ್ತೊಮ್ಮೆ ನಿಚ್ಚಳವಾಗಿ ಹೊರಹೊಮ್ಮಿತು.

"ನೀವಿನ್ನೂ ಎಳೇ ವಯಸ್ಸಿನವರು, ಸಾಕಷ್ಟು ಉಪ್ಪುನೀರು ಕುಡಿದಿಲ್ಲ ಇನ್ನೂ. ಒಬ್ಬ ಮನುಷ್ಯನಿಗೆ ಜನ್ಮ ಕೊಡೋದು ಪ್ರಯಾಸದ ಕೆಲಸ. ಆತನಿಗೆ ಸಭ್ಯತನ ಕಲಿಸೋದಂತೂ ಇನ್ನೂ ಪ್ರಯಾಸದ ಕೆಲಸ."

"ಎಷ್ಟೊಳ್ಳೆಯ ಮಾತು!" ಎಂದು ತಾಯಿ ತನ್ನಷ್ಟಕ್ಕೇ ಉದ್ಗಾರವೆತ್ತಿದ್ದಳು. ಸಂತೈಸುವ ರೀತಿಯಲ್ಲಿ ಏನಾದರೂ ಹೊಹೋಲ್‌ಗೆ ಹೇಳಬೇಕೆಂಬ ಪ್ರೇರಣೆಯಾಯಿತು ಅವಳಿಗೆ. ಆದರೆ ಬಾಗಿಲು ಒಮ್ಮೆಲೆ ತೆರೆಯಿತು. ಕೆಟ್ಟವನೆಂದು ಹೆಸರು ಪಡೆದಿದ್ದ ಹಳೆಯ ಕಳ್ಳ ದನೀಲೊನ ಮಗ ನಿಕೊಲಾಯ್ ವೆಸೊವ್‌ಶ್ಚಿಕೋವ್ ಬಂದ. ಅವನು ಯಾವಾಗಲೂ ವ್ಯಾಕುಲಿತನಾಗಿರುತ್ತಿದ್ದ. ಎಲ್ಲರಿಂದಲೂ ದೂರವಿರುತಿದ್ದ. ಈ ಕಾರಣಕ್ಕಾಗಿ ಜನರು ಅವನನ್ನು ಅಣಕಿಸಿ ಹಾಸ್ಯಮಾಡುತ್ತಿದ್ದರು.

"ಏನು ಬೇಕಪ್ಪಾ ನಿಕೊಲಾಯ್?" ಎಂದಾಕೆ ಸ್ವಲ್ಪ ಆಶ್ಚರ್ಯದಿಂದ ಕೇಳಿದಳು.

ಆಕೆಗೆ ನಮಸ್ಕರಿಸದೆ, ಅಂಗೈಯಿಂದ ಸಿಡುಬಿನ ಕಲೆಯಿದ್ದ ಅಗಲವಾದ ತನ್ನ ಮುಖವನ್ನೊರಸಿಕೊಳ್ಳುತ್ತ ಆತ, "ಪಾವೆಲ್ ಇದಾನಾ?" ಎಂದು ಕೇಳಿದ.

"ಇಲ್ಲ."

ಕೊಠಡಿಯತ್ತ ದೃಷ್ಟಿ ಹಾಯಿಸಿದ ಬಳಿಕ ಆತ ಒಳಹೊಕ್ಕ.

"ನಮಸ್ಕಾರ, ಸಂಗಾತಿಗಳೇ," ಎಂದನಾತ.

"ಈತ?" ಎಂದು ತಾಯಿ ಅಸಮ್ಮತಿ ವ್ಯಕ್ತಪಡಿಸುತ್ತ ಯೋಚಿಸಿದಳು. ಆತನನ್ನು ನೋಡಿ ಸಂತೋಷಗೊಂಡು ನಲ್ಮೆಯಿಂದ ನತಾಷ ಆತನೆಡೆಗೆ ಕೈನೀಡಿದ್ದನ್ನು ಕಂಡು ತಾಯಿಗೆ ಆಶ್ಚರ್ಯವಾಯಿತು.

ನಿಕೊಲಾಯ್ ಬಂದನಂತರ ಬೇರಿಬ್ಬರು ಬಂದರು. ಇಬ್ಬರೂ ಇನ್ನೂ ಹುಡುಗರು. ಒಬ್ಬನ ಪರಿಚಯವಿತ್ತು ತಾಯಿಗೆ. ತೀಡಿದ ಆಕೃತಿಯ, ಗುಂಗುರು ಕೂದಲಿನ, ವಿಶಾಲವಾದ ಹಣೆಯ ಹುಡುಗ. ಫ್ಯೋದೊರ್ ಎಂದಾತನ ಹೆಸರು. ಕಾರಖಾನೆಯ ಹಳೆಯ ಕೂಲಿಗಾರ ಸಿಜೋವ್‌ನ ಸೋದರ ಸಂಬಂಧಿ. ಇನ್ನೊಬ್ಬ ಲಜ್ಜೆಯ ಹುಡುಗ. ಅಗಲವಾಗಿ ತಲೆಯ ಮೇಲಕ್ಕೆ ಬಾಚಿದ್ದ ನೇರವಾದ ಕೂದಲಿತ್ತು ಆತನಿಗೆ. ತಾಯಿಗೆ ಅವನ ಪರಿಚಯವಿರಲಿಲ್ಲ. ಆದರೆ ಆತನನ್ನು ಕಂಡಾಗಲೂ ಆಕೆ ಬೆವರಲಿಲ್ಲ. ಅಂತೂ ಕೊನೆಗೆ ಪಾವೆಲ್ ಕಾಣಿಸಿಕೊಂಡ. ತಾಯಿಗೆ ಪರಿಚಯವಿದ್ದ ಕಾರಖಾನೆಯ ಇಬ್ಬರು ಯುವಕ ಕೂಲಿಗಾರರೂ ಆತನ ಜತೆಯಲ್ಲಿ ಬಂದರು.

ಪಾವೆಲ್ ಮೃದುವಾಗಿ, "ಸಮೊವಾರ್ ಇಟ್ಟಿದ್ದೀಯಾ, ಧನ್ಯವಾದ!" ಎಂದ.

ಅವ್ಯಕ್ತವಾದ ಯಾವುದೋ ಮಧುರ ಭಾವನೆ ತಾಯಿಯನ್ನು ಕಾಡಿತು. ತನ್ನ ಕೃತಜ್ಞತೆಯನ್ನು ಹೇಗೆ ತೋರಿಸಬೇಕೆಂದು ತಿಳಿಯದೆ ತಾಯಿ, "ಹೊರ ಹೋಗಿ ವೋಡ್ಕ ಕೊಂಡುಕೊಂಡು ಬರಲೆ?" ಎಂದು ಕೇಳಿದಳು.

"ಬೇಡ, ಆದರ ಅವಶ್ಯತೆಯಿಲ್ಲ," ಎಂದು ಪಾವೆಲ್ ಪ್ರೀತಿಯಿಂದ ಮುಗುಳ್ನಗುತ್ತ ಉತ್ತರವಿತ್ತ.

ಆ ಕೂಟವನ್ನೇ ಅಲ್ಲವೆ, ಅಪಾಯಕಾರಿಯಾದದ್ದೆಂದು ಪಾವೆಲ್ ಹೇಳಿದ್ದು? ತನ್ನನ್ನು ಚೆನ್ನಾಗಿ ಪರಿಹಾಸ್ಯ ಮಾಡುವುದಕ್ಕೋಸ್ಕರವೇ, ಅಪಾಯವನ್ನು ವಿಪರೀತವಾಗಿ ಪಾವೆಲ್ ಚಿತ್ರಿಸಿರಬಹುದೆಂದು ತಾಯಿಗೆ ಅನಿಸಿತು.

ಆಕೆ ಮೆಲ್ಲನೆ, "ಇವರೇನಾ ಈ ನಿಷಿದ್ಧ ಜನರು?" ಎಂದು ಕೇಳಿದಳು.

ಪಾವೆಲ್ ಪಕ್ಕದ ಕೊಠಡಿಯೊಳಕ್ಕೆ ಹೋಗುತ್ತ, "ಹುಂ. ಇವರೇ," ಎಂದ.

"ನಿಜಕ್ಕೂ!?" ಎಂದಾಕೆ ಆತನನ್ನು ಕುರಿತು ಪ್ರೀತಿಯಿಂದ ಅಂದಳು. ತನ್ನ ಹಿರಿತನದಿಂದ ಮಗನ ಬಗ್ಗೆ ಯೋಚಿಸುತ್ತ, "ಪಾಷ ಇನ್ನೂ ಎಳೆಯ ಮಗು," ಎಂದುಕೊಂಡಳು.

## ೬

ತಾಯಿ ಕುದಿಯುತ್ತಿದ್ದ ಸಮೊವಾರನ್ನು ಕೋಣೆಯೊಳಕ್ಕೆ ತಂದಳು. ಅತಿಥಿಗಳು ಮೇಜಿನ ಸುತ್ತಲೂ ಗುಂಪು ಕೂಡಿದ್ದರು. ನತಾಷ, ಮೇಜಿನೊಂದು ಮೂಲೆಯಲ್ಲಿ ದೀಪದ ಕೆಳಗೆ ಕೈಯಲ್ಲೊಂದು ಪುಸ್ತಕವನ್ನು ಹಿಡಿದು ಕುಳಿತಿದ್ದಳು.

"ಜನತೆಯ ಬಾಳು ಏಕಿಷ್ಟು ಹೊಲಸಾಗಿದೆ ಎಂಬುದನ್ನು ತಿಳಿಯುವುದಕ್ಕಾಗಿ...." ಎಂದು ನತಾಷ ಹೇಳುತ್ತಿದ್ದಳು.

“ಜನರು ತಾವೇ ಏಕಿಷ್ಟು ಹೊಲಸಾಗಿದ್ದಾರೆ ಎಂಬುದನ್ನು ತಿಳಿಯುವುದಕ್ಕಾಗಿ....” ಎಂದು ಹೊಹೋಲ್ ಧ್ವನಿಕೂಡಿಸಿದ.

“ಅವರ ಬಾಳಿನ ಮೂಲವನ್ನು ಪರಿಶೀಲಿಸುವುದು ಅಗತ್ಯ....”

“ಪರಿಶೀಲಿಸಿ, ಮಕ್ಕಳಿರಾ, ಚೆನ್ನಾಗಿ ಪರಿಶೀಲಿಸಿ,” ಎಂದು ತಾಯಿ ಚಹಾ ಮಾಡುತ್ತಾ ಗೊಣಗಿದಳು.

ಎಲ್ಲರೂ ಸುಮ್ಮನಾದರು.

“ಏನಮ್ಮ ಸುಮ್ಮನಿರಬಾರದೆ?” ಎಂದ ಪಾವೆಲ್ ಸ್ವಲ್ಪ ಸಿಟ್ಟಾಗಿ.

“ನಾನು?” ಎನ್ನುತ್ತ ಆಕೆ ದೃಷ್ಟಿ ಅವರ ಕಡೆಗೆ ಹರಿಸಿದಳು. ಪ್ರತಿಯೊಬ್ಬರೂ ತನ್ನೆಡೆಗೆ ನೋಡುತ್ತಿರುವುದು ಕಂಡಿತು. “ಓ! ನನ್ನಷ್ಟಕ್ಕೇ ನಾನು ಮಾತಾಡ್ತಿದ್ದೆ,” ಎಂದು ಆಕೆ ಸಂಕೋಚದಿಂದ ತೊದಲಿದಳು: “ಬಾಳಿನ ಮೂಲವನ್ನು ನೀವು ಪರಿಶೀಲಿಸಿ.”

ನತಾಷ ನಕ್ಕಳು. ಒಳ್ಳೆ ತಮಾಷೆ ಎನಿಸಿತು ಪಾವೆಲ್‌ಗೆ.

“ಚಾ ಮಾಡಿದ್ದಕ್ಕೆ ಧನ್ಯವಾದ, ಅವ್ವಾ,” ಎಂದ ಹೊಹೋಲ್.

“ರುಚಿ ನೋಡಿದ ಮೇಲೆ ಧನ್ಯವಾದ ಕೊಡೀವಂತೆ,” ಎಂದಳು ತಾಯಿ. ಮತ್ತೆ ಮಗನತ್ತ ದೃಷ್ಟಿ ಹಾಯಿಸಿ, “ನನ್ನಿಂದ ತೊಂದರೆಯಾಗುತ್ತೇನೋ,” ಎಂದು ಕೇಳಿದಳು.

“ಮನೆಯ ಯಜಮಾನಿಯಿಂದ ಅತಿಥಿಗಳಿಗೆ ತೊಂದರೆ ಎಂದರೇನು?” ಎಂದು ನತಾಷ ಉತ್ತರ ಕೊಟ್ಟಳು: “ನೀವು ಬೇಗನೆ ಸ್ವಲ್ಪ ಚಾ ಕೊಡಿ, ಮೈಯೆಲ್ಲಾ ನಡುಗುತ್ತಿದೆ. ಪಾದಗಳು ಹೆಪ್ಪುಗಟ್ಟಿವೆ.” ಶೋಕಪೂರಿತವಾಗಿತ್ತು ಆಕೆಯ ಸ್ವರ – ಮಗುವಿನ ಹಾಗೆ.

“ಇಗೋ ಕೊಟ್ಟೆ! ಈಗಲೇ!” ಎಂದು ತಾಯಿ ಅವಸರ ಅವಸರವಾಗಿ ಉತ್ತರವಿತ್ತಳು.

ಚಾ ಕುಡಿದ ಮೇಲೆ ನತಾಷ ಒಂದು ದೀರ್ಘ ನಿಶ್ವಾಸವನ್ನು ಬಿಟ್ಟು, ಜಡೆಯನ್ನು ಭುಜದ ಮೇಲೆ ಇಳೀಬಿಟ್ಟು, ಚಿತ್ರಗಳಿದ್ದ ಹಳದಿಯ ರಟ್ಟಿನ, ಪುಸ್ತಕವನ್ನೆತ್ತಿಕೊಂಡು ಓದತೊಡಗಿದಳು. ಚಹಾ ಕೊಡುವಾಗ ಪಾತ್ರೆಗಳ ಸಪ್ಪಳವಾಗದಂತೆ ತಾಯಿ ಯತ್ನಿಸಿ, ತಾನೂ ಕಿವಿಗೊಟ್ಟು ಕೇಳುತ್ತಿದ್ದಳು. ಆ ಹುಡುಗಿಯ ಉಚ್ಚ ಸ್ವರ, ಸಮೊವಾರದ ಧ್ಯಾನಾಸಕ್ತವೆಂದು ತೋರಿದ ರಾಗಶಬ್ದದೊಡನೆ ಬೆರೆಯಿತು... ಮೊದಲು ಗುಹೆಗಳಲ್ಲಿ ವಾಸಿಸುತ್ತಿದ್ದು ಕಲ್ಲುಗಳಿಂದ ಬೇಟೆಯಾಡುತ್ತಿದ್ದ ಕಾಡು ಜನರ ವಿಷಯವಾದ ಕತೆಗಳ ಸುಂದರ ಸುರುಳಿ ಕೊಠಡಿಯಲ್ಲೆಲ್ಲ ಬಿಚ್ಚಿಕೊಂಡಿತು. ಅಜ್ಜಿಕತೆಯ ಹಾಗಿತ್ತು ಅದೆಲ್ಲ. ತಾಯಿ ಮಗನನ್ನೆ ನೋಡುತ್ತಲಿದ್ದಳು. ಅಂಥ ಜ್ಞಾನದ ಬಗೆಗೆ ನಿಷೇಧ ಯಾಕೆಂದು ಕೇಳುವ ಆಸೆಯಾಯಿತು ಅವಳಿಗೆ. ಆದರೆ, ಓದುತ್ತಿದ್ದುದಕ್ಕೆ ಕಿವಿಗೊಟ್ಟು ಬೇಗನೆ

ಆಯಾಸವಾಯಿತು. ಕಳ್ಳ ನೋಟದಿಂದ ಅತಿಥಿಗಳನ್ನು, ಮಗನಿಗೂ ತಿಳಿಯದಂತೆ ಅವರಿಗೂ ಗೊತ್ತಾಗದಂತೆ, ಆಕೆ ದಿಟ್ಟಿಸಿ ನೋಡಿದಳು.

ಪಾವೆಲ್ ನತಾಷಳ ಪಕ್ಕದಲ್ಲಿಯೇ ಕುಳಿತಿದ್ದ. ಅವರಲ್ಲೆಲ್ಲ ಅವನೇ ಹೆಚ್ಚು ಸ್ಫುರದ್ರೂಪಿ. ನತಾಷ ತನ್ನ ಪುಸ್ತಕದ ಮೇಲೆ ವಾಲಿದ್ದಂತೆಯೇ, ತನ್ನ ಹಣೆಯ ಇಬ್ಬದಿಗಳಿಗೂ ಜಾರಿಬೀಳುತ್ತಿದ್ದ ತಲೆಗೂದಲನ್ನು ಹಿಂದಕ್ಕೆ ಸರಿಸಿಕೊಳ್ಳುತ್ತಿದ್ದಳು. ತಲೆಯನ್ನು ತುಸು ಎತ್ತಿ, ಸ್ವರವನ್ನು ತಗ್ಗಿಸಿ, ಪುಸ್ತಕವನ್ನು ನೋಡದೆಯೇ, ತನ್ನ ಸುತ್ತಲಿನ ಮುಖಗಳೆಡೆಗೆ ಪ್ರೀತಿಯ ದೃಷ್ಟಿ ಹಾಯಿಸುತ್ತ, ತನ್ನದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದಳು. ಮೇಜಿನೊಂದು ಮೂಲೆಯಲ್ಲಿ ಕೈ ಊರಿಕೊಂಡು ಕುಳಿತಿದ್ದನು ಹೊಹೋಲ್. ತಾನು ಕೀಳುತ್ತಿದ್ದ ಮೀಸೆಯ ಕೊನೆಯನ್ನು ಕಾಣಲೆಂದು, ತನ್ನ ಮೂಗಿನ ನೇರಕ್ಕೆ ಎರಡು ಕಣ್ಣಿನ ದೃಷ್ಟಿಯನ್ನೂ ಕುಂಠಿಸಿ ನೋಡುತ್ತಿದ್ದನು. ನಿಕೊಲಾಯ್, ಕುರ್ಚಿಯ ಮೇಲೆ ನೇರವಾಗಿ ಬಡಿಗೆಯಂತೆ ಕುಳಿತಿದ್ದ. ಅವನ ಅಂಗೈಗಳು, ಮೊಣಕಾಲುಗಳ ಮೇಲೊತ್ತುತ್ತಿದ್ದುವು. ಸಿಡುಬಿನ ಕಲೆಯ ಹುಬ್ಬಿಲ್ಲದ, ತೆಳುದುಟಿಯ ಅವನ ಮುಖವು, ಒಂದು ಮುಖವಾಡದಂತೆ ನಿರ್ವಿಕಾರವಾಗಿತ್ತು. ಹೊಳೆಯುತ್ತಿದ್ದ ಹಿತ್ತಾಳೆಯ ಸಮೊವಾರದ ಮೇಲೆ ಕಾಣುತ್ತಿದ್ದ ತನ್ನ ಮುಖದ ಪ್ರತಿಬಿಂಬವನ್ನು ಸಣ್ಣ ಕಣ್ಣುಗಳಿಂದ ಎವೆಯಿಕ್ಕದೆ ಆತ ನೋಡುತ್ತಲೇ ಇದ್ದನು. ಅವನು ಉಸಿರಾಡುತ್ತಲೂ ಇರಲಿಲ್ಲವೇನೋ ಎನಿಸುತ್ತಿತ್ತು. ಎಳೆಯ ಫ್ಯೋದೊರ್ ಓದುತ್ತಿದ್ದುದನ್ನು ಕೇಳುತ್ತ ಕೇಳುತ್ತ ತನ್ನ ತುಟಿಗಳನ್ನು ಸದ್ದಿಲ್ಲದಂತೆ ಚಲಿಸುತ್ತಿದ್ದನು. ಪುಸ್ತಕದ ಶಬ್ದಗಳನ್ನಾತ ತನ್ನಷ್ಟಕ್ಕೆ ತಾನೇ ಪುನರುಚ್ಚರಿಸುತ್ತಿದ್ದಾನೇನೋ ಎನ್ನಿಸುತ್ತಿತ್ತು. ಅವನ ಗೆಳೆಯನು ಬಾಗಿ ಕುಳಿತು, ಮೊಣಕೈಗಳನ್ನು ಅಂಗೈಗಳ ಮೇಲಿಟ್ಟು, ತುಟಿಗಳ ಮೇಲೆ ವಿಚಾರಶೀಲತೆಯ ಮಂದಹಾಸವನ್ನು ಬೀರುತ್ತಿದ್ದನು. ಪಾವೆಲ್ ಜತೆಯಲ್ಲಿ ಬಂದಿದ್ದವನೊಬ್ಬನು ಕೆಂಪುತಲೆ – ಗುಂಗುರು ಕೂದಲಿನಾತ. ಅವನಿಗೆ ನಗುತ್ತಲಿದ್ದ ಹಸುರುಗಣ್ಣುಗಳಿದ್ದುವು. ಅವನು ಏನೋ ಹೇಳಬಯಸುವವನಂತೆ ಅವಿಶ್ರಾಂತವಾಗಿ ಮೈಯಾಡಿಸುತ್ತಿದ್ದನು. ಕೆಂಗೂದಲಿನ ಸಣ್ಣ ಕ್ರಾಪಿನ ಇನ್ನೊಬ್ಬ ತನ್ನ ಕೈಯಿಂದ ತಲೆ ಸವರಿಕೊಳ್ಳುತ್ತ ನೆಲವನ್ನೇ ದಿಟ್ಟಿಸಿ ನೋಡುತ್ತಿದ್ದುದರಿಂದ, ಅವನ ಮುಖವೇ ಕಾಣಿಸುತ್ತಿರಲಿಲ್ಲ. ಕೊಠಡಿಯ ವಾತಾವರಣ ಎಂದಿನಂತಿರದೆ ವಿಚಿತ್ರ ರೀತಿಯಲ್ಲಿ ಸುಂದರವಾಗಿತ್ತು. ಏನೋ ತೀರ ಅಪರಿಚಿತವಾದುದರ ಭಾವನೆಯಾಯಿತು ತಾಯಿಗೆ. ನತಾಷಳ ಸ್ವರದ ಹಿನ್ನಲೆಯಲ್ಲಿ ಆಕೆ ತನ್ನ ಯೌವನದ ದಿನಗಳನ್ನು ಸ್ಮರಿಸಿಕೊಂಡಳು. ಎಂಥ ಗದ್ದಲದ ಸಂಜೆಗಳು! ಉಸಿರೆಲ್ಲ ವೋಡ್ಕದಿಂದ ತುಂಬಿದ ಹುಡುಗರ ಒರಟು ಭಾಷೆಯೋ, ಒರಟು ನಗೆ ಮಾತುಗಳೋ – ಅದನ್ನೆಲ್ಲ ನೆನೆಸಿದಂತೆ ತನ್ನ ಬಗೆಗೆ ಕನಿಕರವೆನಿಸಿ ಹೃದಯ ಮುದುಡಿಕೊಂಡಿತು.

ತನಗೆ ಹೇಗೆ ವರ ನಿಶ್ಚಯವಾಯಿತೆಂಬುದು ಆಕೆಗೆ ನೆನಪಾಯಿತು. ಅಂಥದೊಂದು ಸಂಜೆ ಕೂಟದಲ್ಲಿ, ಕತ್ತಲೆ ತುಂಬಿದ್ದ ಒಂದು ಬಾಗಿಲ ಹಾದಿಯಲ್ಲಿ, ಅವನು ಆಕೆಯನ್ನು ತಡೆದು, ಅವಳ ಶರೀರವನ್ನು ಗೋಡೆಗೊತ್ತಿ ಹಿಡಿದಿದ್ದ.

ಆಗ ಗಡಸು ಧ್ವನಿಯಲ್ಲಿ ಆತ ಕೇಳಿದ್ದ:

"ನನ್ನ ಮದುವೆ ಮಾಡಿಕೋತಿಯಾ?"

ಆಕೆಯ ಮನಸ್ಸಿಗೆ ನೋವಾಯಿತು; ಸಿಟ್ಟುಬಂತು. ಅವನು ಆಕೆಯ ಎದೆಯ ಮೇಲೆ, ನೋಯುವಂತೆ ಕೈಯಾಡಿಸುತ್ತಲೇ ಇದ್ದ. ತನ್ನ ಹಬೆ ತುಂಬಿದ ಉಸಿರನ್ನು ಆಕೆಯ ಮುಖದ ಮೇಲೆ ಸುರಿಯುತ್ತಿದ್ದ. ಆತನ ಹಿಡಿತದಿಂದ ತಪ್ಪಿಸಿಕೊಳ್ಳುವ ಯತ್ನದಲ್ಲಿ ಅವಳು, ಒಂದು ಬದಿಗೆ ಸರಿದುಬಿಟ್ಟಿದ್ದಳು.

"ನೀನು! ಎಲ್ಲಿಗೆ ಹೋಗೋದು? ಮೊದಲು ಉತ್ತರ ಕೊಡು!" ಎಂದು ಆತ ಗರ್ಜಿಸಿದ್ದ.

ಆಕೆ ಏನೂ ಹೇಳಲಿಲ್ಲ. ನೋವಿನಿಂದಲೂ ಅವಮಾನದಿಂದಲೂ ಉಸಿರಾಡುವುದೇ ಕಷ್ಟವಾಗಿತ್ತು ಆಕೆಗೆ.

ಯಾರೋ ಅಲ್ಲೇ ಎದುರಿದ್ದ ಬಾಗಿಲನ್ನು ತೆರೆದರು. ಆತ ಮೆಲ್ಲನೆ ತನ್ನ ಹಿಡಿತವನ್ನು ಸಡಿಲಿಸಿದ.

"ಭಾನುವಾರ ದಿನ ಮಧ್ಯಸ್ಥಗಾರ್ತಿಯನ್ನು ಕಳಿಸ್ತೀನಿ," ಎಂದನು; ಹಾಗೆ ಕಳಿಸಿಯೂ ಕಳಿಸಿದ.

...ತಾಯಿ ಕಣ್ಣು ಮುಚ್ಚಿಕೊಂಡು ಆಳವಾದೊಂದು ನಿಟ್ಟುಸಿರುಬಿಟ್ಟಳು....

"ಜನರು ಜೀವಿಸಬೇಕಾದ್ದು ಹೇಗೆ ಎಂದು ತಿಳಿಸಿ. ಹಿಂದೆ ಯಾವ ರೀತಿ ಜೀವಿಸುತ್ತಿದ್ದರೆಂಬುದನ್ನು ತಿಳಿಯಲು ನಾನಪೇಕ್ಷಿಸುವುದಿಲ್ಲ," ಎಂದು ನಿಕೊಲಾಯ್‌ನ ಅತೃಪ್ತಿಸೂಚಕ ಸ್ವರ ಕೇಳಿಸಿತು.

"ಅದು ಸರಿಯಾದ ಮಾತು," ಎಂದು ಕೆಂಪು ತಲೆಯಾತ ಎದ್ದೇಳುತ್ತ ಹೇಳಿದ.

"ನಿನ್ನ ಮಾತನ್ನೊಪ್ಪೋದಿಲ್ಲ ನಾನು," ಎಂದು ಫ್ಯೋದೊರ್ ಕೂಗಿದ.

ಚರ್ಚೆ ಪ್ರಾರಂಭವಾಯಿತು. ಮಾತುಗಳು ಉರಿಯ ಕೆನ್ನಾಲಗೆಗಳಂತೆ ಭುಗಿಲ್ಲೆಂದುವು. ಯಾಕೆ ಕೂಗಾಟವೆಂಬುದು ವಿಷಯವೇನೆಂದು ತಾಯಿಗೆ ಗೊತ್ತಾಗಲಿಲ್ಲ. ಮುಖಗಳೆಲ್ಲವನ್ನೂ ಉದ್ರೇಕ ಛಾಯೆ ಆವರಿಸಿತ್ತು. ಆದರೂ ಯಾರೂ ಸಿಟ್ಟಿಗೇಳಲಿಲ್ಲ. ಆಕೆಗೆ ಚೆನ್ನಾಗಿ ಪರಿಚಿತವಾಗಿದ್ದ ಒರಟು ಪದಗಳನ್ನು ಯಾರೂ ಉಪಯೋಗಿಸಲಿಲ್ಲ.

"ಆ ಹುಡುಗಿಯ ಮುಂದೆ ಜಗಳವಾಡಲು ಅವರಿಗೆ ನಾಚಿಕೆಯಾಗುತ್ತಿರಬೇಕು," ಎಂದು ಆಕೆ ತೀರ್ಮಾನಿಸಿದಳು.

ನತಾಷಳ ಮುಖದ ಮೇಲಿದ್ದ ಗಂಭೀರ ಚಹರೆ ತಾಯಿಗೆ ಮೆಚ್ಚುಗೆಯಾಯಿತು. ಪ್ರತಿಯೊಬ್ಬರನ್ನೂ ನತಾಷ ಗಮನಿಸಿ, ಈ ಹುಡುಗರೆಲ್ಲ ಬರೇ ಮಕ್ಕಳು ಎಂಬಂತೆ ನೋಡುತ್ತಿದ್ದಳು.

"ಸಂಗಾತಿಗಳೇ! ಸ್ವಲ್ಪ ಸಾವಧಾನ!" ಎಂದಾಕೆ ಒಮ್ಮೆಲೆ ಗಟ್ಟಿಯಾಗಿ ಹೇಳಿದಳು. ಅವರೆಲ್ಲರೂ ಶಾಂತರಾಗಿ ಆಕೆಯತ್ತ ನೋಡಿದರು.

"ಎಲ್ಲವನ್ನೂ ತಿಳಿಯಬೇಕೆಂದು ಹೇಳುವುದೇ ಸರಿ. ನಾವು ನಮ್ಮಲ್ಲೇ ವಿಚಾರದ

ದೀಪವನ್ನು ಬೆಳಗಬೇಕು. ತಿಳಿವಳಿಕೆಯಿಲ್ಲದ ಮನಸ್ಸನ್ನು ಕತ್ತಲು ಆವರಿಸಿದವರಿಗಾಗಿ, ಆ ದೀಪ ಬೆಳಗಬೇಕು. ಪ್ರತಿಯೊಂದು ವಿಷಯಕ್ಕೂ ನಿಜವಾದ ಪ್ರಾಮಾಣಿಕವಾದ ಉತ್ತರ ನಮಗೆ ದೊರೆಯಲೇಬೇಕು. ಪೂರ್ಣ ಸತ್ಯವನ್ನೂ ಪೂರ್ಣ ಮಿಥ್ಯವನ್ನೂ ನಾವು ತಿಳಿದುಕೊಳ್ಳಲೇ ಬೇಕು...."

ಆಕೆಯ ಮಾತಿನ ತಾಳಕ್ಕೆ ತಲೆಯಾಡಿಸುತ್ತಾ ಹೊಹೋಲ್ ಕಿವಿಗೊಟ್ಟು ಕೇಳಿದ. ನಿಕೊಲಾಯ್ ಮತ್ತು ಕೆಂಪು ತಲೆಯಾತ ಹಾಗೂ ಪಾವೆಲ್ ಜೊತೆಯಲ್ಲಿ ಬಂದಿದ್ದ ಕಾರಖಾನೆಯ ಹುಡುಗರಲ್ಲೊಬ್ಬ, ಒಂದು ಗುಂಪಾಗಿ ಪ್ರತ್ಯೇಕವಿದ್ದರು. ತಾಯಿಗೆ ಅವರ ನಡತೆ ಅದೇಕೋ ಹಿಡಿಸಲಿಲ್ಲ.

ನತಾಷ ಮಾತು ಮುಗಿಸಿದ ಮೇಲೆ ಪಾವೆಲ್ ಎದ್ದು ನಿಂತ.

"ನಮಗೆ ಬೇಕಾದ್ದೇನು? ತುಂಬಿದ ಹೊಟ್ಟೆ ಮಾತ್ರವೊ? ಖಂಡಿತ ಅಲ್ಲ!" ಎಂದು ಆತ ಶಾಂತವಾಗಿ, ಆ ಮೂವರನ್ನು ನೋಡುತ್ತ, ಹೇಳಿದ. "ನಮ್ಮ ಬೆನ್ನ ಮೇಲೆ ಹೊರೆ ಹೇರಿ ಕಣ್ಣಿಗೆ ಪರದೆ ಹಾಕಿರುವವರಿಗೆ, ನಾವು ತೋರಿಸಿಕೊಡಲೇ ಬೇಕು – ನಮಗೆ ಪ್ರತಿಯೊಂದೂ ಕಾಣಿಸುತ್ತೆ, ಎಂದು. ನಾವು ಮೂರ್ಖರಲ್ಲ. ತುಂಬಿದ ಹೊಟ್ಟೆಗಾಗಿ ಮಾತ್ರ ಆಸೆಪಡೋಕೆ ನಾವೇನೂ ಮೃಗಗಳಲ್ಲ. ಮಾನವರಿಗೆ ಯೋಗ್ಯ ವಾದ ಬಾಳ್ವೆ ನಡೆಸೋದು ನಮಗೆ ಬೇಕಾಗಿದೆ. ನಮ್ಮ ವೈರಿಗಳು ಕಷ್ಟದ ದುಡಿಮೆಯ ಹೊರೆ ನಮ್ಮ ಮೇಲೆ ಹೊರಿಸಿದರೇನಂತೆ? ಬೌದ್ಧಿಕವಾಗಿ ಅವರ ಸಮಾನರಾಗೋಕೆ, ಅವರನ್ನು ಮೀರಿಸೋಕೆ ಕೂಡಾ ಅದರಿಂದೇನೂ ತಡೆ ಇಲ್ಲಾಂತ ನಾವು ಅವರಿಗೆ ಸಿದ್ಧಮಾಡಿ ತೋರಿಸಿಕೊಡಬೇಕು!"

ಮಗನ ಮಾತಿಗೆ ಕಿವಿಗೊಡುತ್ತ, ಅಭಿಮಾನದ ಭಾವನೆಯೊಂದು ತಾಯಿಯ ಎದೆಯಲ್ಲಿ ಕಂಪಿಸಿತು. ಎಷ್ಟು ಚೆನ್ನಾಗಿ ಅವನು ಮಾತಾಡಿದ!

ಹೊಹೋಲನೆಂದ:

"ಸಾಕಷ್ಟು ತಿನ್ನೋಕೆ ಸಿಗುವವರು ಬೇಕಾದಷ್ಟು ಜನರಿದ್ದಾರೆ. ಆದರೆ ಪ್ರಾಮಾ ಣಿಕರಾದವರು ಮಾತ್ರ ಬಹಳ ಕಡಮೆ. ಸಹೃದಯ ಮಾನವೀಯಸೋದರತಾ ಭಾವ ನೆಯಿರುವ ರಾಜ್ಯದೆಡೆಗೆ, ಈ ಕೊಳಕು ಜೀವನದ ಕೆಸರಿನ ಮೇಲೆ, ನಾವು ಸೇತುವೆ ಕಟ್ಟಬೇಕು. ಸಂಗಾತಿಗಳೇ! ಅದೇ ನಮ್ಮೆದುರಿಗಿರುವ ಕಾರ್ಯಭಾರ."

ನಿಕೊಲಾಯ್ ಗಡಸು ಧ್ವನಿಯಲ್ಲಿ ತನ್ನ ವಿರೋಧವನ್ನು ವ್ಯಕ್ತಪಡಿಸಿದ:

"ಹೋರಾಟದ ಸಮಯ ಬಂದಿರೋವಾಗ ಕೈಕಟ್ಟಿ ಕೂತಿರೋದ್ಯಾಕೆ?..."

...ಕೂಟ ಚೆದರಿದಾಗ ನಡುರಾತ್ರೆ ಕಳೆದಿತ್ತು. ಮೊದಲು ಹೊರಟವರು ನಿಕೊ ಲಾಯ್ ಮತ್ತು ಕೆಂಪು ತಲೆಯಾತ. ಇದೂ ಕೂಡ ತಾಯಿಗೆ ಸರಿಬರಲಿಲ್ಲ.

ಅವರನ್ನು ಅಸಂತೋಷದಿಂದ ಬೀಳ್ಕೊಡುತ್ತಾ ವಂದಿಸುತ್ತ, "ಎಷ್ಟೊಂದು ಅವಸರ ನಿಮಗೆ!" ಎಂದಾಕೆ ಯೋಚಿಸಿಕೊಂಡಳು.

"ಮನೆತನಕ ಜತೇಲಿ ಬರ್ತೀಯಾ, ನಹೋದ್ಕ?" ಎಂದು ನತಾಷ ಕೇಳಿದಳು.

"ಬರದೆ ಉಂಟೆ?" ಎಂದು ಹೊಹೋಲ್ ಉತ್ತರವಿತ್ತ.

ಅಡುಗೆ ಮನೆಯಲ್ಲಿ ನತಾಷ ಮೇಲುಡುಪು ಧರಿಸುತಿದ್ದಾಗ ತಾಯಿ, "ಈ ಹವೆಗೆ ನಿಮ್ಮ ಕಾಲುಚೀಲ ತೀರ ತೆಳ್ಳಗಾಯ್ತು. ಉಣ್ಣೇದು ಒಂದು ಜೊತೆ ನಾನು ಹೆಣೆದುಕೊಡಲಾ?" ಎಂದು ಕೇಳಿದಳು.

"ಧನ್ಯವಾದ, ಪೆಲಗೇಯ ನೀಲೊವ್ನ," ಎಂದಳು ನತಾಷ. "ಉಣ್ಣೆಯವು ಚುಚ್ಚುತ್ತವೆ," ಎಂದಳಾಕೆ ನಗುತ್ತ.

"ಚುಚ್ಚದಂಥಾದ್ದನ್ನೇ ಹೆಣೇತೀನಿ," ಎಂದಳು ತಾಯಿ.

ಅರೆಮುಚ್ಚಿದ ಕಣ್ಣುಗಳಿಂದ ನತಾಷ ಆಕೆಯನ್ನು ನೋಡಿದಳು. ನೇರವಾದ ಆ ನೋಟದಿಂದ ತಾಯಿಗೆ ತಬ್ಬಿಬ್ಬಾಯಿತು.

"ನನ್ನ ಅವಿವೇಕಕ್ಕೆ ಕೋಪಿಸ್ಕೋಬೇಡಮ್ಮ. ಏನೋ ಮನಸ್ಸಿಗೆ ಅನಿಸ್ತು— ಹೇಳಿದೆ," ಎಂದು ತಾಯಿ ಶಾಂತಳಾಗಿ ನುಡಿದಳು.

ಉದ್ವಿಗ್ನತೆಯಿಂದ ಕೈ ಹಿಡಿಯುತ್ತ, ತಾಯಿಯಷ್ಟೇ ಶಾಂತಸ್ವರದಲ್ಲಿ "ಎಂಥ ಮುದ್ದು ತಾಯಿಯಮ್ಮ ನೀವು!" ಎಂದು ನತಾಷ ಉತ್ತರವಿತ್ತಳು.

"ನಮಸ್ಕಾರ, ಅವ್ವಾ! ಬರ್ತೀನಿ," ಎಂದ ಹೊಹೋಲ್, ತಾಯಿಯನ್ನು ದಿಟ್ಟಿಸಿ ನೋಡುತ್ತ, ನತಾಷಳನ್ನು ಹಿಂಬಾಲಿಸಿಕೊಂಡು ಬಾಗಿಲಿನಿಂದ ಹೊರಕ್ಕೆ ನಡೆದನು.

ತಾಯಿ ಮಗನತ್ತ ನೋಡಿದಳು. ಆತ ಬಾಗಿಲ ಬಳಿ ನಿಂತು ಮುಗುಳ್ನಗುತ್ತಿದ್ದ.

ಅಸಮಾಧಾನದಿಂದ ಆಕೆ, "ಯಾಕೆ ನಗ್ತಿರೋದು?" ಎಂದು ಕೇಳಿದಳು.

"ಹೀಗೇ ಸುಮ್ಮನೆ, ಒಳ್ಳೆಯ ಗುಂಗಿನಲ್ಲಿದ್ದೀನಿ. ಅಷ್ಟೆ."

"ನಾನು ಮುದುಕಿಯಿರಬಹುದು. ಅವಿವೇಕಿ ಇರಬಹುದು. ಆದರೆ ಚೆನ್ನಾಗಿ ರೋದನ್ನ ಮೆಚ್ಕೋಕೆ ನನಗೆ ಕೂಡಾ ತಿಳಿಯುತ್ತೆ," ಎಂದು ಆಕೆ ಸ್ವಲ್ಪ ಮುನಿಸಿ ನಿಂದಲೇ ಹೇಳಿದಳು.

"ಭೇಷ್," ಎಂದ ಪಾವೆಲ್. "ತುಂಬ ಹೊತ್ತಾಯಿತಮ್ಮ, ನೀನಿನ್ನು ಮಲಗು."

"ಇಗೋ, ಹೊರಟೆ."

ಮೇಜಿನ ಮೇಲಿದ್ದ ತಟ್ಟೆ ಬಟ್ಟಲುಗಳನ್ನು ಎತ್ತಿಡಲು ತಾಯಿ ಓಡಾಡಿದಳು. ಆಕೆಗೆ ಸಂತೋಷವಾಗಿತ್ತು; ತುಂಬಾ ಸಂತೋಷವಾಗಿತ್ತು. ಆ ಅನುಭವದಲ್ಲೆ ಮೈಯೆಲ್ಲ ಬೆವತಿತ್ತು ಆಕೆಗೆ. ಎಲ್ಲವೂ ಸೊಗಸಾಗಿ ಶಾಂತವಾಗಿ ಮುಕ್ತಾಯವಾದದ್ದನ್ನು ಕಂಡು ಆಕೆಗೆ ಆನಂದವಾಗಿತ್ತು.

ತಾಯಿಯೆಂದಳು:

"ಈ ರೀತಿ ಇವರನ್ನೆಲ್ಲ ಕರೆದುದು ಒಳ್ಳೇದಾಯಿತು, ಪಾಷ. ಹೊಹೋಲ್ ಬಹಳ ಒಳ್ಳೆಯವನು. ಆ ಹುಡುಗಿ ಎಷ್ಟೊಂದು ಚೂಟಿಯಾಗಿದ್ದಾಳೆ. ಯಾರು ಆಕೆ?"

"ಉಪಾಧ್ಯಾಯಿನಿ," ಎಂದು ಸ್ವಲ್ಪದರಲ್ಲಿಯೇ, ಶತಪಥ ತುಳಿಯುತ್ತಾ, ಅವನು ಉತ್ತರ ಕೊಟ್ಟ.

"ತುಂಬ ಬಡವಳಿರಬೇಕು. ಉಡುಪು ಏನೂ ಚೆನ್ನಾಗಿಲ್ಲ. ಈ ಚಳಿಯಿಂದ ಅವಳಿಗೆ ನೆಗಡಿಯಾಗಬಹುದು. ಅವಳ ತಂದೆತಾಯಿ ಎಲ್ಲಿದ್ದಾರೆ?"

"ಮಾಸ್ಕೋದಲ್ಲಿ," ಎಂದ ಪಾವೆಲ್. ಆಮೇಲೆ ತನ್ನ ತಾಯಿಯ ಮುಂದೆ ನಿಂತು ಮೆಲ್ಲನೆ ಬಲು ಗಂಭೀರವಾಗಿ ಆತ ಹೇಳಿದ:

"ಆಕೆಯ ತಂದೆ ಶ್ರೀಮಂತ. ಕಬ್ಬಿಣದ ವ್ಯಾಪಾರಿ. ಅನೇಕ ಕಟ್ಟಡಗಳ ಮಾಲೀಕ. ಆದರೆ ಜೀವನದ ಈ ಹಾದಿಯನ್ನು ಆಕೆ ಆಯ್ದುಕೊಂಡದ್ದರಿಂದ, ಆತ ಅವಳನ್ನು ಹೊರಹಾಕಿದ. ಇವಳು ಬೆಚ್ಚಗೆ ಸುಖದಲ್ಲಿ ಬೆಳೆದವಳು. ಬೇಕಾದುದೆಲ್ಲ ಅವಳಿಗೆ ಸಿಗ್ತಿತ್ತು. ಆದರೆ ಈಗ ರಾತ್ರಿಯ ಹೊತ್ತು ಒಬ್ಬಳೇ ಐದು ಮೈಲಿ ನಡೀತಾಳೆ...."

ಈ ಸುದ್ದಿ ಕೇಳಿ ತಾಯಿಯ ಕಂಠ ಉಮ್ಮಳಿಸಿ ಬಂತು. ಹುಬ್ಬನ್ನಲುಗಿಸುತ್ತ, ಮಗನನ್ನು ನೋಡುತ್ತ, ಕೊಠಡಿಯ ಮಧ್ಯದಲ್ಲೆ ಆಕೆ ನಿಂತಳು. ಆಮೇಲೆ ಶಾಂತವಾಗಿ ಕೇಳಿದಳು:

"ಆಕೆ ಶಹರಕ್ಕೆ ಹೋದಳೆ ಈಗ?"

"ಹೌದು."

"ಛೆ ಛೆ – ಹೆದರಿಕೇನೂ ಇಲ್ಲವೆ?"

"ನೀನೇ ನೋಡ್ತಿದೀಯಲ್ಲಾ. ಹೆದರಿಕೆ ಎಲ್ಲಿಂದ ಬಂತು ಅವಳಿಗೆ?" ಎಂದು ಪಾವೆಲ್ ನಕ್ಕು ನುಡಿದ.

"ಯಾಕೆ? ರಾತ್ರೆ ಇಲ್ಲೇ ನನ್ನ ಜೊತೆಯಲ್ಲೇ ಮಲಗಬಹುದಾಗಿತ್ತಲ್ಲ?"

"ಅದಾಗದು. ಬೆಳಿಗ್ಗೆ ಆಕೆ ಇಲ್ಲಿರೋದನ್ನ ಯಾರಾದರೂ ನೋಡಬಹುದು. ಇದು ನಮಗೆ ಬೇಕಿಲ್ಲ."

ತಾಯಿ ವಿಚಾರಮಗ್ನಳಾಗಿ ಕಿಟಕಿಯಿಂದ ಹೊರನೋಡಿದಳು.

"ಪಾವೆಲ್! ಇದರಲ್ಲೆಲ್ಲಾ ಅಪಾಯ, ನಿಷೇಧ ಎಂಥಾದ್ದು? ಅದೇ ನನಗೆ ಗೊತ್ತಾಗ್ತಾ ಇಲ್ಲ. ನೀವೇನೂ ತಪ್ಪು ಮಾಡ್ತಾ ಇಲ್ವಲ್ಲ?" ಎಂದು ತಾಯಿ ಮೆಲ್ಲನೆ ಕೇಳಿದಳು.

ಆ ಬಗ್ಗೆ ಆಕೆಗಿನ್ನೂ ಸ್ಪಷ್ಟವಾಗಿರಲಿಲ್ಲ. ಅಪಾಯವಿಲ್ಲ ಎಂಬ ಅವಳ ನಂಬಿಕೆಗೆ ಮಗನಿಂದ ಪುಷ್ಟೀಕರಣ ಬೇಕಾಗಿತ್ತು.

ಆಕೆಯ ಕಣ್ಣಲ್ಲಿ ಕಣ್ಣಿಟ್ಟು ಮೃದುವಾಗಿ ನೋಡುತ್ತ ದೃಢವಾಗಿ ಆತ ಉತ್ತರ ವಿತ್ತ:

"ನಾವೇನೂ ತಪ್ಪು ಮಾಡ್ತಾ ಇಲ್ಲ. ಆದರೂ ಒಂದಲ್ಲ ಒಂದು ದಿನ ಸೆರೆಮನೆ ವಾಸ ನಮಗೆ ಕಟ್ಟಿಟ್ಟದ್ದೇ. ಇದು ನಿನಗೆ ಗೊತ್ತಿರಬೇಕಮ್ಮ."

ಆಕೆಯ ಕೈಗಳು ಕಂಪಿಸಿದುವು.

"ದೇವರ ದಯದಿಂದ – ಒಂದು ವೇಳೆ – ನೀನು ಪಾರಾಗಲೂಬಹುದು, ಅಲ್ಲವೆ?" ಎಂದು ಪಿಸುಸ್ವರದಲ್ಲಿ ತಾಯಿ ಕೇಳಿದಳು.

ಮೃದುವಾಗಿಯೇ ಮಗನು ಉತ್ತರವಿತ್ತ:

"ಇಲ್ಲವಮ್ಮ. ಸುಳ್ಳು ಯಾಕೆ ಹೇಳಲಿ? ತಪ್ಪಿಸಿಕೊಳ್ಳೋದು ಸಾಧ್ಯವೇ ಇಲ್ಲ."

ಆತ ಮುಗುಳ್ನಕ್ಕ.

"ಈಗ ನಿದ್ದೆ ಮಾಡಮ್ಮ. ಆಯಾಸವಾಗಿದೆ ನಿನಗೆ. ಹೋಗಿ ಮಲಕೋ."

ಒಬ್ಬಳೇ ಉಳಿದಾಗ ಆಕೆ ಕಿಟಕಿಯ ಬಳಿ ಹೋಗಿ ಹೊರಕ್ಕೆ ನೋಡುತ್ತ ನಿಂತಳು. ಹೊರಗಡೆ ತುಂಬ ಚಳಿಯಾಗಿತ್ತು; ಮೋಡ ಮುಸುಕಿತ್ತು. ನಿದ್ದೆ ಹೋಗುತ್ತಿದ್ದ ಆ ಪುಟ್ಟ ಮನೆಗಳ ಮಾಡುಗಳ ಮೇಲಿಂದ ಮಂಜನ್ನು, ಗಾಳಿಯೊಂದು ಬೀಸಿ ಹಾರಿ ಸುತ್ತಿತ್ತು. ಗಾಳಿ, ಗೋಡೆಗೆದಿರಾಗಿ ಬೀಸುತ್ತ ಝುಯ್ಯೆಂದು ನೆಲಕ್ಕಿಳಿದಾಗ ಸಿಟ್ಟಿನಿಂದ ಪಿಸುಗುಟ್ಟುತ್ತಿತ್ತು. ಒಣಗಿದ ಮಂಜಿನ ತುಣುಕುಗಳ ಮೋಡಗಳನ್ನು ಬೀದಿಯುದ್ದಕ್ಕೂ ಓಡಿಸಿಕೊಂಡು ಹೋಗುತ್ತಿತ್ತು.

"ಪ್ರಿಯ ಏಸು! ನಮ್ಮ ಮೇಲೆ ಕರುಣೆ ಇಡು," ಎಂದು ತಾಯಿ ಮೆಲುದನಿಯಲ್ಲಿ ನುಡಿದಳು.

ಹೃದಯದೊಳಗಿಂದ ಉಕ್ಕೇರಿ ಬಂತು ಕಣ್ಣೀರು. ಮಗನು, ಶಾಂತವಾದ ಆತ್ಮವಿಶ್ವಾಸದಿಂದ, ಬರಲಿರುವ ಅಪಾಯದ ಬಗೆಗೆ ಮಾತಾಡಿದ್ದ. ಆ ನಿರೀಕ್ಷೆ ಹೃದಯದಲ್ಲಿ ತೊಯ್ದಾಡಿತು – ರಾತ್ರೆ ಹೊತ್ತು ಪತಂಗ ಕುರುಡಾಗಿ ಪಟಪಟಿಸಿದ ಹಾಗೆ. ಹಿಮಾಚ್ಛಾದಿತ ಬಯಲೊಂದು ತನ್ನೆದುರು ಹರಡಿದ್ದಂತೆ ಆಕೆಗೆ ಭಾಸವಾಗುತ್ತಿತ್ತು. ಅದರಡ್ಡವಾಗಿ ಬಿಳಿಯ ಹರಕು ಗಾಳಿಯೊಂದು, ಕೀರಲು ಧ್ವನಿ ಹೊರಡಿಸುತ್ತಾ, ಧಾವಿಸಿ ಬೀಸುತ್ತಿದ್ದ ಹಾಗೆ ಕಾಣಿಸುತ್ತಿತ್ತು. ಬಯಲಿನ ಮಧ್ಯದಲ್ಲಿ ಹುಡುಗಿಯೊಬ್ಬಳ ಸಣ್ಣ ಕರಿಯ ಆಕೃತಿ ಎಡವುತ್ತ ಸಾಗಿತ್ತು. ಗಾಳಿ ಅವಳ ಪಾದಗಳ ಸುತ್ತೂ ಸುಳಿದಾಡುತ್ತಿತ್ತು, – ಆಕೆಯ ಲಂಗವನ್ನು ಹಾರಿಸುತ್ತಾ, ಕೊರೆಯುವ ಹಿಮಕಣಗಳನ್ನು ಅವಳ ಮುಖಕ್ಕೆ ಎರಚುತ್ತಾ. ಬಲು ಕಷ್ಟದಿಂದ ಆಕೆ ನಡೆಯುತ್ತಿದ್ದಳು. ಕಿರಿಯ ಪಾದಗಳು ಮಂಜಿನಲ್ಲಿ ಹೂತುಹೋಗುತ್ತಿದ್ದುವು. ಎಲ್ಲವೂ ಶೀತಲವಾಗಿತ್ತು, ಭಯಾನಕವಾಗಿತ್ತು. ಶರತ್ಕಾಲದ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಬಾಗಿದ ಏಕಾಂಗಿಯಾದ ಹುಲ್ಲಿನ ಗರಿಯಂತೆ ಅವಳ ಶರೀರವು ಬಿಲ್ಲಿನಂತೆ ಮುಂದಕ್ಕೆ ವಾಲಿತ್ತು. ಆಕೆಯ ಬಲಗಡೆ ಕೆಸರಿನ ಮೇಲೆ, ಕಪ್ಪು ಗೋಡೆ ರೂಪದಲ್ಲಿ ಅಡವಿ ಎದ್ದಿತ್ತು. ಅಲ್ಲಿ ತೆಳ್ಳನೆಯ "ಬರ್ಚ್" ಮರಗಳೂ ಮೈ ಬಿಟ್ಟ "ಆಸ್ಪೆನ್" ಮರಗಳೂ ತಬ್ಬಲಿಗಳಂತೆ ಪಿಸುಗುಟ್ಟುತಿದ್ದುವು. ಬಲು ಮುಂದಕ್ಕೆ ದೂರದಲ್ಲಿ ಶಹರದ ದೀಪಗಳು ಮಿನುಗುತ್ತಿದ್ದುವು.

"ಪ್ರೀತಿಯ ರಕ್ಷಕ, ದೇವರೇ, ಕರುಣೆ ಇಡು," ಎಂದು ತಾಯಿ ಭೀತಿಯಿಂದ ನಡುಗುತ್ತ ತನ್ನಷ್ಟಕ್ಕೆ ಅಂದಳು.

೭

ಜಪಸರದ ಮಣಿಗಳಂತೆ ದಿನಗಳು ಒಂದರಮೇಲೊಂದಾಗಿ ಉರುಳಿದುವು. ವಾರಗಳಾದುವು; ಮಾಸಗಳಾದುವು. ಪ್ರತಿ ಶನಿವಾರವೂ ಪಾವೆಲ್‌ನ ಗೆಳೆಯರು ಅವನ ಮನೆಯಲ್ಲಿ ಸೇರುತ್ತಿದ್ದರು. ಪ್ರತಿಯೊಂದು ಕೂಟವೂ ಮುಂದಿಟ್ಟ ಒಂದು ಹೆಜ್ಜೆಯಾಗಿತ್ತು; ಯಾವುದೋ ಎತ್ತರದ ದೂರದ ಗುರಿಯನ್ನು ಸೇರಲೆಂದು ಜನರು, ದೀರ್ಘ ಏಣಿಯ ಮೇಲೇರುತ್ತ ಅತಿಕ್ರಮಿಸಿದ ಇನ್ನೊಂದು ಮೆಟ್ಟಲಾಗಿತ್ತು.

ಮೊದಲು ಇದ್ದವರಲ್ಲದೆ ಹೊಸಬರೂ ಬರತೊಡಗಿದರು. ವ್ಲಾಸೊವ್‌ರ ಮನೆಯ ಆ ಚಿಕ್ಕ ಕೊಠಡಿಯಲ್ಲಿ ಸ್ಥಳವೇ ಸಾಲುತ್ತಿರಲಿಲ್ಲ. ನತಾಷ ಚಳಿಯಿಂದ ಬಳಲಿ ಬರುತ್ತಿದ್ದಳು, ಆದರೆ ಯಾವಾಗಲೂ ಹರ್ಷಚಿತ್ತಳಾಗಿರುತ್ತಿದ್ದಳು. ಪಾವೆಲ್‌ನ ತಾಯಿ ಆಕೆಗೋಸ್ಕರ ಒಂದು ಜೊತೆ ಕಾಲುಚೀಲಗಳನ್ನು ಹೆಣೆದಳು. ತಾನೇ ಸ್ವತಃ ಅವುಗಳನ್ನು ಆ ಹುಡುಗಿಯ ಪುಟ್ಟ ಪಾದಗಳಿಗೆ ತೊಡಿಸಿದಳು. ಮೊದಲು ನತಾಷಳಿಗೆ ನಗು ಬಂತು. ಆದರೆ ಒಮ್ಮೆಲೆ ಆಕೆ ಶಾಂತಳಾಗಿ, ಗಂಭೀರಳಾದಳು. ಅವಳು ಮೆಲ್ಲನೆ ಹೇಳಿದಳು:

"ನನಗೊಮ್ಮೆ ಒಬ್ಬ ದಾದಿಯಿದ್ದಳು. ಅತ್ಯಂತ ದಯಾಮಯಿ. ಎಷ್ಟೊಂದು ವಿಚಿತ್ರ, ಪೆಲಗೇಯ ನೀಲೊವ್ನ! ಇಷ್ಟೆಲ್ಲ ಕಷ್ಟ ಅನ್ಯಾಯ ಅನುಭವಿಸುವ ಬಾಳು ಕೂಲಿಕಾರರದು. ಆದರೂ ಇವರು ಶ್ರೀಮಂತರಿಗಿಂತ ಎಷ್ಟೊಂದು ಹೆಚ್ಚು ದಯಾಳುಗಳು...."

ಶ್ರೀಮಂತರಿಗಿಂತ ಎಂದಾಗ ಆಕೆ ತನ್ನಿಂದ ದೂರದ, ಬಲು ದೂರದ ಜನರತ್ತ ಬೊಟ್ಟು ಮಾಡಿದಳು.

"ನೀನಾದರೂ ಎಂಥವಳು! ತಂದೆ ತಾಯಿಗಳ ಆರೈಕೆ ಇಲ್ಲದೆ...." ಎಂದಳು ತಾಯಿ. ಹಾಗೆ ಹೇಳಿ ನಿಟ್ಟುಸಿರುಬಿಟ್ಟು ಸುಮ್ಮನಾದಳು. ಮನಸ್ಸಿನ ವಿಚಾರಗಳನ್ನು ವ್ಯಕ್ತಪಡಿಸಲು ಆಕೆಗೆ ಸಾಧ್ಯವಾಗಲಿಲ್ಲ. ಅವಳು ನತಾಷಳ ಮುಖವನ್ನೇ ನೋಡಿದಳು. ಅನಿರ್ದಿಷ್ಟವಾದ ಯಾವುದಕ್ಕಾಗಿಯೋ ಕೃತಜ್ಞತೆಯ ಭಾವನೆಯ ಅನುಭವ, ಆಕೆಗಾಯಿತು. ನೆಲದ ಮೇಲೆ ಆ ಹುಡುಗಿಯ ಮುಂದೆ ತಾಯಿ ಕುಳಿತಳು. ಏನೋ ವಿಚಾರಮಾಡುತ್ತ ಮುಗುಳ್ನಗುತ್ತ ತಲೆ ಮುಂದಕ್ಕೆ ಬಾಗಿಸಿ ಕುಳಿತಿದ್ದಳು ನತಾಷ.

"ತಂದೆ ತಾಯಿಗಳ ಆರೈಕೆ ಇಲ್ಲದೆ...." ಎಂದು ನತಾಷ ತಾಯಿಯು ಹೇಳಿದ ಮಾತನ್ನೇ ತಾನೂ ಮತ್ತೆ ಹೇಳಿದಳು. "ಅದು ಮಹತ್ವದ್ದಲ್ಲ. ನಮ್ಮಪ್ಪ ಒರಟು ಮನುಷ್ಯ. ನನ್ನಣ್ಣನೂ ಅಷ್ಟೆ. ಸಾಲದ್ದಕ್ಕೆ ಕುಡುಕ ಬೇರೆ. ನನ್ನ ಅಕ್ಕನಿಗೂ ಸುಖವಿಲ್ಲ. ತನಗಿಂತ ಬಹಳ ವಯಸ್ಸಾದವನೊಡನೆ ಅವಳ ಮದುವೆಯಾಯ್ತು. ಆತ ತುಂಬಾ ಧನಿಕ. ಆದರೆ ನೀಚ ಮತ್ತು ಲೋಭಿ. ತಾಯಿಯನ್ನು ನೆನೆಸಿಕೊಂಡರೆ ನನಗೆ ಕನಿಕರವಾಗುತ್ತೆ. ನಿಮ್ಮ ಹಾಗೆಯೇ ಅವಳೂ ಸರಳ ಹೆಂಗಸು. ಸುಂಡಿಲಿಯ ಹಾಗೆ, ಅಷ್ಟೇ

ವೇಗದ ಓಟ, ಅಷ್ಟೇ ಹೆದರಿಕೆ – ಯಾವುದನ್ನು ಕಂಡರೂ. ಒಮ್ಮೊಮ್ಮೆ ಅಮ್ಮನ್ನ ನೋಡಬೇಕೂಂತ ಎಷ್ಟೊಂದು ಆಸೆಯಾಗ್ತದೆ ಗೊತ್ತೆ?"

"ಅಯ್ಯೋ ಪಾಪ! ಎಂಥ ನಿರ್ಭಾಗ್ಯೆ!" ಎಂದು ತಾಯಿ ದುಃಖದಿಂದ ತಲೆ ಬಗ್ಗಿಸುತ್ತ ನುಡಿದಳು.

ಅರೆಕ್ಷಣದಲ್ಲೇ ಹುಡುಗಿ ತಲೆಯನ್ನು ಹಿಂದಕ್ಕೆ ಸೆಳೆದುಕೊಂಡು, ಯಾವುದನ್ನೋ ದೂರಕ್ಕೆ ಸರಿಸುವಂತೆ ಕೈಯನ್ನು ಮುಂದಕ್ಕೆ ಚಾಚಿದಳು. ಆಕೆಯೆಂದಳು:

"ಇಲ್ಲವಮ್ಮ, ಇಲ್ಲ! ಒಮ್ಮೊಮ್ಮೆ ಎಷ್ಟೊಂದು ಸಂತೋಷವಾಗುತ್ತೆ – ಎಷ್ಟೊಂದು ಸಂತೋಷ!"

ಅವಳ ಮುಖ ವಿವರ್ಣವಾಯಿತು. ನೀಲಿಗಣ್ಣುಗಳು ಮಿಂಚಿದುವು. ಕೈಗಳನ್ನು ತಾಯಿಯ ಭುಜಗಳ ಮೇಲೆ ಆಕೆ ಇರಿಸಿದಳು.

"ನಾವು ಎಂಥ ಮಹಾ ಕೆಲಸ ಮಾಡ್ತಿದೇವೆಂತ ನಿಮಗೆ ಗೊತ್ತಾದರೆ, ನೀವು ತಿಳಿದುಕೊಳ್ಳೋದು ಸಾಧ್ಯವಾದರೆ!" ಎಂದಾಕೆ ಮೃದುವಾಗಿ ಹೃದಯ ಮುಟ್ಟುವ ಹಾಗೆ ಹೇಳಿದಳು.

ಅಸೂಯೆಗೆ ಸಮೀಪವಾದಂಥ ಅನುಭವವಾಯಿತು ಪೆಲಗೇಯ ವ್ಲಾಸೊವಳಿಗೆ.

"ಅದೆಲ್ಲ ತಿಳಿಯಲು ನಾನು ತುಂಬ ಮುದುಕಿ. ಓದು ಬರಹ ಗೊತ್ತಿಲ್ಲದವಳು..." ಎಂದು, ನೆಲದಿಂದ ಮೇಲೇಳುತ್ತ, ದುಃಖದಿಂದ ಅವಳು ಹೇಳಿದಳು.

...ಪಾವೆಲ್ ಪದೇ ಪದೇ ಹೆಚ್ಚು ಹೊತ್ತಿನವರೆಗೆ ಹೆಚ್ಚು ಉತ್ಸಾಹದಿಂದ ಮಾತನಾಡುತ್ತಿದ್ದ, ಚರ್ಚಿಸುತ್ತಿದ್ದ. ದಿನೇ ದಿನೇ ತೆಳ್ಳಗಾಗುತ್ತಿದ್ದ. ಆತ ನತಾಷಳತ್ತ ನೋಡಿದಾಗ, ಆಕೆಯೊಡನೆ ಮಾತಾಡಿದಾಗ, ಆತನ ದೃಷ್ಟಿಯ ತೀಕ್ಷ್ಣತೆ ಮೃದುವಾದಂತೆ, ಸ್ವರ ಹೆಚ್ಚು ನಯಗೊಂಡಂತೆ, ಅವನ ವರ್ತನೆಯೇ ಸರಳಗೊಂಡಂತೆ, ತಾಯಿಗೆ ಭಾಸವಾಗುತ್ತಿತ್ತು.

ಅದನ್ನು ಕಂಡು ಏನನ್ನೋ ಯೋಚಿಸುತ್ತ ತಾಯಿ, "ದೇವರ ದಯದಿಂದ ಹಾಗೆಯೇ ಆಗಲಿ," ಎಂದುಕೊಂಡಳು; ಹಾಗೆನ್ನುತ್ತ ನಸುನಕ್ಕಳು.

ಕೂಟಗಳಲ್ಲಿ ವಾದ ವಿವಾದ ಬಿಸಿಯಾಗಿ ಬಿರುಸಾದಾಗಲೆಲ್ಲ, ಹೊಹೋಲ್ ಎದ್ದು, ಹಿಂದಕ್ಕೂ ಮುಂದಕ್ಕೂ ದೇಹವನ್ನು ತೂಗಾಡಿಸುತ್ತಾ, ನಯವಾದ ಸರಳವಾದ ಕೆಲ ಮಾತುಗಳನ್ನಾಡಿ ಎಲ್ಲರನ್ನೂ ಶಾಂತಗೊಳಿಸುತ್ತಿದ್ದನು. ಸಿಡುಕನಾದ ನಿಕೊಲಾಯ್ ಯಾವಾಗಲೂ ಇತರರನ್ನು, ಏನನ್ನಾದರೊಂದು ಮಾಡಿರೆಂದು ಪ್ರೇರೇಪಿಸುತ್ತಲೇ ಇದ್ದನು. ಅವನೂ ಕೆಂಗೂದಲಿನ ತಲೆಯುವನಾದ ಸಮೋಯ್‌ಲೊವ್ ಎಲ್ಲ ವಿವಾದಗಳನ್ನು ಪ್ರಾರಂಭಿಸುತ್ತಿದ್ದರು. ಕ್ಷಾರಜಲದಲ್ಲಿ ತೊಳೆಯಲ್ಪಟ್ಟವನಂತಿದ್ದ ಗುಂಡು ತಲೆಯ ಇವಾನ್ ಬೂಕಿನ್, ಅವರಿಗೆ ಬೆಂಬಲವಾಗಿರುತ್ತಿದ್ದನು. ನಯವಾಗಿ ಚೊಕ್ಕಟವಾಗಿದ್ದ ಯಾಕೊವ್ ಸೋಮೊವ್ ಸ್ವಲ್ಪವೇ ಮಾತಾಡುತಿದ್ದ. ಆದರೆ ಮಾತಾಡಿದ್ದೆಲ್ಲ ಗಂಭೀರವಾಗಿರುತ್ತಿತ್ತು. ಅವನೂ ವಿಶಾಲ ಹಣೆಯ ಫ್ಯೋದೊರ್

ಮಾಜಿನ್‌ನೂ ವಿವಾದಗಳಲ್ಲಿ ಯಾವಾಗಲೂ ಪಾವೆಲ್ ಮತ್ತು ಹೊಹೋಲ್‌ರಿಗೆ ಬೆಂಬಲ ನೀಡುತ್ತಿದ್ದರು.

ಒಮ್ಮೊಮ್ಮೆ ನತಾಷಳ ಬದಲು ಓದುವ ಕೆಲಸವನ್ನು ನಿಕೊಲಾಯ್ ಇವಾನೊವಿಚ್ ಮಾಡುತ್ತಿದ್ದ. ಆತ ಕನ್ನಡಕಗಳನ್ನು ಧರಿಸುತ್ತಿದ್ದ. ಚಿಂಗೂದಲಿನ ಸಣ್ಣ ಹೋತದ ಗಡ್ಡವಿತ್ತು ಅವನಿಗೆ. ಆತ ಯಾವುದೋ ದೂರದ ಪ್ರಾಂತದಲ್ಲಿ ಹುಟ್ಟಿದವನು. ಆದ್ದರಿಂದಲೇ ಆತನ ಮಾತಿನಲ್ಲಿ "ಓ" ಕಾರಕ್ಕೆ ಒಂದು ವಿಚಿತ್ರ ಉಚ್ಚಾರವಿರುತ್ತಿತ್ತು. ಒಟ್ಟಿನಲ್ಲಿ ಆತನೊಬ್ಬ ವಿಶಿಷ್ಟ ವ್ಯಕ್ತಿಯಾಗಿದ್ದ. ಅವನು ಅತ್ಯಂತ ಸರಳ ವಿಷಯಗಳ ಬಗೆಗೆ, – ಕುಟುಂಬ ಜೀವನ, ಮಕ್ಕಳು, ವ್ಯಾಪಾರ, ಪೋಲೀಸರು, ಬ್ರೆಡ್ ಹಾಗೂ ಮಾಂಸದ ಬೆಲೆ, ಮುಂತಾದ ಜನ ಸಾಮಾನ್ಯರ ದಿನನಿತ್ಯದ ಜೀವನಕ್ಕೆ ಸಂಬಂಧಿಸಿದ ವಿಷಯಗಳ ಬಗೆಗೆ, ಮಾತಾಡುತ್ತಿದ್ದ. ವಿಷಯಗಳು ಸರಳವಾಗಿದ್ದರೂ ಕಪಟವಾದ, ಅಸಂಬದ್ಧವಾದ, ಅವಿವೇಕದ, ತೀರ ಹಾಸ್ಯಾಸ್ಪದವಾದ – ಸದಾ ಜನತೆಗೆ ಅಪ್ರಯೋಜನಕಾರಿಯಾದ – ಎಲ್ಲವನ್ನೂ ಆತ ಬಯಲಿಗೆಳೆಯುತ್ತಿದ್ದ. ಅವನು ಬಲು ದೂರದಿಂದ ಬಂದ ಹಾಗೆ, ಜನರು ಸುಲಭವಾದ ಪ್ರಾಮಾಣಿಕವಾದ ಜೀವನ ನಡೆಸುತ್ತಿರುವ ಒಂದು ರಾಜ್ಯದಿಂದ ಬಂದ ಹಾಗೆ, ತಾಯಿಗೆ ಭಾಸವಾಗುತ್ತಿತ್ತು. ತಾಯಿ ತಿಳಿದುಕೊಂಡಂತೆ, ಇಲ್ಲಿ ಪ್ರತಿಯೊಂದೂ ಅವನಿಗೆ ವಿಚಿತ್ರವಾಗಿ ತೋರುತ್ತಿತ್ತು. ಈ ಜೀವನಕ್ಕೆ ಹೊಂದಿಕೊಂಡು, ಇದು ಅನಿವಾರ್ಯವೆಂದು ಒಪ್ಪಿಕೊಳ್ಳುವುದು, ಆತನಿಗೆ ಅಸಾಧ್ಯವಾಗಿತ್ತು. ಈ ಜೀವನದ ಬಗೆಗೆ ಅವನಿಗೆ ತಿರಸ್ಕಾರವಿತ್ತು. ಆ ತಿರಸ್ಕಾರದ ಫಲವಾಗಿಯೇ, ಪರಿಸ್ಥಿತಿಯನ್ನು ಬದಲಾಯಿಸಬೇಕೆಂಬ ಶಾಂತವಾದ ನಿರಂತರವಾದ ಬಯಕೆ ಆತನಲ್ಲಿ ಹುಟ್ಟಿತ್ತೇನೊ ಎಂದು ತಾಯಿಗನಿಸಿತು. ಆತನದು ಹೊಂಬಣ್ಣದ ಮುಖ. ಕಣ್ಣುಗಳ ಸುತ್ತಲೂ ಸುಂದರವಾದ ಸುಕ್ಕುಗಳಿದ್ದುವು. ಮೃದುವಾದ ಸ್ವರ. ಕೈಗಳು ಯವಾಗಲೂ ಬೆಚ್ಚಗಿರುತ್ತಿದ್ದುವು. ಆತ ಪೆಲಗೇಯ ವ್ಲಾಸೊವಳ ಕೈಯನ್ನು ಕುಲುಕಿದಾಗಲೆಲ್ಲ, ತನ್ನ ಬೆರಳುಗಳ ನಡುವೆ ಆಕೆಯ ಕೈಯನ್ನು ಪೂರ್ತಿಯಾಗಿ ಬಿಗಿಹಿಡಿಯುತ್ತಿದ್ದನು. ಈ ರೀತಿಯ ಅಭಿವಂದನೆಯಿಂದ ಆಕೆಗೆ ಯಾವಾಗಲೂ ಮನಸ್ಸಿಗೆ ಶಾಂತಿ ದೊರೆಯುತ್ತಿತ್ತು, ಸಮಾಧಾನವೆನಿಸುತ್ತಿತ್ತು.

ಈ ಕೂಟಗಳಿಗೆ ಶಹರದಿಂದ ಇತರ ಜನರೂ ಬರತೊಡಗಿದರು. ಅನೇಕ ಸಾರಿ, ಎತ್ತರವಾದ ತೆಳ್ಳನೆಯ ಹುಡುಗಿಯೊಬ್ಬಳು ಬರುತ್ತಿದ್ದಳು. ಹೆಸರು ಸಾಷ. ಕಳೆಗುಂದಿದ ಆ ಮುಖದಲ್ಲಿ ವಿಶಾಲ ನೇತ್ರಗಳಿದ್ದುವು. ಆಕೆಯ ನಡಿಗೆಯಲ್ಲೂ ಚಲನೆಯಲ್ಲೂ ಒಂದು ಬಗೆಯ ಗಂಡುತನವಿದ್ದಿತು. ತಾನು ಮಾತಾಡಿದಾಗಲೆಲ್ಲ ಆಕೆ, ತನ್ನ ದಪ್ಪನೆಯ ಕಪ್ಪನೆಯ ಹುಬ್ಬುಗಳನ್ನು ಕಟುವಾಗಿ ಆಡಿಸುತ್ತಿದ್ದಳು. ಆಕೆಯ ನೇರವಾದ ಮೂಗಿನ ತೆಳ್ಳನೆಯ ಹೊಳ್ಳೆಗಳು ನಡುಗುತ್ತಿದ್ದುವು.

"ನಾವು ಸಮಾಜವಾದಿಗಳು, " ಎಂದು ತನ್ನ ಕೀರಲು ಧ್ವನಿಯಲ್ಲಿ ಮೊದಲ ಬಾರಿ ಸಾರಿದವಳು ಆಕೆ.

ಈ ಮಾತನ್ನು ಕೇಳಿದಾಗ ತಾಯಿ, ಮೌನ ಭಯದಿಂದ ಹುಡುಗಿಯನ್ನೆ ದಿಟ್ಟಿಸಿದಳು. ರಷ್ಯದ ಚಕ್ರವರ್ತಿ ಜಾರನನ್ನು ಸಮಾಜವಾದಿಗಳು ಕೊಂದರೆಂದು ಅವಳು ಕೇಳಿದ್ದಳು. ಅದು ನಡೆದುದು ಆಕೆಯ ಯೌವನ ದಿನಗಳಲ್ಲಿ. ತಮ್ಮ ರೈತರಿಗೆ ಸ್ವಾತಂತ್ರ್ಯವನ್ನು ಕೊಡಿಸಿದ್ದಕ್ಕಾಗಿ ಜಮೀನ್ದಾರರು ಜಾರನ (ಚಕ್ರವರ್ತಿಯ) ಮೇಲೆ ಕ್ರುದ್ಧರಾಗಿದ್ದರಂತೆ; ಪ್ರತೀಕಾರ ಮಾಡಹೋದರಂತೆ; ಅವನನ್ನು ಕೊಲ್ಲುವವರೆಗೂ ತಮ್ಮ ತಲೆಗೂದಲು ಕತ್ತರಿಸುವುದಿಲ್ಲವೆಂದು ಪ್ರತಿಜ್ಞೆ ಮಾಡಿದರಂತೆ; ಅದಕ್ಕಾಗಿ ಅವರನ್ನು ಸಮಾಜವಾದಿಗಳೆಂದು ಕರೆಯಲಾಯಿತಂತೆ; – ಎಂದೆಲ್ಲ ತಾಯಿ ಕೇಳಿದ್ದಳು. ಈಗ ತನ್ನ ಮಗನೂ ಆತನ ಗೆಳೆಯರೂ ತಮ್ಮನ್ನು ಸಮಾಜವಾದಿಗಳೆಂದು ಯಾಕೆ ಕರೆದುಕೊಳ್ಳುತ್ತಿದ್ದಾರೆಂಬುದು ಪೆಲಗೇಯಗೆ ಅರ್ಥವಾಗಲಿಲ್ಲ.

ಎಲ್ಲರೂ ತಂತಮ್ಮ ಮನೆಗಳಿಗೆ ಹೊರಟು ಹೋದಮೇಲೆ ಆಕೆ ಪಾವೆಲ್‌ನ ಸಮೀಪಕ್ಕೆ ಬಂದಳು.

"ನೀನು ಸಮಾಜವಾದಿಯೆ, ಪಾಷ?" ಎಂದು ಕೇಳಿದಳು.

ಬಲಶಾಲಿಯಂತೆ ನೇರವಾಗಿ ತಾಯಿಯ ಎದುರು ನಿಂತಿದ್ದ ಆತ, "ಹೌದು, ಯಾಕೆ ಕೇಳಿದೆ?" ಎಂದ.

ತಾಯಿ ಆಳವಾದ ನಿಟ್ಟುಸಿರು ಬಿಟ್ಟು, ದೃಷ್ಟಿ ತಗ್ಗಿಸಿದಳು.

"ನಿಜವೆ, ಪಾವೆಲ್? ಆದರೆ ಅವರು ಜಾರನ ವಿರೋಧಿಗಳು. ಒಬ್ಬ ಜಾರನನ್ನು ಕೂಡಾ ಕೊಂದರು."

ತನ್ನ ಕೈಯಿಂದ ಕೆನ್ನೆಯನ್ನು ಸವರುತ್ತ ಪಾವೆಲ್ ಅತ್ತಿತ್ತ ನಡೆದ.

"ನಾವೇನೂ ಹಾಗೆ ಮಾಡಬೇಕಾದ್ದಿಲ್ಲ," ಎಂದ ನಸುನಗುತ್ತ.

ಆಮೇಲೆ ಆತ ಬಲು ಹೊತ್ತು ಶಾಂತವಾದ ಗಂಭೀರವಾದ ಸ್ವರದಲ್ಲಿ ಆಕೆಗೆ ಏನೇನೊ ಹೇಳಿದ. ಅವನ ಮುಖವನ್ನು ನೋಡುತ್ತ ಆಕೆ ಯೋಚಿಸಿದಳು:

"ಇಲ್ಲ, ಇವನೇನೂ ತಪ್ಪುಮಾಡಲಾರ – ಮಾಡೋದು ಸಾಧ್ಯವೇ ಇಲ್ಲ!"

ಆಮೇಲೂ ಆ ಘೋರ ಪದವನ್ನು ಪದೇ ಪದೇ ಆಕೆ ಕೇಳಿದಳು. ಕೇಳಿ ಕೇಳಿ ಅದರ ತೀಕ್ಷ್ಣತೆ ಮೊಂಡಾಯಿತು. ಅರ್ಥವಾಗದ ಇತರ ಎಷ್ಟೋ ಪದಗಳಂತೆ ಅದು ಕೂಡಾ ಆಕೆಯ ಕಿವಿಗೆ ರೂಢಿಯಾಗಿ ಹೋಯಿತು. ಆದರೆ ಸಾಷಳನ್ನು ಕಂಡರೆ ಆಕೆಗೆ ಸರಿಬೀಳುತ್ತಿರಲಿಲ್ಲ. ಅವಳು ಎದುರಿಗಿದ್ದಾಗ ತಾಯಿಯ ಹೃದಯ ತಳಮಳಿಸಿ ಅಸಮಾಧಾನವೆನಿಸುತ್ತಿತ್ತು.

ಒಂದು ದಿನ, ಅತೃಪ್ತಿ ಸೂಚಿಸುತ್ತ ತುಟಿಯನ್ನು ಬಿಗಿಹಿಡಿದು, ಸಾಷಳ ಕುರಿತು ತಾಯಿ ಹೊಹೋಲ್‌ನೊಡನೆ ಮಾತಾಡಿದಳು.

"ಆಕೇದು ಎಷ್ಟೊಂದು ಕಟ್ಟುನಿಟ್ಟು! ಎಲ್ಲರಿಗೂ ಆಜ್ಞೆ ಕೊಡೋದೇ – ಅದು ಮಾಡು, ಇದು ಮಾಡೂಂತ."

ಹೊಹೋಲ್ ಗೊಳ್ಳೆಂದು ನಕ್ಕುಬಿಟ್ಟ.

"ಸರಿ ಹೇಳಿದೆಯಪ್ಪಾ. ಸರಿಯಾದ ಪೊಡೆತ ಕೊಟ್ಟೆ. ಕೇಳಿದಿಯಾ, ಪಾವೆಲ್?"

ತಾಯಿಯನ್ನು ನೋಡಿ ತುಂಟ ನಗೆಯಿಂದ ಕಣ್ಣು ಮಿಟಕಿಸುತ್ತಾ, ಹೊಹೋಲ್ "ಹೊರಬಿತ್ತು ಶ್ರೀಮಂತಿಕೆಯ ಬಣ್ಣ!" ಎಂದ.

"ಆಕೆ ಒಳ್ಳೆಯವಳು," ನೀರಸವಾಗಿ ಪಾವೆಲ್ ಎಂದ.

"ಹೌದಪ್ಪಾ," ಎಂದು ಹೊಹೋಲ್ ತಲೆಯಾಡಿಸಿದ; "ಆದರೆ ಒಂದು ವಿಷಯ ಆಕೆಗೆ ಗೊತ್ತೇ ಇಲ್ಲ. ನಾವು 'ಮಾಡಲು ಆಶಿಸುತ್ತೇವೆ' ಅಂತೇವೆ. 'ಮಾಡ ಬಲ್ಲೆವು' ಅಂತೇವೆ. ಅವಳು ಮಾತ್ರ ಪ್ರತಿಯೊಂದೂ 'ಆಗಲೇಬೇಕು!'" ಎನ್ನುತ್ತಾಳೆ.

ಆಮೇಲೆ ಚರ್ಚೆಗೆ ಶುರು. ತಾಯಿಯ ಪಾಲಿಗೆ ಅದು ಗ್ರಹಿಸಲಾಗದ ವಿಷಯ.

ಪಾವೆಲ್‌ನ ವಿಷಯವಾಗಿ ಸಾಷ ಅತಿ ಹೆಚ್ಚು ಕಟ್ಟುನಿಟ್ಟಾಗಿದ್ದುದನ್ನೂ ಒಮ್ಮೊಮ್ಮೆ ಅವನೊಡನೆ ಕಟುವಾಗಿ ಮಾತಾಡುತ್ತಿದ್ದುದನ್ನೂ ತಾಯಿ ಕಂಡಳು. ಅಂಥ ಸಂದರ್ಭಗಳಲ್ಲಿ ಪಾವೆಲ್ ಸುಮ್ಮನಿರುತ್ತಿದ್ದ. ನಕ್ಕು, ಹಿಂದೆ ನತಾಷಳನ್ನು ನೋಡುತ್ತಿದ್ದ ರೀತಿಯಲ್ಲೇ, ಆಕೆಯ ಮುಖವನ್ನು ಮೃದುವಾಗಿ ದಿಟ್ಟಿಸುತ್ತಿದ್ದ. ಇದು ಕೂಡಾ ತಾಯಿಗೆ ಸರಿಬೀಳಲಿಲ್ಲ.

ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಅವರೆಲ್ಲ ಸಂತೋಷದಿಂದ ಹುಚ್ಚರಾಗುತ್ತಿದ್ದುದನ್ನು ಕಂಡು ತಾಯಿಗೆ ಆಶ್ಚರ್ಯವೆನಿಸುತ್ತಿತ್ತು. ವಿದೇಶಗಳಲ್ಲಿ ಕೂಲಿಕಾರರ ಚಳವಳಿ ಯನ್ನು ಕುರಿತು ವೃತ್ತಪತ್ರಿಕೆಗಳಲ್ಲಿ ಓದಿದ ಸಂಜೆಗಳಲ್ಲೆಲ್ಲಾ ಸಾಮಾನ್ಯವಾಗಿ ಹಾಗಾ ಗುತ್ತಿತ್ತು. ಆಗ ಅವರೆಲ್ಲರ ಕಣ್ಣುಗಳು ಸಂತೋಷದಿಂದ ಚಕಚಕಿಸುತ್ತಿದ್ದುವು. ಆಗ ವಿಚಿತ್ರ ರೀತಿಯಲ್ಲಿ ಚಿಕ್ಕಮಕ್ಕಳ ಹಾಗೆ ಅವರು ಆನಂದಿತರಾಗುತ್ತಿದ್ದರು. ತಿಳಿಯಾದ ಶುಭ್ರವಾದ ನಗೆ ಹೊರಸೂಸುತ್ತಿತ್ತು. ಆತ್ಮೀಯತೆಯಿಂದ ಒಬ್ಬರ ಬೆನ್ನನ್ನೊಬ್ಬರು ತಟ್ಟುತ್ತಿದ್ದರು.

ಆನಂದದಿಂದ ಅಮಲೇರಿದ ಹಾಗೆ ಅವರಲ್ಲಿ ಯಾವನಾದರೊಬ್ಬ, "ನಮ್ಮ ಜರ್ಮನ್ ಸಂಗಾತಿಗಳಿಗೆ ಜಯವಾಗಲಿ!" ಎನ್ನುತ್ತಿದ್ದ.

ಇನ್ನೊಮ್ಮೆ ಅವರೆಲ್ಲ, "ಇಟಲಿಯ ಶ್ರಮಿಕರಿಗೆ ಚಿರಾಯು!" ಎಂದು ಕೂಗುತ್ತಿದ್ದರು.

ಹೀಗೆ ಬಲು ದೂರದ ಮಿತ್ರರಿಗೆ ಕೇಳಿಸುವಂತೆ ಇವರು ಘೋಷಿ ಸುತ್ತಿದ್ದರು. ಅವರಿಗಾದರೋ ಇವರ ಪರಿಚಯವಿಲ್ಲ; ಭಾಷೆಯೂ ಅರ್ಥವಾಗದು. ಆದರೂ ಅಪರಿಚಿತ ಜನರಿಗೆ ತಮ್ಮ ಘೋಷಣೆ ಕೇಳಿಸಿಯೇ ಕೇಳಿಸುವುದು, ತಮ್ಮ ಆನಂದ ಅರ್ಥವಾಗಿಯೇ ಆಗುವುದು, ಎಂಬ ಆತ್ಮವಿಶ್ವಾಸವಿತ್ತು ಇವರಿಗೆ.

ಹೊಹೋಲ್ ಅಂಥ ಒಂದು ಸಂಜೆ ಪ್ರೀತಿಯಿಂದ ಎಲ್ಲರನ್ನೂ ದಿಟ್ಟಿಸಿ ಹೀಗೆ ಹೇಳಿದ:

"ನಾವೇಕೆ ಅವರಿಗೆ ಬರೆಯಬಾರದು? ಒಂದೇ ಧರ್ಮವನ್ನು ನಂಬಿ ಪ್ರಚಾರ ಮಾಡುವವರೂ ಅದೇ ಉದ್ದೇಶವಿಟ್ಟುಕೊಂಡು ಬದುಕಿರುವವರೂ ಅವರ ವಿಜ

ಯದ ಸಂತೋಷದಲ್ಲಿ ಪಾಲುದಾರರೂ ಆದ ಸ್ನೇಹಿತರು, ಇಲ್ಲಿ, ರಷ್ಯದಲ್ಲಿ, ಇದ್ದಾರೆ ಅನ್ನೋದು, ಅವರಿಗೆ ಗೊತ್ತಾಗಬೇಕು."

ಫ್ರಾನ್ಸಿನ, ಇಂಗ್ಲೆಂಡಿನ, ಸ್ವೀಡನ್ನಿನ ಕಾರ್ಮಿಕರ ಬಗೆಗೆ, ಅವರು ತಮ್ಮ ಮಿತ್ರ ರೆಂಬಂತೆ, ತಮ್ಮ ಆತ್ಮೀಯರೆಂಬಂತೆ, ತಮ್ಮ ಗೌರವಕ್ಕೆ ಪಾತ್ರರೆಂಬಂತೆ, ಅವರ ಸುಖ ದುಃಖಗಳಲ್ಲಿ ತಾವೂ ಪಾಲುದಾರರೆಂಬಂತೆ, ಮುಗುಳ್ನಗುತ್ತ ಮಾತಾಡುತ್ತಿದ್ದರು.

ಏನೇನೂ ಜಾಗವಿಲ್ಲದ ಹಾಗೆ ಜನ ತುಂಬಿದ್ದ ಆ ಕೊಠಡಿಯಲ್ಲಿ ವಿಶ್ವದ ಎಲ್ಲ ಕಾರ್ಮಿಕರೊಡನೆ ಆತ್ಮೀಯ ಬಾಂಧವ್ಯದ ಭಾವನೆ ಉದಯವಾಯಿತು. ಆ ಭಾವನೆ ತಾಯಿಯನ್ನೂ ಆವರಿಸಿತು. ಅವರೆಲ್ಲರನ್ನೂ ಒಂದು ಹಿರಿಯ ಚೇತನವಾಗಿ ಒಂದಾಗಿ ಬೆಸೆಯಿತು. ಆಕೆಯ ಪಾಲಿಗೆ ಅದು ಅರ್ಥವಾಗದೇ ಉಳಿಯಿತು ನಿಜ. ಆದರೆ ಆ ಭಾವನೆ, ತನ್ನ ಮಾದಕವಾದ ಎಳೆಯ ಶಕ್ತಿಯಿಂದ, ಆನಂದ ಆಕಾಂಕ್ಷೆಗಳಿಂದ ಆಕೆ ಯಲ್ಲಿ ಚೈತನ್ಯ ತುಂಬಿತು.

ಒಮ್ಮೆ ಆಕೆ ಹೊಹೋಲ್‌ಗೆ ಹೀಗೆಂದಳು:

"ಎಂಥವರಪ್ಪ ನೀವು! ಯೆಹೂದ್ಯರು, ಅರ್ಮೀನಿಯದವರು, ಆಸ್ಟ್ರಿಯ ದವರು – ಎಲ್ಲ ಜನರೂ ನಿಮ್ಮ ಸಂಗಾತಿಗಳೇ. ಅವರೆಲ್ಲರಿಗಾಗಿ ಸುಖ ದುಃಖದ ಅನುಕಂಪವಿದೆ ನಿಮ್ಮಲ್ಲಿ!"

"ಹೌದವ್ವಾ, ಅವರೆಲ್ಲರಿಗಾಗಿ, ಎಲ್ಲರಿಗಾಗಿ!" ಎಂದು ಹೊಹೋಲ್ ಉದ್ಗ ರಿಸಿದ. "ನಮಗೆ ಪಂಗಡಗಳ ಹಾಗೂ ರಾಷ್ಟ್ರಗಳ ಭೇದವಿಲ್ಲ. ಇರುವವರು, ಸಂಗಾತಿ ಗಳು ಮತ್ತು ವೈರಿಗಳು ಮಾತ್ರ. ಎಲ್ಲ ಶ್ರಮಿಕರೂ ನಮ್ಮ ಸಂಗಾತಿಗಳು. ಎಲ್ಲ ಶ್ರೀಮಂತರೂ, ಎಲ್ಲ ಸರಕಾರಗಳೂ ನಮ್ಮ ವೈರಿಗಳು. ಪ್ರಪಂಚದತ್ತ ಕಣ್ತೆರೆದು ನೋಡು. ನಾವು ಎಷ್ಟೊಂದು ಜನ ಶ್ರಮಿಕರಿದ್ದೇವೆ; ಎಷ್ಟೊಂದು ಬಲಿಷ್ಠರಾಗಿ ದ್ದೇವೆ; ಇದು ತಿಳಿದಾಗ ನಮ್ಮ ಸಂತೋಷಕ್ಕೂ ಹೃದಯದ ಸಂಭ್ರಮಕ್ಕೂ ಕೊನೆಯೇ ಇಲ್ಲ. ನಿತ್ಯಜೀವನದಲ್ಲಿ ಫ್ರೆಂಚರಿಗೂ ಜರ್ಮನರಿಗೂ ಒಂದೇ ರೀತಿಯ ಭಾವನೆ ಯಾಗುತ್ತದವ್ವಾ. ಇಟಾಲಿಯನ್ನರಿಗೂ ಅಷ್ಟೆ. ನಾವೆಲ್ಲಾ ಒಂದೇ ತಾಯಿಯ ಮಕ್ಕಳು. ಪ್ರಪಂಚದ ಶ್ರಮಿಕ ಸೋದರತ್ವದ ಅಜೇಯ ಕಲ್ಪನೆಯ ಅಂಶಗಳು. ಈ ವಿಚಾರ ದಿಂದಲೇ ನಮ್ಮ ಹೃದಯ ಅರಳೋದು. ನ್ಯಾಯವಿರುವ ಆಕಾಶದಲ್ಲಿ ಬೆಳಗುವ ಸೂರ್ಯನಿದ್ದ ಹಾಗೆ. ಆ ಸ್ವರ್ಗವಿರೋದು ಕೂಲಿಕಾರರ ಹೃದಯದಲ್ಲಿ. ಅವರು ಯಾರೇ ಇರಲಿ, ತಮ್ಮನ್ನು ಏನೆಂದು ಬೇಕಾದರೂ ಕರಕೊಳ್ಳಲಿ, ಎಲ್ಲ ಕಾಲದವರೆಗೂ – ನಿನ್ನೆ, ಇವತ್ತು ಮತ್ತೆ ಮುಂದೆ ಎಂದೆಂದಿಗೂ – ಸಮಾಜವಾದಿಗಳು ನಮ್ಮ ಮಾನವ ಸೋದರರು!"

ಶಿಶು ಸದೃಶವಾದರೂ ದೃಢವಾದ ಆ ನಂಬುಗೆ, ಮತ್ತಷ್ಟು ಹೆಚ್ಚು ಉನ್ನತ ರೂಪದಲ್ಲಿ, ಬಲಿಷ್ಠ ಶಕ್ತಿಯಾಗಿ ಬೆಳೆಯುತ್ತ, ಆಗಾಗ್ಗೆ ಕಾಣಿಸಿಕೊಳ್ಳುತ್ತಿತ್ತು. ಇದನ್ನು ಕಂಡಾಗ ತನ್ನೆದುರಿಗಿದ್ದ ಸೂರ್ಯನಂತೆಯೇ, ಹಿರಿದಾದ ಒಳಿತಾದ ಯಾವುದೋ

ಒಂದು, ನಿಜವಾಗಿಯೂ ಈ ಪ್ರಪಂಚದಲ್ಲಿ ಉದಯಿಸಿದೆ ಎಂದು, ತಾಯಿ ಸ್ವಯಂ ಪ್ರೇರಣೆಯಿಂದಲೇ ಊಹಿಸಿಕೊಂಡಳು.

ಆಗಾಗ ಅವರು ಹಾಡುತ್ತಿದ್ದರು. ಸರ್ವವಿದಿತ ಸಾಮಾನ್ಯ ಗೀತೆಗಳನ್ನು ಹಾಡುತ್ತಿದ್ದರು. ಒಮ್ಮೊಮ್ಮೆ ಹೊಸ ಹಾಡುಗಳು ಕೇಳಿ ಬರುತ್ತಿದ್ದವು. ಗಂಭೀರವಾದ ಆ ಹಾಡುಗಳಿಗೆ ಸುಮಧುರವಾದ ಅಸಾಧಾರಣವಾದ ರಾಗಗಳಿರುತ್ತಿದ್ದುವು. ಈ ಹಾಡುಗಳನ್ನು, ಚರ್ಚಿನ ಸಂಗೀತದಂತೆ ಉಚ್ಚ ಧ್ವನಿಯಲ್ಲಿ ಹಾಡುತ್ತಿದ್ದರು. ಹಾಡುತ್ತಿದ್ದವರ ಮುಖಗಳು ಆಗ ಅರಳುತ್ತಿದ್ದುವು; ಬಾಡುತ್ತಿದ್ದುವು. ಪ್ರತಿಧ್ವನಿತವಾದ ಶಬ್ದಗಳಲ್ಲಿ ಪ್ರಬಲ ಶಕ್ತಿ ವ್ಯಕ್ತವಾಗುತ್ತಿತ್ತು.

ಹೊಸ ಹಾಡುಗಳಲ್ಲೊಂದು ಮುಖ್ಯವಾಗಿ ತಾಯಿಯ ಮನಸ್ಸನ್ನು ಕಲಕಿತು. ಅದು, ಸಂದೇಹ ಮತ್ತು ಅನಿಶ್ಚಯತೆಯ ತೊಡಕಿನಲ್ಲಿ ಒಂಟಿಯಾಗಿ ಅಲೆದಾಡುವ, ನೊಂದ ಆತ್ಮದ, ವ್ಯಸನಕರವಾದ ಚಿಂತನೆಗಳ, ಸ್ವರವಾಗಿರಲಿಲ್ಲ. ಅವಶ್ಯತೆಯ ಭಾರದಿಂದ ಪುಡಿಯಾದ, ಭೀತಿಯಿಂದ ಕಲ್ಲಾದ, ಉತ್ಸಾಹ ವ್ಯಕ್ತಿತ್ವಗಳಿಗೇ ಕೊಡಲಿ ಏಟು ಬಿದ್ದ, ಪ್ರಾಣಿಗಳ ಮೊರೆಯನ್ನೂ ಅದು ಪ್ರತಿಬಿಂಬಿಸಲಿಲ್ಲ. ಅದು, ಕಣ್ಣು ಕಾಣದೆ ಕತ್ತಲಲ್ಲಿ ಜಾಗಕ್ಕಾಗಿ ತಡವರಿಸುವ ಶಕ್ತಿಗಳ ನೋವಿನ ನಿಟ್ಟುಸಿರಾಗಿರಲಿಲ್ಲ. ಅಥವಾ, ಒಳಿತಿನ ಮೇಲಾಗಲೀ ಕೆಡುಕಿನ ಮೇಲಾಗಲೀ, ಸಮಾನವಾಗಿ ಹರಿಹಾಯುವಂತಹ ದುಡುಕು ಧೈರ್ಯದ ಆಹ್ವಾನದ ಕರೆಯಾಗಿರಲಿಲ್ಲ. ಪ್ರತಿಯೊಂದನ್ನೂ ಧ್ವಂಸಮಾಡಬಲ್ಲ, ಯಾವುದನ್ನೂ ನಿರ್ಮಿಸಲಾರದಂಥ, ನೋವಿನ ಹಾಗೂ ಪ್ರತೀಕಾರದ ಗೊತ್ತುಗುರಿಯಿಲ್ಲದ ಭಾವನೆಯನ್ನು ಅದು ವ್ಯಕ್ತಪಡಿಸಲಿಲ್ಲ. ಹಳೆಯ ದಾಸ್ಯ ಜಗತ್ತು ಕುರಿತದ್ದೇನೂ ಈ ಹಾಡಿನಲ್ಲಿ ಇರಲಿಲ್ಲ.

ಅದರ ಕಟುಪದಗಳೂ ಕಠಿನ ರಾಗವೂ ತಾಯಿಗೆ ಹಿಡಿಸಲಿಲ್ಲ. ಆದರೆ ಆ ಪದಗಳ ರಾಗದ ಹಿಂದೆ ಹಿರಿದಾದುದು ಏನೋ ಒಂದಿತ್ತು. ಅದು, ಆ ಪದಗಳನ್ನೂ ರಾಗವನ್ನೂ ಬದಿಗೆ ಸರಿಸಿ, ವಿಚಾರಕ್ಕೆ ನಿಲುಕದಂಥ ಯಾವುದೋ ಭಾವನೆಯನ್ನು ಹೃದಯದಿಂದ ಹೊರ ಹೊಮ್ಮಿಸುತ್ತಿತ್ತು. ಆ ಯಾವುದೋ ಭಾವನೆಯನ್ನು ಯುವ ಜನರ ಕಣ್ಣುಗಳಲ್ಲೂ ಮುಖದ ಮೇಲೂ ಆಕೆ ಕಾಣುತ್ತಿದ್ದಳು. ಅದು ಅವರ ಹೃದಯಗಳಲ್ಲಿ ನೆಲೆಗೊಂಡಿದ್ದಂತೆ ಅವಳಿಗೆ ಅನಿಸುತ್ತಿತ್ತು. ಯಾವುದೋ ಪದಗಳಿಗಾಗಲಿ, ರಾಗಕ್ಕಾಗಲಿ, ಸೀಮಿತವಾಗದಷ್ಟು ಮಹತ್ತರವಾದ ಒಂದು ಶಕ್ತಿಗೆ ಆಕೆ ಮಣಿದಳು. ಈ ಹಾಡನ್ನು ಆಕೆ ಯಾವಾಗಲೂ, ಉಳಿದೆಲ್ಲದಕ್ಕಿಂತ ಹೆಚ್ಚು ಆಸಕ್ತಿಯಿಂದ, ಹೆಚ್ಚು ಆಳವಾದ ಎಚ್ಚರಿಕೆಯಿಂದ, ಆಲಿಸುತ್ತಿದ್ದಳು.

ಇತರ ಗೀತೆಗಳಿಗಿಂತಲೂ ಮೆಲು ಸ್ವರದಲ್ಲಿ ಅದನ್ನವರು ಹಾಡುತಿದ್ದರೂ, ಅದು ಹೆಚ್ಚು ಪ್ರಬಲವಾಗಿ ಧ್ವನಿಸುತ್ತಿತ್ತು. ಮಾರ್ಚ್ ತಿಂಗಳ ಒಂದು ದಿನದ– ಬರಲಿದ್ದ ವಸಂತದ ಮೊದಲ ದಿನದ–ಗಾಳಿಯಂತೆ, ಜನರನ್ನೆಲ್ಲ ಅದು ಆವರಿಸುತ್ತಿತ್ತು.

"ಈ ಹಾಡನ್ನು ಇನ್ನು ನಾವು ಬಹಿರಂಗವಾಗಿ ಬೀದಿಯಲ್ಲೇ ಹಾಡಬೇಕು," ಎಂದು ಮೌನದ ಮುಸುಕಿನಿಂದ ನಿಕೊಲಾಯ್ ಹೇಳುತ್ತಿದ್ದ....

ಇತ್ತೀಚಿನ ಕಳವಿಗಾಗಿ ನಿಕೊಲಾಯ್‌ನ ತಂದೆಯನ್ನು ಪುನಃ ಸೆರೆಮನೆಗೆ ಸೇರಿಸಿದ್ದರು. ಆಗ ನಿಕೊಲಾಯ್, "ಇನ್ನು, ನಮ್ಮ ಮನೇಲೂ ನಾವು ಸಭೆ ಸೇರಬಹುದು," ಎಂದ.

ಹೆಚ್ಚು ಕಡಮೆ ಪ್ರತಿ ಸಂಜೆಯೂ ಯಾವನಾದರೂ ಸ್ನೇಹಿತನ ಜೊತೆಯಲ್ಲಿ ಪಾವೆಲ್ ಮನೆಗೆ ಬರುತ್ತಿದ್ದ. ಅವರು ಓದುತ್ತ ಟಿಪ್ಪಣಿಮಾಡುತ್ತ ಕುಳಿತುಬಿಡುತ್ತಿದ್ದರು. ಕೈಮುಖ ಕೂಡಾ ತೊಳೆದುಕೊಳ್ಳುತ್ತಿರಲಿಲ್ಲ–ಅಷ್ಟು ಅವಸರ, ಅಷ್ಟು ತಲ್ಲೀನತೆ. ಪುಸ್ತಕ ಕೈಯಲ್ಲಿ ಹಿಡಿದುಕೊಂಡೇ ಅವರು ಚಹಾ ಕುಡಿಯುತ್ತಿದ್ದರು; ಊಟಮಾಡುತ್ತಿದ್ದರು. ದಿನ ಕಳೆದಂತೆ ಅವರು ಮಾತಾಡುತ್ತಿದ್ದ ವಿಷಯಗಳನ್ನು ತಿಳಿದುಕೊಳ್ಳುವುದು ತಾಯಿಗೆ ಹೆಚ್ಚುಹೆಚ್ಚು ಕಷ್ಟವಾಯಿತು.

ಪಾವೆಲ್ ಆಗಾಗ, "ನಾವೊಂದು ಪತ್ರಿಕೆ ಆರಂಭಿಸಬೇಕು," ಎನ್ನುತ್ತಿದ್ದ.

ಜೀವನ ಹೆಚ್ಚು ತೀವ್ರಗೊಂಡಿತು, ಉದ್ವಿಗ್ನತೆಗೊಳಗಾಯಿತು. ದುಂಬಿಗಳು ಹೂವಿಂದ ಹೂವಿಗೆ ಹಾರಿದಂತೆ ಆ ಜನರು ಒಂದು ಪುಸ್ತಕದಿಂದ ಇನ್ನೊಂದಕ್ಕೆ ವೇಗವಾಗಿ ಚಲಿಸಿದರು.

ನಿಕೊಲಾಯ್ ಹೇಳಿದ:

"ಗುಸುಗುಸು ಅಂತ ಜನರಲ್ಲಿ ಮಾತೆದ್ದಿದೆ. ನಮ್ಮನ್ನು ಹಿಡಿಯೋಕೆ ಶುರು ಮಾಡ್ತಾರೆ ಇನ್ನು."

"ಮೀನು ಹುಟ್ಟಿದ್ದೇ ಬಲೆಗೆ ಬೀಳೋಕೆ ಅಂತ," ಎಂದ ಹೊಹೋಲ್.

...ತಾಯಿ ಹೊಹೋಲ್‌ನನ್ನು ದಿನಕಳೆದಂತೆ ಹೆಚ್ಚು ಹೆಚ್ಚಾಗಿ ಪ್ರೀತಿಸತೊಡಗಿದಳು. ಆತ "ಅವ್ವಾ" ಎಂದಾಗ, ಹಸುಗೂಸು ತನ್ನ ಪುಟ್ಟ ಕೈಯನ್ನು ತಾಯಿಯ ಕೆನ್ನೆಯ ಮೇಲೆ ಆಡಿಸಿದ ಹಾಗಾಗುತ್ತಿತ್ತು. ಯಾವುದಾದರೂ ಭಾನುವಾರ ಪಾವೆಲ್‌ಗೆ ಬಿಡುವಿರದಿದ್ದರೆ ಹೊಹೋಲ್ ಸೌದೆ ಸೀಳುತ್ತಿದ್ದ. ಒಂದು ದಿನ ಒಂದು ಹಲಗೆಯನ್ನು ಹೊತ್ತು ತಂದನಾತ. ಕೊಡಲಿಯನ್ನೆತ್ತಿಕೊಂಡು ಅದನ್ನು ಅಲ್ಲಿ ಇಲ್ಲಿ ಸೀಳಿದ. ಜೀರ್ಣವಾಗಿ ಹಾಳಾಗಿದ್ದ ಬಾಗಿಲಿನ ಒಂದು ಮೆಟ್ಟಿಲಿನ ಬದಲು ಬೇರೊಂದನ್ನು ಮಾಡಿ ಇರಿಸಿದ. ಇನ್ನೊಮ್ಮೆ ಆತ, ಅಷ್ಟೇ ಸದ್ದಿಲ್ಲದೆ, ಬೇಲಿಯನ್ನು ಸರಿಪಡಿಸಿದ. ಕೆಲಸ ಮಾಡುತ್ತಿದ್ದಾಗ ಯಾವಾಗಲೂ ದುಃಖಪೂರ್ಣವಾದ ಸುಂದರವಾದ ಒಂದು ರಾಗವನ್ನು ಸಿಳ್ಳುಹಾಕುತ್ತಿದ್ದ.

ಒಂದು ದಿನ ತಾಯಿ, ಮಗನನ್ನು ಕುರಿತು ಹೇಳಿದಳು:

"ಹೊಹೋಲ್ ನಮ್ಮನೇಲೇ ಇರಲಿ. ಅದರಿಂದ ನಿಮಗಿಬ್ಬರಿಗೂ ಹೆಚ್ಚು ಅನುಕೂಲ. ನೀವು ಒಬ್ಬರನೊಬ್ಬರು ನೋಡೋಕೆ ಇಲ್ಲಿಂದಲ್ಲಿಗೆ ಅಲ್ಲಿಂದಿಲ್ಲಿಗೆ ಓಡಬೇಕಾದ್ದಿಲ್ಲ."

"ನಿನಗ್ಯಾಕಮ್ಮ ಹೆಚ್ಚು ಕಷ್ಟ?" ಎಂದು ಪಾವೆಲ್ ಭುಜ ಕುಣಿಸಿ ಉತ್ತರವಿತ್ತ.

"ಛೆ! ಛೆ!" ಎಂದಳಾಕೆ; "ನನ್ನ ಜೀವಮಾನವೆಲ್ಲ ಕಷ್ಟದಲ್ಲೇ ಕಳೀತು. ಯಾವ ಒಳ್ಳೆ ಗುರಿಯೂ ಇಲ್ದೆ. ಅವನಂಥ ಒಳ್ಳೆಯ ಮನುಷ್ಯನಿಗಾಗಿ ಸ್ವಲ್ಪ ಕಷ್ಟವಾದರೂ ಚಿಂತಿಲ್ಲ, ಆಗಲಿ."

"ನಿನ್ನಿಷ್ಟ. ಆತ ಬಂದರೆ ನನಗೆ ಸಂತೋಷವೇ," ಎಂದ ಪಾವೆಲ್.

ಹಾಗೆ ಹೊಹೋಲ್ ಅವರ ಮನೆಯನ್ನು ಸೇರಿಕೊಂಡದ್ದಾಯಿತು.

೮

ವಸತಿಪ್ರದೇಶದ ಅಂಚಿನಲ್ಲಿದ್ದ ಆ ಸಣ್ಣ ಮನೆ, ಜನರ ಲಕ್ಷ್ಯವನ್ನು ಸೆಳೆಯಿತು. ಈಗಾಗಲೇ ಗುಮಾನಿಯ ಹತ್ತಾರು ಕಣ್ಣುಗಳು ಜಾಗರೂಕತೆಯಿಂದ ಆ ಮನೆಯ ಗೋಡೆಗಳನ್ನು ಪರೀಕ್ಷಿಸಿದ್ದುವು. ಕಿಂವದಂತಿಯ ಬಣ್ಣದ ರೆಕ್ಕೆಗಳು ಆ ಮನೆಯ ಮೇಲ್ಗಡೆ ಕಾತರಗೊಂಡು ಬಡಿಯುತ್ತಿದ್ದುವು. ಏರಿಯ ಮೇಲಿದ್ದ ಆ ಮನೆಯ ಗೋಡೆಗಳ ಒಳಗೆ ಏನೋ ರಹಸ್ಯವಡಗಿದೆಯೆಂದು ಜನರು ಭಾವಿಸಿದರು. ಬೆದರಿಸಿ ಆ ರಹಸ್ಯವನ್ನು ಹೊರಹಾಕಲು, ಅವರು ಪ್ರಯತ್ನಿಸಿದರು. ರಾತ್ರೆ ಹೊತ್ತು ಕಿಟಕಿಗಳ ಮೂಲಕ ಅವರು ಇಣಿಕಿ ನೋಡುತ್ತಿದ್ದರು. ಕೆಲವೊಮ್ಮೆ ಕಿಟಕಿಯ ಗಾಜಿನ ಮೇಲೆ ತಟ್ಟಿ ಸದ್ದು ಮಾಡುತ್ತಿದ್ದರು; ಹಾಗೆ ತಟ್ಟಿದೊಡನೆಯೇ ತಾವೇ ಭೀತರಾಗಿ ಓಡಿ ಹೋಗುತ್ತಿದ್ದರು.

ಪಾನಮಂದಿರದ ಮಾಲೀಕ ಬೆಗುಂತ್ಸೋವ್ ಸುರೂಪಿಯಾದೊಬ್ಬ ಮುದುಕ. ಯಾವಾಗಲೂ ನೇರಳೆಬಣ್ಣದ ಮಕಮಲ್ಲಿನ ತೋಳಿಲ್ಲದ ಕೋಟನ್ನು ಧರಿಸುತ್ತಿದ್ದ. ಊದಿಕೊಂಡು ಜೋಲುತ್ತಿದ್ದ ಕೆಂಪು ಕತ್ತಿನ ಸುತ್ತಲೂ ಕರಿಯ ರೇಶ್ಮೆ ಕರವಸ್ತ್ರವನ್ನು ಸುತ್ತಿರುತ್ತಿದ್ದ. ಚೂಪಾದ ಥಳಥಳಿಸುತ್ತಿದ್ದ ಆತನ ಮೂಗಿನ ಮೇಲೆ ಆಮೆಯ ಚಿಪ್ಪಿನ ಕಟ್ಟು ಹಾಕಿದ್ದ ಕನ್ನಡಕವೊಂದು ಸವಾರಿ ಮಾಡುತ್ತಿತ್ತು. ಅದರ ಫಲವಾಗಿ ಅವನಿಗೆ "ಎಲುಬುಗಣ್ಣ" ಎಂಬ ಅಡ್ಡಹೆಸರು ಬಂದಿತ್ತು.

ಉಸಿರೆಳೆದುಕೊಳ್ಳುವುದಕ್ಕೂ ಕಾಯದೆ, ಉತ್ತರವನ್ನು ಇದಿರು ನೋಡದೆ, ಒಮ್ಮೆ ಆತ ತಾಯಿಯ ಮೇಲೆ ಒಣ ಮುರುಕು ಶಬ್ದಗಳ ಮಳೆಯನ್ನೇ ಸುರಿಸಿದ:

"ಹೇಗಿದ್ದೀಯಮ್ಮಾ ಪೆಲಗೇಯ ನೀಲೊವ್ನ? ಹೇಗಿದ್ದಾನೆ ನಿನ್ನ ಮಗ? ಮದುವೆ ಮಾಡೋ ಯೋಚನೆ ಗೀಚನೆ ನಿಮಗೆ ಇಲ್ಲವೋ ಹ್ಯಾಗೆ? ನಾನು ಹೇಳ್ತೀನಮ್ಮಾ—ಮದುವೆಗೆ ತಕ್ಕ ವಯಸ್ಸು ಅವನ್ದು. ಎಷ್ಟು ಬೇಗ ಮಕ್ಕಳು ಮದುವೆಯಾಗ್ತಾರೋ ಅಷ್ಟು ವಾಸಿ ತಾಯ್ತಂದೆಯರಿಗೆ. ಕುಟುಂಬವಿದ್ದರೆ, ಮನುಷ್ಯನ ಶರೀರ ಮನಸ್ಸು ಎರಡೂ ಹೆಚ್ಚು ಸುಖವಾಗಿರ್ತವೆ. ಹುಳಿ ದ್ರಾಕ್ಷಾರಸದಲ್ಲಿ ನಾಯಿಕೊಡೆ ಇದ್ದ ಹಾಗೆ. ನಾನಾಗಿದ್ದಿದ್ದರೆ, ಇಷ್ಟರಲ್ಲೇ ಅವನಿಗೊಂದು ಹೆಣ್ಣು ತರ್‍ತಿದ್ದೆ. ಈಗಿನ ಕಾಲದಲ್ಲಿ ಮನುಷ್ಯನ ನಡತೆ ಮೇಲೆ ವಿಶೇಷ ಕಣ್ಣಿಡಬೇಕಾದ್ದು ಅವಶ್ಯವಮ್ಮಾ.

ಬುದ್ಧಿ ಮೆದುಳು ಉಪಯೋಗಿಸಿ ಬದುಕೋಕೆ ಶುರು ಮಾಡಿದ್ದಾರೆ ನಮ್ಮ ಜನ! ಎಂಥೆಂಥದೋ ಆಲೋಚನೆ, ನಿಂದನಾರ್ಹ ನಡತೆ. ಖಂಡಿತ ನಾವು ಇದನ್ನು ಖಂಡಿಸ ಲೇಬೇಕು. ಈಗ ಈ ಯುವ ಜನರು ಚರ್ಚಿಗೆ ಹೋಗೋದೇ ಇಲ್ಲ. ಸಾರ್ವಜನಿಕ ಸ್ಥಳಗಳಿಂದಲೂ ದೂರವಿರ್ತಾರೆ. ಕತ್ತಲೆ ಮೂಲೆಗಳಿಗೆ ನುಸುಳಿಕೊಂಡು ಪಿಸು ಮಾತಿನಲ್ಲಿ ರಹಸ್ಯ ಮಾತಾಡ್ತಾರೆ, ಯಾಕಮ್ಮ ಅವರು ಪಿಸುಮಾತಾಡ್ಬೇಕು? ಯಾಕೆ ಜನರಿಂದ ದೂರವಿರ್ಬೇಕು? ಜನರ ಮುಂದೆ, ಉದಾಹರಣೆಗೆ, ಪಾನಮಂದಿರ ದಲ್ಲಿ, ಹೇಳಬಾರದ್ದು ಎಂಥಾದಮ್ಮ? ರಹಸ್ಯ! ರಹಸ್ಯಕ್ಕೆಲ್ಲ ಇರುವ ಜಾಗವೆಂದರೆ ಒಂದೇ ಒಂದು. ಪವಿತ್ರ ಧರ್ಮಗುರುವಿನ ಕ್ರಿಸ್ತಾಲಯ! ಮೂಲೆಗಳಲ್ಲಿ ಮಾತಾಡೋ ಯಾವ ರಹಸ್ಯವೇ ಆಗಲಿ – ಅದು ಬರೋದು ಕುವಿಚಾರದಿಂದ.... ಒಳ್ಳೇದು, ಬರ್ತೀನಮ್ಮಾ, ಪೆಲಗೇಯ ನೀಲೊವ್ನ!"

ಪರಿಷ್ಕಾರವಾಗಿ ತನ್ನ ಟೋಪಿಯನ್ನು ಮೇಲಕ್ಕೆತ್ತಿ, ಅದನ್ನು ಆಡಂಬರವಾಗಿ ಗಾಳಿಯಲ್ಲಿ ಮೆರೆಸಿ, ಆತ ಹೊರಟುಹೋದನು. ತಾಯಿ ತಬ್ಬಿಬ್ಬಾಗಿ ಹಿಂದುಳಿದಳು.

ಮರೀಯ ಕೊರ್ಸುನೋವ, ವ್ಲಾಸೊವ್‌ರ ನೆರೆಯವಳು. ಕಮ್ಮಾರನೊಬ್ಬನ ವಿಧವೆ. ಕಾರಖಾನೆಯ ದ್ವಾರದ ಬಳಿ ತಿಂಡಿ ಮಾರುತ್ತಾ ಆಕೆ ಜೀವನ ನಡೆಸುತ್ತಿದ್ದಳು. ತಾಯಿಯನ್ನೊಮ್ಮೆ ಸಂತೆಪೇಟೆಯಲ್ಲಿ ಸಂಧಿಸಿದಾಗ ಆಕೆ ಹೇಳಿದಳು:

"ಪೆಲಗೇಯ! ನಿನ್ನ ಮಗನ ಮೇಲೆ ಒಂದಿಷ್ಟು ಕಣ್ಣಿಟ್ಟಿರು, ತಾಯಿ!"

"ಏನೇ ಹಾಗೆಂದರೆ?" ಎಂದು ತಾಯಿ ಕೇಳಿದಳು.

ಗುಟ್ಟುಗುಟ್ಟಾಗಿ ಮರೀಯ ಹೇಳಿದಳು:

"ಎಲ್ಲಾ ಕಡೇನೂ ಮಾತು ಹರಡ್ತಾ ಇದೆ. ಒಳ್ಳೇ ಸುದ್ದಿಯಲ್ಲ, ನಮ್ತಾಯಿ! ಅವನೇನೋ 'ಹ್ಲಿಸ್ತಿ'*ಯಂಥಾದ್ದು ಒಂದು ಗುಪ್ತ ಪಂಗಡ ಕಟ್ತಿದಾನಂತೆ. ಅವನದೂ ಒಂದು ಪಂಗಡವಂತೆ. ಅವರೆಲ್ಲ 'ಹ್ಲಿಸ್ತಿ'ಯ ಹಾಗೆ ಒಬ್ಬರಿಗೊಬ್ಬರು ಚಾಟಿ ಏಟು ಕೊಡ್ತಾರಂತೆ...."

"ಮರೀಯ! ಸಾಕು ಹುಚ್ಚು ಮಾತು."

"ಹೊಗೆ ಇದ್ದ ಕಡೆ ಬೆಂಕಿ ಇದ್ದೇ ಇರುತ್ತೆ," ಎಂದಳು ಆ ಚಿಲ್ಲರೆ ವ್ಯಾಪಾರಿ.

ಈ ಎಲ್ಲ ಮಾತುಕತೆಗಳನ್ನು ಮಗನಿಗೆ ತಾಯಿ ವರದಿ ಮಾಡಿದಳು. ಆದರೆ ಆತ ಹೂಂಕರಿಸಿ ಸುಮ್ಮನಾದ. ಹೊಹೋಲ್ ಮೃದು ರೀತಿಯಲ್ಲಿ ಹೃದಯ ತುಂಬ ನಗೆಯಾಡಿದ.

ತಾಯಿಯೆಂದಳು:

"ಹುಡುಗಿಯರಿಗೂ ಸಿಟ್ಟು ಬಂದಿದೆ. ಒಳ್ಳೇ ಹುಡುಗರು ನೀವೆಲ್ಲಾ. ಯಾವ

---

*'ಹ್ಲಿಸ್ತಿ' ಎಂದರೆ ರಷ್ಯನ್ ಭಾಷೆಯಲ್ಲಿ ಚಾಟಿಗಳು ಎಂದರ್ಥ. ಅದೊಂದು ರಹಸ್ಯ ಮತಾಂಧ ಪಂಗಡದ ಹೆಸರಾಗಿತ್ತು. – ಅನು.

ಹುಡುಗಿಗಾದರೂ ತಕ್ಕಂಥವರು. ಎಲ್ಲರೂ ಕಷ್ಟಪಟ್ಟು ದುಡೀತೀರಿ. ಯಾರೂ ಕುಡುಕರಲ್ಲ. ಆದರೆ ನೀವು ಯಾರೂ ಆ ಹುಡುಗೀರ ಕಡೆ ಗಮನ ಕೊಡೋದೇ ಇಲ್ಲ. ಕೆಟ್ಟ ನಡತೆ ಹುಡುಗೀರು ಕೆಲವರು ನಿಮ್ಮನ್ನು ನೋಡೋಕೆ ಶಹರದಿಂದ ಬರ್‍ತಿದಾರೇಂತ ಮಾತಾಡ್ತಿದಾರೆ."

ಜಿಗುಪ್ಸೆಯಿಂದ ಹುಬ್ಬು ಗಂಟಿಕ್ಕಿ "ನಿಜ, ನಿಜ!" ಎಂದು ಪಾವೆಲ್ ಉದ್ಗರಿಸಿದ.

ನಿಟ್ಟುಸಿರು ಬಿಡುತ್ತ ಹೊಹೋಲ್ ಹೇಳಿದ:

"ಕೆಸರಿನಲ್ಲಿ ಎಲ್ಲದಕ್ಕೂ ದುರ್ವಾಸನೆಯೇ, ಅವ್ವಾ. ದಾಂಪತ್ಯ ಜೀವನ ಅಂದರೆ ಏನೂಂತ ಆ ಬೆಪ್ಪು ಹುಡುಗಿಯರಿಗೆ ನೀವು ಸ್ವಲ್ಪ ಹೇಳೋದು ವಾಸಿ. ಆಮೇಲೆ ಪ್ರಾಣ ಬಿಡೋಕೆ ಇಷ್ಟು ಆತುರಪಡಲಾರರು."

"ಅವರಿಗೆ ಹೇಳೋದೆ! ಅವರೆಲ್ಲವನ್ನೂ ಚೆನ್ನಾಗಿ ನೋಡ್ತಾರೆ, ಚೆನ್ನಾಗಿ ತಿಳಕೋತಾರೆ. ಆದರೂ ಅವರಿಗೆ ಬೇರೆ ಗತಿಯಿಲ್ವಲ್ಲ."

"ಚೆನ್ನಾಗಿ ತಿಳಕೊಂಡಿದ್ದರೆ ಪರಿಹಾರ ಹುಡುಕ್ತಿದ್ರು," ಎಂದ ಪಾವೆಲ್.

ಮಗನ ಕಟುವಾಗಿದ್ದ ಮುಖಮುದ್ರೆಯನ್ನು ತಾಯಿ ನೋಡಿದಳು.

"ನೀವು ಯಾಕೆ ಆ ಹುಡುಗೀರಿಗೆ ಕಲಿಸಿಕೊಡಬಾರದು? ಅವರಲ್ಲಿ ಹೆಚ್ಚು ಬುದ್ಧಿವಂತರನ್ನು ಇಲ್ಲಿಗೆ ಕರೆದರಾಯಿತು."

"ಆಗಹೋಗದ ಮಾತು," ಎಂದು ಮಗನೆಂದ ಕಠಿಣವಾಗಿ.

"ಪ್ರಯತ್ನಿಸಿ ನೋಡಿದರೇನಂತೆ?" ಎಂದು ಹೊಹೋಲ್ ಕೇಳಿದ.

ಸ್ವಲ್ಪ ಹೊತ್ತು ಸುಮ್ಮನಿದ್ದು ಪಾವೆಲ್ ಉತ್ತರವಿತ್ತ:

"ಜೋಡಿಯಾಗಿ ಹೋಗೋಕೆ ಶುರುಮಾಡ್ತಾರೆ. ಕೆಲವರು ಮದುವೆಯಾಗ್ತಾರೆ. ಅಲ್ಲಿಗಾಯಿತು ಕಥೆ."

ತಾಯಿ ಯೋಚನಾಪರಳಾದಳು. ಪಾವೆಲ್‌ನ ಕಟ್ಟುನಿಟ್ಟಿನ ವೈರಾಗ್ಯವನ್ನು ಕಂಡು ತಳಮಳಗೊಂಡಳಾಕೆ. ಪ್ರತಿಯೊಬ್ಬರೂ, ವಯಸ್ಸಿನಲ್ಲಿ ಹಿರಿಯರಾದ ಹೊಹೋಲ್‌ನಂಥ ಸಂಗಾತಿಗಳು ಕೂಡಾ, ಆತನ ಸಲಹೆಯಂತೆ ನಡೆಯುತ್ತಿದ್ದರು. ಅದು ಆಕೆಗೆ ಗೊತ್ತಿತ್ತು. ಅವರು ಅವನಿಗೆ ಹೆದರುತ್ತಿದ್ದರೇ ಹೊರತು, ಆತನ ನಿಷ್ಠುರತೆಗಾಗಿ ಯಾರೂ ಆತನನ್ನು ಪ್ರೀತಿಸುತ್ತಿಲ್ಲವೆಂದು ಆಕೆಗೆ ಅನಿಸಿತ್ತು.

ಒಂದು ರಾತ್ರೆ ಅವಳು ಮಲಗಿಕೊಂಡಿದ್ದಳು. ಮಗನೂ ಹೊಹೋಲನೂ ಓದುತ್ತಲಿದ್ದರು. ನಡುವೆ ಇದ್ದ ತೆಳ್ಳಗಿನ ತೆರೆಯನ್ನು ಹಾದು ಅವರ ಮೆಲುದನಿಯ ಮಾತುಕತೆ ಕೇಳಿಬರುತ್ತಿತ್ತು.

ಇದ್ದಕ್ಕಿದ್ದಂತೆ ಹೊಹೋಲ್ ಉದ್ಗರಿಸಿದ:

"ನಾನು ನತಾಷನ ಪ್ರೀತಿಸ್ತೀನಿ."

ಸ್ವಲ್ಪ ತಡೆದು, "ನನಗೆ ಗೊತ್ತಿದೆ," ಎಂದ ಪಾವೆಲ್.

ಹೊಹೋಲ್ ನಿಧಾನವಾಗಿ ಎದ್ದುದೂ, ಬರಿಗಾಲಿನಲ್ಲಿ ಅತ್ತಿತ್ತ ನಡೆಯು ತೊಡಗಿದ್ದೂ ತಾಯಿಗೆ ಕೇಳಿಸುತ್ತಿತ್ತು. ಅವನು ಮೃದುವಾಗಿ ನಿರಾಸೆಯ ಶಿಳ್ಳು ಹಾಕತೊಡಗಿದ. ಮತ್ತೊಮ್ಮೆ ಆತ ಮಾತಾಡಿದ:

"ಆದರೆ ಆಕೆ ಅದನ್ನು ಗಮನಿಸಿದ್ದಾಳೋ ಇಲ್ಲವೋ...."

ಪಾವೆಲ್ ಉತ್ತರ ಕೊಡಲಿಲ್ಲ.

"ನಿನಗೆ ಹ್ಯಾಗೆನಿಸುತ್ತೆ?" ಎಂದು ಹೊಹೋಲ್ ಧ್ವನಿ ತಗ್ಗಿಸುತ್ತ ಕೇಳಿದ.

"ಗಮನಿಸಿದ್ದಾಳೆ. ಆದ್ದರಿಂದಲೇ ಇಲ್ಲಿಗೆ ಬರೋದನ್ನು ನಿಲ್ಲಿಸಿರೋದು."

ಭಾರವಾದ ಹೆಜ್ಜೆಗಳನ್ನೆತ್ತಿಕೊಂಡು ಹೊಹೋಲ್ ಅತ್ತಿತ್ತ ಚಲಿಸಿದ. ಆ ಕಿರು ಸಿಳ್ಳಿನ ಸ್ವರ ಮತ್ತೊಮ್ಮೆ ಕೊಠಡಿಯನ್ನು ಸಜೀವಗೊಳಿಸಿತು.

ಆತ ಕೇಳಿದ:

"ನಾನು ಆಕೆಗೆ ಹೇಳಿದೆನೆಂದರೆ?"

"ಏನೂಂತ?"

"ಆಕೇನ... ನಾನು..."

ನಡುವೆ ಮಾತು ತಡೆದು ಪಾವೆಲ್ ಕೇಳಿದ:

"ಯಾಕೆ ಹೇಳ್ಬೇಕು?"

ಹೊಹೋಲ್ ನಿಶ್ಚಲವಾಗಿ ನಿಂತುದು ತಾಯಿಗೆ ತಿಳಿಯಿತು. ಆತ ಮುಗುಳ್ನಗುತ್ತಿರಬಹುದೆಂದು ತಾಯಿ ಭಾವಿಸಿದಳು.

"ಒಬ್ಬ ಹುಡುಗೀನ ಪ್ರೀತಿಸಿದರೆ ಅದನ್ನು ಆಕೆಗೆ ಹೇಳಬೇಕು ಎನ್ನೋದು ನನ್ನ ಅಭಿಪ್ರಾಯ. ಇಲ್ಲದೆ ಹೋದರೆ ಏನು ಪ್ರಯೋಜನ?"

ಪಾವೆಲ್ ತಾನು ಓದುತ್ತಲಿದ್ದ ಪುಸ್ತಕವನ್ನು ಟಪ್ಪನೆ ಮುಚ್ಚಿದ ಸದ್ದಾಯಿತು.

"ಹಾಗೆ ಹೇಳಿದರೆ ಏನು ಪ್ರಯೋಜನ ಅಂತ ನೀನು ತಿಳಿದಿದ್ದೀಯ?" ಎಂದು ಆತ ಕೇಳಿದ.

ದೀರ್ಘ ಕಾಲ ಇಬ್ಬರೂ ಮೌನವಾಗಿದ್ದರು.

ಕೊನೆಗೆ ಹೊಹೋಲನೆಂದ:

"ಹಾಗಾದರೆ?"

ಬಲು ನಿಧಾನವಾಗಿ ಪಾವೆಲ್ ಮಾತನಾಡಿದ:

"ನಿನಗೆ ಬೇಕಾದ್ದು ಏನೂಂತ ಸ್ಪಷ್ಟವಾಗಿ ನೀನು ತಿಳಕೊಳ್ಳಲೇಬೇಕು, ಅಂದ್ರೇಯ್. ಆಕೆ ನಿನ್ನನ್ನು ಪ್ರೀತಿಸುತ್ತಾಳೆಂತಲೇ ಇಟ್ಟುಕೋ – ನನಗೇನೋ ನಂಬಿಕೆಯಿಲ್ಲ – ಆದರೂ ಹಾಗೇಂತ ಊಹಿಸಿಕೋ. ಆಮೇಲೆ? ನೀವಿಬ್ಬರೂ ಮದುವೆಯಾಗ್ತೀರಿ. ಒಳ್ಳೆಯ ಜೋಡಿ! ಆಕೆಯೊಬ್ಬ ಬುದ್ಧಿಜೀವಿ, ನೀನೊಬ್ಬ ಕಾರ್ಮಿಕ. ಮಕ್ಕಳಾಗ್ತಾರೆ. ಅವರನ್ನೆಲ್ಲ ಪೋಷಿಸೊ ಕೆಲಸ ನಿನ್ನೊಬ್ಬನದೇ. ಏನು, ಸಾಮಾನ್ಯ ಕೆಲಸವೇ ಅದು! ಒಂದು ಚೂರು ರೊಟ್ಟಿಗಾಗಿ, ಮಕ್ಕಳಿಗಾಗಿ, ಮನೆ

ಬಾಡಿಗೆಗಾಗಿ – ಜೀವನ ಒಂದು ಬೀಸುಕಲ್ಲಾಗುತ್ತೆ. ಚಳವಳಿಗಾದರೋ ನೀವು ನಿಷ್ಪ್ರಯೋಜಕರಾಗ್ತೀರಿ, ನೀವಿಬ್ಬರೂ!"

ಕೊಠಡಿಯಲ್ಲಿ ನೀರವತೆ ನೆಲೆಮಾಡಿತು. ಆಮೇಲೆ ಪುನಃ ಪಾವೆಲ್ ಮಾತಾಡಿದ, ಈ ಸಾರಿ ಸ್ವರ ಹಿಂದಿನಷ್ಟು ತೀಕ್ಷ್ಣವಾಗಿರಲಿಲ್ಲ.

"ಅದನ್ನು ಬಿಟ್ಟುಬಿಡೋದೇ ವಾಸಿ, ಅಂದ್ರೇಯ್! ಆಕೆಗೆ ಕಷ್ಟ ಕೊಡಬೇಡ."

ನಿಶ್ಶಬ್ದ. ಗೋಡೆಗಡಿಯಾರದ ಲೋಲಕದ ಟಿಕ್ ಟಿಕ್ ಸಪ್ಪಳ ಸ್ಪಷ್ಟವಾಗಿ ಕೇಳಿಸಿತು.

"ಅರ್ಧ ಹೃದಯ ಪ್ರೀತಿಸ್ತಿದೆ. ಅರ್ಧ ಹೃದಯ ದ್ವೇಷಿಸ್ತಿದೆ. ಅದನ್ನೊಂದು ಹೃದಯ ಎಂತ ಕರೀತೀಯಾ?" ಎಂದು ಹೊಹೋಲ್ ಕೇಳಿದ.

ಪುಸ್ತಕದ ಪುಟ ತಿರುವಿದ ಸದ್ದು ಕೇಳಿಸಿತು. ಓದುತ್ತಿದ್ದಿರಬೇಕು ಪಾವೆಲ್. ಕಣ್ಮುಚ್ಚಿ ಆತನ ತಾಯಿ ಮಲಗಿದ್ದಳು. ಉಸಿರಾಡುವುದಕ್ಕೂ ಹೆದರುತ್ತಿದ್ದಳಾಕೆ. ಹೊಹೋಲ್‌ನ ಬಗೆಗೆ ಆಕೆಗೆ ಹಾರ್ದಿಕ ಕನಿಕರವಿತ್ತು. ಆದರೆ ಮಗನ ಬಗೆಗಂತೂ ಮತ್ತಷ್ಟು ಹೆಚ್ಚು ಕನಿಕರಪಟ್ಟಳು ತಾಯಿ.

"ಅಯ್ಯೋ ಪಾಪ!" ಎಂದುಕೊಂಡಳಾಕೆ.

ಹೊಹೋಲ್ ಒಮ್ಮೆಲೆ ಗಟ್ಟಿಯಾಗಿ ಮಾತಾಡಿದ:

"ಹಾಗಾದರೆ ನಾನು ಏನೂ ಹೇಳಬಾರದೂಂತ ತಾನೆ ನಿನ್ನ ಅಭಿಪ್ರಾಯ?"

"ಅದೇ ಯೋಗ್ಯ ಕೆಲಸ," ಎಂದು ಪಾವೆಲ್ ಶಾಂತನಾಗಿ ಉತ್ತರವಿತ್ತ.

"ಹಾಗೇ ಆಗಲಿ," ಎಂದ ಹೊಹೋಲ್, ಕೆಲವು ಕ್ಷಣಗಳ ತರುವಾಯ "ನಿನ್ನ ಸರದಿ ಬಂದಾಗ ನಿನಗೂ ಕಷ್ಟವಾದೀತು, ಪಾವೆಲ್," ಎಂದು ಮೃದುವಾಗಿಯೂ ವಿಷಾದಪೂರ್ಣವಾಗಿಯೂ ಹೇಳಿದ.

"ಈಗಾಗಲೆ ನನಗೆ ಕಷ್ಟವಾಗಿದೆ."

ಮನೆಯ ಗೋಡೆಗಳನ್ನು ಗಾಳಿಯು ಸವರಿಕೊಂಡು ಹೋಯಿತು. ಗಡಿಯಾರದ ಲೋಲಕ, ಕ್ರಮಿಸುತ್ತಿದ್ದ ಕಾಲವನ್ನು ಕ್ರಮವಾಗಿ ಸೂಚಿಸುತ್ತಿತ್ತು.

"ತಮಾಷೆಯಲ್ಲ ಇದು," ಎಂದು ಹೊಹೋಲ್ ಮೆಲ್ಲನೆ ಹೇಳಿದ.

ತಾಯಿ ತಲೆದಿಂಬಿನೊಳಗೆ ಮುಖ ಮುಚ್ಚಿಕೊಂಡು ಸದ್ದಿಲ್ಲದೆ ಅತ್ತಳು.

ಬೆಳಿಗ್ಗೆ ನೋಡಿದಾಗ, ಅಂದ್ರೇಯ್ ಎತ್ತರ ಕುಗ್ಗಿದವನಂತೆ, ಇನ್ನಷ್ಟು ಸುಪ್ರಿಯನಾದಂತೆ ತಾಯಿಗೆ ತೋರಿತು. ಆಕೆಯ ಮಗನಾದರೋ ನೆಟ್ಟಗೆ ತೆಳ್ಳಗೆ ಮೌನವಾಗಿಯೇ ಇದ್ದನು ಎಂದಿನಂತೆ. ಇಷ್ಟರವರೆಗೆ ಗೌರವದಿಂದ ಆಕೆ ಹೊಹೋಲ್‌ನನ್ನು ಅಂದ್ರೇಯ್ ಒನೀಸಿಮೊವಿಚ್ ಎಂದು ಕರೆಯುತ್ತಿದ್ದಳು. ಆದರೆ ಈ ದಿನ ತನಗರಿಯದಂತೆಯೇ ಆಕೆ ಹೇಳಿದಳು:

"ಅಂದ್ರ್ಯೂಷ !* ನಿನ್ನ ಬೂಟ್‌ಗಳನ್ನು ಸ್ವಲ್ಪ ದುರಸ್ತಿ ಮಾಡಿಸಬೇಕಪ್ಪಾ. ಇಲ್ಲದೆ ಹೋದರೆ ನೆಗಡಿಯಾಗತ್ತೆ ನೋಡು."

"ಮುಂದಿನ ಸಾರೆ ಸಂಬಳ ಬಂದಾಗ ಹೊಸ ಜೋಡೀನೇ ಕೊಂಡುಕೋತೀನಿ," ಎಂದು ಆತ ನಗುತ್ತ ಉತ್ತರವಿತ್ತ. ಆಮೇಲೆ ತನ್ನ ನೀಳವಾದ ತೋಳನ್ನು ಆಕೆಯ ಭುಜದ ಮೇಲಿರಿಸುತ್ತಾ ಆತ ಹೇಳಿದ: "ಅಂತೂ ನೀವೇ ನನ್ನ ನಿಜವಾದ ತಾಯಿ ಇದ್ದರೂ ಇರಬಹುದು! ನಾನಿಷ್ಟು ಕುರೂಪಿಯಾಗಿರೋದರಿಂದ, ನಿಮ್ಮ ಮಗ ಅಂತ ನೀವು ಒಪ್ಪಿಕೊಳ್ಳಾ ಇಲ್ಲ, ಅಲ್ಲವೇ ?"

ಉತ್ತರ ಕೊಡದೆಯೇ ಅವಳು ಆತನ ಕೈಯ ಮೇಲೆ ಹಗುರವಾಗಿ ಹೊಡೆದಳು. ಪ್ರೀತಿಯ ಅನೇಕ ಮಾತುಗಳನ್ನು ಹೇಳಬೇಕೆಂದು ತೋರಿತು ಆಕೆಗೆ. ಆದರೆ ಕನಿಕರದಿಂದ ಹೃದಯ ಭಾರವಾಗಿತ್ತು. ಮಾತುಗಳು ತುಟಿಗಳನ್ನು ಹಾದು ಹೊರಡಲಿಲ್ಲ.

೬

ನೀಲಿ ಮಸಿಯಲ್ಲಿ ಬರೆದ ಕರಪತ್ರಗಳನ್ನು ಹಂಚುತ್ತಲಿದ್ದ ಸಮಾಜವಾದಿಗಳ ವಿಷಯವಾಗಿ, ವಸತಿ ಪ್ರದೇಶದ ಜನರು ಮಾತನಾಡಲಾರಂಭಿಸಿದರು. ಆ ಕರಪತ್ರಗಳಲ್ಲಿ ಕಾರಖಾನೆಯ ಆಡಳಿತ ವ್ಯವಸ್ಥೆಯನ್ನು ತೀವ್ರವಾಗಿ ಟೀಕಿಸಲಾಗಿತ್ತು. ಪೀಟರ್ಸ್‌ಬರ್ಗಿನಲ್ಲಿಯೂ, ರಷ್ಯದ ದಕ್ಷಿಣ ಭಾಗದಲ್ಲಿಯೂ ನಡೆಯುತ್ತಿದ್ದ ಕೂಲಿಕಾರರ ಮುಷ್ಕರಗಳ ವಿವರ ಅವುಗಳಲ್ಲಿತ್ತು. ತಮ್ಮ ಹಿತಗಳ ರಕ್ಷಣೆಗಾಗಿ ಒಂದುಗೂಡಬೇಕೆಂದು ಕಾರ್ಮಿಕರಿಗೆ ಅವು ಕರೆ ಕೊಟ್ಟವು.

ಕಾರಖಾನೆಯಲ್ಲಿ ಒಳ್ಳೆಯ ಸಂಪಾದನೆಯನ್ನು ಗಳಿಸುತ್ತಿದ್ದ ನಡುವಯಸ್ಸಿನ ಜನರು ಸಿಟ್ಟಿಗೆದ್ದರು.

"ಗಲಾಟೆಕೋರರು! ಹೀಗೆ ಮಾಡಿದ್ದಕ್ಕಾಗಿ ಅವರ ಮೂಗು ಬಡಿದು ಚಪ್ಪಟೆ ಮಾಡ್ಬೇಕು," ಎಂದು ಅವರು ಕೂಗಾಡಿದರು. ಕರಪತ್ರಗಳನ್ನು ಮೇಲಧಿಕಾರಿಗಳಿಗೆ ಒಯ್ದು ಮುಟ್ಟಿಸಿದರು.

ಯುವಕರು ಉತ್ಸಾಹದಿಂದ ಅವುಗಳನ್ನೋದಿದರು.

"ಇದರಲ್ಲಿ ಹೇಳಿರೋದೆಲ್ಲಾ ನಿಜ!" ಎಂದರವರು.

ಕಾರ್ಮಿಕರಲ್ಲಿ ಹೆಚ್ಚಿನವರು, ದುಡಿತದಿಂದ ಬಳಲಿದವರು, ತೋರಿಸಿದ್ದು ನಿರುತ್ಸಾಹದ ಪ್ರತಿಕ್ರಿಯೆ.

---

*ಅಕ್ಕರೆಯಿಂದ ತಾಯಿ ಅಂದ್ರೇಯ್‌ನನ್ನು ಅಂದ್ರ್ಯೂಷ ಎಂದು ಕರೆಯುತ್ತಿದ್ದಳು; ನಮ್ಮಲ್ಲಿ ಕೃಷ್ಣಮೂರ್ತಿಯನ್ನು ಕಿಟ್ಟ ಎಂದು ಕರೆಯುವ ರೀತಿ. – ಅನು.

"ಇದರಿಂದೇನೂ ಪ್ರಯೋಜನವಾಗೋದಿಲ್ಲ. ಹೀಗೆಲ್ಲಾ ಮಾಡಿದರೆ ಕಷ್ಟ ಕಡಮೆಯಾಗೋದು ಎಲ್ಲಾದರೂ ಉಂಟೆ?"

ಆದರೂ ಕರಪತ್ರಗಳಿಂದ ಒಂದು ರೀತಿಯ ಗಡಿಬಿಡಿಯೇ ಆಯಿತು. ಒಂದು ವಾರವೆಲ್ಲಾ ಹೊಸ ಕರಪತ್ರಗಳು ಬರದಿದ್ದರೆ ಅದನ್ನು ಗಮನಿಸಿದ ಕೂಲಿಕಾರರು, "ಅಚ್ಚು ಹಾಕೋದನ್ನೇ ನಿಲ್ಲಿಸಿಬಿಟ್ಟಿದಾರೇಂತ ಕಾಣುತ್ತೆ," ಎಂದು ತಮ್ಮೊಳಗೇ ಮಾತಾಡಿಕೊಂಡರು.

ಆದರೆ ಮುಂದಿನ ಸೋಮವಾರ, ಮತ್ತೆ, ಹೊಸ ಕರಪತ್ರಗಳು ಬಂದುವು. ಮತ್ತೊಮ್ಮೆ ಕಾರ್ಮಿಕರೊಳಗೆ ಗುಜುಗುಜು ಮಾತು ಶುರುವಾಯಿತು.

ಕಾರಖಾನೆಯಲ್ಲೂ, ಪಾನಮಂದಿರದಲ್ಲೂ ಹೊಸ ಜನರು ಕಂಡುಬಂದರು. ಯಾರಿಗೂ ಅವರ ಪರಿಚಯವಿರಲಿಲ್ಲ. ಈ ಜನರು ಅತ್ತಿತ್ತ ನೋಡುತ್ತ, ಪ್ರಶ್ನೆಗಳನ್ನು ಕೇಳುತ್ತ, ಪ್ರತಿಯೊಬ್ಬರ ವಿಷಯದಲ್ಲೂ ತಲೆ ಹಾಕುತ್ತಿದ್ದರು. ಅವರ ವಿಶೇಷ ಜಾಗ ರೂಕತೆಯಿಂದಲೋ, ಅಥವಾ ಜನರೆಡೆಗೆ ತಾವಾಗಿಯೇ ಅವರು ಎರಗಿಬರುತ್ತಿದ್ದ ರೀತಿಯಿಂದಲೋ, ಜನರಲ್ಲಿ ಅವರ ಬಗೆಗೆ ಸಂಶಯ ಕೆರಳಿತು.

ತನ್ನ ಮಗನ ಕೆಲಸದಿಂದಲೇ ಇಷ್ಟೆಲ್ಲ ಗಡಿಬಿಡಿಯಾಗಿದೆಯೆಂದು ತಾಯಿಗೆ ಮನವರಿಕೆಯಾಯಿತು. ಜನ ಹೇಗೆ ಅವನ ಬಳಿಗೆ ಬಂದು ನೆರೆಯುತ್ತಿದ್ದರೆಂಬುದನ್ನು ಆಕೆ ಕಂಡಳು. ಅವನ ಕ್ಷೇಮದ ಬಗೆಗೆ ಅವಳು ಕಾತರಗೊಂಡಳು. ಆದರೂ ಆ ಕಾತರದೊಡನೆ ಮಗನ ವಿಷಯವಾಗಿ ಅಭಿಮಾನ ಬೆರೆಯಿತು.

ಒಂದು ದಿನ ಸಂಜೆ, ಮರೀಯ ಕೊರ್ಸುನೋವ, ವ್ಲಾಸೊವ್‌ರ ಮನೆಯ ಕಿಟಕಿಯನ್ನು ತಟ್ಟಿದಳು. ತಾಯಿ ಕಿಟಕಿ ತೆರೆದಾಗ ಆಕೆ ಗಟ್ಟಿಯಾದ ಪಿಸುಮಾತಿನಲ್ಲಿ ಹೇಳಿದಳು:

"ಪೆಲಗೇಯ, ಹುಷಾರಾಗಿರಮ್ಮ. ಕರೆಸಿಯೇ ಬಿಟ್ಟಿದ್ದಾರೆ! ಈ ರಾತ್ರೆ ನಿಮ್ಮನೆ, ಮಾಜಿನ್ನರ ಮನೆ, ವೆಸೊವ್‌ಶ್ಚಿಕೋವ್‌ರ ಮನೆ – ಎಲ್ಲಾ ಝಡತಿ ಮಾಡ್ತಾರಂತೆ."

ಮರೀಯಳ ದಪ್ಪನೆಯ ತುಟಿಗಳು ಬೇಗಬೇಗನೆ ಚಲಿಸಿದುವು. ಮಾಂಸದ ಮುದ್ದೆಯಂತಿದ್ದ ತನ್ನ ಮೂಗಿನಿಂದ ಸೊರಗುಟ್ಟುತ್ತ ಪಿಳಿಪಿಳಿ ಕಣ್ಣು ಬಿಟ್ಟು ಆ ಕಡೆ ಈ ಕಡೆ ನೋಡುತ್ತ, ಬೀದಿಯಲ್ಲಿದ್ದ ಯಾರೋ ಒಬ್ಬರ ಮೇಲೆ ಆಕೆ ಗಮನವನ್ನಿಟ್ಟಿದ್ದಳು.

"ನೋಡು! ನನಗೇನೂ ಗೊತ್ತಿಲ್ಲ! ನಾನು ನಿನಗೇನೂ ಹೇಳಿಲ್ಲ. ನಿನ್ನನ್ನು ನಾನು ಇವತ್ತು ನೋಡೇ ಇಲ್ಲ! ತಿಳೀತೆ?!" ಎಂದಳಾಕೆ.

ಇಷ್ಟು ಹೇಳಿ ಅವಳು ಮರೆಯಾದಳು.

ಕಿಟಕಿಯನ್ನು ಮುಚ್ಚಿ ತಾಯಿ ಒಂದು ಕುರ್ಚಿಯ ಮೇಲೆ ನಿಧಾನವಾಗಿ ಕುಸಿದು ಕುಳಿತಳು. ತನ್ನ ಮಗನಿಗೊದಗಿದ್ದ ಅಪಾಯದ ಗ್ರಹಿಕೆ ಆಕೆಯನ್ನು ಕೂಡಲೇ ಎಚ್ಚರಿಸಿತು. ಅವಸರವಸರವಾಗಿ ಬಟ್ಟೆ ಬದಲಾಯಿಸಿಕೊಂಡು, ತಲೆಗೊಂದು ಶಾಲು

ಸುತ್ತಿಕೊಂಡು, ಫ್ಯೋದೊರ್ ಮಾಜಿನ್ನನ ಮನೆಗೆ ಆಕೆ ಓಡಿದಳು. ಆತನು ಅಸ್ವಸ್ಥನಾಗಿದ್ದ. ಆದ್ದರಿಂದ ಕಾರಖಾನೆಗೆ ಹೋಗಿರಲಿಲ್ಲ. ಆಕೆ ಮನೆಯೊಳಗೆ ಬಂದಾಗ ಆತ, ಕಿಟಕಿಯ ಬಳಿ ಒಂದು ಪುಸ್ತಕವನ್ನೋದುತ್ತ ಕುಳಿತಿದ್ದ. ಬಲಗೈಯ ಹೆಬ್ಬೆರಳಿಗೇನೋ ನೋವಾಗಿತ್ತು. ಓದುತ್ತ ಜೊತೆಯಲ್ಲೆ ಆ ಹೆಬ್ಬೆರಳನ್ನು ಸವರುತ್ತ ಆತ ಕುಳಿತಿದ್ದ. ಸುದ್ದಿಯನ್ನು ಕೇಳಿದೊಡನೆಯೇ ಅವನ ಮುಖ ನಿಸ್ತೇಜವಾಯಿತು. ಆತ ಹೌಹಾರಿ ಎದ್ದು ನಿಂತ.

"ಅಗೊ! ಬಂತಲ್ಲಪ್ಪ ಗ್ರಹಚಾರ" ಎಂದು ಗೊಣಗಿದ.

ನಡುಗುವ ಕೈಯಿಂದ ಹಣೆಯ ಮೇಲಿನ ಬೆವರನ್ನೊರಸುತ್ತಾ ವ್ಲಾಸೊವ ಕೇಳಿದಳು:

"ಈಗ ನಾವೇನು ಮಾಡಬೇಕು?"

ಫ್ಯೋದೊರ್ ತನ್ನ ಗುಂಗುರು ಕೂದಲನ್ನು ನೋವಿಲ್ಲದ ಕೈಯಿಂದ ಹಿಂದಕ್ಕೆ ಸವರಿಕೊಳ್ಳುತ್ತ, "ಸ್ವಲ್ಪ ತಾಳಿ, ಗಾಬರಿ ಬೀಳಬೇಡಿ," ಎಂದು ಉತ್ತರವಿತ್ತ.

"ನೀನೇ ಗಾಬರಿ ಬಿದ್ದಿದ್ದೀಯಾ!" ಎಂದಾಕೆ ಉದ್ಗಾರವೆತ್ತಿದಳು.

"ನಾನು?" ಎಂದನಾತ. ಲಜ್ಜೆಯಿಂದ ಅವನ ಮುಖ ಕೆಂಪೇರಿತು. ಪ್ರಯತ್ನಪೂರ್ವಕವಾಗಿ ಆತ ಮುಗುಳ್ನಕ್ಕ. "ಹುಂ! ಆಗೋದೆಲ್ಲ ಆಗಲಿ!.. ಪಾವೆಲ್‌ಗೆ ಈ ವಿಷಯ ತಿಳಿಸ್ಬೇಕು. ನಾನು ಯಾರನ್ನಾದರೂ ಕಳಿಸ್ತೀನಿ. ನೀವು ಮನೆಗೆ ಹೋಗಿ. ಚಿಂತಿಸಬೇಡಿ. ಅವರೇನೂ ನಮ್ಮನ್ನು ಹೊಡೀಲಾರರು?!"

...ಮನೆ ತಲಪಿದ ಆಕೆ, ಪುಸ್ತಕಗಳನ್ನೆಲ್ಲ ಒಟ್ಟುಗೂಡಿಸಿದಳು. ಅವುಗಳನ್ನು ತನ್ನೆದೆಗೆ ಅವಚಿಕೊಂಡು, ಒಲೆಯ ಮೂಲೆಯಲ್ಲಿ, ನೀರಿನ ಪೀಪಾಯಿಯೊಳಕ್ಕೆ ಕೂಡಾ ಇಣುಕಿನೋಡುತ್ತ, ಅತ್ತಿತ್ತ ಓಡಿಯಾಡಿದಳು. ಪಾವೆಲ್ ಕಾರಖಾನೆಯಿಂದ ತಕ್ಷಣವೇ ಹೊರಟು ಬರುವನೆಂದು ಆಕೆ, ಭಾವಿಸಿದಳು. ಆದರೆ ಪಾವೆಲ್ ಬರಲಿಲ್ಲ. ಕಡೆಗೆ, ಬೇಸತ್ತು, ಅಡುಗೆ ಮನೆಯಲ್ಲಿ ಬೆಂಚಿನ ಮೇಲೆ ಪುಸ್ತಕಗಳನ್ನಿಟ್ಟು, ಅವುಗಳ ಮೇಲೆ ತಾನೇ ಕುಳಿತುಕೊಂಡಳು. ಪಾವೆಲ್ ಮತ್ತು ಹೊಹೋಲ್ ಮನೆಗೆ ಬರುವವರೆಗೂ ಕದಲದೆ ಅಲ್ಲಿಯೇ ಹಾಗೆಯೇ ಆಕೆ ಹೆದರಿ ಕುಳಿತಿದ್ದಳು.

ಅವರನ್ನು ಕಂಡೊಡನೆಯೇ, "ನಿಮಗೆ ಗೊತ್ತೆ?" ಎಂದಾಕೆ ಕೇಳಿದಳು.

ಪಾವೆಲ್ ಮುಗುಳ್ನಗುತ್ತ, "ಹೌದು, ಗೊತ್ತಿದೆ. ಹೆದರಿಕೆ ಆಗುತ್ತೇನು?" ಎಂದು ಕೇಳಿದ.

"ಅಯ್ಯೋ.... ತುಂಬ ಹೆದರಿಕೆಯಪ್ಪ.... ತುಂಬಾ ಹೆದರಿಕೆ...."

"ನೀವು ಹೆದರಬಾರದು. ಅದರಿಂದ ಯಾರಿಗೂ ಏನೂ ಸಹಾಯವಾಗೊಲ್ಲ," ಎಂದು ಹೊಹೋಲ್ ಹೇಳಿದನು.

ಅಡುಗೆ ಮನೆಯ ಕಡೆಗೆ ಇಣುಕಿ ನೋಡುತ್ತ ಪಾವೆಲ್ "ಇನ್ನೂ ಸಮೊವಾರ್ ಹಚ್ಚಿಲ್ವೆ?" ಎಂದ.

ತಪ್ಪಿತಸ್ಥಳಂತೆ ತಾಯಿ ಮೇಲಕ್ಕೆದ್ದು, ಪುಸ್ತಕಗಳನ್ನು ತೋರಿಸುತ್ತ, "ಸಮೊವಾರ್ ಹಚ್ಚದಿರೋಕೆ ಇಲ್ಲಿದೆ ನೋಡು ಕಾರಣ," ಎಂದಳು.

ಅವಳ ಮಗನೂ ಹೊಹೋಲನೂ ಗೊಳ್ಳನೆ ನಕ್ಕರು. ಇದರಿಂದ ಆಕೆಗೆ ಹಗುರವೆನಿಸಿತು. ಪಾವೆಲ್ ಆ ಪುಸ್ತಕಗಳಲ್ಲಿ ಕೆಲವನ್ನು ಆಯ್ದು, ಬಚ್ಚಿಡಲೆಂದು ಅಂಗಳಕ್ಕೆ ಕೊಂಡೊಯ್ದ.

ಸಮೊವಾರ್‌ಗೆ ಇಜ್ಜಿಲು ಹಾಕುತ್ತಾ ಹೊಹೋಲ್ ಹೇಳಿದ:

"ಹೆದರಬೇಕಾದ್ದೇನೂ ಇಲ್ಲ, ಅವ್ವಾ. ಇಂಥ ಅವಿವೇಕದಲ್ಲೇ ಜನರು ಕಾಲಹರಣ ಮಾಡ್ತಾರೆ ಅನ್ನೋದೇ ನಾಚಿಗೇಡು, ಅಷ್ಟೆ..... ನಡುವಿಗೆ ಕರವಾಳ ಬಿಗಿದ, ಬೂಟುಗಳಿಗೆ ಹಿಮ್ಮಡಿ ಮುಳ್ಳು ಹಾಕಿದ, ವಯಸ್ಸಾದ ಜನ ಇಲ್ಲಿಗೆ ಬರ್‍ತಾರೆ. ಎಲ್ಲದರ ಮೇಲೆ ಕೈಯಾಡಿಸಿ ಝಡತಿ ಮಾಡ್ತಾರೆ. ಹಾಸಿಗೆಯ ಬುಡದಲ್ಲೂ, ಒಲೆಯ ಮೂಲೆಯಲ್ಲೂ ಹುಡುಕ್ತಾರೆ. ನೆಲಮಾಳಿಗೆಯಿದ್ದರೆ ಅಲ್ಲಿಗೂ ಹೋಗಿ ನೋಡ್ತಾರೆ. ಅಟ್ಟದ ಮೇಲೂ ಹತ್ತಿ ಹುಡುಕ್ತಾರೆ. ಜೇಡರ ಬಲೆ ಅವರ ಮುಖಗಳಿಗೆಲ್ಲ ಮೆತ್ತಿಕೊಳ್ಳುತ್ತೆ. ಆಗ ಜಿಗುಪ್ಸೆಯಿಂದ ಗುರ್ರೆನ್ನುತ್ತಾರೆ. ಅವರಿಗೆ ಸಿಟ್ಟು ಬರ್‍ತದೆ. ನಾಚಿಕೆಯಾಗ್ತದೆ. ಅದನ್ನು ತೋರಿಸದಿರಲು ಕ್ರೂರಿಗಳ ಹಾಗೂ ತುಂಬಾ ರೇಗಿದವರ ಹಾಗೂ ನಟಿಸ್ತಾರೆ. ತಾವು ಮಾಡೋ ಕೆಲಸ ಎಷ್ಟು ಹೇಯವಾದ್ದೂಂತ ಅವರಿಗೂ ಚೆನ್ನಾಗಿ ಮನವರಿಕೆಯಾಗಿಯೇ ಆಗ್ತದೆ ... ಒಮ್ಮೆ, ನನ್ನ ಎಲ್ಲ ಸಾಮಾನುಗಳನ್ನು ಕೆದಕಿ ನೋಡಿ ಅವರಿಗೆ ಎಷ್ಟೊಂದು ತಳಮಳವಾಯ್ತೂಂದರೆ, ಅಲ್ಲಿ ನಿಲ್ಲದೆ ಅವರು ಹೊರಟೇ ಹೋದ್ರು. ಮತ್ತೊಮ್ಮೆ ಬಂದಾಗ, ನನ್ನನ್ನು ಜೊತೆಯಲ್ಲಿ ಕರೆಕೊಂಡು ಹೋದರು. ಸೆರೆಮನೆಗೆ ತಳ್ಳಿ ಸುಮಾರು ನಾಲ್ಕು ತಿಂಗಳ ಕಾಲ ನನ್ನನ್ನು ಅಲ್ಲಿಯೇ ಇಟ್ರು. ಸುಮ್ಮನೆ ಕೂತಿರೋದು, ಆಮೇಲೆ ಬುಲಾವ್ ಬರುತ್ತೆ, ಸೈನಿಕರು ರಸ್ತೆಗಳಲ್ಲಿ ನಡೆಸಿಕೊಂಡು ಹೋಗ್ತಾರೆ. ಯಾರೋ ಒಬ್ಬ ದೊಡ್ಡ ಅಧಿಕಾರಿ ಪ್ರಶ್ನೆಗಳನ್ನು ಕೇಳ್ತಾನೆ. ಈ ಅಧಿಕಾರಿಗಳು ಅಷ್ಟೇನೂ ಚುರುಕು ಬುದ್ಧಿಯವರಲ್ಲ. ಏನೇನೋ ತುಂಬ ಹರಟ್ತಾರೆ: ಆಮೇಲೆ, ಜೈಲಿಗೆ ವಾಪಸ್ ತಗೊಂಡು ಹೋಗೋದಕ್ಕೆ ಸೈನಿಕರಿಗೆ ಆಜ್ಞಾಪಿಸ್ತಾರೆ. ಹೀಗೆ ಅಲ್ಲಿಂದಿಲ್ಲಿಗೆ ಓಡಾಡಿಸ್ತಾರೆ. ತಮ್ಮ ಸಂಬಳ ಸಂಪಾದಿಸೋಕೆ ಅವರೇನಾದರೂ ಮಾಡಲೇಬೇಕಲ್ಲ! ಅಂತೂ ಕೊನೇಲಿ ಹೋಗೂಂತ ಬಿಟ್ಟಿಡ್ತಾರೆ. ಅಷ್ಟೆ!"

"ಅಂದ್ರ್ಯೂಷ! ನೀನು ಎಷ್ಟು ಸಲೀಸಾಗಿ ಹೇಳ್ತಿ!" ಎಂದು ತಾಯಿ ಉದ್ಗಾರವೆತ್ತಿದಳು.

ಬೆಂಕಿಯೂದಲು ಮೊಣಕಾಲೂರಿ ಬಾಗಿದ್ದ ಹಾಗೆಯೇ, ಕೆಂಪೇರಿದ ತನ್ನ ಮುಖವನ್ನೆತ್ತುತ್ತ, ಕಲ್ಲಿ ಮೀಸೆಯನ್ನು ತಿರುವುತ್ತ, ಆತ ಕೇಳಿದ:

"ಅಂದರೆ?"

"ನಿನಗೆ ಯಾರೂ ಯಾವತ್ತೂ ನೋಯಿಸಲಿಲ್ಲವೇನೋ ಅನ್ನೋ ಹಾಗೆ ಹೇಳ್ತಿ."

ಮೇಲಕ್ಕೆದ್ದು, ತಲೆಯಾಡಿಸುತ್ತ, ಮುಗುಳ್ನಗೆಯೊಡನೆ ಆತ ಹೇಳಿದ:

"ನೋವಾಗದೆ ಇರುವವರು ಈ ಪ್ರಪಂಚದಲ್ಲಿ ಯಾರಾದರೂ ಇದ್ದಾರಾ? ಅವರು ನನ್ನನ್ನು ನೋಯಿಸಿ ನೋಯಿಸಿ ಎಲ್ಲಿಗೆ ಬಂದಿದೇ ಅಂದರೆ, ಈಗ ಅದನ್ನು ನಾನು ಗಮನಿಸೋದೇ ಇಲ್ಲ. ಜನ ಹಾಗೆಯೇ ಇರತಕ್ಕವರೆಂದಮೇಲೆ, ನಾವೇನು ತಾನೇ ಮಾಡಲು ಸಾಧ್ಯ? ನೋವಾಗೋದನ್ನು ಗಮನಿಸ್ತಾ ಹೋದರೆ ಕೆಲಸಕ್ಕೆ ತಡೆಯಾಗ್ತದೆ. ಆಗಿರೋ ನೋವಿನ ಬಗ್ಗೆ ಯೋಚಿಸ್ತಾ-ಕೂತಿರೋದು ಶುದ್ಧ ಕಾಲ ವ್ಯಯ. ಬಾಳು ಇರೋದೇ ಹಾಗೆ! ಮುಂಚೆ ನಾನೂ ಜನರನ್ನು ಕಂಡಾಗ ಹುಚ್ಚಾಪಟ್ಟೆ ರೇಗ್ತಿದ್ದೆ. ಆಮೇಲೆ ಅದರಿಂದೇನೂ ಪ್ರಯೋಜನವಿಲ್ಲ ಅನ್ನೋದನ್ನ ಕಂಡುಕೊಂಡೆ. ತನ್ನ ನೆರೆಯಾತ ತನ್ನನ್ನೆಲ್ಲಿ ಅಪ್ಪಳಿಸ್ತಾನೆ ಅನ್ನೋದೇ ಪ್ರತಿಯೊಬ್ಬನಿಗೂ ಇರೋ ಹೆದರಿಕೆ. ಆದ್ದರಿಂದ ತಾನೇ ಮುಂಚಿತವಾಗಿ ಪಕ್ಕದವನ ಮುಖದ ಮೇಲೆ ಹೊಡೆಯಲು ಪ್ರಯತ್ನಿಸ್ತಾನೆ. ಜೀವನ ಸಾಗ್ತಿರೋದೆ ಹಾಗೆ, ನನ್ನವ್ವಾ!"

ನಯವಾಗಿ ಹರಿಯುತ್ತಿತ್ತು ಅವನ ಮಾತಿನ ಪ್ರವಾಹ. ಮುಂದೆ ಬರಲಿದ್ದ ಝಡತಿ ಕುರಿತಾದ ಆಕೆಯ ಭೀತಿಯನ್ನು ಅದು ಓಡಿಸಿತು. ಎದ್ದು ತೋರುತ್ತಲಿದ್ದ ಅವನ ಕಣ್ಣುಗಳು ಮುಗುಳ್ನಗೆ ಸೂಚಿಸಿದುವು. ಜಡವಾಗಿದ್ದರೂ ಆತ ಎಷ್ಟು ಚುರುಕಾಗಿದ್ದಾನೆಂಬುದನ್ನು ಆಕೆ ಕಂಡಳು.

ನಿಟ್ಟುಸಿರು ಬಿಟ್ಟಳು ತಾಯಿ.

"ದೇವರು ನಿನ್ನನ್ನು ಸುಖವಾಗಿಡಲಪ್ಪಾ ಅಂದ್ರ್ಯೂಷ!" ಎಂದು ತಾಯಿ ಹರಸಿದಳು.

ಹೊಹೋಲ್ ಮುಂದೆ ಸಾಗಿ ಸಮೊವಾರ್ ಎದುರು ಕುಳಿತ.

"ಒಂದಿಷ್ಟು ಸುಖ ಉಡುಗೊರೆಯಾಗಿ ಬಂದರೆ ನಾನೇನೂ ಅದನ್ನು ನಿರಾಕರಿಸೋದಿಲ್ಲ. ಆದರೆ, ಸುಖ ಬೇಕೂಂತ ನಾನು ಯಾವತ್ತೂ ಬೇಡಿಕೊಂಡು ಹೋಗಲಾರೆ," ಎಂದು ಆತ ಗೊಣಗುಟ್ಟಿದ.

ಪಾವೆಲ್ ಅಂಗಳದಿಂದ ಒಳಬಂದ. ಆತ್ಮವಿಶ್ವಾಸದಿಂದ ಆತ, "ಅವರೆಂದಿಗೂ ಅವುಗಳನ್ನು ಕಂಡುಹಿಡೀಲಾರರು," ಎನ್ನುತ್ತಾ, ಕೈಮುಖ ತೊಳೆಯತೊಡಗಿದ.

ಕೈಗಳ ಒದ್ದೆಯೊರೆಸುತ್ತ ತಾಯಿಯ ಕಡೆ ತಿರುಗಿ ಆತ ಮಾತಾಡಿದ:

"ಹೆದರಿದ್ದೀಂತ ನೀನು ಅವರಿಗೆ ತೋರಿಸ್ಕೊಂಡ್ರೆ, ಓಹೋ, ಈ ಮನೇಲಿ ಏನೋ ಇದೆ; ಆದ್ದರಿಂದಲೇ ಆಕೆ ನಡಗ್ತಾಳೆ ಎಂತ ಅವರು ಯೋಚಿಸ್ತಾರೆ. ನಾವು ತಪ್ಪಾದ್ದನ್ನೇನೂ ಮಾಡ್ತಾ ಇಲ್ಲ ಅನ್ನೋದು ನಿನಗೆ ಗೊತ್ತಿದೆ. ನ್ಯಾಯವಿರೋದು ನಮ್ಮ ಕಡೆ. ಈ ನ್ಯಾಯಕ್ಕಾಗಿ ಜೀವಮಾನವೆಲ್ಲಾ ನಾವು ದುಡೀತ್ತಿವಿ. ನಮ್ಮದೇನಾದರೂ ತಪ್ಪಿದ್ದರೆ ಅದು, ಒಂದು ನ್ಯಾಯಕ್ಕಾಗಿ ಹಾಗೆ ನಾವು ದುಡೀತಿರೋದು! ಆದ್ದರಿಂದ ಯಾಕೆ ಹೆದರಬೇಕು ನಾವು?"

"ನಾನು ಧೈರ್ಯವಾಗಿರ್ತೀನಪ್ಪಾ ಪಾಷ!" ಎಂದು ಆಕೆ ಮಾತುಕೊಟ್ಟಳು.

ಆದರೆ ಮರು ಉಸಿರಿನಲ್ಲೇ ಥಟಕ್ಕನೆ ಹೇಳಿದಳಾಕೆ: "ಅವರು ಆದಷ್ಟು ಬೇಗ ಬಂದು ಹೋಗಿ ಇದೆಲ್ಲಾ ಒಮ್ಮೆ ಮುಗಿದಿದ್ದರೆ!"

ಅವರು ಆ ದಿನ ರಾತ್ರಿ ಬರಲಿಲ್ಲ. ಮರುದಿನ ಬೆಳಗ್ಗೆ, ಹುಡುಗರು ಗೇಲಿ ಮಾಡುವುದಕ್ಕೆ ಮುಂಚೆಯೇ, ತಾಯಿ ತನ್ನ ಕುರಿತು ತಾನೇ ನಕ್ಕಳು.

"ಕನಸಿನಲ್ಲಿ ಗುಮ್ಮ ಕಂಡು ಹೆದರಿದ ಹಾಗಾಯಿತು," ಎಂದುಕೊಂಡಳು.

## ೧೦

ಭೀತಿ ಹುಟ್ಟಿಸಿದ ಆ ಸಂಜೆ ಕಳೆದು ಸುಮಾರು ಒಂದು ತಿಂಗಳ ತರುವಾಯ, ಪೋಲೀಸ್ ಸೈನಿಕರು ಅತ್ತ ಬಂದರು. ಪಾವೆಲ್ ಮತ್ತು ಅಂದ್ರೇಯ್‌ಯನ್ನು ನೋಡಲು ಬಂದ ನಿಕೊಲಾಯ್ ಆಗ ಮನೆಯಲ್ಲಿದ್ದ. ಅವರು ಮೂವರೂ ತಮ್ಮ ವೃತ್ತಪತ್ರಿಕೆಯ ಬಗ್ಗೆ ಚರ್ಚಿಸುತ್ತಿದ್ದರು. ರಾತ್ರಿ ಬಹಳ ಸಮಯ ಸರಿದಿತ್ತು – ಸುಮಾರು ನಡುರಾತ್ರಿಯ ಹೊತ್ತು. ಆ ವೇಳೆಗಾಗಲೇ ತಾಯಿ ಮಲಗಿದ್ದಳು. ಜೊಂಪು ಹತ್ತಿದಂತೆ ಆಕೆಗೆ, ಅವರ ಮೆಲ್ಲನೆಯ ಕಾತರದ ಸ್ವರಗಳು ಕೇಳಿಸುತ್ತಿದ್ದುವು. ಆಮೇಲೆ ಅಂದ್ರೇಯ್ ಎಚ್ಚರಿಕೆಯಿಂದ ಸದ್ದಿಲ್ಲದೆ ಅಡುಗೆ ಮನೆಯನ್ನು ಹಾದು ಬಾಗಿಲನ್ನು ಮುಚ್ಚಿದನು. ಹಿತ್ತಲಿನಲ್ಲಿ ಒಂದು ಬಕೀಟು ಉರುಳಿದ ಸದ್ದಾಯಿತು. ಒಳ ಬಾಗಿಲು ತೆರೆದು ಅಂದ್ರೇಯ್ ಅಡುಗೆಮನೆಯನ್ನು ಹೊಕ್ಕನು. ಗಟ್ಟಿಯಾಗಿ ಪಿಸುಗುಟ್ಟುತ್ತ ಆತ ಹೇಳಿದ:

"ಹಿಮ್ಮಡಿ ಮುಳ್ಳಿನ ಸಪ್ಪಳ ಕೇಳಿಸ್ತಿದೆ."

ತಾಯಿ ಹಾಸಿಗೆಯಿಂದ ಹಾರಿ ಎದ್ದಳು. ನಡುಗುತ್ತಿದ್ದ ಬೆರಳುಗಳಿಂದ ಬಟ್ಟೆ ಸರಿಪಡಿಸಿಕೊಂಡಳು. ಆದರೆ ಪಾವೆಲ್ ಬಾಗಿಲ ಬಳಿ ಬಂದು ನಿಂತು, ಶಾಂತವಾಗಿ ಹೇಳಿದ:

"ಮಲಗಿಕೋ ಹೋಗಮ್ಮ. ಮೈ ಚೆನ್ನಾಗಿಲ್ಲ ನಿನಗೆ. ತಿಳಿಯಿತೆ?"

ಹೊರಬಾಗಿಲ ಬಳಿ ಸರಪರನೆ ಸಪ್ಪಳವಾಯಿತು. ಪಾವೆಲ್ ಅತ್ತ ಹೋಗಿ,

"ಯಾರಲ್ಲಿ?" ಎಂದು ಕೇಳುತ್ತ ಬಾಗಿಲು ತೆರೆದ.

ತಕ್ಷಣ, ಎತ್ತರದ, ಬೂದು ಬಣ್ಣದ ಉಡುಪಿನ ವ್ಯಕ್ತಿಯೊಬ್ಬ ಬಂದನು. ತರುವಾಯ ಮತ್ತೊಬ್ಬನು ಬಂದನು. ಇಬ್ಬರು ಪೋಲೀಸರು ಪಾವೆಲ್‌ನನ್ನು ಒಂದಕ್ಕೆ ನೂಕಿ, ಅವನ ಇಬ್ಬದಿಗಳಲ್ಲೂ ನಿಂತರು.

"ಬಂದಿರೋದು ನೀನು ನಿರೀಕ್ಷಿಸುತ್ತಿದ್ದ ಜನರಲ್ಲ, ಅಂ?" ಎಂದೊಂದು ಗಟ್ಟಿಯಾದ ಅಪಹಾಸ್ಯದ ಸ್ವರ ಕೇಳಿಸಿತು.

ಹಾಗೆ ಮಾತನಾಡಿದವನು ಎತ್ತರದ ತೆಳ್ಳನೆಯ ಅಧಿಕಾರಿ. ಅಪರೂಪವಾದ ಕರಿ ಮೀಸೆಯಿತ್ತು ಅವನಿಗೆ. ಫೆದ್ಯಾಕಿನ್ ಎಂಬ ಹೆಸರಿನ ವಸತಿ ಪ್ರದೇಶದ ಸ್ಥಳೀಯ

ಪೋಲೀಸನೊಬ್ಬ ತಾಯಿಯ ಹಾಸಿಗೆಯ ಬಳಿಗೆ ಹೋದ, ಒಂದು ಕೈಯಿಂದ ಗೌರವ ಸೂಚಕವಾಗಿ ತನ್ನ ಟೋಪಿಯನ್ನು ಹಿಡಿದುಕೊಳ್ಳುತ್ತ, ಇನ್ನೊಂದು ಕೈಯನ್ನು ಪೆಲಗೇಯಳ ಮುಖದ ಕಡೆಗೆ ಚಾಚುತ್ತ.

"ಈಕೆ ಅವನ ತಾಯಿ, ಹುಜೂರ್!" ಎಂದ. ಪಾವೆಲ್‌ನ ಕಡೆಗೆ ಕೈ ಬೀಸುತ್ತ "ಈತನೇ ಆ ಇಸಂ," ಎಂದೂ ಹೇಳಿದ.

ಕಣ್ಣುಗಳನ್ನು ಕಿರಿದುಗೊಳಿಸುತ್ತ ನೆಟ್ಟ ದೃಷ್ಟಿಯಿಂದ ವ್ಲಾಸೊವ್‌ನನ್ನು ನೋಡುತ್ತ ಅಧಿಕಾರಿ ಪ್ರಶ್ನಿಸಿದ:

"ಪಾವೆಲ್ ವ್ಲಾಸೊವ್?"

ಹೌದೆಂದು ತಲೆದೂಗಿದ ಪಾವೆಲ್. ತನ್ನ ಮೀಸೆಯನ್ನು ಹುರಿಗೊಳಿಸುತ್ತ ಆ ಅಧಿಕಾರಿ ಮುಂದುವರಿಸಿದ:

"ನಾನು ನಿನ್ನ ಮನೇನ ಶೋಧನೆ ಮಾಡಬೇಕಾಗಿದೆ. ಏಯ್! ಎದ್ದೇಳು, ಮುದುಕಿ! ಯಾರಲ್ಲಿ?" ಬಾಗಿಲಿನ ಮೂಲಕ ಇಣಿಕಿ ನೋಡಿದ ಮೇಲೆ ಆತ ಇನ್ನೊಂದು ಕೋಣೆಯನ್ನು ಪ್ರವೇಶಿಸಿದ.

"ನಿಮ್ಮ ಹೆಸರುಗಳು?" ಎಂದಾತನ ಸ್ವರ ಕೇಳಿಸಿತು.

ಇಬ್ಬರು ಸಾಕ್ಷಿಗಳು ಹೊರ ಬಾಗಿಲ ಬಳಿ ಬಂದು ನಿಂತರು. ಒಬ್ಬಾತ, ಕಾರಖಾನೆಯ ಎರಕದ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ಹಳೆಯ ಕೂಲಿಕಾರ ತ್ವೆರ್ಯಕೋವ್, ಮತ್ತೊಬ್ಬ, ಕುಲುಮೆಯಾಳು ರೀಬಿನ್ – ದಪ್ಪನೆಯ ಮಾಸಲು ಬಣ್ಣದ ವ್ಯಕ್ತಿ – ತ್ವೆರ್ಯಕೋವ್ ಮನೆಯಲ್ಲಿಯೇ ಬಾಡಿಗೆಗಿದ್ದವನು.

ತಾಯಿಯತ್ತ ನೋಡುತ್ತ ರೀಬಿನ್ ತನ್ನ ಒಡಕು ಗಡಸು ಸ್ವರದಲ್ಲಿ, "ನಮಸ್ಕಾರ, ನೀಲೊವ್ನ," ಎಂದ.

ತಾಯಿ, ತನ್ನ ಉಡುಗೆ ಧರಿಸಿಕೊಳ್ಳುತ್ತಾ, ತನ್ನ ಧೈರ್ಯವನ್ನಡಗಿಸುವ ಸಲುವಾಗಿ ತನ್ನಷ್ಟಕ್ಕೆ ತಾನೇ ಗೊಣಗುತ್ತಿದ್ದಳು:

"ಹಿಂದೆ ಕಂಡಿಲ್ಲ, ಕೇಳಿಲ್ಲ! ನಡುರಾತ್ರೇಲಿ ಹೀಗೆ ಬರೋದು. ಜನವೆಲ್ಲ ಮಲಗಿರಬೇಕಾದರೆ ಬಂತು ಇವರ ಸವಾರಿ!"

ಆ ಜನರಿಂದ ಕೊಠಡಿ ತುಂಬಿಕೊಂಡಿತ್ತು; ಬೂಟ್ ಪಾಲಿಷಿನ ವಾಸನೆ ಬರುತ್ತಿತ್ತು. ಇಬ್ಬರು ಪೋಲೀಸ್ ಸೈನಿಕರೂ ಸ್ಥಳೀಯ ಪೋಲೀಸ್ ಅಧಿಕಾರಿಯೂ ಶೆಲ್ಫುಗಳಿಂದ ಪುಸ್ತಕಗಳನ್ನು ಗದ್ದಲಮಾಡುತ್ತ ಹೊರತೆಗೆದು, ಅಧಿಕಾರಿಯ ಮುಂದೆ, ಮೇಜಿನ ಮೇಲೆ, ರಾಶಿ ಹಾಕಿದರು. ಇನ್ನಿಬ್ಬರು, ಒಳಗೇನಾದರೂ ಇದೆಯೋ ಏನೋ ಎಂದು ಗೋಡೆಗಳಿಗೆ ದಬದಬನೆ ಗುದ್ದಿದರು, ಕುರ್ಚಿಗಳ ಕೆಳಕ್ಕೆ ಇಣಿಕಿ ನೋಡಿದರು. ಅವರಲ್ಲೊಬ್ಬನಂತೂ ಒಲೆಯ ಮೇಲಕ್ಕೂ ಹತ್ತಿಹೋದ. ಹೊಹೋಲ್ ಮತ್ತು ನಿಕೊಲಾಯ್ ಒಟ್ಟಿಗೆ ಒಂದು ಮೂಲೆಯಲ್ಲಿ ನಿಂತಿದ್ದರು. ನಿಕೊಲಾಯ್‌ನ ಸಿಡುಬು ಕಲೆಯ ಮುಖ ಕೆಂಪಡರುತಿತ್ತು. ಆತನ ಸಣ್ಣ ಬೂದುಗಣ್ಣುಗಳು ಅಧಿಕಾರಿಯನ್ನೇ

ದಿಟ್ಟಿಸಿ ನೋಡುತ್ತಿದ್ದುವು. ಹೊಹೋಲ್ ಮಿಾಸೆಯನ್ನು ತಿರುವುತ್ತಿದ್ದನು. ತಾಯಿ ಕೊಠಡಿಯ ಒಳಬಂದಾಗ ಸಣ್ಣದಾಗಿ ನಕ್ಕು, ಆಕೆಗೆ ಧೈರ್ಯ ಬರುವಂತೆ, ಆತ ತಲೆ ಯಾಡಿಸಿದ.

ತನ್ನೊಳಗಿನ ಅಳುಕನ್ನು ಜಯಿಸುವುದಕ್ಕೋಸ್ಕರ ಆಕೆ, ಎಂದಿನಂತೆ ಅಡ್ಡಡ್ಡವಾಗಿ ನಡೆಯಲಿಲ್ಲ. ಎದೆಯನ್ನು ಮುಂದಕ್ಕೆ ಚಾಚಿ ತಲೆಯೆತ್ತಿ ನೇರವಾಗಿ ನಡೆದಳು. ಇದು ಆಕೆಯ ಆಕೃತಿಗೊಂದು ಮೋಜಿನ ಗಾಂಭೀರ್ಯದ ಕಳೆ ಕೊಟ್ಟಿತು. ಭೀತಿಯ ಯಾವ ಚಿಹ್ನೆಯನ್ನೂ ತೋರಿಸದೆ ಆಕೆ ಗದ್ದಲ ಮಾಡುತ್ತ ಓಡಾಡಿದಳು. ಆದರೆ ಅವಳ ಹುಬ್ಬುಗಳು ಮಾತ್ರ ಕಂಪಿಸುತ್ತಿದ್ದುವು.

ಅಧಿಕಾರಿಯು ತನ್ನ ಬಿಳಿ ಕೈಗಳ ತೆಳ್ಳಗಿನ ಬೆರಳುಗಳಿಂದ ಪುಸ್ತಕಗಳನ್ನು ಸೆಳೆದುಕೊಳ್ಳುತ್ತ, ಬಲು ಬೇಗನೆ ಪುಟಗಳನ್ನು ತಿರುವಿ ಹಾಕಿ, ಸರಕ್ಕೆಂದು ಒಂದೊಂದಾಗಿ ಪಕ್ಕಕ್ಕೆ ಎಸೆದ. ಕೆಲ ಪುಸ್ತಕಗಳು ಸದ್ದಿಲ್ಲದೆ ನೆಲದ ಮೇಲೆ ಬಿದ್ದುವು. ಯಾರೂ ಒಂದು ಮಾತನ್ನೂ ಆಡಲಿಲ್ಲ. ಬೆವರಿಳಿಯುತ್ತಿದ್ದ ಪೋಲೀಸ್ ಸೈನಿಕರ ಏದುವ ಸ್ವರ; ಹಿಮ್ಮಡಿ ಮುಳ್ಳಿನ ಖಣ ಖಣಾಟ; ಆಗಾಗ್ಗೆ "ಇಲ್ಲಿ ನೋಡಿಯಾಯ್ತೆ?" ಎಂಬ ಪ್ರಶ್ನೆ –ಇಷ್ಟರ ಹೊರತಾಗಿ ಬೇರೆ ಸ್ವರಗಳೇ ಅಲ್ಲಿ ಕೇಳಿಬರುತ್ತಿರಲಿಲ್ಲ.

ತಾಯಿಯು ಪಾವೆಲ್‌ನ ಪಕ್ಕದಲ್ಲಿ ಗೋಡೆಯ ಬಳಿ ನಿಂತಳು. ತನ್ನ ಮಗ ನಂತೆಯೇ ತಾನೂ ಕೈಕಟ್ಟಿಕೊಂಡಳು. ಆಕೆಯ ದೃಷ್ಟಿ ಅಧಿಕಾರಿಯನ್ನು ಹಿಂಬಾಲಿ ಸುತ್ತಿತ್ತು. ತನ್ನ ಮೊಣಕಾಲುಗಳು ದುರ್ಬಲವಾಗುತ್ತಿದ್ದುವೆಂದು ಆಕೆಗೆ ಅನಿಸಿತು. ಒಣಪರೆಯೊಂದು ಆಕೆಯ ಕಣ್ಣ ನೋಟವನ್ನು ಮಂಕುಗೊಳಿಸಿತು.

"ಪುಸ್ತಕಗಳನ್ನು ನೀವು ನೆಲದ ಮೇಲೆ ಯಾಕೆ ಎಸೀತೀರಿ?" ಎಂದು ಒಮ್ಮೆಲೆ ನಿಕೊಲಾಯ್‌ನ ಕಟುಸ್ವರ ನೀರವತೆಯನ್ನು ಭೇದಿಸಿ ಬಂತು.

ತಾಯಿ ಬೆಚ್ಚಿಬಿದ್ದಳು. ತ್ವೆಯರ್ಕೋವ್ ಹೌಹಾರಿದ. ರೀಬಿನ್ ಗೊರಕ್ಕೆಂದು ಗಂಟಲು ಸಡಿಲಿಸಿ ನಿಕೊಲಾಯ್‌ನನ್ನು ನೇರವಾಗಿ ದಿಟ್ಟಿಸಿ ನೋಡಿದ.

ಅಧಿಕಾರಿ ಕಣ್ಣ ನೋಟವನ್ನು ಕಿರಿದುಗೊಳಿಸಿ, ನಿಕೊಲಾಯ್‌ನ ಶಿಲಾ ಸದೃಶ ವಾದ ಸಿಡುಬಿನ ಕಲೆಯ ಮುಖದತ್ತ ತನ್ನ ಇರಿಯುವ ನೋಟವನ್ನು ಬೀರಿದ. ಪುಸ್ತಕಗಳ ಪುಟಗಳ ಮೇಲೆ ಮತ್ತೂ ಬೇಗಬೇಗನೆ ಬೆರಳುಗಳನ್ನು ಓಡಿಸಲಾರಂಭಿಸಿದ. ಕೆಲವೊಮ್ಮೆ ಆತ, ಅಸಹನೀಯವಾದ ನೋವನ್ನು ಅನುಭವಿಸುವವನಂತೆ, ಶಕ್ತಿ ಹೀನನ ಪ್ರತಿಭಟನೆಯ ರೂಪವಾಗಿ ಗೋಳೋ ಎಂದು ಅಳಲು ಹೊರಟವನಂತೆ, ತನ್ನ ದೊಡ್ಡ ಬೂದುಗಣ್ಣುಗಳನ್ನು ವಿಶಾಲವಾಗಿ ತೆರೆಯುತ್ತಿದ್ದ.

ನಿಕೊಲಾಯ್ ಮತ್ತೆ ಹೇಳಿದ:

"ಏಯ್ ಸೈನಿಕ! ಆ ಪುಸ್ತಕಗಳನ್ನು ಎತ್ತಿಡು!"

ಎಲ್ಲ ಪೋಲೀಸ್ ಸೈನಿಕರೂ ಕಣ್ಣು ಹೊರಳಿಸಿ ಅವನತ್ತ ನೋಡಿದರು; ನೋಡಿದ ಬಳಿಕ ಅಧಿಕಾರಿಯತ್ತ ತಿರುಗಿದರು. ಅಧಿಕಾರಿ ತಲೆ ಎತ್ತಿ, ನಿಕೊಲಾಯ್‌ನ

ಬೃಹದಾಕೃತಿಯುತ್ತ ಕೆದಕುವ ಕಣ್ಣಿನಿಂದ ಮೇಲಕ್ಕೂ ಕೆಳಕ್ಕೂ ನೋಡಿದ. ನಿಧಾನವಾಗಿ ಮೂಗಿನಿಂದಲೇ ಸ್ವರ ಹೊರಡಿಸುತ್ತ ಆತ "ಹುಂ," ಎಂದ. ಆಮೇಲೆ "ಅವನ್ನೆತ್ತಿಡು," ಎಂದು ತನ್ನವನೊಬ್ಬನಿಗೆ ಆಜ್ಞಾಪಿಸಿದ.

ಪೋಲೀಸ್ ಸೈನಿಕರಲ್ಲೊಬ್ಬನು ಮೈಬಾಗಿಸಿ ಹರಡಿದ್ದ ಪುಸ್ತಕಗಳನ್ನು ಜೋಡಿಸಿ ಇಡಲಾರಂಭಿಸಿದ.

"ನಿಕೊಲಾಯ್ ಸುಮ್ಮನಿರೋದು ವಾಸಿ," ಎಂದು ತಾಯಿ ಪಾವೆಲ್‌ನೊಡನೆ ಪಿಸುನುಡಿದಳು.

ಆತ ಭುಜ ಕುಣಿಸಿ ಮೌನವಾಗಿದ್ದ. ಹೊಹೋಲ್ ತಲೆ ತಗ್ಗಿಸಿದ.

"ಈ ಬೈಬಲನ್ನು ಯಾರು ಓದ್ತಾರೆ?"

"ನಾನು," ಎಂದು ಪಾವೆಲ್ ಉತ್ತರಿಸಿದ.

"ಈ ಪುಸ್ತಕಗಳೆಲ್ಲಾ ಯಾರವು?"

"ನನ್ನವು,"ಎಂದ ಪಾವೆಲ್.

"ಒಳ್ಳೇದು," ಎಂದು ಅಧಿಕಾರಿ ಕುರ್ಚಿಯಲ್ಲೊರಗಿ ಕುಳಿತ. ಅವನ ತೆಳುಗೈಗಳ ಬೆರಳುಗಳು ನೆಟಿಗೆ ಮುರಿದುವು. ಮೇಜಿನಡಿಯಲ್ಲಿ ಕಾಲನ್ನ ನೀಡಿ ಮೀಸೆಯನ್ನಾತ ತೀಡಿದ.

"ನೀನೇಯೋ ಅಂದ್ರೇಯ್ ನಹೋದ್ಕ?" ಎಂದಾತ ನಿಕೊಲಾಯ್‌ನ ಕುರಿತು ಕೇಳಿದ.

"ಹೌದು," ಎಂದ ನಿಕೊಲಾಯ್, ಮುಂದಕ್ಕೆ ಹೆಜ್ಜೆಯನ್ನಿಟ್ಟು. ಹೊಹೋಲ್ ಆತನ ಭುಜ ಹಿಡಿದು ಹಿಂದಕ್ಕೆ ತಳ್ಳಿದ.

"ಅದು ತಪ್ಪು, ನಾನು ಅಂದ್ರೇಯ್...."

ಅಧಿಕಾರಿ ಕೈಯನ್ನೆತ್ತಿ ಕಿರುಬೆರಳನ್ನು ನಿಕೊಲಾಯ್‌ನ ಕಡೆಗೆ ತೋರಿಸುತ್ತ, "ಕದಲಬೇಡ! ಹುಷಾರ್!" ಎಂದ.

ಆಮೇಲೆ ಅವನು ತನ್ನ ಕಾಗದಪತ್ರಗಳನ್ನೋದಿ ಹುಡುಕತೊಡಗಿದ.

ಚಳಿಗಾಲದ ಬೆಳದಿಂಗಳ ಆ ರಾತ್ರೆ ಕಿಟಕಿಯ ಮೂಲಕ ಒಳಕ್ಕೆ ನೋಡುತಿತ್ತು. ಅಲ್ಲಿ ನಡೆಯುತ್ತಿದ್ದುದಕ್ಕೂ ತನಗೂ ಏನೇನೂ ಸಂಬಂಧವಿಲ್ಲವೆನ್ನುವ ಹಾಗೆ. ಹೊರಗೆ ಬೀದಿಯಲ್ಲಿ ಆ ಮನೆಯನ್ನು ಹಾದು ಹೋಗುತ್ತಿದ್ದ ಯಾರದೋ ಪಾದಗಳ ಕೆಳಗೆ ಮಂಜು ಕರಕ್ಕೆನ್ನುತ್ತಿತ್ತು.

ಅಧಿಕಾರಿ ಕೇಳಿದ:

"ನಹೋದ್ಕ! ಹುಂ! ರಾಜಕೀಯ ಖೈದಿಯಾಗಿ ಈಗಾಗಲೇ ಜೈಲಿಗೆ ಹೋಗಿ ಬಂದ ಹಕ್ಕಿಯಲ್ಲವಾ ನೀನು?"

"ಹೌದು, ರೊಸ್ತೋವ್‌ನಲ್ಲೊಮ್ಮೆ ಮತ್ತು ಇನ್ನೊಮ್ಮೆ ಸರಾತೊವ್‌ನಲ್ಲಿ. ಆದರೆ ಅಲ್ಲಿ ಪೋಲೀಸ್ ಸೈನಿಕರು ನನ್ನೊಡನೆ ಬಹುವಚನದಲ್ಲಿ ಮಾತನಾಡಿದರು."

ಅಧಿಕಾರಿಯು ತನ್ನ ಬಲಗಣ್ಣನ್ನು ಮುಚ್ಚಿ ಉಜ್ಜಿಕೊಂಡ. ಆಮೇಲೆ ತನ್ನ ಸಣ್ಣ ಹಲ್ಲುಗಳನ್ನು ಕಿಸಿಯುತ್ತ ಹೇಳಿದ:

"ಕಾರಖಾನೆಯಲ್ಲಿ ನಿಷಿದ್ಧ ಕರಪತ್ರಗಳನ್ನು ಹಬ್ಬಿಸುತ್ತಿರುವ ನೀಚರು ಯಾರು ಅನ್ನೋದು ನಿಮಗೇನಾದರೂ ಗೊತ್ತೆ?"

ಹೊಹೋಲ್ ಹಲ್ಲು ಕಿರಿದ. ತನ್ನ ಕಾಲ್ಬೆರಳುಗಳ ಮೇಲೆ ಹಿಂದಕ್ಕೂ ಮುಂದಕ್ಕೂ ತೂಗಾಡಿದ. ಉತ್ತರ ಕೊಡಲು ಬಾಯ್ದೆರೆದ. ಆದರೆ ಅಷ್ಟರಲ್ಲೇ ನಿಕೊಲಾಯ್‌ನ ಸ್ವರ ಮತ್ತೆ ಕೇಳಿಸಿತು:

"ನೀಚರ ದರ್ಶನ ಇದೇ ಮೊದಲ ಸಾರಿ ನಮಗೆ ಆಗ್ತಾ ಇದೆ."

ಅಗಾಧವಾದ ನಿಶ್ಶಬ್ದತೆ ನೆಲೆಸಿತು. ಕ್ಷಣಕಾಲ ಎಲ್ಲವೂ ಸ್ತಬ್ಧವಾದಂತಾಯಿತು.

ತಾಯಿಯ ಮುಖದ ಮೇಲಿನ ಗಾಯದ ಕಲೆ ಬಿಳುಪೇರಿತು. ಅವಳ ಬಲಗಡೆಯ ಹುಬ್ಬು ಮೇಲಕ್ಕೆ ಚಲಿಸಿತು. ರೀಬಿನ್ನನ ಕರಿಯ ಗಡ್ಡ ವಿಲಕ್ಷಣವಾಗಿ ನಡುಗಲಾರಂಭಿಸಿತು. ಬೆರಳುಗಳಿಂದ ಗಡ್ಡವನ್ನು ಬಾಚುತ್ತ ಆತ ನೆಲದತ್ತ ದೃಷ್ಟಿ ಹರಿಸಿ ನಿಂತ.

ಅಧಿಕಾರಿಯ ಆಜ್ಞೆ ಬಂತು:

"ಈ ದನವನ್ನಿಲ್ಲಿಂದ ಆಚೆಗೆ ಒಯ್ಯಿರಿ!"

ಇಬ್ಬರು ಪೋಲೀಸ್ ಸೈನಿಕರು ನಿಕೊಲಾಯ್‌ನ ರಟ್ಟೆ ಹಿಡಿದು, ಒರಟು ಒರಟಾಗಿ ಅಡುಗೆಮನೆಯೊಳಕ್ಕೆ ಆತನನ್ನು ತಳ್ಳಿದರು. ತನ್ನ ಕಾಲುಗಳಿಂದ ನೆಲವನ್ನು ತುಳಿಯುತ್ತ ಅಲ್ಲಿ ಆತ ನಿಂತ.

"ತಾಳು! ಕೋಟು ಹಾಕ್‌ಕೊಳ್ತೀನಿ!" ಎಂದಾತ ಕೂಗಿ ಹೇಳಿದ.

ಸ್ಥಳೀಯ ಪೋಲೀಸ್ ಅಧಿಕಾರಿ ಅಂಗಳದಿಂದ ಒಳಹೊಕ್ಕ.

"ಅಲ್ಲೇನೂ ಇಲ್ಲ. ಎಲ್ಲಾ ಕಡೆ ನೋಡಿಯಾಯ್ತು."

"ಸಹಜವೇ! ಇದು ಅನುಭವಿಕನ ಕೆಲಸ," ಎಂದು ಅಧಿಕಾರಿ ಅಪಹಾಸ್ಯದ ಧ್ವನಿಯಲ್ಲಿ ನುಡಿದ.

ಆತನ ದುರ್ಬಲ ಮುರುಕು ಸ್ವರವನ್ನು ತಾಯಿ ಕಿವಿಗೊಟ್ಟು ಕೇಳಿದಳು. ಅವನ ಅರಸಿನ ವರ್ಣದ ಮುಖದತ್ತ ಹೆದರಿಕೆ ತುಂಬಿದ ದೃಷ್ಟಿಯಿಂದ ನೋಡಿದಳು. ಆತ ನಿರ್ದಯನಾದ ಶತ್ರು, ಸಾಮಾನ್ಯ ಜನತೆಯ ಬಗೆಗೆ ಸಿರಿವಂತರು ತೋರುವಂಥ ತಿರಸ್ಕಾರ ಆತನಲ್ಲಿದೆ ಎಂಬುದನ್ನು ತಾಯಿ ತಿಳಿದುಕೊಂಡಳು. ಅಂಥ ವ್ಯಕ್ತಿಗಳೊಡನೆ ಆಕೆಯ ಸಂಪರ್ಕ ಬಹಳ ಕಡಮೆ. ಅಂಥ ಜನರೂ ಇದ್ದಾರೆಂಬುದನ್ನೇ ಆಕೆ ಮರೆತುಬಿಟ್ಟಿದ್ದಳು.

"ಹಾಗಾದರೆ, ಕರಪತ್ರಗಳನ್ನೋದಿ ತಬ್ಬಿಬ್ಬಾಗೋ ಜನ ಇಂಥವರೇ," ಎಂದು ಆಕೆ ಯೋಚಿಸಿದಳು.

"ಅಂದ್ರೇಯ್ ಒನೀಸಿಮೊವ್, ವಿವಾಹ ಬಾಹಿರವಾಗಿ ಹುಟ್ಟಿದವನು, ನಹೋದ್ಕ ಎಂಬ ಹೆಸರಿನವನು! ನಿನ್ನನ್ನು ಕೈದು ಮಾಡಲಾಗಿದೆ!"

ಹೊಹೋಲ್ ಶಾಂತವಾಗಿ ಕೇಳಿದ:

"ಯಾತಕ್ಕೋಸ್ಕರ?"

ದ್ವೇಷದ ನಾಜೂಕಿನ ನಗೆಯೊಡನೆ ಅಧಿಕಾರಿ ಹೇಳಿದ:

"ಅದನ್ನು ಆಮೇಲೆ ಹೇಳ್ತೀನೆ." ತಾಯಿಯತ್ತ ತಿರುಗಿ ಆತ ಕೇಳಿದ: "ನಿನಗೆ ಓದು ಬರಹಾ ಬರುತ್ತಾ?"

"ಇಲ್ಲ, ಆಕೆ ಅಕ್ಷರಸ್ಥಳಲ್ಲ," ಎಂದು ಪಾವೆಲ್ ಉತ್ತರ ಕೊಟ್ಟ.

"ನಿನ್ನನ್ನಲ್ಲ ಕೇಳ್ತಿರೋದು," ಎಂದು ಅಧಿಕಾರಿಯ ತೀಕ್ಷ್ಣ ಪ್ರತ್ಯುತ್ತರ ಬಂತು. ಸ್ವರವೇರಿಸಿ ಆತ ಹೇಳಿದ: "ಏಯ್ ಮದುಕಿ! ಮಾತಾಡು!"

ಆ ಮನುಷ್ಯನ ವಿಷಯವಾಗಿ ತಾಯಿಗೆ ದ್ವೇಷ ಉಕ್ಕೇರಿ ಬಂತು. ಇದ್ದಕಿದ್ದಂತೆ ತಣ್ಣೀರಿಗೆ ಧುಮುಕಿದ ಹಾಗೆ, ಆಕೆಯ ಅಂಗಾಂಗವೆಲ್ಲ ನಡುಗಿತು. ಆಕೆ ಸೆಟೆದು ನಿಂತಳು. ಗಾಯದ ಕಲೆ ಕಪ್ಪಿಟ್ಟಿತು. ಹುಬ್ಬುಗಳು ಕೆಳಕ್ಕೆ ಬಂದುವು.

ತನ್ನ ಕೈಯನ್ನು ಅಧಿಕಾರಿಯುತ್ತ ಮುಂದಕ್ಕೆ ಚಾಚುತ್ತ ತಾಯಿ ಹೇಳಿದಳು:

"ನೀವೇನೂ ಅರಚಬೇಕಾದ್ದಿಲ್ಲ. ತೊಂದರೆಯೆಂದರೆ ಏನೂಂತ ನಿಮಗಿನ್ನೂ ತಿಳೀದು. ಇನ್ನೂ ಯುವ ವಯಸ್ಸಿನವರು ನೀವು."

ತಾಯಿಯನ್ನು ತಡೆಯಲೆತ್ನಿಸುತ್ತ ಪಾವೆಲ್ "ಶಾಂತಳಾಗಮ್ಮ," ಎಂದನು.

"ತಾಳು, ಪಾವೆಲ್," ಉದ್ಗರಿಸಿದಳಾಕೆ. ಅವಳು ಮೇಜಿನತ್ತ ಧಾವಿಸಿದಳು. ಅಲ್ಲಿ ಅಧಿಕಾರಿಯ ಎದುರು ನಿಂತು ಕೇಳಿದಳು: "ನೀವೇಕೆ ಜನರನ್ನು ಹಿಡಿದೊಯ್ಯುತ್ತೀರಿ?"

"ನಿಮಗೆ ಸಂಬಂಧಪಟ್ಟ ವಿಷಯವಲ್ಲ ಅದು! ಬಾಯ್ಮುಚ್ಚಿ!" ಎಂದು ಅಧಿಕಾರಿ ಮೇಲಕ್ಕೇಳುತ್ತ ಗಟ್ಟಿಯಾಗಿ ಕೂಗಿದ. ಅವನ ಆಜ್ಞೆ ಬಂತು: "ವೆಸೊವ್‌ಶ್ಚಿಕೋವ್‌ನನ್ನು ಕರಕೊಂಡು ಬನ್ನಿ; ಅವನನ್ನೂ ದಸ್ತಗಿರಿ ಮಾಡಿದೀನಿ."

ಆಮೇಲೆ, ಮೂಗಿಗೆ ಸಮೀಪವಾಗಿ ಹಿಡಿದು ಯಾವುದೋ ಕಾಗದವನ್ನು ಆತ ಓದಿದ.

ನಿಕೊಲಾಯ್‌ನನ್ನು ಒಳಕ್ಕೆ ತಂದರು.

ಓದನ್ನು ಅರ್ಧದಲ್ಲೆ ನಿಲ್ಲಿಸಿ ಅಧಿಕಾರಿ, "ಟೋಪ್ಪಿಗೆ ತೆಗೆ!" ಎಂದು ಅರಚಿದ.

ರೀಬಿನ್ ವ್ಲಾಸೊವಳ ಬಳಿಗೆ ಬಂದ. ತನ್ನ ಭುಜದಿಂದ ಆಕೆಯನ್ನು ಮೆಲ್ಲನೆ ಮುಟ್ಟಿ, "ತಾಳ್ಮೆ ತಪ್ಪಬೇಡ ತಾಯೀ," ಎಂದ.

ಝಡ್ತಿ ಮಾಡಿದುದರ ವಿವರವನ್ನು ಓದುತ್ತಿದ್ದ ಅಧಿಕಾರಿಯ ಸ್ವರ ಕೇಳಿಸದಷ್ಟು ಗಟ್ಟಿಯಾಗಿ ನಿಕೊಲಾಯ್, "ನನ್ನ ರಟ್ಟೆಗಳನ್ನು ಹಿಡಕೊಂಡಿರುವಾಗ ಟೋಪಿ ತೆಗೆಯೋದು ಹ್ಯಾಗೆ?" ಎಂದು ಕೇಳಿದ.

ಕಾಗದವನ್ನು ಮೇಜಿನ ಮೇಲಕ್ಕೆ ಎಸೆಯುತ್ತ ಅಧಿಕಾರಿ, "ಇದಕ್ಕೆ ರುಜು ಮಾಡಿ," ಎಂದು ಕೂಗಿದ.

ಅವರು ಸಹಿಮಾಡುತ್ತಿದ್ದುದನ್ನು ನೋಡುತ್ತ ತಾಯಿಯ ಸಿಟ್ಟು ಇಳಿಯಿತು. ಚೈತನ್ಯ ಉಡುಗಿತು. ನೊಂದ ನಿಸ್ಸಹಾಯತೆಯ ಕಂಬನಿಯಿಂದ ಆಕೆಯ ಕಣ್ಣುಗಳು ತುಂಬಿ ಬಂದುವು. ದಾಂಪತ್ಯ ಜೀವನದ ಇಪ್ಪತ್ತು ವರ್ಷಗಳ ಕಾಲ ಅಂಥ ಕಣ್ಣೀರನ್ನೆಷ್ಟೋ ಸುರಿಸಿದ್ದಳಾಕೆ. ಆದರೆ ಕಳೆದ ಕೆಲವು ವರ್ಷಗಳಲ್ಲಿ ಕಂಬನಿಯ ತೀಕ್ಷ್ಣ ನೋವನ್ನು ಅವಳು ಮರೆತೇ ಬಿಟ್ಟಿದ್ದಳು. ಅಧಿಕಾರಿಯು ಆಕೆಯತ್ತ ನೋಡಿ, ದೊಡ್ಡಸ್ತಿಕೆಯ ಗಂಟುಮೋರೆ ತೋರಿಸುತ್ತ, ಹೇಳಿದ:

"ಅಷ್ಟೊಂದು ಕಣ್ಣೀರು ಖರ್ಚು ಮಾಡಬೇಡಿ, ತಾಯಿಯವರೇ ! ಈಗಲೇ ಇಷ್ಟಾದರೆ ಮುಂದೆ ಉಪಯೋಗಿಸೋಕೆ ಏನೂ ಉಳೀದೇ ಹೋದೀತು !"

ಕ್ರೋಧದ ತೆರೆ ಮತ್ತೊಮ್ಮೆ ಆಕೆಯನ್ನು ಆವರಿಸಿತು. ಆಕೆಯೆಂದಳು:

"ಒಬ್ಬ ತಾಯಿಯ ಹತ್ತಿರ ಸಾಕಷ್ಟು ಕಣ್ಣೀರು ಇರುತ್ತಪ್ಪಾ. ಪ್ರತಿಯೊಂದು ಸಮಯಕ್ಕೂ – ಪ್ರತಿಯೊಂದಕ್ಕೂ ! ನಿಮಗೂ ಒಬ್ಬ ತಾಯಿ ಇದ್ದರೆ ಆಕೆಗಿದು ಖಂಡಿತಾ ಗೊತ್ತಿರುತ್ತೆ !"

ಆ ಅಧಿಕಾರಿ ಅವಸರ ಅವಸರವಾಗಿ, ಹೊಳೆಯುವ ಬೀಗವಿದ್ದ ಹೊಸ ಕೈ ಪೆಟ್ಟಿಗೆಯಲ್ಲಿ, ಆ ಕಾಗದಗಳನ್ನು ತುರುಕಿದ.

"ಮಾರ್ಚ್ !" ಎಂದು ಹೊರಡಲು ಆತ ಆಜ್ಞೆಯಿತ್ತ.

ಪ್ರೀತಿಯಿಂದ ಶಾಂತವಾಗಿ ಪಾವೆಲ್ ಸಂಗಾತಿಗಳ ಕೈಕುಲುಕಿದ. "ಹೋಗಿ ಬಾ, ಅಂದ್ರೇಯ್ ! ಹೋಗಿ ಬಾ, ನಿಕೊಲಾಯ್ ! ಮರು ಭೇಟಿಯವರೆಗೆ !" ಎಂದನಾತ.

ಅಧಿಕಾರಿ ಕಿರು ನಗೆ ನಕ್ಕು, "ಸರಿಯಾಗಿ ಹೇಳಿದೆ. ಮರು ಭೇಟಿಯವರೆಗೆ. ಪ್ರಾಯಶಃ ನೀನೂ ಬೇಗನೆ ಬಂದೇ ಬರ್ತೀಯಾ !" ಎಂದ.

ನಿಕೊಲಾಯ್‌ನ ಉಸಿರಾಟ ತೀವ್ರವಾಯಿತು. ರಕ್ತ, ದಪ್ಪನೆಯ ಕೊರಳಿಗೆ ಏರಿಬರುತ್ತಿತ್ತು. ಕಟು ಕ್ರೋಧದಿಂದ ಕಣ್ಣುಗಳು ಕಿಡಿಕಾರುತ್ತಿದ್ದುವು. ಹೊಹೋಲ್ ಮುಗುಳ್ನಕ್ಕ; ತಲೆಯಾಡಿಸಿದ; ಪಿಸುಮಾತಿನಲ್ಲಿ ತಾಯಿಗೆ ಏನನ್ನೋ ಹೇಳಿದ. ತಾಯಿ ಶಿಲುಬೆಯ ವಂದನೆ* ಮಾಡಿದಳು.

"ಯಾರದ್ದು ನ್ಯಾಯ ಅನ್ನೋದನ್ನ ದೇವರು ನೋಡ್ತಾನೆ," ಎಂದಳಾಕೆ.

ಅಂತೂ ಕೊನೆಗೆ, ಬೂದು ಬಣ್ಣದ ಓವರ್‌ಕೋಟನ್ನು ಧರಿಸಿದ್ದ ಆ ಜನರು ಬಾಗಿಲ ಹತ್ತಿರ ಗುಂಪು ಕೂಡಿದರು. ಇಮ್ಮಡಿ ಮುಳ್ಳುಗಳ ಖಣ ಖಣಾಟದೊಡನೆ

---

*ಹಿಂದೂಗಳು ಕೈಮುಗಿಯುವಂತೆ, ದೈವಭಕ್ತ ಕ್ರಿಶ್ಚಿಯನ್ನರು ಶಿಲುಬೆ ಆಕಾರದ ಸನ್ನೆಮಾಡುತ್ತಾರೆ. – ಅನು.

ಹೊರಟು ಹೋದರು. ಕಟ್ಟಕಡೆಯಲ್ಲಿ ಹೊರಟವನು ರೀಬಿನ್. ಆತ ಮುಂದೆ ಹೋಗ ಲಾರದವನಂತೆ ಪಾವೆಲ್‌ನ ಕಡೆಗೊಮ್ಮೆ ದೃಷ್ಟಿ ಹಾಯಿಸಿದ. ತನ್ನ ಗಡ್ಡದೊಳಕ್ಕೆ ಕೆಮ್ಮುತ್ತ, "ಒಳ್ಳೇದು.... ಬರ್ತೀನಿ...." ಎನ್ನುತ್ತ ಬಾಗಿಲು ದಾಟಿ ಅವನು ಹೊರ ಹೋದ.

ಕೈಗಳನ್ನು ಬೆನ್ನ ಹಿಂದೆ ಇಟ್ಟುಕೊಂಡು ನೆಲದ ಮೇಲೆ ಚೆಲ್ಲಾಪಿಲ್ಲಿಯಾಗಿದ್ದ ಪುಸ್ತಕಗಳು ಮತ್ತು ಬಟ್ಟೆಗಳ ನಡುವೆ ಪಾವೆಲ್ ಶತಪಥ ಹಾಕಿದ. ಬೇಸರದಿಂದ ಅವನು ಹೇಳಿದ:

"ನೋಡಿದಿಯಾ? ಇದು ನಡೆಯೋದು ಹೀಗೆ!"

ತಾಯಿ, ನಂಬಲಾರದವಳ ಹಾಗೆ, ಆ ಅಸ್ತವ್ಯಸ್ತತೆಯನ್ನು ನೋಡಿದಳು.

"ನಿಕೊಲಾಯ್ ಯಾಕೆ ಅಷ್ಟೊಂದು ಒರಟಾಗಿ ಮಾತಾಡಿದ?" ಎಂದಾಕೆ ವಿಷಾದದ ಸ್ವರದಿಂದ ಕೇಳಿದಳು.

"ಗಾಬರಿಗೊಂಡು ಹೆದರಿದ ಅಂತ ತೋರುತ್ತೆ," ಎಂದು ಪಾವೆಲ್ ಉತ್ತರಿಸಿದ.

ತಾಯಿ ತನ್ನ ಕೈಗಳನ್ನು ಹಿಸುಕಿಕೊಂಡು ಗೊಣಗುಟ್ಟಿದಳು:

"ಒಳಗೆ ಬಂದು ಹಿಡಿದರು; ಎಳಕೊಂಡೇ ಹೋದರು, ಹುಂ, ಕಣ್ಣು ಮುಚ್ಚಿ ತೆರೆಯೋದರೊಳಗೆ."

ಆಕೆಯ ಮಗನನ್ನು ಬಂಧಿಸಿರಲಿಲ್ಲ. ಆದ್ದರಿಂದ ಅವಳ ಹೃದಯ ಸ್ವಲ್ಪ ಶಾಂತಿಯಿಂದ ಮಿಡಿಯುತ್ತಿತ್ತು. ಆದರೆ ತಾನು ಕಣ್ಣಾರೆ ಕಂಡು ತನ್ನ ಬುದ್ಧಿಗೆ ನಿಲುಕದ ಸಂಗತಿಯಿಂದ ಆಕೆಗೆ ದಂಗುಬಡಿದ ಹಾಗಾಗಿತ್ತು.

"ಅವನು, ಆ ಅರಸಿನ ಮೂತಿಯವನು ನಮ್ಮನ್ನು ಹೀಯಾಳಿಸ್ದ, ಹೆದರಿಸೋಕೆ ಪ್ರಯತ್ನಿಸ್ದ...."

ಒಮ್ಮೆಲೆ ದೃಢ ಮನಸ್ಕತೆಯಿಂದ ಪಾವೆಲ್ ಹೇಳಿದ:

"ಆಗಲಿ, ಅಮ್ಮ.... ಬಾ.... ಇದನ್ನೆಲ್ಲ ತೆಗೆದಿಡೋಣ."

ಆತ "ಅಮ್ಮ" ಎಂದು ಕರೆದಿದ್ದ. ಅದು ತಾಯಿಯೊಡನೆ ತೀರಾ ಆತ್ಮೀಯ ನಾಗಿ ಮಾತನಾಡಿದಾಗ ಆತ ಉಪಯೋಗಿಸುತ್ತಿದ್ದ ಪದ. ಮಗನ ಬಳಿ ಹೋಗಿ ತಾಯಿ ಅವನ ಮುಖವನ್ನು ನೋಡಿದಳು. ಮೆಲ್ಲನೆ ಅವಳು ಕೇಳಿದಳು:

"ಮನಸ್ಸಿಗೆ ತುಂಬ ನೋವಾಯ್ತೆ?"

"ಹೌದು, ಇದು ಕಷ್ಟ. ಅವರೊಡನೆ ನನ್ನನ್ನೂ ಕರಕೊಂಡು ಹೋಗಿದ್ದರೆ ವಾಸಿಯಾಗಿರ್ತಿತ್ತು," ಎಂದು ಆತ ಉತ್ತರಿಸಿದ.

ಅವನ ಕಣ್ಣುಗಳು ಹನಿಯಾಡುತ್ತಿದ್ದ ಹಾಗೆ ಆಕೆಗೆ ಭಾಸವಾಯಿತು. ಅಸ್ಪ ಷ್ಟವಾಗಿ ತಾಯಿ ಊಹಿಸಿ ತಿಳಿದ ಮಗನ ನೋವನ್ನು ಶಮನಗೊಳಿಸಲು ಯತ್ನಿ ಸುತ್ತ ನಿಟ್ಟುಸಿರು ಬಿಟ್ಟು ಹೇಳಿದಳು:

"ಸ್ವಲ್ಪ ತಾಳು. ನಿನ್ನನ್ನೂ ಕರಕೊಂಡು ಹೋಗ್ತಾರೆ."

"ಅದು ನಿಜ. ನನ್ನನ್ನೇನೂ ಬಿಡೋದಿಲ್ಲ," ಎಂದು ಆತ ಉತ್ತರ ಕೊಟ್ಟ.

ಕ್ಷಣಕಾಲ ಅವಳು ಸುಮ್ಮನಿದ್ದಳು. ಒಮ್ಮೆಲೆ ಆಕೆಯೆಂದಳು:

"ಪಾವೆಲ್! ನೀನೆಂಥ ಕಲ್ಲುಮನಸ್ಸಿನವನಪ್ಪ! ಒಂದು ಸಲವಾದರೂ ನಿನ್ನ ತಾಯಿಾನ ಸಮಾಧಾನಪಡಿಸಬಾರ್ದೆ? ನಾನೇ ಅಬದ್ಧ ಮಾತಾಡ್ತಿರಬೇಕಾದರೆ, ನೀನು ಭಯಂಕರವಾದ್ದನ್ನೇ ಹೇಳ್ತೀಯಾ!"

ಅವನು ತಲೆಯೆತ್ತಿ ನೋಡಿ, ಆಕೆಯ ಬಳಿ ಸಾರಿದ.

"ಹೇಗೆ ಸಮಾಧಾನಪಡಿಸ್ಬೇಕೋ ತಿಳೀದು, ಅಮ್ಮ. ಇದೆಲ್ಲಾ ನಿನಗೆ ಅಭ್ಯಾಸವಾಗ್ಬೇಕು."

ಆಕೆ ಸಿಟ್ಟುಸಿರುಬಿಟ್ಟಳು. ಸ್ವಲ್ಪ ತಡೆದು ಅಳುವನ್ನು ಹತ್ತಿಕ್ಕಿ, ಧ್ವನಿ ಬಿಕ್ಕದಂತೆ ಅವಳು ಕೇಳಿದಳು:

"ಅವರು ಜನರಿಗೆ ಚಿತ್ರಹಿಂಸೆ ಕೊಡ್ತಾರಾ? ಮೈ ಹರಿದು ಮೂಳೆ ಮುರೀತಾರಾ? ಹೌದೆ?... ಅಯ್ಯೋ.... ಅದನ್ನೆಲ್ಲಾ ನೆನಸ್ಕೊಂಡರೆ.... ಎಷ್ಟೊಂದು ಭಯಂಕರ!..."

"ಅವರು ವ್ಯಕ್ತಿತ್ವವನ್ನೇ ಮುರೀತಾರಮ್ಮ. ವ್ಯಕ್ತಿತ್ವದ ಮೇಲೆ ಅವರು ತಮ್ಮ ಕೊಳಕು ಕೈ ಇಟ್ಟಾಗ ಎಲ್ಲದಕ್ಕಿಂತ ಹೆಚ್ಚು ನೋವಾಗುತ್ತೆ...."

೧೧

ಆ ರಾತ್ರೆ ಕಳೆದು ಬೆಳಗಾಯಿತು; ಬೂಕಿನ್, ಸಮೋಯ್‌ಲೊವ್, ಸೋಮೊವ್ ಮತ್ತು ಬೇರೆ ಐದು ಜನರನ್ನೂ ಬಂಧಿಸಲಾಯಿತೆಂದು ತಿಳಿದು ಬಂತು. ಸಂಜೆ ಹೊತ್ತಿಗೆ ಫ್ಯೋದೊರ್ ಮಾಜಿನ್ ಪಾವೆಲ್‌ನ ಮನೆಗೆ ಬಂದ. ಫ್ಯೋದೊರ್‌ನ ಮನೆಯನ್ನೂ ಶೋಧಿಸಿದ್ದರು. ಆತನಿಗೆ ತುಂಬ ಖುಷಿಯಾಗಿತ್ತು. ತಾನೊಬ್ಬ ದೊಡ್ಡ ವ್ಯಕ್ತಿಯಾದೆ— ಎಂದು ಆತ ಭಾವಿಸಿಕೊಂಡಿದ್ದ.

"ಹೆದರಿಕೆಯಾಯ್ತೆ, ಫ್ಯೋದೊರ್?" ಎಂದು ತಾಯಿ ಕೇಳಿದಳು.

ಅವನ ಮೊಗ ಬಾಡಿತು. ಮುಖದ ಚಹರೆಗಳು ಚುರುಕಾದುವು. ಅವನ ಮೂಗಿನ ಹೊಳ್ಳೆಗಳು ಕಂಪಿಸಿದುವು.

"ಆ ಅಧಿಕಾರಿ ನನಗೆ ಹೊಡೀತಾನೇನೋ ಎಂತ ಹೆದರಿದ್ದೆ. ಹೇಗಿದ್ದ, ಗೊತ್ತೆ? ಒಳ್ಳೇ ಕೊಬ್ಬಿದ್ದ. ಕಪ್ಪು ಗಡ್ಡ. ಕೈ ಬೆರಳುಗಳ ಮೇಲೆಲ್ಲ ಕೂದಲು. ಮೂಗಿನ ಮೇಲೆ ಕಪ್ಪು ಕನ್ನಡಕ. ಕಣ್ಣುಗಳೇ ಇರ್ಲಿಲ್ಲವೇನೋ ಅನ್ನಿಸ್ತಿತ್ತು. ಅವನು ಕೂಗಾಡ್ತಾ ನೆಲವನ್ನು ಧೊಪಧೊಪನೆ ಒದೀತಾನೇ ಇದ್ದ. 'ನಿನ್ನ ಜೈಲಿಗೆ ಹಾಕ್ತೀನಿ!' ಎಂದು ಗರ್ಜಿಸಿದ. ಎಂದೂ ಯಾರೂ ನನ್ನ ಹೊಡೆದದ್ದೇ ಇಲ್ಲ. ಅಪ್ಪ, ಅಮ್ಮ ಯಾರೂ ಹೊಡೆದದ್ದೇ ಇಲ್ಲ. ನಾನು ಅವರಿಗಿದ್ದ ಒಬ್ಬನೇ ಮಗ. ಅವರು ನನ್ನ ತುಂಬ ಪ್ರೀತಿಸ್ತಿದ್ದರು."

ಎವೆಗಳನ್ನೊತ್ತಿ ಗಟ್ಟಿಯಾಗಿ ಆತ ಕ್ಷಣಕಾಲ ಕಣ್ಣುಗಳನ್ನು ಮುಚ್ಚಿಕೊಂಡ. ತುಟಿಗಳನ್ನು ಬಿಗಿ ಹಿಡಿದ. ಎರಡೂ ಕೈಗಳಿಂದ ಸರ್ರನೆ ತಲೆಗೂದಲನ್ನು ಹಿಂದಕ್ಕೆ ಸರಿಸಿಕೊಂಡನು. ಆ ಮೇಲೆ ಕೆಂಪಾದ ಕಣ್ಣುಗಳಿಂದ ಪಾವೆಲ್‌ನನ್ನು ನೋಡುತ್ತಾ ಆತ ಹೇಳಿದ:

"ನನ್ನ ಯಾವನಾದರೂ ಹೊಡೆಯೋ ಸಾಹಸ ಮಾಡಿದಾಂತಂದ್ರೆ ಅವನ ಹೆಣ ಬೀಳಿಸ್ತೀನಿ. ಚಾಕುವಿಂದ ತಿವಿದ ಹಾಗೆ ಸೀಳ್ತೀನಿ. ಹಲ್ಲಿನಿಂದ ಕಚ್ಚಿ ಹರೀತೀನಿ. ಅವರು ಒಂದೇ ಸಲಕ್ಕೆ ಕೊಂದುಬಿಡಲಿ ನನ್ನನ್ನು, ಬೇಕಾದರೆ!"

"ಇಷ್ಟೆಲ್ಲಾ ಮಾಡ್ತೀನಿ ಅಂತಿಯಲ್ಲಪ್ಪಾ – ಒಳ್ಳೇ ನರಪೇತಲನ ಹಾಗಿದ್ದೀ ಯಲ್ಲಾ – ಅದೇನು ಮಾಡ್ತೀಯೋ!" ಎಂದು ತಾಯಿ ಉದ್ಗಾರವೆತ್ತಿದಳು.

ಫ್ಯೋದೊರ್‌ನ ಸ್ವರ ತಗ್ಗಿತು.

"ಏನೇ ಇರಲಿ, ನಾನೊಂದು ಕೈ ನೋಡೋದೇ ಸರಿ," ಎಂದಾತ ಮೆಲ್ಲನೆ ಉತ್ತರವಿತ್ತ.

ಫ್ಯೋದೊರ್ ಹೊರಟುಹೋದ ಮೇಲೆ ತಾಯಿ, "ಮೊದಲು ಕುಸಿದು ಬೀಳೋನು ಇವನೇ," ಎಂದಳು.

ಪಾವೆಲ್ ಸುಮ್ಮನಿದ್ದ.

ಕೆಲ ನಿಮಿಷಗಳಲ್ಲೇ ಅಡುಗೆ ಮನೆಯ ಬಾಗಿಲು ನಿಧಾನವಾಗಿ ತೆರೆದುಕೊಂಡಿತು. ರೀಬಿನ್ ಒಳಗೆ ಬಂದ.

ನಸುನಗುತ್ತ ಅವನು ನಮಸ್ಕರಿಸಿದ:

"ಪುನಃ ಬಂದಿದೀನಿ. ನಿನ್ನೆ, ಅವರು ಕರಕೊಂಡುಬಂದ್ರು. ಇವತ್ತು, ನಾನಾಗಿಯೇ ಬಂದೆ."

ಅವನು ಪಾವೆಲ್‌ನ ಕೈಯನ್ನು ಆದರಪೂರ್ವಕವಾಗಿ ಕುಲುಕಿದ. ತಾಯಿಯ ಭುಜವನ್ನು ತಟ್ಟಿದ.

"ಏನಮ್ಮಾ, ಚಹಾ ಕೊಡ್ತೀ ತಾನೆ?" ಎಂದು ಕೇಳಿದ.

ಪಾವೆಲ್ ಅವನ ವಿಶಾಲವಾದ ಶ್ಯಾಮಲ ಮುಖವನ್ನು, ದಟ್ಟವಾದ ಕರಿಯ ಗಡ್ಡ ಮತ್ತು ಮಾಸಲುಗಣ್ಣುಗಳನ್ನು, ಮೌನವಾಗಿ ಪರಿಶೀಲಿಸಿದನು. ರೀಬಿನ್ನನ ಶಾಂತ ನೋಟದಲ್ಲಿ ಗಮನಾರ್ಹವಾದುದೇನೋ ಇದ್ದಹಾಗಿತ್ತು.

ತಾಯಿ ಸಮೊವಾರನ್ನು ಬಿಸಿ ಮಾಡಲು ಅಡುಗೆ ಮನೆಗೆ ಹೋದಳು. ರೀಬಿನ್ ಕುಳಿತುಕೊಂಡು, ಮೊಣಕೈಗಳನ್ನು ಮೇಜಿನ ಮೇಲೂರಿ, ಪಾವೆಲ್‌ನತ್ತ ನೋಡಿದ.

ನಡುವೆ ತಡೆದು ನಿಂತ ಸಂಭಾಷಣೆಯನ್ನು ಮತ್ತೆ ಮುಂದುವರಿಸುವವನಂತೆ, ಆತ ಮಾತನಾಡಿದ:

"ಇನ್ನೇನಪ್ಪ? ಮುಚ್ಚುಮರೆಯಿಲ್ಲದೆ ನಿನ್ನ ಕೂಡೆ ಮಾತಾಡಲೇ ಬೇಕಾಗಿದೆ.

ಈಚೆಗೆ ಸ್ವಲ್ಪ ಕಾಲದಿಂದ ನಿನ್ನ ಮೇಲೆ ಕಣ್ಣಿಟ್ಟಿದ್ದೆ ನೋಡು. ಇಲ್ಲೇ ನೆರೆಮನೇಲೇ ನಾನು ಇರೋದು. ನಿನ್ನ ಮನೆಗೆ ಬಹಳ ಜನ ಬರೋದನ್ನು ನೋಡ್ತಾ ಇದ್ದೆ. ಆದರೆ ಕುಡಿತವಿಲ್ಲ, ಜಗಳವಿಲ್ಲ. ಇದು ಮೊದಲ್ನೇ ವಿಷಯ. ಒಳ್ಳೇ ನಡತೆ ಇರುವವರ ಕಡೆ ಗಮನ ಹೋಗಿಯೇ ಹೋಗುತ್ತಲ್ಲ! ಇವರು ಯಾಕಪ್ಪಾ ಹೀಗೆ – ಅಂತ. ನಾನಿದೇನಲ್ಲ – ನಾನಾಯ್ತು, ನನ್ನ ಕೆಲಸವಾಯ್ತು. ಇಷ್ಟಕ್ಕೇ ಎಷ್ಟೋ ಜನ ನನ್ನನ್ನು ಬಿರಬಿರನೆ ನೋಡ್ತಾರೆ!"

ಅವನ ಮುಸುಕು ಕೈ ಗಡ್ಡವನ್ನು ಸವರಿಕೊಳ್ಳುತ್ತಿತ್ತು. ನೋಟ, ಪಾವೆಲ್‌ನ ಮುಖವನ್ನು ಆಸಕ್ತಿಯಿಂದ ನಿರೀಕ್ಷಿಸುತ್ತಿತ್ತು. ನಯವಾಗಿ, ಗಡುಸಾಗಿ ಹರಿಯುತ್ತಿತ್ತು ಮಾತು.

"ಜನ ನಿನ್ನ ವಿಷಯವಾಗಿ ಮಾತಾಡೋಕೆ ಶುರು ಮಾಡಿದಾರೆ. ಉದಾಹರಣೆಗೆ ನನ್ನ ಮನೆ ಮಾಲೀಕ. ನೀನು ಚರ್ಚಿಗೆ ಹೋಗದೆ ಇರೋದರಿಂದ ನಿನ್ನನ್ನು 'ಪಾಷಂಡಿ' ಅಂತಾನೆ. ನಾನೂ ಹೋಗೋದಿಲ್ಲ ಚರ್ಚಿಗೆ. ಇನ್ನು ಆ ಕರಪತ್ರಗಳು. ಅದೆಲ್ಲಾ ನಿನ್ನ ಕೆಲಸವೇ?"

"ಹೌದು," ಎಂದು ಪಾವೆಲ್ ಉತ್ತರಿಸಿದ.

ಅಡುಗೆ ಮನೆಯ ಬಾಗಿಲಿಂದ ತಲೆ ಹೊರಗೆ ಹಾಕುತ್ತ ಗಾಬರಿಯಿಂದ ತಾಯಿ ಕೂಗಿದಳು:

"ಏನು ನೀನು ಹೇಳ್ತಿರೋದು? ನೀನು ಒಬ್ಬನೇ ಅಲ್ಲ!"

ಪಾವೆಲ್ ನಕ್ಕ. ರೀಬಿನ್ ಕೂಡಾ.

"ಹಾಗೇ ಆಗಲಿ," ಎಂದನು ರೀಬಿನ್.

ಅವರು ತನ್ನ ಮಾತಿಗೆ ಅಷ್ಟೇನೂ ಬೆಲೆ ಕೊಡದಿದ್ದನ್ನು ಕಂಡು ತಾಯಿಗೆ ಸ್ವಲ್ಪ ನೋವಾಯಿತು. ದುರುಗುಟ್ಟಿಕೊಂಡು ಒಳಹೋದಳು.

"ಆ ಕರಪತ್ರಗಳು ಒಳ್ಳೇ ಯೋಚನೆ.... ಜನರನ್ನು ಕೆರಳಿಸ್ತವೆ.... ಒಟ್ಟು ಎಲ್ಲಾ ಹತ್ತೊಂಭತ್ತು ಇದ್ವಲ್ವೆ?"

"ಹೌದು," ಎಂದು ಪಾವೆಲ್ ಉತ್ತರ ಕೊಟ್ಟನು.

"ಹಾಗಾದರೆ ಅವನ್ನೆಲ್ಲಾ ನಾನು ಓದಿದೇನೆ. ಅಲ್ಲಿ ಕೆಲ ವಿಷಯಗಳು ಸ್ಪಷ್ಟವಾಗಿಲ್ಲ. ಕೆಲವು ಅನಾವಶ್ಯ. ಆದರೆ ಹೇಳಬೇಕಾದ್ದು ತುಂಬಾ ಇರುವಾಗ ಒಂದೆರಡು ಮಾತು ಹೆಚ್ಚು ಹೇಳದೇ ಇರೋಕಾಗೋದಿಲ್ಲ."

ಬಿಳಿಯ ಗಟ್ಟಿಮುಟ್ಟಾದ ಹಲ್ಲುಗಳನ್ನು ಕಾಣಿಸುತ್ತ, ರೀಬಿನ್ ಮುಗುಳ್ನಕ್ಕ.

"ಆಮೇಲೆ ಬಂತು ಜಪ್ತಿ. ನನ್ನನ್ನು ಸಂಪೂರ್ಣವಾಗಿ ಈ ಕಡೆ ಸೆಳೆದದ್ದು ಬಹಳ ಮಟ್ಟಿಗೆ ಅದೇನೇ. ನೀನು, ಹೊಹೋಲ್ ಮತ್ತು ನಿಕೊಲಾಯ್ – ನೀವೆಲ್ಲರೂ...."

ಮನಸ್ಸಿನಲ್ಲಿದ್ದುದನ್ನು ವ್ಯಕ್ತಮಾಡಲು ಸರಿಯಾದ ಶಬ್ದ ಹುಡುಕುತ್ತ ರೀಬಿನ್

ಸುಮ್ಮನಾದ; ಕಿಟಕಿಯು ಹೊರನೋಡಿದ; ತನ್ನ ಬೆರಳುಗಳಿಂದ ಮೇಜನ್ನು ಟಪ ಟಪನೆ ತಟ್ಟಿದ.

"...ನೀವೆಲ್ಲರೂ ನಿಮ್ಮ ಧೋರಣೇನ ಸ್ಪಷ್ಟಪಡಿಸಿದಿರಿ. 'ನಿಮ್ಮ ಕೆಲಸ ನೀವು ಮಾಡಿ, ಹುಜೂರ್, ನಮ್ಮದನ್ನು ನಾವು ಮಾಡ್ತೇವೆ' ಎಂದ ಹಾಗೆ. ಹೊಹೋಲ್ ಕೂಡಾ ಒಳ್ಳೇ ಮನುಷ್ಯ. ಕಾರಖಾನೇಲಿ ಒಮ್ಮೊಮ್ಮೆ ಆತ ಮಾತಾಡೋದನ್ನ ಕೇಳಿ, ಈ ಮನುಷ್ಯನ್ನ ಯಾರಿಂದಲೂ ಮುರಿಯೋಕಾಗಲ್ಲ ಅಂತ, ನನ್ನಷ್ಟಕ್ಕೆ ನಾನೇ ಯೋಚಿಸ್ತಿದ್ದೆ. ಆತನ್ನ ಕೆಡವೋದು ಸಾವು ಮಾತ್ರ. ಮೈಯೆಲ್ಲಾ ಮೆದು ಎಲುಬೇ.... ಪಾವೆಲ್, ನನ್ನ ನಂಬ್ತೀಯಾ?"

"ಹುಂ, ನಂಬ್ತೀನಿ," ಎಂದು ತಲೆಯಾಡಿಸಿದ ಪಾವೆಲ್.

"ಒಳ್ಳೇದು! ನನ್ನ ಕಡೆ ನೋಡು – ನಲವತ್ತು ವರ್ಷವಾಯ್ತು – ನಿನ್ನ ಎರಡ ರಷ್ಟು ವಯಸ್ಸು. ನೀನು ಕಂಡಿರೋದರ ಇಪ್ಪತ್ತರಷ್ಟನ್ನು ನೋಡಿದೀನಿ. ಮೂರು ವರ್ಷಕ್ಕೂ ಹೆಚ್ಚು ಕಾಲ ಸೈನ್ಯದಲ್ಲಿದ್ದೆ. ಎರಡು ಸಲ ಮದುವೆ ಮಾಡ್ಕೊಂಡೆ. ಮೊದ ಲನೆಯವಳು ಸತ್ತಳು; ಎರಡನೆಯವಳನ್ನ ನಾನೇ ಓಡಿಸ್ಬಿಟ್ಟೆ. ಕಾಕಸಸ್‌ಗೆ ಹೋಗಿದ್ದೆ ಆತ್ಮಹೋರಾಟಗರ*ನ್ನು ಕಂಡಿದೀನಿ. ಪ್ರಯೋಜನವಿಲ್ಲ ಅವರು. ಜೀವನದ ವಿಷಯ ವಾಗಿ ಏನು ಮಾಡಬೇಕೂಂತ ತಿಳಿವಳಿಕೆ ಇಲ್ಲ ಅವರಿಗೆ."

ತಾಯಿ ಆತನ ಅನುಭವದ ಮಾತನ್ನು ಆತುರದಿಂದ ಕೇಳಿದಳು. ಆ ನಡು ವಯಸ್ಸಿನ ಮನುಷ್ಯ ತನ್ನ ಮಗನೊಡನೆ ಮನಸ್ಸು ಬಿಚ್ಚಿ ಮಾತನಾಡುತ್ತಿರುವುದು ಆಕೆಗೆ ಸಂತೋಷವನ್ನುಂಟು ಮಾಡಿತು. ಆದರೆ ಪಾವೆಲ್‌ನ ಪ್ರತಿಕ್ರಿಯೆ ತೀರ ಶುಷ್ಕ ವಾಗಿದೆಯೆಂದು ಆಕೆಗನಿಸಿತು. ತನ್ನ ಆತಿಥ್ಯದ ಸವಿಮಾತಿನಿಂದ, ಮಗನ ಒಣ ನಡ ತೆಯ ಕೊರತೆಯನ್ನು ನೀಗಿಸಲು ಆಕೆ ಯತ್ನಿಸಿದಳು:

"ಮಿಹಯಿಲ್ ಇವಾನೊವಿಚ್! ತಿನ್ನಲು ಏನಾದರೂ ಕೊಡಲೆ?"

"ಬೇಡಮ್ಮ, ನನ್ನ ಊಟವಾಗಿದೆ," ಎಂದ ರೀಬಿನ್. ಅದೇ ಉಸಿರಿನಲ್ಲಿ ಆತ ಹೇಳಿದ: "ಹಾಗಾದರೆ, ಪಾವೆಲ್, ಜೀವನ ಹೇಗಿರಬೇಕೋ ಹಾಗೆ ಇಲ್ಲ ಅಂತೀಯಾ?"

ಪಾವೆಲ್ ಮೇಲಕ್ಕೆದ್ದು, ತನ್ನ ಕೈಗಳೆರಡನ್ನೂ ಬೆನ್ನ ಹಿಂದೆ ಬಿಗಿ ಹಿಡಿದು ಕೊಂಡು ಅತ್ತಿಂದಿತ್ತ ತುಳಿಯಲಾರಂಭಿಸಿದ.

"ಜೀವನ ಸರಿಯಾದ ಮಾರ್ಗವನ್ನೇ ಅವಲಂಬಿಸ್ತಾ ಇದೆ," ಎಂದು ಆತ ಉತ್ತರವಿತ್ತ. "ಬಿಚ್ಚು ಮನಸ್ಸಿನಿಂದ ನಿಮ್ಮನ್ನು ನನ್ನ ಹತ್ತಿರ ಕರೆತಂದುದ್ದು ಅದೇ ಅಲ್ವೆ? ಜೀವಮಾನವೆಲ್ಲಾ ದುಡೀತಲೇ ಸವೆಯುತ್ತಿರೋ ನಮ್ಮನ್ನೆಲ್ಲಾ, ಸ್ವಲ್ಪ ಸ್ವಲ್ಪವಾಗಿ ಅದು ಒಂದುಗೂಡಿಸ್ತಿದೆ. ಎಲ್ಲರನ್ನೂ ಒಂದುಗೂಡಿಸುವ ದಿನವೂ ಮುಂದೆ ಬರುತ್ತೆ. ಬಾಳ್ವೆ ನಮ್ಮೆಲ್ಲರ ವಿಷಯದಲ್ಲೂ ಕಠಿಣವಾಗಿದೆ. ನಮಗೆಲ್ಲರಿಗೂ ಅನ್ಯಾಯ

---

*ಆತ್ಮಹೋರಾಟಿಗರು – ಒಂದು ಧಾರ್ಮಿಕ ತಂಡ. – ಅನು.

ಮಾಡಿದೆ. ಆದರೆ ಆ ಬಾಳ್ವೆಯೇ, ನಮ್ಮ ಕಣ್ಣು ತೆರೆದು ತನ್ನ ಕಹಿಯಾದ ಅರ್ಥಾನ ತೋರಿಸ್ತಿದೆ. ತನ್ನ ಸಮಸ್ಯೆಗಳ ಪರಿಹಾರಾನ ಹೇಗೆ ಬೇಗಬೇಗನೆ ಸಾಧಿಸಬೇಕು ಅನ್ನೋದನ್ನು ತೋರಿಸಿಕೊಡ್ತಿದೆ."

ರೀಬಿನ್ ಹೇಳಿದ:

"ಅದು ನಿಜ! ಜನರ ಹೃದಯ ಪೂರ್ಣ ಸ್ವಚ್ಛವಾಗ್ಬೇಕು. ಒಬ್ಬ ಮನುಷ್ಯ ಹೇನು ತುಂಬಿ ಕೊಳಕಾದಾಗ, ಅವನನ್ನು ಬಚ್ಚಲು ಮನೆಗೆ ಎಳಕೊಂಡು ಹೋಗಿ, ಚೆನ್ನಾಗಿ ಮೈಯುಜ್ಜಿ ಸ್ನಾನ ಮಾಡಿಸಿ, ಚೊಕ್ಕಟವಾದ ಬಟ್ಟೆ ಹಾಕ್ಬೇಕು. ಆಗ ಅವನನ್ನು ನೋಡೋಹಾಗಿರುತ್ತೆ, ಅಲ್ವೆ?.. ಆದರೆ ಆ ಮನುಷ್ಯನ ಅಂತರ್ಯವನ್ನು ಚೊಕ್ಕಟ ಮಾಡೋದು ಹ್ಯಾಗೆ? ಅದೀಗ ಮುಖ್ಯ!"

ಉದ್ವೇಗಗೊಳ್ಳುತ್ತ ಪಾವೆಲ್, ಕಾರಖಾನೆಯ ಬಗೆಗೆ, ಮೇಲಧಿಕಾರಿಗಳ ವಿಷಯವಾಗಿ, ವಿದೇಶಗಳಲ್ಲಿ ಕಾರ್ಮಿಕರು ತಮ್ಮ ಹಕ್ಕುಗಳಿಗಾಗಿ ಹೇಗೆ ಹೋರಾಡುತ್ತಿರುವರೆಂಬುದರ ಕುರಿತು ಮಾತನಾಡಿದ. ಪಾವೆಲ್‌ನ ಮಾತಿಗೆ ತಾಳ ಹಾಕುತ್ತಿದ್ದವನಂತೆ ರೀಬಿನ್ ಕೆಲವೊಮ್ಮೆ ಮೇಜನ್ನು ತಟ್ಟುತ್ತಿದ್ದ. "ಅದೇ ಮುಖ್ಯ!" ಎಂದು ಉದ್ಗರಿಸುತ್ತಿದ್ದ ಆಗಾಗ್ಗೆ.

ಒಮ್ಮೆ ನಕ್ಕು, ಶಾಂತವಾಗಿ ಆತ ಹೇಳಿದ:

"ನೀನಿನ್ನೂ ಚಿಕ್ಕವನು! ಜನರನ್ನು ತಿಳಕೊಳ್ಳೋದು ಹ್ಯಾಗೇಂತ ನಿನಗಿನ್ನೂ ಅಭ್ಯಾಸವಾಗಿಲ್ಲ."

ಅತ್ತಿತ್ತ ನಡೆಯುತ್ತಿದ್ದ ಪಾವೆಲ್ ರೀಬಿನ್‌ನೆದುರು ನಿಂತು ಗಂಭೀರವಾಗಿ ಹೇಳಿದ:

"ಚಿಕ್ಕ ವಯಸ್ಸು ದೊಡ್ಡ ವಯಸ್ಸಿನ ಮಾತು ಬಿಟ್ಟುಬಿಡೋಣ. ಯಾರ ವಿಚಾರಗಳು ಸರೀಂತ ನೋಡೋಣ."

"ಹಾಗಾದರೆ ದೇವರ ವಿಷಯದಲ್ಲೂ ಕೂಡಾ ನಮಗೆ ಮೋಸ ಮಾಡಲು ಪ್ರಯತ್ನಿಸಿದ್ದಾರೆ ಅಂತೀಯಾ? ಹುಂ! ನಮ್ಮ ಧರ್ಮವೇನೂ ಪ್ರಯೋಜನವಿಲ್ಲಾಂತ ನನಗೂ ಅನಿಸುತ್ತೆ."

ಆಗ ತಾಯಿ ಮಧ್ಯೆ ಬಂದಳು. ದೇವರ ಕುರಿತಾಗಿ ಅಪಾರ ನಂಬುಗೆ ಅವಳಿಗೆ. ಆ ನಂಬುಗೆ ಆಕೆಗೆ ಅತಿ ಪ್ರಿಯವಾದದ್ದು, ಪವಿತ್ರವಾದದ್ದು. ದೇವರ ಬಗೆಗೆ, ಮಗನು ಮಾತಾಡಿದಾಗಲೆಲ್ಲ ತಾಯಿ ಅವನ ಗಮನ ಸೆಳೆಯಲು ಯತ್ನಿಸುತ್ತಿದ್ದಳು. ನಾಸ್ತಿಕತೆಯ ಕಟೂಕ್ತಿಗಳಿಂದ ತನ್ನ ಹೃದಯವನ್ನು ನೋಯಿಸಬೇಡವೆಂದು ಅಂಗಲಾಚಿ ಬೇಡುವಂತಿತ್ತು ಆ ನೋಟ. ಆದರೆ ಮಗನ ನಾಸ್ತಿಕತೆಯ ಹಿನ್ನೆಲೆಯಲ್ಲಿ ಒಂದು ಶ್ರದ್ಧೆ ಇದೆಯೆಂದು ಆಕೆಗೆ ಅನಿಸುತ್ತಿತ್ತು. ಇದರಿಂದ ಆಕೆಗೆ ಸ್ವಲ್ಪ ಸಮಾಧಾನವಾಗುತ್ತಿತ್ತು.

"ಅವನ ಯೋಚನೆಗಳನ್ನೆಲ್ಲ ತಿಳಿಯೋಕೆ ನನಗೆಲ್ಲಿ ಸಾಧ್ಯ?" ಎಂದು ಆಕೆ ಚಿಂತಿಸುತ್ತಿದ್ದಳು.

ತನ್ನ ಮಗನ ಮಾತುಗಳಿಂದ, ತನಗಾದಷ್ಟೇ ಈ ನಡುವಯಸ್ಸಿನ ಮನುಷ್ಯ ನಿಗೂ ನೋವಾಗಬಹುದೆಂದು ಆಕೆ ಭಾವಿಸಿದ್ದಳು. ಆದರೆ ರೀಬಿನ್ ಶಾಂತನಾಗಿದ್ದು ಹಾಗೆ ಮಾತಾಡಿದ್ದನ್ನು ಕಂಡಾಗ, ಆಕೆಗೆ ಸಹಿಸುವುದಾಗಲಿಲ್ಲ.

"ದೇವರ ವಿಷಯದಲ್ಲಿ ಮಾತಾಡುವಾಗ ಮಾತ್ರ ನೀವು ಸ್ವಲ್ಪ ಹುಷಾರಾಗಿರೋದು ವಾಸಿಯಪ್ಪ," ಎಂದು ಆಕೆ ನಿಡಿದಾದ ಉಸಿರನ್ನೆಳೆದಳು. ಮತ್ತೂ ಹೆಚ್ಚಿನ ಬೇಗುದಿಯಿಂದ ಅವಳು ಹೇಳಿದಳು: "ನಿಮಗೆ ಬೇಕಾದ ಹಾಗೆ ನೀವು ಯೋಚಿಸಿಕೊಳ್ಳಿ. ಆದರೆ ನಾನೋ ಮುದುಕಿ. ದೇವರನ್ನು ನೀವು ನನ್ನಿಂದ ಕಸಿದು ಕೊಂಡರೆ, ಕಷ್ಟ ಕಾಲದಲ್ಲಿ ನಾನು ಯಾರಿಗೆ ಮೊರೆಯಿಟ್ಟು ಸಹಾಯ ಬೇಡಲಿ?"

ಆಕೆಯ ಕಣ್ಣುಗಳು ಹನಿಗೂಡಿದವು. ತಟ್ಟೆಗಳನ್ನು ತೊಳೆಯುತ್ತಿದ್ದಂತೆ ಅವಳ ಕೈ ಬೆರಳುಗಳು ನಡುಗಿದವು.

"ನಿಮಗೆ ನಮ್ಮ ಮಾತು ಅರ್ಥವಾಗಲಿಲ್ಲವಮ್ಮ," ಎಂದು ಪಾವೆಲ್ ಮೃದು ವಾಗಿ ಹೇಳಿದ.

ರೀಬಿನ್ ತನ್ನ ಆಳವಾದ ಮೆಲ್ಲನೆಯ ಸ್ವರದಲ್ಲಿ, "ನಮ್ಮನ್ನು ಕ್ಷಮಿಸು ತಾಯಿ," ಎಂದ. ಅರೆಕ್ಷಣ ನಕ್ಕು ಪಾವೆಲ್‌ನ ಕಡೆ ದೃಷ್ಟಿ ಹಾಯಿಸಿದ. "ನಿನಗೆ, ಇದೆಲ್ಲ ಅರ್ಥ ವಾಗೋ ವಯಸ್ಸು ಮೀರಿತು ಅನ್ನೋದೇ ಮರೆತುಹೋಯ್ತು."

ಪಾವೆಲ್ ಮುಂದುವರಿಸಿದ:

"ಅಮ್ಮ, ನೀವು ನಂಬುವ ಒಳ್ಳೆಯ ದಯಾಮಯನಾದ ದೇವರ ವಿಷಯವಲ್ಲ ನಾನು ಹೇಳಿದ್ದು. ಈ ಧರ್ಮಗುರುಗಳು ನಮ್ಮನ್ನು ಹೆದರಿಸೋಕೆ, ಬಡಿಗೆ ಹಿಡಿದ ಹಾಗೆ ಹಿಡೀತಾರಲ್ಲಾ, ದೇವರ ಹೆಸರಲ್ಲಿ ಕೇವಲ ಕೆಲವೇ ಮನುಷ್ಯರ ದುಷ್ಟ ಶಕ್ತಿಯ ಮುಂದೆ ಎಲ್ಲ ಜನರೂ ತಲೆ ಬಾಗುವ ಹಾಗೆ ಮಾಡ್ತಾರಲ್ಲಾ, ಆ ದೇವರ ವಿಷಯ."

"ಸರಿಯಾಗಿ ಹೇಳ್ದೆ!" ಎಂದು ಮೇಜು ಬಡೆಯುತ್ತ ರೀಬಿನ್ ಉದ್ಗಾರವೆತ್ತಿದ. "ಅವರೊಂದು ಸುಳ್ಳು ದೇವರನ್ನು ಕೂಡ ನಮ್ಮ ಹೆಸರಿನಲ್ಲಿ ಮೋಸದಿಂದ ಚಲಾಯಿಸಿ ಬಿಟ್ಟಿದ್ದಾರೆ! ತಮಗೆ ಯಾವ ರೀತಿಯಲ್ಲೆಲ್ಲ ಸಾಧ್ಯವೋ ಆ ಎಲ್ಲ ಬಗೆ ಯಾಗಿ ನಮ್ಮ ಕೂಡೆ ಹೋರಾಡ್ತಾರೆ! ಸ್ವಲ್ಪ ಯೋಚನೆ ಮಾಡಿ ನೋಡಮ್ಮ! ದೇವರು ತನ್ನದೇ ಪ್ರತಿಬಿಂಬವಾದ ಮನುಷ್ಯನನ್ನು ಸೃಷ್ಟಿಸಿದ ಅಂದ ಮೇಲೆ, ಮನುಷ್ಯ ದೇವರನ್ನು ಹೋಲ್ತಾನೆ. ಹಾಗಾದರೆ, ದೇವರು ಮನುಷ್ಯನನ್ನು ಹೋಲ್ತಾನೆ, ಎಂದಾಯ್ತು. ಆದರೆ ನಾವು ದೇವರ ಹಾಗಲ್ಲ, ಕಾಡು ಮೃಗಗಳ ಹಾಗಿದ್ದೇವೆ. ಈ ಚರ್ಚ್‌ಗಳಲ್ಲಿ ಒಂದು ಗುಮ್ಮನನ್ನು ತೋರಿಸಿ ದೇವರೂಂತ ಹೆದರಿಸ್ತಾರೆ. ನಮ್ಮ ದೇವರನ್ನು ಬದಲಾಯಿಸಬೇಕಮ್ಮ! ಅವನನ್ನು ಸ್ವಚ್ಛಪಡಿಸ್ಬೇಕು! ಅವರೆಲ್ಲ, ದೇವರನ್ನು ಸುಳ್ಳು ಅಪನಿಂದೆಗಳಿಂದ ಅಲಂಕರಿಸಿದ್ದಾರೆ. ನಮ್ಮ ಆತ್ಮಗಳನ್ನು ಸಾಯಿಸೋದಕ್ಕಾಗಿ ದೇವರ ಮುಖಕ್ಕೇ ಊನ ತಂದಿದ್ದಾರೆ."

ಆತ ಮಾತಾಡಿದ್ದೇನೋ ಮೃದುವಾಗಿ. ಆದರೆ ಅವನ ಪ್ರತಿಯೊಂದು ಮಾತೂ

ತಾಯಿಯು ಪಾಲಿಗೆ ಪ್ರಜ್ಞೆ ತಪ್ಪಿಸುವಂಥ ಆಘಾತವಾಗಿತ್ತು. ಗಡ್ಡದ ಕರಿಯ ಚೌಕಟ್ಟಿನೊಳಗಿದ್ದ ಆ ವಿಶಾಲವಾದ ವಿಷಣ್ಣ ಮುಖವನ್ನು ನೋಡಿ ಆಕೆಗೆ ಹೆದರಿಕೆಯಾಯಿತು. ಆಕೆಯ ಹೃದಯದಲ್ಲಿ ನೋವನ್ನೂ ಭೀತಿಯನ್ನೂ ಹುಟ್ಟಿಸುತ್ತಿದ್ದ, ಅವನ ಕಣ್ಣುಗಳ ತೀಕ್ಷ್ಣ ಪ್ರಕಾಶವನ್ನು ಸಹಿಸುವುದು ಅವಳಿಂದಾಗಲಿಲ್ಲ.

ತನ್ನ ತಲೆಯನ್ನಾಡಿಸುತ್ತಾ ಆಕೆ,

"ಇಲ್ಲ, ಇಲ್ಲ, ನಾನು ಒಳಗೆ ಹೋಗ್ತೀನಿ. ಇಂಥ ಮಾತುಗಳನ್ನ ಕೇಳಿಕೊಂಡಿರೋದು ನನ್ನ ಶಕ್ತಿಗೆ ಮೀರಿದ್ದು," ಎಂದಳು.

ಪಾವೆಲ್‌ನನ್ನು ಉದ್ದೇಶಿಸಿ ರೀಬಿನ್ ಮಾತಾಡತೊಡಗಿಗಂತೆಯೇ, ತಾಯಿ ಬೇಗನೆ ಅಡುಗೆ ಮನೆಯೊಳಕ್ಕೆ ಹೋದಳು.

ರೀಬಿನ್ ಹೇಳಿದ:

"ನೋಡಿದೆಯಾ, ಪಾವೆಲ್? ತಲೆಯಲ್ಲಲ್ಲ, ಹೃದಯದಲ್ಲಿ ಇದರ ಆದಿಮೂಲ – ಅದು ಮುಖ್ಯ! ಮನುಷ್ಯನ ಆತ್ಮದಲ್ಲಿ ಹೃದಯಕ್ಕೊಂದು ಬಹಳ ವಿಶಿಷ್ಟವಾದ ಸ್ಥಾನವಿದೆ. ಅಲ್ಲಿ ಬೇರೇನೂ ಬೆಳೆಯೋದಿಲ್ಲ."

ಪಾವೆಲ್ ದೃಢವಾಗಿ, "ವಿಚಾರಪ್ರಜ್ಞೆಯೊಂದೇ ಮನುಷ್ಯನನ್ನು ಮುಕ್ತನನ್ನಾಗಿ ಮಾಡಬಲ್ಲುದ್ದು," ಎಂದ.

ರೀಬಿನ್ ಗಟ್ಟಿಯಾಗಿ ಮತ್ತೆ ಹಾಗೆಯೇ ವಾದಿಸಿದ:

"ವಿಚಾರಪ್ರಜ್ಞೆ ಮನುಷ್ಯನಿಗೆ ಶಕ್ತಿ ಕೊಡೋದಿಲ್ಲ! ಶಕ್ತಿ ಕೊಡೋದು ಹೃದಯ, ತಲೆಯಲ್ಲ!"

ತಾಯಿ ಬಟ್ಟೆ ಬದಲಾಯಿಸಿ, ಪ್ರಾರ್ಥನೆ ಮಾಡದೆಯೇ, ಮಲಗಿಕೊಂಡಳು. ತಣ್ಣನೆಯ ಮನಸಿಗೊಪ್ಪದ ಭಾವವೊಂದು ಆಕೆಯನ್ನು ಬಿಗಿ ಹಿಡಿದಿತ್ತು. ಮೊದಲು ಆಕೆಗೆ ರೀಬಿನ್ ಒಳ್ಳೆಯವನು, ಸಮರ್ಥ, ಎಂದು ಕಂಡಿತು. ಆದರೆ ಈಗ ಅವನ ಬಗ್ಗೆ ದ್ವೇಷ ತಲೆದೋರಿತ್ತು.

ಆತನ ಸ್ವರಕ್ಕೆ ಕಿವಿಗೊಡುತ್ತಾ, "ಪಾಷಂಡಿ! ದೈವದ್ರೋಹಿ! ಇವನು ಇಲ್ಲಿಗೆ ಯಾಕೆ ಬರಬೇಕಿತ್ತು?" ಎಂದಾಕೆ ಯೋಚಿಸಿಕೊಂಡಳು.

ಆತನಾದರೋ ನಿಶ್ಚಲ ಭರವಸೆಯಿಂದ ಮಾತು ಮುಂದುವರಿಸಿಯೇ ಇದ್ದ:

"ಪವಿತ್ರ ಸ್ಥಾನವನ್ನು ಖಾಲಿ ಬಿಡೋಕಾಗೋದಿಲ್ಲ. ಮಾನವ ಹೃದಯದಲ್ಲಿ ದೇವರು ಹಿಡಿದಿರೋ ಸ್ಥಾನ ತೀರ ಸೂಕ್ಷ್ಮವಾದದ್ದು. ಅದನ್ನು ಕತ್ತರಿಸಿದರೆ ಅಲ್ಲಿ ದೊಡ್ಡ ಗಾಯ ಉಳಿಯುತ್ತೆ. ಹೊಸದೊಂದು ಧರ್ಮ ಕಂಡುಹಿಡಿಯಲೇಬೇಕು, ಪಾವೆಲ್. ಮನುಷ್ಯನಿಗೆ ಸ್ನೇಹಿತನಾಗಿರೋ ಒಬ್ಬ ದೇವರನ್ನು ಸೃಷ್ಟಿಸ್ಬೇಕು. ಅದೀಗ ಆಗಬೇಕಾದ್ದು!"

"ಕ್ರೈಸ್ತ ಇದ್ದನಲ್ಲ!" ಎಂದು ಪಾವೆಲ್ ಗಟ್ಟಿಯಾಗಿ ಉದ್ಗಾರವೆತ್ತಿದ.

"ಕ್ರೈಸ್ತನಿಗೆ ಆಧ್ಯಾತ್ಮಿಕ ಧೈರ್ಯವಿರಲಿಲ್ಲ. 'ಬಟ್ಟಲು ಮುಂದಕ್ಕೆ ಸಾಗಲಿ'

ಎಂದನಾತ. ಸೀಜರನಿಗೆ ಮನ್ನಣೆ ಕೊಟ್ಟ. ದೇವರು ತನ್ನ ಸೃಷ್ಟಿಯ ಮೇಲೆ ಮಾನವ ಅಧಿಕಾರವನ್ನು ಹೇಗೆ ಮನ್ನಿಸಿಯಾನು? ದೇವರು ಸ್ವತಃ ಸರ್ವಶಕ್ತ! ಇದು ತನ್ನದು, ಇದು ಮನುಷ್ಯನದು, ಅಂತ ದೇವರು ತನ್ನ ಆತ್ಮವನ್ನು ಇಬ್ಭಾಗಿಸೋದು ಸಾಧ್ಯ ವಿತ್ತಾ? ಆದರೆ ಕ್ರೈಸ್ತ ವ್ಯಾಪಾರವನ್ನೊಪ್ಪಿಕೊಂಡ. ಮದುವೆಯನ್ನೊಪ್ಪಿಕೊಂಡ. ಅವನು ಅತ್ತಿ ಮರವನ್ನು ಶಪಿಸಿದ್ದು ಸರಿಯಲ್ಲ. ತಾನು ಹಣ್ಣು ಬಿಡದೇ ಇದ್ದದ್ದು ಅದರ ತಪ್ಪೆ? ಒಳ್ಳೆತನವನ್ನು ತೋರಿಸ್ತಾ ಇಲ್ಲಾಂತ ಮನುಷ್ಯನ ಆತ್ಮವನ್ನು ದೂರೋದು ಸರಿಯಲ್ಲ. ತನ್ನ ಆತ್ಮದಲ್ಲಿನ ಕೇಡನ್ನು ಸ್ಥಾಪಿಸಿದವನು ಮಾನವನೆ?"

ಕೊಠಡಿಯಲ್ಲಿ ಆ ಎರಡೂ ಸ್ವರಗಳು ಕಿತ್ತಾಡುತ್ತಿದ್ದುವು. ಉತ್ಸಾಹದ ದ್ವಂದ್ವ ಯುದ್ಧದಲ್ಲಿ ತೊಡಗಿದ್ದುವು. ಪಾವೆಲ್ ಹಿಂದಕ್ಕೂ ಮುಂದಕ್ಕೂ ನಡೆದಾಗ ನೆಲಕ್ಕೆ ಹಾಸಿದ್ದ ಹಲಗೆಗಳು ಕಿರ್ ಕಿರ್ರೆನ್ನುತ್ತಿದ್ದುವು. ಪಾವೆಲ್ ಮಾತನಾಡಿದಾಗ ಇತರ ಯಾವ ಶಬ್ದಗಳೂ ಕೇಳಿಸುತ್ತಿರಲಿಲ್ಲ. ಆದರೆ ರೀಬಿನ್ ತನ್ನ ಶಾಂತವಾದ ಆಳವಾದ ಸ್ವರದಲ್ಲಿ ಮಾತಾಡಿದಾಗ, ಗಡಿಯಾರದ ಲೋಲಕದ ಟಿಕ್‌ಟಿಕಾಟವೂ, ಘನ ಹಿಮವು ಮನೆಯ ಗೋಡೆಗಳನ್ನು ಕಚ್ಚಿ ಕೂತುಕೊಳ್ಳುತ್ತಿದ್ದ ಸಪ್ಪಳವೂ ತಾಯಿಗೆ ಕೇಳಿಸು ತ್ತಿದ್ದುವು.

"ಅದನ್ನು ನನ್ನ ಮಾತಿನಲ್ಲೇ ಹೇಳ್ತೀನಪ್ಪ; ಒಬ್ಬ ಕುಲಮೆ ಕೆಲಸಗಾರನ ಮಾತಿ ನಲ್ಲಿ. ದೇವರು ಒಂದು ಜ್ವಾಲೆ. ಆತ ಜೀವಿಸೋದು ಹೃದಯದಲ್ಲಿ. 'ಮೊದಲಿಗೆ ಇದ್ದದ್ದು ನುಡಿ – ಆ ನುಡಿಯೇ ದೇವರು' ಎಂದು ಹೇಳಿದಾರಲ್ಲಾ. ಆದ್ದರಿಂದ ನುಡಿಯೇ ಚೇತನ."

"ಆ ನುಡಿಯೇ ವಿಚಾರ," ಎಂದು ಪಾವೆಲ್ ಪಟ್ಟು ಹಿಡಿದ.

"ಹಾಗೇ ಆಗಲಿ. ಆಗಲೂ ದೇವರು ಹೃದಯದಲ್ಲೂ ವಿಚಾರದಲ್ಲೂ ಇದ್ದಾ ನೆಯೇ ಹೊರತು ಚರ್ಚಿನಲ್ಲಲ್ಲ. ಚರ್ಚ್ ದೇವರ ಗೋರಿ."

ತಾಯಿಗೆ ನಿದ್ದೆ ಬಂತು. ರೀಬಿನ್ ಹೊರಟು ಹೋದುದು ಆಕೆಗೆ ಗೊತ್ತಾಗಲಿಲ್ಲ.

ಆದರೆ ಅಂದಿನಿಂದ ರೀಬಿನ್ ಆಗಾಗ್ಗೆ ಬರಲಾರಂಭಿಸಿದ. ತಾನು ಬಂದ ಹೊತ್ತಿ ನಲ್ಲಿ, ಪಾವೆಲ್‌ನ ಸಂಗಾತಿಗಳು ಯಾರಾದರೂ ಇದ್ದರೆ, ಒಂದು ಮೂಲೆಯಲ್ಲಿ ಕುಳಿತು ಕೊಳ್ಳುತ್ತಿದ್ದ. ಆಗ ಹೆಚ್ಚಾಗಿ ಮಾತೇ ಆಡುತ್ತಿರಲಿಲ್ಲ. ಆಗೊಮ್ಮೆ ಈಗೊಮ್ಮೆ "ಅದೇ ಮುಖ್ಯ!" ಎಂದಷ್ಟೇ ಪಲ್ಲವಿ ಹೇಳುತ್ತಿದ್ದ.

ಒಂದು ದಿನ ಅಂಥ ಕೂಟದಲ್ಲಿ ಅವನು, ತನ್ನ ಆಳವಾದ ದೃಷ್ಟಿಯನ್ನು ಅಲ್ಲಿದ್ದವರ ಮೇಲೆಲ್ಲ ಹಾಯಿಸುತ್ತ, ಅಸಮಾಧಾನದಿಂದ ಮಾತಾಡಿದ:

"ವಿಷಯವನ್ನು, ಈಗ ಇರೋ ಹಾಗೆ ಮಾತಾಡ್ಬೇಕು. ಮುಂದೆ ಇರಬಹು ದಾದ ರೀತಿಯಲ್ಲಲ್ಲ. ಮುಂದೆ ಹೇಗಿರುತ್ತೋ ಯಾರಿಗೆ ಗೊತ್ತು? ಒಮ್ಮೆ ಜನರಿಗೆ ಸ್ವಾತಂತ್ರ್ಯ ಸಿಕ್ಕ್ಬಿಟ್ಟರೆ, ತಮಗೆ ಯಾವುದು ಅತ್ಯಂತ ಹಿತ ಅಂತ ಅವರೇ ನಿರ್ಧರಿ ಸ್ತಾರೆ. ಅವರು ಕೇಳದೇನೇ ಅವರ ತಲೆಯೊಳಕ್ಕೆ ಬೇಕಾದಷ್ಟು ಮಣ್ಣು ತುರುಕಿ

ದ್ದಾರೆ. ತಮ್ಮ ಯೋಚನೆಯನ್ನು ತಾವೇ ಮಾಡೋಕೆ ಈಗಲಾದರೂ ಅವರಿಗೆ ಅವಕಾಶ ದೊರೀಲಿ. ಪ್ರತಿಯೊಂದನ್ನು ಇಡೀ ಜೀವನವನ್ನು ವಿಜ್ಞಾನವನ್ನು ತಳ್ಳಿ ಹಾಕೋಕೆ ಅವರು ಇಚ್ಛಿಸಬಹುದು. ಪ್ರಾಯಶಃ, ಚರ್ಚಿನ ದೇವರ ಹಾಗೆ ಎಲ್ಲ ವನ್ನೂ ತಮ್ಮ ವಿರುದ್ಧವೇ ಇಟ್ಟಿದ್ದಾರೆ ಅನ್ನೋದು, ಅವರಿಗೆ ಗೊತ್ತಾಗಬಹುದು. ಅವರ ಕೈಗೆ ಪುಸ್ತಕ ಕೊಡಿ. ತಮಗೆ ಬೇಕಾದ ಉತ್ತರಾನಾ ಅವರೇ ಕಂಡುಹಿಡೀತಾರೆ. ಅದೇ ಮುಖ್ಯ !"

ಆದರೆ, ಅವನು ಮತ್ತು ಪಾವೆಲ್ ಇಬ್ಬರೇ ಇದ್ದಾಗ, ತಕ್ಷಣ ಕೊನೆಯಿಲ್ಲದ ಚರ್ಚೆಗಳನ್ನು ಶುರು ಮಾಡುತ್ತಿದ್ದರು. ಅಂಥ ಚರ್ಚೆಗಳಲ್ಲಿ ಎಂದೂ ರೇಗಿಕೊಳ್ಳು ತ್ತಿರಲಿಲ್ಲ. ತಾಯಿ, ಕುತೂಹಲದಿಂದ ಕಿವಿಗೊಟ್ಟು ಕೇಳುತ್ತಿದ್ದಳು. ಪ್ರತಿಯೊಂದು ಮಾತನ್ನೂ ಆಲಿಸುತ್ತಿದ್ದಳು. ಅರ್ಥವನ್ನು ಗ್ರಹಿಸಿಕೊಳ್ಳಲು ಯತ್ನಿಸುತ್ತಿದ್ದಳು. ವಿಸ್ತಾರವಾದ ಭುಜಗಳ ಕರಿಯ ಗಡ್ಡದ ಆ ಮನುಷ್ಯನೂ, ತನ್ನ ಬಲಿಷ್ಠನಾದ ಎತ್ತರ ವಾದ ಮಗನೂ ಕೆಲವೊಮ್ಮೆ ಕುರುಡರಾದ ಹಾಗೆ ಆಕೆಗೆ ಅನಿಸುತ್ತಿತ್ತು. ಒಂದು ಸಲ ಈ ಕಡೆ, ಒಂದು ಸಲ ಆ ಕಡೆ ಹೊರಹೋಗಲು ಹಾದಿಯನ್ನು ಹುಡುಕುತ್ತ, ಬಲವಾದ ಕುರುಡು ಕೈ ಬೆರಳುಗಳಿಂದ ಸಿಕ್ಕಿದ್ದನ್ನೆಲ್ಲ ಅಮುಕಿ ಹಿಡಿಯುತ್ತ, ಇದ್ದು ದನ್ನು ಕೆಳಕ್ಕೆ ಬೀಳಿಸುತ್ತ, ಅವುಗಳ ಮೇಲೆ ತುಳಿದಾಡುತ್ತ, ಅವರು ಎಡವುತ್ತಿದ್ದಂತೆ ತಡವುತ್ತಿದ್ದಂತೆ ಆಕೆಗೆ ಭಾಸವಾಗುತ್ತಿತ್ತು. ಎಡವಿದ್ದನ್ನು ಅವರು ಮುಟ್ಟಿ ನೋಡುತ್ತಿ ದ್ದರು. ವಿಶ್ವಾಸವನ್ನೂ ಆಸೆಯನ್ನೂ ಕಳೆದುಕೊಳ್ಳದೆ ಅವುಗಳನ್ನತ್ತ ಎಸೆಯುತ್ತಿದ್ದರು....

ಸ್ಪಷ್ಟವಾಗಿ ಸಾಹಸಿಕವಾಗಿ ಭೀತಿ ಹುಟ್ಟಿಸುವಂತಿದ್ದ ಶಬ್ದಗಳಿಗೆ ಕಿವಿಗೊಡಲು, ಅವರು ಆಕೆಗೆ ಕಲಿಸಿದರು. ಶಬ್ದಗಳೀಗ ಮೊದಲ ಸಲ ಕೇಳಿದಾಗ ಆದಷ್ಟು ತೀಕ್ಷ್ಣ ವಾಗಿ, ನೋವನ್ನುಂಟುಮಾಡುತ್ತಿರಲಿಲ್ಲ. ಅವನ್ನೆಲ್ಲ ಬದಿಗೆ ತಳ್ಳಲು ಆಕೆ ಕಲಿತಿದ್ದಳು. ತಮ್ಮ ನಾಸ್ತಿಕತೆಯ ಮಾತುಗಳ ಹಿನ್ನೆಲೆಯಲ್ಲೂ, ಅವರಿಗೆ ದೇವರ ಬಗ್ಗೆ ಅಚಲ ವಾದ ವಿಶ್ವಾಸವಿದ್ದಂತೆ ಕೆಲವೊಮ್ಮೆ ಆಕೆಗೆ ತೋರುತ್ತಿತ್ತು. ಆಗ ಆಕೆ ಶಾಂತಳಾಗಿ ಮುಗುಳ್ನಗುತ್ತಿದ್ದಳು. ಎಲ್ಲವನ್ನೂ ಕ್ಷಮಿಸುವ ಮಂದಹಾಸವನ್ನು ಬೀರುತ್ತಿದ್ದಳು. ರೀಬಿನ್ ಆಕೆಯ ಪ್ರೀತಿಗೊಳಗಾಗದಿದ್ದರೂ ವೈರಭಾವವನ್ನೇನು ಆಕೆಯಲ್ಲಿ ಉಂಟು ಮಾಡುತ್ತಿರಲಿಲ್ಲ.

ಪ್ರತಿವಾರವೂ ಆಕೆ, ಸೆರೆಮನೆಯಲ್ಲಿದ್ದ, ಹೊಹೋಲನಿಗೆ ಪುಸ್ತಕಗಳನ್ನೂ ಒಗೆದ ಬಟ್ಟೆಗಳನ್ನೂ ಕೊಂಡೊಯ್ದು ಕೊಡುತ್ತಿದ್ದಳು. ಒಮ್ಮೆ ಅವನನ್ನು ಭೇಟಿ ಯಾಗುವುದಕ್ಕೂ ಸಮ್ಮತಿ ದೊರೆಯಿತು. ವಾಪಸು ಬಂದಾಗ ಪ್ರೀತಿಯ ಮಾತು ಗಳಿಂದ ಆಕೆ ವರದಿಮಾಡಿದಳು:

"ಅವನು ಅಲ್ಲಿ ಸ್ವಲ್ಪವೂ ಬದಲಾಯಿಸಿಲ್ಲ. ಪ್ರತಿಯೊಬ್ಬರ ವಿಷಯದಲ್ಲೂ ಅಷ್ಟೊಂದು ಒಳ್ಳೆಯವನಾಗಿದ್ದಾನೆ. ಪ್ರತಿಯೊಬ್ಬರೂ ಅವನ ಜೊತೇಲಿ ನಗೆಮಾತಾಡ್ತಾ

ಇರ್ತಾರೆ. ಅಲ್ಲಿ ಜೀವನ ಅವನಿಗೆ ಕಷ್ಟ, ತುಂಬಾ ಕಷ್ಟ; ಆದರೂ ಹಾಗೇಂತ ಅವನು ತೋರಿಸಿಕೊಳ್ಳೋದಿಲ್ಲ."

"ಅದು ಸರಿ," ಎಂದ ರೀಬಿನ್, ಆ ಮಾತು ಕೇಳಿ. "ವ್ಯಸನ ಅನ್ನೋದು ಒಂದು ತೊಗಲಿನ ಹಾಗೆ. ಅದರ ಒಳಗಡೆ ನಾವಿದ್ದೇವೆ. ಈ ಬಗೆಯ ಉಡುಪು ನಮಗೆ ಅಭ್ಯಾಸ ವಾಗ್ಬಿಟ್ಟಿದೆ. ಇದು ಹೆಮ್ಮೆ ಪಟ್ಟುಕೋಬೇಕಾದ ವಿಷಯವೇನಲ್ಲ. ಪ್ರತಿಯೊಬ್ಬರೂ ತಮ್ಮ ಕಣ್ಣುಗಳಿಗೆ ಪಟ್ಟೆ ಕಟ್ಟಿಕೊಂಡಿಲ್ಲ. ಕೆಲವರು ತಾವಾಗಿಯೇ ಕಣ್ಣು ಮುಚ್ಚಿ ಕೋತಾರೆ. ಅದೀಗ ತಮಾಷೆ! ನಾವು ಮೂರ್ಖರಾದರೆ, ಇನ್ನೇನೂ ಮಾಡೋ ಹಾಗಿಲ್ಲ. ಹಲ್ಲು ಕಿಸೀತ ಬಂದದ್ದನ್ನೇ ಅನುಭವಿಸ್ಲೇಬೇಕು."

## ೧೨

ವ್ಲಾಸೊವ್‌ರ ಬೂದು ಬಣ್ಣದ ಆ ಸಣ್ಣ ಮನೆಯ ಕಡೆ ವಸತಿಯ ಜನರೆಲ್ಲರೂ ಹೆಚ್ಚು ಹೆಚ್ಚು ಗಮನ ಕೊಡಲಾರಂಭಿಸಿದರು. ಆ ಗಮನ ಸಂದೇಹದಿಂದಲೂ ಅರಿವಿಲ್ಲದಂತೆಯೇ ತೋರಿಬರುತ್ತಿದ್ದ ವಿರೋಧದಿಂದಲೂ ಬೆರೆತಿತ್ತು. ಆದರೆ ಒಂದು ನಂಬಿಕೆಯ ಕುತೂಹಲವೂ ಅದರೊಡನೆ ಹುಟ್ಟಿತು. ಒಮ್ಮೊಮ್ಮೆ ಯಾವನಾದರೂ ಅಪರಿಚಿತ, ಪಾವೆಲ್‌ನ ಬಳಿಗೆ ಬರುತ್ತಿದ್ದ; ಸುತ್ತಲೂ ಕಳ್ಳನೋಟ ಹಾಯಿಸಿ ಮೆಲ್ಲನೆ ಹೇಳುತ್ತಿದ್ದ:

"ಇಲ್ಲಿ ಕೇಳಣ್ಣ, ನೀನು ಪುಸ್ತಕ ಓದ್ತೀಯಾ. ನಿನಗೆ ಕಾನೂನು ಗೊತ್ತಿದೆ. ಇದನ್ನ ಸ್ವಲ್ಪ ನನಗೆ ವಿವರಿಸಿ ಹೇಳ್ತೀಯ...."

ಪೋಲೀಸರೋ ಕಾರಖಾನೆಯ ಆಡಳಿತದವರೋ ಮಾಡಿದ ಅನ್ಯಾಯವನ್ನು, ಬಂದವನು ವಿವರಿಸಿ ಹೇಳುತ್ತಿದ್ದ. ಪ್ರಶ್ನೆ ಜಟಿಲವಾಗಿದ್ದರೆ ಪಾವೆಲ್, ಒಂದು ಚೀಟಿ ಕೊಟ್ಟು ಆ ವ್ಯಕ್ತಿಯನ್ನು, ಶಹರದಲ್ಲಿದ್ದ ತನ್ನ ಪರಿಚಿತ ವಕೀಲನಲ್ಲಿಗೆ ಕಳುಹಿಸುತ್ತಿದ್ದ. ಆದರೆ ಸಾಧ್ಯವಿದ್ದಾಗಲೆಲ್ಲಾ ತಾನೇ ವಿಷಯಗಳನ್ನು ವಿವರಿಸುತ್ತಿದ್ದ.

ಗಂಭೀರನಾಗಿದ್ದ ಈ ಯುವಕ ಪಾವೆಲ್‌ನನ್ನು ಜನರು ಕ್ರಮೇಣ ಗೌರವಿಸತೊಡಗಿದರು. ಅವನ ಮಾತು ಸರಳವಾಗಿತ್ತು, ನಿರ್ಭೀತವಾಗಿತ್ತು. ಅವನ ಕಣ್ಣುಗಳಲ್ಲಿ ಯಾವಾಗಲೂ ನಿರೀಕ್ಷೆ ತುಂಬಿರುತ್ತಿತ್ತು. ಕಿವಿ ಚುರುಕಾಗಿರುತ್ತಿತ್ತು. ಆತ ಹಟಹಿಡಿದು ಪ್ರತಿಯೊಂದು ವಿವಾದದ ಆಳಕ್ಕೂ ಇಳಿದು ವಿಚಾರಿಸುತ್ತಿದ್ದ ಪ್ರತಿಯೊಂದು ಕಡೆಯೂ ಎಲ್ಲ ಜನರನ್ನು ಒಂದುಗೂಡಿಸುವಂಥ ಸಮಾನವಾದ ಎಳೆಯನ್ನು ಆತ ಕಾಣುತ್ತಿದ್ದ.

"ಜವುಗಿನ ಕೊಪೆಕ್"*ಗೆ ಸಂಬಂಧಿಸಿದ ಘಟನೆಯ ತರುವಾಯ, ವಿಶಿಷ್ಟವಾದ ಪ್ರತಿಷ್ಠೆ ಪಾವೆಲ್‌ಗೆ ಲಭಿಸಿತು.

---

***ಕೊಪೆಕ್** – ಸಣ್ಣದೊಂದು ರಷ್ಯನ್ ನಾಣ್ಯ. ರೂಬಲ್ಲಿನ $1/_{100}$ ಭಾಗ. – ಅನು.

ಪೊದೆ ಪೊದರು ಗಿಡಗಳಿಂದ ತಂಬಿದ ವಿಶಾಲವಾದ ಜೌಗು ಪ್ರದೇಶ ಕೊಳೆತ ಹುಣ್ಣಿನಂತೆ ಕಾರಖಾನೆಯನ್ನು ಸುತ್ತುಗಟ್ಟಿತ್ತು. ಬೇಸಗೆಯಲ್ಲಿ ಈ ಜವುಗು ಪ್ರದೇಶ ದಿಂದ ದಟ್ಟವಾದ ಹಳದಿ ಆವಿ ಏಳುತ್ತಿತ್ತು. ಸೊಳ್ಳೆಗಳಿಗೆ ಅದು ಆವಾಸಸ್ಥಾನ ವಾಗಿದ್ದು, ವಸತಿ ಪ್ರದೇಶದಲ್ಲೆಲ್ಲ ಜ್ವರ ಹಬ್ಬುತ್ತಿತ್ತು. ಅದು ಕಾರಖಾನೆಗೆ ಸೇರಿದ್ದ ಜವುಗು ಪ್ರದೇಶ. ಹೊಸತಾಗಿ ಬಂದ ಡೈರೆಕ್ಟರು ಒಂದು ಹೊಸ ತೀರ್ಮಾನ ಮಾಡಿದ. ಜವುಗನ್ನು ಒಣಗಿಸಿದರೆ ಪೀಟ್ ಹೆಪ್ಪು ದೊರೆಯುವುದು; ಭೂಮಿಯಿಂದ ಲಾಭ ಬರುವುದು. ಕೂಲಿಕಾರರ ಜೀವನ ಮಟ್ಟವನ್ನು ಸುಧಾರಿಸುವುದಕ್ಕಾಗಿ ಇದನ್ನು ಮಾಡಲಾಗುತ್ತಿದೆ ಎಂದು ನೆಪ ಹೇಳಿ, ಜವುಗಿನ ನೀರನ್ನು ತೆಗೆಸುವ ವೆಚ್ಚಕ್ಕಾಗಿ ಪ್ರತಿ ಕೂಲಿಕಾರನ ಮಜೂರಿಯ ಪ್ರತಿಯೊಂದು ರೂಬಲಿನಿಂದ ಒಂದೊಂದು ಕೊಪೆಕ್ ಹಿಡಿದುಕೊಳ್ಳಲು ಡೈರೆಕ್ಟರ್ ಆಜ್ಞೆ ಇತ್ತ.

ಕೂಲಿಕಾರರು ಬೆಂಕಿಯಾದರು. ಗುಮಾಸ್ತರು ಮತ್ತಿತರ ಮೇಲಿನ ನೌಕರರ ವೇತನದಿಂದ ಕೊಪೆಕ್ ಕಡಿತವಾಗುವುದಿಲ್ಲವೆಂಬ ವಿಷಯವನ್ನಂತೂ ಅವರು ವಿಶೇಷ ವಾಗಿ ಆಕ್ಷೇಪಿಸಿದರು.

ಡೈರೆಕ್ಟರು ಕೊಪೆಕ್ ಕಡಿತದ ಆಜ್ಞೆಯನ್ನು ಸಾರಿದ ಶನಿವಾರ ಪಾವೆಲ್ ಕೆಲಸಕ್ಕೆ ಬಂದಿರಲಿಲ್ಲ. ಮೈ ಚೆನ್ನಾಗಿರದೆ ಮನೆಯಲ್ಲೇ ಉಳಿದಿದ್ದ. ಆತನಿಗೆ ಆ ವಿಷಯ ಆಗ ಗೊತ್ತಾಗಲೇ ಇಲ್ಲ. ಮರುದಿನ, ಗೌರವಸ್ಥನಾದ ವಯಸ್ಸಾದ ಕುಲಿಮೆಯಾಳು ಸಿಜೋವ್ ಮತ್ತು ಎತ್ತರದ ಗೊಗ್ಗರ ಧ್ವನಿಯ ಫಿಟ್ಟರ್ ಮಹೋತಿನ್, ಪಾವೆಲ್ ನನ್ನು ನೋಡಲು ಬಂದರು. ಡೈರೆಕ್ಟರನ ತೀರ್ಮಾನವನ್ನು ಪಾವೆಲ್‌ನಿಗೆ ತಿಳಿಸಿ ದರು.

ಪರಿಣಾಮಕಾರಿಯಾದ ಧ್ವನಿಯಲ್ಲಿ ಸಿಜೋವ್ ಹೇಳಿದ:

"ನಮ್ಮಲ್ಲಿ ಹಿರಿಯರಾದವರು ಒಂದು ಕಡೆ ಸೇರಿ ಈ ವಿಷಯ ಮಾತಾಡಿದೆವು. ನೀನು ತಿಳಿದವನು. ನಮ್ಮ ಕೊಪೆಕ್ ತಗೊಂಡು ಈ ಡೈರೆಕ್ಟರು ಹೀಗೆ ಸೊಳ್ಳೆಗಳನ್ನ ಹೊಡೆಯೋಕೆ, ಅವನಿಗೆ ಅವಕಾಶ ಕೊಡೋ ಕಾನೂನು ಯಾವುದಾದರೂ ಉಂಟೆ? ಈ ವಿಷಯ ಕೇಳೋಕೆ ಸಂಗಾತಿಗಳು ನಮ್ಮನ್ನು ನಿನ್ನಲ್ಲಿಗೆ ಕಳಿಸಿದ್ದಾರೆ."

"ನೋಡು ತಮಾಷೆ!" ಎಂದ ಮಹೋತಿನ್ ಕಿರಿದು ಕಣ್ಣುಗಳನ್ನು ಮಿಂಚಿ ಸುತ್ತಾ, "ನಾಲ್ಕು ವರ್ಷಗಳ ಹಿಂದೆ ಮಹಾ ಧೂರ್ತರು ಸ್ನಾನದ ಮನೆ ಕಟ್ಟಿಸ್ತೇ ವೆಂತ ನಮ್ಮ ಹಣ ತಗೊಂಡ್ರು. ಮೂರುಸಾವಿರದ ಎಂಟುನೂರು ರೂಬಲ್ ಒಟ್ಟು ಕೂಡಿಸಿದರು! ಅದೆಲ್ಲಿದೆ ಈಗ? ನಾವು ಆ ಸ್ನಾನದ ಮನೇನ ನೋಡಲೇ ಇಲ್ಲ!"

ವೇತನ ಕಡಿತದ ಅನ್ಯಾಯವನ್ನೂ, ಜವುಗನ್ನು ಒಣಗಿಸುವುದರಿಂದ ಕಾರಖಾನೆ ಗಾಗುವ ಲಾಭವನ್ನೂ ಪಾವೆಲ್ ವಿವರಿಸಿದ. ಆ ಇಬ್ಬರೂ ಹುಬ್ಬುಗಂಟಿಕ್ಕಿಕೊಂಡು ಹೋದರು. ಅವರನ್ನು ಕಳುಹಿಸಿಕೊಟ್ಟ ಮೇಲೆ ತಾಯಿ, ಸಣ್ಣನೆ ನಕ್ಕು ಹೇಳಿದಳು:

"ಮುದುಕರೂ ಕೂಡ ನಿನ್ನ ಬುದ್ಧಿವಾದ ಕೇಳಲು ಬರ್ತಿದ್ದಾರೆ."

ಆಕೆಗೆ ಉತ್ತರ ಕೊಡದೆ ಪಾವೆಲ್ ಕುಳಿತು ಬರೆಯತೊಡಗಿದ. ಕೆಲವೇ ನಿಮಿಷಗಳಲ್ಲಿ ಆತ ಹೇಳಿದ:

"ಒಂದು ಕೆಲಸ ಮಾಡ್ತೀಯಾ, ಅಮ್ಮ, ಶಹರಕ್ಕೆ ಹೋಗಿ ಈ ಕಾಗದ ಕೊಟ್ಟು ಬರ್ತೀಯಾ?"

"ಕಾಗದ ಅಪಾಯದ್ದೆ?"

"ಹೌದು. ನಮ್ಮ ಪತ್ರಿಕೆ ಮುದ್ರಿಸುವವರ ಹತ್ತಿರಕ್ಕೆ ನಿನ್ನನ್ನು ಕಳಿಸ್ತಿದ್ದೇನೆ. ಈ ಕೊಪೆಕ್ ಕಥೆ ಮುಂದಿನ ಸಂಚಿಕೆಯಲ್ಲೇ ಬರೋದು ಬಹಳ ಅಗತ್ಯ."

"ಆಗಲಿ, ಇಗೋ ಹೊರಟೆ," ಎಂದಳು ತಾಯಿ.

ಮಗ ಆಕೆಗೊಪ್ಪಿಸಿದ ಮೊದಲ ಕೆಲಸ ಅದು. ಪರಿಸ್ಥಿತಿಯನ್ನು ಮುಚ್ಚು ಮರೆಯಿಲ್ಲದೆ ಮಗ ಹಾಗೆ ವಿವರಿಸಿದ್ದಕ್ಕಾಗಿ ತಾಯಿಗೆ ತುಂಬ ಸಂತೋಷವಾಯಿತು.

ಬಟ್ಟೆ ಹಾಕಿಕೊಳ್ಳುತ್ತ ಆಕೆ ಹೇಳಿದಳು:

"ನನಗೆ ಅರ್ಥವಾಯಿತು, ಪಾಷ. ಒಳ್ಳೆ ದರೋಡೆ ಅವರು ಮಾಡ್ತಿರೋದು! ಹುಂ!.... ಆ ಶಹರದ ಮನುಷ್ಯನ ಹೆಸರೇನು?–ಯೆಗೋರ್ ಇವಾನೊವಿಚ್ ಅಂತಲೆ?"

...ಸಂಜೆ ತಾಯಿ ತಡವಾಗಿ ವಾಪಸು ಬಂದಳು. ಆಕೆಗೆ ಆಯಾಸವಾಗಿತ್ತು. ಆದರೂ ತುಂಬ ಸಂತುಷ್ಟಳಾಗಿದ್ದಳು. ಆಕೆಯೆಂದಳು:

"ಸಾಷನ್ನ ನೋಡ್ದೆ. ನಮಸ್ಕಾರ ತಿಳಿಸೂಂತಂದ್ಲು. ಆ ಯೆಗೋರ್ ಇವಾನೊವಿಚ್ ತುಂಬಾ ಸಾದಾ ಮನುಷ್ಯ; ತಮಾಷೆಯವನು. ಒಳ್ಳೇ ನಗಿಸೋ ಹಾಗೆ ಮಾತಾಡ್ತಾನೆ."

"ನಿನಗೆ ಅವರನ್ನು ನೋಡಿ ಒಪ್ಪಿಗೆಯಾಯ್ತಲ್ಲ–ಸಂತೋಷವಮ್ಮ," ಎಂದು ಪಾವೆಲ್ ಮೃದುವಾಗಿ ಹೇಳಿದ.

"ಅವರು ಸರಳ ಮನುಷ್ಯರು, ಪಾಷ. ಜಂಭದ ಗಾಳಿ ಕೂಡಾ ಸೋಂಕದವರು. ನೀನೂಂತಂದರೆ ತುಂಬಾ ಗೌರವ ಅವರಿಗೆ...."

ಸೋಮವಾರ, ಸಂಪೂರ್ಣ ಗುಣವಾಗದೇ ಇದ್ದುದರಿಂದ ಪಾವೆಲ್ ಮನೆಯಲ್ಲೇ ಉಳಿದ. ಆದರೆ ಊಟದ ಹೊತ್ತಿಗೆ ಫ್ಯೋದೊರ್ ಮಾಜಿನ್ ಏದುತ್ತ ಏದುತ್ತ ಓಡಿಯೋಡಿ ಬಂದ. ಅವನಿಗೆ ತುಂಬ ಸಂತೋಷವಾಗಿತ್ತು. ಆದರೆ ಮುಖದಲ್ಲಿ ಉದ್ವಿಗ್ನತೆಯಿತ್ತು.

"ಬಾ ಬಾ!" ಎಂದು ಅವನು ಕೂಗಿದ. "ಇಡೀ ಕಾರಖಾನೆಯೇ ಬಂಡಾಯವೆದ್ದಿದೆ. ನಿನ್ನನ್ನು ಕರಕೊಂಡು ಬಾಂತ ನನಗೆ ಹೇಳಿದಾರೆ. ಬೇರೆಯವರಿಗಿಂತ ನೀನೇ ಹೆಚ್ಚು ಚೆನ್ನಾಗಿ ವಿವರಿಸ್ತೀ ಅಂತಾರೆ ಸಿಜೋವ್ ಮತ್ತು ಮಹೋತಿನ್. ಏನಾಗ್ತಿದೇಂತ ನೀನು ನೋಡಲೇಬೇಕು."

ಮರುಮಾತಾಡದೆ ಪಾವೆಲ್ ಬಟ್ಟೆಬರೆ ಹಾಕಿಕೊಂಡ.

"ಹೆಂಗಸರೂ ಬಂದಿದಾರೆ. ಅವರೂ ಗಲಾಟೆಗೆ ಸ್ವರ ಸೇರ್‍ಸಿದಾರೆ."

"ನಾನೂ ಬರ್‍ತೀನಿ," ಎಂದಳು ತಾಯಿ. "ಏನ್ಮಾಡ್ಬೇಕೂಂತಿದಾರೆ ಅವರು? ನಾನೂ ಬರ್‍ತೀನಿ."

"ಬಾ ಬೇಗ," ಎಂದ ಪಾವೆಲ್.

ವೇಗವಾಗಿಯೂ ನಿಶ್ಶಬ್ದವಾಗಿಯೂ ಬೀದಿಯುದ್ದಕ್ಕೂ ಅವರು ನಡೆದು ಹೋದರು, ತಾಯಿಗೆ ಉದ್ವೇಗದಿಂದ ಉಸಿರಾಡುವುದಕ್ಕೂ ಆಗುತ್ತಿರಲಿಲ್ಲ. ಅತ್ಯಂತ ಮಹತ್ವದ್ದೇನೋ ನಡೆಯಲಿದೆ ಎಂದು ಅವಳಿಗೆ ಭಾಸವಾಯಿತು. ಕಾರಖಾನೆಯ ಗೇಟುಗಳ ಬಳಿ ಬೊಬ್ಬಿಡುತ್ತ ಜಗಳವಾಡುತ್ತ ಸ್ತ್ರೀಯರ ಗುಂಪು ನಿಂತಿತ್ತು. ಆ ಮೂವರೂ ಕಾರಖಾನೆಯ ಅಂಗಳಕ್ಕೆ ನುಸುಳಿ ಇಳಿದಾಗ, ದಟ್ಟನೆಯ, ಗುಂಪೊಂದು ಉದ್ವೇಗದಿಂದ ಗಟ್ಟಿಯಾಗಿ ಕೂಗಾಡುತ್ತಿದ್ದುದನ್ನು ಕಂಡರು. ಕುಲಿಮೆಯ ಗೋಡೆಯ ಬಳಿ, ಸಿಜೋವ್, ಮಹೋತಿನ್, ವ್ಯಾಲೊವ್ ಮತ್ತು ಪ್ರಭಾವಶಾಲಿಗಳಾದ ಐದಾರು ಜನ ಕೂಲಿಕಾರರು, ಹಳೆಯ ಕಬ್ಬಿಣದ ರಾಶಿಯ ಮೇಲೆ ನಿಂತಿದ್ದರು. ಹಿಂದುಗಡೆ ಇಟ್ಟಿಗೆಯ ಗೋಡೆ ಇತ್ತು. ಎಲ್ಲರೂ ಅವರ ಕಡೆಗೇ ಮುಖ ಮಾಡಿ ನೋಡುತ್ತಿದ್ದುದನ್ನು ತಾಯಿ ಕಂಡಳು.

"ವ್ಲಾಸೊವ್ ಬಂದ," ಎಂದು ಯಾರೋ ಒಬ್ಬನು ಕೂಗಿದ.

"ವ್ಲಾಸೊವ್? ಇಲ್ಲಿಗೆ ಕಳಿಸು ಅವನ್ನ!"

"ಸುಮ್ಮನಿರಿ!" ಎಂದು ಹಲವು ಕಡೆಗಳಿಂದ ಸ್ವರಗಳು ಕೇಳಿಸಿದುವು.

ಎಲ್ಲೋ ಒಂದೆಡೆಯಿಂದ ರೀಬಿನ್ನನ ಧ್ವನಿಯ ಏಕನಾದ ಕೇಳಿಸಿತು:

"ಕೊಪೆಕ್‌ಗಾಗಿ ಅಲ್ಲ–ನ್ಯಾಯಕ್ಕೋಸ್ಕರ ನಾವು ಹೋರಾಡೋದು. ಅದು ಮುಖ್ಯ! ನಮಗೆ ಪ್ರಿಯವಾದದ್ದು ಕೊಪೆಕ್ ಒಂದೇ ಅಲ್ಲ. ಬೇರೆ ಕೊಪೆಕ್‌ಗಿಂತ ನಮ್ಮದು ಹೆಚ್ಚು ಉರುಟಾಗಿಲ್ಲ. ಆದರೆ ಹೆಚ್ಚು ಭಾರವಾಗಿದೆ. ಡೈರೆಕ್ಟರ ರೂಬಲ್‌ಗಿಂತ ನಮ್ಮ ಕೊಪೆಕ್‌ನಲ್ಲಿ ಹೆಚ್ಚು ಮನುಷ್ಯ ರಕ್ತವಿದೆ. ಬೆಲೆ ಇರೋದು ಕೊಪೆಕ್‌ನಲ್ಲಲ್ಲ, ರಕ್ತದಲ್ಲಿ, ನ್ಯಾಯದಲ್ಲಿ–ಅದೀಗ ಮುಖ್ಯ!"

ಆ ಮಾತುಗಳು ಜನಸಂದಣಿಯ ನಡುವೆ ಹರಡಿಕೊಂಡುವು. ಅಲ್ಲಲ್ಲಿಂದ ಉದ್ಗಾರಗಳು ಹೊರಟುವು.

"ಸರಿ ಹೇಳಿದೆ, ರೀಬಿನ್!"

"ಭೇಷಕ್ ಕುಲುಮೆಗಾರ!"

"ವ್ಲಾಸೊವ್‌ಗೆ ದಾರಿಬಿಡಿ!"

ಎಲ್ಲ ಸ್ವರಗಳೂ ಸೇರಿ ಭೀಷಣ ಧ್ವನಿ ಮೊಳಗಿತು. ಆ ಧ್ವನಿಯ ಎದುರಲ್ಲಿ ಯಂತ್ರಗಳ ಗರ್ಜನೆ, ಉಗಿಯ ಫೂತ್ಕಾರ, ತಂತಿಗಳ ಗುಂಯ್ ಗುಂಯ್, ಯಾವುದೂ ಕೇಳಿಸಲಿಲ್ಲ. ಕೈಗಳನ್ನು ಬೀಸುತ್ತಾ, ಬಿಸಿ-ತೀಕ್ಷ್ಣ ಮಾತುಗಳಿಂದ ಒಬ್ಬರು ಇನ್ನೊಬ್ಬರನ್ನು ಉದ್ರೇಕಿಸುತ್ತ, ಜನರು ಎಲ್ಲಾ ದಿಕ್ಕುಗಳಿಂದಲೂ ಓಡಿ ಬಂದರು. ಯಾವಾಗಲೂ

ಎದೆಗಳ ಆಳದಲ್ಲಿ ಚೇತನವಿಲ್ಲದೆ ಹುದುಗಿದ್ದ ಅತೃಪ್ತಿ ಎಚ್ಚತ್ತು ಹೊರಹೋಗಲು ಹಾದಿ ಬೇಡಿತ್ತು. ವಿಜಯಿಯಾಗಿ ಅದು ವಾತಾವರಣದಲ್ಲಿ ಮೇಲಕ್ಕೇರಿತು. ರೆಕ್ಕೆ ಗಳನ್ನು ಶೀರ ಅಗಲಿಸಿ ಬಡಿಯಿತು. ಜನತೆಯ ಮೇಲಿನ ಹಿಡಿತವನ್ನು ಮತ್ತಷ್ಟು ಬಿಗಿಗೊಳಿಸಿ, ಅವರನ್ನು ಮೇಲಕ್ಕೆತ್ತಿ, ಒಬ್ಬರ ಮೇಲೊಬ್ಬರನ್ನು ಬೀಳಿಸಿ, ತನ್ನ ಬದಲಾ ವಣೆಯ ದ್ವೇಷದ ಉರಿಯಲ್ಲಿ ಅವರನ್ನು ಆವರಿಸಿತು. ಸಂದಣಿಯ ಮೇಲ್ಗಡೆ ಧೂಳು ಮತ್ತು ಕರಿ ಹೊಗೆಯ ಮೋಡವೆದ್ದಿತು. ಬೆವರು ತುಂಬಿದ್ದ ಮುಖಗಳು ಉದ್ವೇಗ ದಿಂದ ಬೆಳಗಿದುವು. ಕರಿಯ ಕಣ್ಣೀರು ಕೆನ್ನೆಗಳ ಮೇಲಿಂದ ಹರಿಯಿತು. ಆ ಕಪ್ಪನೆಯ ಮುಖಗಳಲ್ಲಿ ಕಣ್ಣುಗಳೂ ಹಲ್ಲುಗಳೂ ಮಿನುಗಿದುವು.

ಸಿಜೋವ್ ಮತ್ತು ಮಹೋತಿನ್ ನಿಂತಿದ್ದ ಕಬ್ಬಿಣದ ರಾಶಿಯ ಬಳಿಗೆ ಪಾವೆಲ್ ಬಂದ.

"ಸಂಗಾತಿಗಳೇ !" ಎಂದು ಅವನು ಆರಂಭಿಸಿದ.

ಅವನ ಮುಖ ಕಾಂತಿಹೀನವಾಗಿದ್ದುದನ್ನು, ತುಟಿಗಳು ಕಂಪಿಸುತ್ತಿದ್ದುದನ್ನು ತಾಯಿ ನೋಡಿದಳು. ತನಗೆ ಅರಿವಿಲ್ಲದಂತೆಯೇ ಜನಸಂದಣಿಯ ಎಡೆಯಿಂದ ನುಗ್ಗುತ್ತಾ ಆಕೆ ಮುಂದಕ್ಕೆ ಸರಿದಳು.

"ಯಾರು ನುಗ್ತಿರೋದು?" ಎಂದು ಜನರು ತಾಯಿಯನ್ನು ಗದರಿಸಿದರು.

ಅವರೂ ಆಕೆಯನ್ನು ತಳ್ಳಿದರು. ಹಾಗೆಂದು ಅವಳೇನೂ ಸುಮ್ಮನಾಗಲಿಲ್ಲ. ಮಗನ ಬಳಿಯಲ್ಲೇ ನಿಲ್ಲಬೇಕೆಂಬ ಬಯಕೆಯಿಂದ ಪ್ರೇರಿತಳಾಗಿ ಆಕೆ, ಭುಜಗಳಿಂದಲೂ ಮೊಣಗೈಯಿಂದಲೂ ಹಾದಿ ಮಾಡುತ್ತ ಮುಂದೆ ನಡೆದಳು.

ತನಗೆ ಅಪಾರ ಮಹತ್ವದ್ದಾಗಿದ್ದ ಆ ಒಂದು ಪದವನ್ನು ಪಾವೆಲ್, ಹೃದಯ ದಿಂದ ಹೊರಹಾಕಿದ್ದ. ಯೋಧ ಉತ್ಸಾಹದಿಂದ ಅವನ ಕಂಠ ಉಮ್ಮಳಿಸಿ ಬಂತು. ನ್ಯಾಯದ ಕನಸುಗಳಿಂದ ಭುಗಿಲೆನ್ನುತ್ತಿದ್ದ ತನ್ನ ಹೃದಯವನ್ನು ಆ ಜನರಿಗೆಲ್ಲ ತೆರೆದು ತೋರಿಸುವ ಉತ್ಕಟ ಇಚ್ಛೆಯುಂಟಾಯಿತು ಅವನಿಗೆ.

"ಸಂಗಾತಿಗಳೇ !" ಎಂದು ಆತ ಉದ್ಗರಿಸಿದ. ಆ ಶಬ್ದ, ಬಲವನ್ನೂ ಅಮಿತ ಆನಂದವನ್ನೂ ಅವನಿಗೆ ಕೊಟ್ಟಿತು. ಆತ ಮಾತನಾಡಿದ: "ಚರ್ಚುಗಳನ್ನೂ ಕಾರ ಖಾನೆಗಳನ್ನೂ ಕಟ್ಟುವವರು ನಾವು; ಸಂಕೋಲೆಗಳನ್ನೂ ಹಣವನ್ನೂ ತಯಾರಿಸು ವವರು ನಾವು. ತೊಟ್ಟಿಲಿನಿಂದ ಗೋರಿಯವರೆಗೆ ಎಲ್ಲರಿಗೂ ಆಹಾರ ದೊರೆತು ಅವರು ಬದುಕುವಂತೆ ಮಾಡುವ ಜೀವಂತಶಕ್ತಿ ನಾವು !"

"ಸರಿ ಹೇಳಿದೆ !" ಎಂದು ರೀಬಿನ್ ಕೂಗಿ ನುಡಿದ.

"ಯಾವಾಗಲೂ ಎಲ್ಲಾ ಕಡೇಲೂ ದುಡಿಯೋದಕ್ಕೆ ನಾವೇ ಮೊದಲು. ಆದರೆ ದಯೆದಾಕ್ಷಿಣ್ಯದ ವಿಷಯದಲ್ಲಿ ನಮ್ಮ ಸರತಿ ಬರೋದು ಕಟ್ಟಕಡೆಗೆ. ಯಾರು ಕೇಳ್ತಾರೆ ನಮ್ಮನ್ನು? ನಮ್ಮ ಹಿತಕ್ಕಾಗಿ ಒಂದು ಕಡ್ಡಿ ಎತ್ತಿ ಆಚೀಚೆ ಯಾರು ಇಟ್ಟಿ

ದ್ದಾರೆ? ನಾವೂ ಮನುಷ್ಯ ಜೀವಿಗಳೂಂತ ಭಾವಿಸುವವರಾದರೂ ಇದ್ದಾರಾ? ಒಬ್ಬರೂ ಇಲ್ಲ!"

"ಒಬ್ಬರೂ ಇಲ್ಲ!" ಎಂದೊಂದು ಸ್ವರ ಕೇಳಿಸಿತು, ಪಾವೆಲ್‌ನ ಮಾತಿನ ಪ್ರತಿಧ್ವನಿಯಂತೆ.

ಭಾಷಣ ಸಾಗಿದಂತೆ, ಮಾತು ಸರಳವಾಯಿತು, ಶಾಂತವಾಗಿ ಹರಿಯಿತು. ಜನಸಂದಣಿ ಮೆಲ್ಲನೆ ಸಮೀಪಕ್ಕೆ ಬಂತು; ಸಹಸ್ರ ತಲೆಗಳ ಏಕಶರೀರದಂತೆ ಬೆಸು ಗೆಗೊಂಡಿತು. ಆತನ ಪ್ರತಿಯೊಂದು ಮಾತನ್ನು ಅಪ್ಪಿಕೊಳ್ಳುತ್ತ, ತನ್ನ ಅಗಣಿತವಾದ ಆಸಕ್ತ ಕಣ್ಣುಗಳಿಂದ ಆತನ ಮುಖವನ್ನೇ ನೋಡಿತು.

"ನಾವೆಲ್ಲರೂ ಸಂಗಾತಿಗಳು; ನಮ್ಮ ಹಕ್ಕುಗಳಿಗಾಗಿ ಹೋರಾಡುವ ಒಂದೇ ಧ್ಯೇಯದಿಂದ ಗಟ್ಟಿಯಾಗಿ ಬಿಗಿಯಲ್ಪಟ್ಟಿರುವ ಮಿತ್ರರ ಕುಟುಂಬ; ಇದನ್ನು ಮನಗಾಣುವವರೆಗೆ ನಾವು ಖಂಡಿತವಾಗಿಯೂ ಒಳ್ಳೆ ಸ್ಥಿತಿಗತಿಗಳನ್ನು ಸಂಪಾದಿಸ ಲಾರೆವು."

ತಾಯಿಯ ಬಳಿ ನಿಂತಿದ್ದ ಯಾವನೋ ಒಬ್ಬ ಗಡಸು ಧ್ವನಿಯಲ್ಲಿ ಪಾವೆಲ್‌ನನ್ನು ಉದ್ದೇಶಿಸಿ, "ಮುಖ್ಯವಾದ ವಿಷಯ ಹೇಳು!" ಎಂದ.

"ಸುಮ್ಮನಿರು! ನಡುವೆ ಮಾತಾಡಬೇಡ," ಎಂದು ಎರಡು ಸ್ವರಗಳು ಎರಡು ಬೇರೆ ಬೇರೆ ಕಡೆಗಳಿಂದ ಬಂದುವು.

ಗಂಭೀರ ಮುಖಗಳು ಸಿಟ್ಟಿನ ಅಪನಂಬಿಕೆಯಿಂದ ಹುಬ್ಬುಗಂಟಿಕ್ಕಿದುವು. ಆದರೆ ಎಷ್ಟೋ ದೃಷ್ಟಿಗಳು ವಿಚಾರಮಗ್ನವಾಗಿ ಪಾವೆಲ್‌ನ ಮುಖವನ್ನೇ ನಿರೀಕ್ಷಿಸಿದುವು.

"ಇವನೊಬ್ಬ ಸಮಾಜವಾದಿ, ಆದರೆ ಮೂರ್ಖನೇನಲ್ಲ," ಎಂದು ಯಾರಿಂದಲೋ ಟೀಕೆ ಬಂತು.

ಎತ್ತರದ ಒಕ್ಕಣ್ಣಿನ ಕೆಲಸಗಾರನೊಬ್ಬ ತಾಯಿಯ ಭುಜವನ್ನು ತಿವಿಯುತ್ತಾ, "ಧೈರ್ಯವಾಗಿ ಮಾತಾಡ್ತಾನೆ, ಪರವಾಗಿಲ್ಲ," ಎಂದ.

"ಸಂಗಾತಿಗಳೇ, ನಮ್ಮ ಹಿತಕ್ಕಾಗಿ ನಾವೇ ಏನಾದರೂ ಮಾಡ್ಬೇಕು. ನಮ್ಮ ಹೊರತು ಬೇರೆ ಯಾರೂ ನಮಗೆ ಸಹಾಯ ಮಾಡೋದಿಲ್ಲಾಂತ ನಾವು ಈಗಲಾ ದರೂ ಸ್ಪಷ್ಟವಾಗಿ ತಿಳಕೋಬೇಕು. ನಮ್ಮ ವೈರಿಗಳನ್ನು ಸೋಲಿಸ್ಬೇಕೂಂತಿದ್ದರೆ, ಎಲ್ಲರಿಗಾಗಿ ಒಬ್ಬ, ಒಬ್ಬನಿಗಾಗಿ ಎಲ್ಲರೂ ಅನ್ನೋದೇ ನಮ್ಮ ಧ್ಯೇಯವಾಗಿರ್ಬೇಕು."

"ಕೇಳಿ, ಅವನು ಮಾತಾಡ್ತಿರೋದು ಸತ್ಯ!" ಎಂದು ಮಹೋತಿನ್, ಗಾಳಿಯಲ್ಲಿ ಮುಷ್ಟಿ ಎತ್ತುತ್ತಾ ಗಟ್ಟಿಯಾಗಿ ಹೇಳಿದ.

"ಡೈರೆಕ್ಟರನ್ನು ಕರೀರಿ!" ಎಂದು ಪಾವೆಲ್ ಮುಂದುವರಿಸಿದ.

ಭರ್ರನೆ ಒಂದು ಬಿರುಗಾಳಿ ಆ ಜನಸಂದಣಿಯನ್ನೆ ಒಮ್ಮೆಲೆ ತೇಲಿಸಿದ ಹಾಗಾ ಯಿತು. ಜನದಟ್ಟಣೆ ಅತ್ತಿತ್ತ ತೂಗಿತು. ಹಲವಾರು ಸ್ವರಗಳು ಒಮ್ಮೆಲೆ ಕೂಗಿದುವು:

"ಡೈರೆಕ್ಟರನ್ನು ಕರೀರಿ!"

"ಅವನನ್ನು ಕರೆಯೋಕೆ ಒಂದು ನಿಯೋಗ ಕಳಿಸಿ !"

ತಾಯಿ ಇನ್ನೂ ಮುಂದಕ್ಕೆ ನುಗ್ಗಿಬಂದಳು. ಹೆಮ್ಮೆ ತುಂಬಿದ್ದ ಅರಳು ಮುಖ ದಿಂದ ಮಗನ ಕಡೆಗೆ ನೋಡಿದಳು. ಈ ಹಳಬರಾದ ಗಣ್ಯರಾದ ಕಾರ್ಮಿಕರ ನಡುವೆ ಆಕೆಯ ಪಾವೆಲ್ ನಿಂತಿದ್ದ. ಪ್ರತಿಯೊಬ್ಬರೂ ಆತನ ಮಾತನ್ನು ಕೇಳುತ್ತಿದ್ದರು. ಅವನು ಹೇಳಿದುದಕ್ಕೆ ಹೂಂಗುಟ್ಟುತ್ತಿದ್ದರು. ಇತರರ ಹಾಗೆ ಅವನೂ ಸಿಟ್ಟಿಗೆದ್ದು ಶಪಿಸದೇ ಇದ್ದುದನ್ನು ಕಂಡು ಆಕೆಗೆ ಸಂತೋಷವಾಯಿತು.

ತಗಡಿನ ಚಾವಣಿಯ ಮೇಲೆ ಬೀಳುವ ಆಲಿಕಲ್ಲಿನಂತೆ ಜನರ ಶಪಥಗಳೂ ಉದ್ಗಾರಗಳೂ ಕಿವಿ ಮಾತುಗಳೂ ಹೊರಬರುತ್ತಿದ್ದುವು. ಪಾವೆಲ್ ಕೆಳಕ್ಕೆ ಜನರತ್ತ ನೋಡಿದ. ತನ್ನ ವಿಶಾಲವಾದ ಹಿರಿಗಣ್ಣುಗಳಿಂದ ಏನನ್ನೋ ಆತ ಹುಡುಕುತ್ತಿರು ವಂತೆ ಕಂಡಿತು.

"ಪ್ರತಿನಿಧಿಗಳು !"

"ಸಿಜೋವ್ !"

"ವ್ಲಾಸೊವ್ !"

"ರೀಬಿನ್ ! ಅವನನ್ನೂ ಸೇರಿಸಿ. ಚೂಪಾದ ಹಲ್ಲುಗಳಿವೆ ಅವನಿಗೆ !"

ಒಮ್ಮೆಲೆ ಜನಸಂದಣಿಯ ಸ್ವರ ತಗ್ಗಿತು; ಪಿಸುಧ್ವನಿಯ ಉದ್ಗಾರಗಳು ಕೇಳಿಸಿದುವು.

"ತಾನಾಗಿಯೇ ಈ ಕಡೆ ಬರ್‍ತಿದಾನೆ !"

"ಡೈರೆಕ್ಟರು ಬಂದರು !"

ಚೂಪುಗಡ್ಡದ ಕೋಲು ಮುಖದ ಎತ್ತರದ ಒಬ್ಬ ಮನುಷ್ಯ ಒಳಬರಲು ಜನರು ಹಾದಿಮಾಡಿಕೊಟ್ಟರು.

"ದಾರಿ ಬಿಡಿ," ಎಂದನಾತ. ಕೂಲಿಕಾರರನ್ನು ಮುಟ್ಟದೆಯೇ, ಅವರು ಬದಿಗೆ ಸರಿಯುವಂತೆ ಸನ್ನೆ ಮಾಡಿದ. ಅವನು ಕಣ್ಣುಗಳನ್ನು ಕಿರಿದುಗೊಳಿಸಿ, ಮನುಷ್ಯರ ಮಾಲೀಕನ ಅನುಭವದ ದೃಷ್ಟಿಯಿಂದ, ಕೂಲಿಕಾರರ ಮುಖಗಳನ್ನು ಪರೀಕ್ಷಿಸಿದ. ಜನರು ಟೋಪಿಗಳನ್ನು ತೆಗೆದು ಬಾಗಿ ವಂದಿಸಿದರು. ಅವನು ಮರುವಂದನೆ ಮಾಡಲಿಲ್ಲ. ಪೇಚಿನಲ್ಲಿ ಸಿಕ್ಕವರಂತೆ ಕೆಲವರು ಮುಗುಳ್ನಕ್ಕರು. ತಂಟೆ ಮಾಡುತ್ತಿದ್ದಾಗ ಸಿಕ್ಕಿಬಿದ್ದ ಹುಡುಗರಂತೆ ಕೆಲವರು ಪಶ್ಚಾತ್ತಾಪದ ಗುಸುಗುಸು ಉದ್ಗಾರವೆತ್ತಿದರು. ಆ ಜನ ಸಂದಣಿಯಲ್ಲಿ ಮೌನವನ್ನೂ ಭೀತಿಯನ್ನೂ ಹರಡುತ್ತ ಡೈರೆಕ್ಟರು ಮುಂದೆ ಸಾಗಿದ.

ತಾಯಿಯನ್ನು ಆತ ಹಾದುಹೋದ. ಅವನ ನಿಷ್ಠುರ ಕಣ್ಣುಗಳು ಅವಳ ಮುಖದ ಮೇಲಿಂದ ಸರಿದುವು. ಕಬ್ಬಿಣದ ರಾಶಿಯ ಮುಂದೆ ಆತ ನಿಂತ. ಮೇಲಕ್ಕೆ ಏರಿ ಹೋಗಲು ಸಹಾಯಕ್ಕೆಂದು ಯಾರೋ ಕೈನೀಡಿದರು. ಆದರೆ ಅವನು ಅದನ್ನು ನಿರಾಕರಿಸಿ, ಬಲಿಷ್ಠ ಚಲನೆಯಿಂದ ಮೇಲಕ್ಕೆ ಹತ್ತಿ ಪಾವೆಲ್ ಮತ್ತು ಸಿಜೋವ್‌ರ ಎದುರು ನಿಂತ.

"ಇದೆಂಥ ಗುಂಪು ಇದು? ಯಾಕೆ ಕೆಲಸ ನಿಲ್ಲಿಸಿದಿರಿ?"

ಕೆಲವು ಕ್ಷಣ ನಿಶ್ಶಬ್ದವಾಗಿತ್ತು. ಪೈರಿನ ತೆನೆಗಳಂತೆ ಜನರ ತಲೆಗಳು ತೂಗಿದುವು. ಸಿಜೋವ್ ಟೋಪಿಯನ್ನು ಬೀಸಿ, ಭುಜ ಕುಣಿಸಿ, ತಲೆ ತಗ್ಗಿಸಿದ.

ಡೈರೆಕ್ಟರ್ ಗರ್ಜಿಸಿದ:

"ನನ್ನ ಪ್ರಶ್ನೆಗೆ ಉತ್ತರ ಕೊಡಿ!"

ಪಾವೆಲ್ ಅವನ ಸಮೀಪಕ್ಕೆ ಬಂದು ಸಿಜೋವ್ ಮತ್ತು ರೀಬಿನ್‌ರನ್ನು ತೋರಿಸುತ್ತಾ ಗಟ್ಟಿಯಾದ ಸ್ವರದಲ್ಲಿ ಹೇಳಿದ:

"ಕೊಪೆಕ್ ಕಡಿತ ಮಾಡುವ ನಿಮ್ಮ ತೀರ್ಮಾನವನ್ನು ಬದಲಾಯಿಸೀಂತ ನಿಮ್ಮನ್ನು ಕೇಳೋಕೆ, ನಾವು ಮೂವರನ್ನು ನಮ್ಮ ಸಂಗಾತಿಗಳು ಪ್ರತಿನಿಧಿಗಳಾಗಿ ಆರಿಸಿದ್ದಾರೆ."

ಪಾವೆಲ್‌ನ ಕಡೆ ನೋಡದೆಯೇ ಡೈರೆಕ್ಟರ್ ಕೇಳಿದನು:

"ಯಾಕೆ?"

"ಅಂಥ ತೆರಿಗೆ ಅನ್ಯಾಯದ್ದೂಂತ ನಮ್ಮ ಅಭಿಪ್ರಾಯ," ಎಂದು ಪಾವೆಲ್ ಗಟ್ಟಿಯಾಗಿಯೇ ಉತ್ತರವಿತ್ತ.

"ಜವುಗನ್ನು ಒಣಗಿಸಬೇಕೆಂಬ ನನ್ನ ಅಪೇಕ್ಷೆಯ ಉದ್ದೇಶವೇನು? ಕೂಲಿಕಾರರ ಜೀವನ ಸ್ಥಿತಿ ಸುಧಾರಿಸೋದಲ್ಲ, ಅವರನ್ನು ಶೋಷಿಸೋದು, ಎಂತಲೋ ನಿಮ್ಮ ಅಭಿಪ್ರಾಯ? ಹಾಗೋ?"

"ಹೌದು," ಎಂದನು ಪಾವೆಲ್.

"ನಿಮ್ಮ ಅಭಿಪ್ರಾಯವೇನು?" ಎಂದನು ಡೈರೆಕ್ಟರ್, ರೀಬಿನ್‌ನತ್ತ ತಿರುಗಿ.

"ನಮ್ಮೆಲ್ಲರ ಅಭಿಪ್ರಾಯವೂ ಒಂದೇ."

ಸಿಜೋವ್‌ನತ್ತ ತಿರುಗಿ ಡೈರೆಕ್ಟರ್ ಕೇಳಿದನು:

"ನೀವು, ಸತ್ಪುರುಷರೇ? ನೀವೇನು ಹೇಳ್ತೀರಾ?"

"ನನ್ನ ಅಭಿಪ್ರಾಯವೂ ಅದೇ. ನಮ್ಮ ಕೊಪೆಕ್‌ಗಳನ್ನು ನೀವು ನಮಗೇ ಬಿಟ್ಟರೆ ವಾಸಿ."

ಅಷ್ಟು ಹೇಳಿ ಸಿಜೋವ್, ಮತ್ತೊಮ್ಮೆ ತಲೆಯನ್ನು ತಗ್ಗಿಸಿ, ತಪ್ಪಿತಸ್ಥನಂತೆ ಕಿರುನಗೆ ಬೀರಿದ.

ಡೈರೆಕ್ಟರು ನಿಧಾನವಾಗಿ ಜನಸಂದಣಿಯ ಮೇಲೆ ದೃಷ್ಟಿ ಹಾಯಿಸಿ, ತನ್ನ ಭುಜಗಳನ್ನು ಕುಣಿಸಿದ. ಅನಂತರ ಪಾವೆಲ್‌ನತ್ತ ತಿರುಗಿ, ನೆಟ್ಟ ದೃಷ್ಟಿಯಿಂದ ಆತನನ್ನು ನೋಡಿದ.

"ನೀವು ಸ್ವಲ್ಪ ವಿದ್ಯಾವಂತನ ಹಾಗೆ ಕಾಣಿಸ್ತೀರಾ. ಜವುಗು ಆರಿಸೋದರಿಂದ ನಿಮಗಾಗೋ ಲಾಭ ಏನೂಂತ ನಿಮಗೂ ಅರ್ಥವಾಗೋದಿಲ್ವೆ?"

ಎಲ್ಲರಿಗೂ ಕೇಳಿಸುವ ಸ್ವರದಲ್ಲಿ ಪಾವೆಲ್ ಉತ್ತರಿಸಿದ:

"ಕಾರಖಾನೆಯು ಸ್ವಂತ ಖರ್ಚಿನಲ್ಲೇ ಜವುಗನ್ನು ಒಣಗಿಸಿದರೆ ಯಾರಿಗಾದರೂ ಅದರ ಪ್ರಯೋಜನದ ಅರ್ಥವಾದೀತು."

ಒಣ ಧ್ವನಿಯಲ್ಲಿ ಡೈರೆಕ್ಟರು ಹೇಳಿದ:

"ಕಾರಖಾನೆಯು ಧರ್ಮಸಂಸ್ಥೆಯಲ್ಲ. ಎಲ್ಲರೂ ನಿಮ್ಮ ನಿಮ್ಮ ಕೆಲಸಗಳಿಗೆ ವಾಪಸು ಹೋಗಿ! ಇದು ನನ್ನ ಆಜ್ಞೆ!"

ಪಾದದ ಕೆಳಗಿನ ಕಬ್ಬಿಣವನ್ನು ಎಚ್ಚರಿಕೆಯಿಂದ ತುಳಿಯುತ್ತ, ಯಾರ ಕಡೆಯೂ ನೋಡದೆಯೇ ಆತ ಇಳಿಯಲಾರಂಭಿಸಿದ.

ಜನರ ಗುಂಪಿನಿಂದ ಅತೃಪ್ತಿಯ ಅಸ್ಪಷ್ಟ ಧ್ವನಿ ಎದ್ದಿತು.

ಇದ್ದಲ್ಲೇ ನಿಂತು, "ಅದೇನು?" ಎಂದು ಡೈರೆಕ್ಟರು ಕೇಳಿದನು.

ಒಂದೇ ಒಂದು ಸ್ವರ ಮೌನವನ್ನು ಭೇದಿಸಿತು:

"ನೀನೇ ಹೋಗಿ ಕೆಲಸ ಮಾಡು!"

ಒಣ ಧ್ವನಿಯಲ್ಲೇ ಆದರೂ ಪರಿಣಾಮಕಾರಿಯಾದ ರೀತಿಯಲ್ಲಿ ಡೈರೆಕ್ಟರು ಹೇಳಿದನು:

"ಹದಿನೈದು ನಿಮಿಷಗಳೊಳಗೆ ನೀವು ಕೆಲಸಕ್ಕೆ ಹೋಗದಿದ್ದರೆ ನಿಮಗೆಲ್ಲ ಜುಲ್ಮಾನೆ ವಿಧಿಸ್ತೀನಿ."

ಮತ್ತೊಮ್ಮೆ ಆತ ಜನಸಂದಣಿಯ ಮೂಲಕ ಹಾದಿ ಮಾಡಿಕೊಂಡು ಹೊರಟ. ಆದರೆ ಆತನು ಹಿಮ್ಮೆಟ್ಟಿದಂತೆ ಜನರ ಗೊಂದಲ ಎದ್ದಿತು. ಆತ ಹೆಚ್ಚು ಹೆಚ್ಚು ದೂರ ಹೋದಂತೆ ಅದು ಮತ್ತಷ್ಟು ಬಲಗೊಂಡಿತು.

"ಧೈರ್ಯವಿದ್ದರೆ ಮಾತಾಡಿ ಅವನ ಜೊತೆ!"

"ನೋಡಿದಿರಾ ನ್ಯಾಯ? ಎಂಥ ಜೀವನ! ಥ್ಹು!"

"ಈಗ ನಾವು ಮಾಡಬೇಕಾದ್ದೇನಪ್ಪಾ ಚಾಣಾಕ್ಷ?" ಎಂದವರು ಪಾವೆಲ್‌ನ ಕಡೆ ತಿರುಗಿ ಕೂಗಿದರು.

"ನೀನೇನೋ ಸೊಗಸಾದ ಭಾಷಣ ಮಾಡಿದೆ. ಆದರೆ ಯಜಮಾನ ಬಂದ, ಎಲ್ಲ ಅಳಿಸಿಹಾಕಿದ."

"ಹೇಳು, ವ್ಲಾಸೊವ್! ಈಗ ನಾವು ಏನ್ಮಾಡಬೇಕು?"

ಈ ಕೂಗುಗಳ ಒತ್ತಾಯ ಹೆಚ್ಚಿದಂತೆ ಪಾವೆಲ್ ಹೇಳಿದ:

"ಸಂಗಾತಿಗಳೇ! ಕೊಪೆಕ್ ಕಡಿತ ಮಾಡೋದಿಲ್ಲಾಂತ ಡೈರೆಕ್ಟರು ಭರವಸೆ ಕೊಡೋವರೆಗೂ ನಾವು ಕೆಲಸಕ್ಕೆ ಹೋಗಬಾರ್ದು."

ಉದ್ವಿಗ್ನಗೊಂಡ ಮಾತುಗಳು ಬಂದುವು:

"ನಾವೇನು ಬೆಪ್ಪುಗಳೂಂತ ತಿಳಕೊಂಡೆಯಾ?"

"ಅಂದರೆ ಮುಷ್ಕರ!"

"ಕೇವಲ ಒಂದೆರಡು ಕೆಲಸಕ್ಕೆ ಬಾರದ ಕೊಪೆಕ್‌ಗಳಿಗಾಗಿ?"

"ಯಾಕೆ ಹೊಡಬಾರದು ಮುಷ್ಕರ?"

"ನಮ್ಮನ್ನೆಲ್ಲ ವಜಾ ಮಾಡ್ತಾರೆ!"

"ಆಮೇಲೆ ಕೆಲಸ ಮಾಡೋವರು ಅವನಿಗೆ ಯಾರು ಸಿಗ್ತಾರೆ?"

"ಹೊಲಸು ನಾತದ ಜನರು!"

೧೩

ಪಾವೆಲ್ ಇಳಿದು ಬಂದು ತಾಯಿಯ ಬಳಿ ನಿಂತ.

ಜನ ಸಮುದಾಯವು ಉದ್ವೇಗಗೊಂಡಿತ್ತು. ಎಲ್ಲರೂ ಚರ್ಚೆ ಮಾಡುತ್ತ ಗಟ್ಟಿಯಾಗಿ ಕೂಗಾಡುತ್ತಿದ್ದರು.

ರೀಬಿನ್ ಪಾವೆಲ್‌ನ ಬಳಿಗೆ ಬಂದನು. ಆತ ಹೇಳಿದ:

"ಮುಷ್ಕರಕ್ಕೆ ಅವರನ್ನು ಒಪ್ಪಿಸೋದು ಆಗದ ಹೋಗದ ಮಾತು. ಅವರು ಆಸೆಬುರುಕರು. ಕೊಪೆಕ್ ಬಿಡೋಕೆ ಇಷ್ಟವಿಲ್ಲ. ಆದರೆ ಹೇಡಿಗಳು. ಅದೇ ಬಂದಿರೋದು! ಮುನ್ನೂರಕ್ಕಿಂತಲೂ ಹೆಚ್ಚು ಜನ ನಿನಗೆ ಬೆಂಬಲ ಕೊಡೋದಿಲ್ಲ. ಇದು ಒಂದೇ ಸೌಟಿನಿಂದ ಎತ್ತಿ ಹಾಕೋಕೆ ಆಗದಷ್ಟು ದೊಡ್ಡ ತಿಪ್ಪೆ ರಾಶಿ...."

ಪಾವೆಲ್ ಸುಮ್ಮನಿದ್ದ. ಜನಸಮೂಹದ ಬೃಹದಾಕಾರದ ಮಾಸಲು ಮುಖ ಅವನ ಮುಂದೆ ತೂಗಾಡಿತು. ಆ ಕಣ್ಣುಗಳು ಮತ್ತೆ ಮತ್ತೆ ಆಗ್ರಹದ ದೃಷ್ಟಿಯಿಂದ ಅವನನ್ನೇ ನೋಡುತ್ತಿದ್ದುವು. ಅವನ ಎದೆಗುಂಡಿಗೆ ಗಾಬರಿಯಿಂದ ಬಡಿದುಕೊಂಡಿತು. ಒಣ ನೆಲದ ಮೇಲೆ ಬಿದ್ದ ಮಳೆಯ ಒಂದೊಂದು ಹನಿಯೂ ಮಾಯವಾಗುವಂತೆ, ತನ್ನ ಮಾತುಗಳೂ ಯಾವ ಗುರುತನ್ನೂ ಉಳಿಸದೆ ನಿಷ್ಪ್ರಯೋಜಕವಾದುವೆಂದು ಆತನಿಗೆ ಅನಿಸಿತು.

ಆಯಾಸಗೊಂಡು ಸಪ್ಪೆ ಮುಖದಿಂದ ಅವನು ಮನೆಗೆ ಮರಳಿದ ಅವನ ತಾಯಿಯೂ ಸಿಜೋವ್‌ನೂ ಅವನ ಹಿಂದೆಯೇ ನಡೆದು ಬಂದರು. ರೀಬಿನ್ ಒಂದೇ ಸಮನೆ ಮಾತಾಡುತ್ತಾ, ಪಕ್ಕದಲ್ಲೇ ನಡೆದನು.

"ನೀನು ಚೆನ್ನಾಗಿ ಮಾತಾಡ್ತೀಯಾ. ಆದರೆ ಅದು ಹೃದಯಕ್ಕೆ ತಾಗೋ ಹಾಗೇ ನೀನು ಮಾತಾಡಬೇಕು. ಅದರ ನಡುವಿಗೆ ಕಿಡಿ ಎಸೀಬೇಕು. ವಾದಿಸಿ ತರ್ಕಿಸಿ ಜನರನ್ನು ಒಪ್ಪಿಸೋದು ಸಾಧ್ಯವಿಲ್ಲ. ನಿನ್ನ ಮಾತು, ಪಾದಕ್ಕೆ ಸರಿಹೋಗದ ಚಪ್ಪಲಿ – ತುಂಬಾ ತೆಳು, ತುಂಬಾ ಇಕ್ಕಟ್ಟು!"

ಸಿಜೋವ್ ಹೇಳುತ್ತಿದ್ದ:

"ವಯಸ್ಸು ಮೀರಿದ ನಾವಿನ್ನು ಮಸಣದಲ್ಲಿ ಜಾಗ ಹುಡುಕೋ ಸಮಯ ಬಂದಿದೆ, ನೀಲೊವ್ನ! ಈಗ ಒಂದು ಹೊಸ ತರಹೆ ಜನ ಬೆಳೀತಿದ್ದಾರೆ. ನೀನು ಮತ್ತು ನಾನು ಹೇಗಮ್ಮ ಜೀವಿಸಿದ್ದು? ಮೊಣಕಾಲೂರಿ ತೆವಳಿಕೊಂಡು, ಹಣೆಗಳನ್ನು ನೆಲಕ್ಕೆ

ತಾಕಿಸಿ ಸಲಾಂ ಮಾಡ್ಕೊಂಡು. ನಮಗಿಂತ ಮೇಲಿನವರಿಗೆಲ್ಲ ತಲೆಬಾಗಿಸ್ಕೊಂಡು. ಆದರೆ ಈಗಿನ ರೀತಿ ನೀತಿ ಅದೇನೋ. ಬಹುಶಃ ಜನರಿಗೆ ತಿಳಿವಳಿಕೆ ಬಂದಿದೆ. ಅಥವಾ ಇವರು ನಮಗಿಂತಲೂ ದೊಡ್ಡ ತಪ್ಪು ಮಾಡ್ತಿದಾರೋ ಏನೋ. ಏನಿದ್ದರೂ ಅವರು ನಮ್ಮ ಹಾಗಿಲ್ಲ. ಈಗ ನೋಡು, ನಮ್ಮ ಯುವಕರನ್ನೇ ತಗೋ. ಆ ಡೈರೆಕ್ಟರ ಕೂಡೆ ಅವನಿಗೆ ಸಮಾನರು ಅನ್ನೊ ಹಾಗೆ ಮಾತಾಡ್ತಾರೆ.... ಆಗಲಿ, ಆ ಮೇಲೆ ಸಿಗ್ತೀನಿ, ಪಾವೆಲ್ ಮಿಹಾಯ್‌ಲೊವಿಚ್. ನೀನು ಹೀಗೆ ಜನರ ಪಕ್ಷ ವಹಿಸಿ ಮಾತಾಡ್ತಿರೋದು ಒಳ್ಳೇದು, ತಮ್ಮಾ. ದೇವರು ಸಹಾಯ ಮಾಡ್ತಾನೆ, ನಿಂಗೆ. ಬಹುಶಃ ಏನಾದರೂ ಒಂದು ಪರಿಹಾರ ನಿನಗೆ ಹೊಳೆದೇ ಹೊಳೆದೀತು. ದೇವರಿದ್ದಾನೆ.... ಬರ್ತೀನಪ್ಪ...."

ಹಾಗೆ ಹೇಳಿ ಆತನು ತನ್ನ ಮನೆಯ ಕಡೆಗೆ ಹೋದ.

"ಹೊರಟ್ಹೋಗು, ಹೋಗಿ ಸಾಯಿ," ಎಂದು ರೀಬಿನ್ ಗೊಣಗಿದನು. "ಅವನಂಥ ಜನರು ಮನುಷ್ಯರೇ ಅಲ್ಲ. ಬರೇ ಗಮಾರರು. ಬಿರುಕು ಮುಚ್ಕೋಕೆ ಸಾಕಾಗೋ ಸಾಮಗ್ರಿ. ನೀನು ಪ್ರತಿನಿಧಿಯಾಗ್ಬೇಕೂಂತ ಕೂಗಿದ್ದು ಯಾರು ನೋಡಿದ್ಯಾ ಪಾವೆಲ್? ನೀನು ಸಮಾಜವಾದಿ–ಗಲಾಟೆಕೋರ ಅಂತ ಕಿಂವದಂತಿ ಹಬ್ಬಿಸಿದ ಜನರೇನೇ. ಅವರೇ! 'ಅವನಿಗೆ ಕೆಲಸ ಹೋಗುತ್ತೆ; ತಕ್ಕ ಶಾಸ್ತಿ ಆಗುತ್ತೆ,' ಅನ್ನೋ ಯೋಚನೆ ಅವರದು."

"ಅವರ ಪ್ರಕಾರ ಅವರು ಸರಿಯಾದ್ದನ್ನೇ ಮಾಡಿದರು," ಎಂದ ಪಾವೆಲ್.

"ತನ್ನ ಒಡಹುಟ್ಟಿದವರನ್ನು ತೋಳ ಹಿಡಿದು ಹರಿದು ತಿನ್ನೋದೂ ಅವರ ದೃಷ್ಟೀಲಿ ನ್ಯಾಯವೇ!"

ರೀಬಿನ್ನನ ಮುಖವನ್ನು ಚಿಂತೆಯ ಮೋಡ ತುಂಬಿತು. ಅವನ ಧ್ವನಿ ರೂಢಿಯಿಲ್ಲದ ಭಾವೋದ್ರೇಕವನ್ನು ಸೂಚಿಸುತ್ತಿತ್ತು.

"ಜನರು ಬರೇ ಮಾತುಗಳಿಗೆ ಕಿವಿ ಕೊಡೋದಿಲ್ಲ. ಅವರು ಅನುಭವಿಸ್ಬೇಕು. ನಿನ್ನ ಮಾತುಗಳನ್ನು ರಕ್ತದಲ್ಲಿ ತೋಯಿಸ್ಬೇಕು...."

ಆ ದಿನವೆಲ್ಲಾ ಪಾವೆಲ್ ಅಲ್ಲಿ ಇಲ್ಲಿ ತಿರುಗಾಡಿದ. ಅವನಿಗೆ ಬಳಲಿಕೆಯಾಯಿತು. ಮಂಕು ಹಿಡಿದ ಹಾಗಾಯಿತು. ವಿಚಿತ್ರ ಯಾತನೆಯ ಅನುಭವವಾಗುತ್ತಿತ್ತು. ಏನನ್ನೋ ಹುಡುಕುವಂತಿದ್ದ ಅವನ ಕಣ್ಣುಗಳು ಉರಿಯುತ್ತಿದ್ದುವು. ತಾಯಿ ಇದನ್ನೆಲ್ಲ ನೋಡಿದಳು. ಜಾಗರೂಕತೆಯಿಂದ ಆಕೆ ಕೇಳಿದಳು.

"ಏನಾಗಿದೆ, ಪಾಷ?"

"ತಲೆನೋವು," ಎಂದು ಪಾವೆಲ್ ಉತ್ತರವಿತ್ತ.

"ಮಲಕೋ. ಡಾಕ್ಟರನ್ನು ಕರಕೊಂಡು ಬರ್ತೀನಿ."

"ಬೇಡ, ಬೇಕಾಗಿಲ್ಲ," ಎಂದು ತಕ್ಷಣವೇ ಪಾವೆಲ್ ಮರುನುಡಿದ.

ಮುಂದುವರಿಯುತ್ತ ಅದೇ ಸ್ವರದಲ್ಲಿ ಅವನು ಹೇಳಿದ:

"ನಾನಿನ್ನೂ ಚಿಕ್ಕವನು, ಬಲಹೀನ. ಅದೇ ಬಂದಿರೋ ತೊಂದರೆ! ಅವರು ನನ್ನ ಮಾತನ್ನ ನಂಬಲಿಲ್ಲ. ಅವರು ನನ್ನ ಪಕ್ಷ ವಹಿಸಲಿಲ್ಲ. ಅಂದರೆ, ಹೇಳಬೇಕಾದ್ದನ್ನ ಸರಿಯಾಗಿ ಹೇಳೋಕೆ ನನಗೆ ತಿಳೀದೂಂತಾಯ್ತು. ಥೂ – ಎಷ್ಟು ಬೇಸರ – ನನ್ನ ಬಗೆಗೇ ಜಿಗುಪ್ಸೆ ನನಗೆ."

ಯೋಚನೆಯಲ್ಲಿ ಆವರಿಸಿದ್ದ ಆ ಮುಖವನ್ನೇ ಆಕೆ ದಿಟ್ಟಿಸಿ ನೋಡಿದಳು. ಮಗನನ್ನು ಸಂತೈಸಲು ಮುಂದಾದಳು. ಮೃದುವಾಗಿ ಹೇಳಿದಳಾಕೆ:

"ಸ್ವಲ್ಪ ತಾಳು. ಇವತ್ತು ಅವರಿಗೆ ತಿಳೀದೇ ಹೋದದ್ದು ನಾಳೆ ತಿಳಿಯುತ್ತೆ."

"ಅವರು ತಿಳೀಲೇಬೇಕು," ಎಂದ ಪಾವೆಲ್.

"ನೀನು ಹೇಳೋದು ನ್ಯಾಯಾಂತ ನನಗೂ ಕಾಣಿಸುವಾಗ...." ಎಂದು ತಾಯಿ ಹೇಳಿದಳು.

ಪಾವೆಲ್ ಆಕೆಯ ಬಳಿಗೆ ಹೋದ.

"ನೀನೊಬ್ಬ ಒಳ್ಳೇ ಮುದ್ದು ತಾಯಿ, ಅಮ್ಮ," ಎಂದು ಆತ ಪಕ್ಕಕ್ಕೆ ತಿರುಗಿದ.

ಆ ಮೃದು ಮಾತುಗಳನ್ನು ಕೇಳಿ ಒಂದು ಕ್ಷಣ ಬೆಚ್ಚಿಬಿದ್ದ ಹಾಗಾಯಿತು ಆಕೆಗೆ. ಆತನ ಪ್ರೀತಿಯ ಮಾತನ್ನು ಅಪ್ಪಿಕೊಂಡವಳಂತೆ, ಆಕೆ ಕೈಗಳನ್ನು ಎದೆಗೊತ್ತಿಕೊಂಡಳು.

ಆ ರಾತ್ರೆ ಪೋಲೀಸರು ಬಂದರು. ಆಕೆ ಆಗಲೆ ನಿದ್ದೆಹೋಗಿದ್ದಳು. ಅವನು ಮಲಗಿಕೊಂಡು ಓದುತ್ತಿದ್ದ. ಬಂದವರು ಹಿಂದಿನ ಸಲದಂತೆ ರೇಗಿಕೊಂಡೇ ಮನೆಯನ್ನೆಲ್ಲಾ ಶೋಧಿಸಿದರು. ಅಟ್ಟದ ಮೇಲೆ, ಹೊರ ಅಂಗಳದಲ್ಲಿ, ಎಲ್ಲ ಕಡೆಯೂ ಝಡ್ತಿಯಾಯಿತು. ಆ ಅರಿಸಿನ ಮುಖದ ಅಧಿಕಾರಿಯೂ ಹಿಂದಿನ ಬಾರಿಯಂತೆಯೇ ಒರಟಾಗಿ ವ್ಯಂಗ್ಯವಾಗಿ ಮಾತನಾಡಿದ. ಹೃದಯಕ್ಕೇ ನಾಟುವಂಥ ಕಟೂಕ್ತಿಗಳನ್ನಾಡಿದ. ಅದರಿಂದ ಅವನಿಗೆ ತುಂಬಾ ಸಂತೋಷವಾಗುತ್ತಿತ್ತು. ತಾಯಿ ಮೌನವಾಗಿ ಒಂದು ಮೂಲೆಯಲ್ಲಿ ಕುಳಿತಳು. ಮಗನ ಮುಖದ ಮೇಲೆಯೇ ಆಕೆಯ ದೃಷ್ಟಿ ನೆಟ್ಟಿತ್ತು. ತನ್ನ ಮನಸ್ಸಿನ ಭಾವನೆಗಳು ಮುಖದ ಮೇಲೆ ಕಾಣಬಾರದೆಂದು ಪಾವೆಲ್ ಯತ್ನಿಸಿದ. ಆದರೂ ಅಧಿಕಾರಿ ನಕ್ಕಾಗ ಪಾವೆಲ್‌ನ ಕೈ ಬೆರಳುಗಳು ಕಂಪಿಸುತ್ತಿದ್ದುವು. ಮರು ಮಾತನಾಡದೆ ಸುಮ್ಮನಿರಲು ಮಗ ಎಷ್ಟೊಂದು ಪ್ರಯಾಸಪಡುತ್ತಿದ್ದನೆಂಬುದನ್ನು ತಾಯಿ ಕಂಡಳು. ಪೋಲೀಸರ ನಗೆಮಾತುಗಳನ್ನು ಸಹಿಸಿಕೊಳ್ಳಲು ಆತ ಎಷ್ಟೊಂದು ಕಷ್ಟಪಡುತ್ತಿದ್ದನೆಂಬುದನ್ನು ತಾಯಿ ಊಹಿಸಿಕೊಂಡಳು. ಮೊದಲ ಸಾರಿ ಇದ್ದಷ್ಟು ಭೀತಿ ಈ ಸಲ ಅವಳಿಗಿರಲಿಲ್ಲ. ಈ ಬೂದು ಬಣ್ಣದ ನಿಶಾಚರ ಅತಿಥಿಗಳ ಬಗ್ಗೆ ಆಕೆಯ ದ್ವೇಷ ಹೆಚ್ಚಿತ್ತು. ಈ ದ್ವೇಷದೆದುರಲ್ಲಿ ಆಕೆಯ ಹೆದರಿಕೆಯೆಲ್ಲ ನಶಿಸಿ ಹೋಗಿತ್ತು.

ಸಂಧಿ ಸಾಧಿಸಿ ಪಾವೆಲ್,

"ಅವರು ನನ್ನ ಕರೆದೊಯ್ಯುತ್ತಾರೆ," ಎಂದು ಪಿಸುಮಾತಿನಲ್ಲಿ ತಾಯಿಗೆ ಹೇಳಿದ.

ತಲೆ ಬಾಗಿಸುತ್ತ, ಮೆಲ್ಲನೆ ಆಕೆ, "ಅರ್ಥವಾಯ್ತು," ಎಂದು ಉತ್ತರಿಸಿದಳು.

ಆ ದಿನ ಬೆಳಿಗ್ಗೆ ಕಾರಖಾನೆಯ ಕೆಲಸಗಾರರೆದುರು ಆತ ಮಾಡಿದ ಭಾಷಣ ಕ್ಕಾಗಿ ಅವನನ್ನು ಸೆರೆಮನೆಯಲ್ಲಿಡುವರೆಂದು ಆಕೆ ಗ್ರಹಿಸಿಕೊಂಡಳು. ಆದರೆ, ಆತ ಹೇಳಿದ್ದ ಮಾತಿಗೆ ಅಲ್ಲಿ ಪ್ರತಿಯೊಬ್ಬರೂ ಒಪ್ಪಿದ್ದರು; ಆದ್ದರಿಂದ ಆತನ ರಕ್ಷಣೆ ಗಾಗಿ ಎಲ್ಲರೂ ಮುಂದೆ ಬರ್ತಾರೆ; ಆಗ ಬೇಗನೆ ಅವನನ್ನು ಬಿಡುಗಡೆಮಾಡ ಬೇಕಾಗುತ್ತೆ ಎಂದೆಲ್ಲ ತಾಯಿ ಯೋಚಿಸಿದಳು.

ತೋಳುಗಳನ್ನು ಚಾಚಿ ಮಗನನ್ನು ತಬ್ಬಿಕೊಂಡು ಅಳಬೇಕೆಂದಿದ್ದಳು ಆಕೆ. ಆದರೆ ಅಧಿಕಾರಿ, ಕಿರುಗಣ್ಣಿನಿಂದ ಆಕೆಯನ್ನೆ ನೋಡುತ್ತ ಅಲ್ಲೇ ಪಕ್ಕದಲ್ಲೆ ನಿಂತಿದ್ದ. ಅವನ ತುಟಿಗಳೂ ಮೀಸೆಗಳೂ ಕುಣಿಯುತ್ತಿದ್ದುವು. ಆ ಮನುಷ್ಯ ತನ್ನ ಕಣ್ಣೀರು ರೋದನ ಬೇಡಿಕೆಗಾಗಿಯೇ ಕಾಯುತ್ತಿದ್ದನೆಂದು ಪೆಲಗೇಯಳಿಗೆ ಅನಿಸಿತು. ತುಂಬ ಧೈರ್ಯದಿಂದ ಆಕೆ, ತನ್ನ ಮಗನ ಕೈಯನ್ನು ಬಲವಾಗಿ ಹಿಡಿದುಕೊಂಡಳು. ನಿಧಾನವಾಗಿ, ಮೆಲ್ಲನೆ, ಉಸಿರನ್ನು ಬಿಗಿಹಿಡಿಯುತ್ತ ಆಕೆ ಹೇಳಿದಳು:

"ಹೋಗಿ ಬಾ, ಪಾಷ, ನಿನಗೆ ಬೇಕಾದ್ದನ್ನೆಲ್ಲಾ ತಗೊಂಡಿಯಾ?"

"ಹೂಂ. ಬೇಸರ ಮಾಡಿಕೊಳ್ಳಬೇಡಮ್ಮ."

"ದೇವರು ನಿನ್ನ ಕಾಪಾಡಲಿ, ಮಗೂ...."

ಅವರು ಆತನನ್ನು ಕರೆದುಕೊಂಡು ಹೋದ ಬಳಿಕ, ಒಂದು ಬೆಂಚಿನ ಮೇಲೆ ಕುಸಿದು ಕುಳಿತು ಆಕೆ ನರಳಾಡಿದಳು. ತನ್ನ ಗಂಡ, ಹಿಂದೆ ವಾಡಿಕೆಯಾಗಿ ಕುಳಿತು ಕೊಳ್ಳುತ್ತಿದ್ದಂತೆ, ಬೆನ್ನನ್ನು ಗೋಡೆಗೊರಗಿಸಿಕೊಂಡು ಅವಳು ಕುಳಿತಳು. ದುಃಖ ದಿಂದಲೂ ತಾನು ಅಸಹಾಯಕಳೆಂಬ ಅರಿವಿನ ನೋವಿನಿಂದಲೂ ಆಕೆ ಸಂಕಟ ಅನು ಭವಿಸಿದಳು. ತನ್ನ ತಲೆಯನ್ನು ಹಿಂದಕ್ಕೆ ಬಾಗಿಸಿ ದೀರ್ಘ ಕಾಲದವರೆಗೆ ಮೆಲುದನಿ ಯಲ್ಲಿ ಅವಳು ಅಳತೊಡಗಿದಳು. ಗಾಯಗೊಂಡ ಹೃದಯದ ನೋವೆಲ್ಲವೂ ಆ ರೋದನ ದಲ್ಲಿ ಬೆರೆತಿತ್ತು. ಆದರೆ ಆಕೆಯ ಒಳಗಣ್ಣಿನೆದುರು, ಅಧಿಕಾರಿಯ ತೆಳ್ಳಗಿನ ಮೀಸೆಯು, ಸಂತೋಷ ವ್ಯಕ್ತಮಾಡುತ್ತಿದ್ದ, ಕಿರುಗಣ್ಣುಗಳ, ನಿಶ್ಚಲವಾದ ಹಳದಿ ಮುಖ ಮತ್ತೆ ಮತ್ತೆ ಬಂದು ನಿಲ್ಲುತ್ತಿತ್ತು. ನ್ಯಾಯಕ್ಕಾಗಿ ಆಗ್ರಹಿಸಿದ ಕಾರಣದಿಂದ ಮಕ್ಕಳನ್ನು ತಾಯಂದಿರಿಂದ ಎಳೆದೊಯ್ಯುವ ಜನರ ವಿಷಯವಾಗಿ, ಕ್ರೋಧದ ದ್ವೇಷದ ಮೋಡ ವೊಂದು ಆಕೆಯ ಹೃದಯದಲ್ಲಿ ಮೂಡಿ ಬಂದು ಬಲಗೊಂಡಿತು.

ಆಗ ಚಳಿಯಾಗಿತ್ತು. ಹೊರಗೆ ಕಿಟಕಿಗಳಿಗೆ ಮಳೆ ಬಡಿಯುತ್ತಿತ್ತು. ಕಣ್ಣಿಲ್ಲದ, ಕೆಂಪು ಮೋರೆಯ, ನೀಳತೋಳಿನ, ಬೂದು ಬಣ್ಣದ ವ್ಯಕ್ತಿಗಳು, ಅಸ್ಪಷ್ಟವಾಗಿ ತಮ್ಮ ಹೆಮ್ಮಡಿ ಮುಳ್ಳಿನ ಸಪ್ಪಳ ಮಾಡುತ್ತಾ ಕಾವಲುಗಾರರ ಹಾಗೆ ರಾತ್ರಿಯೆಲ್ಲವೂ ತನ್ನ ಮನೆಯ ಸುತ್ತಲೂ ನಡೆಯುತ್ತಿದ್ದಂತೆ ಆಕೆಗೆ ಭಾಸವಾಗುತ್ತಿತ್ತು.

"ಓ! ನನ್ನನ್ನೂ ಜತೆಯಲ್ಲೇ ಒಯ್ಯಬಾರದಾಗಿತ್ತೆ?" ಎಂದು ಆಕೆ ಯೋಚಿಸಿ ದಳು.

ಬೆಳಿಗ್ಗೆ ಸಿಳ್ಳು ಜನರನ್ನು ಕೆಲಸಕ್ಕೆ ಕೂಗಿ ಕರೆಯಿತು. ಸಿಳ್ಳಿನ ಸ್ವರಕ್ಕೆ ನಿಶ್ಚಿತ ಶ್ರುತಿಯಿರಲಿಲ್ಲ. ಅದು ಮೆಲ್ಲಮೆಲ್ಲನೆ, ಕಟ್ಟಿಕೊಂಡ ಹಾಗೆ, ಹೊರಬೀಳುತ್ತಿತ್ತು. ಬಾಗಿಲು ತೆಗೆದು ರೀಬಿನ್ ಒಳಬಂದ. ನೀಲೊವ್ನಳ ಮುಂದೆ ನಿಂತು, ತನ್ನ ಗಡ್ಡದ ಮೇಲಿದ್ದ ಮಳೆನೀರನ್ನು ಒರೆಸಿ ಹಾಕುತ್ತಾ, ಆತ ಕೇಳಿದ:

"ಅವನನ್ನು ಕೊಂಡೊಯ್ದರೆ?"

"ಹೌದು, ಕರಕೊಂಡೇ ಹೋದರು. ಅವರ ಮನೆ ಹಾಳಾಗ!"

ಸಣ್ಣನೆ ನಕ್ಕು ಆತ ಹೇಳಿದ:

"ಹೀಗಾಗುತ್ತೇಂತ ಊಹಿಸೋದ್ಧು ಕಷ್ಟವಿರಲಿಲ್ಲ. ನನ್ನ ಮನೆಗೂ ಬಂದಿದ್ರು, ಝಡ್ತಿಮಾಡಿದ್ರು. ಪ್ರತಿಯೊಂದು ಸಾಮಾನನ್ನೂ ಮುಟ್ಟಿ ತಿರುವಿಹಾಕಿದ್ರು. ಬೇಕಾದಷ್ಟು ಬೈದಾಡಿದ್ರು – ಬೇರೇನೂ ಅಪಾಯ ಮಾಡಲಿಲ್ಲ... ಹುಂ.... ಅಂತೂ ಪಾವೆಲ್‌ನ ಕರಕೊಂಡೇ ಹೋದರು! ಡೈರೆಕ್ಟರು ಕಣ್ಣು ಮಿಟುಕಿಸಿದ, ಪೋಲೀಸ ತಲೆದೂಗಿದ – ಆಮೇಲೆ, ಇನ್ನೊಬ್ಬ ಮಾಯ! ಅವರು ಚೆನ್ನಾಗಿ ಜತೆಯಾಗಿಯೇ ಕೆಲಸ ಮಾಡ್ತಾರೆ. ಅವರಲ್ಲೊಬ್ಬ, ಜನತೆಯ ಕೋಡುಗಳನ್ನು ಗಟ್ಟಿಯಾಗಿ ಹಿಡಿದು ನಿಲ್ಲಿಸ್ತಾನೆ. ಇನ್ನೊಬ್ಬ ಕೆಚ್ಚಲು ಬರಡಾಗೋವರೆಗೂ ಹಾಲು ಹಿಂಡ್ತಾನೆ."

ಎದ್ದು ನಿಂತು ತಾಯಿ ಕೂಗಿ ಹೇಳಿದಳು:

"ನೀವು ಪಾವೆಲ್‌ನ ಸಹಾಯಕ್ಕೆ ಬರಲೇ ಬೇಕು. ಅವನು ಮಾಡಿದ್ದು ಎಲ್ಲರಿಗಾಗಿ!"

"ನೀವು ಎಂದರೆ ಯಾರು?"

"ಪ್ರತಿಯೊಬ್ಬರೂ!"

"ಹುಂ. ಇದೀಗ ನೀನು ಹೇಳೋದು! ಇಲ್ಲಮ್ಮ, ಹಾಗೆ ಯಾವತ್ತೂ ಆಗೋದಿಲ್ಲ."

ನಗುತ್ತ ಆತ ನಿಧಾನ ಹೆಜ್ಜೆ ಹಾಕುತ್ತಾ ಹೊರಟು ಹೋದ. ಅವನ ನಿರಾಶೆಯ ಮಾತುಗಳಿಂದ ತಾಯಿಯ ದುಃಖ ಮತ್ತಷ್ಟು ಹೆಚ್ಚಿತು.

"ಅವರು ಅವನಿಗೆ ಹೊಡೆದರೆ – ಹಿಂಸೆ ಕೊಟ್ಟರೆ?..."

ಹೊಡೆತದಿಂದ ಗಾಯಗೊಂಡ ರಕ್ತಮಯವಾದ ಮಗನ ಮೈಯನ್ನು ತಾಯಿ ಕಲ್ಪಿಸಿಕೊಂಡಳು. ನಡುಕದ ಭಯ ಆಕೆಯ ಹೃದಯವನ್ನು ಆವರಿಸಿತು. ಆಕೆಯ ಕಣ್ಣುಗಳು ನೋಯತೊಡಗಿದುವು.

ಆ ದಿನ ತಾಯಿ ಒಲೆಯನ್ನೇ ಹೊತ್ತಿಸಲಿಲ್ಲ. ಊಟ ಮಾಡಲಿಲ್ಲ. ಚಹಾ ಕೂಡಾ ಕುಡಿಯಲಿಲ್ಲ. ಸಂಜೆ, ತುಂಬ ಹೊತ್ತಾದ ಮೇಲಷ್ಟೆ, ಒಂದು ಬ್ರೆಡ್ಡಿನ ಚೂರನ್ನಾಕೆ ತಿಂದಳು. ಆ ರಾತ್ರೆ ಮಲಗಿಕೊಂಡಾಗ, ಜೀವನ ಹಿಂದೆಂದೂ ಇಷ್ಟು ಬರಿದಾಗಿರಲಿಲ್ಲ – ಒಂಟಿಯಾಗಿರಲಿಲ್ಲ, ಎಂದೆನಿಸಿತು ಆಕೆಗೆ. ಕಳೆದ ಕೆಲ ವರ್ಷಗಳನ್ನು ಆಕೆ, ಸೊಗಸಾದ ಮಹತ್ವದ ಘಟನೆಯೊಂದು ನಡೆಯುವುದೆಂಬ ಸದಾ ಕಾಲದ ನಿರೀಕ್ಷೆ

ಯಲ್ಲೇ ಕಳೆದಿದ್ದಳು. ಆಗ ಆಕೆಯ ಸುತ್ತಲೂ ಎಳೆಯರ ಹರ್ಷಪ್ರದವಾದ ಗದ್ದಲದ ಚಟುವಟಿಕೆ ಇತ್ತು. ಒಳ್ಳೆಯದಾದ, ಆದರೆ ಅಪಾಯಕರವಾದ, ಆ ಎಲ್ಲ ಜೀವನದ ಪ್ರೇರಕನಾದ ತನ್ನ ಮಗನ ಮುಖವನ್ನು ನಿತ್ಯವೂ ನೋಡುವುದು ಆಕೆಗೆ ಅಭ್ಯಾಸವಾಗಿತ್ತು. ಈಗ ಆತ ಹೊರಟುಹೋಗಿದ್ದ; ಜತೆಯಲ್ಲೇ ಉಳಿದುದೆಲ್ಲವೂ ಹೊರಟು ಹೋಗಿದ್ದುವು.

೧೪

ಮಗನನ್ನು ಅವರು ಕರೆದೊಯ್ದ ಆ ರಾತ್ರೆ ತಾಯಿಗೆ ನಿದ್ದೆಯೇ ಹತ್ತಲಿಲ್ಲ. ಕೊನೆಯೇ ಇಲ್ಲದ ಹಾಗೆ ರಾತ್ರೆ ನಿಧಾನವಾಗಿ ಕಳೆಯಿತು. ಮಾರನೆ ದಿನವಂತೂ ಹೊತ್ತು ಮತ್ತಷ್ಟು ನಿಧಾನವಾಗಿ ಸರಿಯಿತು. ಆ ದಿನ ಯಾರಾದರೂ ಬರಬಹುದೆಂದು ಆಕೆ ನಿರೀಕ್ಷಿಸಿದಳು. ಆದರೆ ಯಾರೂ ಬರಲಿಲ್ಲ. ಸಂಜೆಯಾಯಿತು. ಆಮೇಲೆ ರಾತ್ರೆ. ಕುಳಿರುಮಳೆ ನಿಟ್ಟುಸಿರ್ಗರೆಬಿಡುತ್ತ, ಪಟಪಟನೆ ಗೋಡೆಗೆ ಬಡಿಯುತ್ತಿತ್ತು. ಹೊಗೆಕೊಳವೆಯ ಮೂಲಕ ಗಾಳಿ ಸಿಳ್ಳು ಹಾಕುತ್ತ ಒಳಕ್ಕೆ ಇಳಿಯುತ್ತಿತ್ತು. ನೆಲದ ಕೆಳಗೇನೋ ಚೂರು ಚೂರಾದ ಶಬ್ದವಾಗುತ್ತಿತ್ತು. ಮಾಡಿನಿಂದ ನೀರಿನ ಹನಿಗಳು ತೊಟ್ಟಿಕ್ಕುತ್ತಿದ್ದುವು. ಅವು ಕೆಳಗೆ ಬೀಳುವ ಟಪ್ ಟಪ್ ಶಬ್ದವು ವಿಚಿತ್ರವಾಗಿ ಗಡಿಯಾರದ ಟಿಕ್ ಟಿಕ್ ಸದ್ದಿನೊಂದಿಗೆ ಬೆರೆಯುತ್ತಿತ್ತು. ಇಡೀ ಮನೆಯೇ ಮೆಲ್ಲನೆ ತೂಗಾಡುತ್ತಿದ್ದಂತೆ ತೋರಿಬರುತ್ತಿತ್ತು. ಪರಿಚಿತವಾದ ಆ ವಾತಾವರಣವೆಲ್ಲ, ದುಃಖದ ದೆಸೆಯಿಂದಾಗಿ ಪರಕೀಯವಾಗಿಯೂ ನಿರ್ಜೀವವಾಗಿಯೂ ತಾಯಿಗೆ ತೋರುತ್ತಿತ್ತು.

ಕಿಟಿಕಿಯ ಬಳಿ ಸಂಕೇತದ ಸಪ್ಪಳವಾಯಿತು – ಒಮ್ಮೆ, ಎರಡು ಸಲ. ಇಂಥ ಸಪ್ಪಳಗಳು ಆಕೆಗೆ ರೂಢಿಯಾಗಿದ್ದುವು. ಅವಳಿಗೆ ಅಂಥ ಸಪ್ಪಳದಿಂದ ಭಯವಾಗುತ್ತಿರಲಿಲ್ಲ. ಆದರೆ ಈ ಸಾರೆ ಆಕೆಯ ಹೃದಯ ಸಂತೋಷದಿಂದ ಡವಡವನೆ ಹೊಡೆದುಕೊಂಡಿತು. ಅಸ್ಪಷ್ಟವಾದ ಆಸೆಯೊಂದು, ಆಕೆಯನ್ನು ತಟಕ್ಕನೆ ಏಳುವಂತೆ ಮಾಡಿತು. ಭುಜದ ಮೇಲೆ ಶಾಲನ್ನು ಹೊದ್ದುಕೊಳ್ಳುತ್ತಾ, ಆಕೆ ಬಾಗಿಲನ್ನು ತೆರೆದಳು.

ಸಮೋಯ್‌ಲೊವ್ ಒಳಹೊಕ್ಕ. ಅವನ ಹಿಂದೆಯೇ ಇನ್ನೊಬ್ಬ ವ್ಯಕ್ತಿ ಬಂದ. ಓವರ್ ಕೋಟಿನ ಮೇಲಕ್ಕೆಳೆದ ಕಾಲರೂ, ಹುಬ್ಬಿನವರೆಗೆ ಕೆಳಕ್ಕೆ ಎಳೆದಿದ್ದ ಟೋಪಿಯೂ ಆ ವ್ಯಕ್ತಿಯ ಮುಖವನ್ನು ಮರೆಸಿದ್ದುವು.

ಉಪಚಾರದ ಯಾವ ಮಾತೂ ಇಲ್ಲದೆಯೇ ಸಮೋಯ್‌ಲೊವ್ ಕೇಳಿದ:

"ಎಬ್ಬಿಸಿಬಿಟ್ಟೆವಲ್ಲವೆ?"

ಎಂದಿನಂತೆ ಅವನು ಘರ್ಜಿಸುತ್ತಿರಲಿಲ್ಲ. ಸ್ವರ ಬಾಡಿತ್ತು, ಕಾತರದಿಂದ ತುಂಬಿತ್ತು.

"ನನಗೆ ನಿದ್ದೆ ಬಂದಿರಲಿಲ್ಲ," ಎಂದು ಆಕೆ ಉತ್ತರ ಕೊಟ್ಟು, ಅವರನ್ನೆ ನಿರೀಕ್ಷಣೆಯ ದೃಷ್ಟಿಯಿಂದ ನೋಡಿದಳು.

ಸಮೋಯ್‌ಲೊವ್‌ನ ಜತೆಯಲ್ಲಿ ಬಂದಿದ್ದವನು ಗಟ್ಟಿಯಾಗಿ ಉಸಿರುಬಿಡುತ್ತ, ಟೋಪಿಯನ್ನು ತೆಗೆದು, ತನ್ನ ಮೋಟುಗೈಯನ್ನು ಹಸ್ತಲಾಘವಕ್ಕೆಂದು ಮುಂದೆ ಚಾಚಿದ. ಹಳೆಯ ಗೆಳೆಯನಂತೆ ಅವನೆಂದನು:

"ನಮಸ್ಕಾರ, ತಾಯಿ! ನನ್ನ ನೆನಪಿಲ್ವೆ?"

"ಓ ನೀವೇ! ಯೆಗೋರ್ ಇವಾನೊವಿಚ್ ಅಲ್ವೇ?" ಎಂದು ವ್ಲಾಸೊವ ಉದ್ಗರಿಸಿದಳು. ಏನೋ ಕಾರಣಕ್ಕಾಗಿ ಆಕೆಗೆ ಒಮ್ಮೆಲೆ ಸಂತೋಷವಾಯಿತು.

"ಹೌದು, ಅದೇ ಆಸಾಮಿ!" ಎಂದು ಆತ ತನ್ನ ನೀಳವಾದ ಕೇಶರಾಶಿಯಿದ್ದ ದೊಡ್ಡ ತಲೆಯನ್ನು ಬಾಗಿಸುತ್ತ ಉತ್ತರವಿತ್ತ. ಆತನ ಮುಖದ ಮೇಲೆ ಮುಗುಳು ನಗೆಯಿತ್ತು. ಅವನ ಕಿರಿಯ ಬೂದುಗಣ್ಣುಗಳು ದಯಾಪೂರಿತವಾಗಿ ತಾಯಿಯತ್ತ ನೋಡುತ್ತಿದ್ದುವು. ಆತನೊಂದು ದೊಡ್ಡ ಸಮೊವಾರ್‌ನಂತಿದ್ದ. ಗುಂಡಗೆ ಗಿಡ್ಡನಾಗಿದ್ದ; ದಪ್ಪದ ಕೊರಳು, ಮೋಟು ತೋಳುಗಳು. ಆತನ ಮುಖವು ಹೊಳೆಯುತ್ತಿತ್ತು. ಉಸಿರಾಡುವುದು ಗಟ್ಟಿಯಾಗಿ ಕೇಳಿಸುತ್ತಿತ್ತು. ಆತನ ಎದೆಯಲ್ಲಿ, ಒಳಗಡೆ ಆಳದಲ್ಲಿ, ರಟರಟನೆ ಗಸಗಸನೆ ಸದ್ದಾಗುತ್ತಿತ್ತು.

"ಬೇರೆ ಕೊಠಡಿಗೆ ಹೋಗಿ ಇರಿ. ಬಟ್ಟೆ ಹಾಕಿಕೊಂಡು ಬರ್‍ತೀನಿ," ಎಂದಳು ತಾಯಿ.

ತನ್ನ ಹುಬ್ಬಿನ ಕೆಳಗಿಂದ ಆಕೆಯತ್ತ ದೃಷ್ಟಿ ಬೀರುತ್ತ ಕಾತರದಿಂದಲೇ ಸಮೋಯ್‌ಲೊವ್ ಹೇಳಿದ:

"ನಿಮ್ಮಲ್ಲಿ ನಮಗೆ ಸ್ವಲ್ಪ ಕೆಲಸವಿದೆ."

ಯೆಗೋರ್ ಇವಾನೊವಿಚ್ ಇನ್ನೊಂದು ಕೊಠಡಿಗೆ ಹೋಗಿ ಅಲ್ಲಿಂದಲೇ ಮಾತಾಡತೊಡಗಿದ:

"ನಿಕೊಲಾಯ್ ಇವಾನೊವಿಚ್, ನಿಮಗೆ ಪರಿಚಯವಿರಬೇಕಲ್ಲ? ಆತ ಈ ಬೆಳಿಗ್ಗೆ ಜೈಲಿನಿಂದ ಬಂದ...."

"ಆತ ಜೈಲಲ್ಲಿದ್ದುದೇ ನನಗೆ ಗೊತ್ತಿರಲಿಲ್ಲ," ಎಂದು ತಾಯಿ ನಡುವೆ ಬಾಯಿ ಹಾಕಿದಳು.

"ಎರಡು ತಿಂಗಳು ಹನ್ನೊಂದು ದಿವಸ ಅವನು ಅಲ್ಲಿದ್ದ. ಅಲ್ಲಿ ಹೊಹೋಲ್‌ನನ್ನು ಕಂಡಿದ್ದ. ಹೊಹೋಲ್ ನಿಮಗೆ ನಮಸ್ಕಾರ ತಿಳಿಸಿದ್ದಾನೆ. ಪಾವೆಲ್ ಕೂಡಾ. ನೀವು ಚಿಂತೆ ಮಾಡಬಾರದೂಂತ ಪಾವೆಲ್ ಹೇಳಿದ್ದಾನೆ. ತಾನು ಆರಿಸಿಕೊಂಡಿರೋ ಹಾದೀನ ಹಿಡಿದವರಿಗೆಲ್ಲ ಆಗಿಂದಾಗ್ಗೆ ಜೈಲು ವಾಸದ ರಜೆಯ ಸುಖ ದೊರೆಯೋದು ಖಂಡಿತ, ನಮ್ಮ ಮಾಲಿಕರ ಸೌಜನ್ಯದಿಂದ ಅಂಥ ರಜಾ ಭದ್ರವಾಗಿದೆ – ಎಂತಲೂ ನಿಮಗೆ ಹೇಳಬೇಕು ಅಂದಿದ್ದಾನೆ. ಅದಿರಲಿ, ಇನ್ನು ನಾವು ಬಂದಿರೋ ಕೆಲಸ ಹೇಳ್ತೀನಿ, ತಾಯಿ. ನಿನ್ನೆ ಎಷ್ಟು ಜನರನ್ನು ಹಿಡಕೊಂಡು ಹೋದರು ಗೊತ್ತೆ?"

"ಇಲ್ಲ. ಪಾವೆಲ್ ಅಲ್ಲದೆ ಬೇರೆಯವರನ್ನೂ ಬಂಧಿಸಿದ್ದಾರೆಯೆ?" ಎಂದು ತವಕದಿಂದ ತಾಯಿ ಕೇಳಿದಳು.

ಯೆಗೋರ್ ಇವಾನೊವಿಚ್ ಶಾಂತನಾಗಿ ಹೇಳಿದ:

"ಆತ ನಲ್ವತ್ತೊಂಭತ್ತನೆಯವನು. ಆಡಳಿತದವರು ಇನ್ನೂ ಒಂದು ಹನ್ನೆರಡು ಜನಾನ ಬಂಧಿಸೋ ಹಾಗೆ ಮಾಡಬಹುದು. ಉದಾಹರಣೆಗೆ ಹೇಳೋದಾದರೆ ಈ ಮಹಾಶಯನ್ನ."

"ಹೌದು, ನನ್ನನ್ನೂ," ಎಂದು ಮ್ಲಾನ ಮುಖದಿಂದ ಸಮೋಯ್‌ಲೊವ್ ಹೇಳಿದ.

ಅದೇಕೋ ಏನೋ, ಉಸಿರಾಟ ಹೆಚ್ಚು ಸುಲಭವಾದಂತೆ ಅನಿಸಿತು ವ್ಲಾಸೊವಳಿಗೆ.

"ಏನೇ ಆಗಲಿ, ಅವನು ಒಬ್ಬಂಟಿಗ ಅಲ್ಲವಲ್ಲ," ಎಂಬ ಯೋಚನೆಯು ಆಕೆಯ ಮೆದುಳಿನಲ್ಲಿ ಹಾದು ಹೋಯಿತು.

ಬಟ್ಟೆಯನ್ನು ಉಟ್ಟು, ಹರ್ಷದ ಮುಗುಳ್ನಗೆ ಬೀರುತ್ತ, ಆಕೆ ಅವರಿಬ್ಬರ ಬಳಿಗೆ ಬಂದಳು.

"ಅಷ್ಟೊಂದು ಜನರನ್ನು ಕರಕೊಂಡು ಹೋದರು ಅಂದ ಮೇಲೆ ಬಹಳ ದಿವಸ ಅಲ್ಲಿ ಇಟ್ಟುಕೊಳ್ಳಲಾರರು."

ಯೆಗೋರ್ ಇವಾನೊವಿಚ್ ಹೇಳಿದ:

"ಸರಿ ಹೇಳಿದೆ! ಹೇಗಾದರೂ ಮಾಡಿ ಇನ್ನೂ ಒಂದಿಷ್ಟು ಮುಖಭಂಗ ಮಾಡಿದೆವೆಂದರೆ, ಅವರು ಬಾಲ ಮುರಿದುಕೊಂಡು ಹಿಮ್ಮೆಟ್ತಾರೆ. ಇರೋ ವಿಷಯ ಇದು: ನಾವು ಕಾರಖಾನೇಲಿ ಕರಪತ್ರ ಹಂಚೋದನ್ನು ನಿಲ್ಲಿಸಿಬಿಟ್ಟರೆ, ಪೋಲೀಸರು ಈ ವಿಷಾದ ಪರಿಸ್ಥಿತೀನ, ಪಾವೆಲ್ ಮತ್ತು ಜೈಲಲ್ಲಿರೋ ಒಳ್ಳೊಳ್ಳೆ ಸಂಗಾತಿಗಳ ವಿರುದ್ಧ ಉಪಯೋಗಿಸ್ತಾರೆ."

"ಏನು ಹಾಗೆಂದರೆ?" ಎಂದು ತಾಯಿ ಗಾಬರಿಯಿಂದ ಕೇಳಿದಳು.

ಯೆಗೋರ್ ಇವಾನೊವಿಚ್ ಶಾಂತವಾಗಿ ವಿವರಿಸಿದ:

"ಹಾಗೆಂದರೆ ಇಷ್ಟೇ. ತೀರ ಸುಲಭ. ಒಮ್ಮೊಮ್ಮೆ ಪೋಲೀಸರು ಕೂಡಾ ಬುದ್ಧಿ ಉಪಯೋಗಿಸ್ತಾರೆ. ನೀವೇ ಎಣಿಕೆ ಹಾಕಿ ನೋಡಿ. ಪಾವೆಲ್ ಹೊರಗಿದ್ದಾಗ ಪತ್ರಿಕೆಗಳೂ ಕರಪತ್ರಗಳೂ ಹಬ್ಬಿದವು. ಪಾವೆಲ್ ಸೆರೆಮನೆಗೆ ಹೋದ – ಆ ಮೇಲೆ ಪತ್ರಿಕೆಗಳೂ ಇಲ್ಲ, ಕರಪತ್ರಗಳೂ ಇಲ್ಲ. ಎಂದ ಮೇಲೆ! ಪತ್ರಿಕೆಗಳನ್ನೂ ಕರಪತ್ರಗಳನ್ನೂ ಬಿತ್ತುತ್ತಿದ್ದವನು ಅವನೇ ಅಲ್ವೆ? ಆಮೇಲೆ ಅವರು ಪ್ರತಿಯೊಬ್ಬನನ್ನೂ ನುಂಗೋಕೆ ಶುರು ಮಾಡ್ತಾರೆ."

"ನನಗೆ ಅರ್ಥವಾಯ್ತಪ್ಪ," ಎಂದಳು ತಾಯಿ ದುಃಖದಿಂದ. "ಓ ದೇವರೇ! ಇನ್ನೇನಪ್ಪ ಗತಿ? ಏನು ಮಾಡೋಣ ಹಾಗಾದರೆ?"

ಅಡುಗೆ ಮನೆಯಲ್ಲಿ ಸಮೋಯ್‌ಲೊವ್‌ನ ಸ್ವರ ಕೇಳಿಸಿತು:

"ಹೆಚ್ಚು ಕಡಮೆ ಎಲ್ಲರನ್ನೂ ಹಿಡಿದು ಹಾಕಿದ್ದಾರೆ, ಅವರ ಮನೆ ಹಾಳಾಗ! ಚಳವಳಿಯ ಧ್ಯೇಯಕ್ಕೋಸ್ಕರ ಮಾತ್ರವಲ್ಲ, ನಮ್ಮ ಸಂಗಾತಿಗಳನ್ನು ಉಳಿಸೋದಕ್ಕಾಗಿಯೂ ನಾವು ಕೆಲಸ ಮುಂದ್ವರಿಸ್ಕೊಂಡು ಹೋಗಲೇಬೇಕು."

ಕೊಂಚ ನಕ್ಕು ಯೆಗೋರ್ ಹೇಳಿದ:

"ಆದರೆ ಕೆಲಸ ಮಾಡಲು ಯಾರೂ ಉಳಿದಿಲ್ಲ. ಒಳ್ಳೊಳ್ಳೇ ಸಾಹಿತ್ಯ ಇದೆ ನಮ್ಮಲ್ಲಿ.... ಹೇರಳವಾಗಿ. ಎಲ್ಲಾ ನನ್ನದೇ ಕೈವಾಡ. ಆದರೆ ಅದನ್ನೆಲ್ಲಾ ಕಾರಖಾನೆಯೊಳಗೆ ತಗೊಂಡು ಹೋಗೋ ಉಪಾಯ ಯಾವುದು? – ಇದೊಂದು ಬಿಡಿಸಲಾಗದ ಒಗಟು."

"ಅವರೀಗ ಹೆಬ್ಬಾಗಿಲಿನ ಹತ್ತಿರ ಪ್ರತಿಯೊಬ್ಬರನ್ನೂ ಝಡ್ತಿ ಮಾಡೋಕೆ ಶುರು ಮಾಡಿದ್ದಾರೆ," ಎಂದ ಸಮೋಯ್‌ಲೊವ್.

ತನ್ನಿಂದ ಏನನ್ನೋ ಅವರು ಅಪೇಕ್ಷಿಸುತ್ತಿದ್ದಾರೆಂದು ತಾಯಿ ಸೂಕ್ಷ್ಮವಾಗಿ ಗ್ರಹಿಸಿಕೊಂಡಳು. ಆಕೆ ಅವಸರವಾಗಿ ಹೇಳಿದಳು:

"ಹಾಗಾದರೆ ಏನು ಮಾಡೋಣ ಅಂತೀರಿ?"

ಸಮೋಯ್‌ಲೊವ್ ಬಾಗಿಲ ಬಳಿ ಬಂದನು.

"ಪೆಲಗೇಯ ನೀಲೊವ್ನ! ನಿಮಗೆ ಚಿಲ್ಲರೆ ವ್ಯಾಪಾರದ ಕೊರ್ಸುನೋವ ಪರಿಚಯ ಅಲ್ಲವೆ?"

"ಹೌದು. ಅದರಿಂದೇನು?"

"ಆಕೆಯ ಕೂಡ ಮಾತಾಡಿ ನೋಡು. ಬಹುಶಃ ಆಕೆ ಅವುಗಳನ್ನು ಒಳಕ್ಕೆ ತಗೊಂಡು ಹೋಗಬಹುದು."

ತಾಯಿ ಕೈಯಾಡಿಸುತ್ತ ತನ್ನ ಅಸಮ್ಮತಿ ಸೂಚಿಸಿದಳು.

"ಬೇಡ ಬೇಡ. ಅವಳು ಹರಟೆ ಮಲ್ಲಿ! ನನ್ನ ಮೂಲಕ ಅದು ಆಕೆಗೆ ಸಿಗ್ತೂಂತ, ಈ ಮನೆಯಿಂದ ಬಂತೂಂತ, ಅವರಿಗೆ ಗೊತ್ತಾದೊಡನೆ – ಬೇಡವಪ್ಪಾ, ಬೇಡ!"

ಹಾಗೆ ಹೇಳಿ, ಒಮ್ಮೆಲೆ ಸ್ಫೂರ್ತಿಗೊಂಡು ಆಕೆಯೆಂದಳು:

"ಅವನ್ನೆಲ್ಲ ನನಗೆ ಕೊಡಿ – ನನ್ನ ಕೈಗೆ! ನಾನು ಅದರ ವ್ಯವಸ್ಥೆ ಮಾಡ್ತೀನಿ. ಏನಾದರೂ ದಾರಿ ಹುಡುಕ್ತೀನಿ. ನನ್ನನ್ನು ಸಹಾಯಕಳಾಗಿ ತಗೋ೦ ಅಂತ ಮರೀಯಳನ್ನ ಕೇಳ್ತೀನೀ. ನಾನು ಹೇಗಾದರೂ ನನ್ನ ರೊಟ್ಟಿ ಸಂಪಾದಿಸ್ಕೋಬೇಕಾಗಿದೆಯಲ್ಲ. ಆದ್ದರಿಂದ ನಾನೇ ಕಾರಖಾನೆಯಲ್ಲಿ ಮಾರೋಕೆ ಮಧ್ಯಾಹ್ನದ ಊಟ ತಗೊಂಡು ಹೋಗ್ತೀನಿ. ಖಂಡಿತ ಎಲ್ಲ ಸರಿಯಾಗಿಯೇ ಮಾಡ್ತೀನಿ."

ತಾಯಿ ತನ್ನ ಕೈಗಳನ್ನು ಎದೆಗೊತ್ತಿಕೊಂಡು ಉದ್ವೇಗದಿಂದ ಮಾತನಾಡಿದಳು. ಯಾರ ಗಮನವನ್ನೂ ಸೆಳೆಯದೆ ಎಲ್ಲವನ್ನೂ ಸಮರ್ಪಕವಾಗಿ ಮಾಡುವೆನೆಂದು

ಅವಸರವಸರವಾಗಿ ಆಶ್ವಾಸನೆಯಿತ್ತಳು. ಕೊನೆಯಲ್ಲಿ ಆನಂದೋತ್ಸಾಹದಿಂದ ಆಕೆ ಅಂದಳು:

"ಪಾವೆಲ್‌ನ ಕೈಗಳು ಜೈಲು ಗೋಡೆಯನ್ನು ದಾಟಿ ಹೊರಕ್ಕೆ ಚಾಚೋದನ್ನ ಅವರು ನೋಡಲಿ. ನೋಡಲಿ ಅವರು!"

ಮೂವರಿಗೂ ತುಂಬ ಉತ್ಸಾಹವೆನಿಸಿತು. ಯೆಗೋರ್ ತನ್ನ ಅಂಗೈಗಳನ್ನು ಉಜ್ಜಿಕೊಳ್ಳುತ್ತ ಮುಗುಳ್ನಗುತ್ತ ಹೇಳಿದ:

"ಭೇಷ್, ತಾಯಿ! ಇದು ಎಷ್ಟೊಂದು ಭರ್ಜರಿಯಾದ ಏರ್ಪಾಡು ಎಷ್ಟೊಂದು ಅಗಾಧವಾದ ವಿಷಯ! ಅನ್ನೋದು ಕೂಡ ನಿಮಗೆ ತಿಳೀದು!"

ಸಮೋಯ್‌ಲೊವ್ ತಾನೂ ಕೈಗಳನ್ನು ತೀಡಿಕೊಳ್ಳುತ್ತಾ, "ಇದು ಸಾಧ್ಯ ವಾಯ್ತೆಂದರೆ, ಹಾಸಿಗೆ ಹಾಸಿ ಮಲಗೋಕೆ ಹೋದ ಹಾಗೆ ನಾನು ಜೈಲಿಗೆ ಹೊರ ಟ್ಹೋಗ್ತೀನಿ," ಎಂದನು.

ಯೆಗೋರ್‌ನ ಗಂಟಲುಕಟ್ಟಿದ ಧ್ವನಿ ಹೊರಟಿತು:

"ಅಮ್ಮಾ! ನೀವು ಪರಮ ಸುಂದರಿ!"

ತಾಯಿ ಮುಗುಳ್ನಕ್ಕಳು. ಕಾರಖಾನೆಯಲ್ಲಿ ಕರಪತ್ರಗಳು ಕ್ರಮವಾಗಿ ಬರು ತ್ತಿದ್ದರೆ, ಅವುಗಳಿಗಾಗಿ, ಆಡಳಿತದವರು ತನ್ನ ಮಗನ ಮೇಲೆ ದೋಷಾರೋಪಣೆ ಮಾಡುವಂತಿಲ್ಲವೆಂಬುದು ಆಕೆಗೆ ಸ್ಪಷ್ಟವಾಗಿತ್ತು. ಈ ಕಾರ್ಯಭಾರವನ್ನು ನಿರ್ವಹಿ ಸಲು ತಾನು ಶಕ್ತಳೆಂದು ಆಕೆ ಭಾವಿಸಿದಳು. ಆನಂದದಿಂದ ಆಕೆಯ ಮೈ ಪುಲಕಗೊಂಡಿತು.

"ನೀವು ಪಾವೆಲ್‌ನ ಜೈಲಲ್ಲಿ ಭೇಟಿ ಮಾಡಿದಾಗ, ಅವನಿಗೆ ಎಷ್ಟೊಳ್ಳೆಯ ತಾಯಿ ಇದಾಳೇಂತ ತಿಳಿಸಮ್ಮ," ಎಂದ ಯೆಗೋರ್.

"ಮೊದಲು ನಾನೇ ಆತನನ್ನ ನೋಡ್ತೀನಲ್ಲ," ಎಂದು ಸಮೋಯ್‌ಲೊವ್ ನಕ್ಕನು.

ತಾಯಿಯೆಂದಳು:

"ಮಾಡಬೇಕಾದ್ದನ್ನೆಲ್ಲ ಮಾಡ್ತೀನೀಂತ ಅವನಿಗೆ ಹೇಳಪ್ಪ. ಅವನಿಗದು ಗೊತ್ತಾ ಗಲಿ."

"ಸಮೋಯ್‌ಲೊವ್‌ನ್ನು ಅವರು ಬಂಧಿಸದೇ ಇದ್ದರೆ?" ಎಂದು ಯೆಗೋರ್ ಕೇಳಿದನು.

"ಹಾಗಾದರೆ ಏನ್ಮಾಡೋಕಾಗುತ್ತೆ? ತಿಳಿಸೋ ಹಾಗಿಲ್ಲ...." ಎಂದಳು ತಾಯಿ.

ಆಗ ಇಬ್ಬರೂ ಗೊಳ್ಳನೆ ನಕ್ಕರು. ತಾನು ಏನು ಮಾತಾಡಿದೆನೆಂದು ಯೋಚಿಸಿ ಕೊಂಡಾಗ, ಆಕೆಯೂ ಮೆಲ್ಲನೆ ಸಂಕೋಚದಿಂದ, ಸ್ವಲ್ಪ ವಕ್ರವಾಗಿ, ನಗಲಾರಂಭಿ ಸಿದಳು.

ತನ್ನ ದೃಷ್ಟಿಯನ್ನು ತಗ್ಗಿಸುತ್ತಾ ಆಕೆ ಹೇಳಿದಳು:

"ಇತರರ ತೊಂದರೆಗಳನ್ನು ಸಹ ತನ್ನದೇಂತ ಭಾವಿಸಿ ನೋಡೋದು ಕಷ್ಟ ಪಪ್ಪ."

"ಅದು ಸಹಜವೇ," ಎಂದು ಯೆಗೋರ್ ಉದ್ಗಾರವೆತ್ತಿದ. "ಪಾವೆಲ್‌ನ ವಿಷಯ ನೀವು ಸುಮ್ಮನೆ ಚಿಂತಿಸಿ ಮನಸ್ಸು ಕಸಿವಿಸಿ ಮಾಡಿಕೋಬೇಡಿ. ಅವನು ಇನ್ನೂ ಬಲಶಾಲಿಯಾಗಿ ಜೈಲಿಂದ ಹೊರಗೆ ಬರ್ತಾನೆ. ಅಲ್ಲಿ ಒಳ್ಳೇ ವಿಶ್ರಾಂತಿ ದೊರೆಯುತ್ತೆ. ಜ್ಞಾನಾರ್ಜನೆಗೆ ಅವಕಾಶ ಸಿಗುತ್ತೆ. ಹೊರಗಿದ್ದಾಗ ನಮ್ಮಂಥವರಿಗೆ ಇವೆರಡಕ್ಕೂ ಸಮಯವೇ ಇಲ್ಲ. ನಾನು ಮೂರು ಸಲ ಒಳಹೋಗಿ ಬಂದಿದ್ದೇನೆ. ಅದೇನೂ ಅಂಥ ಸಂತೋಷದ ಕೆಲಸವಲ್ಲವಾದರೂ ಮೂರು ಸಲವೂ ಮೆದುಳಿಗೂ ಮನಸ್ಸಿಗೂ ಅದರಿಂದ ತುಂಬ ಲಾಭವಾಯ್ತು."

ಆತನ ಸರಳವಾದ ಮುಖದ ಕಡೆಗೆ ತನ್ನ ಸ್ನೇಹಮಯ ದೃಷ್ಟಿಯನ್ನು ಬೀರುತ್ತ ತಾಯಿ, "ನಿಮಗೆ ಉಸಿರಾಟ ಕಷ್ಟವಾಗ್ತಿದೆ, ಅಲ್ಲವಾ?" ಎಂದು ಕೇಳಿದಳು.

ಆತ ತನ್ನೊಂದು ಬೆರಳನ್ನೆತ್ತುತ್ತಾ ಉತ್ತರಿಸಿದ:

"ಅದಕ್ಕೊಂದು ವಿಶೇಷ ಕಾರಣವಿದೆ. ಅದಿರಲಿ. ಹಾಗಾದರೆ ಎಲ್ಲಾ ನಿರ್ಧಾರವಾಯ್ತೂಂತ ತಿಳೀಲಾ, ತಾಯಿ? ನಾಳೆ ನಾವು ಆ ಸಾಮಾನು ತಂದು ನಿಮಗೆ ತಲುಪಿಸ್ತೀವಿ. ಆಮೇಲೆ ಇನ್ನೊಮ್ಮೆ, ಶತಮಾನಗಳ ಕತ್ತಲೇನ ಪುಡಿಗೂಡಿಸ್ತಾ, ಚಕ್ರ ತಿರುಗೋಕೆ ಶುರು. ವಾಕ್‌ಸ್ವಾತಂತ್ರ್ಯಕ್ಕೆ ಜಯವಾಗಲಿ! ಮಾತೃ ಹೃದಯ ಚಿರಾಯುವಾಗಲಿ! ಇನ್ನು ಹೋಗಿ ಬರ್ತೀನಮ್ಮ. ನಮಸ್ಕಾರ!"

ತಾಯಿಯ ಕೈಯನ್ನು ಕುಲುಕುತ್ತ ಸಮೋಯ್‌ಲೊವ್ ಹೇಳಿದ:

"ನಮಸ್ಕಾರ! ನನ್ನ ತಾಯಿಗಾದರೆ ಇಂಥ ವಿಷಯ ಸೂಚಿಸೋಕೆ ಕೂಡ ಸಾಧ್ಯವಿಲ್ಲ."

"ಅವರೆಲ್ಲರೂ ಒಂದು ದಿನ ತಿಳಕೋತಾರೆ," ಎಂದು ವ್ಲಾಸೊವ, ಸಮೋಯ್‌ಲೊವ್‌ನ್ನು ಸಂತೋಷಗೊಳಿಸಲು, ಹೇಳಿದಳು.

ಅವರು ಹೊರಟುಹೋದ ತರುವಾಯ ಆಕೆ ಬಾಗಿಲನ್ನು ಮುಚ್ಚಿ ಅಗಳಿ ಹಾಕಿದಳು. ಕೊಠಡಿಯ ಮಧ್ಯದಲ್ಲಿ ಮೊಣಕಾಲೂರಿ ಕುಳಿತಳು. ಅವಳ ಪ್ರಾರ್ಥನೆ ಮಳೆಯ ಸದ್ದಿನೊಡನೆ ಬೆರೆಯಿತು. ಶಬ್ದಗಳ ಉಚ್ಚಾರವಿಲ್ಲದೆಯೇ ಆಕೆ ಪ್ರಾರ್ಥಿಸಿದಳು. ತನಗೆ ಪಾವೆಲ್ ಪರಿಚಯ ಮಾಡಿಕೊಟ್ಟಿದ್ದ ಜನರ ಹಿತಚಿಂತನೆಯ ತೀವ್ರ ಕಾತರವೇ ಪ್ರಾರ್ಥನೆಯ ಪ್ರಧಾನ ಭಾವವಾಗಿತ್ತು. ಆ ಜನರು ವಿಚಿತ್ರ ರೀತಿಯಲ್ಲಿ ಒಬ್ಬರಿಗೊಬ್ಬರು ಆಪ್ತರಾಗಿದ್ದರು. ಅದೇ ಸಮಯ ಅವರು ಏಕಾಂಗಿಗಳಾಗಿದ್ದರು. ಆ ಜನರೆಲ್ಲ ಈಗ, ದೇವ ಪ್ರತಿಮೆಗಳು ಹಾಗೂ ತನ್ನ ನಡುವೆ ಚಲಿಸುತ್ತಿದ್ದಂತೆ ಆಕೆಗೆ ಅನಿಸುತ್ತಿತ್ತು.

ಮರುದಿನ ಮುಂಜಾನೆ ಬೇಗನೆ ಆಕೆ ಮರೀಯ ಕೊರ್ಸುನೋವಳ ಬಳಿಗೆ ಹೋದಳು.

ಎಂದಿನಂತೆ ಜಿಡ್ಡುಜಿಡ್ಡಾಗಿಯೇ ಗದ್ದಲ ಮಾಡುತ್ತಿದ್ದ ಆ ಚಿಲ್ಲರೆ ವ್ಯಾಪಾರಿಯು, ಸಹಾನುಭೂತಿಯಿಂದ ತಾಯಿಯನ್ನು ಸ್ವಾಗತಿಸಿದಳು.

ತನ್ನ ಕೊಳಕು ಕೈಯಿಂದ ತಾಯಿಯ ಭುಜವನ್ನು ತಟ್ಟುತ್ತ ಆಕೆ ಕೇಳಿದಳು:

"ಮನಸ್ಸಿಗೆ ದುಗುಡವಾಗಿದೆಯೇನಮ್ಮ?"

ಹಾಗೆಯೇ ಮುಂದುವರಿಸಿದಳಾಕೆ:

"ಕುಗ್ಗಬೇಡ! ಅವರು ಅವನನ್ನ ಹಿಡಿದು ಕರಕೊಂಡು ಹೋದರು – ಅಲ್ಲ? ಆಗಲಿ, ಆಗಲಿ. ನಾಚಿಕೆ ಪಡಬೇಕಾದ ವಿಷಯವೇನೂ ಅಲ್ಲ! ಮೊದಲೆಲ್ಲ, ಕಳ್ಳತನ ಮಾಡಿದರೆ ಜನರನ್ನು ಜೈಲಿನಲ್ಲಿಡ್ತಾ ಇದ್ರು. ಆದರೆ ಈಗಿನ ಕಾಲದಲ್ಲಿ ನ್ಯಾಯಕ್ಕಾಗಿ ಪಟ್ಟು ಹಿಡಿದು ನಿಂತರೆ ಜೈಲು! ಬಹುಶಃ ಹೇಳಲೇಬೇಕಾಗಿದ್ದ ಒಂದೆರಡು ವಿಷಯ ಪಾವೆಲ್ ಹೇಳದೇ ಇದ್ದಿರಬಹುದು. ಆದರೆ ಆತ ಮಾಡಿದ್ದು ಎಲ್ಲರಿಗೋಸ್ಕರವಾಗಿ. ಅದೆಲ್ಲರಿಗೂ ಗೊತ್ತಿದೆ. ಆದ್ದರಿಂದ ನೀನೇನೂ ಚಿಂತಿಸಬೇಕಾದ್ದಿಲ್ಲ. ಜನರೆಲ್ಲ ಬಾಯಿ ಬಿಟ್ಟು ಒಪ್ಪಿಕೊಳ್ಳದೇ ಇದ್ದರೂ, ಅವರಿಗೆಲ್ಲ ಗೊತ್ತಿದೆ – ಇದಕ್ಕೆಲ್ಲಾ ಯಾರು ಕಾರಣರು ಅನ್ನೋ ವಿಷಯ. ನಿನ್ನನ್ನು ನೋಡೋಕೆ ನಾನೇ ಬರಬೇಕೂಂತಿದ್ದೆ. ಆದರೆ ವಿರಾಮವೇ ಸಿಗಲಿಲ್ಲ. ದಿನವೆಲ್ಲ ಅಡಿಗೆ ಮಾಡೋದು, ಮಾರೋದು. ಆದರೂ ಕೂಡ ನಾನು ಸಾಯುವ ವೇಳೆಗೆ ಭಿಕಾರಿಯಾಗಿಯೇ ಸಾಯ್ತೀನಿ – ನೀನೇ ನೋಡು ವೆಯಂತೆ! ಈ ಪ್ರೇಮಿಗಳು ನನ್ನನ್ನೇ ತಿಂದು ಹಾಕ್ತಾರೆ – ತೀರ ಅತಿರೇಕ! ನನ್ನನ್ನು ಇಲ್ಲಿ ಚಿವುಟ್ತಾರೆ, ಅಲ್ಲಿ ಚಿವುಟ್ತಾರೆ – ಜಿರಳೆಗಳ ಗುಂಪಿನ ಹಾಗೆ! ಒಂದು ಹತ್ತು ರೂಬಲ್ ನಾನು ಹಾಗೂ ಹೀಗೂ ಕೂಡಿಸೋ ವೇಳೆಗೆ ಸರಿಯಾಗಿ ಯಾವನಾದ ರೊಬ್ಬ ಹಾದರಗಿತ್ತಿಯ ಮಗ ಬಂದು ಎಲ್ಲ ನುಂಗ್ಹಾಕ್ತಾನೆ. ಹೆಂಗಸಾಗಿ ಹುಟ್ಟಬಾರ ದಮ್ಮ! ನಮ್ಮ ಕಡುವೈರಿ ಕೂಡಾ ಈ ಪ್ರಪಂಚದಲ್ಲಿ ಹೆಂಗಸಾಗಿ ಹುಟ್ಟಬಾರದು! ಒಬ್ಬಳೇ ಇದ್ದರೆ 'ಅಯ್ಯೋ' ಎನಿಸುತ್ತೆ. ಯಾರನ್ನಾದರೂ ಕಟ್ಟಿಕೊಂಡರೆ– ಮುಗೀತು ಅಲ್ಲಿಗೆ!"

ಅವಳ ಹರಟೆಯನ್ನು ತಡೆಯುತ್ತಾ ವೆಲಗೇಯ ಹೇಳಿದಳು:

"ನನ್ನನ್ನ ಸಹಾಯಕಳಾಗಿ ತಗೋ ಅಂತ ಕೇಳೋಕೆ ಬಂದೆ."

"ಅದೇನಂದೆ?" ಎಂದು ಮರೀಯ ಕೇಳಿದಳು.

ವೆಲಗೇಯ ಸಂಪಾದನೆಗೆ ತನಗೆ ಬೇರೆ ಹಾದಿ ಇಲ್ಲವೆಂದು ವಿವರಿಸಿದ ಮೇಲೆ, ಸಮ್ಮತಿಸೂಚಕವಾಗಿ ಮರೀಯ ತಲೆದೂಗಿದಳು.

"ಓಹೋ! ಅದಕ್ಕೇನು? ಖಂಡಿತ ಆಗಲಿ. ನೀನು ಹಿಂದೆ ನನ್ನ ಗಂಡನ ಹೊಡೆತ ದಿಂದ ನನ್ನನ್ನ ಕಾಪಾಡಿ ಬಚ್ಚಿಡ್ತಾ ಇದ್ದದ್ದು ನೆನಪಿದೆಯಾ? ಈಗ ನಾನು ಹಸಿವೆಯ ಕಾಟದಿಂದ ನಿನ್ನನ್ನ ಕಾಪಾಡ್ತೀನಿ. ನಿನ್ನ ಮಗ ಎಲ್ಲರ ಹಿತಕ್ಕಾಗಿ ದುಡಿದು ಜೈಲಿಗೆ ಹೋಗಿದಾನೆ. ಆದ್ದರಿಂದ ಎಲ್ಲರೂ ನಿನಗೆ ಸಹಾಯ ಮಾಡಲೇಬೇಕು. ಅವ ನೊಳ್ಳೆಯವನು. ಪ್ರತಿಯೊಬ್ಬರೂ ಹಾಗೇ ಅಂತಾರೆ. ಅವರೆಲ್ಲರೂ ಅವನಿಗಾಗಿ ಮರುಗ್ತಾರೆ. ಈಗೆಲ್ಲಾ ಈ ರೀತಿ ದಸ್ತಗಿರಿ ಮಾಡಿದ್ದಾರಲ್ಲಾ, ಇದರಿಂದ ಕಾರಖಾನೆ

ಮಾಲೀಕರಿಗೆ ಖಂಡಿತಾ ಒಳ್ಳೇದಾಗೋದಿಲ್ಲ. ನನ್ನ ಮಾತು ಸತ್ಯ. ಕಾರಖಾನೇಲಿ ಏನಾಗ್ತಿದೆ ಸ್ವಲ್ಪ ನೋಡು. ಚೆನ್ನಾಗಿಲ್ಲ ವ್ಯವಹಾರ, ಆದಾಯಕ್ಕೇ ಏಟು. ಒಬ್ಬ ಮನುಷ್ಯನ ಹಿಮ್ಮಡಿಯ ಮೇಲೆ ಹೊಡೆದರೆ, ಅವನು ಓಡೋದನ್ನೆ ನಿಲ್ಲಿಸ್ತಾನೇಂತ ಮಾಲಿಕರ ಯೋಚನೆ. ಆದರೆ ಆಗೋದೇನು? ಹನ್ನೆರಡು ಜನಕ್ಕೆ ಹೊಡೆದರೆ, ನೂರು ಜನರು ಸಿಟ್ಟಿಗೇಳ್ತಾರೆ."

ಈ ಸಂಭಾಷಣೆಯ ಪರಿಣಾಮವಾಗಿ, ಮರುದಿನ ಮರೀಯ ಸಂತೇಪೇಟೆಗೆ ವ್ಯಾಪಾರಕ್ಕೆ ಹೋದಳು. ಅವಳ ಬದಲು ತಾಯಿ, ಮಧ್ಯಾಹ್ನದ ಹೊತ್ತು, ಎರಡು ಬುಟ್ಟಿ ಆಹಾರದೊಡನೆ ಕಾರಖಾನೆಯ ಬಳಿ ಕಾಣಿಸಿಕೊಂಡಳು.

## ೧೫

ಕೂಲಿಕಾರರು ಹೊಸ ವ್ಯಾಪಾರಿಯನ್ನು ತಕ್ಷಣ ಗುರುತಿಸಿದರು.

ಕೆಲವರು ಸಮ್ಮತಿಸೂಚಕವಾಗಿ ತಲೆಯಾಡಿಸುತ್ತಾ, "ವ್ಯಾಪಾರ ಶುರು ಮಾಡಿದ್ಯಾ, ಪೆಲಗೇಯ?" ಎಂದರು.

ಪಾವೆಲ್‌ನನ್ನು ಬೇಗನೇ ಬಿಟ್ಟುಬಿಡುತ್ತಾರೆ, ಎಂದು ಕೆಲವರು ಸಂತೈಸುವ ಆಶ್ವಾಸನೆಯ ಮಾತು ಹೇಳಿದರು. ಇತರರು ಮನಕರಗಿಸುವಂಥ ಸಹಾನುಭೂತಿಯ ಮಾತನ್ನಾಡಿದರು. ಬೇರೆ ಕೆಲವರು, ಡೈರೆಕ್ಟರನ್ನೂ ಪೋಲೀಸರನ್ನೂ ಕಟುವಾಗಿ ಶಪಿಸಿದರು. ಈ ಬೈಗುಳಗಳು ಆಕೆಯ ಹೃದಯದಲ್ಲೂ ಪ್ರತಿಧ್ವನಿಸಿದುವು. "ಹೀಗೆಯೇ ಆಗಬೇಕು" ಎಂಬ ದ್ವೇಷ ದೃಷ್ಟಿಯಿಂದ ಆಕೆಯನ್ನು ನೋಡಿದವರೂ ಇದ್ದರು. ಟೈಂಕೀಪರ್ ಇಸಾಯ್ ಗೊರ್ಬೋವ್ ಹಲ್ಲುಕಚ್ಚಿಕೊಂಡೇ ಗೊಣಗಿದ:

"ನಾನೇನಾದರೂ ಗವರ್ನರಾಗಿದ್ದರೆ ನಿನ್ನ ಮಗನ್ನ ಗಲ್ಲಿಗೇರಿಸ್ತಿದ್ದೆ! ಜನರನ್ನ ಅಡ್ಡಹಾದಿಗೆ ಎಳೆದಿದ್ದಕ್ಕೆ ತಕ್ಕ ಶಾಸ್ತಿ ಅವನಿಗೆ!"

ಇಂಥ ದುಷ್ಟ ಬೆದರಿಕೆ ಆಕೆಯ ನಾಭಿಯಲ್ಲಿ ನಡುಕ ಹುಟ್ಟಿಸಿತು. ಆಕೆ ಇಸಾಯಿಗೆ ಉತ್ತರಕೊಡಲಿಲ್ಲ. ಕಲೆಗಳಿಂದ ತುಂಬಿದ್ದ ಅವನ ಚಿಕ್ಕ ಮುಖವನ್ನು ಸುಮ್ಮನೆ ದಿಟ್ಟಿಸಿ ನೋಡಿ, ನಿಟ್ಟುಸಿರು ಬಿಟ್ಟು, ದೃಷ್ಟಿಯನ್ನು ತಗ್ಗಿಸಿದಳು.

ಕಾರಖಾನೆಯಲ್ಲಿ ನೆಮ್ಮದಿ ಇರಲಿಲ್ಲ. ಕೂಲಿಕಾರರು ಸಣ್ಣಸಣ್ಣ ಗುಂಪುಗಳಾಗಿ ಕೂಡಿಕೊಂಡು ತಮ್ಮೊಳಗೇ ಪಿಸುಗುಟ್ಟುತ್ತಿದ್ದರು. ಚಿಂತಾಕ್ರಾಂತರಾದ ಮೇಸ್ತ್ರಿಗಳು ಎಲ್ಲೆಲ್ಲೂ ಓಡಾಡುತ್ತಿದ್ದರು. ಶಪಿಸುವ ಮಾತುಗಳೂ ಕೇಳಿಸುತ್ತಿದ್ದುವು.

ಇಬ್ಬರು ಪೋಲೀಸರು ಆಕೆಯ ಎದುರಲ್ಲೇ ಸಮೋಯ್‌ಲೊವನ್ನು ಹಿಡಿದೊಯ್ದರು. ಒಂದು ಕೈಯನ್ನು ಷರಾಯಿಯ ಜೇಬಿನಲ್ಲಿಟ್ಟು, ಇನ್ನೊಂದರಿಂದ ತನ್ನ ಕೆಂಗೂದಲನ್ನು ಹಿಂದಕ್ಕೆ ತಳ್ಳುತ್ತ ಆತ ನಡೆದ.

ನೂರರಷ್ಟು ಕೆಲಸಗಾರರು, ಪೋಲೀಸರನ್ನು ಗಟ್ಟಿಯಾಗಿ ಶಪಿಸುತ್ತ ಲೇವಡಿಮಾಡುತ್ತಾ ಹಿಂದೆಯೇ ಸಾಗಿದರು.

"ರಜಾ ಸಿಕ್ತೂಂತ ವಿಹಾರಕ್ಕೆ ಹೊರಟ್ಯಾ, ಸಮೋಯ್‌ಲೊವ್ !" ಎಂದೊಬ್ಬ ಕೂಗಿದ.

ಇನ್ನೊಬ್ಬನೆಂದ:

"ಈಗೀಗ ನಮ್ಮವರಿಗೆ ತುಂಬ ಗೌರವ ಕೊಡ್ತಾರೆ. ನಾವು ತಿರುಗಾಡಿಕೊಂಡು ಬರೋಕೆ ಹೊರಟರೂ ಜತೇಲೇ ಅಂಗರಕ್ಷಕರಿರುತ್ತಾರೆ."

ಇದರ ಬೆನ್ನಲ್ಲೆ ಅಶ್ಲೀಲ ಮಾತು ಕೇಳಿಬಂತು.

ಎತ್ತರದ ಒಕ್ಕಣ್ಣ ಕೂಲಿಕಾರನೊಬ್ಬ ಕೂಗಿ ಹೇಳಿದ:

"ಈಗೀಗ ಕಳ್ಳರನ್ನ ಹಿಡಿದ್ರೆ ಪ್ರಯೋಜನವಿಲ್ಲಾಂತ ಕಾಣುತ್ತೆ. ಅದಕ್ಕೇ ಪ್ರಾಮಾಣಿಕ ಜನರನ್ನು ಹಿಡಿಯೋಕೆ ಶುರು ಮಾಡಿದ್ದಾರೆ!"

ಜನರ ಗುಂಪಿನಿಂದ ಇನ್ನೊಂದು ಸ್ವರ ಬಂತು.

"ರಾತ್ರೆ ಹೊತ್ತು ಹಿಡಕೊಂಡು ಹೋಗೋ ಸೌಜನ್ಯವಾದರೂ ಇದೆಯೆ? ಅದೂ ಇಲ್ಲ. ಹಗಲು ಹೊತ್ತಿನಲ್ಲೇ ಬರ್‍ತಾರೆ, ಹಾದರಕ್ಕೆ ಹುಟ್ಟಿದವರು."

ಪೋಲೀಸರು ಹುಬ್ಬು ಗಂಟಿಕ್ಕಿ ಬೇಗಬೇಗನೆ ನಡೆದರು. ಏನನ್ನೂ ಕಾಣದವರಂತೆ, ತಮ್ಮ ಮೇಲೆ ಅಂಟಿಸಲಾದ ವಿಶೇಷಣಗಳು ಕೇಳಿಸದವರಂತೆ, ನಟಿಸುತ್ತ ಅವರು ಸಾಗಿದರು.

ದೊಡ್ಡ ಕಬ್ಬಿಣದ ತಗಡೊಂದನ್ನು ಹಿಡಿದುಕೊಂಡು ಮೂವರು ಕಾರ್ಮಿಕರು, ಅವರೆಡೆಗೇ ನುಗ್ಗಿ ಬರುತ್ತಾ ಗಟ್ಟಿಯಾಗಿ ಕೂಗಿದರು.

"ಹಾದಿ ಬಿಡಿ, ಮೀನು ಹಿಡಿವ ಬೆಸ್ತರೇ!"

ತಾಯಿಯ ಬಳಿ ಸಮೀಪಿಸಿ ದಾಟುತ್ತಿದ್ದಂತೆ ಸಮೋಯ್‌ಲೊವ್, ತಲೆಬಾಗಿ ವಂದಿಸಿ, ಹಲ್ಲು ಕಿರಿದು, "ಎಳದೇಬಿಟ್ರು!" ಎಂದ.

ಮೌನವಾಗಿ ಆಕೆ ಮರುವಂದನೆ ಮಾಡಿದಳು. ನಗುನಗುತ್ತ ಜೈಲಿಗೆ ಹೋಗುತ್ತಿದ್ದ ಪ್ರಾಮಾಣಿಕರಾದ ಶಾಂತಮನಸ್ಕರಾದ ಈ ಯುವಕರನ್ನು ನೆನಸಿಕೊಂಡು ಆಕೆಯ ಹೃದಯ ಕಲಕಿಹೋಯಿತು. ಮಾತೃಪ್ರೇಮದಿಂದ ಆಕೆಯ ಹೃದಯ ಉಕ್ಕಿ ಬಂತು.

ಆ ದಿನ ಕಾರಖಾನೆಯಿಂದ ವಾಪಸಾದ ಮೇಲೆ ಉಳಿದ ವೇಳೆಯನ್ನೆಲ್ಲ ಮರೀಯಳ ಜತೆಯಲ್ಲಿ, ಅವಳ ಕೆಲಸದಲ್ಲಿ ನೆರವಾಗುತ್ತ, ಅವಳ ಹರಟೆಗೆ ಕಿವಿಗೊಡುತ್ತ ತಾಯಿ ಕಳೆದಳು. ಸಂಜೆ ಹೊತ್ತಾದ ಮೇಲೆ, ನಿರ್ಜೀವವಾಗಿದ್ದ ಬರಡಾಗಿದ್ದ ತನ್ನ ಮನೆಗೆ ಹಿಂತಿರುಗಿದಳು. ಮನೆಯಲ್ಲಿ ಆಕೆ ದೀರ್ಘ ಹೊತ್ತು, ಮನಸ್ಸಿಗೆ ನೆಮ್ಮದಿಯಿಲ್ಲದೆ, ಏನು ಮಾಡುವುದೆಂದು ತಿಳಿಯದೆ, ಅತ್ತಿತ್ತ ಸುತ್ತಾಡಿದಳು. ಆಗಲೇ ಕತ್ತಲಾಗಿತ್ತು. ತಂದುಕೊಡುವೆನೆಂದಿದ್ದ ಸಾಹಿತ್ಯವನ್ನು ಯೆಗೋರ್ ಇವಾನೊವಿಚ್ ತಂದಿರಲಿಲ್ಲ.

ಕಿಟಕಿಯಾಚೆ ಶರತ್ಕಾಲದ ದಪ್ಪನೆಯ ಬೂದುಬಣ್ಣದ ಹಿಮದ ತುಣುಕು ಗಳು ಬೀಳುತ್ತಿದ್ದುವು. ಅವು ಮೆತ್ತಗೆ ಕಿಟಕಿಯನ್ನು ಅಪ್ಪಿಕೊಳ್ಳುತ್ತಿದ್ದುವು. ಅಲ್ಲಿ ಕರಗಿ, ಹಸಿಯಾದ ತೇವದ ಗುರುತನ್ನು ಬಿಡುತ್ತಾ, ಕೆಳಕ್ಕೆ ಇಳಿಯುತ್ತಿದ್ದುವು.... ತಾಯಿ ತನ್ನ ಮಗನ ಬಗೆಗೆ ಯೋಚಿಸಿದಳು.

ಬಾಗಿಲ ಮೇಲೊಂದು ಸಪ್ಪಳವಾಯಿತು – ಜಾಗರೂಕತೆಯಿಂದ ತಟ್ಟಿದ ಸದ್ದು. ತಾಯಿ ಬೇಗನೆ ಓಡಿ ಹೋಗಿ ಚಿಲಕ ತೆಗೆದಳು. ಒಳಗೆ ಬಂದವಳು ಸಾಷ. ಆಕೆಯನ್ನು ತಾಯಿ ನೋಡದೆ ಬಹಳ ದಿನಗಳಾಗಿದ್ದುವು. ಮೊದಲು ನೋಡಿ ದೊಡನೆ, ಸಾಷ ತುಂಬ ಗಾತ್ರಕ್ಕೆ ಬೆಳೆದು ಬಿಟ್ಟಿದ್ದಾಳೆ ಎಂದು ತಾಯಿಗೆ ತೋರಿತು.

ಯಾರಾದರೂ ಬಂದರಲ್ಲಾ ಎಂದು, ರಾತ್ರೆ ಸ್ವಲ್ಪ ಹೊತ್ತಾದರೂ ತನ್ನ ಜೊತೆಯಲ್ಲಿ ಯಾರಾದರೂ ಇರುವರಲ್ಲಾ ಎಂದು, ತಾಯಿಗೆ ಸಂತೋಷವಾಯಿತು.

"ನಮಸ್ಕಾರ! ಬಹಳ ದಿವಸವಾಯ್ತು ನೋಡದೆ. ಎಲ್ಲಾದರೂ ದೂರ ಹೋಗಿದ್ಯಾ!" ಎಂದು ಕೇಳಿದಳು.

ಹುಡುಗಿ ನಗುತ್ತ ಉತ್ತರ ಕೊಟ್ಟಳು:

"ಇಲ್ಲ. ನಾನು ಜೈಲಲ್ಲಿದ್ದೆ. ನಿಕೊಲಾಯ್ ಇವಾನೊವಿಚ್ಚನ ಜತೆಯಲ್ಲಿ – ಅವನ ನೆನಪಿದೆಯಾ?"

"ಇಲ್ಲದೆ ಉಂಟೆ! ಅವನನ್ನ ಬಿಟ್ಟಿದ್ದಾರೇಂತ ಯೆಗೋರ್ ಇವಾನೊವಿಚ್ ನಿನ್ನೆ ಹೇಳಿದ. ಆದರೆ ನಿಮ್ಮ ವಿಚಾರ ಗೊತ್ತಿರಲಿಲ್ಲ.... ನೀವೂ ಅಲ್ಲಿದ್ದಿರಿ ಅಂತ ಯಾರೂ ಹೇಳಲಿಲ್ಲ...."

"ಹೇಳಬೇಕಾದಂತ ದೊಡ್ಡ ವಿಷಯವೇನಲ್ಲ. ಇಲ್ನೋಡಿ. ಯೆಗೋರ್ ಇವಾನೊವಿಚ್ ಬರೋಕೆ ಮುಂಚೆ ನಾನು ಬಟ್ಟೆ ಬದಲಾಯಿಸಬೇಕು," ಎಂದು ಸುತ್ತಲೂ ದೃಷ್ಟಿ ಹಾಯಿಸುತ್ತ ಆಕೆ ಹೇಳಿದಳು.

"ನಿಮ್ಮ ಮೈಯೆಲ್ಲಾ ಒದ್ದೆಯಾಗಿದೆ."

"ಪತ್ರಿಕೆ, ಕರಪತ್ರಗಳನ್ನ ತಂದಿದೀನಿ...."

"ಇಲ್ಲಿ ಕೊಡಿ .... ಇಲ್ಲಿ ಕೊಡಿ," ಎಂದು ತಾಯಿ ಉತ್ಸಾಹದಿಂದ ಕೇಳಿದಳು.

ಹುಡುಗಿ ಕೋಟನ್ನು ಸಡಿಲಿಸಿ ಮೈ ಕೊಡವಿದಳು. ಕಾಗದಗಳು ಮರದ ಎಲೆಗಳ ಹಾಗೆ ಪಟಪಟನೆ ಉದುರಿದುವು. ತಾಯಿ ಅವಸರದಿಂದ ಅವನ್ನೆಲ್ಲ ಆರಿಸಿ ಒಂದುಗೂಡಿಸಿದಳು.

"ನಿಮ್ಮನ್ನ ನೋಡಿದಾಗ ಯಾಕಪ್ಪ ಇಷ್ಟು ದಪ್ಪಗಾಗಿದ್ದೀರಾ, ಅಂತ ಆಶ್ಚ ರ್ಯವಾಯ್ತು. ಮದುವೆ ಮಾಡ್ಕೊಂಡಿರಬಹುದು, ಗರ್ಭಿಣಿಯಾಗಿರಬಹುದೂಂತ ಯೋಚಿಸ್ದೆ. ಅಬ್ಬ! ಎಷ್ಟೊಂದು ತಂದಿದೀರ ! ಇಷ್ಟು ದೂರ ನಡಕೊಂಡೇ ಬಂದಿರಾ !"

"ಹೌದು," ಎಂದಳು ಸಾಷ. ಪುನಃ ಆಕೆ ತೆಳ್ಳಗಿನ ಎತ್ತರದ ಜೀವವಾದಳು.

ಆಕೆಯ ಮುಖ ಕಳೆಗುಂದಿದ್ದುದನ್ನು, ಕಣ್ಣುಗಳು ಎಂದಿಗಿಂತಲೂ ಹೆಚ್ಚು ದೊಡ್ಡವಾಗಿ ತೋರುತ್ತಿದ್ದುದನ್ನು, ಅವುಗಳ ಕೆಳಗೆ ಕರಿಯ ವೃತ್ತ ಮೂಡಿದ್ದನ್ನು, ತಾಯಿ ಕಂಡಳು.

"ಎಂಥ ಕೆಲಸ ನೀವು ಮಾಡ್ತಿರೋದು. ಹೊರಗೆ ಬಂದ ಮೇಲೆ ಸ್ವಲ್ಪ ವಿಶ್ರಾಂತಿ ಪಡೀಬೆ!" ಎಂದು ತಾಯಿ, ಅಸಮ್ಮತಿ ಸೂಚಿಸಿ ತಲೆಯಾಡಿಸುತ್ತ, ನಿಟ್ಟುಸಿರು ಬಿಟ್ಟು, ಉದ್ಗರಿಸಿದಳು.

ಹುಡುಗಿ ಚಳಿಯಿಂದ ನಡುಗುತ್ತಿದ್ದಳು. ಅವಳೆಂದಳು:

"ಇದು ಮಾಡಲೇಬೇಕಾದ ಕೆಲಸ. ಈಗ ಪಾವೆಲ್‌ನ ವಿಷಯ ಹೇಳಿ. ಅವರು ಹಿಡಿದುಕೊಂಡು ಹೋದಾಗ ಹ್ಯಾಗಿದ್ದ? ತುಂಬ ಕಸಿವಿಸಿಯಾಯ್ತೆ ಅವನಿಗೆ?"

ತಾಯಿಯ ಮುಖವನ್ನು ನೇರವಾಗಿ ನೋಡದೆಯೇ, ತಲೆಬಾಗಿ, ನಡುಗುತ್ತಿದ್ದ ಬೆರಳುಗಳಿಂದ ಕೂದಲನ್ನು ಸರಿಪಡಿಸುತ್ತ ಸಾಷ ಆ ಪ್ರಶ್ನೆ ಕೇಳಿದಳು.

"ಅಂಥಾದ್ದೇನೂ ಇಲ್ಲ, ಅವನ್ನೇನೂ ಬಗ್ಗು ಬಡೆಯುವಂತಿಲ್ಲ," ಎಂದು ತಾಯಿ ಉತ್ತರವಿತ್ತಳು.

"ಆತನದು ಗಟ್ಟಿಮುಟ್ಟಿನ ಪ್ರಕೃತಿಯೆ?" ಎಂದು ಹುಡುಗಿ ಮೃದುವಾಗಿ ಕೇಳಿದಳು.

"ಅವನು ಈ ವರೆಗೆ ಕಾಹಿಲೆ ಬಿದ್ದದ್ದೇ ಇಲ್ಲ," ಎಂದಳು ತಾಯಿ.

ಹುಡುಗಿಯನ್ನು ನೋಡುತ್ತ ಆಕೆಯೆಂದಳು:

"ನಡುಗ್ತಾ ಇದ್ದೀರಲ್ಲ ನೀವು! ತಾಳಿ – ಚಾ ಮತ್ತು ಜಾಂ ಕೊಡ್ತೀನಿ."

"ಓಹೋ! ಆದರೆ ಸುಮ್ ಸುಮ್ನೆ ತೊಂದರೆ ಯಾಕೆ ನಿಮಗೆ? ಈಗಾಗ್ಲೆ ಹೊತ್ತಾಗಿದೆ; ಬಿಡಿ, ನಾನೇ ಚಾ ಮಾಡ್ತೀನಿ."

"ಇಷ್ಟು ಆಯಾಸವಾದ್ದು ಸಾಕಾಗಲಿಲ್ಲವಾ?" ಎಂದು ತಾಯಿ ಗದರಿಸುವ ಧ್ವನಿಯಲ್ಲಿ ಉತ್ತರವಿತ್ತಳು. ಆಕೆ ಸಮೊವಾರ್ ಹಚ್ಚಿದಳು. ಸಾಷಳೂ ಅಡುಗೆ ಮನೆಗೆ ಹೋಗಿ, ಒಂದು ಕೈಯನ್ನು ತಲೆಯ ಹಿಂದಿರಿಸುತ್ತಾ, ಬೆಂಚಿನ ಮೇಲೆ ಕುಳಿತಳು. ಆಕೆಯೆಂದಳು:

"ಜೈಲು ವಾಸದಿಂದ ಕ್ಷೀಣವಾಗೋದು ಖಂಡಿತ, ಯಾವ ಕೆಲಸವೂ ಇಲ್ಲದೆ ಹಾಗಾಗುತ್ತೆ! ಅದಕ್ಕಿಂತ ಹೆಚ್ಚು ಕೆಟ್ಟುದ್ದು ಬೇರೆ ಯಾವುದೂ ಇಲ್ಲ! ಮಾಡಬೇಕಾದ ಕೆಲಸ ಎಷ್ಟೊಂದು ಇದೆ ಅಂತ ಗೊತ್ತಿದ್ದೂ ಗೊತ್ತಿದ್ದೂ ಬೋನಿಗೆ ಬಿದ್ದ ಪ್ರಾಣಿಯ ಹಾಗೆ ಅಲ್ಲಿ ಕೂತಿರೋದು...."

"ಇದಕ್ಕೆಲ್ಲಾ ನಿಮಗೆ ಪ್ರತಿಫಲ ಕೊಡೋರು ಯಾರಮ್ಮ?" ಎಂದು ತಾಯಿ ಕೇಳಿದಳು.

ಮತ್ತೆ ನಿಟ್ಟುಸಿರಿಟ್ಟು, ತನ್ನ ಪ್ರಶ್ನೆಗೆ ತಾನೇ ಉತ್ತರ ಕೊಟ್ಟಳು:

"ದೇವರ ಹೊರತು ಬೇರೆ ಯಾರೂ ಇಲ್ಲ!... ಅಲ್ಲಾ, ನಿಮಗೂ ದೇವರಲ್ಲಿ ನಂಬಿಕೆ ಇಲ್ವೇನೊ?"

ಹುಡುಗಿ ಸ್ವಲ್ಪದರಲ್ಲೆ, "ಇಲ್ಲ"ವೆಂದು ತಲೆಯಾಡಿಸಿದಳು.

"ಸುಳ್ಳು–" ಎಂದಳು ತಾಯಿ ಉದ್ವೇಗದಿಂದ. ಕೈಗಳಿಗೆ ಅಂಟಿದ್ದ ಇಜ್ಜಲಿನ ಪುಡಿಯನ್ನು ಮುಂಗವಚದಿಂದ ಒರೆಸಿಕೊಳ್ಳುತ್ತ, ಆಳವಾದ ವಿಶ್ವಾಸದಿಂದ ಆಕೆ ಮಾತು ಮುಂದುವರಿಸಿದಳು. "ನಿಮ್ಮ ಶ್ರದ್ಧೆ ಏನನ್ನೋದು ನಿಮಗೇ ಗೊತ್ತಿದೆ. ದೇವರನ್ನು ನೀವು ನಂಬದೇ ಇದ್ದರೆ ಹ್ಯಾಗೆ ನೀವು ಇಂಥ ಜೀವನ ನಡೆಸೋದು ಸಾಧ್ಯ?"

ಒಮ್ಮೆಲೆ ಹೆಬ್ಬಾಗಿಲಲ್ಲಿ ಯಾರೋ ಮೆಲ್ಲನೆ ಗೊಣಗಿದ, ಯಾರದೋ ಕಾಲ್ತುಳಿತದ, ಸಪ್ಪಳವಾಯಿತು. ತಾಯಿ ಹೌಹಾರಿದಳು. ಹುಡುಗಿ ಒಡನೆಯೇ ಹಾರಿ ಎದ್ದು ನಿಂತಳು. ಆಕೆ ಪಿಸುಗುಟ್ಟಿದಳು:

"ತಾಳಿ, ಬಾಗಿಲು ತೆಗೀಬೇಡಿ. ಅವರು ಪೋಲೀಸರಾದರೆ, ನಾನು ಯಾರೂಂತ ನಿಮಗೆ ಗೊತ್ತಿಲ್ಲವೆನ್ನಬೇಕು. ನಾನು ಕತ್ತಲಲ್ಲಿ ಹಾದಿ ತಪ್ಪಿ ಬಂದೆ, ಬಾಗಿಲ ಮೆಟ್ಟುಗಲ್ಲಿನ ಮೇಲೆ ಪ್ರಜ್ಞೆ ತಪ್ಪಿ ಬಿದ್ದೆ. ನೀವು ನನ್ನ ಬಟ್ಟೆ ಸಡಿಲಿಸಿದಾಗ ಕರಪತ್ರಗಳು ಬಂದುವೆನ್ನಬೇಕು. ತಿಳಿಯಿತೆ?"

ತಾಯಿಗೆ ತುಂಬ ಕಸಿವಿಸಿಯಾಯಿತು.

"ಅಯ್ಯೋ, ಮಗು! ಯಾಕೆ ನಾನು ಹಾಗೆ ಹೇಳ್ಲಿ?" ಎಂದಳು.

ಬಾಗಿಲಿಗೆ ಕಿವಿಗೊಡುತ್ತಾ ಸಾಷ ಹೇಳಿದಳು:

"ಒಂದು ನಿಮಿಷ ತಾಳಿ. ಬಹುಶಃ ಯೆಗೋರ್ ಇರಬಹುದು...."

ಹೌದು; ಬಂದಿದ್ದುದು ಯೆಗೋರ್, ಎಲ್ಲ ಒದ್ದೆಯಾಗಿ, ಆಯಾಸದಿಂದ.

"ಆಹ್ಹಾ! ಸಮೊವಾರ್ ಸುಂಯ್ ಅನ್ತಾ ಇದೆ. ಉಲ್ಲಾಸಗೊಳಿಸೋದಕ್ಕೆ ಸಮೊವಾರ್ ಚಾ ಬಿಟ್ಟರೆ ಬೇರೆ ಇಲ್ಲ, ತಾಯಿ! ಸಾಷ, ನೀನಾಗ್ಲೆ ಬಂದಿದೀಯ?"

ಭಾರವಾದ ಕೋಟನ್ನು ಕಳಚುತ್ತಿದ್ದಂತೆ ತಡೆಯಿಲ್ಲದೆ ಆತ ಮಾತಾಡುತ್ತಲೇ ಇದ್ದ. ಶ್ವಾಸೋಚ್ಛ್ವಾಸದ ಆ ಗರಗರ ಸ್ವರ ಅಡುಗೆ ಮನೆಯನ್ನು ತುಂಬುತ್ತಿತ್ತು.

"ಅಧಿಕಾರಿಗಳಿಗೆ ಈ ಚಿಕ್ಕಮ್ಮಣ್ಣಿ ಕಂಡರೆ ಸರಿಬರಲ್ಲ, ತಾಯಿ. ಜೇಲರು ಆಕೇನ ಅವಮಾನಿಸೋ ಎದೆಗಾರಿಕೆ ತೋರಿದ. ಕ್ಷಮೆ ಕೇಳೋವರೆಗೂ ಊಟ ಮಾಡೋಲ್ಲಾಂತ ಉಪವಾಸ ಮುಷ್ಕರ ಹಿಡಿದಳು. ಎಂಟು ದಿನ ಒಂದು ತುತ್ತು ಕೂಡಾ ಮುಟ್ಟಲಿಲ್ಲ. ಪರಿಣಾಮವಾಗಿ ಹೆಚ್ಚು ಕಡಮೆ ಸಾಯೋ ಸ್ಥಿತೀಗೆ ಬಂದ್ಲು. ಚೆಂತ್ರಿಲ್ಲ ಅಲ್ವ? ಅದು ಹೋಗಲಿ, ಬಿಡಿ. ನನ್ನ ಈ ಹೊಟ್ಟೆಯಂಥಾ ಹೊಟ್ಟೆ ಎಲ್ಲಾದರೂ ನೋಡಿದೀರಾ?"

ಅಸಹ್ಯವಾಗಿ ಉಬ್ಬಿಕೊಂಡಿದ್ದ ಹೊಟ್ಟೆಯನ್ನು ಒತ್ತಿಕೊಳ್ಳುತ್ತ ಆತ ಪಕ್ಕದ ಕೊಠಡಿಗೆ ಹೋದ. ಬಾಗಿಲು ಹಾಕಿಕೊಂಡ ಮೇಲೂ ಒಳಗಿನಿಂದ ಆತ ಮಾತಾಡುತ್ತಲೇ ಇದ್ದ.

"ನಿಜಕ್ಕೂ ನೀವು ಎಂಟು ದಿನ ಏನೂ ತಿನ್ನಲೇ ಇಲ್ಲವೆ?" ಎಂದು ತಾಯಿ ಆಶ್ಚರ್ಯದಿಂದ ಕೇಳಿದಳು.

"ಆತನಿಂದ ಕ್ಷಮೆ ಕೇಳಿಸ್ಬೇಕಾದರೆ ಏನಾದರೂ ನಾನು ಮಾಡಲೇಬೇಕಿತ್ತು," ಎಂದು ಸಾಷ, ಚಳಿಯಲ್ಲಿ ನಡುಗುತ್ತ ಉತ್ತರವಿತ್ತಳು. ಆಕೆಯ ನಿಷ್ಠುರತೆಯನ್ನೂ ನಿಶ್ಚಲತೆಯನ್ನೂ ತಾಯಿ ಕಂಡಳು. ಗದರಿಕೆಯ ಧ್ವನಿಯಿತ್ತು ಆಕೆಯ ಮಾತಿನಲ್ಲಿ.

"ನೋಡ್ದಾ ಇವಳ ಗುಣಾನ!" ಎಂದು ತಾಯಿ ಯೋಚಿಸಿಕೊಂಡಳು. "ನೀವು ಉಪವಾಸವಿದ್ದು ಪ್ರಾಣಕ್ಕೇನಾದರೂ ತೊಂದರೆ ಬಂದಿದ್ದರೆ...." ಎಂದು ಪೆಲಗೇಯ ಹೇಳಿದಳು.

ಹುಡುಗಿ ಮೃದುವಾಗಿ ಉತ್ತರಿಸಿದಳು:

"ಏನು ಮಾಡೋಕಾಗ್ತಿತ್ತು. ಆದರೆ ಆತ ಕ್ಷಮೆ ಕೇಳಿದ. ಅಸಹಾಯಕಳೊಂತ, ಹಾಗೆ ವರ್ತಿಸೋಕೆ ಬಿಡೋಕಾಗತ್ಯೆ?"

"ಹುಂ!... ಎಲ್ಲ ಗಂಡಸರೂ ಹಾಗೇನೇ; ಹೆಂಗಸರ ಅಸಹಾಯತೆ ನೋಡಿ ಸ್ವಾರ್ಥ ಸಾಧಿಸ್ತಾರೆ."

ಯೆಗೋರ್ ಬಾಗಿಲು ತೆರೆದು ಒಳಬಂದ.

"ನನ್ನ ಭಾರಾನ ಇಳಿಸಿಯಾಯ್ತು. ಚಾ ಸಿದ್ಧವಾಯ್ತೆ? ಎಲ್ಲಿ ನೋಡೋಣ."

ಸಮೊವಾರನ್ನೆತ್ತಿಕೊಂಡು ಪಕ್ಕದ ಕೊಠಡಿಗೆ ಹೋಗುತ್ತ ಆತ ಹೇಳಿದ:

"ನನ್ನ ಪ್ರೀತಿಯ ತಂದೆ ದಿನವೂ ಇಪ್ಪತ್ತು ಲೋಟ ಚಾ ಕುಡೀತಿದ್ದ. ಆದ್ದರಿಂದಲೇ ಶಾಂತಿಯಿಂದ ಒಳ್ಳೇ ಆರೋಗ್ಯದಿಂದ ಎಪ್ಪತ್ತಮೂರು ವರ್ಷದ ಮುದುಕನಾಗು ವವರೆಗೂ ಬದುಕಿದ. ಎಷ್ಟೊಂದು ಭಾರದ ದೇಹ ಅವನದು! ವೊಸ್‌ಕ್ರೆಸೇನ್ಸ್ಕ್ ಗ್ರಾಮದಲ್ಲಿ ಆತ ಕೆಳ ದರ್ಜೆಯ ಧರ್ಮಾಧಿಕಾರಿಯಾಗಿದ್ದ...."

ತಾಯಿ ಉತ್ಸಾಹದಿಂದ, "ಪಾದ್ರಿ ಇವಾನರ ಮಕ್ಕಳೇ ನೀವು?" ಎಂದು ಕೇಳಿದಳು.

"ಹೌಹೌದು! ನನ್ನ ಹಿರಿಯರಿಗೂ ನಿಮಗೂ ಹೇಗಮ್ಮಾ ಪರಿಚಯ?"

"ನನ್ನೂರು ಕೂಡಾ ವೊಸ್‌ಕ್ರೆಸೇನ್ಸ್ಕ್!"

"ನನ್ನ ಹುಟ್ಟೂರಿನಾಕೆ? ಯಾರ ಮಗಳು ನೀವು?"

"ನಿಮ್ಮ ನೆರೆಮನೆಯಲ್ಲಿದ್ದೆವು. ಸಿರ್‍ಯೋಗಿನ್ನರ ಮಗಳು!"

"ಕುಂಟ ನೀಲ್ ಅವರ ಮಗಳೆ? ಅವರ ಮುಖ ನನಗೆ ಚೆನ್ನಾಗಿ ಪರಿಚಯ ವಿದೆ! ಅವರಿಂದ ಕಿವಿ ಹಿಂಡಿಸಿಕೊಳ್ಳೋ ಭಾಗ್ಯ ನನಗೆ ದೊರೆತದ್ದು ಒಂದೆರಡು ಸಲವಲ್ಲ!"

ಅವರಿಬ್ಬರೂ ಇದಿರು ಬದಿರಾಗಿ ನಗುತ್ತ ಸಾವಿರ ಪ್ರಶ್ನೆಗಳನ್ನು ಕೇಳುತ್ತ ನಿಂತರು. ಚಹಾವನ್ನು ಮಾಡುತ್ತಿದ್ದ ಸಾಷ ಮುಗುಳ್ನಕ್ಕಳು. ಕಪ್ಪುಗಳ ಸಪ್ಪಳ ತಾಯಿಯ ಮಾತನ್ನು ನಿಲ್ಲಿಸಿ, ಆಕೆ ಭೂಮಿಗಿಳಿಯುವಂತೆ ಮಾಡಿತು.

"ಓ ಕ್ಷಮಿಸೀಪ್ಪಾ! ಎಲ್ಲಾ ಮರೆತ್ಬಿಟ್ಟೆ. ಹುಟ್ಟೂರಿನವರು ಮಾತಾಡೋಕೆ ಸಿಗೋದೆಂದರೆ ಎಷ್ಟೊಂದು ಸಂತೋಷ."

ಸಾಷ ಹೇಳಿದಳು:

"ಚಾ ಸಿದ್ಧಮಾಡಿದ ಅಧಿಕ ಪ್ರಸಂಗಿ ನಾನು. ನಾನೇ ಕ್ಷಮೆ ಕೇಳಬೇಕಾದ್ದು. ಆಗಲೇ ಹನ್ನೊಂದಾಯಿತು. ಹೋಗೋಕೆ ಇನ್ನೂ ಎಷ್ಟೋ ದೂರವಿದೆ."

ತಾಯಿ ಆಶ್ಚರ್ಯದಿಂದ, "ಎಲ್ಲಿಗೆ ಹೋಗೋದು? ಶಹರಕ್ಕೇನಾ?" ಎಂದು ಕೇಳಿದಳು.

"ಹೌದು."

"ಆದರೆ ಯಾಕೆ? ಎಷ್ಟೊಂದು ಕತ್ತಲು! ಹಿಮ ಸುರೀತಿದೆ. ನಿಮಗೆ ಆಯಾಸವೂ ಆಗಿದೆ. ರಾತ್ರಿ ಇಲ್ಲೆ ಇದ್ದುಬಿಡಿ. ಯೆಗೋರ್ ಇವಾನೊವಿಚ್ ಅಡುಗೆ ಮನೇಲಿ ಮಲಕೋತಾರೆ. ನಾವಿಬ್ಬರೂ ಇಲ್ಲೇ ಮಲಗೋಣ."

ಹುಡುಗಿ ಸರಳವಾಗಿ, "ಇಲ್ಲ, ನಾನು ಹೋಗಲೇಬೇಕು," ಎಂದಳು.

"ಹೌದು, ಚಿಕ್ಕಮ್ಮಣ್ಣಿ ಹೋಗಲೇ ಬೇಕಾಗಿದೆ. ಇಲ್ಲಿ ಅನೇಕರಿಗೆ ಆಕೆಯ ಪರಿಚಯವಿದೆ. ನಾಳೆ ಈ ಊರಲ್ಲಿ ಯಾರೂ ಇವಳನ್ನು ಕಾಣಬಾರದು," ಎಂದನು ಯೆಗೋರ್.

"ಆದರೆ ಹ್ಯಾಗೆ? ಒಬ್ಬಳೇ ಹೋಗೋದಾ?"

ಸಣ್ಣನೆ ನಕ್ಕು ಯೆಗೋರ್ ಉತ್ತರವಿತ್ತ:

"ಒಬ್ಬಳೇ."

ಹುಡುಗಿ, ಒಂದು ಕಪ್ ಚಾ ಸುರುವಿಕೊಂಡು, ಕಪ್ಪು ಬ್ರೆಡ್ಡಿನ ಒಂದು ಚೂರಿಗೆ ಉಪ್ಪು ಸವರಿಕೊಂಡು, ಯೋಚನೆಯ ದೃಷ್ಟಿಯಿಂದ ತಾಯಿಯತ್ತ ನೋಡುತ್ತ, ಅದನ್ನು ತಿನ್ನತೊಡಗಿದಳು.

"ನೀವು ಮತ್ತು ಈ ನತಾಷ, ಅದೇನು ನಡೀತಿರೋ ಏನು ಕತೆಯೋ, ನನ್ನಿಂದ ಮಾತ್ರ ಆಗದಪ್ಪ. ಹೆದರಿಕೆ!"

"ಆಕೆಗೂ ಹೆದರಿಕೆಯಾಗ್ತದೆ," ಎಂದ ಯೆಗೋರ್.

"ನಿಮಗೂ ಹೆದರಿಕೆಯಾಗ್ತದೆ, ಅಲ್ವೆ ಸಾಷ?" ಎಂದು ಆಕೆಯನ್ನು ಕೇಳಿದ.

"ನಿಜ ನಿಜ, ಆಗ್ದೆ!" ಎಂದಳು ಹುಡುಗಿ.

ಆಕೆಯನ್ನೂ ಯೆಗೋರ್‌ನನ್ನೂ ತಾಯಿ ನೋಡಿದಳು.

"ನೀವೆಷ್ಟು ಕಠಿಣ ಜನರು!" ಎಂದು ಉದ್ಗಾರ ತೆಗೆದಳು.

ಚಾ ಕುಡಿದಾದ ಮೇಲೆ ಸಾಷ ಮೌನವಾಗಿ ಯೆಗೋರ್‌ನ ಕೈ ಕುಲುಕಿ ಅಡುಗೆ ಮನೆಯೊಳಕ್ಕೆ ಹೋದಳು. ತಾಯಿ ಆಕೆಯನ್ನು ಹಿಂಬಾಲಿಸಿದಳು.

ಸಾಷ ಅಂದಳು:

"ನೀವು ಪಾವೆಲ್‌ನನ್ನು ಕಂಡರೆ ನನ್ನ ನಮಸ್ಕಾರ ತಿಳಿಸಿ. ಖಂಡಿತ ಮರೀಬೇಡಿ."

ಬಾಗಿಲ ತಿರುಗಣೆಗೆ ಕೈ ಹಾಕಿದ ಸಾಷ, ಸರಕ್ಕನೆ ತಿರುಗಿ, "ನಾನು ನಿಮ್ಮನ್ನು ಮುದ್ದಿಸಬಹುದೆ?" ಎಂದು ಕೇಳಿದಳು.

ತಾಯಿ ಮೌನವಾಗಿ ಆಕೆಯನ್ನು ಎದೆಗವಚಿಕೊಂಡು ಪ್ರೀತಿಪೂರ್ವಕವಾಗಿ ಮುದ್ದಿಸಿದಳು.

"ವಂದನೆಗಳು," ಎಂದು ಹುಡುಗಿ ತಲೆಬಾಗಿ ವಂದಿಸಿ ಹೊರಹೋದಳು.

ತಾಯಿ ಕೊಠಡಿಗೆ ಮರಳಿ ಬಂದು ಕಾತರದ ದೃಷ್ಟಿಯಿಂದ ಕಿಟಕಿಯಿಂದ ಹೊರಗೆ ನೋಡಿದಳು ಕತ್ತಲಲ್ಲಿ ಹಿಮದ ಹಸಿ ತುಣುಕುಗಳು ಉದುರುತ್ತಿದ್ದುವು.

"ಪ್ರೋಜೊರೊವ್ಸ್ಕರ ನೆನಪಿದೆಯಾ?" ಎಂದು ಯೆಗೋರ್ ಕೇಳಿದ.

ಕಾಲುಗಳನ್ನು ಅಗಲಿಸಿ, ಸದ್ದು ಮಾಡುತ್ತ ಚಹಾ ಹೀರಿಕೊಂಡು, ಆತ ಕುಳಿತ. ಆತನ ಮುಖ ಕೆಂಪಗಿತ್ತು, ಬೆವರು ತುಂಬಿತ್ತು, ತೃಪ್ತವಾಗಿತ್ತು.

ಮೇಜಿನ ಸಮೀಪಕ್ಕೆ ಬರುತ್ತ ಯೋಚಿಸುತ್ತ ಆಕೆ, "ಹೌದು, ಅವರ ನೆನಪಿದೆ" ಎಂದಳು. ಕುಳಿತುಕೊಂಡು ಕನಿಕರದ ದೃಷ್ಟಿಯಿಂದ ಯೆಗೋರ್‌ನತ್ತ ಆಕೆ ನೋಡಿದಳು.

"ಚ್ಚೆ, ಚ್ಚೆ! ಆ ಸಾಷ! ಅವಳು ಶಹರ ಸೇರೋದು ಹ್ಯಾಗೆ?"

ಯೆಗೋರ್‌ನಂದ:

"ಆಕೆಗೆ ಸುಸ್ತಾಗಿರುತ್ತೆ. ಮೊದಲು ಆಕೆ ಗಟ್ಟಿಮುಟ್ಟಾಗಿದ್ದಳು. ಈ ಜೈಲು ವಾಸದಿಂದ ಆಕೆ ಇಳಿದು ಹೋಗಿದ್ದಾಳೆ. ಶ್ರೀಮಂತ ಮನೆತನದಲ್ಲಿ ಸುಖ ಜೀವನದಲ್ಲಿ ಬೆಳೆದ ಹುಡುಗಿ.... ಈಗಾಗಲೇ ಆ ಶ್ವಾಸಕೋಶಕ್ಕೆ ತೊಂದರೆಯಾಗಿದೆ."

"ಯಾರು ಆಕೆ?" ಎಂದು ತಾಯಿ ಮೃದುವಾಗಿ ಕೇಳಿದಳು.

"ಒಬ್ಬ ಭೂಮಾಲೀಕನ ಮಗಳು, ಆಕೆಯ ಮಾತಿನಲ್ಲೇ ಹೇಳೋದಾದರೆ ಅವಳಪ್ಪ ಒಬ್ಬ 'ಹಂದಿ'.... ಇವರು ಮದುವೆ ಮಾಡಿಕೋಬೇಕೂಂತ ಇದ್ದಾರೆ. ನಿಮಗೆ ಗೊತ್ತೇನಮ್ಮ?"

"ಯಾರು?"

"ಆಕೆ ಮತ್ತು ಪಾವೆಲ್. ಆದರೆ ಅದೇನೂ ಆಗೋಹಾಗೆ ಕಾಣ್ಲಿಲ್ಲ. ಆತ ಹೊರಗಿದ್ದಾಗ ಈಕೆ ಜೈಲಲ್ಲಿ; ಈಕೆ ಹೊರಬಂದರೆ ಆತ ಒಳಗೆ!"

ತಾಯಿ ಸ್ವಲ್ಪ ತಡೆದು ಹೇಳಿದಳು:

"ನನಗೆ ಗೊತ್ತಿರಲಿಲ್ಲ. ಪಾವೆಲ್ ತನ್ನ ಸ್ವಂತದ ವಿಷಯ ನನ್ನ ಕೈಲಿ ಹೇಳೋದೇ ಇಲ್ಲ."

ಈಗ ಆಕೆಗೆ ಆ ಹುಡುಗಿಯ ವಿಷಯದಲ್ಲಿ ಮತ್ತಷ್ಟು ಕನಿಕರವಾಯಿತು. ಬೇಡವೆಂದರೂ ಬರುತ್ತಿದ್ದ ಅಸಮಾಧಾನದ ಭಾವನೆಯಿಂದ ಆಕೆ ಅತಿಥಿಯ ಕಡೆಗೆ ತಿರುಗಿದಳು.

"ಆಕೇನ ಈಗ ನೀವೇ ಯಾಕೆ ಕರಕೊಂಡು ಹೋಗಬಾರದಿತ್ತು?" ಎಂದು ಕೇಳಿದಳು.

ಆತ ಶಾಂತನಾಗಿ ಉತ್ತರವಿತ್ತ.

"ಅದು ಸಾಧ್ಯವಿಲ್ಲ. ಇಲ್ಲಿ ವಸತಿ ಪ್ರದೇಶದಲ್ಲಿ ನಾನು ಮಾಡಬೇಕಾದ ಕೆಲಸ ಬಹಳವಿದೆ. ಬೆಳಗಾದೊಡನೆ ಬೇಗನೆ ನಾನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗುತ್ತಿರಬೇಕು. ನನಗಿರುವಂಥ ಶ್ವಾಸಯಂತ್ರಕ್ಕೆ ಅದೇನೂ ಸುಲಭ ಕೆಲಸವಲ್ಲ."

ಯೆಗೋರ್ ಅದೇ ಹಿಂದೆ ಹೇಳಿದ್ದನ್ನೇ ಯೋಚಿಸುತ್ತ ಕುಳಿತಿದ್ದ ತಾಯಿ, "ಆಕೆ ಲಕ್ಷಣವಾದ ಹುಡುಗಿ" ಎಂದಳು.

ತನ್ನ ಮಗನೇ ಹೇಳುವುದರ ಬದಲು ಪರಕೀಯನೊಬ್ಬ ಮದುವೆಯ ಮಾತನ್ನು ತಿಳಿಸಬೇಕಾಯಿತಲ್ಲಾ ಎಂದು ಆಕೆಗೆ ನೋವಾಯಿತು. ಗಂಟು ಮೋರೆಯಿಂದ ತುಟಿಗಳನ್ನು ಆಕೆ ಬಿಮ್ಮನೆ ಬಿಗಿ ಹಿಡಿದಳು.

"ಹೌದು, ನಿಜವಾಗಿಯೂ ಆಕೆ ಒಳ್ಳೆಯ ಹುಡುಗಿ," ಎಂದ ಯೆಗೋರ್. "ಆಕೆಯ ಬಗ್ಗೆ ನೀವು ಕನಿಕರಪಡ್ತಾ ಇದೀರಾ ಅನ್ನೋದು ಕಾಣಿಸ್ತಿದೆ. ಅದರಲ್ಲಿ ಅರ್ಥವಿಲ್ಲ. ನಮ್ಮಂಥ ಬಂಡಾಯಗಾರರ ವಿಷಯದಲ್ಲೆಲ್ಲ ಕನಿಕರ ತೋರಿಸೋಕೆ ಶುರು ಮಾಡಿದರೆ ನಿಮ್ಮ ಹೃದಯವೇ ಬಿರಿದೀತು. ನಿಜ ಹೇಳೋದಾದರೆ, ನಮ್ಮಲ್ಲಿ ಯಾರಿಗೂ ಸುಲಭ ಜೀವನ ಅನ್ನೋದೇ ಇಲ್ಲ. ನಮ್ಮ ಸಂಗಾತಿಯೊಬ್ಬ ಈಗತಾನೇ ಗಡೀಪಾರು ಶಿಕ್ಷೆ ಅನುಭವಿಸಿ ಬಂದಿದ್ದಾನೆ. ಅವನು ನೀಝ್ನಿ ನೋವ್ಗೊರೊದ್‌ಗೆ ಬರೋ ವೇಳೆಗೆ ಅವನ ಹೆಂಡತಿ ಮಗು ಅವನಿಗಾಗಿ ಸ್ಮೊಲೇನ್ಸ್ಕ್‌ನಲ್ಲಿ ಕಾದಿದ್ದರು. ಅವನು ಸ್ಮೊಲೇನ್ಸ್ಕ್‌ಗೆ ಹೋಗೋದರೊಳಗೆ ಅವರು ಮಾಸ್ಕೋ ಜೈಲಿನಲ್ಲಿ ದಾಖಲಾಗಿದ್ದರು! ಈಗ ಅವನ ಹೆಂಡತಿ ಸೈಬೀರಿಯಕ್ಕೆ ಗಡೀಪಾರು ಶಿಕ್ಷೆ ಅನುಭವಿಸಲು ಹೋಗುವ ಸರದಿ ಬಂದಿದೆ. ನನಗೂ ಒಬ್ಬಳು ಹೆಂಡತಿ ಇದ್ದಳು. ಬಹಳ ಒಳ್ಳೆಯ ವ್ಯಕ್ತಿ. ನಮ್ಮ ಈ ಜೀವನವನ್ನು ಐದು ವರ್ಷ ಅನುಭವಿಸಿದ ನಂತರ ಗೋರಿ ಕಂಡಳು."

ಒಂದೇ ಗುಟುಕಿಗೆ ಚಾ ಕುಡಿದು ಆತ ತನ್ನ ಕತೆಯನ್ನು ಮುಂದುವರಿಸಿದ. ಜೈಲುವಾಸ, ಗಡೀಪಾರು ಶಿಕ್ಷೆ, ಪರದೇಶ ವಾಸದ ವರ್ಷ–ಮಾಸಗಳನ್ನು ಎಣಿಸಿ ಹೇಳಿದ. ತನಗೊದಗಿದ ವಿವಿಧ ಸಂಕಷ್ಟಗಳು, ಜೈಲಿನಲ್ಲಿ ದೊರೆತ ಹೊಡೆತಗಳು, ಸೈಬೀರಿಯಾದಲ್ಲಿ ಉಪವಾಸದ ದಿನಗಳು, ಇವೆಲ್ಲದರ ಬಗೆಗೂ ಆಕೆಗೆ ವಿವರಿಸಿ ಹೇಳಿದ. ಅಷ್ಟೊಂದು ಸಂಕಷ್ಟ–ಪೀಡನೆ ಅನುಭವಿಸಿದ ಜೀವನದ ಕಥೆಯನ್ನು ಶಾಂತ ಸರಳತೆಯಿಂದ ಆತ ವಿವರಿಸುತ್ತಿದ್ದ. ಆಶ್ಚರ್ಯಪಡುತ್ತ ತಾಯಿ ಆಲಿಸಿದಳು.

ಕೊನೆಗೆ ಅವನೇ ಅಂದ:

"ಅದಿರಲಿ, ಇನ್ನು ನಮ್ಮ ಕೆಲಸದ ವಿಚಾರ."

ಸ್ವರ ಬದಲಾಯಿಸಿತು. ಮುಖಭಾವ ಹೆಚ್ಚು ಗಂಭೀರವಾಯಿತು. ಕಾರಖಾನೆಯೊಳಕ್ಕೆ ಸಾಹಿತ್ಯವನ್ನು ಒಯ್ಯಲು ಆಕೆ ಯೋಚಿಸಿದ್ದ ಹಂಚಿಕೆ ಯಾವುದೆಂದು ಯೆಗೋರ್ ಕೇಳಿದ. ಆತನಿಗೆ ಎಲ್ಲ ವಿವರಗಳ ಜ್ಞಾನವಿದ್ದುದನ್ನು ಕಂಡು ತಾಯಿಗೆ ಆಶ್ಚರ್ಯವಾಯಿತು.

ಆ ವಿಷಯದ ಮಾತುಕತೆ ಮುಗಿದ ಮೇಲೆ, ಮತ್ತೊಮ್ಮೆ ಅವರು ತಮ್ಮ

ಹುಟ್ಟೂರಿನ ನೆನಪುಗಳನ್ನು ಪ್ರಾರಂಭಿಸಿದರು. ಆತ ತಮಾಷೆಯಾಗಿ ಮಾತಾಡಿದ. ಆಕೆ ಗತಜೀವನವನ್ನು ನೆನೆಸಿಕೊಳ್ಳುತ್ತಿದ್ದಳು. ಮಣ್ಣಿನ ಗುಡ್ಡೆಗಳ ನಡುವೆ, ಸಣ್ಣ ಪೊದೆಗಳು, ಭೀತಿಯಿಂದ ನಡುಗುತ್ತಿದ್ದ ತೆಳ್ಳನೆಯ ಮರಗಳು ಹರಡಿಕೊಂಡಿದ್ದ ಜವುಗು ಪ್ರದೇಶಕ್ಕೂ ತನ್ನ ಜೀವನಕ್ಕೂ ವಿಚಿತ್ರ ಹೋಲಿಕೆ ಇದ್ದಂತೆ ಆಕೆಗೆ ತೋರಿತು. ಆ ಮರಗಳು ನಿಧಾನವಾಗಿ ಬೆಳೆಯುತ್ತಿದ್ದುವು. ಅಂಥ ಮಣ್ಣಿನಲ್ಲಿ ಐದು ವರ್ಷಗಳಿದ್ದ, ಬಳಿಕ, ಬಿದ್ದು ಕೊಳೆಯುತ್ತಿದ್ದುವು. ಒಳಗಣ್ಣಿ ನೋಟದಿಂದ ಅದನ್ನಾಕೆ ಕಾಣುತ್ತಿದ್ದಳು. ಕನಿಕರ ಹಿರಿದಾಗಿ ಆಕೆಯ ಹೃದಯದಲ್ಲಿ ತುಂಬಿ ಬಂತು. ಮತ್ತೆ ಆಕೆಯ ಕಣ್ಣ ಮುಂದೆ ಒಬ್ಬ ಎಳೆಯ ಹುಡುಗಿಯ ಆಕೃತಿ ಗೋಚರವಾಯಿತು. ತೀಕ್ಷ್ಣವಾದ ಹಟಮಾರಿತನದ ಮುಖದ ಹುಡುಗಿ ಆಕೆ. ಒದ್ದೆಯಾದ ಮಂಜು ಕಣಗಳ ಮೇಲೆ, ಆಕೆ ಒಂಟಿಯಾಗಿ ಪ್ರಯಾಸದ ಹಾದಿಯಲ್ಲಿ ನಡೆದು ಹೋಗುತ್ತಿದ್ದಳು.... ಮಗನಾದರೋ ಸೆರೆಮನೆಯಲ್ಲಿದ್ದ.... ಪ್ರಾಯಶಃ ಅವನಿನ್ನೂ ನಿದ್ರಿಸದೇ ಇರಬಹುದು. ಮಲಗಿಕೊಂಡು ಯೋಚಿಸುತ್ತಿದ್ದಾನೇನೊ.... ಯೋಚನೆ ತಾಯಿಯಾದ ತನ್ನ ವಿಷಯವಲ್ಲ. ಈಗ ಆತನಿಗೆ ಹೆಚ್ಚು ಪ್ರಿಯಳಾದ ಇನ್ನೊಬ್ಬಳಿದ್ದಾಳೆ.... ಆಕೆಯ ನೊಂದ ಮನಸ್ಸಿನ ಯೋಚನೆಗಳು ಮುರುಕು ಮೋಡಗಳಂತೆ ಬಂದು ಕತ್ತಲೆಯಲ್ಲಿ ಆಕೆಯ ಅಂತರಾತ್ಮವನ್ನು ಆವರಿಸಿದುವು.

"ನೀವು ಬಳಲಿದ್ದೀರಿಯಮ್ಮಾ ಇನ್ನು ನಿದ್ದೆ ಹೋಗೋಣ," ಎಂದು ಯೆಗೋರ್ ಮುಗುಳ್ನಗೆ ಬೀರುತ್ತ ಹೇಳಿದ.

ಆಕೆ "ಒಳ್ಳೆಯದಪ್ಪ" ಎಂದು, ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು, ಅಡುಗೆ ಮನೆಯೊಳಕ್ಕೆ ನುಸುಳಿದಳು. ತೀಕ್ಷ್ಣವಾದ ಖೇದದಿಂದ ಆಕೆಯ ಹೃದಯ ತುಂಬಿಕೊಂಡಿತ್ತು.

...ಮಾರನೆಯ ದಿನ ಪ್ರಾತಃಕಾಲ ಉಪಾಹಾರದ ವೇಳೆಯಲ್ಲಿ ಯೆಗೋರ್ ಹೇಳಿದ:

"ಅವರು ನಿಮ್ಮನ್ನ ಹಿಡಿದು ನಿಲ್ಲಿಸಿದರೂಂತಿಟ್ಕೊಳ್ಳಿ. ನಿಲ್ಲಿಸಿ ಆ ರಾಜದ್ರೋಹದ ಕರಪತ್ರಗಳು ಎಲ್ಲಿಂದ ಬಂದುವು ಎಂತ ಕೇಳಿದರೆ ಏನು ಹೇಳುತ್ತೀರಿ?"

"ನೀವ್ಯಾರು ಕೇಳೋಕೆ ಅಂತೀನಿ," ಎಂದು ತಾಯಿ ಉತ್ತರವಿತ್ತಳು.

"ಊಹೂಂ! ಅವರು ಅದಕ್ಕೆ ಒಪ್ಪೋದಿಲ್ಲ ಅನಿಸುತ್ತೆ. ಕೇಳುವ ಅಧಿಕಾರ ತಮಗಿದೆ ಅಂತ ಅವರಿಗೆ ಖಡಾಖಂಡಿತವಾಗಿ ಗೊತ್ತಿದೆ. ಅವರು ಬಹಳ ಹೊತ್ತಿನವರೆಗೆ ನಿಮ್ಮನ್ನ ಕೇಳ್ತಾನೇ ಇರ್ತಾರೆ; ತೊಂದರೆ ಕೊಡ್ತಾರೆ."

"ಆದರೆ ನಾನು ಹೇಳೋದೇ ಇಲ್ಲ."

"ಜೈಲಿಗೊಯ್ತಾರೆ."

"ಆದರೇನಂತೆ? ಸದ್ಯಃ ಅಷ್ಟಕ್ಕಾದರೂ ಯೋಗ್ಯಳಾಗಿದೀನಲ್ಲ – ದೇವರ ದಯು," ಎಂದು ನಿಟ್ಟುಸಿರು ಬಿಟ್ಟು ಆಕೆ ಹೇಳಿದಳು. "ನನ್ನ ಅಗತ್ಯ ಯಾರಿಗಿದೆ?

ನಾನ್ಯಾರಿಗೆ ಬೇಕಾಗಿದೆ? ಯಾರಿಗೂ ಇಲ್ಲ. ಅವರು ನನಗೇನೂ ಹಿಂಸೆ ಕೊಡಲಾರರು...."

"ಹುಂ! ಇಲ್ಲ, ಅವರು ನಿಮಗೆ ಹಿಂಸೆ ಕೊಡೋದಿಲ್ಲ. ಆದರೂ ಒಳ್ಳೆಯ ಜನರು ತಮ್ಮನ್ನು ತಾವು ರಕ್ಷಿಸಿಕೊಳ್ಳಬೇಕು," ಎಂದು ಯೆಗೋರ್ ಆಕೆಯ ಕಡೆ ಗಮನವಿಟ್ಟು ನೋಡುತ್ತ ಹೇಳಿದ.

ಸಲಿಗೆಯಿಂದ "ಮಾತಿನಲ್ಲಿ ಒಳ್ಳೇ ಜಾಣರು ನೀವು," ಎಂದು ಕಿರುನಗೆ ಬೀರಿ ತಾಯಿ ಉತ್ತರವಿತ್ತಳು.

ಯೆಗೋರ್ ಏನೂ ಹೇಳದೆ ಕೊಠಡಿಯಲ್ಲಿ ಓಡಾಡತೊಡಗಿದ:

"ಕಷ್ಟಾಮ್ಮ, ನಿಮಗೆ ಅದೆಷ್ಟು ಕಷ್ಟವಾಗುತ್ತೇಂತ ನನಗೆ ಗೊತ್ತು."

"ಕಷ್ಟ ಯಾರಿಗಿಲ್ಲ ಹೇಳಿ?" ಎಂದು ತಾಯಿ ಕೈ ಬೀಸುತ್ತ ಕೇಳಿದಳು. "ಬಹುಶಃ ಇದನ್ನೆಲ್ಲಾ ಅರ್ಥ ಮಾಡಿಕೊಳ್ಳೋವರಿಗೆ ಹೆಚ್ಚು ಸುಲಭವಾಗಿರಬಹುದು. ಆದರೆ ಸ್ವಲ್ಪ ಸ್ವಲ್ಪವಾಗಿ ನನಗೂ ಅರ್ಥವಾಗ್ತಿದೆ. ಒಳ್ಳೆ ಮನುಷ್ಯರು ಪ್ರಯತ್ನಪಟ್ಟು ಮಾಡ್ತಿರೋ ಕೆಲಸ ಏನೂಂತ ತಿಳಿಕೋತಾ ಇದೀನಿ."

"ಅಷ್ಟು ತಿಳೀತು ಅಂದ ಮೇಲೆ, ಪ್ರತಿಯೊಬ್ಬರಿಗೂ ನಿಮ್ಮ ಅಗತ್ಯವಿರುತ್ತಮ್ಮ – ಪ್ರತಿಯೊಬ್ಬರಿಗೂ!" ಎಂದು ಆತ ಗಂಭೀರವಾಗಿ ಹೇಳಿದನು.

ಅವನತ್ತ ನೋಡಿ ಆಕೆ ಮುಗುಳ್ನಕ್ಕಳು.

ಮಧ್ಯಾಹ್ನ ಆಕೆ ಕಾರಖಾನೆಗೆ ಹೋಗಲು ಸಿದ್ಧವಾದಳು. ಕರಪತ್ರಗಳನ್ನು ತನ್ನ ಉಡುಪಿನೊಳಗೆ, ಸುತ್ತಾಗಿ, ಗುರುತು ಸಿಗದಂತೆ ಬಚ್ಚಿಟ್ಟುಕೊಂಡಳು. ಆಕೆಯ ಜಾಣ್ಮೆಯ ಸಿದ್ಧತೆಯನ್ನು ಪರೀಕ್ಷಿಸುತ್ತಿದ್ದ ಯೆಗೋರ್ ಸಮಾಧಾನದಿಂದ ನಾಲಿಗೆ ಚಪ್ಪರಿಸಿದ.

"ಜೇರ್ ಗೂತ್*! ಪೀಪಾಯಿ ಬೀರು ಕುಡಿದಾಗ ಜರ್ಮನ್ನನು ಹೇಳೋದು ಹೀಗೆ. ಈ ಸಾಮಗ್ರಿ ನಿಮ್ಮನ್ನು ಏನೇನೂ ಬದಲಾಯಿಸಿಲ್ಲವಮ್ಮ. ನೀವು ದಿನಾಲೂ ಇರೋ ಹಾಗೇ ಇದೀರಾ. ನಡು ವಯಸ್ಸಿನ, ಸ್ವಲ್ಪ ದಪ್ಪನಾಗಿರುವ, ಎತ್ತರದ ಹೆಂಗಸು. ಯಾವ ಓಲಗ ವಾದ್ಯವೂ ಇಲ್ದೆ ಮಾಡಿರೋ ಈ ನಿಮ್ಮ ಆರಂಭಕ್ಕೆ, ಆ ಸಹಸ್ರ ದೇವರೆಲ್ಲಾ ಆಶೀರ್ವಾದ ಕೊಡಲಿ!"

ಅರ್ಧ ಗಂಟೆಯ ತರುವಾಯ ಆಕೆ ಕಾರಖಾನೆಯ ಹೆಬ್ಬಾಗಿಲ ಬಳಿ, ಶಾಂತ ಳಾಗಿ ಆತ್ಮವಿಶ್ವಾಸದಿಂದ, ಬುಟ್ಟಿಗಳ ಭಾರದಿಂದ ಕೆಳಗೆ ಬಾಗುತ್ತ, ನಿಂತಳು. ಇಬ್ಬರು ಕಾವಲುಗಾರರು, ಕಾರಖಾನೆಯೊಳಕ್ಕೆ ಪ್ರವೇಶಿಸುತ್ತಿದ್ದವರನ್ನೆಲ್ಲ ಒರಟೊರಟಾಗಿ ತಡವಿ ಪರೀಕ್ಷಿಸುತ್ತಿದ್ದರು. ಹೀಗೆ ಪರೀಕ್ಷೆಮಾಡಿಸಿಕೊಂಡವರಿಂದ ಲೇವಡಿ ಬೈಗಳು ಉಡುಗೊರೆಯಾಗಿ ಕಾವಲುಗಾರರಿಗೆ ದೊರೆಯುತ್ತಿದ್ದುವು. ಕೂಲಿಕಾರರು ಅವರನ್ನು ಗೇಲಿಮಾಡುತ್ತಿದ್ದರು. ಒಂದು ಪಕ್ಕದಲ್ಲಿ ಒಬ್ಬ ಪೋಲೀಸನೂ ಕೆಂಪು ಮೋರೆಯ,

---

* ಜರ್ಮನ್ ಭಾಷೆಯಲ್ಲಿ ಭೇಷ್ ಭೇಷ್ ಎಂದರ್ಥ. – ಅನು.

ಕಾಗೆ ಕಣ್ಣಿನ, ಉದ್ದಗಾಲಿನ ಒಬ್ಬ ಮನುಷ್ಯನೂ ನಿಂತಿದ್ದರು. ತಾಯಿ ತನ್ನ ಕಾವಡಿಯನ್ನು ಭುಜದಿಂದ ಭುಜಕ್ಕೆ ಬದಲಾಯಿಸಿಕೊಂಡು, ಹುಬ್ಬಿನ ಕೆಳಗಿಂದ ದೃಷ್ಟಿ ಬೀರುತ್ತ ಉದ್ದಗಾಲಿನವನನ್ನು ಗಮನಿಸಿ ನೋಡಿದಳು. ಅವನೊಬ್ಬ ಗೂಢಚಾರನಿರಬೇಕೆಂದು ಆಕೆ ಊಹಿಸಿದಳು.

"ದೆವ್ವಗಳಿರಾ! ನೀವು ನಮ್ಮ ತಲೆಗಳನ್ನು ಶೋಧಿಸ್ಬೇಕು; ಜೇಬುಗಳನ್ನಲ್ಲ," ಎಂದು, ಎತ್ತರದ ಗುಂಗುರು ಕೂದಲಿನ ಕಾರ್ಮಿಕನೊಬ್ಬ, ಕಾವಲುಗಾರರು ತನ್ನನ್ನು ಪರೀಕ್ಷಿಸುತ್ತಿದ್ದಾಗ ಹೇಳಿದ.

"ನಿಮ್ಮ ತಲೆಯಲ್ಲಿರೋದು ಹೇನು ಮಾತ್ರ" ಎಂದು ಕಾವಲುಗಾರರಲ್ಲಿ ಒಬ್ಬನಿಂದ ಉತ್ತರ ಬಂತು.

"ನೀವು ಮೀನು ಹಿಡಿಯೋದರ ಬದಲು ಹೇನಾದ್ರು ಹಿಡೀರಿ," ಎಂದು ಆ ಕಾರ್ಮಿಕನಿಂದ ಮಾರುತ್ತರ ಬಂತು.

ಗೂಢಚಾರ ಆ ಮನುಷ್ಯನ ಕಡೆ ತನ್ನ ದೃಷ್ಟಿಯನ್ನು ಬೀರುತ್ತಾ, ಒಮ್ಮೆ ಜಿಗುಪ್ಸೆಯಿಂದ ಎಂಜಲುಗುಳ್ಳಿದ.

"ನನಗೆ ದಾರಿ ಬಿಡೀಪ್ಪ. ಇಷ್ಟೊಂದು ಭಾರ ಹೊತ್ತು ಬೆನ್ನು ಮೂಳೆ ಮುರೀತಾ ಇರೋದು ನಿಮಗೆ ಕಾಣಿಸೋದಿಲ್ವೆ?" ಎಂದು ತಾಯಿ ಹೇಳಿದಳು.

"ಹೋಗು, ಹೋಗು! ವಟಗುಟ್ಬೇಡ," ಎಂದು ಕಾವಲುಗಾರ ರೇಗಿದ.

ತಾಯಿ ತನ್ನ ಸ್ಥಳವನ್ನು ತಲಪಿದ ಬಳಿಕ, ಬುಟ್ಟಿಗಳನ್ನು ನೆಲದ ಮೇಲಿರಿಸಿದಳು. ಮುಖದ ಮೇಲಿದ್ದ ಬೆರವನ್ನು ಒರಸಿಕೊಂಡಳು. ಸುತ್ತೂ ದೃಷ್ಟಿ ಬೀರಿದಳು.

ಮೆಕ್ಯಾನಿಕ್‌ರಾದ ಗೂಸೆವ್ ಸೋದರಿಬ್ಬರೂ ತಕ್ಷಣ ಆಕೆಯ ಬಳಿಗೆ ಬಂದರು.

ಅವರಲ್ಲಿ ಹಿರಿಯನಾದ ವಸೀಲಿಯ್ ಹುಬ್ಬು ಗಂಟಿಕ್ಕಿ, "ಪಿರಗಿ* ಇವೆಯೇ?" ಎಂದು ಕೇಳಿದ.

"ನಾಳೆ ತರ್ತೀನಿ," ಎಂದು ಆಕೆ ಉತ್ತರ ಕೊಟ್ಟಳು.

ಇದು ಮೊದಲೇ ಗೊತ್ತಾಗಿದ್ದ ಸಂಕೇತದ ಮಾತು. ಸೋದರರ ಮುಖಗಳು ಹೊಳೆಯಲಾರಂಭಿಸಿದುವು.

"ಓಹೊ! ಎಷ್ಟು ಅದ್ಭುತ!" ಎಂದು ಇವಾನ್ ಕೂಗಿದ.

ಬುಟ್ಟಿಯಲ್ಲಿ ಏನಿದೆಯೆಂದು ವಸೀಲಿಯ್ ನೋಡಲು ಕುಳಿತ. ಹಾಗೆಯೇ ಕರಪತ್ರಗಳ ಒಂದು ಕಟ್ಟನ್ನು ಅವನು ಕೋಟಿನೊಳಕ್ಕೆ ಇಳಿಬಿಟ್ಟ.

ಗಟ್ಟಿ ಧ್ವನಿಯಲ್ಲಿ ಅವನೆಂದ:

"ಇವಾನ್! ಈಗ ಮನೆಗೆ ಹೋಗೋದು ಬೇಡ; ಈಕೆಯಿಂದಲೇ ಊಟ ತಗೊಳ್ಳೋಣ."

---

*ಒಂದು ಬಗೆಯ ಕಡುಬು. – ಅನು.

ಹೀಗೆ ಮಾತಾಡುತ್ತ, ಇನ್ನೊಂದು ಕಟ್ಟನ್ನು ತನ್ನ ಬೂಟಿನ ಮೇಲ್ಭಾಗದೊಳಗೆ ಆತ ತುರುಕಿಕೊಂಡ.

"ಹೊಸ ವ್ಯಾಪಾರಿಗೆ ಪ್ರೋತ್ಸಾಹಕೊಡೋದು ಬೇಡವಾ?" ಎಂದನು.

"ಅದೇ ಸರಿ!" ಎಂದನು ಇವಾನ್ ನಗುತ್ತ .

"ಬಿಸಿ ಸೂಪ್. ಕೋಸ್‌ಗೆಡ್ಡೆ ಸೂಪ್," ಎಂದು ತಾಯಿ ಕೂಗಿದಳು.

ಮರೆಯಲ್ಲಿ ಒಂದೊಂದಾಗಿಯೇ ಕಟ್ಟುಗಳನ್ನು ತೆಗೆಯುತ್ತ ಆಕೆ ಅವುಗಳನ್ನು ಆ ಸೋದರರಿಬ್ಬರಿಗೆ ತಲುಪಿಸಿದಳು. ಆಕೆಯ ಕೈಯಿಂದ ಮಾಯವಾದ ಒಂದೊಂದು ಕಟ್ಟಿಗೂ ಒಮ್ಮೊಮ್ಮೆ ಆ ಅಧಿಕಾರಿಯ ಅರಸಿನ ಮುಖ, ಗೀರಿದ ಕಡ್ಡಿಯ ಬೆಂಕಿ ಯಂತೆ, ಆಕೆಯೆದುರು ಕಾಣುತ್ತಿತ್ತು.

ಆಕೆ ತನ್ನಷ್ಟಕ್ಕೆ ತಾನೇ, "ಇಗೋ ತಗೋ ನಮ್ಮಪ್ಪಾ!" ಎಂದು ಹೇಳಿ ಹಿಗ್ಗು ತ್ತಿದ್ದಳು.

ಒಂದು ಕಟ್ಟಾದಮೇಲೆ ಇನ್ನೊಂದು ಕಟ್ಟು.

"ಇದನ್ನು ಕೂಡ!"

ಕೆಲಸಗಾರರು ಕೈಗಳಲ್ಲಿ ಪಾತ್ರೆಗಳನ್ನು ಹಿಡಿದುಕೊಂಡು ಬಂದರು. ಹತ್ತಿರ ಯಾರಾದರೂ ಬಂದೊಡನೆ, ಇವಾನ್ ಗೂಸೆವ್ ಗಟ್ಟಿಯಾಗಿ ನಗುತ್ತಿದ್ದ. ಆಗ ತಾಯಿ ಕರಪತ್ರದ ಕಟ್ಟು ಕೊಡುವುದನ್ನು ನಿಲ್ಲಿಸುತ್ತಿದ್ದಳು. ತನ್ನ ಸೂಪ್ ಪಾತ್ರೆಗೆ ಕೈ ಹಾಕುತ್ತಿದ್ದಳು.

"ನೀವು ಜಾಣರು, ಪೆಲಗೇಯ ನೀಲೊವ್ನ!" ಎಂದು ಸೋದರರು ನಗು ತ್ತಿದ್ದರು.

ಹತ್ತಿರ ನಿಂತಿದ್ದ ಕುಲುಮೆಗಾರನೊಬ್ಬ ಸಿಟ್ಟಿನಿಂದ ಹೇಳಿದ:

"ಬೇರೇನು ಮಾಡಿಯಾಳು, ಪಾಪ! ಸಂಪಾದಿಸಿ ಆಕೆಯನ್ನು ಸಾಕುತ್ತಿದ್ದ ಮಗನನ್ನು ಎಳಕೊಂಡು ಹೋದ್ರು – ಆ ಸೂಳೆ ಮಕ್ಕಳು!... ಎಲ್ಲಮ್ಮ, ನನಗೆ ಮೂರು ಕೊಪೆಕ್‌ನ ಸೂಪ್ ಕೊಡು.... ನೀನೇನೂ ಚಿಂತಿಸ್ಬೇಡ, ತಾಯಿ. ನಿನ್ನ ಜೀವನ ಹೇಗಾ ದರೂ ಸಾಗುತ್ತೆ!"

"ಹಾಗೇ ಆಗಲಿ, ಒಳ್ಳೆ ಮಾತು ಹೇಳಿದ ನಿಮ್ಮ ಹೊಟ್ಟೆ ತಣ್ಣಗಿರಲಿ, ನಮ್ಮಪ್ಪ" ಎಂದು ಮುಗುಳ್ನಗುತ್ತ ತಾಯಿ ಉತ್ತರಿಸಿದಳು.

"ಒಳ್ಳೇ ಮಾತು ಹೇಳೋಕೆ ನಮ್ಮದೇನು ಖರ್ಚಾಗ್ತದೆ?" ಎಂದು ಗೊಣಗುತ್ತ ಅವನು ಪಕ್ಕಕ್ಕೆ ಸರಿದು ಹೋದ.

"ಬಿಸಿ ಬಿಸಿ ಸಾರು! ಪಾಯಸ! ಅಂಬಲಿ! ಯಾರಿಗ್ಬೇಕ್?" ಎಂದು ಪೆಲಗೇಯ ಕೂಗಿದಳು.

ಕರಪತ್ರಗಳನ್ನು ದಾಟಿಸಿದ ಆ ಮೊದಲ ಅನುಭವದ ವಿಷಯವಾಗಿ ತಾನು ತನ್ನ ಮಗನಿಗೆ ಹೇಗೆ ತಿಳಿಸಬೇಕೆಂಬುದನ್ನು ಯೋಚಿಸುತ್ತಾ ಆಕೆ ಕುಳಿತಳು. ಆದರೂ

ಆಕೆಯ ಮನಸ್ಸಿನ ಹಿಂದೆ, ಆ ಅಧಿಕಾರಿಯ ದಿಗ್ಭ್ರಮೆಗೊಂಡ ಕ್ರುದ್ಧವಾದ ಅರಸಿನ ಮುಖ ಸುಳಿದಾಡುತ್ತಿತ್ತು. ಅವನ ಕರಿಯ ಮೀಸೆ ಗಾಬರಿಯಿಂದ ಕುಣಿಯುತ್ತಿತ್ತು. ವಕ್ರಿಸಿದ್ದ ತುಟಿಗಳ ಕೆಳಗಿಂದ ಕಚ್ಚಿಕೊಂಡಿದ್ದ ಹಲ್ಲು ಕಾಣಿಸುತ್ತಿತ್ತು. ಆಕೆಯ ಹೃದಯ ದಲ್ಲಾದರೋ ಆನಂದ, ಹಕ್ಕಿಯಂತೆ ರಾಗವೆಳೆಯುತ್ತಿತ್ತು. ಆಕೆಯು ತನ್ನ ಹುಬ್ಬು ಗಳನ್ನು ಬಿಲ್ಲಿನಂತೆ ಬಾಗಿಸುತ್ತ, ವ್ಯಾಪಾರದಲ್ಲಿ ನಿರತಳಾಗಿ, "ಇಗೋ, ತಗೋ – ಸರಿಹೋಯ್ತಾ?" ಎನ್ನುತ್ತಿದ್ದಳು.

೧೬

ಆ ದಿನ ಸಾಯಂಕಾಲ ತಾಯಿ ಚಾ ಕುಡಿಯುತ್ತಿದ್ದಾಗ, ಹೊರಗೆ ಕೆಸರಿನಲ್ಲಿ ಕುದುರೆ ಲಾಳದ ಬಡಿಯುವಿಕೆಯ ಸಪ್ಪಳ ಆಕೆಗೆ ಕೇಳಿಸಿತು. ಆಮೇಲೆ ಒಂದು ಪರಿಚಿತ ಧ್ವನಿಯು ಕೇಳಿಬಂದಿತು. ಆಕೆ ಜಿಗಿದು ಎದ್ದು, ಅಡುಗೆ ಮನೆಯ ಮೂಲಕ ಬಾಗಿಲಿನೆಡೆಗೆ ಧಾವಿ ಸಿದಳು. ಬಾಗಿಲ ಬಳಿ ಒಂದು ತೀವ್ರ ಹೆಜ್ಜೆಯ ಸಪ್ಪಳವಾಯಿತು. ಕಣ್ಣಿಗೆ ಕತ್ತಲು ಬಂದ ಹಾಗಾಯಿತು. ಆಧಾರಕ್ಕೆಂದು ಬಾಗಿಲಿನ ನಿಲುವಿಗೆ ಒರಗಿಕೊಂಡು, ಪಾದದ ಸಹಾಯದಿಂದ ಆಕೆ ಬಾಗಿಲನ್ನು ತೆರೆದಳು.

"ನಮಸ್ಕಾರ, ತಾಯೀ!" ಎಂದು ಪರಿಚಯದ ಸ್ವರ ಕೇಳಿಬಂದಿತು. ನೀಳವಾದ ತೆಳ್ಳನೆಯ ತೋಳುಗಳು ಆಕೆಯ ಭುಜವನ್ನು ಸುತ್ತುಗಟ್ಟಿದುವು.

ಆಂದ್ರೇಯನ್ನು ಕಂಡೊಡನೆ ಆಕೆಯ ಹೃದಯವು ಆಶಾಭಂಗದಿಂದಲೂ ಆನಂದ ದಿಂದಲೂ ಮಿಡುಕಿತು. ಇವೆರಡೂ ಭಾವನೆಗಳು ಒಂದುಗೂಡಿ, ದೊಡ್ಡದೊಂದು ವ್ಯಾಪಕವಾದ ಭಾವೋದ್ರೇಕವಾಯಿತು. ಪ್ರೀತಿಯ ತೆರೆಯೊಂದು, ಆಕೆ ತಲೆಬಾಗಿಸಿ ಅಂದ್ರೇಯನ ಭುಜಕ್ಕೆ ಮುಖ ಆನಿಸುವವರೆಗೂ, ಮೇಲೆ ಮೇಲಕ್ಕೆ ಆಕೆಯನ್ನು ಒಯ್ದಿತು. ನಡುಗುತ್ತಿದ್ದ ತೋಳುಗಳಿಂದ ಅವಳನ್ನು ಆತ ಬಿಗಿಯಾಗಿ ಹಿಡಿದ. ತಾಯಿ ಮೆಲ್ಲನೆ ಅಳತೊಡಗಿದಳು.

"ಅಳಬೇಡಿ, ತಾಯಿ, ಇಷ್ಟು ದುಃಖಪಡಬೇಡಿ. ಅವನನ್ನು ಬೇಗನೆ ಬಿಟ್ಟು ಬಿಡ್ತಾರೆ, ಖಂಡಿತ! ಅವನ ಮೇಲೆ ಒಂದು ಆರೋಪವೂ ರುಜುವಾತಾಗಿಲ್ಲ – ಪ್ರತಿ ಯೊಬ್ಬರೂ ಬೆಂದ ಮೀನಿನ ಹಾಗೆ ಮೌನವಾಗಿದ್ದಾರೆ...." ಎಂದು ಅಂದ್ರೇಯ್, ತಾಯಿಯ ತಲೆಗೂದಲನ್ನು ಸವರುತ್ತಾ ಸಂತೈಸಿದ.

ತಾಯಿಯ ಭುಜಗಳ ಮೇಲೆ ತನ್ನ ತೋಳನ್ನು ಸುತ್ತುವರಿಸಿ, ಇನ್ನೊಂದು ಕೊಠಡಿಗೆ ಆಕೆಯನ್ನು ಅವನು ಕರೆದೊಯ್ದು. ಆತನಿಗೇ ಬಿಗಿಯಾಗಿ ತಾಗಿಕೊಂಡು ಆಕೆ ನಿಂತಳು. ಅಳಲಿನಷ್ಟೇ ಶೀಘ್ರ ಚಲನೆಯಿಂದ ಕಣ್ಣೀರನ್ನು ಒರೆಸಿಕೊಳ್ಳುತ್ತಾ, ಅವನ ಪ್ರತಿಯೊಂದು ಮಾತನ್ನೂ ಅತ್ಯಾಸೆಯಿಂದ ಆಕೆ ಕೇಳುತ್ತಿದ್ದಳು.

"ಪಾವೆಲ್ ನಮಸ್ಕಾರ ತಿಳಿಸಿದ್ದಾನಮ್ಮ. ಎಷ್ಟರ ಮಟ್ಟಿಗೆ ಸಾಧ್ಯವೋ ಅಷ್ಟರ ಮಟ್ಟಿಗೆ ಆತ ಆರೋಗ್ಯವಾಗಿದ್ದಾನೆ; ಸುಖವಾಗಿದ್ದಾನೆ. ಅಲ್ಲಿ ಜನರ ಗುಂಪು ಗುಂಪೇ

ಇದೆ! ಶಹರದವರನ್ನೂ ನಮ್ಮವರನ್ನೂ ಸೇರಿ ನೂರಕ್ಕೂ ಹೆಚ್ಚು ಜನರನ್ನು ಹಿಡಿದು ತಂದಿದ್ದಾರೆ. ಒಂದೊಂದು ಕೋಣೇಲೂ ಮೂರು ನಾಲ್ಕು ಜನರನ್ನ ಇರಿಸಿ ಬೀಗ ತಗಲಿಸಿದ್ದಾರೆ. ಜೈಲಿನ ಮುಖ್ಯಸ್ಥರೆಲ್ಲ ತಕ್ಕಮಟ್ಟಿಗೆ ಒಳ್ಳೆಯವರೇ. ಈ ಸೈತಾನ ಪೋಲೀಸರು ಕೊಡುತ್ತಿರೋ ಕೆಲಸದಿಂದ ಅವರೂ ಸುಸ್ತಾಗಿದ್ದಾರೆ. ಮೇಲಧಿಕಾರಿಗಳು ಅಷ್ಟೇನೂ ಕಟ್ಟುನಿಟ್ಟಾಗಿಲ್ಲ. ಅವರು ಯಾವಾಗಲೂ 'ಸ್ವಲ್ಪ ಸುಮ್ಮನಿರಿಯಪ್ಪ, ಸದ್ಯಃ ನಮ್ಮನ್ನು ತೊಂದರೆಗೆ ಸಿಲುಕಿಸ್ಬೇಡಿ ಅಷ್ಟೆ' ಅನ್ನುತ್ತಲೇ ಇರ್ತಾರೆ. ಹೀಗೆ ಎಲ್ಲ ಕೆಲಸವೂ ಸರಾಗವಾಗಿ ಚೆನ್ನಾಗಿ ನಡೀತಿದೆ. ನಮ್ಮವರೆಲ್ಲ ಒಟ್ಟಾಗಿ ಮಾತಾಡ್ತಿರ್ತಾರೆ. ಪುಸ್ತಕಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ತಾರೆ. ತಿಂಡೀನ ಹಂಚಿಕೋತಾರೆ. ಅದೊಂದು ಒಳ್ಳೇ ಜೈಲು – ಹಳೇದು, ಕೊಳಕಾಗಿದೆ. ಆದರೆ ಅಲ್ಲಿರೋರಿಗೆ ಸುಲಭವಾಗಿದೆ. ಬೇರೆ ಕ್ರಿಮಿನಲ್ ಕೈದಿಗಳೂ ಒಳ್ಳೆಯವರೇ. ನಮಗೆ ತುಂಬಾ ಸಹಾಯ ಮಾಡ್ತಾರೆ. ಈಗ ಬೂಕಿನ್, ನಾನು ಮತ್ತು ಇನ್ನೂ ನಾಲ್ಕು ಜನರನ್ನು ಬಿಟ್ಟಿದ್ದಾರೆ. ಪಾವೆಲ್‌ನ ಸರತಿಯೂ ಬೇಗನೆ ಬರುತ್ತಮ್ಮ; ಅದು ಖಾತ್ರಿಯಾಗಿದೆ. ನಿಕೊಲಾಯ್ ಹೊರ ಬರೋದು ಕೊನೇಗೆ. ಅವನು ಅವರನ್ನು ಹಾಗೆಲ್ಲ ಶಪಿಸಿದ್ದಕ್ಕೆ ಪ್ರತಿಯಾಗಿ ಅಷ್ಟಾದರೂ ಮಾಡದೆ ಇರ್ತಾರೆಯೆ? ಆ ಪೋಲಿಸರಿಗೆ ಅವನನ್ನು ಕಂಡರಾಗೋದಿಲ್ಲ! ಅವನನ್ನ ವಿಚಾರಣೆಗೆ ಇಡ್ತಾರೆ ಅಥವಾ ಒಮ್ಮೆ ಹಿಡಿದು ಚೆನ್ನಾಗಿ ಹೊಡೀತಾರೆ! 'ಸುಮ್ಮಿರು, ನಿಕೊಲಾಯ್! ನೀನೆಷ್ಟು ಶಾಪ ಕೊಟ್ಟರೇನು – ಅವರು ಸುಧಾರಿಸ್ತಾರಾ?' ಅಂತ ಪಾವೆಲ್ ಹೇಳ್ತಾನೇ ಇರ್ತಾನೆ. 'ಹುಣ್ಣಿನಲ್ಲಿರೋ ಕೀವು ಹಿಂಡಿದ ಹಾಗೆ ಅವರ್ನೆಲ್ಲಾ ಭೂಮಿಯಿಂದಲೇ ತೊಡೆದು ಹಾಕ್ತೀನಿ!' ಎಂತ ನಿಕೊಲಾಯ್ ಬೊಬ್ಬಿಡ್ತಾನೆ. ಪಾವೆಲ್‌ನ ನಡತೆ ತುಂಬಾ ಗಂಭೀರ; ದೃಢವಾಗಿ ಕ್ರಮವಾಗಿ ಇರ್ತಾನೆ. ಅವನನ್ನ ಬೇಗನೆ ಬಿಟ್ಬಿಡ್ತಾರೆ ಅನ್ನೋದು ಖಂಡಿತ.... ...."

"ಬೇಗನೆ!" ಎಂದು ತಾಯಿ ಎಳೆಯ ಮುಗುಳ್ನಗು ಬೀರುತ್ತ ತಾನೂ ಧ್ವನಿಗೂಡಿಸಿದಳು. "ಬೇಗನೆ ಬಿಡ್ತಾರೇಂತ ನಾನೂ ನಂಬಿದೀನಿ!" ಎಂದಳು.

"ಎಲ್ಲ ಸರಿಹೋಗುತ್ತೆ ಹಾಗಾದರೆ! ಹುಂ. ಇನ್ನು ನನಗೊಂದು ಲೋಟ ಚಾ ಕೊಟ್ಟು ನೀವು ಇಷ್ಟು ದಿವಸ ಹೇಗಿದ್ರಿ ಅಂತ ಹೇಳಬಾರದಾ?"

ದೀರ್ಘವಾಗಿ ಮುಗುಳ್ನಗುತ್ತ ಆತ ತಾಯಿಯ ಕಡೆ ನೋಡಿದ. ಆ ದೃಷ್ಟಿ ಮೃದುವಾಗಿತ್ತು, ದಯಾಪೂರ್ಣವಾಗಿತ್ತು. ದುಃಖದ ನೆರಳು ಆವರಿಸಿದ್ದ ಆ ಕಣ್ಣುಗಳಲ್ಲಿ ಪ್ರೀತಿಯ ಬೆಳಕು ಮಿನುಗುತ್ತಿತ್ತು.

ವಿಚಿತ್ರವಾಗಿ ಅತಿಯಾಗಿ ಬೆಳೆದಿದ್ದ ಆ ಕರಿ ಗಡ್ಡದ ಪೊದೆಯು ಅವನ ತೆಳ್ಳಗಿನ ಮುಖವನ್ನು ಆಕೆ ಗಮನಿಸುತ್ತಾ, "ಅಂದ್ರ್ಯೂಷ! ನಿನ್ನ ಮೇಲೆ ನನಗೆ ತುಂಬ ಪ್ರೀತಿಯಪ್ಪ" ಎಂದಾಕೆ ನಿಟ್ಟುಸಿರುಬಿಟ್ಟಳು.

ಕುರ್ಚಿಯ ಮೇಲೆ ಕುಳಿತು ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಾ ಅವನೆಂದನು:

"ನನ್ನ ಸಂತೋಷಪಡಿಸೋಕೆ ಹೆಚ್ಚು ಬೇಕಾ? ಒಂದು ಚೂರು ಇದ್ದರಾಯ್ತು. ನೀವು ನನ್ನ ಪ್ರೀತಿಸ್ತೀರಿ ಅನ್ನೋದು ಗೊತ್ತು. ಪ್ರತಿಯೊಬ್ಬರನ್ನೂ ಪ್ರೀತಿಸೋ ಪಷ್ಟು ದೊಡ್ಡದಾಗಿದೆ ನಿಮ್ಮ ಹೃದಯ."

ಸ್ವರವೇರಿಸಿ ಆಕೆ ಉತ್ತರವಿತ್ತಳು:

"ನಿನ್ನ ಮೇಲಿನ ಪ್ರೀತಿ ವಿಶೇಷವಪ್ಪಾ.! ನಿನಗೊಬ್ಬಳು ತಾಯಿ ಇದ್ದಿದ್ದರೆ, ಇಂಥ ಮಗ ಇರೋದನ್ನ ನೋಡಿ ಎಷ್ಟು ಜನ ಅವಳ ವಿಷಯವಾಗಿ ಅಸೂಯೆ ಪಡ್ತಿದ್ದರೋ !"

ಹೊಹೋಲ್ ತಲೆಯಲುಗಿಸಿ ತನ್ನೆರಡೂ ಕೈಗಳಿಂದ ಅದನ್ನು ಗಟ್ಟಿಯಾಗಿ ಉಜ್ಜಿಕೊಂಡನು.

"ನನ್ನ ತಾಯಿಯೂ ಎಲ್ಲೋ ಒಂದು ಕಡೆ ಇದಾಳೆ" ಎಂದನಾತ. ಕುಗ್ಗಿತ್ತು ಅವನ ಸ್ವರ.

"ಇವತ್ತು ನಾನೇನು ಮಾಡಿದೆ ಗೊತ್ತಾ?" ಎಂದು ಆಕೆ ಪ್ರಾರಂಭಿಸಿದಳು. ಕಾರಖಾನೆಗೆ ಕರಪತ್ರಗಳನ್ನು ತಾನು ಹೇಗೆ ಒಯ್ದೆನೆಂಬ ಉತ್ಸಾಹದ ವಿವರಣೆಯನ್ನು ಆಕೆ ಕೊಟ್ಟಳು. ಆನಂದ ಮತ್ತು ಉತ್ಸುಕತೆಯಲ್ಲಿ ತನ್ನ ಮಾತುಗಳನ್ನು ತಿರುಗಿಸುತ್ತ ಕತೆಯ ಸ್ವಾರಸ್ಯವನ್ನಾಕೆ ಹೆಚ್ಚಿಸಿದಳು.

ಮೊದಲು ಆತ ಆಶ್ಚರ್ಯದಿಂದ ಕಣ್ಣರಳಿಸಿದ. ಆಮೇಲೆ ಖೋ ಎಂದು ನಗಲಾರಂಭಿಸಿದ.

"ಓಹೋ !" ಎಂದನಾತ ಸಂತೋಷದಿಂದ ಕೂಗಾಡುತ್ತಾ, "ಅದು ಸರಿ ಹಾಗಾದರೆ! ಹಾಗಿರಬೇಕು! ಇದರಿಂದ ಪಾವೆಲ್‌ಗೆ ಎಷ್ಟೊಂದು ಸಂತೋಷ ಆಗೋದಿಲ್ಲ? ಭೇಷ್ ಕೆಲಸ ಮಾಡಿದಿರಿ, ತಾಯಿ! ಪಾವೆಲ್ ಹಾಗೂ ಎಲ್ಲರೂ ಖುಷಿಯಾಗ್ತಾರೆ !"

ಆತನ ಇಡೀ ಶರೀರ ಹಿಂದುಮುಂದಕ್ಕೆ ತೂಗಾಡಿತು. ಆತನು ಬೆರಳುಗಳ ನೆಟಿಕೆ ಮುರಿದ. ಸಿಳ್ಳುಹಾಕಲಾರಂಬಿಸಿದ. ತಾಯಿಯಿಂದ ಬಲವತ್ತರವಾದ ಪೂರ್ಣವಾದ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತಿತ್ತು ಆ ಸಂತೋಷ.

"ನೀನು ಪುಣ್ಯಾತ್ಮನಪ್ಪ ಅಂದ್ರ್ಯೂಷ" ಎಂದಳಾಕೆ.

ಮುನ್ನುಗ್ಗಿಕೊಂಡು, ಚೆಲ್ಲಾಡಿಕೊಂಡು, ಬುಗ್ಗೆಬುಗ್ಗೆಯಾಗಿ, ಶಾಂತ ಆನಂದದಿಂದ ಮಿನುಗುವ ಶಬ್ದಗಳ ಧಾರೆಯನ್ನು ಹರಿಯಬಿಡಲು ಹೃದಯ ತೆರೆದಂತಾಗಿತ್ತು ಆಕೆಗೆ.

"ನನ್ನ ಜೀವನದ ವಿಷಯ ಯೋಚಿಸ್ದಾಗ, ಓ ದಯಾಮಯ ಏಸು, ನಾನು ಯಾಕಪ್ಪಾ ಬದುಕ್ದೆ? ಅನಿಸುತ್ತೆ ದುಡಿಮೆ.... ಹೊಡೆತ.... ಗಂಡನ ವಿನಾ ಯಾರನ್ನೂ ನೋಡಲಿಲ್ಲ. ಹೆದರಿಕೆ ವಿನಾ ಬೇರೇನೂ ಗೊತ್ತಿರ್ಲಿಲ್ಲ! ಪಾವೆಲ್ ಹ್ಯಾಗೆ ಬೆಳೆದ ಅನ್ನೋದೂ ಗೊತ್ತಾಗಲಿಲ್ಲ. ನನ್ನ ಗಂಡ ಬದುಕಿದ್ದಾಗ ನಾನು ಪಾವೆಲ್‌ನನ್ನು ಪ್ರೀತಿಸ್ತಿದ್ದೆನೋ ಇಲ್ಲವೋ, ಅದೂ ತಿಳೀದು. ನನ್ನ ಯೋಚನೆಯೆಲ್ಲಾ ಚಿಂತೆಯೆಲ್ಲಾ

ಇದ್ದದ್ದು ಒಂದೇ ವಿಷಯುವಾಗಿ – ಆ ನನ್ನ ಗಂಡನೆಂಬ ಪ್ರಾಣಿಗೆ ಒಳ್ಳೇ ಊಟ ಬೇಯಿಸಿ ಹಾಕೋದು; ಒಂದು ನಿಮಿಷವೂ ತಡವಾಗದ ಹಾಗೆ, ಅವನ ಬಯಕೆ ಯನ್ನೆಲ್ಲ ಪೂರೈಸೋದು; ಇಷ್ಟೆಲ್ಲಾ, ಅವನು ಸಿಟ್ಟಿಗೇಳದಿರಲಿ, ಹೊಡೀದಿರಲಿ, ಒಂದು ದಿವಸವಾದರೂ ಕನಿಕರ ತೋರಿಸಲೀಂತ! ಆದರೆ ಒಂದು ದಿನವೂ ಆತ ಕನಿಕರ ತೋರಿಸಿದ್ದು ನಾನು ಕಾಣೆ. ಹೆಂಡತಿಯನ್ನಲ್ಲ, ತನಗೆ ದ್ವೇಷವಿರೋವರ ನ್ನೆಲ್ಲಾ ಬಡೀತಿದ್ದ ಹಾಗೆ ಭಾವಿಸಿಕೊಂಡು ನನ್ನನ್ನ ಹೊಡೀತಿದ್ದ, ಇಪ್ಪತ್ತು ವರ್ಷ ಕಾಲ ಹೀಗೆ ನಾನು ಬದುಕ್ದೆ. ನನ್ನ ಮದುವೆಗೆ ಮುಂಚೆ ಹ್ಯಾಗಿದ್ದೆನೋ ಅದರ ನೆನಪು ಕೂಡಾ ನನಗಿಲ್ಲ. ಅದನ್ನೆಲ್ಲಾ ಯೋಚಿಸೋಕೆ ಪ್ರಯತ್ನಿಸಿದಾಗ ಕುರುಡರ ಹಾಗೆ ಆಗುತ್ತೆ. ಏನೂ ಕಾಣಿಸೋದಿಲ್ಲ. ಇಲ್ಲಿದ್ದ ಯೆಗೋರ್ ಇವಾನೊವಿಚ್ – ನಾವಿ ಬ್ಬರೂ ಒಂದೇ ಊರಿನವರು. ಆತ ಈ ವಿಷಯ ಆ ವಿಷಯ ಮಾತನಾಡಿದ, ನನಗೆ ಮನೆಗಳು ನೆನಪಾಗ್ತವೆ, ಜನರು ನೆನಪಾಗ್ತಾರೆ, ಆದರೆ ಅವರು ಹೇಗೆ ಜೀವನ ನಡೆ ಸ್ತಿದ್ದರು? ಏನು ಮಾತಾಡ್ತಿದ್ದರು? ಅವರಿಗೆಲ್ಲ ಏನಾಯಿತು? ಅನ್ನೋದೇ ನೆನ ಪಿಲ್ಲ. ಒಮ್ಮೆ ಒಂದು ಬೆಂಕಿ ಬಿದ್ದ ಜ್ಞಾಪಕ. ಎರಡು ಬೆಂಕಿ. ಎಲ್ಲವನ್ನೂ ನನ್ನಿಂದ ತೊಡೆದು ಹಾಕಿ, ಕುರುಡು ಮೂಕಳನ್ನಾಗಿ ಮಾಡಿ ಭದ್ರವಾಗಿ ಬಿಗಿದ ಹಾಗಿದೆ...."

ನೀರಿನಿಂದ ಹೊರಕ್ಕೆಳೆದ ಮೀನಿನ ಹಾಗೆ ಆಕೆ ಉಸಿರಿಗಾಗಿ ಚಡಪಡಿಸಿದಳು. ಮುಂದೆ ಬಾಗಿ ತಗ್ಗಿದ ಸ್ವರದಲ್ಲಿ ಮುಂದುವರಿಸಿದಳು:

"ನನ್ನ ಗಂಡ ತೀರ್ಕೊಂಡ. ನನ್ನ ಮಗನ ಕಡೆಗೆ ನಾನು ತಿರುಗಿದೆ. ಆದರೆ ಅವನು ಈ ಕೆಲಸದಲ್ಲಿ ತೊಡಗಿದ್ದ. ನನಗೆ ಸಂಕಟವೆನಿಸಿತು. ಅವನ ವಿಷಯದಲ್ಲಿ ಕನಿಕರವೆನಿಸಿತು. ಅವನಿಗೇನಾದರೂ ಆದರೆ, ನಾನು ಬದುಕೋದು ಹ್ಯಾಗೆ? ಅವನಿಗೆ ಏನಾಗಬಹುದೂಂತ ನೆನಸಿಕೊಂಡಾಗ ನಾನೆಷ್ಟು ಹೆದರಿಕೆಯಿಂದ ನಡುಗ್ತಿದ್ದೆ, ನನ್ನ ಗುಂಡಿಗೆ ಬಿರೀತಿತ್ತು...."

ಕ್ಷಣ ಕಾಲ ಆಕೆ ಸುಮ್ಮನಿದ್ದಳು. ಆಮೇಲೆ ತಲೆಯಾಡಿಸುತ್ತಾ ತುಂಬಾ ಭಾವ ಗರ್ಭಿತವಾಗಿ ಮುಂದುವರಿಸಿದಳು.

"ಹೆಂಗಸರಾದ ನಮ್ಮ ಪ್ರೇಮ ಶುದ್ಧ ಪ್ರೇಮವಲ್ಲ. ನಮಗೇನು ಬೇಕೋ ಅದನ್ನು ನಾವು ಪ್ರೀತಿಸ್ತೇವೆ. ಆದರೆ ನೀನು, ನಿನ್ನ ತಾಯಿಗಾಗಿ ಎಷ್ಟೊಂದು ದುಃಖ ಪಡ್ತೀಯಾ. ಆಕೆ ಏನುಮಾಡಿದಳೂಂತ? ಈ ಇತರರೆಲ್ಲ ಇಡೀ ಜನತೆಗಾಗಿ ಎಷ್ಟೊಂದು ಕಷ್ಟ ಸಹಿಸ್ತಾರೆ, ಜೈಲಿಗೆ ಹೋಗ್ತಾರೆ, ಸೈಬೀರಿಯಕ್ಕೂ ಕೂಡಾ.... ಸಾಯ್ತಾರೆ ಸಹಾ.... ಎಳೇ ಹುಡುಗೀರು ಇಷ್ಟು ದೂರ ರಾತ್ರೆ ಹೊತ್ತು, ಕೆಸರಲ್ಲಿ, ಮಳೆಯಲ್ಲಿ, ಹಿಮದಲ್ಲಿ, ಒಂಟಿಯಾಗಿ ನಡೆದು ಬರ್ತಾರೆ. ದೂರ ಕಡಮೆಯೆ? – ಶಹರದಿಂದ ಐದು ಮೈಲಿ ನಮ್ಮ ಮನೆಗೆ! ಅವರನ್ನು ಪ್ರೇರೇಪಿಸೋದು ಯಾರು? ಅವರು ಯಾಕೆ ಹಾಗೆ ಮಾಡ್ತಾರೆ? ಶುದ್ಧವಾದ ಮಹಾಪ್ರೇಮ ಅದರಲ್ಲಿ ಇರೋದರಿಂದಲೇ ಹಾಗೆ ಮಾಡ್ತಾರೆ. ಅವರಿಗೆ ನಂಬಿಕೆ! ಆದರೆ ನನ್ನಿಂದ ಅಂಥ ಪ್ರೇಮ ಸಾಧ್ಯವಿಲ್ಲ! ನಾನು ನನ್ನದನ್ನೇ ಪ್ರೀತಿಸೋದು! ನನಗೆ ಸಮೀಪವಾದ್ದನ್ನೇ!"

ಬೇರೆ ಕಡೆ ತಿರುಗಿ, ತನ್ನ ಪದ್ಧತಿಯಂತೆ, ತನ್ನ ತಲೆಯನ್ನೂ ಕೆನ್ನೆಗಳನ್ನೂ ಕಣ್ಣುಗಳನ್ನೂ ಕೈಗಳಿಂದ ಉಜ್ಜಿಕೊಂಡು ಹೊಹೋಲ್ ಹೇಳಿದನು:

"ಯಾಕಾಗದು? ನೀವೂ ಪ್ರೀತಿಸಬಲ್ಲಿರಿ. ತನಗೆ ಸಮೀಪವಾಗಿರೋದನ್ನು ಪ್ರತಿಯೊಬ್ಬರೂ ಪ್ರೀತಿಸ್ತಾರೆ. ಆದರೆ ವಿಶಾಲ ಹೃದಯ, ದೂರವಿದ್ದದ್ದನ್ನು ಹತ್ತಿರವಾಗಿ ಮಾಡಿಕೊಳ್ಳುತ್ತೆ. ನಿಮ್ಮಲ್ಲಿ ಮಹಾ ಮಾತೃ ಪ್ರೇಮವಿದೆಯಮ್ಮ; ಆದ್ದರಿಂದ ನೀವೂ ದೊಡ್ಡ ದೊಡ್ಡ ಕೆಲಸಗಳನ್ನು ಮಾಡಬಲ್ಲಿರಿ."

ಉಸಿರೆಳೆಯುತ್ತ ಆಕೆ ಉತ್ತರವಿತ್ತಳು:

"ದೇವರ ದಯದಿಂದ ಹಾಗಾಗಲಪ್ಪ. ಬದುಕಬೇಕಾದ ಒಳ್ಳೆಯ ರೀತಿ ಇದೂಂತ ನಂಬಿದೀನಿ. ಅಂದ್ರೇಯ್! ನಿನ್ನ ಬಹುಶಃ ಪಾಷನಿಗಿಂತಲೂ ಹೆಚ್ಚು ಪ್ರೀತಿಸ್ತೀನಿ. ಅವನು ತನ್ನಷ್ಟಕ್ಕೆ ತಾನೇ ಇರ್ತಾನೆ. ಇಲ್ನೋಡು, ಸಾಷನ ಮದವೆಯಾಗೋ ಇಚ್ಛೆ ಅವನಿಗೆ. ಆದರೆ ನನಗೆ, ತಾಯಿಗೆ, ಒಂದು ಮಾತಾದರೂ–"

"ಅದು ನಿಜವಲ್ಲ," ಎಂದು ಹೊಹೋಲ್ ಆಕ್ಷೇಪಿಸಿದ."ಅದು ನಿಜವಲ್ಲಾಂತ ನನಗೆ ಖಂಡಿತ ಗೊತ್ತು, ಆತ ಅವಳನ್ನು ಪ್ರೀತಿಸ್ತಾನೆ; ಆಕೆ ಅವನನ್ನು ಪ್ರೀತಿಸ್ತಾಳೆ– ಅದು ನಿಜ. ಆದರೆ ಅವರು ಖಂಡಿತ ಮದುವೆ ಮಾಡ್ಕೊಳ್ಳೋಲ್ಲ. ಆಕೆಗೆ ಮದುವೆ ಮಾಡಿಕೊಳ್ಳೋ ಇಷ್ಟ ಇರಬಹುದು. ಆದರೆ ಅವನಿಗೆ ಒಪ್ಪಿಗೆಯಿಲ್ಲ."

"ಹೀಗೋ ಹಾಗಾದರೆ," ಎಂದು ತಾಯಿ ವಿಚಾರಮಗ್ನಳಾಗಿ ದುಃಖದ ದೃಷ್ಟಿಯಿಂದ ಹೊಹೋಲ್‌ನ ಮುಖವನ್ನು ನೋಡುತ್ತ, ಹೇಳಿದಳು. "ಹೀಗೋ ಹಾಗಾದರೆ, ಜನರು ತಮ್ಮ ಸುಖವನ್ನೇ ನಿರಾಕರಿಸೋದಾ...."

"ಪಾವೆಲ್ ಒಬ್ಬ ಅಪೂರ್ವ ವ್ಯಕ್ತಿ. ಉಕ್ಕಿನಂಥ ದೃಢ ಮನಸ್ಸಿನ ವ್ಯಕ್ತಿ," ಎಂದು ಮೃದುಸ್ವರದಲ್ಲಿ ಹೊಹೋಲ್ ಹೇಳಿದನು.

ಯೋಚನೆಯಲ್ಲಿ ಮಗ್ನಳಾಗಿಯೇ ತಾಯಿ ಮುಂದುವರಿಸಿದಳು:

"ಈಗ ಆತ ಜೈಲಲ್ಲಿ ಕೂತಿದ್ದಾನೆ. ಅದೇನೋ ಭಯ ಹುಟ್ಟಿಸುವಂಥಾದ್ದೇ. ಆದರೆ ಅಷ್ಟೇನೂ ಹೆಚ್ಚಿನದಲ್ಲ ಬಿಡು. ಜೀವನ ಇರೋ ರೀತಿ ಬೇರೆ. ನನ್ನ ಹೆದರಿಕೆ ಬೇರೆ ರೀತಿಯದು. ನಾನು ಕಳವಳಪಡೋದು ಎಲ್ಲರಿಗಾಗಿ. ನನ್ನ ಹೃದಯವೂ ಬೇರೆಯಾಗಿದೆ. ಯಾಕೆಂದರೆ ನನ್ನ ಆತ್ಮ ಹೃದಯದ ಕಣ್ಣನ್ನು ತೆರೆದಿದೆ. ಹೊರಗೆ ನೋಡಿ ಹೃದಯಕ್ಕೆ ದುಃಖವಾಗ್ತದೆ; ಸಂತೋಷವೂ ಆಗ್ತದೆ ಅನ್ನು. ನನಗೆ ತಿಳೀದ ವಿಷಯಗಳು ಎಷ್ಟೋ ಇವೆ. ನೀವು ದೇವರಲ್ಲಿ, ನಂಬಿಕೆ ಇಟ್ಟಿಲ್ಲ ಅನ್ನೋದೊಂದು ನನಗೆ ತುಂಬ ನೋವಿನ ವಿಷಯ. ಆದರೆ ಆ ವಿಚಾರದಲ್ಲಿ ನಾನೇನು ಮಾಡೋಕಾಗುತ್ತೆ? ನೀವೆಲ್ಲರೂ ನಿಜಕ್ಕೂ ಒಳ್ಳೆಯವರು ಅನ್ನೋದನ್ನು ನೋಡ್ತಿದೀನಿ, ಜನರಿಗಾಗಿ, ಬಯಸಿ ಕಷ್ಟದ ಜೀವನ ಕೈಕೊಂಡಿದೀರಿ. ಸತ್ಯಕ್ಕಾಗಿ ಯಾತನೆಯ ಜೀವನ ನಡೆಸ್ತಿದೀರಿ. ಈಗ ನಿಮ್ಮ ಸತ್ಯ ಏನನ್ನೋದು ನನಗೆ ಗೊತ್ತಾಗ್ತಿದೆ: ಧನಿಕರಾದ ಜನರು ಇರುವವರೆಗೂ ಸಾಮಾನ್ಯ ಜನರಿಗೆ ಏನೂ ದೊರೆಯೋದಿಲ್ಲ. ಅವರಿಗೆ ಸುಖವಿಲ್ಲ,

ನ್ಯಾಯವಿಲ್ಲ – ಏನೂ ಇಲ್ಲ! ನಿಮ್ಮೆಲ್ಲರ ನಡುವೆ ನಾನು ಈಗ ಬಾಳ್ತಿರೋದರಿಂದ, ಒಮ್ಮೊಮ್ಮೆ ರಾತ್ರೆ ಹೊತ್ತು ಹಿಂದಿನ ಜೀವನದ ವಿಷಯ ಯೋಚಿಸ್ತೀನಿ. ನನ್ನ ಎಳೇ ಶಕ್ತಿ, ಬೂಟಿನ ಕೆಳಗೆ ಪುಡಿಯಾದ್ದನ್ನ ನೆನೆಸಿಕೋತೀನಿ. ನನ್ನ ಎಳೇ ಹೃದಯಾನ ಗುದ್ದಿ ಮುದ್ದೆ ಮಾಡಿದ್ದನ್ನ ನೆನಸಿಕೋತೀನಿ. ನನ್ನ ವಿಷಯದಲ್ಲೇ ಕನಿಕರ ಉಂಟಾ ಗುತ್ತೆ; ದ್ವೇಷವೇಳುತ್ತೆ. ಆದರೆ ಈಗ ಜೀವಿಸೋದು ನನಗೆ ಸುಲಭವಾಗ್ತಿದೆ. ನಾನಿರೋ ರೀತಿ ಸ್ವಲ್ಪಸ್ವಲ್ಪವಾಗಿ ಸ್ಪಷ್ಟವಾಗಿ ಕಾಣಿಸ್ತಿದೆ."

ಎತ್ತರವಿದ್ದ ತೆಳ್ಳನಾಗಿದ್ದ ಹೊಹೋಲ್ ಎದ್ದು ನಿಂತು, ಯೋಚನಾಮಗ್ನ ನಾಗಿ, ಶಬ್ದ ಮಾಡದಂತೆ ಎಚ್ಚರವಹಿಸುತ್ತ, ಶತಪಥ ತುಳಿದ.

ಮೃದುವಾಗಿ ಉದ್ಗರಿಸಿದನಾತ:

"ಎಷ್ಟು ಚೆನ್ನಾಗಿ ಹೇಳಿದಿರಿ. ಎಷ್ಟು ಚೆನ್ನಾಗಿ! ಕೆರ್ಚ್‌ನಲ್ಲೊಬ್ಬ ಎಳೆಯ ಯೆಹೂದಿ ಕವಿತೆ ಬರೀತಿದ್ದ. ಒಮ್ಮೆ ಅವನು,

"ಅನ್ಯಾಯವಾಗಿ ಕೊಲೆಯಾದವರೆ,
ಕೇಳಿ, ಸತ್ಯದ ಶಕ್ತಿ ನೀಡುವುದು
ನಿಮಗೆ ಪುನರ್ಜನ್ಮ"

ಎಂದು ಕವಿತೆ ಬರೆದ. ಕೆರ್ಚ್‌ನಲ್ಲಿ ಸ್ವತಃ ಅವನನ್ನು ಪೋಲೀಸರು ಕೊಂದರು.... ಅದು ಮುಖ್ಯವಲ್ಲ.... ಆತ ಸತ್ಯವನ್ನು ತಿಳಿದು ಅದರ ಬೀಜಗಳನ್ನು ಜನರ ನಡುವೆ ಬಿತ್ತಿದ. ಹಾಗೆ, 'ಅನ್ಯಾಯವಾಗಿ ಕೊಲೆಯಾದವರಲ್ಲಿ' ನೀವೂ ಒಬ್ಬಳು...."

"ಆದರೆ ನಾನೀಗ ಮಾತಾಡ್ತಿದೀನಿ" ಎಂದಳು ತಾಯಿ, ಮಾತು ಮುಂದು ವರಿಸುತ್ತ: "ನಾನು ಮಾತಾಡ್ತೀನಿ. ನನ್ನ ಮಾತುಗಳಿಗೇ ನಾನೇ ಕಿವಿಗೊಡ್ತೀನಿ. ನನ್ನ ಕಿವಿಗಳನ್ನೇ ನಂಬೋಕಾಗೋಲ್ಲ. ಇಡೀ ಜೀವಮಾನವೆಲ್ಲಾ ನಾನು ಯೋಚಿಸಿದ ವಿಷಯ ಒಂದೇ – ಯಾರೂ ನನ್ನನ್ನು ಕೆಣಕದ ಹಾಗೆ ಇನ್ನೊಂದು ಹೊಸ ದಿನವನ್ನ ಕಳೆಯೋದು ಹ್ಯಾಗೆ? ನನ್ನ ಇರುವು ಯಾರಿಗೂ ಗೊತ್ತಾಗದ ಹಾಗೆ ಬದುಕಿನ ಆ ದಿವಸವನ್ನು ಮುಗಿಸೋದು ಹ್ಯಾಗೆ? ಆದರೆ ಈಗ ನನ್ನ ತಲೆ, ಬೇರೆ ಜನರ ವಿಚಾರ ಗಳಿಂದ ತುಂಬಿದೆ. ನಿಮ್ಮ ಧ್ಯೇಯದ ವಿಷಯ ನನಗೆ ಸರಿಯಾಗಿ ತಿಳೀದೇನೂ ಇರ ಬಹುದು. ಆದರೆ ನೀವೆಲ್ಲರೂ ನನಗೆ ಪ್ರಿಯರಾದವರು. ನಿಮ್ಮೆಲ್ಲರ ವಿಷಯದಲ್ಲಿ ಆತಂಕ ನನಗೆ. ನೀವೆಲ್ಲರೂ ಸುಖವಾಗಿರ್ಬೇಕು ಅನ್ನೋದೆ ನನ್ನ ಆಸೆ. ಅಂದ್ರ್ಯೂಷ, ನಿನ್ನ ವಿಷಯದಲ್ಲಂತೂ ವಿಶೇಷ ಕಳವಳವಪ್ಪ."

"ನಿಮಗೆ ಕೃತಜ್ಞನಮ್ಮ," ಎಂದು ಅವನು ಆಕೆಯ ಬಳಿಗೆ ಬಂದ.

ಆಕೆಯ ಕೈಯನ್ನು ತನ್ನ ಕೈಯಲ್ಲಿರಿಸಿಕೊಂಡು, ಬಲವಾಗಿ ಅದುಮಿ, ಮತ್ತೆ ಹಿಂತಿರುಗಿ ಬೇಗನೆ ಅತ್ತ ಸರಿದ. ಭಾವೋದ್ರೇಕದಿಂದ ಆಯಾಸಗೊಂಡ ತಾಯಿ

ಮೆಲ್ಲನೆ ಮೌನವಾಗಿ, ತನ್ನ ಹೃದಯದಲ್ಲಿದ್ದ ಶಾಂತವಾದ ಆನಂದ ಕುರಿತು ಯೋಚಿಸುತ್ತಾ, ಚಹದ ಬಟ್ಟಲುಗಳನ್ನು ತೊಳೆದಳು.

ಹಿಂದಕ್ಕೂ ಮುಂದಕ್ಕೂ ನಡೆದಾಡುತ್ತಿದ್ದ ಹೊಹೋಲ್ ಹೇಳಿದ:

"ನಿಕೊಲಾಯ್ ವಿಷಯದಲ್ಲಿ ನೀವು ಸ್ವಲ್ಪ ಆದರ ತೋರಿಸಬೇಕಮ್ಮ. ಕೆಲಸಕ್ಕೆ ಬಾರದ ಕುಡುಕ ಮುದುಕ – ಅವರಪ್ಪ – ಜೈಲಲ್ಲಿದ್ದಾನೆ. ನಿಕೊಲಾಯ್ ಕಿಟಕಿಯಲ್ಲಿ ಅವನನ್ನು ಕಂಡರೆ ಸಾಕು, ಶಪಿಸೋಕೆ ಶುರು. ಅದು ಸರಿಯಲ್ಲ. ನಿಕೊಲಾಯ್ ಸ್ವಭಾವತಃ ದಯಾಳು – ನಾಯಿ ಇಲಿ ಎಲ್ಲ ತರದ ಪ್ರಾಣಿಗಳನ್ನೂ ಪ್ರೀತಿಸ್ತಾನೆ. ಆದರೆ ಜನರನ್ನ ದ್ವೇಷಿಸ್ತಾನೆ! ಮನುಷ್ಯನಿಗೆ ಏನಾಗುತ್ತೆ ಅಂತ ಸ್ವಲ್ಪ ನೋಡು!"

"ಅವನ ತಾಯಿ ಹೋದಳು.... ತಂದೆ ಕಳ್ಳ, ಕುಡುಕ...." ಎಂದು ತಾಯಿ ರಾಗವೆಳೆದಳು.

ಅಂದ್ರೇಯ್ ಮಲಗಲು ಹೋದಾಗ ತಾಯಿಯು ಅವನ ಕಡೆ ನೋಡಿ ಅರಿವಿಲ್ಲದೇ ಶಿಲುಬೆಯ ವಂದನೆ ಮಾಡಿದಳು.

ಆತನು ಮಲಗಿದ ಸುಮಾರು ಅರ್ಧ ಗಂಟೆ ತರುವಾಯ ಆಕೆ ಮೃದುವಾಗಿ "ನಿದ್ರೆ ಬಂತೆ ಅಂದ್ರ್ಯೂಷ?" ಎಂದು ಕೇಳಿದಳು.

"ಇಲ್ಲ, ಯಾಕಮ್ಮ?"

"ಸುಮ್ಮನೆ. ಮಲಕೋ, ನಿದ್ದೆ ಬರಲಿ."

"ಹೂನಮ್ಮ, ಹೂಂ."

## ೧೭

ಮಾರನೆಯ ದಿನ, ಪೆಲಗೇಯ ಕಾರಖಾನೆಯ ಹೆಬ್ಬಾಗಿಲ ಬಳಿಗೆ ಬಂದಾಗ, ಕಾವಲುಗಾರರು ಆಕೆಯನ್ನು ಒರಟಾಗಿ ತಡೆದರು. ಬುಟ್ಟಿಗಳನ್ನು, ಶೋಧಿಸುವುದಕ್ಕಾಗಿ ಕೆಳಗಿಡಬೇಕೆಂದು ಆಜ್ಞಾಪಿಸಿದರು.

ತನ್ನ ಮೈಮೇಲಿನ ಉಡುಪನ್ನು ಅವರು ಒರಟೊರಟಾಗಿ ತಡವಿ ನೋಡುತ್ತಿದ್ದಾಗ, ಶಾಂತಳಾಗಿಯೇ "ತಿಂಡಿಯೆಲ್ಲಾ ತಣ್ಣಗಾಗಿಹೋಗುತ್ತೆ" ಎಂದು ತಾಯಿ ಪ್ರತಿಭಟಿಸಿದಳು.

ಕಾವಲುಗಾರ ಸಿಟ್ಟಿನಿಂದ "ಮುಚ್ಚು ಬಾಯಿ!" ಎಂದನು.

ಇನ್ನೊಬ್ಬ ಕಾವಲುಗಾರ ಆಕೆಯ ಭುಜ ಮುಟ್ಟಿ ಮೆಲ್ಲನೆ ನೂಕುತ್ತಾ "ನಾನ್ಹೇಳ್ತೀನಿ ಕೇಳಯ್ಯ. ಅವರು ಬೇಲಿಯ ಮೇಲಿಂದ ಒಳಕ್ಕೆ ಎಸೀತಾರೆ, ಅಷ್ಟೆ" ಎಂದ.

ಅಂತೂ ಆಕೆ ಒಳಕ್ಕೆ ಬಂದಳು. ಆಕೆಯ ಬಳಿಗೆ ವೃದ್ಧ ಸಿಜೋವ್‌ನೇ ಮೊದಲು ಬಂದ.

ನಾಲ್ಕು ಸುತ್ತೂ ನೋಡುತ್ತ ಅವನು ಮೆಲ್ಲನೆ ನುಡಿದ:

"ಕೇಳಿದೆಯೇನಮ್ಮ ಸಮಾಚಾರ?"

"ಏನು?"

"ಕರಪತ್ರಗಳು ಮತ್ತೆ ಕಾಣಿಸಿಕೊಂಡಿವೆ. ರೊಟ್ಟಿ ಮೇಲೆ ಉಪ್ಪು ಹರಡಿದ ಹಾಗೆ ಎಲ್ಲ ಕಡೆ ಹರಡಿವೆ. ಝುಡ್ಡಿಯೋ, ದಸ್ತಗಿರಿಯೋ! ಕರಪತ್ರಗಳು ತಪ್ಪೋದಿಲ್ಲ. ನನ್ನ ಅಳಿಯ ಮಾಜಿನ್ನನ್ನು ಜೈಲಿಗೆ ಸೇರಿಸಿದ್ರು–ಯಾಕಾಗಿ? ನಿನ್ನ ಮಗನನ್ನೂ ಒಯ್ದರು. ಆದರೆ ಕರಪತ್ರ ಬರೋದಕ್ಕೆ ಅವರು ಕಾರಣ ಅಲ್ಲಾಂತ ಈಗ ಎಲ್ಲರಿಗೂ ತಿಳಿಯೋದಿಲ್ವೆ?"

ಅವನು ತನ್ನ ಗಡ್ಡವನ್ನು ಬಿಗಿಯಾಗಿ ಹಿಡಿದು ಆಕೆಯನ್ನು ದಿಟ್ಟಿಸಿ, "ಒಬ್ಬಳೇ ಇದ್ದು ಬೇಸರವೇನೋ ಪಾಪ. ಯಾವತ್ತಾದರೂ ನಮ್ಮನೆ ಕಡೆ ಬಾ...." ಎಂದನು.

ಹಾಗೆ ಆಹ್ವಾನಿಸಿದ್ದಕ್ಕೆ ಅವನಿಗೆ ವಂದಿಸಿ ತಾಯಿ, ತಾನು ತಂದಿದ್ದ ತಿಂಡಿಗಾಗಿ ಗಿರಾಕಿಗಳನ್ನು ಕೂಗಿ ಕರೆಯತೊಡಗಿದಳು. ಕಾರಖಾನೆಯೊಳಗೆ ವಿಶೇಷ ಗದ್ದಲವಿದ್ದು ದನ್ನು ಆಕೆ ಕಂಡುಕೊಂಡಳು. ಜನರು ಗುಂಪುಗುಂಪಾಗಿಯೂ ಪ್ರತ್ಯಪ್ರತ್ಯೇಕವಾಗಿಯೂ ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ಓಡಾಡುತ್ತಿದ್ದರು. ಹೊಗೆ ತುಂಬಿದ್ದ ಆ ದಟ್ಟನೆಯ ವಾತಾವರಣದಲ್ಲಿ ಧೈರ್ಯದ್ದು, ಸಾಹಸದ್ದು, ಏನೋ ಇದೆ ಎಂದು ಆಕೆಗೆ ಭಾಸವಾಯಿತು. ಇಲ್ಲೊಮ್ಮೆ ಅಲ್ಲೊಮ್ಮೆ ವ್ಯಂಗ್ಯೋಕ್ತಿಗಳೂ ಪ್ರೋತ್ಸಾಹದ ಉದ್ಗಾರಗಳೂ ಕೇಳಿಬರುತ್ತಿದ್ದುವು. ಕೂಲಿಗಾರರಲ್ಲಿ ಹಿರಿಯರಾದವರು ಯಾರಿಗೂ ಕಾಣದಂತೆ ಮುಗುಳ್ನಗುತ್ತಿದ್ದರು. ಕಾರಖಾನೆಯ ಅಧಿಕಾರಿಗಳು ಚಿಂತೆ ತುಂಬಿದ್ದ ಮುಖವೆತ್ತಿಕೊಂಡು ವೇಗವೇಗವಾಗಿ ನಡೆಯುತ್ತಿದ್ದರು. ಪೋಲೀಸರು ಅತ್ತಿತ್ತ ಓಡಾಡುತ್ತಿದ್ದರು. ಗುಂಪಾಗಿ ನಿಂತಿದ್ದ ಕೂಲಿಕಾರರು, ಅವರನ್ನು ಕಂಡಾಗ ಚೆದರಿ ಹೋಗುತ್ತಿದ್ದರು; ಇಲ್ಲವೆ, ರೋಷದಿಂದ ಕಿವುಚಿಕೊಂಡಿದ್ದ ಅವರ ಮುಖಗಳನ್ನು ಮೌನವಾಗಿ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದರು.

ಜಳಜಳ ಸ್ನಾನ ಮಾಡಿ ಹೊರಬಂದ ಹಾಗಿದ್ದರು ಆ ಕೂಲಿಕಾರರೆಲ್ಲ. ಎತ್ತರದ ಹಿರಿಯ ಗೂಸೆವ್ ತಾಯಿಯ ಮುಂದುಗಡೆಯಿಂದಲೇ ನಡೆದು ಹೋದ. ನಗುತ್ತ ಲಿದ್ದ ಆತನ ತಮ್ಮ, ಅಣ್ಣನ ಹಿಂದೆಯೇ ಅಂಟಿಕೊಂಡು ಅಡ್ಡಾದಿಡ್ಡಿಯಾಗಿ ನಡೆದಿದ್ದ.

ಮರಗೆಲಸ ವಿಭಾಗದ ಮೇಸ್ತ್ರಿ ವವೀಲೊವ್ ಮತ್ತು ಟೈಂ ಕೀಪರ್ ಇಸಾಯ್ ಆ ಹಾದಿಯಾಗಿ ಬಂದರು. ಕಿರಿಯ ಕುಳ್ಳ ಆಕೃತಿಯ ಟೈಂ ಕೀಪರ್ ಸುತ್ತಲೂ ನೋಡುತ್ತ, ತಲೆಯೆತ್ತಿ ಮೇಸ್ತ್ರಿಯ ಗಂಭೀರ ಮುಖವನ್ನೇ ದಿಟ್ಟಿಸುತ್ತಾ ಕುರುಚಲು ಗಡ್ಡವನ್ನು ಅಲುಗಿಸುತ್ತ ಮಾತನಾಡಿದ:

"ಇವರೆಲ್ಲಾ ತಮಾಷೇಂತ ತಿಳಿದಿದ್ದಾರೆ, ಇವಾನ್ ಇವಾನೊವಿಚ್, ಅವರು ಹೀಗೆ ಮಾಡಿ ಮಜಾ ನೋಡ್ತಾರೆ. ಆದರೆ ನಮ್ಮ ಮಾನ್ಯ ಡೈರೆಕ್ಟರು ಹೇಳಿದ ಹಾಗೆ, ರಾಜ್ಯಕ್ಕೇ ಹಾನಿಯಿದೆ ಅದರಿಂದ. ಇಲ್ಲಿ ಕಳೆ ಕೀಳೋದಲ್ಲ ನೆಲ ಉಳ್ಬೇಕು...."

ಬೆನ್ನ ಹಿಂದೆ ಕೈಕಟ್ಟಿಕೊಂಡು ಬೆರಳುಗಳನ್ನು ಭದ್ರವಾಗಿ ಮಡಚಿಕೊಂಡು, ವವೀಲೊವ್ ನಡೆದ.

ಗಟ್ಟಿಯಾದ ಸ್ವರದಲ್ಲಿ ಅವನೆಂದ:

"ಏನು ಬೇಕಾದರೂ ಅಚ್ಚುಹಾಕಿ, ಸೂಳೆ ಮಕ್ಕಳೆ! ಆದರೆ ನನ್ನ ವಿಷಯ ಚಕಾರ ಎತ್ತಿದರೆ ಹುಷಾರ್!"

ವಸೀಲಿಯ್ ಗೂಸೆವ್ ತಾಯಿಯ ಬಳಿಗೆ ಬಂದ.

"ನಿನ್ನಿಂದ ಇನ್ನೊಂದು ಊಟ ತಗೋಳೋಣಾಂತಿದೀನಿ, ಅಮ್ಮ! ಒಳ್ಳೆ ರುಚಿಯಾಗಿದೆ ಆಹಾರ ನಿನ್ನಲ್ಲಿ!" ಎಂದ. ಸ್ವರ ತಗ್ಗಿಸಿ ಕಣ್ಣು ಮಿಟುಕಿಸಿ ಜತೆಯಲ್ಲೇ ಹೇಳಿದನಾತ: "ಹೊಡೆತ ಸರಿಯಾಗಿ ಗುರಿ ಮುಟ್ಟಿತು! ಒಳ್ಳೇ ಕೆಲಸ ಮಾಡಿದೆ ವಮ್ಮ!"

ಆಕೆ ಪ್ರೀತಿಯಿಂದ ತಲೆದೂಗಿದಳು. ವಸತಿ ಕ್ಷೇತ್ರದಲ್ಲೆಲ್ಲಾ ಅತಿ ದೊಡ್ಡ ಪೋಕರಿಯೆಂದು ಹೆಸರಾಗಿದ್ದ ಈ ಮನುಷ್ಯ ತನ್ನ ಬಗೆಗೆ ಅಷ್ಟೊಂದು ಗೌರವ ತೋರಿಸಿ ಮಾತನಾಡಿದ್ದನ್ನು ಕಂಡು ತಾಯಿಗೆ ಸಂತೋಷವಾಗಿತ್ತು. ಕಾರಖಾನೆಯ ಉದ್ವಿಗ್ನಗೊಂಡ ವಾತಾವರಣವನ್ನು ನೋಡಿ ಆಕೆಗೆ ಖುಷಿಯಾಗಿತ್ತು.

"ನಾನಿಲ್ಲದಿದ್ದರೆ ಇದು ಆಗ್ತಿತ್ತೆ?" ಎಂದು ತನ್ನಷ್ಟಕ್ಕೇ ಆಕೆ ಯೋಚಿಸುತ್ತ ಕುಳಿತಳು.

ಮೂವರು ಚಿಲ್ಲರೆ ಕೂಲಿಗಳು ಅಲ್ಲೇ ಸಮೀಪದಲ್ಲೇ ನಿಂತರು. ಅವರಲ್ಲೊಬ್ಬ ಮೃದುವಾಗಿ, ವ್ಯಸನ ಸ್ವರದಲ್ಲಿ, "ನನಗೆ ಒಂದೂ ಸಿಗಲಿಲ್ಲವಲ್ಲ" ಎಂದು ಹೇಳಿದ್ದನ್ನು ತಾಯಿ ಕೇಳಿಸಿಕೊಂಡಳು.

ಆಗ ಇನ್ನೊಬ್ಬನೆಂದ:

"ಅದರಲ್ಲಿ ಏನಿತ್ತೋ ತಿಳಕೋಬೇಕು. ನನಗೆ ಓದೋಕೆ ತಿಳೀದು. ಆದರೂ ಸರಿಯಾಗಿ ಗುರಿ ತಾಕಿದೆ ಗುಂಡು – ಅದು ಖಂಡಿತ."

ಮೂರನೆಯವನು ಸುತ್ತಲೂ ನೋಡಿ, "ಬಾಯ್ಲರ್ ರೂಮಿಗೆ ಹೋಗೋಣ," ಎಂದು ಪಿಸುಗುಟ್ಟಿದ.

ಗೂಸೆವ್ ತಾಯಿಯತ್ತ ನೋಡಿ, ಕಣ್ಣು ಮಿಟಕಿಸಿ, "ಏನಾಗ್ತಾ ಇದೆ ನೋಡಿದಿಯಾ?" ಎಂದ.

ಆ ಸಂಜೆ ಅತ್ಯಂತ ಉತ್ಸಾಹದಿಂದ ಪೆಲಗೇಯ ಮನೆಗೆ ಮರಳಿದಳು.

"ತಮಗೆ ಓದೋಕೆ ಬರೋದಿಲ್ಲಾಂತ ಜನರು ದುಃಖಿಸ್ತಾರೆ.... ಚಿಕ್ಕವಳಿದ್ದಾಗ ನನಗೆ ಓದೋಕೆ ಬರ್‍ತಿತ್ತು.... ಆದರೆ ಈಗ ಮರೆತುಹೋಗಿದೆ," ಎಂದು ತಾಯಿ ಅಂದ್ರೇಯ್‌ಗೆ ಹೇಳಿದಳು.

"ಯಾಕೆ ಕಲೀಬಾರದು?"

"ಈ ವಯಸ್ಸಿನಲ್ಲಿ? ಎಲ್ಲರೂ ನನ್ನ ನೋಡಿ ನಗಲೀಂತಾನೋ?"

ಆದರೆ ಅಂದ್ರೇಯ್ ಹಲಗೆ ಮೇಲಿಂದ ಒಂದು ಪುಸ್ತಕವನ್ನೆತ್ತಿ ಹೊದಿಕೆಯ ಮೇಲಿದ್ದ ಒಂದು ಅಕ್ಷರಕ್ಕೆ ಬೊಟ್ಟುಮಾಡಿ, "ಇದೇನು?" ಎಂದು ಕೇಳಿದ.

"ರ" ಎಂದಳಾಕೆ ಮುಗುಳ್ನಕ್ಕು.

"ಇದು ?"

"ಅ."

ತುಂಬಾ ಸಂಕೋಚವಾಯಿತು ಆಕೆಗೆ, ನಾಚಿಕೆಯಾಯಿತು. ಅಂದ್ರೇಯ್‌ಯ ಕಣ್ಣುಗಳು ತನ್ನನ್ನು ಕಂಡು ಗುಪ್ತವಾಗಿ ನಗುತ್ತಿದ್ದಂತೆ ಭಾಸವಾಯಿತು. ಅವಳು ಕಣ್ಣೆತ್ತಿ ಅವನನ್ನು ನೋಡಲೇ ಇಲ್ಲ. ಆದರೆ ಆತನ ಸ್ವರ ಶಾಂತವಾಗಿತ್ತು, ಮೃದು ವಾಗಿತ್ತು, ಮುಖ ಗಂಭೀರವಾಗಿತ್ತು.

ಸಣ್ಣಗೆ ತನಗೆ ತಿಳಿಯದಂತೆಯೇ ನಕ್ಕು ಆಕೆ, "ನೀನು ನಿಜಕ್ಕೂ ನನಗೆ ಕಲಿಸೋ ಯೋಚನೇಲಿದೀಯಾ, ಅಂದ್ರ್ಯೂಷ?" ಎಂದು ಕೇಳಿದಳು.

ಅವನು ಉತ್ತರವಿತ್ತ:

"ಯಾಕಾಗಬಾರದು ? ಹಿಂದೆ ಗೊತ್ತಿತ್ತು ಅಂದ ಮೇಲೆ ಈಗ ಸುಲಭ. ನಮ ಗೇನಂತೆ? ಹೋದರೊಂದು ಕಲ್ಲು – ಬಿದ್ದರೊಂದು ಹಣ್ಣು !"

"ಆದರೆ ಇನ್ನೂ ಒಂದು ಗಾದೆ ಇದೆ. ಕಣ್ಣು ಮುಚ್ಚಿ ಜಪಿಸಿದಾಕ್ಷಣಕ್ಕೆ ಭಕ್ತನಾಗೋದಿಲ್ಲಾಂತ ಗೊತ್ತೊ?"

ತಲೆಯಲುಗಿಸಿ ಹೊಹೋಲ್ ಎಂದ:

"ಹುಂ ! ಗಾದೆಗಳಿಗೇನು ಬರಗಾಲ? 'ಬುದ್ಧಿ ಕಡಮೆಯಾದಷ್ಟು ನಿದ್ದೆ ಹೆಚ್ಚು' ಅನ್ನೋ ಗಾದೆ ಹೇಗಿದೆ? ಆದರೆ ಹಾಗೆ ಯೋಚಿಸೋದು ಯಾರು? ಹೊಟ್ಟೆ ಮಾತ್ರ. ಅದು ಹೃದಯಾನ ಅಂಥ ಗಾದೆಯಿಂದ ಮುಗ್ಧಗೊಳಿಸೋ ಪ್ರಯತ್ನ ವಷ್ಟೆ. ಇರಲಿ. ಇದು ಯಾವ ಅಕ್ಷರ?"

"ಲ" ಎಂದಳು ತಾಯಿ.

"ಒಳ್ಳೇದು. ನೋಡು ಎಷ್ಟು ಚೆನ್ನಾಗಿ ಅವೆಲ್ಲಾ ಒಂದೇ ಗೆರೇಲಿ ನಿಂತಿವೆ? ಈ ಅಕ್ಷರ?"

ಮರೆತು ಹೋಗಿದ್ದ ಅಕ್ಷರಗಳನ್ನು ಸ್ಮರಣೆಗೆ ತರುವ ಯತ್ನದಲ್ಲಿ ತಾಯಿ, ನೆಟ್ಟ ದೃಷ್ಟಿಯಿಟ್ಟು ಕಣ್ಣು ನೋಯಿಸಿಕೊಂಡು, ಹುಬ್ಬು ಗಂಟಿಕ್ಕಿದಳು; ಉಳಿದ ಯಾವುದರ ಪ್ರಜ್ಞೆಯೂ ಇರಲಿಲ್ಲ ಆಕೆಗೆ. ಆದರೆ ಬೇಗನೆ ಅವಳ ಕಣ್ಣುಗಳು ಆಯಾಸ ಗೊಂಡುವು. ಮೊದಲು ಬಳಲಿಕೆಯಿಂದಲೂ ಆಮೇಲೆ ನಿರಾಸೆಯಿಂದಲೂ ಕಂಬನಿ ಯುದುರಿತು.

"ಓದುಬರಹ ಕಲೀತಿರೋದು ! ವರ್ಷ ನಲ್ವತ್ತಾಯಿತು.... ಈಗ ಅ ಆ ಇ ಈ ಕಲೀತಿದೀನಿ !" ಎಂದು ಆಕೆ ರೋದಿಸಿದಳು.

ಸಂತೈಸುವ ಧ್ವನಿಯಲ್ಲಿ ಅಂದ್ರೇಯ್ ಅಂದ:

"ಅಳಬೇಡಿ. ನಿಮ್ಮ ಜೀವನ ಸರಿಪಡಿಸೋದು ನಿಮ್ಮ ಕೈಲಿತ್ತೆ? ಅದೆಷ್ಟು ಹೊಲಸೆದ್ದಿತ್ತು ಅನ್ನೋದನ್ನಾದರೂ ಸದ್ಯಃ ನೀವು ತಿಳಿಕೊಂಡಿದೀರಾ? ಸಾವಿರಾರು

ಜನ, ಮನಸ್ಸು ಮಾಡಿದರೆ ಒಳ್ಳೇ ಬಾಳ್ವೆ ನಡೆಸಬಹುದು. ಆದರೆ ಅವರು ಪಶುಗಳ ಹಾಗೆ ಜೀವನ ನೂಕ್ತಾರೆ. ಆ ವಿಷಯದಲ್ಲಿ ಹೆಮ್ಮೇನೂ ಪಡ್ತಾರೆ. ಇವತ್ತು ಒಬ್ಬ ಮನುಷ್ಯ ದುಡೀತಾನೆ, ತಿಂತಾನೆ; ನಾಳೆಯೂ ದುಡೀತಾನೆ, ತಿಂತಾನೆ; ಜೀವಮಾನದ ಎಲ್ಲಾ ದಿವಸಗಳಲ್ಲೂ ಹಾಗೆಯೇ, ದುಡಿಯೋದು, ತಿನ್ನೋದು. ಈ ನಡುವೆ ಪುರ ಸತ್ತಿದ್ದಾಗ, ಮಕ್ಕಳನ್ನು ಹುಟ್ಟಿಸ್ತಾರೆ. ಈ ಮಕ್ಕಳ ಜತೇಲಿ ಆಡೋಕೆ ಮಜವಾಗಿರುತ್ತೆ. ಈ ಮಜಾ, ಆ ಮಕ್ಕಳು ತಿನ್ನೋಕೆ ಹೆಚ್ಚು ತಿಂಡಿ ಕೇಳೋವರೆಗೆ ಮಾತ್ರ. ಆಹಾರ ಕೇಳಿದಾಗ ತಂದೆ ಸಿಟ್ಟಾಗ್ತಾನೆ; ಮಕ್ಕಳನ್ನ ಶಪಿಸ್ತಾನೆ. ಬೆಳೀರಿ ಬೇಗ ಬೇಗ, ಹಂದಿಗಳೇ! ಕೆಲಸ ಹುಡುಕ್ಕೊಂಡು ಹೋಗಿ! ಅಂತ ಬೈತಾನೆ. ಆ ಮಕ್ಕಳನ್ನ ದುಡಿಯೋ ಪ್ರಾಣಿ ಗಳನ್ನಾಗಿ ಮಾಡ್ಬೇಕು ಅನ್ನೋ ಇಚ್ಛೆ ಅವನಿಗೆ. ಆದರೆ ಹುಡುಗರು ತಮ್ಮ ಹೊಟ್ಟೆಗೋ ಸ್ಕರ ದುಡೀತಾರೆ. ತಾವೂ ಬದುಕಬೇಕೂಂತ ಮುಂದೆ ಬಂದು ಚಡಪಡಿಸ್ತಾರೆ.... ಮನುಷ್ಯನ ಮನಸ್ಸಿನ ಸುತ್ತೂ ಇರೋ ಸಂಕೋಲೇನ ಕಡಿಯೋಕೆ ಪ್ರಯತ್ನಿಸುವವರು ಮಾತ್ರ ನಿಜವಾದ ಮಾನವರು. ನೀವೂ, ನಿಮ್ಮ ಶಕ್ತಿ ಇದ್ದಷ್ಟು ಮಟ್ಟಿಗೆ ಆ ಕೆಲ ಸಾನ ಮಾಡ್ತಿದೀರಿ."

"ನಾನು?" ಎಂದಾಕೆ ನಿರುತ್ಸಾಹದಿಂದ ಉಸಿರು ಬಿಟ್ಟಳು. "ನಾನೇನು ಮಾಡ ಬಲ್ಲೆ?"

"ಯಾಕೆ ಹಾಗೆ ಹೇಳ್ತೀರಿ? ಇದು ಮಳೆ ಹನಿ ಇದ್ದ ಹಾಗೆ. ಒಂದೊಂದು ಹನಿಯೂ ಬೀಜಕ್ಕೆ ನೀರೆರೀತದೆ. ಅಲ್ಲದೆ, ನೀವು ಓದೋಕೆ ಶುರುಮಾಡಿದ ಮೇಲೆ...."

ಆತ ನಕ್ಕು ಅಲ್ಲಿಗೇ ಮಾತು ನಿಲ್ಲಿಸಿದ. ಎದ್ದು ಅತ್ತಿತ್ತ ನಡೆಯುತೊಡಗಿದನು.

"ನೀವು ಖಂಡಿತ ಕಲೀಬೇಕಮ್ಮ. ಪಾವೆಲ್ ಬೇಗನೆ ಬಂದ್ಬಿಡ್ತಾನೆ. ಬರೋಷ್ಟ ರಲ್ಲೇ ನೀವು – ಓಹೋ!"

"ಆ! ಅಂದ್ರ್ಯೂಷ!" ಎಂದಳು ತಾಯಿ; "ಚಿಕ್ಕ ವಯಸ್ಸಿನಲ್ಲಿ ಎಲ್ಲಾ ಸುಲಭ. ಆದರೆ ದೊಡ್ಡವರಾದ ಮೇಲೆ ಎಷ್ಟೊಂದು ತೊಂದರೆ.... ಸಾಮರ್ಥ್ಯ ಬಹಳ ಕಡಮೆ. ಮೆದುಳು ಇಲ್ಲವೇ ಇಲ್ಲ...."

## ೧೮

ಆ ಸಂಜೆ ಹೊಹೋಲ್ ಹೊರಹೋದ ತರುವಾಯ ತಾಯಿ ದೀಪ ಹಚ್ಚಿ, ಒಂದು ಕಾಲುಚೀಲ ಹೆಣೆಯುತೊಡಗಿದಳು. ಆದರೆ ಆಗಲೇ ಆಕೆ ಎದ್ದು, ಗೊತ್ತು ಗುರಿಯಿಲ್ಲದ ಹಾಗೆ ಕೊಠಡಿಯಲ್ಲೆಲ್ಲ ಅತ್ತಿತ್ತ ನಡೆದಳು. ಅಡುಗೆ ಮನೆಯ ಒಳ ಹೋಗಿ, ಬಾಗಿಲು ಮುಚ್ಚಿ ಭದ್ರಪಡಿಸಿದಳು. ಹುಬ್ಬುಗಳನ್ನು ಕುಣಿಸುತ್ತ ವಾಪಸು ಬಂದಳು. ಕಿಟಕಿಯ ಪರದೆಗಳನ್ನು ಮುಚ್ಚಿದ ಮೇಲೆ ಶೆಲ್ಫಿಂದ ಒಂದು ಪುಸ್ತಕ ವನ್ನೆತ್ತಿಕೊಂಡು ಮತ್ತೆ ಮೇಜಿನ ಬಳಿ ಕುಳಿತಳು. ಯಾರೂ ಕಾಣಬಾರದೆಂದು ಮುಂಜಾ ಗ್ರತೆ ವಹಿಸಿದಳು ನಿಜ. ಆದರೂ ಪುಸ್ತಕ ತೆರೆದು ತುಟಿಯಾಡುವುದಕ್ಕೆ ಮುನ್ನ

ಮತ್ತೊಮ್ಮೆ ಕಳ್ಳ ನೋಟದಿಂದ ಸುತ್ತಲೂ ನೋಡಿದಳಾಕೆ. ಬೀದಿಯ ಕಡೆಯಿಂದ ಬರುತ್ತಿದ್ದ ಪ್ರತಿಯೊಂದು ಸಪ್ಪಳಕ್ಕೂ ಆಕೆ ಬೆಚ್ಚಿಬೀಳುತ್ತಿದ್ದಳು. ಕೈಯಿಂದ ಪುಸ್ತಕ ವನ್ನು ಮುಚ್ಚಿಟ್ಟುಕೊಂಡು ಕಿವಿ ನಿಮಿರಿಸುತ್ತಿದ್ದಳು. ಮತ್ತೆ ಪುನಃ ಪುನಃ ಕಣ್ಣನ್ನು ಮುಚ್ಚುತ್ತಲೂ ಪಿಸು ಸ್ವರದಲ್ಲಿ ಓದತೊಡಗಿದಳು:

"ಕಾ – ಕಾಗದ, ಪೆ – ಪೆಟ್ಟಿಗೆ...."

ಯಾರೋ ಬಾಗಿಲು ತಟ್ಟಿದ ಸಪ್ಪಳವಾಯಿತು. ತಾಯಿ ಹೌಹಾರಿ ಬಿದ್ದು, ಪುಸ್ತಕವನ್ನು ಶೆಲ್ಫಿಗೆ ಸೇರಿಸಿ, ಗಾಬರಿಯಿಂದ ಕೇಳಿದಳು:

"ಯಾರದು?"

"ನಾನು!"

ತನ್ನ ಗಡ್ಡವನ್ನು ಸವರಿಕೊಳ್ಳುತ್ತ ರೀಬಿನ್ ಒಳಹೊಕ್ಕ

"ಹಿಂದೆ ಯಾವತ್ತೂ, ಯಾರದು ಎಂತ ಕೇಳಿದವಳಲ್ಲ. ಒಬ್ಬಳೇ ಇದ್ದೀಯೇನು? ಹೊಹೋಲ್ ಮನೇಲಿ ಇರ್‍ತಾನೆ ಅಂತಿದ್ದೆ. ಇವತ್ತು ಆತನ್ನ ಕಂಡಿದ್ದೆ. ಜೈಲು ಅವನಿಗೆ ಏನೇನೂ ತೊಂದರೆ ಕೊಟ್ಟ ಹಾಗೆ ತೋರ್‍ಲಿಲ್ಲ."

ಆತ ಕುಳಿತುಕೊಂಡು ತಾಯಿಯತ್ತ ನೋಡಿದ.

"ನಾವು ಸ್ವಲ್ಪ ಮಾತಾಡೋಣ."

ಗೂಢವಾದ ಒಗಟಿನಂತಿದ್ದ ಅವನ ದೃಷ್ಟಿಯನ್ನು ನೋಡಿ ಅಸ್ಪಷ್ಟವಾದ ಭೀತಿಯುಂಟಾಯಿತು ತಾಯಿಗೆ.

ತನ್ನ ಏರು ಧ್ವನಿಯಲ್ಲಿ ಆತ ಆರಂಭಿಸಿದ:

"ಎಲ್ಲದಕ್ಕೂ ಹಣ ಬೇಕು. ಹುಟ್ಟೋದಕ್ಕೂ ಹಣ ಬೇಕು. ಸಾಯೋದಕ್ಕೂ ಹಣ ಬೇಕು. ಪುಸ್ತಕ – ಕರಪತ್ರ ಅದಕ್ಕೂ ಹಣ ಬೇಕು. ಆ ಪುಸ್ತಕ ತಯಾರಿಸೋಕೆ ಹಣ ಎಲ್ಲಿಂದ ಬರುತ್ತೆ ಅಂತ ನಿನಗೆ ಗೊತ್ತಾ?"

"ಇಲ್ಲ, ಗೊತ್ತಿಲ್ಲ," ಎಂದಳು ತಾಯಿ ಮೆಲ್ಲನೆ. ಯಾಕೋ ಈ ಮಾತಿನ ರೀತಿ ಸರಿಯಾಗಿಲ್ಲ ಅನಿಸಿತು ಆಕೆಗೆ.

"ನನಗೂ ಗೊತ್ತಿಲ್ಲ. ಮುಂದಿನ ಪ್ರಶ್ನೆ – ಅದನ್ನೆಲ್ಲಾ ಬರೆಯೋದು ಯಾರು?"

"ಪುಸ್ತಕ ಓದಿ ತಿಳಕೊಂಡಿರೋರು...."

"ಅಂದರೆ ಮಹಾಶಯರು, ಎಂದ ರೀಬಿನ್. ಅವನ ಗಡ್ಡ ತುಂಬಿದ್ದ ಮುಖದ ಮೇಲೆ ಆಳವಾದ ಹೊಳಪೊಂದು ಹಾದುಹೋಯಿತು. "ಬೇರೆ ಮಾತಿನಲ್ಲಿ ಹೇಳೋದಾದರೆ, ಮಹಾಶಯರು ಪುಸ್ತಕ ಬರೀತಾರೆ, ಪ್ರಕಟಿಸ್ತಾರೆ. ಆದರೆ ಆ ಪುಸ್ತಕಗಳನ್ನ ಬರದಿರೋದೂ ಅವರ ವಿರೋಧವಾಗಿಯೇ. ಎಲ್ಲಿ ಈಗ ಸ್ವಲ್ಪ ಪ್ರಯತ್ನಮಾಡಿ ಬಿಡಿಸಿ ಹೇಳು ನೋಡೋಣ. ತಮಗೆ ವಿರೋಧವಾಗಿಯೇ ತಮ್ಮ ಹಣ ಖರ್ಚು ಮಾಡಿಯೇ ಜನ ಸಾಮಾನ್ಯರನ್ನ ಉದ್ರೇಕಿಸೋದರಲ್ಲಿ ಏನರ್ಥ ಇದೆ? ಏನಂತಿ ಇದಕ್ಕೆ?"

ತಾಯಿ ಭೀತಿಯ ಸ್ವರ ಹೊರಡಿಸಿ, ಕಣ್ಣು ಕಣ್ಣುಬಿಡುತ್ತ ಕೇಳಿದಳು:

"ಏನು ನಿನ್ನ ಮನಸ್ಸಲ್ಲಿರೋದು?"

"ಆಹಾ!" ಎಂದ ರೀಬಿನ್ ಕರಡಿಯಂತೆ ಗೋಣಾಡಿಸುತ್ತ. "ಅದೇ ನೋಡು! ನನಗೂ ಕೂಡಾ ಆ ಯೋಚ್ನೆ ಬಂದಾಗ – ಎಲ್ಲ ತಣ್ಣಗಾಯ್ತು!"

"ನಿನಗೆ ಏನಾದರೂ ಗೊತ್ತಾಗಿದೆಯಾ?"

"ಮೋಸ! ನಮಗೆ ಮೋಸ ಮಾಡಿದ್ದಾರೆ ಅಂತ ನನಗೆ ಅನಿಸುತ್ತೆ. ನನ್ನ ಹತ್ತಿರ ದಾಖಲೆ ಏನೂ ಇಲ್ಲ. ಆದರೆ ಇಲ್ಲಿ ಮೋಸ ಇರೋದ್ನು ನಿಜ. ಅದೇ ನಾನು ಹೇಳೋದು! ಆ ಮಹಾಶಯರಿದ್ದಾರಲ್ಲಾ, ಅವರು ಮೋಸಗಾರರು. ನನಗೆ ಬೇಕಾದ್ದು ಸತ್ಯ. ಈಗ ನನಗೆ ಸತ್ಯ ಅರ್ಥವಾಗಿದೆ. ಇನ್ನು ಆ ಮಹಾಶಯರ ಕೂಡ ನಾನು ಹೋಗೋದಿಲ್ಲ. ತಮಗೆ ಅನುಕೂಲವಾದಾಗ ಅವರು ನನ್ನ ಕೆಳಕ್ಕೆ ನೂಕಿ ಎಲುಬುಗಳನ್ನೇ ಸೇತುವೆ ಅಂತ ತಿಳ್ಕೊಂಡು ತುಳ್ಕೊಂಡು ಹೋದಾರು –"

ಕೆಟ್ಟ ಕಲೆ ಅಂಟಿಕೊಂಡ ಹಾಗೆ ಆ ಮಾತುಗಳು ತಾಯಿಯ ಹೃದಯಕ್ಕೆ ತಗಲಿದುವು.

ದುಃಖದಿಂದ ಆಕೆ ನುಡಿದಳು:

"ದೇವರೇ! ಇದು ಪಾವೆಲನಿಗೆ ಅರ್ಥವಾಗೋದಿಲ್ಲಾಂತಲೆ? ಅವರೆಲ್ಲಾ...."

ಅವಳ ಮುಂದೆ, ಯೆಗೋರ್, ನಿಕೊಲಾಯ್ ಇವಾನೊವಿಚ್ ಮತ್ತು ಸಾಷರ ಗಂಭೀರವಾದ ಪ್ರಾಮಾಣಿಕವಾದ ಮುಖಗಳು ಹಾದುಹೋದುವು. ಆಕೆಯ ಹೃದಯ ಪ್ರತಿಭಟಿಸಿತು.

ತಲೆಯಲುಗಿಸುತ್ತ ಆಕೆ ಅಂದಳು:

"ಇಲ್ಲ, ಇಲ್ಲ! ಇದನ್ನ ನಾನು ನಂಬೋದಿಲ್ಲ! ಅಂತರಂಗ ಶುದ್ಧಿಯುಳ್ಳ ಮನುಷ್ಯರು ಅವರು."

ರೀಬಿನ್ ಆಲೋಚನಾಪರನಾಗಿ, "ಅವರು ಅಂದರೆ ಯಾರು?" ಎಂದನು.

"ಅವರೆಲ್ಲರೂ. ನಾನು ನೋಡಿರುವ ಪ್ರತಿಯೊಬ್ಬರೂ."

"ತಾಯಿ, ನೀನು ಸರಿಯಾದ ಕಡೆ ನೋಡ್ತಾ ಇಲ್ಲ, ಇನ್ನೂ ದೂರ ನೋಡು," ಎಂದು ರೀಬಿನ್ ತಲೆ ತಗ್ಗಿಸುತ್ತ ಹೇಳಿದ. "ನಮ್ಮ ಜತೆ ಸೇರಿರೋವವರಿಗೆಲ್ಲ ಬಹುಶಃ ಏನೂ ತಿಳೀದೇ ಇರಬಹುದು. ಅವರಲ್ಲಿ ನನಗೆ ನಂಬಿಕೆ ಇದೆ. ಅದು ಸರಿ, ಆದರೂ ಅವರ ಹಿಂದೆ ಬೇರೆಯವರು ಇರಬಹುದು, ತಮ್ಮ ಸ್ವಂತದ ಲಾಭದಲ್ಲೇ ಆಸಕ್ತಿ ಇರೋ ಜನ. ಒಬ್ಬ ಮನುಷ್ಯ ತನ್ನ ವಿರೋಧವಾಗಿ ಸುಮ್‌ಸುಮ್ಮನೆ ತಿರುಗಿ ಬೀಳೋದಿಲ್ಲ...."

ರೈತನೊಬ್ಬ ದೀರ್ಘ ಯೋಚನೆಯ ಬಳಿಕ ದೃಢ ನಂಬುಗೆಗೆ ಬಂದ ಹಾಗೆ, ರೀಬಿನ್ ಮಾತು ಮುಂದುವರಿಸಿದ:

"ಈ ಮಹಾಶಯರಿಂದ ಏನೂ ಒಳ್ಳೇದಾಗೋದಿಲ್ಲ."

ಮತ್ತೊಮ್ಮೆ ಶಂಕೆಯಿಂದ ಬಾಧಿತಳಾದ ತಾಯಿ, "ನೀನು ಏನು ಮಾಡ ಬೇಕೂಂತ ಇದ್ದೀಯ?" ಎಂದು ಕೇಳಿದಳು.

"ನಾನೇ?" ಎಂದು ಪ್ರಶ್ನಿಸಿ ರೀಬಿನ್ ಆಕೆಯತ್ತ ನೋಡಿ ಸುಮ್ಮನಾಗಿ, ಮತ್ತೆ ಹೇಳಿದ: "ಈ ಮಹಾಶಯರಿಂದ ದೂರವಿದ್ದಷ್ಟೂ ಒಳ್ಳೇದು. ಅದೇ ಸರಿ."

ಪುನಃ ಆತ ಮ್ಲಾನನಾಗಿ ಮೌನ ತಳೆದ.

"ಈ ಸಂಗಾತಿಗಳನ್ನ ಸೇರ್ಕೊಂಡು ಅವರ ಜತೇಲೆ ದುಡೀಬೇಕೂಂತಿದ್ದೆ. ಅಂಥ ಕೆಲಸಕ್ಕೆ ನಾನು ತಕ್ಕವನೇ. ಜನರಿಗೆ ಏನು ಹೇಳಬೇಕು ಅನ್ನೋದು ನನಗೆ ಗೊತ್ತಿದೆ. ಆದರೆ.... ಈಗ ಹೊರಟ್ಹೋಗ್ತೀನಿ.... ನಂಬಿಕೆ ಹೋಗ್ಬಿಟ್ಟಿದೆ. ಆದ್ದರಿಂದ ನಾನು ಹೊರಡಲೇಬೇಕು."

ತಲೆ ತಗ್ಗಿಸಿಕೊಂಡು ಆತ ಯೋಚನೆಯಲ್ಲಿ ಮಗ್ನನಾದ.

"ನಾನು ಒಬ್ಬಂಟಿಗನಾಗಿಯೇ ಹಳ್ಳಿಗಾಡುಗಳಲ್ಲಿ ಸಂಚರಿಸ್ತೀನಿ. ಜನ ಸಾಮಾನ್ಯರನ್ನ ಕೆರಳಿಸ್ತೀನಿ. ಅವರು ಸ್ವಂತ ಪ್ರಯತ್ನ ಮಾಡದ ಹೊರತು ಹಿತವಾಗೋದಿಲ್ಲ. ಒಮ್ಮೆ ಅವರಿಗೆ ಅರ್ಥವಾಯ್ತು ಅಂದರೆ ಮುಂದಿನ ಹಾದಿ ಅವರಿಗೇ ಕಾಣಿಸುತ್ತೆ. ಅವರಿಗೆ ಅರ್ಥವಾಗೋ ಹಾಗೆ ಮಾಡೋದು ನನ್ನ ಕೆಲಸ. ಅವರ ತಲೆಯ ಮೇಲೆ ಅವರ ಕೈ. ಅವರ ಮೆದುಳಷ್ಟೇ ಅವರದು. ಇದೇ ನಾನು ಹೇಳೋದು."

ಆ ಮನುಷ್ಯನ ಬಗೆಗೆ ತಾಯಿ ಕನಿಕರಪಡತೊಡಗಿದಳು. ಅವನಿಗೆ ಅಪಾಯ ವಾಗುವುದೆಂಬ ಹೆದರಿಕೆಯೂ ಆಯಿತು. ಯಾವಾಗಲೂ ಅಸಂತೋಷವನ್ನೇ ಹುಟ್ಟಿಸುತ್ತಿದ್ದ ಆತ, ಈಗ ಯಾವುದೋ ಕಾರಣದಿಂದ ತುಂಬ ಆಪ್ತನಂತೆ ತೋರಿದ. ಮೃದುವಾಗಿ ಅವನಿಗೆ ಆಕೆ ಹೇಳಿದಳು:

"ಅವರು ನಿನ್ನನ್ನು ಹಿಡೀತಾರೆ ನೋಡು."

ರೀಬಿನ್ ಆಕೆಯ ಕಡೆ ನೋಡಿದ....

"ಬಂಧಿಸ್ತಾರೆ, ಬಿಟ್ಟುಬಿಡ್ತಾರೆ. ನಾನು ಪುನಃ ಮೂಲದಿಂದ ಶುರು ಮಾಡ್ತೀನಿ."

"ನಿನ್ನನ್ನು ರೈತರೇ ಕಟ್ಟಿಹಾಕ್ತಾರೆ. ಕಟ್ಟಿ ಹಾಕಿ ಜೈಲಿಗೆಸೀತಾರೆ."

"ಶಿಕ್ಷೆ ಅನುಭವಿಸಿ ಹೊರಗೆ ಬರ್ತೀನಿ, ಪುನಃ ಶುರು ಮಾಡ್ತೀನಿ. ರೈತರ ವಿಷಯ — ಹೂಂ, ಒಂದು ಸಾರಿ, ಎರಡು ಸಾರಿ, ಅವರು ನನ್ನನ್ನು ಕಟ್ಟಿ ಹಾಕ್ತಾರೆ. ಆಮೇಲೆ ಹೀಗೆ ಕಟ್ಟಿ ಹಾಕೋದಕ್ಕಿಂತ ನನ್ನ ಮಾತಿಗೆ ಕಿವಿ ಕೊಡೋದು ವಾಸೀಂತ ತಿಳಿವಳಿಕೆ ಬರುತ್ತೆ ಅವರಿಗೆ. 'ನನ್ನನ್ನ ನಂಬಬೇಡಿ. ಆದರೆ ಹೇಳೋದನ್ನ ಕೇಳಿ ಸ್ವಲ್ಪ' ಅಂತೀನಿ. ಒಮ್ಮೆ ಕೇಳಿದ್ಮೇಲೆ ನಂಬಿಯೇ ನಂಬ್ತಾರೆ."

ಉಚ್ಚರಿಸುವುದಕ್ಕೆ ಮುಂಚೆ ಪ್ರತಿಯೊಂದು ಶಬ್ದವನ್ನೂ ತೂಗಿ ನೋಡುವ ಹಾಗೆ ಆತ ನಿಧಾನವಾಗಿ ಮಾತಾಡಿದ.

"ಇತ್ತೀಚೆಗೆ ನಾನು ತುಂಬ ಓದಿದೀನಿ. ಒಂದೆರಡು ವಿಷಯ ತಿಳಕೊಂಡಿದೀನಿ."

ಎಲ್ಲವನ್ನೂ ಕೇಳುತ್ತಿದ್ದ ಆಕೆ, ವ್ಯಸನದಿಂದ ತಲೆಯಾಡಿಸುತ್ತಾ, "ಮಿಹಾಯ್ಲೊ ಇವಾನೊವಿಚ್! ಇದು ನಿನ್ನ ಕಡೆಗಾಲ," ಎಂದಳು.

ತನ್ನ ಕಠ್ರಗಿನ ಆಳವಾದ ಕಣ್ಣುಗಳಿಂದ ಆಕೆಯನ್ನೆ ಅವನು ದಿಟ್ಟಿಸಿದನು. ಆ ನೋಟದಲ್ಲಿ ಪ್ರಶ್ನೆಯು ನಿರೀಕ್ಷಣೆಯು ಭಾವವಿತ್ತು. ಅವನ ಬಲಿಷ್ಠ ದೇಹ ಮುಂದಕ್ಕೆ ಬಾಗಿತು. ಕೈಗಳು ಕುರ್ಚಿಯನ್ನು ಬಿಗಿಹಿಡಿದುವು. ಗಡ್ಡದ ಕಪ್ಪು ಚೌಕಟ್ಟಿನಲ್ಲಿ ಆ ಕರಿಯ ಮುಖವು ಮ್ಲಾನವಾಗಿತ್ತು. ಆತ ಹೇಳಿದ:

"ಬೀಜದ ವಿಷಯವಾಗಿ ಕ್ರಿಸ್ತ ಹೇಳಿದ್ದು ನೆನಪಿದೆಯಾ? ಮತ್ತೆ ಹುಟ್ಟಬೇಕಾದರೆ ಅದು ಸಾಯಲೇಬೇಕು. ಆದರೆ ಅಷ್ಟು ಬೇಗನೆ ಸಾವಿನ ಕೈಗೆ ನಾನು ಸಿಗೋದಿಲ್ಲ. ನಾನೊಬ್ಬ ಪಳಗಿದ ತಂತ್ರದ ಗುಳ್ಳೇನರಿ."

ಕುರ್ಚಿಯಲ್ಲಿ ದೇಹ ಕದಲಿಸುತ್ತಾ ಆತ, ನಿದಾನವಾಗಿ ಮೇಲಕ್ಕೆದ್ದನು.

"ಕುಡಿತದಂಗಡಿಗೆ ಹೋಗಿ ಸ್ವಲ್ಪ ಹೊತ್ತು ಜನರ ಜತೇಲಿ ಕೂತಿರ್ತೀನಿ.... ಹೊಹೋಲ್ ಬರೋದು ಕಾಣಲಿಲ್ಲ. ಪುನಃ ಅದೇ ಕೆಲಸಕ್ಕೆ ಹೋಗಿದ್ದಾನೊ?"

"ಹೌದು," ಎಂದು ತಾಯಿ ಮುಗುಳ್ನಗುತ್ತ ಉತ್ತರವಿತ್ತಳು.

"ಒಳ್ಳೇದು! ನಾನು ಬಂದಿದ್ದೇಂತ ಆತನಿಗೆ ಹೇಳು...."

ಭುಜಕ್ಕೆ ಭುಜ ತಗಲಿಸಿಕೊಂಡು ಜತೆಯಾಗಿಯೇ, ಒಬ್ಬರನ್ನೊಬ್ಬರು ನೋಡದೆಯೇ ಪರಸ್ಪರ ಮಾತಾಡುತ್ತ, ಅವರು ಎದ್ದರು.

"ಒಳ್ಳೇದು. ಹೋಗಿ ಬರ್ತಿನಿ."

"ಹಾಗೇ ಆಗ್ಲಿ. ಕಾರ್ಖಾನೆಗೆ ಯಾವತ್ತು ನೋಟೀಸು ಕೊಡ್ತೀಯಾ?"

"ಆಗ್ಲೇ ಕೊಟ್ಬಿಟ್ಟೆ."

"ಯಾವಾಗ ಹೊರಡ್ತೀಯಾ?"

"ನಾಳೆ, ಬೆಳಿಗ್ಗೆ.... ಬರ್ತೀನಿ."

ಅಡ್ಡಾದಿಡ್ಡಿಯಾಗಿ ಅರೆ ಮನಸ್ಸಿನಿಂದಲೇ ಬಾಗಿ, ಬಾಗಿಲಿನ ಮೂಲಕ ಅವನು ಹೊರಹೋದ. ಕ್ಷಣಕಾಲ ತಾಯಿ, ಅವನ ಭಾರವಾದ ಹೆಜ್ಜೆಗಳ ಸಪ್ಪಳಗಳಿಗೂ ತನ್ನ ಹೃದಯವನ್ನು ಕಲಕುತ್ತಿದ್ದ ಸಂದೇಹಗಳಿಗೂ ಕಿವಿಗೊಡುತ್ತ ನಿಂತಳು. ಆಮೇಲೆ ಶಾಂತಳಾಗಿ ಅಲ್ಲಿಂದ ತಿರುಗಿ, ಇನ್ನೊಂದು ಕೊಠಡಿಯೊಳಕ್ಕೆ ಹೊಕ್ಕು, ಕಿಟಕಿಯ ತೆರೆಯನ್ನೆತ್ತಿದಳು. ಅದರಾಚೆ ಕತ್ತಲು ನಿಶ್ಚಲವಾಗಿ ನಿಂತಿತ್ತು.

"ಕತ್ತಲೆ ಜೀವನ ಇದು" ಎಂದು ತನ್ನಷ್ಟಕ್ಕೆ ಯೋಚಿಸಿದಳಾಕೆ.

ಬಲಿಷ್ಠವಾದ ಅಜಾನುಬಾಹುವಾದ ವ್ಯಾಕುಲಚಿತ್ತನಾದ ಆ ರೈತ ರೀಬಿನ್ನನ ಕುರಿತು ಅವಳು ಮರುಗಿದಳು.

....ಅಂದ್ರೇಯ್ ಉತ್ಸಾಹಿತನಾಗಿ ವಾಪಸು ಬಂದ.

ರೀಬಿನ್ನನ ಬಗ್ಗೆ ತಾಯಿ ಹೇಳಿದುದನ್ನೆಲ್ಲ ಕೇಳಿ, ಅಂದ್ರೇಯ್ ಉದ್ಗಾರವೆತ್ತಿದ:

"ತನ್ನ ಇಚ್ಚೆ ಪ್ರಕಾರ ಆತ ಹೋಗಲಿ. ನ್ಯಾಯಕ್ಕಾಗಿ ಕೂಗಿಕೊಂಡು, ಜನರನ್ನು ಉದ್ರೇಕಿಸ್ತಾ, ಹಳ್ಳಿಗಳಲೆಲ್ಲಾ ಸುತ್ತಾಡಲಿ. ನಮ್ಮ ಜತೆಯಲ್ಲಿ ಕೆಲಸ ಮಾಡೋದು

ಅವನಿಂದ ಆಗಲಾರದು. ಅವನ ತಲೆ ತುಂಬ ಹಳೆಯ ರೈತವಿಚಾರಗಳಿವೆ. ನಮ್ಮ ವಿಚಾರಗಳಿಗೆ ಅಲ್ಲಿ ಜಾಗವೇ ಇಲ್ಲ."

ತಾಯಿ, ಮಾತನ್ನು ತೂಗಿ ತೂಗಿ ಎಚ್ಚರಿಕೆಯಿಂದ ಹೇಳಿದಳು:

"ಮಹಾಶಯರ ವಿಷಯವಾಗಿ ಅವನು ಮಾತಾಡ್ದ. ಅವನು ಹೇಳಿದ್ದರಲ್ಲಿ ಏನೋ ಇದೆ. ನೀವು ಮೋಸಹೋಗದ ಹಾಗೆ ನೋಡ್ಕೋಬೇಕಪ್ಪಾ !"

ಹೊಹೋಲ್ ನಕ್ಕುಬಿಟ್ಟ.

"ಮೋಸ ಹೋಗೋದೆ? ಓ ಅಮ್ಮ ! ಹಣ ! ಅದೊಂದು ಇದ್ದಿದ್ದರೆ ! ನಾವಿನ್ನೂ ಬೇರೆಯವರ ಖರ್ಚಿಂದಲೇ ಕೆಲಸ ನಡೆಸ್ತಿದೇವೆ. ಉದಾಹರಣೆಗೆ ನಿಕೊಲಾಯ್ ಇವಾನೊವಿಚ್.ಅವನಿಗೆ ಬರೋದು ತಿಂಗಳಿಗೆ ಎಪ್ಪತ್ತೈದು ರೂಬಲ್. ಅದರಿಂದ ನಮಗೆ ಐವತ್ತು ಕೊಡ್ತಾನೆ. ಬೇರೆಯವರೂ ಹಾಗೆಯೇ. ಒಮ್ಮೊಮ್ಮೆ ಅರೆಹೊಟ್ಟೇಲಿರೋ ಕಾಲೇಜು ಹುಡುಗರು ಕೊಪೆಕ್‌ಗೆ ಕೊಪೆಕ್ ಸೇರಿಸಿ ಚಂದಾ ಎತ್ತಿ ನಮಗೆ ವಂತಿಗೆ ಕಳಿಸ್ತಾರೆ. ನಿಜಕ್ಕೂ ಮಹಾಶಯರಲ್ಲಿ ನಾನಾ ರೀತಿಯವರಿದ್ದಾರೆ. ಕೆಲವರು ನಮ್ಮನ್ನ ಬಿಟ್ಬಿಡ್ತಾರೆ, ಕೆಲವರು ಮೋಸ ಮಾಡ್ತಾರೆ, ಆದರೆ ಅವರಲ್ಲಿ ಅತ್ಯುತ್ತಮರು ಕೊನೇವರೆಗೂ ನಮ್ಮ ಜತೇಲೇ ಇರ್ತಾರೆ...."

ಕೈ ತಟ್ಟಿ ಆತ ಉತ್ಸಾಹದಿಂದ ಮಾತು ಮುಂದುವರಿಸಿದ:

"ಅಮ್ಮ ! ಅಂತಿಮ ಜಯದ ದಿವಸ ದೂರ-ದೂರ ಇದೆ. ಆದರೂ ಮೇ ಒಂದನೇ ದಿನಾಂಕ ಪ್ರದರ್ಶನ ಮಾಡ್ಬೇಕೂಂತಿದೀವಿ. ಭವ್ಯವಾಗಿರುತ್ತೆ !"

ರೀಬಿನ್ ಬಿತ್ತಿದ್ದ ಸಂದೇಹಗಳನ್ನೆಲ್ಲ ಅವನ ಉತ್ಸಾಹ ಚೆದುರಿಸಿಬಿಟ್ಟಿತು. ಅವನು ಕೂದಲ ಮೇಲೆ ಕೈಯಾಡಿಸುತ್ತ, ನೆಲವನ್ನೆ ದಿಟ್ಟಿಸಿ ನೋಡುತ್ತ, ಅತ್ತಿಂದಿತ್ತ ತುಳಿದಾಡಿದ.

"ಒಮ್ಮೊಮ್ಮೆ ಹೃದಯ ತುಂಬ ತುಂಬಿರುತ್ತೆ.... ಎಂಥ ಅನುಭವ ಆಗ ! ನೀನು ಎಲ್ಲಿಗೆ ಹೋದರೂ ಸರಿಯೆ, ಪ್ರತಿಯೊಬ್ಬನೂ ನಿನ್ನ ಸಂಗಾತಿ ಎಂದೇ ಅನಿಸುತ್ತೆ, ಎಲ್ಲರನ್ನು ಬೆಳಗಿಸ್ತಿರೋದೂ ಒಂದೇ ಜ್ಯೋತಿ. ಎಲ್ಲರೂ ಒಳ್ಳೆಯವರು, ದಯಾಶೀಲರು, ಸಂತೋಷಪ್ರಿಯರು. ಅಲ್ಲಿ ಒಬ್ಬರನ್ನೊಬ್ಬರು ತಿಳಿಕೊಳ್ಳೋಕೆ, ಮಾತಾಡಬೇಕಾದ ಅಗತ್ಯವಿಲ್ಲ. ಪ್ರತಿಯೊಂದು ಹೃದಯ ತನ್ನದೇ ಹಾಡು ಹಾಡಿದರೂ ಎಲ್ಲವೂ ಸೇರಿದ ಮಹಾ ಪಲ್ಲವಿಯ ಹಾಗೆ ಅವರು ಜೀವಿಸ್ತಾರೆ. ಆ ಎಲ್ಲ ಹಾಡುಗಳೂ ಒಂದೇ ನದಿಗೆ ಹರಿಯುವ ತೊರೆಗಳ ಹಾಗೆ. ಆ ನದಿ ಹೊಸ ಬಾಳಿನ ಸಂತೋಷ ಸಾಗರಕ್ಕೆ ವಿಸ್ತಾರವಾಗಿ ಸ್ವಚ್ಛಂದವಾಗಿ ಹರೀತದೆ."

ಆತನ ಯೋಚನೆಯ ಸರಣಿ ಕಡಿದು ಮಾತು ನಿಂತೀತೆಂಬ ಭಯದಿಂದ ಚಲಿಸದೇ ಇರಲು ತಾಯಿ ಯತ್ನಿಸಿದಳು. ಬೇರೆಯವರೆಲ್ಲರ ಮಾತಿಗಿಂತ ಆತ ಮಾತಾಡಿದಾಗ ತಾಯಿ ಯಾವಾಗಲೂ ಹೆಚ್ಚು ಆಸಕ್ತಿಯಿಂದ ಆಲಿಸುತ್ತಿದ್ದಳು. ಇತರರೆಲ್ಲರಿಗಿಂತ ಹೆಚ್ಚು ಸರಳವಾಗಿ ಆತ ಮಾತಾಡುತ್ತಿದ್ದ. ಅವನ ಮಾತುಗಳು ಹೃದಯಕ್ಕೆ ನೇರ

ವಾಗಿ ಹೋಗುತ್ತಿದ್ದುವು. ಭವಿಷ್ಯತ್ತಿನ ಮುನ್ನೋಟದ ವಿಷಯವಾಗಿ ಪಾವೆಲ್ ಎಂದೂ ಮಾತಾಡುತ್ತಿರಲಿಲ್ಲ. ಆದರೆ ಹೊಹೋಲ್ ಯಾವಾಗಲೂ ಭವಿಷ್ಯತ್ತಿನಲ್ಲೇ ಬಾಳುತ್ತಿದ್ದ ಹಾಗೆ ಭಾಸವಾಗುತ್ತಿತ್ತು. ಪ್ರಪಂಚದ ಮೇಲಿನ ಎಲ್ಲಾ ಜನರಿಗೆ ಮುಂದೆ ಬರಲಿದ್ದ ಸಂತೋಷದ ಬಗೆಗೆ ಅವನು ಮಾತಾಡುತ್ತಿದ್ದ. ಆ ಮಾತುಗಳನ್ನು ತಾಯಿ ಕೇಳುತ್ತಿದ್ದಳು. ತನ್ನ ಮಗನು ಮತ್ತು ಆತನ ಎಲ್ಲ ಸಂಗಾತಿಗಳ ಜೀವನ ಮತ್ತು ಚಟುವಟಿಕೆಗೆ ಒಂದು ಅರ್ಥ ಕೊಡುತ್ತಿದ್ದುವು ಆ ಮಾತುಗಳು.

ತಲೆಯಲುಗಿಸಿ ಹೊಹೋಲ್ ಮಾತು ಮುಂದುವರಿಸಿದ:

"ಇದ್ದಕ್ಕಿದ್ದ ಹಾಗೆ ಜಾಗೃತಿಗೊಳ್ಳುತ್ತೇವೆ. ಸುತ್ತಲೂ ನೋಡ್ತೇವಿ. ಕಾಣೋದೇನು? ಎಲ್ಲೆಲ್ಲೂ ನಿರ್ಜೀವತೆ, ಹೊಲಸು ತಾಂಡವಾಡುತ್ತಿದೆ; ಪ್ರತಿಯೊಬ್ಬರಿಗೂ ಆಯಾಸವಾಗಿದೆ: ಕೋಪಗೊಂಡಿದ್ದಾರೆ...."

ಬಹು ದುಃಖದಿಂದ ಆತ ಮುಂದುವರಿಸಿದ:

"ಜನತೇಲಿ ವಿಶ್ವಾಸ ಇಡಕೂಡದು. ಜನರ ವಿಷಯದಲ್ಲಿ ಹೆದರಿಕೆ ಇರಬೇಕು. ಅವರನ್ನು ದ್ವೇಷಿಸಲೂ ಬೇಕು. ಆದರಿಂದ ನೋವಾಗುತ್ತೆ ಅಂತ ಗೊತ್ತು. ಎರಡು ಪಾರ್ಶ್ವ ಇವೆ ಮನುಷ್ಯನಿಗೆ, ಅವನ ವಿಷಯದಲ್ಲಿ ಪ್ರೀತಿ ಮಾತ್ರ ಇರಬೇಕೂಂತ ನೀನು ಅಪೇಕ್ಷಿಸಬಹುದು. ಆದರೆ ಹ್ಯಾಗೆ ಸಾಧ್ಯ? ಕಾಡು ಮೃಗದ ಹಾಗೆ ಏರಿ ಬರುವವನನ್ನು, ನಿನ್ನಲ್ಲೂ ಒಂದು ಜೀವ ಇದೇಂತ ತಿಳೀದವನನ್ನು, ನಿನ್ನ ಮಾನವ ಮುಖವನ್ನೇ ನಜ್ಜುಗುಜ್ಜು ಮಾಡೋವನನ್ನು ಕ್ಷಮಿಸೋದು ಹ್ಯಾಗೆ ಸಾಧ್ಯ? ಅದನ್ನು ಕ್ಷಮಿಸೋದುಂಟೆ? ನನಗೆ ನೋವಾಯ್ತೂಂತಲ್ಲ. ನಾನು ಏನನ್ನ ಬೇಕಾದರೂ ಸಹಿಸಬಹುದು. ಆದರೆ ನಾನು ಸುಮ್ಮನಿದ್ದರೆ ಅಂಥ ದಂಡನೆಗೆ ನನ್ನ ಒಪ್ಪಿಗೆ ಇದೇಂತ ಭಾವಿಸ್ತಾರೆ. ಹಾಗೆ ಭಾವಿಸೋಕೆ ಬಿಡೋದಕ್ಕಾಗತ್ಯೆ? ಅದಕ್ಕೆ ನನ್ನ ಬೆನ್ನ ಹಿಂದೆ ಬೇರೆಯವರ್ನ ಹ್ಯಾಗೆ ಹೊಡೀಬೇಕೂಂತ ಕಲಿಯೋಕೆ ಅವರಿಗಿಷ್ಟ. ಇದಕ್ಕೆ ಅವಕಾಶ ಕೊಡಬಾರದು.

ಅತಿ ತೀಕ್ಷ್ಣವಾದ ಜ್ವಾಲೆಯಿಂದ ಅವನ ಕಣ್ಣುಗಳು ಉರಿಯುತ್ತಿದ್ದುವು. ಅಭಿಮಾನದಿಂದ ಬಿರುಸಾದ ತಲೆ ಸ್ವಲ್ಪ ಬಾಗಿತ್ತು. ಹೆಚ್ಚು ದೃಢತೆಯಿಂದ ಆತ ಮಾತನಾಡಿದ:

"ಒಂದು ಅನ್ಯಾಯದಿಂದ ನನಗೆ ನೋವಾಗಲಿ ಆಗದಿರಲಿ, ಆ ಅನ್ಯಾಯವನ್ನ ಕ್ಷಮಿಸೋಕೆ ನನಗೆ ಯಾವ ಹಕ್ಕೂ ಇಲ್ಲ; ಈ ಭೂಮಿ ಮೇಲಿರೋದು ನಾನೊಬ್ಬನೇ ಅಲ್ಲವಲ್ಲ! ಈ ದಿವಸ ನನಗೆ ಸ್ವಲ್ಪ ನೋವುಂಟು ಮಾಡಲು ಯಾರಿಗಾದರೂ ನಾನು ಆಸ್ಪದ ಕೊಡಬಹುದು. ಅದು ಕ್ಷುಲ್ಲಕ ಅಂತ ನಗಲೂ ಬಹುದು. ಆದರೆ ನಾಳೆ, ನನ್ನನ್ನ ನೋಯಿಸಿ ಯಶಸ್ವಿಯಾದ ಮನುಷ್ಯ, ಬೇರೊಬ್ಬರ ಚರ್ಮ ಸುಲೀತಾನೆ. ಎಲ್ಲರನ್ನೂ ಒಂದೇ ರೀತಿಯಾಗಿ ನೋಡೋಕಾಗೋದಿಲ್ಲ. ಪ್ರತಿಯೊಬ್ಬರನ್ನೂ ಅಳೆದು ನೋಡಬೇಕು. ಇವನು ನನ್ನವನು, ಅವನು ನನ್ನವನಲ್ಲ ಎಂಬುದನ್ನು ಅರಿಯಬೇಕು.

ಇದೆಲ್ಲ ನ್ಯಾಯವೆ.... ಆದರೆ ಮನಸ್ಸಿಗೆ ಹೆಚ್ಚೇನೂ ಸಮಾಧಾನವಿಲ್ಲ ಇದರಿಂದ."

ಅದೇಕೋ ಏನೋ ತಾಯಿಯು ಸಾಷಳ ವಿಷಯವಾಗಿ ಯೋಚಿಸಿದಳು. ಆಮೇಲೆ ಆ ಅಧಿಕಾರಿಯು ನೆನಪು ಬಂತು.

"ಜರಡಿ ಹಿಡಿಯದ ಹಿಟ್ಟಿನಿಂದ ಎಂಥ ರೊಟ್ಟಿ ಆದೀತು ಹೇಳು?" ಎಂದು ನಿಟ್ಟುಸಿರು ಬಿಟ್ಟು ತಾಯಿ ಹೇಳಿದಳು.

"ಅದೇ ಬಂದಿರೋ ತೊಂದರೆ!" ಎಂದು ಹೊಹೋಲ್ ಉದ್ಗರಿಸಿದ.

"ಹೌದು," ಎಂದಳು ತಾಯಿ.

ತನ್ನ ಗಂಡನ ನೆನಪಾಯಿತು ಆಕೆಗೆ. ಪಾಚಿ ತುಂಬಿದ್ದ ದೊಡ್ಡದೊಂದು ಕಲ್ಲಿನಷ್ಟೇ ಭಾರ – ಅಷ್ಟೇ ನಿರುತ್ಸಾಹಿಯಾಗಿ ಕಂಡನು.... ಹೊಹೋಲ್ ನತಾಷಳನ್ನೂ ಪಾವೆಲ್ ಸಾಷಳನ್ನೂ ಮದುವೆಯಾದರೆ ಹೇಗಾದೀತೆಂದು ಅವಳು ಕಲ್ಪಿಸಿಕೊಂಡಳು.

ತನ್ನ ಮಾತಿನ ಸರಣಿಯನ್ನೇ ಮುಂದುವರಿಸುತ್ತ ಹೊಹೋಲ್ ಹೇಳಿದ:

"ಆ ತೊಂದರೆ ಯಾಕೆ ಹಾಗಿದೆ ಹೇಳು? ಅಂಗೈ ಮೇಲಿನ ನೆಲ್ಲೀಕಾಯಿಯ ಹಾಗೆ ಕಾರಣ ಸ್ಪಷ್ಟವಾಗಿದೆ. ಅದೇನೆಂದರೆ ಜನರೆಲ್ಲಾ ಒಂದೇ ಮಟ್ಟದಲ್ಲಿ ಜೀವಿಸುತ್ತಿಲ್ಲ. ಜೀವನಮಟ್ಟಾನ ಸಮ ಮಾಡೋಣ. ಮನಸ್ಸು ಆಲೋಚಿಸಿ ಸಾಧಿಸಿರುವುದನ್ನೆಲ್ಲಾ, ಕೈ ತಯಾರ್ಮ್ಮಾಡಿದ್ದನ್ನೆಲ್ಲ, ನಾವು ಸಾಧಿಸಿರುವುದನ್ನೆಲ್ಲಾ ಹಂಚಿಬಿಡೋಣ. ಜನರನ್ನ, ಹೆದರಿಕೆಯ – ಹೊಟ್ಟೆಕಿಚ್ಚಿನ ಗುಲಾಮರಾಗಿ ಮಾಡೋದು ಬೇಡ. ದುರಾಸೆ – ಮೂರ್ಖತನದ ಕೈದಿಗಳಾಗಿ ಮಾಡೋದು ಬೇಡ...."

....ಇದಾದ ಮೇಲೆ, ಅವರು ಇದೇ ರೀತಿ ಅನೇಕ ಬಾರಿ ಮಾತುಕತೆಗಳನ್ನು ನಡೆಸಿದರು.

ಅಂದ್ರೇಯ್‌ಗೆ ಕಾರಖಾನೆಯಲ್ಲಿ ಮತ್ತೆ ಕೆಲಸ ದೊರೆಯಿತು. ತನ್ನ ಸಂಪಾದನೆಯನ್ನೆಲ್ಲ ಆತ ತಾಯಿಗೆ ಕೊಟ್ಟುಬಿಡುತ್ತಿದ್ದ. ಪಾವೆಲ್‌ನಿಂದ ಹಿಂದೆ ಎಷ್ಟು ಸಲೀಸಾಗಿ ಅವನ ಸಂಪಾದನೆಯನ್ನು ಪಡೆಯುತ್ತಿದ್ದಳೋ ಈಗಲೂ ಹಾಗೆಯೇ ಆಕೆ ತೆಗೆದುಕೊಳ್ಳುತ್ತಿದ್ದಳು.

ಕೆಲವೊಮ್ಮೆ ಅಂದ್ರೇಯ್, ಕಣ್ಣಿನಲ್ಲಿ ತುಂಟತನ ಕುಣಿಸುತ್ತಾ, "ಅಮ್ಮಾ! ಸ್ವಲ್ಪ ಓದೋಣವೆ? ಏನಂತೀರಿ?" ಎಂದು ಕೇಳುತ್ತಿದ್ದ.

ಆಕೆ ನಗುತ್ತಿದ್ದಳು. ಆದರೆ ಓದಲು ಮಾತ್ರ ಖಡಾಖಂಡಿತವಾಗಿ ಒಪ್ಪುತ್ತಿರಲಿಲ್ಲ. ಅವನ ತುಂಟ ನೋಟದಿಂದ ಆಕೆಗೆ ನೋವಾಗುತ್ತಿತ್ತು.

"ಇದೊಂದು ಗೇಲಿ ಸಂಗತಿಯಾದರೆ ಯಾಕೆ ತೊಂದರೆಪಟ್ಕೋಬೇಕು?" ಎಂದು ಆಕೆ ತನ್ನ ಮನಸ್ಸಿನಲ್ಲೇ ಯೋಚಿಸಿಕೊಳ್ಳುತ್ತಿದ್ದಳು.

ಆದರೂ ಹೆಚ್ಚು ಹೆಚ್ಚಾಗಿ ಆಕೆ ಯಾವುದಾದರೊಂದು ಪದದ ಅರ್ಥವನ್ನು ಅವನೊಡನೆ ಕೇಳುತ್ತಿದ್ದಳು. ಹಾಗೆ ಕೇಳಿದಾಗ, ಯಾವ ಆಸಕ್ತಿಯನ್ನೂ ತೋರ್ಪಡಿಸದೆ ಎತ್ತಲೋ ದೃಷ್ಟಿ ಹಾಯಿಸುತ್ತಿದ್ದಳು. ತಾಯಿ ರಹಸ್ಯವಾಗಿ ಕಲಿಯುತ್ತಿ

ದ್ದಳೆಂಬುದನ್ನು ಅಂದ್ರೇಯ್ ಊಹಿಸಿಕೊಂಡ. ಆಕೆ ಪಡುತ್ತಿದ್ದ ಸಂಕೋಚವನ್ನು ಅರ್ಥಮಾಡಿಕೊಂಡು, ಓದೆಂದು ಒತ್ತಾಯಿಸುವುದನ್ನು ಅವನು ನಿಲ್ಲಿಸಿದ.

ಒಂದು ದಿನ ತಾಯಿ, "ಅಂದ್ರ್ಯೂಷ, ನನ್ನ ದೃಷ್ಟಿ ಬಡಕಲಾಗ್ತಿದೆ, ನನಗೆ ಕನ್ನಡಕ ಬೇಕು," ಎಂದಳು.

"ಅದೇನು ಮಹಾ ವಿಷಯ? ಭಾನುವಾರ ಶಹರದ ಒಬ್ಬ ಡಾಕ್ಟರಲ್ಲಿಗೆ ಹೋಗ್ಗೋಣ. ನಿಮ್ಮ ಕನ್ನಡಕ ಬರುತ್ತೆ ಆಮೇಲೆ," ಎಂದು ಅಂದ್ರೇಯ್ ಉತ್ತರ ವಿತ್ತ.

೧೯

ಆಕೆಯು ಅಧಿಕಾರಿಯ ಬಳಿಗೆ ಹೋಗಿ, ತಾನು ಪಾವೆಲ್‌ನನ್ನು ನೋಡಬಹುದೇ ಎಂದು ಮೂರು ಸಲ ಕೇಳಿ ಬಂದಳು. ಆದರೆ, ದೊಡ್ಡ ಮೂಗಿನ, ಕೆಂಪು ಕೆನ್ನೆಗಳ, ಬಿಳಿಗೂದಲಿನ ಮುದುಕನೊಬ್ಬ – ಪೋಲೀಸ್ ಮುಖ್ಯಾಧಿಕಾರಿ – ಪ್ರತಿಬಾರಿಯೂ ನಗುನಗುತ್ತಲೇ ನಿರಾಕರಿಸುತ್ತಿದ್ದ:

"ಕನಿಷ್ಠ ಪಕ್ಷ ಇನ್ನೊಂದು ವಾರವಾದರೂ ಕಾಯಬೇಕಮ್ಮ. ಇನ್ನೊಂದು ವಾರವಾದ ಮೇಲೆ ನೋಡೋಣ. ಈಗ ಮಾತ್ರ ಸಾಧ್ಯವೇ ಇಲ್ಲ."

ಚೆನ್ನಾಗಿ ತಿಂದುಂಡು ದುಂಡು ದುಂಡಗೆ ಇದ್ದನಾತ. ಬಹಳ ಕಾಲ ಹಾಗೆಯೇ ಬಿಟ್ಟುದರಿಂದ ಬೂಜು ಹಿಡಿದಿದ್ದ ಕಳಿತ ದೊಡ್ಡ ಹಣ್ಣಿನ ಹಾಗೆ ಆತ ತಾಯಿಗೆ ಕಾಣಿ ಸುತ್ತಿದ್ದ. ಅವನು ಯಾವಾಗಲೂ ತನ್ನ ಸಣ್ಣನೆಯ ಬಿಳಿಯ ಹಲ್ಲುಗಳನ್ನು ಹಳದಿ ಬಣ್ಣದ ಹಂಚಿಕಡ್ಡಿಯಿಂದ ಚುಚ್ಚಿಕೊಳ್ಳುತ್ತಿದ್ದ. ಅವನ ಸಣ್ಣ ಹಸುರುಗಣ್ಣುಗಳು ದಯೆಯನ್ನು ಸೂಸುತ್ತ ಮುಗುಳ್ನಗುತ್ತಿದ್ದುವು. ಆತನಿಗೆ ವಿನಯಪೂರ್ವಕ, ಮೈತ್ರಿಯುತ ಕಂಠವಿತ್ತು.

"ತುಂಬಾ ನಯವಾಗಿ ಮಾತಾಡ್ತಾನೆ. ಯಾವಾಗಲೂ ಮುಗುಳ್ನಗ್ತಾ ಇರ್‍ತಾನೆ" ಎಂದು ಆಕೆ ಹೊಹೋಲ್‌ಗೆ ಹೇಳಿದಳು.

"ಓಹೋ! ಅಲ್ಲವೆ ಮತ್ತೆ? ಅವರೆಲ್ಲಾ ತುಂಬಾ ಚೆನ್ನಾಗಿರ್‍ತಾರೆ. ಒಳ್ಳೇ ನಯ, ಯಾವಾಗಲೂ ನಗು. 'ಇಲ್ಲೊಬ್ಬ ಬುದ್ಧಿಶಾಲಿ ಪ್ರಾಮಾಣಿಕ ವ್ಯಕ್ತಿ ಇದ್ದಾನೆ, ಅವನು ನಮಗೆ ತುಂಬ ಅಪಾಯಕಾರಿ. ಅವನನ್ನು ಸ್ವಲ್ಪ ಹಾಗೆಯೇ ಗಲ್ಲಿಗೇರಿಸ್ಬಿಡೀಪ್ಪಾ' ಅಂತ ಆಜ್ಞೆ ಬರುತ್ತೆ. ಅವರು ನಗುನಗ್ತಾ ಆತನನ್ನ ಗಲ್ಲಿಗೇರಿಸ್ತಾರೆ, ಆಮೇಲೂ ನಗನಗ್ತಾ ಇರ್‍ತಾರೆ."

"ಅವತ್ತು ನಮ್ಮನೇಗೆ ಝಡ್ತಿಗೆ ಬಂದಿದ್ನಲ್ಲ ಅವನು ಬೇರೆ ರೀತಿ ಇದ್ದ. ಅವ ನೆಂಥ ಹಂದಿ ಅನ್ನೋದು ನೋಡಿದೇಟ್ಗೇ ಗೊತ್ತಾಗ್ತಿತ್ತು."

"ಅವರು ಯಾರೂ ಮನುಷ್ಯರಲ್ಲವಮ್ಮ. ಜನರನ್ನ ಹೊಡೆದು ಬೀಳ್ಸೋಕೆ ಇರೋ ಸುತ್ತಿಗೆಗಳು. ನಮ್ಮಂಥ ಜನರನ್ನ ಕೆತ್ತಿ ಬಗ್ಗಿಸೋಕೆ ಇರೋ ಉಳಿಗಳು.

ಇವರ್ನಂತೂ ಮೇಲಧಿಕಾರಿಗಳು ತಮಗೆ ಬೇಕಾದ ರೂಪಕ್ಕೆ ತಂದ್ಬಿಟ್ಟಿದ್ದಾರೆ. ಯೋಚ್ನೆ ಮಾಡ್ದೆ, ಯಾಕೇಂತ ಕೇಳ್ದೆ, ಕೊಟ್ಟ ಆಜ್ಞೇನ ಪಾಲಿಸೋ ಜಾತಿ ಅದು."

....ಕಡೆಗೊಮ್ಮೆ ಪಾವೆಲ್‌ನನ್ನು ನೋಡಲು ಅನುಮತಿ ದೊರೆಯಿತು. ಒಂದು ಭಾನುವಾರ ಸೆರೆಮನೆಯ ಕಚೇರಿಯೊಂದರ ಮೂಲೆಯಲ್ಲಿ ದೀನತನದಿಂದ ಆಕೆ ಕುಳಿತಳು. ಆ ಇಕ್ಕಟ್ಟಿನ ಹೊಲಸಾದ ತಗ್ಗು ಛಾವಣಿಯ ಕೊಠಡಿಯಲ್ಲಿ ಕೈದಿಗಳನ್ನು ನೋಡಲು ತಮ್ಮ ಸರದಿ ಕಾಯುತ್ತಿದ್ದ ಇನ್ನೂ ಅನೇಕ ಜನರಿದ್ದರು. ಅವರೆಲ್ಲ ಅಲ್ಲಿಗೆ ಬಂದುದು ಅದೇ ಮೊದಲ ಬಾರಿ ಅಲ್ಲವೆನ್ನುವುದು ಸ್ಪಷ್ಟವಾಗಿತ್ತು. ಯಾಕೆಂದರೆ ಅವರಿಗೆಲ್ಲ ಪರಸ್ಪರ ಪರಿಚಯವಿತ್ತು. ಅವರೆಲ್ಲ ಮೆಲುದನಿಯಲ್ಲಿ, ಜೇಡರಬಲೆಯ ಹಾಗೆ, ಒಂದು ವಿಷಯಕ್ಕೊಂದು ತಗಲಿಸಿಕೊಂಡು ಮಾತುಕತೆ ನಡೆಸಿದ್ದರು.

ತೊಡೆಯ ಮೇಲೊಂದು ಪ್ರವಾಸಿಗಳ ಕೈಚೀಲವಿರಿಸಿಕೊಂಡಿದ್ದ ಜೋಲು ಮುಖದ ದಪ್ಪನೆಯ ಒಬ್ಬ ಹೆಂಗಸು ಹೇಳಿದಳು:

"ನಿಮಗೆ ಗೊತ್ತಾ? ಇವತ್ತು ಬೆಳಿಗ್ಗೆ ಪ್ರಾರ್ಥನೆ ಸಮಯದಲ್ಲಿ ಚರ್ಚಿನ ಪಾರುಪತ್ತೇಗಾರ, ಒಬ್ಬ ಕೀರ್ತನೆ ಹುಡುಗನ ಕಿವಿಯನ್ನೇ ಹರಿದ್ಬಿಟ್ಟ."

ನಿವೃತ್ತ ಮಿಲಿಟರಿ ಅಧಿಕಾರಿಯ ಸಮವಸ್ತ್ರ ಧರಿಸಿದ್ದ ಹಿರಿಯ ಗೃಹಸ್ಥನೊಬ್ಬ, ಗಟ್ಟಿಯಾಗಿ ಕೆಮ್ಮಿ "ಕೀರ್ತನೆ ಹುಡುಗರೆಲ್ಲಾ ಪೋಲಿಗಳು" ಎಂದ.

ಬೋಳುತಲೆಯ ಗುಜ್ಜುಗಾಲಿನ ನಿಡುದೋಳಿನ ಮುನ್‌ಚಾಚಿದ ಗಡ್ಡದ ಗಿಡ್ಡ ವ್ಯಕ್ತಿಯೊಬ್ಬನು, ಕಚೇರಿಯಲ್ಲಿ ಅತ್ತಿತ್ತ ಗಡಿಬಿಡಿಯ ನಡಿಗೆಯಿಂದ ಓಡಾಡುತ್ತಿದ್ದ. ಒಡಕಾದ ಉದ್ವಿಗ್ನಸ್ವರದಿಂದ ಗೊಣಗುತ್ತಿದ್ದ:

"ಬೆಲೆಗಳೆಲ್ಲಾ ಏರ್ತಾ ಇವೆ. ಅದರಿಂದಲೇ ಜನರೂ ಸಿಟ್ಟಿಗೇಳ್ತಿದಾರೆ. ಎರಡನೇ ದರ್ಜೆಯ ದನದ ಮಾಂಸ ಪೌಂಡಿಗೆ ಹದಿನಾಲ್ಕು ಕೊಪೆಕ್! ಬ್ರೆಡ್ ಪುನಃ ಎರಡೂವರೆಗೆ ಏರಿದೆ...."

ಕೆಲವು ವೇಳೆ ಕೈದಿಗಳು ಒಳಕ್ಕೆ ಬರುತ್ತಿದ್ದರು. ಎಲ್ಲರೂ ಒಂದೇ ತರದ ಬೂದು ಬಣ್ಣದ ಸಮವಸ್ತ್ರ ಧರಿಸಿರುತ್ತಿದ್ದರು. ಕಾಲಿಗೆ ಭಾರವಾದ ಷೂಗಳಿರುತ್ತಿದ್ದುವು. ಅರೆ ಬೆಳಕಿನ ಆ ಕೊಠಡಿಗೆ ಬರುತ್ತಲೇ ಅವರು ಪಿಳಿ ಪಿಳಿ ಕಣ್ಣು ಬಿಡುತ್ತಿದ್ದರು. ಅವರಲ್ಲಿ ಒಬ್ಬಾತನ ಕಾಲಿಗೆ ಸಂಕೋಲೆಗಳಿರುತ್ತಿದ್ದುವು.

ಸೆರೆಮನೆಯ ಎಲ್ಲವೂ ವಿಚಿತ್ರ ರೀತಿಯಲ್ಲಿ ಶಾಂತವಾಗಿರುತ್ತಿತ್ತು; ಅಸಹ್ಯ ರೀತಿಯ ಸರಳತೆಯಿತ್ತು. ಈ ಜನರೆಲ್ಲಾ ಎಷ್ಟೋ ಕಾಲದಿಂದ ತಮ್ಮ ಅದೃಷ್ಟಕ್ಕೆ ಹೊಂದಿಕೊಂಡು ರೂಢಿಯಾಗಿದ್ದಂತೆ ಕಾಣಿಸುತ್ತಿದ್ದರು. ಅವರಲ್ಲಿ ತಮ್ಮ ಶಿಕ್ಷೆಯ ಅವಧಿಯನ್ನು ಕಳೆಯುತ್ತಿದ್ದವರು ಕೆಲವರು. ಸೋಮಾರಿಗಳ ಹಾಗೆ ಬಾಯಿ ಆಕಳಿಸಿಕೊಂಡು ಕಾವಲಿರುತ್ತಿದ್ದವರು ಕೆಲವರು. ಇನ್ನು ಕೆಲವರು ಕ್ರಮವಾಗಿ ಆಗಾಗ ಕೈದಿಗಳಿಗೆ ಭೇಟಿ ಕೊಡಲು. ಬೇಸರಪಡುತ್ತ ಬರುತ್ತಿದ್ದವರು. ಅದನ್ನೆಲ್ಲ ನೋಡುತ್ತ ಸಹನೆಯಿಂದ ಇರುವುದಾಗಲಿಲ್ಲ ತಾಯಿಗೆ. ಆಕೆಯ ಹೃದಯ ಮಿಡಿಯುತ್ತಿತ್ತು.

ತನ್ನ ಸುತ್ತಲಿದ್ದ ಯಾವುದರ ಅರ್ಥವೂ ಆಗದವಳಂತೆ ಆಕೆ ನೋಡುತ್ತಿದ್ದಳು. ವ್ಯಸನಕರವಾದ ಆ ಎಲ್ಲ ಸರಳತೆಯಿಂದ ಆಕೆಗೆ ಆಶ್ಚರ್ಯವಾಗಿತ್ತು.

ಆಕೆಯ ಪಕ್ಕದಲ್ಲಿ ಸಣ್ಣ ಆಕೃತಿಯ ಮುದುಕಿಯೊಬ್ಬಳು ಕುಳಿತಿದ್ದಳು. ಅವಳಿಗೆ ಸುಕ್ಕುಗೊಂಡಿದ್ದ ಮುಖವಿತ್ತು; ಚುರುಕಾದ ಕಣ್ಣುಗಳಿದ್ದುವು. ಎಲ್ಲರ ಮಾತುಗಳಿಗೂ ಕಿವಿಗೊಡಲೆಂದು ಆಕೆ ತನ್ನ ನೀಳವಾದ ಕೊರಳನ್ನು ಅತ್ತಿತ್ತ ತಿರುಗಿಸುತ್ತಿದ್ದಳು. ಪ್ರತಿಯೊಬ್ಬರ ಕಡೆಗೂ ತನ್ನ ಕಣ್ಣುಗಳ ಚುರುಕಾದ ಮಿಣುಕು ನೋಟವನ್ನು ಬೀರುತ್ತಿದ್ದಳು.

ತಾಯಿ ಮೃದುವಾಗಿ, "ನೀವು ಯಾರನ್ನ ನೋಡೋಕೆ ಬಂದಿದ್ದೀರಿ?" ಎಂದು ಆಕೆಯನ್ನು ಕೇಳಿದಳು.

"ನನ್ನ ಮಗನನ್ನ. ಅವನು ಕಾಲೇಜ್ ವಿದ್ಯಾರ್ಥಿ. ನೀವು ಯಾರನ್ನು ನೋಡಲು ಬಂದಿದ್ದೀರಿ?" ಎಂದು ಆ ಮುದುಕಿ ಗಟ್ಟಿಯಾಗಿ ಕೇಳಿದಳು.

"ನಾನೂ ಮಗನನ್ನ ನೋಡೋಕೆ. ಅವನು ಕೆಲಸಗಾರ."

"ಅವನ ಹೆಸರೇನು?"

"ವ್ಲಾಸೊವ್."

"ಆ ಹೆಸರು ಕೇಳಿಲ್ಲ. ಬಹಳ ದಿವಸದಿಂದ ಇದ್ದಾನೇನು?"

"ಸುಮಾರು ಏಳು ವಾರ ಆಯ್ತು."

"ನಮ್ಮವನು ಬಂದು ಆಗಲೇ ಹತ್ತು ತಿಂಗಳಾಯ್ತು!" ಎಂದಳು ಆ ಮುದುಕಿ. ಆಕೆಯ ಸ್ವರದಲ್ಲಿ ವಿಚಿತ್ರವಾದ ಹೆಮ್ಮೆ ಭಾವದಂತಹ ರಾಗವನ್ನು ಪೆಲಗೇಯ ಕಂಡಳು.

ಬೋಳು ತಲೆಯ ಮುದುಕ ಮಾತಾಡುತ್ತಲೇ ಇದ್ದ:

"ಹೌದು, ಹೌದು. ಇನ್ನೇನೂ ತಾಳ್ಮೆ ಉಳಿದಿಲ್ಲ. ಪ್ರತಿಯೊಬ್ಬನಿಗೂ ಕೋಪ ಏರಿದೆ. ಪ್ರತಿಯೊಬ್ಬನೂ ಕೂಗಾಡ್ತಾನೆ. ಬೆಲೆಗಳು ಏರ್ತಾನೆ ಇವೆ, ಅದಕ್ಕೆ ತಕ್ಕ ಹಾಗೆ ಜನವೂ ಅಗ್ಗವಾಗ್ತಾ ಇದ್ದಾರೆ. ಇದನ್ನು ನಿಲ್ಲಿಸೋಕೆ ಯಾರೂ ಮುಂದೆ ಬರೋದೇ ಇಲ್ಲ."

ನಿವೃತ್ತ ಅಧಿಕಾರಿ ಹೇಳಿದ:

"ನೀವು ಹೇಳೋದು ಸರಿ! ಇದು ಅನ್ಯಾಯ. ಸುಮ್ಮನಿರಿ ಅಂತ ಯಾರಾದರೂ ಗಟ್ಟಿಯಾದ ಸ್ವರದಲ್ಲಿ ಈಗಲಾದರೂ ಆಜ್ಞೆ ಕೊಡಬೇಕು. ಇದೇ ನಮಗೆ ಬೇಕಾದ್ದು. ಒಂದು ಗಟ್ಟಿಯಾದ ಸ್ವರ...."

ಪ್ರತಿಯೊಬ್ಬರೂ ಮಾತಾಡತೊಡಗಿದರು. ಮಾತುಕತೆಯಲ್ಲಿ ಚೇತನ ತುಂಬಿತು. ಜೀವನದ ವಿಷಯದಲ್ಲಿ ತಮ್ಮ ತಮ್ಮ ಅಭಿಪ್ರಾಯ ಹೇಳಲು ಪ್ರತಿಯೊಬ್ಬರೂ ಕಾತರರಾಗಿದ್ದರು. ಆದರೆ ಅವರೆಲ್ಲ ತಗ್ಗಿದ ಸ್ವರದಲ್ಲಿ ಮಾತಾಡಿದರು. ಅವರು ಹೇಳುತ್ತಿದ್ದುದೆಲ್ಲವೂ ತನ್ನ ವಿಚಾರಗಳಿಗಿಂತ ತೀರ ಭಿನ್ನವಾಗಿದ್ದ ಹಾಗೆ ತಾಯಿಗೆ

ತೋರಿತು. ತನ್ನ ಮನೆಯಲ್ಲಿ ಮಾತಿನ ರೀತಿಯೇ ಬೇರೆ – ಹೆಚ್ಚು ಸ್ಪಷ್ಟ, ಹೆಚ್ಚು ಸರಳ. ಸ್ವರವೂ ಗಟ್ಟಿಯಾದದ್ದೇ.

ಕೆಂಪನೆಯ ಚಚ್ಚೌಕವಾಗಿದ್ದ ಗಡ್ಡವಿದ್ದ ಒಬ್ಬ ದಪ್ಪನೆಯ ಜೇಲರ್ ಆಕೆಯ ಹೆಸರನ್ನು ಕೂಗಿ ಕರೆದ. ತಲೆಯಿಂದ ಪಾದಗಳವರೆಗೆ ಆಕೆಯನ್ನು ನೋಡಿದ.

"ಬಾ ನನ್ನ ಹಿಂದೆ" ಎಂದು ಹೇಳಿ ಕುಂಟುತ್ತ ಆತ ನಡೆದ.

ನಡೆಯುತ್ತಿದ್ದಂತೆ, ಆತನನ್ನು ಮುಂದಕ್ಕೆ ತಳ್ಳಬೇಕು, ಬೇಗ ಬೇಗನೆ ನಡೆಯು ವಂತೆ ಮಾಡಬೇಕು, ಎಂಬ ಇಚ್ಛೆಯಾಯಿತು ತಾಯಿಗೆ.

ಸಣ್ಣದೊಂದು ಕೊಠಡಿಯಲ್ಲಿ ಪಾವೆಲ್ ನಗುತ್ತ, ಕೈ ಮುಂದಕ್ಕೆ ಚಾಚಿ ನಿಂತಿದ್ದ. ಸಣ್ಣನೆ ನಕ್ಕು, ಒಂದೇ ಸವನೆ ಪಿಳಿಪಿಳಿ ಕಣ್ಣುಬಿಡುತ್ತಾ ತಾಯಿ, ಆ ಕೈಯನ್ನು ಬಿಗಿಯಾಗಿ ಹಿಡಿದುಕೊಂಡಳು.

"ಮಗೂ..... ಮಗೂ...." ಎಂದಾಕೆ, ಮಾತು ಬರದೆ, ತೊದಲಿದಳು.

ಪಾವೆಲ್ ತಾಯಿಯ ಕೈಯನ್ನು ಬಿಗಿಯಾಗಿ ಹಿಡಿದುಕೊಳ್ಳುತ್ತ "ಸಮಾಧಾನವಾಗಿರಮ್ಮ...." ಎಂದು ಸಂತೈಸಿದ.

"ಏನಾಗಿದೆ ನನಗೆ?"

"ಒಳ್ಳೇ ತಾಯಿ! ಹುಂ" ಎಂದ ಜೈಲರ್, ನಿಟ್ಟುಸಿರುಬಿಡುತ್ತ. "ಎಲ್ಲಾ ಸರಿ! ನೀವು ದೂರ ದೂರ ನಿಂತು ಮಾತಾಡಿ. ನಿಮ್ಮಿಬ್ಬರ ನಡು ಸ್ವಲ್ಪ ಜಾಗ ಇರಲಿ" ಎಂದು ಗಟ್ಟಿಯಾಗಿ ಆಕಳಿಸುತ್ತ ಆತ ಹೇಳಿದ.

ಪಾವೆಲ್ ಆಕೆಯ ಆರೋಗ್ಯದ ಬಗೆಗೆ ವಿಚಾರಿಸಿದ. ಮನೆಯ ವಿಷಯ ಕೇಳಿದ.... ಬೇರೇನಾದರೂ ಪ್ರಶ್ನೆ ಕೇಳುತ್ತಾನೆ ಎಂದು ತಾಯಿ ನಿರೀಕ್ಷಿಸಿದಳು. ಆ ಪ್ರಶ್ನೆಗಳಿಗಾಗಿ ಆಕೆ ಮಗನ ಕಣ್ಣುಗಳನ್ನೆ ದಿಟ್ಟಿಸಿ ನೋಡಿ ಹುಡುಕಾಡಿದಳು. ಹಾಗೆ ಹುಡುಕಿ ಸಫಲಳಾಗಲಿಲ್ಲ. ಆತ ಎಂದಿನಂತೆ ಶಾಂತನಾಗಿಯೇ ಇದ್ದ. ಮುಖ ಸ್ವಲ್ಪ ಮ್ಲಾನವಾಗಿತ್ತಷ್ಟೆ. ಆತನ ಕಣ್ಣುಗಳು ಹೆಚ್ಚು ಅಗಲವಾಗಿದ್ದಂತೆ ಅವಳಿಗೆ ಅನಿಸಿತು.

"ಸಾಷ ನಿನಗೆ ನಮಸ್ಕಾರ ಹೇಳಿದ್ದಾಳೆ," ಎಂದಳು ತಾಯಿ.

ಪಾವೆಲ್‌ನ ಕಣ್ಣುಗಳು ಕಂಪಿಸಿದುವು. ಮುಖ ಮೃದುವಾಯಿತು. ತುಟಿಗಳ ಮೇಲೆ ಮುಗುಳ್ನಗೆ ಮೂಡಿತು. ತಾಯಿ ತನ್ನ ಹೃದಯದಲ್ಲಿ ಒಂದು ತೀವ್ರ ವೇದನೆಯನ್ನು ಅನುಭವಿಸಿದಳು. ನೊಂದುಕೊಂಡು ತಾಯಿ, ಸ್ವಲ್ಪ ತಳಮಳದಿಂದಲೇ ಕೇಳಿದಳು:

"ಅವರು ನಿನ್ನನ್ನ ಬೇಗನೆ ಬಿಡ್ತಾರೇನಪ್ಪಾ? ನಿನ್ನನ್ನು ಜೈಲಿಗೆ ಹಾಕಿರೋದಾದರೂ ಯಾತಕ್ಕೆ? ಆ ಕರಪತ್ರಗಳೇನೋ ಕಾರಖಾನೆಗೆ ಪುನಃ - ಬಂದಿವೆ."

ಪಾವೆಲ್‌ನ ಕಣ್ಣುಗಳು ಮಿನುಗಿದುವು.

"ನಿಜಕ್ಕೂ?" ಎಂದನಾತ ಬೇಗನೆ.

"ಇಂಥ ವಿಷಯ ಮಾತಾಡೋದನ್ನು ನಿಷೇಧಿಸಲಾಗಿದೆ! ನಿಮ್ಮ ಕುಟುಂಬದ

ವಿಷಯವಷ್ಟೇ ಮಾತಾಡ್ಬಹುದು...." ಎಂದು ಜೈಲರ್ ನಿದ್ದೆಯ ಸ್ವರದಲ್ಲಿ ಹೇಳಿದ.

"ಅದು ಕುಟುಂಬದ ವಿಷಯವಲ್ಲವೋ ?" ಎಂದು ತಾಯಿ ಪ್ರತಿಭಟಿಸಿದಳು.

"ಅದಕ್ಕೆಲ್ಲಾ ನಾನು ಉತ್ತರಕೊಡೋದಿಲ್ಲ. ನಿಷೇಧಿಸಲಾಗಿದೆ ....ಇಷ್ಟೆ !" ಎಂದು ಅಧಿಕಾರಿ ಯಾವ ಆಸಕ್ತಿಯೂ ಇಲ್ಲದವನ ಹಾಗೆ ಮಾತನಾಡಿದ.

"ಹಾಗೇ ಆಗಲಪ್ಪ," ಎನ್ನುತ್ತ ಪಾವೆಲ್, "ಮನೆಮಾತು ಹೇಳಮ್ಮ. ಏನು ಮಾಡ್ತಾ ಇದ್ದೀಯಾ ?" ಎಂದು ಕೇಳಿದ.

ತನ್ನ ಕಣ್ಣುಗಳಲ್ಲಿ ಯೌವನದ ತುಂಟತನದ ಸೋಟ ಬೀರುತ್ತ ಆಕೆ ಉತ್ತರ ವಿತ್ತಳು:

"ಓ, ನಾನು ಅದನ್ನೆಲ್ಲಾ ಕಾರಖಾನೆಗೆ ತಗೊಂಡು ಹೋಗ್ತಾ ಇದ್ದೀನಿ...."

ಅಲ್ಲಿ ತಡೆದು, ಮುಗುಳ್ನಕ್ಕು, ಮತ್ತೆ ಆಕೆ ಮುಂದುವರಿಸಿದಳು:

"ನಿನಗೆ ಗೊತ್ತಲ್ಲ.... ಮರೀಯ ತಯಾರಿಸೋ ಕೋಸಿನ ಸಾರು, ಅಂಬಲಿ, ಕಡಬು – ಅವನ್ನೆಲ್ಲ...."

ಪಾವೆಲ್‌ಗೆ ಅರ್ಥವಾಯಿತು. ಆತ ಚಕಿತನಾದ. ತಡೆಯಲಾಗದ ಸಂತೋಷದ ನಗು ಬಂತು ಅವನಿಗೆ. ತಲೆಗೂದಲೊಳಕ್ಕೆ ಕೈಯಾಡಿಸುತ್ತ ಆತ ನಿಂತ.

ಹಿಂದೆಂದೂ ತಾಯಿ ಕೇಳಿರದಂಥ ಮೃದುಸ್ವರದಲ್ಲಿ ಆತ ಮಾತಾಡಿದ:

"ನಿನಗೆ ಮಾಡೋದಕ್ಕೆ ಏನಾದರೂ ಕೆಲಸ ಇರೋದು ಒಳ್ಳೇದು. ಇದು ಒಂಟಿಯಾಗಿ ಬೇಸರಗೊಳ್ಳಲು ಬಿಡುವುದಿಲ್ಲ."

"ಕರಪತ್ರಗಳು ಪುನಃ ಬಂದಾಗ ಅವರು ನನ್ನನ್ನೂ ಝಡ್ತಿ ಮಾಡಿದ್ರು" ಎಂದು ತಾಯಿ ಸ್ವಲ್ಪ ಹೆಮ್ಮೆಯ ಧ್ವನಿಯಲ್ಲೇ ಹೇಳಿದಳು,

"ತಿರುಗಿ ಅದೇ ಮಾತು !" ಎಂದ ಜೇಲರ್, ರೇಗಿದವನಂತೆ. "ಅದು ನಿಷಿದ್ಧ ಅಂತ ಒಮ್ಮೆ ಹೇಳ್ದೆ ! ಮನುಷ್ಯನನ್ನ ಜೈಲಿಗೆ ಹಾಕೋದು ಯಾಕೆ ? ಅವನಿಗೇನೂ ತಿಳೀಬಾರದೂಂತಲ್ವ ? ಆದರೆ ನೀವಿಲ್ಲಿ ನಡೆಸಿಯೇ ಬಿಟ್ಟಿದ್ದೀರಾ ಮಾತು. ಯಾವುದು ನಿಷಿದ್ಧ ಅಂತ ನೀವು ಬೇಗ ತಿಳಕೊಂಡಷ್ಟೂ ವಾಸಿ !"

ಪಾವೆಲ್ ಹೇಳಿದ:

"ಇನ್ನು ಸಾಕಮ್ಮ. ಮತ್ವೇಯ್ ಇವಾನೊವಿಚ್ ತುಂಬಾ ಒಳ್ಳೆಯವರು. ಅವರನ್ನ ರೇಗಿಸೋದರಲ್ಲಿ ಅರ್ಥವಿಲ್ಲ. ನಾವೊಳ್ಳೇ ಸ್ನೇಹಿತರು. ಇವತ್ತು ನೀನು ಭೇಟಿಗೆ ಬಂದಾಗ ಅವರೂ ಬಂದಿರೋದು ಒಂದು ಯೋಗ. ಮಾಮೂಲಾಗಿ ಬರೋದು ಇನ್ನೊಬ್ಬ – ಉಪ ಮುಖ್ಯಾಧಿಕಾರಿ."

ಜೇಲರ್, ಗಡಿಯಾರದತ್ತ ನೋಡುತ್ತ "ಸಮಯವಾಯಿತು !" ಎಂದ.

ಪಾವೆಲ್ ಹೇಳಿದ:

"ನೀನು ಬಂದದ್ದು ಒಳ್ಳೇದಾಯಿತಮ್ಮ. ಏನೂ ಚಿಂತೆ ಮಾಡ್ಬೇಡ.... ನನ್ನನ್ನ ಬೇಗನೆ ಬಿಟ್ಟಿಡ್ತಾರೆ."

ಆತ, ತಾಯಿಯನ್ನು ಗಾಢವಾಗಿ ಆಲಿಂಗಿಸಿ ಮುದ್ದಿಟ್ಟ. ಆಕೆಯ ಕಂಠ ಉಮ್ಮಳಿಸಿ ಬಂತು. ಆನಂದದಿಂದ ಅವಳು ಅತ್ತಳು.

"ಸಾಕುಮಾಡಿ!" ಎನ್ನುತ್ತ ಜೇಲರು ಆಕೆಯನ್ನು ಹೊರಕ್ಕೆ ಕರೆದೊಯ್ದು. ಹೋಗುತ್ತ ಹಾದಿಯಲ್ಲಿ ಆತ ಹೇಳಿದ: "ಅಳಬೇಡ. ಅವನನ್ನು ಬಿಟ್ಟಿಡ್ತಾರೆ, ಅವರೆಲ್ಲರನ್ನೂ ಬಿಟ್ಟಿಡ್ತಾರೆ.... ಇಲ್ಲಿ ಜನ ಜಾಸ್ತಿ, ಸ್ಥಳ ಸಾಲದು."

ಮನೆಗೆ ಬಂದ ಬಳಿಕ ಆಕೆ, ನಗುನಗುತ್ತ, ಹುಬ್ಬುಗಳನ್ನು ಕುಣಿಸುತ್ತ, ನಡೆದುದೆಲ್ಲವನ್ನೂ ಹೊಹೋಲನಿಗೆ ಹೇಳಿದಳು.

"ನಾನವನಿಗೆ ಒಳ್ಳೇ ಚಾಲಾಕುತನದಿಂದ ತಿಳಿಸ್ಬಿಟ್ಟೆ. ಅವನಿಗೆ ಗೊತ್ತಾಯಿತು. ಗೊತ್ತಾಗಿರಲೇಬೇಕು." ಒಂದು ನಿಟ್ಟುಸಿರು ಬಿಟ್ಟು ಮುಂದೆ ಹೇಳಿದಳಾಕೆ: "ಇಲ್ಲದಿದ್ದರೆ ಅಷ್ಟೊಂದು ಮೃದುವಾಗಿ ಪ್ರೀತಿಯಿಂದ ಮಾತಾಡ್ತಿದ್ನೆ? ಅವನು ಯಾವತ್ತೂ ಆ ರೀತಿ ಮಾತಾಡಿರ್ಲಿಲ್ಲ."

ಹೊಹೋಲ್ ನಕ್ಕ.

"ನೀವೊಳ್ಳೇ ತಮಾಷೆಯವರು! ಜನರು ಏನೇನೋ ಅಪೇಕ್ಷಿಸ್ತಾರೆ. ಆದರೆ ತಾಯಿ ಕೇಳೋದು ಪ್ರೀತಿ ಒಂದನ್ನೆ."

ಇದ್ದಕ್ಕಿದ ಹಾಗೆ ಗಟ್ಟಿಯಾಗಿ ಲವಲವಿಕೆಯಿಂದ ಆಕೆ ಮಾತಾಡಿದಳು:

"ಓ ಹಾಗಲ್ಲ, ಅಂದ್ರ್ಯೂಷ, ನೀನು ಅವರ್ನೆಲ್ಲಾ ನೋಡಬೇಕಿತ್ತು! ಜನರಿಗೆ ಅದೆಲ್ಲಾ ಹ್ಯಾಗೆ ರೂಢಿಯಾಗ್ಬಿಡುತ್ತೇಂತ. ಮಕ್ಕಳ್ನ ಈ ಜನರಿಂದ ಬೇರ್ಪಡಿಸಿ ಜೈಲಿಗೆ ಎಸೆದಿದ್ದರೂ ಕೂಡ ಅವರು ಅಲ್ಲಿಗೆ ಬಂದು, ಏನೇನೂ ಆಗಿಲ್ಲ ಅನ್ನೋ ಹಾಗೆ ನಟಿಸ್ತಾರೆ. ಕಾದು ಕೂತು ಏನೇನೋ ಮಾತಾಡ್ತಾ ಇರ್ತಾರೆ. ಓದುಬರಹ ಕಲಿತವರಿಗೇ ಹಾಗೆ ರೂಢಿ ಆದಮೇಲೆ, ನಮ್ಮ ಹಾಗೆ ಮನಸ್ಸಿಗೆ ಕತ್ತಲೆ ತುಂಬಿದ ಜನ ಹೇಗಿದ್ದೇವು ಹೇಳು?"

ತನ್ನ ಸ್ವಭಾವಜನ್ಯ ಅಣಕದ ಸ್ವರದಲ್ಲಿ ಹೊಹೋಲ್ ಉತ್ತರಿಸಿದ:

"ಅದು ಸ್ಪಷ್ಟವಾಗಿದೆ. ಕಾನೂನು ನಮ್ಮ ವಿಷಯಕ್ಕಿಂತ ಅವರಿಗೇ ಹೆಚ್ಚು ಕನಿಕರ ತೋರಿಸುತ್ತೆ. ನಮಗಿಂತಲೂ ಹೆಚ್ಚಾಗಿ ಅದು ಅವರಿಗೇ ಉಪಯೋಗಕ್ಕೆ ಬರುತ್ತೆ. ಒಮ್ಮೊಮ್ಮೆ ಅವರ ಮೇಲೆ ಆ ಕಾನೂನು ಮುನಿದು ಬಿದ್ದರೆ, ಸ್ವಲ್ಪ ತುಟಿ ಕಚ್ಕೋತಾರೆ. ಆದರೆ ರಂಪ ಮಾಡೋದಿಲ್ಲ. ಇನ್ನೊಬ್ಬರ ದೊಣ್ಣೆಯ ಏಟಿಗಿಂತಲೂ ನಮ್ಮ ದೊಣ್ಣೆಯಿಂದಲೇ ಏಟು ತಿನ್ನೋದು ಹೆಚ್ಚು ಸುಲಭ ನೋಡು!"

## ೨೦

ಒಂದು ಸಂಜೆ, ತಾಯಿ ಮೇಜಿನ ಬಳಿ ಕುಳಿತು ಒಂದು ಕಾಲುಚೀಲವನ್ನು ಹೆಣೆಯುತ್ತಿದ್ದಳು. ಪುರಾತನ ರೋಮ್ ನಗರದಲ್ಲಿ ಗುಲಾಮರು ಹೂಡಿದ ಬಂಡಾ

ಯದ ವಿಷಯವಾಗಿ, ಹೊಹೋಲ್ ತಾಯಿಗೆ ಓದಿ ಹೇಳುತ್ತಿದ್ದ. ಆಗ ಯಾರೋ ಬಾಗಿಲನ್ನು ಗಟ್ಟಿಯಾಗಿ ಬಡೆದರು. ಹೊಹೋಲ್ ಎದ್ದು ಹೋಗಿ ಬಾಗಿಲನ್ನು ತೆರೆದ. ವೆಸೊವ್‌ಶ್ಚಿಕೋವ್ ಕಂಕುಳಲ್ಲೊಂದು ಗಂಟನ್ನಿರಿಸಿಕೊಂಡು ಒಳಕ್ಕೆ ಬಂದ. ಟೋಪಿ ತಲೆಯ ಹಿಂಭಾಗಕ್ಕೆ ತಳ್ಳಿ ಹೋಗಿತ್ತು. ಮೊಣಕಾಲವರೆಗೂ ಕೆಸರು ಅಂಟಿಕೊಂಡಿತ್ತು.

"ಹೋಗುತ್ತ ಇಲ್ಲಿ ಬೆಳಕು ನೋಡ್ದೆ. ನೋಡ್ಕೊಂಡು ಹೋಗೋಣಾಂತ ನಿಂತೆ. ಇದೇ ಈಗ ಜೈಲಿನಿಂದ ಬಿಡುಗಡೆಯಾಗಿ ಬಂದೆ."

ಅವನ ಸ್ವರ ವಿಚಿತ್ರವಾಗಿತ್ತು. ಪೆಲಗೇಯಳ ಕೈಯನ್ನೆತ್ತಿಕೊಂಡು ಹೃತ್ಪೂರ್ವಕವಾಗಿ ಕುಲುಕುತ್ತ ಆತ ಹೇಳಿದ:

"ಪಾವೆಲ್ ನಮಸ್ಕಾರ ತಿಳಿಸಿದ್ದಾನೆ."

ಅರೆ ಮನಸ್ಸಿನಿಂದ ಆತ ಕುಳಿತುಕೊಂಡ. ಮ್ಲಾನವಾದ ಅಪನಂಬುಗೆಯ ದೃಷ್ಟಿಯಿಂದ ಕೊಠಡಿಯನ್ನೆಲ್ಲ ದಿಟ್ಟಿಸಿ ನೋಡಿದ.

ವೆಸೊವ್‌ಶ್ಚಿಕೋವ್‌ನ ವಿಷಯದಲ್ಲಿ ತಾಯಿಗೆ ಎಂದೂ ಪ್ರೀತಿ ಇರಲಿಲ್ಲ. ಚಚ್ಚೌಕವಾಗಿದ್ದ ನುಣ್ಣನೆ ಬೋಳಿಸಿದ್ದ ಆ ತಲೆಯಲ್ಲೂ ಆ ಸಣ್ಣ ಕಣ್ಣುಗಳಲ್ಲೂ ಭಯ ಹುಟ್ಟಿಸುವಂಥಾದ್ದೇನೋ ಇದ್ದ ಹಾಗೆ ಆಕೆಗೆ ಅನಿಸುತ್ತಿತ್ತು. ಆದರೆ ಈ ಸಂಜೆ ಆತನನ್ನು ಕಂಡಾಗ ತಾಯಿಗೆ ಸಂತೋಷವಾಯಿತು. ಪ್ರೀತಿಯಿಂದ ಮುಗುಳ್ನಗುತ್ತ ಅವನೊಡನೆ ಆಕೆ ಮಾತಾಡಿದಳು.

"ಎಷ್ಟೊಂದು ಸೊರಗಿದ್ದೀಯಾ! ಇವನಿಗೊಂದು ಗ್ಲಾಸು ಚಹಾ ಕೊಡೋಣ, ಅಂದ್ರ್ಯೂಷ."

ಆಗಲೆ ಅಡುಗೆ ಮನೆಗೆ ಹೋಗಿದ್ದ ಹೊಹೋಲ್, "ನಾನು ಚಹಾ ಮಾಡೋ ತಯಾರೀಲಿದೀನಿ" ಎಂದ.

"ಸರಿ. ಪಾವೆಲ್ ಹ್ಯಾಗಿದಾನಪ್ಪ? ನಿನ್ನನ್ನಲ್ಲದೆ ಬೇರೆ ಯಾರನ್ನಾದರೂ ಬಿಟ್ಟಿದಾರಾ?"

ನಿಕೊಲಾಯ್ ವೆಸೊವ್‌ಶ್ಚಿಕೋವ್ ತಲೆ ಕೆಳಗು ಮಾಡಿದ.

"ಪಾವೆಲ್ ತಾಳ್ಮೆಯಿಂದ ಕಾಯ್ತಾ ಇದ್ದಾನೆ. ನನ್ನೊಬ್ಬನ್ನೇ ಅವರು ಬಿಟ್ಟಿರೋದು."

ದೃಷ್ಟಿಯೆತ್ತಿ ತಾಯಿಯ ಮುಖವನ್ನು ನೋಡುತ್ತ ಔಡುಗಚ್ಚಿದ ತುಟಿಗಳೆಡೆಯಿಂದ ನಿಧಾನವಾಗಿ ಆತ ಮಾತನಾಡಿದ:

"ಸಾಕಾಯ್ತು, ನನ್ನ ಬಿಡುಗಡೆಮಾಡಿ. ಇಲ್ದಿದ್ದರೆ ಯಾರನ್ನಾದರೂ ಕೊಲ್ತೀನಿ! ನಾನೂ ಆತ್ಮಹತ್ಯೆ ಮಾಡಿಕೋತೀನಿ ಎಂದು ಗದರಿಸಿದೆ. ಅದಕ್ಕೆ ನನ್ನ ಬಿಟ್ರು."

"ಆ್ಹ!" ಎಂದಳು ತಾಯಿ. ಅವಳ ಮೈ ಜುಂ ಎಂದಿತು. ಆತ ಕಣ್ಣನ್ನು ಕಿರಿದು

ಗೊಳಿಸಿ ಬೀರುತ್ತಿದ್ದ ತೀಕ್ಷ್ಣನೋಟವನ್ನು ಕಂಡಾಗ, ತನಗೆ ತಿಳಿಯದಂತೆಯೇ ತಾಯಿ ಎವೆ ಮುಚ್ಚಿ ತೆರೆದಳು.

"ಫ್ಯೋದೊರ್ ಮಾಜಿನ್ ಹ್ಯಾಗಿದ್ದಾನೆ? ಈಗಲೂ ಕವಿತೆ ಬರೀತಾಲೇ ಇದ್ದಾನೋ?" ಎಂದು ಹೊಹೋಲ್ ಅಡುಗೆ ಮನೆಯಿಂದಲೇ ಕೇಳಿದ.

ತಲೆಯಲುಗಿಸುತ್ತ ನಿಕೊಲಾಯ್ ಹೇಳಿದ:

"ಬರೀತಿದಾನೆ. ಇದಂತೂ ನನಗರ್ಥವಾಗೋಲ್ಲ! ತಾನು ಕೋಗಿಲೆ ಅಂತ ತಿಳಿಕೊಂಡಿದಾನೋ ಏನೋ. ಹಿಡಿದು ಗೂಡಿನೊಳಗಿಟ್ಟರೂ ಹಾಡ್ತಾನೇ ಇರೋದೇ!.... ಹುಂ. ಮನೆಗೆ ಹೋಗಲು ಮನಸ್ಸಿಲ್ಲ ನನಗೆ.... ಇದೊಂದೇ ನನಗೆ ಈಗ ಸ್ಪಷ್ಟವಾಗಿರೋ ವಿಷಯ."

"ಏನಿದೇಂತ ಆ ಮನೆಗೆ ಹೋಗಬೇಕು? ಖಾಲಿ ಮನೆ, ಬೆಂಕಿ ಇಲ್ಲದ ಒಲೆ, ಎಲ್ಲ ತಣ್ಣಗಾಗಿದೆ...." ಎಂದು ತಾಯಿ ರಾಗವೆಳೆದಳು.

ಆತ ಏನನ್ನೂ ಹೇಳಲಿಲ್ಲ. ಕಣ್ಣುಗಳನ್ನು ಮತ್ತಷ್ಟು ಕಿರಿದುಗೊಳಿಸಿದ. ಸಿಗ ರೇಟಿನ ಪ್ಯಾಕೆಟನ್ನು ಹೊರತೆಗೆದು ಒಂದನ್ನು ಹಚ್ಚಿದ. ಹೊಗೆ ಅಲೆಯಲೆಯಾಗಿ ತೇಲಿಹೋಗುತ್ತಿದ್ದುದನ್ನು ನೋಡುತ್ತ, ಗುರ್‍ರ್ ಎನ್ನುವ ಕೋಪಗೊಂಡ ನಾಯಿಯ ಹಾಗೆ, ಗಂಟಲಿನಿಂದ ವ್ಯಗ್ರವಾದ ಸ್ವರ ಹೊರಡಿಸಿದ.

"ಹೌದು. ಬಹುಶಃ ಎಲ್ಲ ತಣ್ಣಗಿದ್ದೀತು. ನೆಲದ ಮೇಲೆ ಹೆಪ್ಪುಗಟ್ಟಿದ ಜಿರಳೆ, ಹೆಪ್ಪುಗಟ್ಟಿದ ಇಲಿ ಕೂಡಾ... ಹುಂ... ರಾತ್ರೆ ಇಲ್ಲೇ ಮಲಕೊಳ್ಳೋಕೆ ಬಿಡ್ತೀಯಾ, ಪೆಲಗೇಯ ನೀಲೊವ್ನ?" ಎಂದು ಆಕೆಯತ್ತ ನೋಡದೆಯೇ ಒರಟು ಸ್ವರದಲ್ಲಿ ಕೇಳಿದ.

"ಅಯ್ಯೋ, ಒಳ್ಳೇ ಪ್ರಶ್ನೆ ಕೇಳ್ತೀಯಾ! ಯಾರಾದರೂ ಬೇಡ ಅನ್ತಾರಾ?" ಎಂದು ತಾಯಿ ಅವಸರದ ಉತ್ತರವಿತ್ತಳು.

ಯಾಕೋ ಅವನೆದುರು ಇರಲು ಆಕೆಗೆ ತುಂಬ ಕಸಿವಿಸಿಯಾಯಿತು.

"ಈಗೆಲ್ಲಾ ನಮ್ಮ ತಾಯ್ತಂದೆಯರ ವಿಷಯದಲ್ಲೇ ನಮಗೆ ನಾಚಿಕೆಯಾಗತ್ತೆ."

"ಏನಂದೆ?" ಎಂದು ತಾಯಿ ಬೆಚ್ಚಿಬಿದ್ದು ಕೇಳಿದಳು.

ಆತ, ತಾಯಿಯನ್ನೇ ದಿಟ್ಟಿಸಿ ನೋಡಿದ; ಬಳಿಕ ಕಣ್ಣು ಮುಚ್ಚಿದ. ಆ ಸಿಡುಬಿನ ಕಲೆಯಿದ್ದ ಮುಖ, ಅವನು ಕುರುಡನೇನೋ ಎಂಬ ಭಾವನೆಯನ್ನುಂಟು ಮಾಡುತ್ತಿತ್ತು.

ಆತ ನಿಟ್ಟುಸಿರುಬಿಟ್ಟು ಪುನಃ ಹೇಳಿದ:

"ಈಗ ನಮ್ಮ ತಾಯ್ತಂದೆಯರ ವಿಷಯದಲ್ಲೇ ನಾಚಿಕೊಳ್ಳೋ ಸ್ಥಿತಿ ಬಂದಿದೆ ಅಂದೆ. ಪಾವೆಲ್ ನಿನ್ನ ವಿಷಯದಲ್ಲಿ ಬೇಸರಪಟ್ಕೊಳ್ಳೋದಿಲ್ಲ. ಆದರ ನಾನು, ನನ್ನ ಮುದುಕ ತಂದೆ ವಿಷಯದಲ್ಲಿ? ಹುಂ! ಅವನ ಮನೆಯೊಳಗೆ ಇನ್ನು ನಾನು ಕಾಲಿಡೋದೇ ಇಲ್ಲ. ನನಗೆ ತಂದೆ ಇಲ್ಲ, ಮನೆ ಇಲ್ಲ, ಅಂತ ತಿಳಕೋತಿನಿ. ಪೋಲೀಸರು

ನನ್ನ ಚಲನವಲನಗಳ ಮೇಲೆ ಕಣ್ಣಿಟ್ಟಿದ್ದಾರೆ. ಇಲ್ಲದಿದ್ದರೆ ನಾನು ಸೈಬೀರಿಯಾಕ್ಕೆ ಹೋಗ್ತಿದ್ದೆ; ಗಡೀಪಾರಾಗಿ ಅಲ್ಲಿ ಇರೋವರನ್ನೆಲ್ಲ ಬಿಡುಗಡೆ ಮಾಡ್ತಿದ್ದೆ, ಓಡಿ ಹೋಗೋಕೆ ಅವರಿಗೆ ಸಹಾಯ ಮಾಡ್ತಿದ್ದೆ...."

ಸಂವೇದನಾಹೃದಯಿಯಾದ ತಾಯಿ, ಆ ಹುಡುಗ ಪಡುತ್ತಿದ್ದ ಸಂಕಟವನ್ನೆಲ್ಲ ತಿಳಿದುಕೊಂಡಳು. ಆದರೂ ಅವನ ಬಗೆಗೆ ಆಕೆಯಲ್ಲಿ ಸಹಾನುಭೂತಿ ಹುಟ್ಟಲಿಲ್ಲ.

ಮೌನವಾಗಿದ್ದು ಆತನ ಮನ ನೋಯಿಸಬಾರದೆಂದು ಆಕೆ, "ಹಾಗೇಂತ ನೀನು ಭಾವಿಸೋದಾದರೆ, ಹೋಗಿಬಿಡೋದೇ ವಾಸಿ," ಎಂದಳು.

ಅಂದ್ರೇಯ್ ಅಡುಗೆ ಮನೆಯಿಂದ ಹೊರಬಂದ.

ಆತ ನಗುತ್ತ, "ಏನೋ ಬೋಧನೆ ಮಾಡ್ತಾ ಇದೀಯಲ್ಲ" ಎಂದ.

ತಾಯಿ ನಿಟ್ಟುಸಿರು ಬಿಟ್ಟಳು. ಏಳುತ್ತಾ, "ತಿನ್ನೋಕೆ ಏನಾದರೂ ಬೇಯಿಸ್ತೀನಿ" ಎಂದಳು. ಹೊಹೋಲ್‌ನ ಮೇಲೆ ನೆಟ್ಟ ದೃಷ್ಟಿಯನ್ನಿಟ್ಟು ವೆಸೊವ್‌ಶ್ಚಿಕೋವ್, "ಕೆಲವು ಜನರನ್ನು ಕೊಲೆಮಾಡುವ ಅಗತ್ಯವಿದೆ ಎಂದನಿಸುತ್ತೆ ನಂಗೆ!" ಎಂದನು.

"ಓ! ಯಾಕೆ?" ಎಂದು ಹೊಹೋಲ್ ಕೇಳಿದ.

"ಯಾಕೆ? ಅವರು ಇಲ್ಲದ ಹಾಗಾಗಲಿ ಅಂತ."

ತೆಳ್ಳಗೆ ಎತ್ತರವಾಗಿದ್ದ ಹೊಹೋಲ್, ಕೊಠಡಿಯ ಮಧ್ಯದಲ್ಲಿ ಹಿಮ್ಮಡಿಯ ಮೇಲೆ ಭಾರಹಾಕಿ ದೇಹವನ್ನು ತೂಗುತ್ತಾ ಕೈಗಳನ್ನು ಜೋಬಿಗಿಳಿಬಿಟ್ಟು, ಸಿಗರೇಟಿನ ಹೊಗೆಯಲ್ಲಿ ಮರೆಯಾಗಿ ಕುರ್ಚಿಯ ಮೇಲೆ ಬಿಮ್ಮನೆ ಕುಳಿತಿದ್ದ ನಿಕೊಲಾಯ್‌ಯನ್ನು, ದೃಷ್ಟಿ ತಗ್ಗಿಸಿ ನೋಡಿದ. ಅಲ್ಲಲ್ಲಿ ಕೆಂಪು ಕೆಂಪಗಾಯಿತು ನಿಕೊಲಾಯ್‌ನ ಮುಖ.

"ಆ ಇಸಾಯ್ ಗೊರ್ಬೋವ್‌ನ ತಲೆ ಕಿತ್ತು ಹಾಕ್ತೀನಿ, ನೋಡು ಬೇಕಾದರೆ!"

"ಯಾಕೆ?"

"ಅವನು ಗೂಢಚಾರ, ಚಾಡಿಖೋರ. ನನ್ನ ತಂದೇನ ಕೆಡಿಸಿರೋದು ಅವನೇ. ತಂದೇನ ನಮ್ಮ ವಿರುದ್ಧ ಅವರ ಎಂಜಲು ನಾಯಿಯಾಗಿ ಮಾಡಿರೋದು ಆತನೇ" ಎಂದು ನಿಕೊಲಾಯ್ ವೆಸೊವ್‌ಶ್ಚಿಕೋವ್, ಉಗ್ರದ್ವೇಷದ ನೋಟದಿಂದ ಅಂದ್ರೇಯ್‌ನ ಕಡೆಗೆ ನೋಡುತ್ತ ಹೇಳಿದ.

"ಹೀಗೋ ಅದು!" ಎಂದು ಹೊಹೋಲ್ ಉದ್ಗರಿಸಿದ. "ನಿನ್ನ ತಂದೆ ಹಾಗಿದ್ದರೆ, ಅದು ನಿನ್ನ ತಪ್ಪೂಂತ ಯಾವ ಮೂರ್ಖ ಹೇಳ್ತಾನೆ?"

ನಿಕೊಲಾಯ್ ಮತ್ತೂ ಅದೇ ಹಟಮಾರಿತನದ ಧ್ವನಿಯಲ್ಲೆ ಉತ್ತರವಿತ್ತ:

"ಬುದ್ಧಿವಂತರು ಮೂರ್ಖರು ಎಲ್ಲಾ ಒಂದೇ. ಉದಾಹರಣೆಗೆ, ನಿಮ್ಮನ್ನೇ ತಗೋ. ನೀನು ಮತ್ತು ಪಾವೆಲ್, ನೀವಿಬ್ಬರೂ ಚುರುಕು ಬುದ್ಧಿಯವರು. ಆದರೆ

ಫ್ಯೋದೊರ್ ಮಾಜಿನ್ ಇಲ್ಲವೆ ಸಮೋಯ್‌ಲೊವನ್ನು ಕಂಡಹಾಗೆ ನೀವು ನನ್ನ ಕಾಣ್ತೀರಾ? ಅಥವಾ ನೀವೇ ಒಬ್ಬರನ್ನೊಬ್ಬರು ಕಂಡ ಹಾಗೆ ನನ್ನ ಕಾಣ್ತೀರಾ? ಸುಳ್ಳು ಹೇಳ್ಬೇಡ. ನಾನು ನಂಬೋದೇ ಇಲ್ಲ ಅನ್ನು. ನೀವೆಲ್ಲಾ ನನ್ನ ಮೂಲೆಗೆ ತಳ್ತೀರಿ; ಒಂದು ಪ್ರತ್ಯೇಕ ಜಾಗದಲ್ಲಿಡ್ತೀರಿ...."

ಹೊಹೋಲ್, ಅವನ ಸಮೀಪದಲ್ಲೇ ಕುಳಿತು, ಮೆಲ್ಲನೆ ಮೃದುವಾಗಿ, "ನಿನ್ನ ಮನಸ್ಸು ಅಸ್ವಸ್ಥವಾಗಿದೆ," ಎಂದ.

"ಅಸ್ವಸ್ಥವಾಗಿಯೇ ಇದೇಂತಿಟ್ಕೊ. ಆದರೆ ನಿನ್ನ ಮನಸ್ಸಿಗೂ ಕಾಹಿಲೆಯಾಗಿದೆ. ನಿನ್ನ ಕಾಹಿಲೆ, ನನ್ನ ಕಾಹಿಲೆಗಿಂತ ದೊಡ್ಡ ರೀತೀದೂಂತ ತಿಳಕೊಂಡಿದೀಯ ಅಷ್ಟೆ.... ಒಬ್ಬರನ್ನೊಬ್ಬರು ನೋಡಿ ನಾವು 'ಥೂ' ಅಂತೀವಿ – ಅಷ್ಟೇ ನಾನು ಹೇಳೋದು. ಏನಂತೀಯಾ ನೀನು? ಮಾತಾಡು."

ತೀಕ್ಷ್ಣ ನೋಟದಿಂದ ಅಂದ್ರೇಯ್‌ನ ಮುಖವನ್ನೇ ನೋಡುತ್ತ, ಹಲ್ಲು ಕಚ್ಚಿಕೊಂಡು ಆತ ಉತ್ತರದ ಹಾದಿ ನೋಡಿದ. ಕೆಂಪು ಕನಲಿದ್ದ ಅವನ ಮುಖ ನಿಶ್ಚಲವಾಗಿತ್ತು. ಆದರೆ ಆ ದಪ್ಪಗಿನ ತುಟಿಗಳು ಚಳಿಯಿಂದ ನಡುಕಗೊಂಡಂತೆ ಕಂಪಿಸತೊಡಗಿದುವು.

ನಿಕೊಲಾಯ್‌ನ ದ್ವೇಷದ ನೋಟವನ್ನು ತನ್ನ ನೀಲಿಗಣ್ಣುಗಳ ಬೆಚ್ಚಗಿನ ಮುಗುಳ್ನಗುವಿನಿಂದ ಇದಿರಿಸುತ್ತ ಅಂದ್ರೇಯ್ ಹೇಳಿದ:

"ನಾನೇನೂ ಅನ್ನೋದಿಲ್ಲ. ಒಬ್ಬನ ಹೃದಯದ ಎಲ್ಲ ಗಾಯಗಳಲ್ಲೂ ರಕ್ತ ಸೋರುತ್ತಿರೋವಾಗ ವಾದಮಾಡಿದರೆ ಅವನಿಗೆ ನೋವಾಗುತ್ತೆ. ನನಗದು ಗೊತ್ತಿದೆ, ತಮ್ಮಾ!"

ನಿಕೊಲಾಯ್ ದೃಷ್ಟಿ ತಗ್ಗಿಸಿ, "ನೀನು ನನ್ನ ಜತೇಲಿ ವಾದ ಮಾಡೋದು ಸಾಧ್ಯವಿಲ್ಲ. ನಾನು ಅಜ್ಞಾನಿ ಅಲ್ಲವೆ?" ಎಂದ.

ಅಂದ್ರೇಯ್ ಮಾತು ಮುಂದುವರಿಸಿದ:

"ನಾವೆಲ್ಲರೂ ಬರಿಗಾಲಿನಲ್ಲಿ ಮುಳ್ಳಿನ ಹಾದೀಲೇ ನಡಕೊಂಡು ಬಂದಿದೀವಿ. ನಾವು, ದಾರಿ ಕಾಣದೇ ಇದ್ದಾಗ, ಈಗ ನೀನು ಮಾಡ್ತಿರೋ ಹಾಗೆ ನರಳಿದ್ದೀವಿ ಅಂತ ನನಗನ್ನಿಸುತ್ತೆ...."

ವೆಸೊವ್‌ಶ್ಚಿಕೋವ್ ನಿಧಾನವಾಗಿ ಉತ್ತರವಿತ್ತ:

"ನೀನು ಹೇಳಿ ಸಮಾಧಾನಪಡಿಸೋದು ಏನೂ ಇಲ್ಲ. ನನ್ನ ಆತ್ಮ ತೋಳ ಅರಚಿದ ಹಾಗೆ ಅರಚ್ತಾ ಇದೆ."

"ನಿನಗೆ ಏನಾದರೂ ಹೇಳಬೇಕೂಂತ ನಾನು ಬಯುಸೋದೂ ಇಲ್ಲ. ಆದರೆ ಈಗಿನ ನಿನ್ನ ಸ್ಥಿತಿ ಬದಲಾಗುತ್ತೆ ಅಂತ ನನಗೆ ಗೊತ್ತು. ಪೂರ್ಣವಾಗಿ ಅಲ್ದೆ ಹೋದರೂ ಬದಲಾಗೋದೇನೋ ನಿಜ."

ಆತ ಸಣ್ಣನೆ ನಕ್ಕು ನಿಕೊಲಾಯ್‌ನ ಭುಜವನ್ನು ತಟ್ಟಿ, ಮುಂದುವರಿಸಿದ:

"ಇದು ಮಕ್ಕಳ ಕಾಯಿಲೆ. ಮೈಮೇಲೆ ದಡಾರ ಬರೋದು. ಒಮ್ಮೆಯಲ್ಲ ಒಮ್ಮೆ, ನಮಗೆಲ್ಲರಿಗೂ ಬರುತ್ತೆ. ಬಲಿಷ್ಠರಾದವರಿಗೆ ಅಷ್ಟು ತೊಂದರೆಯಾಗೋದಿಲ್ಲ. ಆದರೆ ಕ್ಷೀಣವಾದವರು ತುಂಬ ಗೋಳಾಡ್ತಾರೆ. ನಮ್ಮ ನೆಲೆ ಏನೂಂತ ಗೊತ್ತಾಗಿರುತ್ತೆ, ಆದರೆ ಜೀವನದ ಪೂರ್ಣ ಚಿತ್ರ ನೋಡಿರೋದಿಲ್ಲ – ಅದರಲ್ಲಿ ನಮ್ಮ ಸ್ಥಾನ ಕಂಡಿರೋದಿಲ್ಲ – ಅಷ್ಟರಲ್ಲೆ ಆ ರೋಗ ಬಡಿಯುತ್ತೆ. ಪ್ರಪಂಚದಲ್ಲಿ ನೀನೇ ಅಮೂಲ್ಯವಾದವನು, ಎಲ್ಲರೂ ನಿನ್ನ ಕಸಕೊಳ್ಳೋಕೆ ನೋಡ್ತಾರೆ, ಎಂತ ನಿನಗೆ ಅನ್ನಿಸುತ್ತೆ. ಸ್ವಲ್ಪ ಹೊತ್ತಾದ್ಮೇಲೆ, ನಿನ್ನಷ್ಟೆ ಒಳ್ಳೆಯ ಗಟ್ಟಿ ಹೃದಯ ಬೇರೆಯವರಲ್ಲೂ ಇದೇಂತ ನಿನಗೆ ಗೊತ್ತಾಗುತ್ತೆ. ಆಗ ಮನಸ್ಸಿಗೆ ಸ್ವಲ್ಪ ಸಮಾಧಾನ. ಯಾರಿಗೂ ಕೇಳಿಸದಷ್ಟು ಸಣ್ಣ ಗಂಟೇನ ಹೊತ್ಕೊಂಡು ಒಬ್ಬನೇ ಕಟ್ಟೋಕೇಂತ ಗೋಪುರ ಏರ್ತಾ ಇದ್ನಲ್ಲಾಂತ ಸ್ವಲ್ಪ ನಾಚಿಕೆಯಾಗುತ್ತೆ. ಒಂಟಿಯಾಗಿಯೇ ಬಾರಿಸಿದರೆ, ದೊಡ್ಡ ಗಂಟೆಯ ಎದುರಲ್ಲಿ ಅದರ ಸ್ವರ ಕೇಳಿಸದೇ ಹೋಗಬಹುದು. ಒಂದು ನೊಣ, ಎಣ್ಣೇಲಿ ಮುಳುಗಿಹೋದ ಹಾಗೆ. ಆದರೆ ಬೇರೆ ಎಲ್ಲರ ಸಣ್ಣ ಗಂಟೆಗಳ ಜತೇಲಿ, ನಿನ್ನ ಸಣ್ಣ ಗಂಟೇನೂ ಬಾರಿಸಿದರೆ ಸ್ವರ ಚೆನ್ನಾಗಿರತ್ತೇಂತ ನೀನು ಕಂಡ್ಕೋತೀಯ. ನಾನು ಹೇಳೋಕೆ ಯತ್ನಿಸ್ತಿರೋದು ಅರ್ಥವಾಯ್ತೆ?"

"ಅರ್ಥವಾಯ್ತೂಂತ ತೋರುತ್ತೆ – ಆದರೆ ನಾನು ನಂಬೋದಿಲ್ಲ, ಅಷ್ಟೆ," ಎಂದು ತಲೆದೂಗುತ್ತ ನಿಕೊಲಾಯ್ ಹೇಳಿದ.

ಹೊಹೋಲ್ ನಗುತ್ತ ಚಂಗನೆ ಎದ್ದು, ಸದ್ದು ಮಾಡುತ್ತ, ಅತ್ತಿತ್ತ ನಡೆಯತೊಡಗಿದ:

"ಹಿಂದೆ ನಾನೂ ನಂಬಲೇ ಇಲ್ಲ ಕಣಯ್ಯ! ಒಳ್ಳೇ ಸೈತಾನ ಗಂಟುಬಿದ್ದೆಯಪ್ಪ!"

"ನನ್ನ ಯಾಕೆ ಸೈತಾನ ಎಂದೆ?" ಎಂದು ನಿಕೊಲಾಯ್, ಅಂದ್ರೇಯ್‌ನನ್ನು ನೋಡುತ್ತ, ಸಿಟ್ಟಿನ ನಗೆಯೊಡನೆ ಹೇಳಿದ.

"ಸೈತಾನ ಅಲ್ಲದಿದ್ದರೂ ಹೋಲಿಕೆ ಇದೆ!"

ಹಠಾತ್ತಾಗಿ ನಿಕೊಲಾಯ್ ಅಗಲವಾಗಿ ಬಾಯ್ದೆರೆದು, ಬಿದ್ದುಬಿದ್ದು ನಗತೊಡಗಿದ.

ಆಶ್ಚರ್ಯಗೊಂಡ ಹೊಹೋಲ್ ಅವನೆದುರು ನಿಂತು, "ಏನು ವಿಷಯ?" ಎಂದು ಕೇಳಿದ.

"ನಿನ್ನ ಮನಸ್ಸನ್ನ ನೋಯಿಸೋಕೆ ಪ್ರಯತ್ನಿಸುವಾತ ಎಂಥ ಮೂರ್ಖ ಇರಬೇಕೂಂತ ಯೋಚಿಸ್ತಾ ಇದ್ದೆ" ಎಂದು ನಿಕೊಲಾಯ್ ಉತ್ತರಿಸಿದ.

ಹೊಹೋಲ್ ಭುಜ ಕುಣಿಸಿದ.

"ನನ್ನ ಮನಸ್ಸನ್ನ ಹೇಗೆ ನೋಯಿಸುತ್ತೀಯ?"

ಸರಳವಾಗಿ ಹಲ್ಲು ಕಿಸಿಯುತ್ತ ಸಹಾನುಭೂತಿಯ ಸ್ವರದಲ್ಲಿ ವೆಸೊವ್‌ಶ್ಚಿಕೋವ್ ಹೇಳಿದ:

"ನಂಗೊತಿಲ್ಲ. ನಿನ್ನ ಯಾರಾದರೂ ನೋಯಿಸ್ದ ಅಂತಿಟ್ಕೊ. ಹಾಗೆ ಮಾಡಿದ ಮನುಷ್ಯ ನಿಜಕ್ಕೂ, ಯಾಕ್ಹೀಗೆ ಮಾಡ್ದೆ ಅಂತ ಪೇಚಾಡ್ತಾನೆ."

ಹೊಹೋಲ್ ನಕ್ಕ.

"ಹುಂ. ತಿಳೀತು ಇದೇನೊ ನಿನ್ನ ಮನಸ್ನಲ್ಲಿದ್ದದ್ದು ?"

ಅಡುಗೆ ಮನೆಯಿಂದ ತಾಯಿ "ಅಂದ್ರ್ಯೂಷ !" ಎಂದು ಕರೆದಳು.

ಆತ ಎದ್ದು ಹೋದ.

ಒಬ್ಬನೇ ಉಳಿದಾಗ ವೆಸೊವ್‌ಶ್ಚಿಕೋವ್ ಸುತ್ತಲೂ ನೋಡಿದ. ದೊರಗು ಬೂಟಿನೊಳಗಿದ್ದ ಒಂದು ಕಾಲನ್ನು ನೇರವಾಗಿ ಚಾಚಿದ. ಸೂಕ್ಷ್ಮವಾಗಿ ಅದನ್ನು ಪರೀಕ್ಷಿಸಿದ. ದಪ್ಪಗಿನ ಮಾಂಸಖಂಡವನ್ನು ಮುಟ್ಟಿನೋಡಿದ. ಕೈಯನ್ನೆತ್ತಿ ದಪ್ಪಗಿನ ಅಂಗೈಯನ್ನು ನೋಡುತ್ತ, ಅರಸಿನ ಕೂದಲಿನಿಂದ ತುಂಬಿದ್ದ ಚಿಕ್ಕ ಬೆರಳುಗಳ ಹಿಂಭಾಗ ವನ್ನು ದಿಟ್ಟಿಸಿದ. ತಾತ್ಸಾರ ಭಾವನೆ ತೋರಿಸುತ್ತಾ ಎದ್ದು ನಿಂತ.

ಅಂದ್ರೇಯ್ ಸಮೊವಾರನ್ನು ಒಳತಂದಾಗ, ನಿಕೊಲಾಯ್ ಕನ್ನಡಿಯ ಎದುರು ನಿಂತಿದ್ದ.

ವಕ್ರವಾಗಿ ನಗುತ್ತ ಆತ ಹೇಳಿದ:

"ಎಷ್ಟೋ ಸಮಯದ ಮೇಲೆ ಮೊದಲನೇ ಸಲ ಈ ನನ್ನ ಸುಂದರ ರೂಪಾನ ನೋಡ್ತಿದ್ದೀನಿ. ಹುಂ. ಯಾರಾದರೂ ಸರಿ ಹೆದರಿ ಹೋಗ್ತಾರೆ."

ಅಂದ್ರೇಯ್ ಕುತೂಹಲದಿಂದ ಅವನತ್ತ ನೋಡುತ್ತ, "ನಿನ್ನ ರೂಪದ ಯೋಚ್ನೆ ಈಗ ಯಾಕ್ಬಂತು ?" ಎಂದು ಕೇಳಿದ.

"ಮುಖ ಹೃದಯದ ಕನ್ನಡಿ ಅಂತಾಳೆ, ಸಾಷ."

"ಹುಚ್ಚು ಮಾತು. ಅವಳ ಮೂಗು ಮೀನಿನ ಗಾಳದ ಹಾಗಿದೆ. ಮೋರೆ ಸೋರೆಕಾಯಿ ಹಾಗಿದೆ. ಆದರೆ ಅವಳ ಹೃದಯ ಮಾತ್ರ ನಕ್ಷತ್ರದ ಹಾಗಿದೆಯಪ್ಪ !"

ನಿಕೊಲಾಯ್ ಅವನತ್ತ ನೋಡಿ ನಕ್ಕುಬಿಟ್ಟ.

ಅವರೆಲ್ಲ ಚಹಾ ಕುಡಿಯಲು ಕುಳಿತರು.

ನಿಕೊಲಾಯ್ ದೊಡ್ಡದೊಂದು ಬೇಯಿಸಿದ ಆಲೂಗಡ್ಡೆಯನ್ನೆತ್ತಿಕೊಂಡು, ಬ್ರೆಡ್ಡಿನ ಒಂದು ತುಣುಕಿಗೆ ತುಂಬಾ ಉಪ್ಪು ಹಚ್ಚಿ, ಎತ್ತು ಮೆಲುಕು ಹಾಕುವ ಹಾಗೆ, ಅದನ್ನು ಮೆಲ್ಲನೆ ಕ್ರಮಬದ್ಧವಾಗಿ ಜಗಿಯತೊಡಗಿದ.

ತುಂಬಿದ ಬಾಯಿಯಿಂದ ಸ್ವರ ಹೊರಡಿಸುತ್ತಾ "ಇಲ್ಲಿ ಸ್ಥಿತಿ ಹೇಗಿದೆ?" ಎಂದು ಅವನು ಕೇಳಿದ.

ತಮ್ಮ ಪ್ರಚಾರ ಕಾರಖಾನೆಯಲ್ಲಿ ಹೆಚ್ಚುತ್ತಿರುವ ವಿಷಯವಾಗಿ ಉತ್ಸಾಹದ ವರದಿಯನ್ನು ಅಂದ್ರೇಯ್ ಕೊಟ್ಟ. ಅದನ್ನು ಕೇಳುತ್ತ ನಿಕೊಲಾಯ್ ಮತ್ತೆ ಮ್ಲಾನ ನಾದ.

"ಇದಕ್ಕೆಲ್ಲಾ ತುಂಬ ಸಮಯ ಹಿಡಿಯುತ್ತೆ–ತುಂಬ ಸಮಯ. ನಾವು ಹೆಚ್ಚು ವೇಗದಿಂದ ಕೆಲಸಮಾಡ್ಬೇಕು."

ತಾಯಿ ಅವನನ್ನು ನೋಡಿದಳು. ದ್ವೇಷಭಾವನೆ ಅವಳ ಹೃದಯುವನ್ನು ಕೊರೆಯಿತು.

"ಚಾಟಿ ಹೊಡೆದು ಓಡಿಸೋಕೆ ಜೀವನ ಕುದುರೆಯಲ್ಲ," ಎಂದ ಅಂದ್ರೇಯ್.

ನಿಕೊಲಾಯ್ ಹಟಮಾರಿಯಾಗಿ ತಲೆಯಾಡಿಸಿದ.

"ತುಂಬ ಸಮಯ; ಬಹಳ ನಿಧಾನ ಇದೆಲ್ಲ. ನನ್ನಿಂದ ಕಾದಿರೋಕೆ ಆಗೋದಿಲ್ಲ. ನಾನೇನು ಮಾಡ್ಲಿ?"

ಅಸಹಾಯತೆಯುತೆಯ ಚಹರೆಯಿಂದ ಆತ, ಉತ್ತರದ ನಿರೀಕ್ಷಣೆ ಮಾಡುತ್ತ ಹೊಹೋಲ್‌ನ ಮುಖವನ್ನ ನೋಡಿದ. ತಲೆಯನ್ನು ಬಾಗಿಸುತ್ತ ಅಂದ್ರೇಯ್, "ನಾವು ಕಲಿತು, ಇತರರಿಗೆ ಕಲಿಸಬೇಕು. ಇದು ನಮ್ಮ ಕರ್ತವ್ಯ" ಎಂದನು.

"ನಾವು ಹೋರಾಡೋಕೆ ಶುರು ಮಾಡೋದು ಯಾವಾಗ?"

ಹೊಹೋಲ್ ನಗುತ್ತ ಉತ್ತರವಿತ್ತ:

"ನಾವು ಯಾವಾಗ ಹೋರಾಟ ಶುರುಮಾಡ್ತೀವೋ ನನಗೆ ಗೊತ್ತಿಲ್ಲ. ಆದರೆ ಅದಕ್ಕಿಂತ ಮುಂಚೆ ಎಷ್ಟೋ ಸಾರಿ ನಮಗೆ ಮೇಲಿಂದ ಮೇಲೆ ಏಟು ಬೀಳುತ್ತೆ ಅನ್ನೋದು ಗೊತ್ತಿದೆ. ಕೈಗಳನ್ನು ಸಜ್ಜುಗೊಳಿಸೋಕೆ ಮುಂಚೆ ತಲೇನ ಸಜ್ಜು ಗೊಳಿಸಬೇಕು. ನನಗೆ ಹಾಗೆ ತೋರುತ್ತಪ್ಪ."

ನಿಕೊಲಾಯ್ ಮತ್ತೆ ಮೌನವಾಗಿ ತಿನ್ನತೊಡಗಿದ. ಆ ಚಚ್ಚೌಕದ ಭಾರ ವಾದ ದೇಹದ ಆಸಾಮಿಯ ಬಗೆಗೆ ಒಳ್ಳೆಯ ಅಭಿಪ್ರಾಯ ಹುಟ್ಟಿಸುವಂಥ ಯಾವು ದಾದರೂ ಚಹರೆಯನ್ನು ಕಾಣಲು ತಾಯಿ ಅವನ ವಿಶಾಲ ಮುಖವನ್ನು ಸಂಕೋಚದ ನೋಟದಿಂದ ಕದ್ದು ಕದ್ದು ನೋಡಿದಳು.

ಆಕೆಯ ದೃಷ್ಟಿ ಆತನ ಸಣ್ಣ ಕಣ್ಣುಗಳ ಇರಿಯುವ ನೋಟವನ್ನು ಸಂಧಿಸಿತು. ತಾಯಿಯ ಹುಬ್ಬುಗಳು ಕಂಪಿಸಿದುವು. ಅಂದ್ರೇಯ್ ಅಸ್ಥಿರನಾದ. ಒಮ್ಮೆಲೆ ಆತ ನಗುವುದಕ್ಕೂ ಮಾತನಾಡುವುದಕ್ಕೂ ಮಾತಿನ ನಡುವೆ ಸಿಳ್ಳು ಹೊಡೆಯುವು ದಕ್ಕೂ ಆರಂಭಿಸಿದ.

ಅವನ ಚಿಂತೆಗೆ ಏನು ಕಾರಣವೆಂಬುದು ತಾಯಿಗೆ ಅರ್ಥವಾದ ಹಾಗೆ ಅನಿ ಸಿತು. ನಿಕೊಲಾಯ್ ಅಲ್ಲೇ ಮೌನವಾಗಿ ಕುಳಿತ. ಅಂದ್ರೇಯ್ ಕೇಳಿದ್ದಕ್ಕೆಲ್ಲಾ ಮೊಟ ಕಾಗಿ ಉತ್ತರವೀಯುತ್ತಿದ್ದ. ಮಾತನಾಡುವುದಕ್ಕೆ ಆತನಿಗೆ ಇಷ್ಟವಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು.

ತಾಯಿಗೂ ಅಂದ್ರೇಯ್‌ಗೂ ಆ ಸಣ್ಣ ಕೊಠಡಿಯಲ್ಲಿ ಉಸಿರುಕಟ್ಟುವ ಹಾಗಾ ಯಿತು. ಕೊಂಚ ಅಸಮಾಧಾನದ ಅನುಭವವಾಯಿತು. ಮೊದಲು ತಾಯಿ, ಆಮೇಲೆ ಅಂದ್ರೇಯ್ ಕೂಡಾ, ಕಳ್ಳ ನೋಟದಿಂದ ತಮ್ಮ ಅತಿಥಿಯನ್ನು ನೋಡತೊಡಗಿದರು.

ಕೊನೆಯಲ್ಲಿ ಆತ ಎದ್ದು ನಿಂತು ಹೇಳಿದ:

"ಇನ್ನು ನಿದ್ದೆ ಮಾಡೋದು ವಾಸಿ, ಆ ಜೈಲಿನಲ್ಲಿ ಒಂದೇ ಸಮ ಕೂತದ್ದೇ

ಕೂತದ್ದು. ಒಮ್ಮೆಲೇ ನನ್ನನ್ನು ಬಿಟ್ಟಿಟ್ರು. ನಾನೂ ಹೊರಟೇಬಿಟ್ಟೆ. ಆಯಾಸವಾಗಿದೆ ನಂಗೆ."

ಆತ ಅಡುಗೆ ಮನೆಯೊಳಕ್ಕೆ ನುಸುಳಿಕೊಂಡು ಮೆಲ್ಲಗೆ ಸ್ವಲ್ಪ ಹೊತ್ತು ಹೊರಳಾಡಿದ ಮೇಲೆ, ನಿರ್ಜೀವಗೊಂಡನೆಂಬ ಹಾಗೆ ಯಾವ ಸಪ್ಪಳವೂ ಇಲ್ಲದೆ ನಿದ್ದೆ ಹೋದ.

ಆ ನೀರವತೆಗೆ ಕಿವಿಗೊಡುತ್ತ ತಾಯಿ "ಭಯಂಕರ ಯೋಚನೆಗಳಿವೆ ಅವನ ತಲೇಲಿ," ಎಂದು ಅಂದ್ರೇಯ್‌ಯೊಡನೆ ಪಿಸುಗುಟ್ಟಿದಳು.

ಹೌದೆಂದು ಹೊಹೋಲ್ ತಲೆದೂಗಿದ.

"ಹೌದು, ತುಂಬ ನರಳ್ತಾ ಇದ್ದಾನೆ. ಆದರೆ ಇದು ಬದಲಾಗುತ್ತೆ. ನಾನೂ ಒಮ್ಮೆ ಹಾಗೆಯೇ ಇದ್ದೆ. ಹೃದಯದಲ್ಲಿ ಬೆಂಕಿ ಪ್ರಕಾಶವಾಗಿ ಜ್ವಲಿಸೋಕೆ ಮುಂಚೆ ತುಂಬ ಹೊಗೆ ಹೊರಡುತ್ತೆ.... ನೀನು ನಿದ್ದೆ ಹೋಗಮ್ಮಾ ಇನ್ನು. ನಾನು ಸ್ವಲ್ಪ ಹೊತ್ತು ಓದ್ತಾ ಕೂತಿರ್ತೀನಿ."

ಹತ್ತಿಯ ಅರಿವೆಯ ಪರದೆಯ ಹಿಂದೆ, ಹಾಸಿಗೆಯಿದ್ದ ಮೂಲೆಗೆ ತಾಯಿ ಹೋದಳು. ಆಕೆಯ ನಿಟ್ಟುಸಿರು ಪ್ರಾರ್ಥನೆಗಳ ಬಿಸುಸುಯ್ಲು ಬಹಳ ಹೊತ್ತಿನವರೆಗೆ ಅಂದ್ರೇಯ್‌ಗೆ ಕೇಳಿಸುತ್ತಿತ್ತು. ಬೇಗ ಬೇಗನೆ ಪುಟಗಳನ್ನು ಮಗುಚುತ್ತಾ ಆತ, ಹಣೆಯುಜ್ಜಿಕೊಂಡು, ಕುಡಿಮೀಸೆಯನ್ನು ತಿರುವಿ, ಪಾದಗಳನ್ನು ಅತ್ತಿತ್ತ ಚಲಿಸಿದ. ಗಡಿಯಾರ ಟಿಕ್ ಟಿಕ್ ಸದ್ದು ಮಾಡುತ್ತಲಿತ್ತು. ಕಿಟಕಿಯ ಹೊರಗೆ ಗಾಳಿ 'ಕುಯ್ಯೋ' ಎಂದು ಗೋಳಿಡುತ್ತಾ ಬೀಸುತ್ತಿತ್ತು.

ತಾಯಿಯ ಮೃದು ಸ್ವರ ಕೇಳಿಸಿತು:

"ಅಯ್ಯೋ.... ಪ್ರಪಂಚದಲ್ಲಿ ಎಷ್ಟೊಂದು ಜನರಿದ್ದಾರೆ. ಎಲ್ಲರೂ ತಂತಮ್ಮ ರೀತಿಯಲ್ಲೆ ನರಳ್ತಾನೇ ಇದ್ದಾರೆ. ಸುಖವಾಗಿರೋವರು ಯಾರಪ್ಪಾ?"

ಅಂದ್ರೇಯ್‌ಯ ಸ್ವರ ಉತ್ತರಿಸಿತು:

"ಸುಖವಾಗಿರೋವರೂ ಇದ್ದಾರೆ ತಾಯಿ! ಬೇಗನೆ ಇನ್ನು ಎಷ್ಟೋ ಜನ ಅಂಥವರಾಗ್ತಾರೆ. ಇನ್ನೂ ಎಷ್ಟೆಷ್ಟೋ ಜನ!"

## ೨೧

ಜೀವನ ವೇಗವಾಗಿ ಸಾಗಿತು. ವಿಧವಿಧವಾಗಿದ್ದ ಸಂಭವಪೂರ್ಣವಾಗಿದ್ದ ದಿನಗಳು ಒಂದರಮೇಲೊಂದಾಗಿ ಉರುಳಿದುವು. ಪ್ರತಿದಿನವೂ ಹೊಸತನ್ನೇನಾದರೂ ತರುತ್ತಿತ್ತು. ಆದರೆ ತಾಯಿ ಇದರಿಂದೆಲ್ಲ ಈಗ ಭೀತಳಾಗುತ್ತಿರಲಿಲ್ಲ. ಅಪರಿಚಿತರಾದ ಜನರು ಹೆಚ್ಚು ಹೆಚ್ಚಾಗಿ ಆಕೆಯ ಮನೆಗೆ ಬರುತ್ತಿದ್ದರು; ಕಾತರದ ಪಿಸುಧ್ವನಿಯಲ್ಲಿ ಅಂದ್ರೇಯ್‌ಯೊಡನೆ ಅವರು ಮಾತಾಡುತ್ತಿದ್ದರು. ಮಾತು ಮುಗಿದಾಗ ಕೋಟಿನ ಕಾಲರುಗಳನ್ನೆತ್ತಿಕೊಂಡು, ಟೋಪಿಯನ್ನು ಕಣ್ಣುಗಳವರೆಗೂ ಇಳಿಸಿಕೊಂಡು, ನಿಶ್ಶಬ್ದ

ವಾಗಿ ಜಾಗರೂಕತೆಯಿಂದ ಕತ್ತಲೆಯಲ್ಲಿ ಮಾಯವಾಗುತ್ತಿದ್ದರು. ಅವರಲ್ಲಿ ಪ್ರತಿಯೊಬ್ಬರಲ್ಲೂ ತಡೆಹಿಡಿದ ಉದ್ವಿಗ್ನತೆಯಿತ್ತು. ತಾಯಿಗದು ತಿಳಿಯುತ್ತಿತ್ತು. ಅವರೆಲ್ಲರೂ ಹಾಡಲುನಗಲು ಇಚ್ಛಿಸುತ್ತಿದ್ದಂತೆಯೂ ಆದರೆ ಬಿಡುವಿಲ್ಲವಾದ್ದರಿಂದ, ಯಾವಾಗಲೂ ಅವಸರವಸರವಾಗಿ ಎಲ್ಲಿಗಾದರೂ ಧಾವಿಸಬೇಕಾಗಿದ್ದರಿಂದ, ಅವರು ಹಾಡದೆ ನಗದೆ ಸುಮ್ಮನಿದ್ದ ಹಾಗೂ ತೋರುತ್ತಿತ್ತು. ಕೆಲವರು ಗಂಭೀರವಾಗಿರುತ್ತಿದ್ದರು. ವ್ಯಂಗ್ಯದ ಸ್ವರವಿರುತ್ತಿತ್ತು ಅವರ ಮಾತಿನಲ್ಲಿ. ಕೆಲವರು ಸಂತೋಷವಾಗಿದ್ದು ಯೌವನದ ಚಟುವಟಿಕೆಯಿಂದ ಮಿಡಿಯುತ್ತಿದ್ದರು. ಉಳಿದವರು ಶಾಂತವಾಗಿ ಆಲೋಚನಾಮಗ್ನರಾಗಿರುತ್ತಿದ್ದರು. ತಾಯಿಯ ದೃಷ್ಟಿಯಲ್ಲಿ, ಅವರೆಲ್ಲರೂ ಆತ್ಮವಿಶ್ವಾಸವಿದ್ದ ಜನರು. ನೋಟಕ್ಕೆ, ಅವರಲ್ಲಿ ಪ್ರತಿಯೊಬ್ಬರೂ ಅತ್ಯಂತ ವೈಯಕ್ತಿಕವಾಗಿದ್ದರೂ, ತಾಯಿಯ ಕಣ್ಣಿಗೆ ಆ ಎಲ್ಲ ಮುಖಗಳೂ ಒಂದೇ ನೋಟವನ್ನು ಕೊಡುತ್ತಿದ್ದುವು – ಕ್ಷೀಣಿಸಿದ್ದ, ಶಾಂತವಾಗಿ ದೃಢವಾಗಿದ್ದ ಮುಖ; ಆಳವಾದ, ಸ್ವಚ್ಛವಾದ, ಕರಿಯ ಕಣ್ಣುಗಳು; ದೃಷ್ಟಿಯೋ ಕ್ರಿಸ್ತನ ಹಾಗೆ, ಮೃದುತ್ವವೂ ಇತ್ತು – ಕಾಠಿನ್ಯ ಕೂಡಾ.

ಅವರೆಷ್ಟು ಜನ ಎಂದು ತಾಯಿ ಎಣಿಸಿ ನೋಡಿದಳು. ಪಾವೆಲ್‌ನ ಸುತ್ತು ಒಂದು ಗುಂಪನ್ನು ಮನಸ್ಸಿನಲ್ಲಿಯೇ ಕೂಡಿಸಿಕೊಂಡಳು. ಆ ಗುಂಪಿನ ನಡುವೆ, ವೈರಿಯ ಕಣ್ಣಿಗೆ ಪಾವೆಲ್ ಸಿಗಲಾರನೆಂದು ಕಲ್ಪಿಸಿಕೊಂಡಳು.

ಒಂದು ದಿನ, ದಿಟ್ಟಳಾಗಿದ್ದ ಗುಂಗುರು ಕೂದಲಿನ ಹುಡುಗಿಯೊಬ್ಬಳು ಶಹರದಿಂದ ಬಂದಳು. ಅಂದ್ರೇಯ್‌ಗಾಗಿ ಒಂದು ಪ್ಯಾಕೆಟ್ಟು ತಂದಳು. ವಾಪಸು ಹೊರಟಾಗ ಆಕೆ, ತಾಯಿಯತ್ತ ನೋಡಿ, ತುಂಟ ಕಣ್ಣುಗಳನ್ನು ಮಿನುಗಿಸಿ, "ಬರ್ತೀನಿ ನಮಸ್ಕಾರ, ಸಂಗಾತಿ !" ಎಂದಳು.

ಮುಗುಳುನಗೆಯನ್ನು ತಡೆಹಿಡಿದುಕೊಂಡು "ನಮಸ್ಕಾರ," ಎಂದು ತಾಯಿ ಉತ್ತರವಿತ್ತಳು.

ಹುಡುಗಿಯನ್ನು ಹೊರ ಕಳುಹಿದ ಮೇಲೆ ತಾಯಿ ಕಿಟಕಿಯ ಬಳಿಗೆ ಬಂದು ನಿಂತಳು. ತನ್ನ ಆ ಸಂಗಾತಿ ವಸಂತ ಹೂವಿನಷ್ಟು ಹೊಸದಾಗಿ, ಬಣ್ಣದ ಚಿಟ್ಟೆಯಷ್ಟು ಹಗುರವಾಗಿ, ಲವಲವಿಕೆಯ ಪುಟ್ಟ ಹೆಜ್ಜೆಗಳನ್ನಿಡುತ್ತ ಬೀದಿಯಲ್ಲಿ ನಡೆದು ಹೋಗುತಿದ್ದುದನ್ನು ತಾಯಿ ಮುಗುಳ್ನಗುತ್ತ ನೋಡಿದಳು.

"ಸಂಗಾತಿ ! ಪ್ರೀತಿಯ ಮಗಳೆ ! ಜೀವಮಾನವೆಲ್ಲ ನಿನ್ನ ಜತೆಯಲ್ಲಿರೋಕೆ ನಿಜವಾದ ಸಂಗಾತೀನ ದೇವರು ದಯಪಾಲಿಸಲಿ !" ಎಂದು ತಾಯಿ ಮೆಲ್ಲನೆ ಹೇಳಿಕೊಂಡಳು.

ಶಹರದಿಂದ ಬರುತ್ತಿದ್ದ ಈ ಎಲ್ಲ ಜನರಲ್ಲಿ ಒಂದು ತರಹೆಯ ಮಗುತನವಿದ್ದುದನ್ನು ತಾಯಿ ಕಂಡಳು. ತನ್ನ ಹಿರಿ ವಯಸ್ಸಿನ ಅಧಿಕಾರದಿಂದ ಅವರೆಲ್ಲರ ಬಗೆಗೆ ಮುಗುಳ್ನಗಬೇಕೆಂದು ತಾಯಿಗೆ ಅನಿಸುತ್ತಿತ್ತು. ಆದರೆ ಅವರ ಶ್ರದ್ಧೆ ಆಕೆಯ ಮನ ಮುಟ್ಟುತ್ತಿತ್ತು. ಸಂತೋಷದಿಂದ ಅವಳು ಅಚ್ಚರಿಗೊಳ್ಳುತ್ತಿದ್ದಳು. ಅವರ ಅಗಾಧ

ಶ್ರದ್ಧೆ ಹೆಚ್ಚು ಹೆಚ್ಚು ಸ್ಪಷ್ಟವಾಗಿ ಆಕೆಗೆ ಕಾಣಿಸುತ್ತಿತ್ತು. ನ್ಯಾಯದ ಜಯದ ಬಗೆಗೆ ಅವರು ಕಾಣುತ್ತಿದ್ದ ಕನಸುಗಳಿಂದ ತಾಯಿಯ ಹೃದಯ ಅರಳಿ ಪುಲಕಗೊಳ್ಳುತ್ತಿತ್ತು. ಅವರ ಮಾತಿಗೆ ಕಿವಿಗೊಡುತ್ತಿದ್ದಂತೆ ಆಕೆ ಅರ್ಥವಾಗದೊಂದು ವ್ಯಾಕುಲತೆಯಿಂದ ನಿಟ್ಟುಸಿರುಬಿಡುತ್ತಿದ್ದಳು. ಆದರೆ ಅವರ ಸರಳತೆ, ತಮ್ಮ ಹಿತದ ಬಗೆಗೆ ಭವ್ಯವಾದ ಉದಾರವಾದ ಅಲಕ್ಷ್ಯ, ಇವು ವಿಶೇಷವಾಗಿ ತಾಯಿಯ ಆದರವನ್ನು ಪಡೆದುವು.

ಜೀವನದ ವಿಷಯವಾಗಿ ಅವರು ಹೇಳಿದ್ದರಲ್ಲಿ ಹೆಚ್ಚಿನಂಶ ಆಗಲೇ ಆಕೆಗೆ ಅರ್ಥವಾಗುತ್ತಿತ್ತು. ಮಾನವನ ದುಃಖದ ನಿಜವಾದ ಮೂಲ ಯಾವುದೆಂಬುದನ್ನು ಅವರು ಕಂಡಿದ್ದ ಹಾಗೆ ಆಕೆಗೆ ತೋರುತ್ತಿತ್ತು. ಅವರ ಅಭಿಪ್ರಾಯಗಳಲ್ಲಿ ಹೆಚ್ಚಿನವು ಆಕೆಗೆ ಸಮ್ಮತವಾಗಿದ್ದುವು. ಆದರೆ ಅವಳ ಹೃದಯದ ಆಳದಲ್ಲೊಂದು ಶಂಕೆ ಅಡಗಿತ್ತು. ತಮಗೆ ಸರಿಹೊಂದುವ ಹಾಗೆ ಜೀವನವನ್ನು ಪುನರ್‌ನಿರ್ಮಿಸಲು ಅವರು ಸಮರ್ಥರಾಗುವರೆಂದಾಗಲೀ, ದುಡಿಯುವ ಜನರನ್ನೆಲ್ಲ ತಮ್ಮ ಧ್ಯೇಯದ ಸುತ್ತಲೂ ಒಗ್ಗೂಡಿಸುವಷ್ಟು ಅವರು ಬಲಿಷ್ಠರಾಗುವರೆಂದಾಗಲೀ ಅವಳು ನಂಬ ಲಿಲ್ಲ. ಆಕೆ ಕಾಣುತ್ತಿದ್ದಂತೆ, ಈ ದಿನ ಹೊಟ್ಟೆ ತುಂಬಿಸಿಕೊಳ್ಳುವುದೇ ಪ್ರತಿಯೊಬ್ಬನ ಮುಂದಿದ್ದ ಪ್ರಶ್ನೆ. ಆ ಪ್ರಶ್ನೆಯನ್ನು ಮುಂದಕ್ಕೆ ಹಾಕಲು ಯಾರೂ ಸಿದ್ಧರಿರಲಿಲ್ಲ. ಆ ದೀರ್ಘವಾದ ಕಷ್ಟದ ಹಾದಿಯಲ್ಲಿ ಮುಂದೆ ಸಾಗಲು ಬಹಳ ಜನರು ಒಪ್ಪ ಲಾರರು. ಕೊನೆಯಲ್ಲಿ ತಲಪುವ, ಮಾನವ – ಸೋದರತ್ವದ ಸಾಮ್ರಾಜ್ಯದ ಭವ್ಯ ಕಲ್ಪನೆ ಯನ್ನು ಹೆಚ್ಚು ಕಣ್ಣುಗಳು ಕಾಣಲಾರವು. ಈ ಕಾರಣದಿಂದಲೇ ಈ ಒಳ್ಳೆಯ ಜನರೆಲ್ಲ, ಗಡ್ಡ ಬೆಳೆದಿದ್ದರೂ ಎಷ್ಟೋ ವೇಳೆ ಆಯಾಸದಿಂದ ಬಳಲಿದ್ದರೂ, ಎಳೆಯ ಮಕ್ಕಳ ಹಾಗೆ ತಾಯಿಗೆ ಕಾಣಿಸುತ್ತಿದ್ದರು.

"ಓ ಎಳೆಯ ಮುದ್ದುಗಳೇ!" ಎಂದು ಆಕೆ, ತಲೆಯಲುಗಿಸುತ್ತ ಯೋಚಿ ಸಿದಳು.

ಆದರೆ ಅವರೆಲ್ಲ ಒಳ್ಳೆಯ, ಗಂಭೀರವಾದ, ವಿವೇಕಪೂರ್ಣವಾದ ಜೀವನವನ್ನು ನಡೆಸುತ್ತಿದ್ದರು. ಜನರಿಗೆ ಹಿತವನ್ನು ಮಾಡುವ ಮಾತನ್ನು ಅವರು ಆಡುತ್ತಿದ್ದರು. ತಮಗೆ ಆಗಲೇ ತಿಳಿದುದನ್ನು ಬೇರೆಯವರಿಗೆ ಬೋಧಿಸುವ ಯತ್ನದಲ್ಲಿ ಅವರು ಹಿಂದುಮುಂದು ನೋಡುತ್ತಿರಲಿಲ್ಲ. ಅಪಾಯವೆಂಥದೇ ಇರಲಿ, ಅಂಥ ಜೀವನವನ್ನು ಪ್ರೀತಿಸುವುದು ಸಾಧ್ಯ ಎಂಬುದನ್ನು ತಾಯಿ ಮನಗಂಡಿದ್ದಳು. ತನ್ನದೇ ಗತ ಕಾಲದ ಕಗ್ಗತ್ತಲ ಜೀವನದತ್ತ ದೃಷ್ಟಿ ಹೊರಳಿಸಿ ತಾಯಿ ನಿಟ್ಟುಸಿರು ಬಿಟ್ಟಳು. ಕ್ರಮ ಕ್ರಮವಾಗಿ, ಈ ಹೊಸ ಜೀವನದಲ್ಲಿ ತಾನೂ ಮುಖ್ಯ ಎಂಬ ಶಾಂತವಾದ ತಿಳಿವಳಿಕೆ ಅವಳ ಹೃದಯ ದಲ್ಲಿ ಬೆಳೆಯಿತು. ಯಾರಿಗಾದರೂ ತನ್ನ ಅವಶ್ಯತೆ ಇತ್ತೆಂದು ಹಿಂದೆಂದೂ ಆಕೆ ಭಾವಿಸಿರಲಿಲ್ಲ. ಆದರೆ ಈಗ ಬಹಳ ಜನರಿಗೆ ತಾನು ಬೇಕಾದವಳೆಂಬುದು ಸ್ಪಷ್ಟವಾಗಿ ಅವಳಿಗೆ ಕಾಣುತ್ತಿತ್ತು. ಈ ಹೊಸ ಆಹ್ಲಾದಕರ ವಿಷಯ, ಆಕೆ ತಲೆಯೆತ್ತಿ ನಡೆ ಯುವಂತೆ ಮಾಡಿತು.

ಕರಪತ್ರಗಳನ್ನು ಅವಳು ತಪ್ಪದೆ ಕಾರಖಾನೆಯೊಳಕ್ಕೆ ಒಯ್ಯುತ್ತಿದ್ದಳು. ಇದು ತನ್ನ ಕರ್ತವ್ಯ ಎಂದು ತಿಳಿದಿದ್ದಳಾಕೆ. ಗುಪ್ತಚಾರರಿಗೆ ಆಕೆ ದಿನಾಲೂ ಕಂಡು ಪರಿಚಯವಿದ್ದ ಹೆಂಗಸಾದುದರಿಂದ, ಅವಳ ವಿಷಯದಲ್ಲಿ ಅವರು ಹೆಚ್ಚಿನ ಗಮನವನ್ನೇ ಕೊಡಲಿಲ್ಲ. ಹಲವಾರು ಬಾರಿ ಆಕೆಯನ್ನು ಅವರು ಝಡ್ತಿ ಮಾಡಿದರು. ಆದರೆ ಝಡ್ತಿಯಾಗುತ್ತಿದ್ದುದು ಕರಪತ್ರಗಳು ಕಾಣಿಸಿಕೊಂಡ ಮರುದಿನ. ತನ್ನಲ್ಲಿ ಕರಪತ್ರಗಳು ಇಲ್ಲದೆ ಇದ್ದಾಗ ತಾಯಿ ತಾನಾಗಿಯೇ ಕಾವಲುಗಾರರ ಸಂಶಯ ಕೆರಳಿಸಲು ಯತ್ನಿಸುತ್ತಿದ್ದಳು. ಆಗ ಅವರು ಆಕೆಯನ್ನು ತಡೆದು ನಿಲ್ಲಿಸಿ ಶೋಧಿಸುತ್ತಿದ್ದರು. ಅವಳು ಆಗ ವಾದಕ್ಕೆ ನಿಂತು ಅವಮಾನವಾದವಳಂತೆ ನಟಿಸುತ್ತಿದ್ದಳು. ತನ್ನಲ್ಲೇನೂ ಇಲ್ಲವೆಂದು ತೋರಿಸಿಕೊಟ್ಟಾದ ಮೇಲೆ, ಆಕೆ ತನ್ನ ಜಾಣ್ಮೆಗಾಗಿ ಹೆಮ್ಮೆಪಡುತ್ತ ಹೋಗುತ್ತಿದ್ದಳು. ಈ ಆಟದಿಂದ ಆಕೆಗೆ ತುಂಬ ಸಂತೋಷವಾಗುತ್ತಿತ್ತು.

ವೆಸೊವ್‌ಶ್ಚಿಕೋವ್‌ಗೆ ಕಾರಖಾನೆಯಲ್ಲಿ ಪುನಃ ಕೆಲಸ ಸಿಗಲಿಲ್ಲ. ಒಬ್ಬ ಮರದ ವ್ಯಾಪಾರಿ ಹತ್ತಿರ ಅವನು ನೌಕರಿ ಹಿಡಿದ – ಮರ, ಹಲಗೆ, ಸೌದೆಯನ್ನು ಸಾಗಿಸುವ ಕೆಲಸ. ತನ್ನ ಹೇರಿನೊಡನೆ ಆತ ಹೋಗುತ್ತಿದ್ದುದನ್ನು ಹೆಚ್ಚು ಕಡಮೆ ಪ್ರತಿ ದಿನವೂ ತಾಯಿ ನೋಡುತ್ತಿದ್ದಳು: ಮೊದಲು ಕಾಣಿಸುತ್ತಿದ್ದುದು, ಎಲುಬು ಎದ್ದು ನಿಂತಿದ್ದ ಒಂದು ಜೋಡಿ ಕರಿ ಕುದುರೆಗಳು. ತಮ್ಮ ಶ್ರಮದ ಆಯಾಸದ ಫಲವಾಗಿ ಆ ಕುದುರೆಗಳ ಕಾಲುಗಳು ಕಂಪಿಸುತ್ತಿದ್ದುವು. ತಮ್ಮ ನಿಸ್ತೇಜವಾದ ನೊಂದ ಕಣ್ಣುಗಳನ್ನು ಪಿಳಿ ಪಿಳಿ ಬಿಡುತ್ತಾ ಅವು ತಲೆಯಾಡಿಸುತ್ತಿದ್ದುವು. ಅವುಗಳ ಹಿಂದೆ ಉದ್ದನೆಯ ಒದ್ದೆಯಾದ ಮರದ ದಿಂಡು ಇರುತ್ತಿತ್ತು, ಇಲ್ಲವೇ ಒಂದಕ್ಕೊಂದು ತಗಲಿ ಸಪ್ಪಳ ಮಾಡುತ್ತಿದ್ದ ಹಲಗೆಗಳ ರಾಶಿ ಇರುತ್ತಿತ್ತು. ಅವುಗಳ ಪಕ್ಕದಲ್ಲಿ ಕಡಿವಾಣವನ್ನು ಕೈಗಳಲ್ಲಿ ಸಡಿಲ ಬಿಟ್ಟು ನಿಕೊಲಾಯ್ ನಡೆಯುತ್ತಿದ್ದ.... ಕೊಳಕು ಮೈ, ಹರಿದ ಉಡುಗೆ, ಭಾರವಾದ ಪಾದರಕ್ಷೆಗಳು, ತಲೆಯ ಹಿಂಭಾಗಕ್ಕೆ ತಳ್ಳಿದ್ದ ಟೋಪಿ, ಭೂಮಿಯಿಂದ ಕಿತ್ತಿದ್ದ ಮರದ ಕೊರಡಿನ ಹಾಗೆ ದಪ್ಪಗೆ ಒರಟಾಗಿದ್ದ ದೇಹ. ದೃಷ್ಟಿಯನ್ನು ನೆಲದ ಮೇಲಿರಿಸಿ ನಡೆಯುತ್ತ ಆತನೂ ತಲೆದೂಗುತ್ತಿದ್ದ. ಅವನ ಕುದುರೆಗಳು ತಮಗೇನೂ ಕಾಣಿಸದು ಎಂಬಂತೆ, ಎದುರು ಬರುತ್ತಿದ್ದ ಗಾಡಿಗಳಿಗೋ ಜನರಿಗೋ ಢಿಕ್ಕಿ ಹೊಡೆಯುತ್ತಿದ್ದುವು. ಜನರು ನಿಕೊಲಾಯ್‌ಯನ್ನು ಕಟುವಾಗಿ ಬಯ್ಯುತ್ತಿದ್ದರು. ಕಣಜದ ಹುಳುಗಳ ಗುಂಪೇ ಮುತ್ತಿದ ಹಾಗೆ ಶಾಪದ ಬಿರುನುಡಿಗಳು ಸುತ್ತಲಿಂದಲೂ ಕಡಿಯುತ್ತಿದ್ದುವು. ಅವನು ಉತ್ತರವನ್ನೂ ಕೊಡುತ್ತಿರಲಿಲ್ಲ; ತಲೆಯನ್ನೂ ಎತ್ತುತ್ತಿರಲಿಲ್ಲ. ಸುಮ್ಮನೆ ತೀಕ್ಷ್ಣವಾದ ಸಿಳ್ಳು ಹಾಕಿ "ಹೂಂ ! ನಡೀರಿ ಮುಂದಕ್ಕೆ !" ಎಂದು ಕುದುರೆಗಳನ್ನುದ್ದೇಶಿಸಿ ಗೊಣಗುತ್ತಿದ್ದ.

ಹೊಸದಾಗಿ ಬಂದ ವಿದೇಶೀ ಪತ್ರಿಕೆ ಇಲ್ಲವೆ ಹೊತ್ತಿಗೆಯನ್ನು ಓದಲೆಂದು ತನ್ನ ಸಂಗಾತಿಗಳನ್ನು ಆಂದ್ರೇಯ್ ಒಟ್ಟಿಗೆ ಕರೆದಾಗ, ನಿಕೊಲಾಯ್ ಬಂದು ಮೂಲೆಯಲ್ಲಿ ಒಂದು ಗಂಟೆ ಇಲ್ಲವೆ ಎರಡು ಗಂಟೆ ಹೊತ್ತು ಮೌನವಾಗಿ ಕಿವಿಗೊಡುತ್ತ

ಕುಳಿತಿರುತ್ತಿದ್ದ. ಓದಿದ ಬಳಿಕ ಆ ಯುವಕರು ಬಿಸಿಯಾದ ಚರ್ಚೆ ನಡೆಸುತ್ತಿದ್ದರು. ನಿಕೊಲಾಯ್ ಆ ಚರ್ಚೆಯಲ್ಲಿ ಎಂದೂ ಭಾಗವಹಿಸುತ್ತಿರಲಿಲ್ಲ. ಆದರೆ ಉಳಿದವರೆಲ್ಲ ಹೊರಟುಹೋದ ಮೇಲೂ ಆತ ಕುಳಿತಿದ್ದು, ಅಂದ್ರೇಯ್‌ಯೊಬ್ಬನೊಡನೆಯೇ ಮಾತಾಡುತ್ತಿದ್ದ.

"ಹೆಚ್ಚು ತಪ್ಪು ಯಾರದು?" ಎಂದು ಉರಿಮೊಗದಿಂದಲೇ ಆತ ಕೇಳುತ್ತಿದ್ದ.

"'ಇದು ನನ್ನದು!' ಅಂತ ಮೊದಲು ಯಾರು ಹೇಳಿದನೋ ಅವನೇ ತಪ್ಪಿತಸ್ಥ. ಆ ಮನುಷ್ಯ ಕೆಲವು ಸಾವಿರ ವರ್ಷಗಳ ಹಿಂದೆಯೇ ಸತ್ತು ಹೋದ. ಆದ್ದರಿಂದ ಅವನ ವಿಷಯದಲ್ಲಿ ಕಿಡಿಕಿಡಿಯಾಗಿ ಬೈಯೋದರಲ್ಲಿ ಅರ್ಥವಿಲ್ಲ," ಎಂದು ಅಂದ್ರೇಯ್ ನಗುತ್ತ ಉತ್ತರವಿತ್ತ. ಆದರೆ ಅವನ ಕಣ್ಣುಗಳಲ್ಲಿ ನೆಮ್ಮದಿ ಇರುತ್ತಿರಲಿಲ್ಲ.

"ಶ್ರೀಮಂತರ ವಿಷಯ ಹೇಗೆ? ಅವರಿಗೆ ಬೆಂಬಲ ಕೊಡುವವರ ಸಮಾಚಾರ ಹೇಗೆ?"

ತನ್ನ ತಲೆಗೂದಲೊಡನೆ ಬೆರಳುಗಳಿಂದ ಆಟವಾಡುತ್ತ, ತನ್ನ ಮೀಸೆಯನ್ನು ತೀಡುತ್ತಾ ಅಂದ್ರೇಯ್ ಜೀವನ ಮತ್ತು ಜನರ ಬಗೆಗೆ ಸರಳ ಭಾಷೆಯಲ್ಲಿ ವಿವರಿಸುತ್ತಿದ್ದನು. ಅವನ ಅಭಿಪ್ರಾಯದಂತೆ ಸಾಮಾನ್ಯವಾಗಿ ಎಲ್ಲ ಜನರೂ ತಪ್ಪಿತಸ್ಥರೇ. ಇದರಿಂದ ನಿಕೊಲಾಯ್‌ಗೆ ತೃಪ್ತಿಯಾಗಲಿಲ್ಲ. ತುಟಿಗಳನ್ನು ಬಿಗಿಹಿಡಿದು, ತಲೆಯಲುಗಿಸಿ, ತಾನು ಒಪ್ಪುವುದಿಲ್ಲವೆಂದು ಗೊಣಗುತ್ತಿದ್ದ. ಅಂತೂ ಕೊನೆಗೆ, ಅಸ್ವಾಸ್ಥ್ಯದ, ಅತೃಪ್ತಿಯ ಮನಸ್ಸಿನಿಂದ ಹೊರಟು ಹೋಗುತ್ತಿದ್ದ.

ಒಂದು ದಿನ ಆತನೆಂದ:

"ಇಲ್ಲ. ತಪ್ಪಿತಸ್ಥರಾದ ಕೆಲ ಜನರು ಇರಲೇ ಬೇಕು – ಅವರು ಇಲ್ಲೇ ಇದ್ದಾರೆ, ನಾನ್ಹೇಳ್ತೀನಿ ಕೇಳು. ನಮ್ಮ ಜೀವನಾನ, ಕಳೆ ತುಂಬಿರೋ ಹೊಲಾನ ಉಳೋ ಹಾಗೆ ಉತ್ತು ಹಾಕಬೇಕು. ರವಷ್ಟೂ ದಯೆ ತೋರಿಸಬಾರದು!"

"ಟೈಂ ಕೀಪರ್ ಇಸಾಯ್ ನಿಮ್ಮ ವಿಷಯವಾಗಿ ಒಮ್ಮೆ ಹಾಗೆಯೇ ಹೇಳಿದ್ದ," ಎಂದು ತಾಯಿ ನೆನಪು ಮಾಡಿಕೊಟ್ಟಳು.

"ಇಸಾಯ್?" ಎಂದು ವೆಸೊವ್‌ಶ್ಚಿಕೋವ್ ಸ್ವಲ್ಪ ತಡೆದು ಕೇಳಿದ.

"ಹೌದು, ಅವನು ನೀಚ. ಅವನು ಎಲ್ಲರ ಮೇಲೂ ಕಣ್ಣಿಡ್ತಾನೆ. ಏನೇನೋ ಪ್ರಶ್ನೆ ಕೇಳ್ತಾನೆ. ನಮ್ಮ ಬೀದಿಗೂ ಬಂದು ಕಿಟಕಿಯಿಂದ ಇಣಿಕಿ ನೋಡೋಕೆ ಶುರು ಮಾಡಿದ್ದಾನೆ."

"ಕಿಟಕಿಯೊಳಗೆ ಇಣಿಕೋದು?" ಎಂದು ನಿಕೊಲಾಯ್ ಮತ್ತೆ ಕೇಳಿದ.

ತಾಯಿಯಾಗಲೇ ಮಲಗುವ ಸಿದ್ಧತೆ ಮಾಡುತ್ತಿದ್ದಳು. ಆತನ ಮುಖ ಅವಳಿಗೆ ಕಾಣಿಸಲಿಲ್ಲ. ಆದರೆ ಅಂದ್ರೇಯ್‌ಯು ಅವಸರದ ಸ್ವರ ಕೇಳಿಸಿತು: "ಅವನಿಗೆ ಬಹಳ ಬಿಡುವಿರಬಹುದು. ಇಣಿಕಿ ನೋಡ್ಲಿ ಬಿಡು. ನಮಗೇನದರಿಂದ," ಎಂದ ಅಂದ್ರೇಯ್. ಅದನ್ನು ಕೇಳಿದ ತಾಯಿ, ತಾನು ಹಾಗೆ ಹೇಳಬಾರದಾಗಿತ್ತು ಎಂದುಕೊಂಡಳು.

ಅಂದ್ರೇಯ್‌ಯ ಮಾತಿಗೆ ನಿಕೊಲಾಯ್ ಉತ್ತರವಿತ್ತ.

"ನೋಡಿದೆಯಾ? ತಪ್ಪಿತಸ್ಥರಲ್ಲಿ ಅವನೊಬ್ಬ."

ಅಂದ್ರೇಯ್ ತಡವಿಲ್ಲದೆ ಕೇಳಿದ:

"ಅವನದೇನು ತಪ್ಪು? ಮೂರ್ಖನಾಗಿರೋದೆ?"

ವೆಸೊವ್‌ಶ್ಚಿಕೋವ್ ಉತ್ತರವೀಯದೆ ಹೊರಟುಹೋದ.

ಹೊಹೋಲ್ ಮೆಲ್ಲನೆ, ಜೇಡನಂತೆ ದೀರ್ಘವಾದ ತನ್ನ ಕಾಲುಗಳನ್ನು ತಳ್ಳುತ್ತ ಅತ್ತಿತ್ತ ನಡೆದಾಡಿದ. ಎಂದಿನಂತೆ, ಆತ ಬೂಟ್ಸು ತೆಗೆದಿರಿಸಿದ್ದ. ಪೆಲಗೇಯಗೆ ತೊಂದರೆಯಾಗಬಾರದೆಂದು ಮನೆಯಲ್ಲಿ ನಿಶ್ಶಬ್ದವಾಗಿ ನಡೆಯುವುದು ಅವನ ಪದ್ಧತಿ. ಆದರೆ ಆಕೆಗೆ ನಿದ್ದೆ ಬಂದಿರಲಿಲ್ಲ. ನಿಕೊಲಾಯ್ ಹೋದೊಡನೆ ಕಾತರವಾಗಿ ಆಕೆ ಹೇಳಿದಳು:

"ಅವನ ವಿಚಾರ ಹೆದರಿಕೆಯಾಗುತ್ತಪ್ಪ ನಂಗೆ!"

"ಹುಂ...." ಎಂದು ಸ್ವರ ಹೊರಡಿಸಿದ ಹೊಹೋಲ್ "ಅವನು ಸಿಟ್ಟಿನಲ್ಲಿದ್ದಾನೆ. ಇನ್ನು ಅವನ ಮುಂದೆ ಇಸಾಯ್ ಹೆಸರೆತ್ತಬಾರದವ್ವ. ಆ ಇಸಾಯ್ ನಿಜವಾಗಿಯೂ ಗೂಢಚಾರ."

"ಅವನು ಗೂಢಚಾರನಾಗಿರೋದರಲ್ಲಿ ಏನು ಆಶ್ಚರ್ಯ? ಅವನ ಒಬ್ಬ ಸಂಬಂಧಿಕ ಪೋಲೀಸನಾಗಿಲ್ಲವೆ?"

ಹೊಹೋಲ್ ಒಂದೇ ಸಮನೆ ಹೇಳುತ್ತಾ ಹೋದ:

"ಅವನನ್ನ ಹೊಡೆದು ಹಾಕೋದು ನಿಕೊಲಾಯ್‌ಗೆ ಬಹಳ ಸುಲಭ. ಸಾಮಾನ್ಯ ಮನುಷ್ಯರಲ್ಲಿ ಎಂಥೆಂಥ ಭಾವನೇನ ಅಧಿಕಾರದಲ್ಲಿರೋ ಆ ದೊಡ್ಡ ಮನುಷ್ಯರು ಹುಟ್ಟಿಸಿದಾರೆ ನೋಡಿದ್ಯಾ? ತಮಗೆ ಅನ್ಯಾಯವಾಗಿ ಆ ಸ್ಥಿತಿ ಯಾಕೆ ಬಂತೂಂತ ನಿಕೊಲಾಯ್‌ಯಂಥ ಜನರಿಗೆ ಗೊತ್ತಾದರೆ ಏನಾದೀತು? ಅವರು ರಕ್ತದ ಕಾರಂಜಿ ಚಿಮ್ಮಿಸ್ತಾರೆ. ಅದರಲ್ಲಿ ಭೂಮಿ ಸಾಬೂನಿನ ಬುರುಗಿನ ಹಾಗಾಗುತ್ತೆ."

ತಾಯಿ ಮೆಲ್ಲನೆ, "ಎಷ್ಟೊಂದು ಭಯಂಕರ, ಅಂದ್ರ್ಯೂಷ!" ಎಂದು ಉದ್ಗರಿಸಿದಳು.

ಒಂದು ನಿಮಿಷ ತಡೆದು ಅಂದ್ರೇಯ್ ಹೇಳಿದ:

"ಹೂಂ, ನುಸೀನ ನುಂಗಿದರೆ ವಾಕರಿಕೆಯಾಗದಿರುತ್ತದೆಯೆ? ಆದರೆ ಜನಸಾಮಾನ್ಯರನ್ನ ಅಳಿಸಿ ಹೊರಡಿಸಿರೋ ಕಣ್ಣೀರಿನ ಸಮುದ್ರದಲ್ಲಿ ಬಂಡವಾಳಶಾಹಿಯ ಪ್ರತಿಯೊಂದು ರಕ್ತ ಬಿಂದುವೂ ಯಾವಾಗಲೋ ತೊಳೆದು ಹೋಗುತ್ತೆ."

ಆಗಲೇ ನಕ್ಕು ಮತ್ತೂ ಮುಂದುವರಿಸಿದ:

"ಅದು ನ್ಯಾಯವೇನೋ ನಿಜ. ಆದರೆ ಅದರಿಂದ ಹೆಚ್ಚಿನ ಸಮಾಧಾನವಾಗೋದಿಲ್ಲ."

೨೨

ಒಂದು ಭಾನುವಾರ, ದಿನಸಿ ಅಂಗಡಿಗೆ ಹೋಗಿದ್ದ ತಾಯಿ ವಾಪಸು ಬಂದು ಒಳಕ್ಕೆ ಬಾಗಿಲು ತಳ್ಳಿದಳು. ಒಳಗಿನ ಕೊಠಡಿಯಿಂದ ಪಾವೆಲ್‌ನ ಸ್ವರ ಕೇಳಿಸಿತು. ಕಡು ಬೇಸಗೆಯ ಹನಿಮಳೆಯಲ್ಲಿ ನೆನೆದ ಹಾಗೆ ತಾಯಿ ಸಂತೋಷದಿಂದ ತೋಯ್ದು ಹೋಗಿ ಹೊಸ್ತಿಲಲ್ಲೆ ನಿಂತಳು.

"ಇಗೋ, ಬಂದಳು !" ಎಂದು ಅಂದ್ರೇಯ್ ಧ್ವನಿ ಏರಿಸಿ ಹೇಳಿದ.

ಪಾವೆಲ್ ಥಟ್ಟನೆ ತಿರುಗಿದ್ದನ್ನು, ಅವನ ಮುಖದ ಮೇಲೆ ಆಸೆಯ ಹೊಂಬೆಳಕು ಹರಡಿದ್ದನ್ನು, ತಾಯಿ ಕಂಡಳು.

"ಅಂತೂ ಬಂದನಲ್ಲ – ಕೊನೆಗೂ ಮನೆ ಸೇರಿದನಲ್ಲ," ಎಂದು ಆಕೆ ತೊದಲಿದಳು. ಆತ ಅನಿರೀಕ್ಷಿತವಾಗಿ ಹಿಂತಿರುಗಿದ್ದನ್ನು ಕಂಡು ಭಾವಾತಿರೇಕದಿಂದ ಮೂಕಳಾದ ಆಕೆ ಮಗನೆದುರಲ್ಲೆ ಕುಳಿತಳು.

ನಿಸ್ತೇಜವಾಗಿದ್ದ ಆತನ ಮುಖ ತಾಯಿಯ ಬಳಿ ಸಾರಿತು. ತುಟಿಗಳು ನಡುಗುತ್ತಿದ್ದುವು. ಕಣ್ಣುಗಳ ಕೊನೆಯಲ್ಲಿ ತೇವ ಮೂಡಿ ಮಿನುಗುತಿತ್ತು. ಕ್ಷಣಕಾಲ ಆತ ಏನನ್ನೂ ಹೇಳಲಿಲ್ಲ. ತಾಯಿಯೂ ಮೌನವಾಗಿಯೇ ಅವನತ್ತ ನೋಡಿದಳು.

ಅಂದ್ರೇಯ್ ಅವರನ್ನು ಅಲ್ಲೇ ಬಿಟ್ಟು ಮೆಲ್ಲನೆ ಸಿಳ್ಳು ಹಾಕುತ್ತಾ, ಹೊರ ಅಂಗಳಕ್ಕೆ ಇಳಿದ.

ಪಾವೆಲ್ ನಡುಗುತ್ತಿದ್ದ ಬೆರಳುಗಳಿಂದ ತಾಯಿಯ ಕೈಯನ್ನು ಅದುಮಿದ.

"ನಾನು ನಿನಗೆ ಎಷ್ಟೊಂದು ಕೃತಜ್ಞನಾಗಿದೀನಿ ಗೊತ್ತೆ, ಅಮ್ಮ? ನನ್ನ ಪ್ರೀತಿಯ ಅಮ್ಮ!" ಎಂದು ಮೆತ್ತಗಿನ ಸ್ವರದಲ್ಲಿ ಅವನು ಕೇಳಿದ.

ಮಗನ ಮುಖದ ಮೇಲಿನ ಆ ಭಾವವನ್ನು ಕಂಡು, ಒಲವಿನ ಆ ಸ್ವರವನ್ನು ಕೇಳಿ, ತಾಯಿಯ ಕಂಠ ಉಮ್ಮಳಿಸಿ ಬಂತು. ಮಗನ ತಲೆಗೂದಲನ್ನಾಕೆ ನೇವರಿಸಿದಳು.

"ಓ! ಯಾಕಪ್ಪ? ಯಾಕೆ ಕೃತಜ್ಞತೆ? ಭಗವಂತನ ದಯೆ ಇದೆಲ್ಲಾ," ಎಂದಳವಳು.

"ನಮ್ಮ ಮಹಾ ಕೆಲಸದಲ್ಲಿ ಸಹಾಯ ಮಾಡ್ತಿರೋದಕ್ಕೆ. ಅದಕ್ಕಮ್ಮ ಕೃತಜ್ಞತೆ. ತಾಯಿ – ಮಗ ಇಬ್ಬರೂ ಒಂದೇ ಧ್ಯೇಯದವರೂಂತ ಹೇಳಿಕೊಳ್ಳೋದು ಒಂದು ಅಪೂರ್ವ ಸುಖ."

ಅತ್ಯಾಸೆಯಿಂದ, ತೆರೆದ ಹೃದಯದಿಂದ, ಪ್ರತಿ ಮಾತಿಗೂ ಕಿವಿಗೊಡುತ್ತ, ಅಷ್ಟು ಒಳ್ಳೆಯ ಪ್ರೀತಿಯ ಮಗನನ್ನು ಮೆಚ್ಚುಗೆಯ ದೃಷ್ಟಿಯಿಂದ ನೋಡುತ್ತ, ಆಕೆ ಮೌನವಾಗಿದ್ದಳು.

"ಅಮ್ಮ, ಇದನ್ನೆಲ್ಲಾ ತಿಳಿಕೊಳ್ಳೋದು ನಿನಗೆಷ್ಟು ಕಷ್ಟವಾಗಿತ್ತೂಂತ ನಂಗೆ

ಗೊತ್ತಿದೆ. ಎಷ್ಟೋ ವಿಷಯ ನಿನಗೆ ಅಪ್ರಿಯವೇ ಆಗಿತ್ತು. ನೀನು ಯಾವತ್ತೂ ಒಪ್ಪೋದೇ ಇಲ್ಲ, ನಮ್ಮ ವಿಚಾರ ನಿಂಗೆ ಒಪ್ಪಿಗೆಯಾಗೋದೇ ಇಲ್ಲ – ಅಂದ್ಕೊಂಡಿದ್ದೆ. ನಿನ್ನ ಬದುಕಿನ ಇಷ್ಟು ವರ್ಷವೆಲ್ಲಾ ಇದ್ದ ಹಾಗೆ, ಈಗಲೂ ಸುಮ್ಮನೆ ಸಹಿಸಿಕೊಂಡೇ ಇರ್ತೀಯಾ – ಅಂತ ಭಾವಿಸಿದ್ದೆ. ಹಾಗೆ ಯೋಚಿಸ್ದಾಗ ನಂಗೆ ತುಂಬ ದುಃಖವಾಗಿತ್ತು."

"ಎಷ್ಟೋ ವಿಷಯ ತಿಳಿಕೊಳ್ಳೋಕೆ ಅಂದ್ರ್ಯೂಷ ಸಹಾಯ ಮಾಡ್ದ," ಎಂದಳು ತಾಯಿ.

ಪಾವೆಲ್‌ಗೆ ನಗೆ ಬಂತು.

"ಹೂಂ, ಹೇಳಿದ್ದಾನೆ ಆಗಲೇ."

"ಯೆಗೋರ್ ಕೂಡಾ. ಅವನೂ ನಾನೂ ಒಂದೇ ಹಳ್ಳಿಯಿಂದ ಬಂದವರು. ನಂಗೆ ಓದೋಕೆ ಕಲಿಸ್ಬೇಕೂಂತಲೂ ಅಂದ್ರ್ಯೂಷ ಗಲಾಟೆ ಮಾಡ್ದ."

"ನಿನ್ಗೆ ನಾಚಿಕೆಯಾಯ್ತು, ಗುಟ್ಟಾಗಿ ಒಬ್ಬಳೇ ಓದೋಕೆ ಶುರು ಮಾಡ್ದೆ, ಅಲ್ವ ?"

"ಓ ! ಊಹಿಸ್ಕೊಂಡ. ಹಾಗಾದರೆ !" ಎಂದು ತಾಯಿ ಉದ್ಗರಿಸಿದಳು.

ಆಕೆಯ ಹೃದಯದಲ್ಲಿ ಹರ್ಷದ ತೆರೆಗಳು ಅಶಾಂತವಾಗಿ ಉಕ್ಕೇರುತ್ತಿದ್ದುವು.

ಆಕೆಯೆಂದಳು :

"ಒಳಕ್ಕೆ ಕರೆಯೋಣ ಅವನನ್ನ. ನಾವು ಮಾತಾಡೋಕೆ ಅಡ್ಡಿಯಾಗಬಾರದೂಂತ ತಾನಾಗೇ ಹೊರಹೋದ. ಪಾಪ.... ಅವನಿಗೆ ತಾಯಿಯೂ ಇಲ್ಲ."

ಬಾಗಿಲನ್ನು ತೆರೆಯುತ್ತ "ಅಂದ್ರೇಯ್, ಎಲ್ಲಿದ್ದೀಯ ?" ಎಂದು ಪಾವೆಲ್ ಕೂಗಿದ.

"ಇಲ್ಲಿದ್ದೀನಿ. ಒಂದಿಷ್ಟು ಸೌದೆ ಒಡೀಬೇಕೂಂತಿದ್ದೀನಿ" ಎಂದು ಉತ್ತರ ಬಂತು.

"ಬಾ ಇಲ್ಲಿ !"

ತಕ್ಷಣವೇ ಆತ ಬರಲಿಲ್ಲ. ಕೊನೆಗೆ ಅಡುಗೆ ಮನೆಯೊಳಕ್ಕೆ ಬಂದ ಮೇಲೂ ಗೃಹಕೃತ್ಯದ ವಿಷಯವೇ ಮಾತಾಡತೊಡಗಿದ:

"ಒಂದಿಷ್ಟು ಸೌದೆ ತಂದ್ಕೊಡೂಂತ ನಿಕೊಲಾಯ್‌ಗೆ ಹೇಳ್ಬೇಕು. ಸೌದೆ ಮುಗೀತಾ ಬಂದಿದೆ. ಹುಂ. ನಿನ್ನ ಪಾವೆಲ್‌ನ ರವಷ್ಟು ನೋಡಮ್ಮಾ. ಹೇಗೆ ಊದ್ಕೊಂಡಿದಾನೆ. ಬಂಡಾಯಗಾರರನ್ನ ದಂಡಿಸೋದು ಬಿಟ್ಬಿಟ್ಟು ಚೆನ್ನಾಗಿ ಮೇವು ಹಾಕ್ತಿದಾರೇಂತ ಕಾಣುತ್ತೆ."

ತಾಯಿ ನಕ್ಕಳು. ಆನಂದದಿಂದ ಆಕೆಯಿನ್ನೂ ಮತ್ತಳಾಗಿಯೇ ಇದ್ದಳು. ಹೃದಯ ಮಧುರವಾಗಿ ಬಡಿಯುತ್ತಿತ್ತು. ಹೀಗಿದ್ದರೂ ಎಚ್ಚರಿಕೆಯ ಭಾವನೆಯೊಂದು ಅವಳಲ್ಲಿ ಮೂಡಿತು. ಹಿಂದಿದ್ದಂತೆಯೇ ಶಾಂತನಾದ ಮಗನನ್ನು ಕಾಣುವ ಬಯಕೆಯಾಯಿತು ಅವಳಿಗೆ. ಪ್ರತಿಯೊಂದು ಆಶ್ಚರ್ಯಕರವಾಗಿತ್ತು. ತನ್ನ ಜೀವನದಲ್ಲೇ ಪ್ರಪ್ರಥಮವಾದ ಆ ಮಹದಾನಂದವನ್ನು, ಆ ಕ್ಷಣ ಅದೆಷ್ಟು ಬಲಿಷ್ಠವಾಗಿ ಸಜೀವವಾಗಿತ್ತೋ

ಹಾಗೆಯೇ ಸದಾ ಕಾಲವೂ ಸ್ಥಿರಗೊಳಿಸಲು ತಾಯಿ ಇಚ್ಛಿಸಿದಳು. ಅದು ಕರಗಿ ಹೋಗಬಹುದೆಂಬ ಭೀತಿಯಿಂದ ಆಕೆ, ಅಪರೂಪದ ಹಕ್ಕಿಯೊಂದನ್ನು ಹಿಡಿದ ಬೇಡ ನಂತೆ, ಆ ಆನಂದವನ್ನು ಮುಚ್ಚಿಡಲು ಆತುರಳಾದಳು.

ಅತ್ತಿತ್ತ ಧಾವಿಸುತ್ತ, "ಊಟ ಮಾಡೋಣ. ಇನ್ನೂ ಏನೂ ತಿಂದಿಲ್ಲಾಂತ ಕಾಣುತ್ತೆ ಅಲ್ಲವೆ ಪಾಷ?" ಎಂದಳು.

"ಹೌದು. ನನ್ನನ್ನು ಬಿಟ್ಟುಬಿಡೋಕೆ ತೀರ್ಮಾನಿಸಿದಾರೇಂತ ನಿನ್ನೆ ಜೇಲರು ಹೇಳಿದ. ಹೀಗಾಗಿ ತಿನ್ನೋದು ಕುಡಿಯೋದು ಏನೂ ಬೇಡವಾಗಿತ್ತು."

ಪಾವೆಲ್ ಮುಂದುವರಿಸಿದ:

"ನಾನು ಹೊರ ಬಂದಾಗ ಮೊದಲು ಸಿಕ್ಕಿದವನು ಸಿಜೋವ್. ನನ್ನ ನೋಡಿ ದಾಗ ನಮಸ್ಕಾರ ಹೇಳೋಕೆ ಬೀದಿ ದಾಟಿ ಬಂದ. ಪೋಲೀಸರ ಕಣ್ಣು ಕಾವಲಿದೆ – ಈಗ ನಾನು ಅಪಾಯಕಾರಿ ಮನುಷ್ಯ, ಹುಷಾರಾಗಿರಪ್ಪ, ಅಂದೆ. 'ಇರಲಿ ಬಿಡೂಂತಂದ. ತನ್ನ ಅಳಿಯನ ವಿಷಯ ಅವನು ಪ್ರಶ್ನೆ ಮಾಡಿದ್ದನ್ನ ನೀನು ಕೇಳ್ಬೇಕಾ ಗಿತ್ತು! 'ಫ್ಯೋದೊರ್‌ನ ವರ್ತನೆ ಸರಿಯಾಗಿದೆಯಾ?' ಅಂತ ಕೇಳಿದ. 'ಜೈಲಲ್ಲಿ ವರ್ತನೆ ಹ್ಯಾಗೆ ಸರಿಯಾಗಿರುತ್ತೆ?' ಅಂದೆ. 'ಹಾಗಲ್ಲ ತನ್ನ ಸಂಗಾತಿಗಳ ವಿಷಯ ಕೆಟ್ಟದೇನೂ ಮಾತಾಡ್ತಿರ್ಲ್ಲಿಲ್ಲ ತಾನೆ?' ಎಂದ. ಫ್ಯೋದೊರ್ ಒಳ್ಳೆಯವನು, ಪ್ರಾಮಾಣಿಕ, ಚತುರ – ಅಂತ ನಾನು ಹೇಳಿದಾಗ, ಸಿಜೋವ್ ಗಡ್ಡ ತೀಡಿಕೊಂಡು ಹೆಮ್ಮೆಯಿಂದ, 'ಸಿಜೋವ್ ಮನೆತನದಲ್ಲಿ ಒಂದು ಜೊಳ್ಳೂ ಇಲ್ಲವಪ್ಪ' ಅಂದ."

ತಲೆದೂಗುತ್ತ ಅಂದ್ರೇಯ್ ಹೇಳಿದ:

"ಮುದುಕ ಬುದ್ಧಿವಂತ. ಅವನ ಜತೇಲಿ ತುಂಬಾ ಮಾತಾಡಿದೀನಿ. ಒಳ್ಳೆ ಯವನು.... ಫ್ಯೋದೊರನ್ನ ಬೇಗನೆ ಬಿಡ್ತಾರಾ?"

"ಎಲ್ಲರನ್ನೂ ಬಿಟ್ಟಿಡ್ತಾರೇಂತ ಕಾಣುತ್ತೆ. ಹಳಬ ಇಸಾಯ್ ಹೇಳೋ ದೂರು ಬಿಟ್ಟರೆ ನಮ್ಮವರ ವಿರುದ್ಧ ಬೇರೆ ಯಾವ ಸಾಕ್ಷ್ಯವೂ ಇಲ್ಲ. ಅವನ ದೂರಿಂದ ಆಗೋದೂ ಅಷ್ಟರಲ್ಲೇ ಇದೆ."

ತನ್ನ ಮಗನ ಮೇಲೆಯೇ ನೆಟ್ಟ ದೃಷ್ಟಿಯಿಟ್ಟು ತಾಯಿ ಅಡುಗೆ ಮನೆಯ ಒಳಕ್ಕೂ ಹೊರಕ್ಕೂ ಓಡಾಡಿದಳು. ಅಂದ್ರೇಯ್ ಬೆನ್ನ ಹಿಂದೆ ಕೈ ಕಟ್ಟಿಕೊಂಡು, ಪಾವೆಲ್ ಹೇಳುತ್ತಿದ್ದುದಕ್ಕೆ ಕಿವಿಗೊಡುತ್ತ, ಕಿಟಕಿಯ ಬಳಿ ನಿಂತುಕೊಂಡ. ಪಾವೆಲ್ ಅತ್ತಿತ್ತ ತುಳಿದಾಡಿದ. ಗಡ್ಡವನ್ನು ಬೆಳೆಯಲು ಬಿಟ್ಟಿದ್ದ. ಸೊಗಸಾಗಿದ್ದ ಕರಿಯ ಕೂದಲು ಉಂಗುರುಂಗುರವಾಗಿ ದಟ್ಟವಾಗಿ ಅವನ ಕೆನ್ನೆಗಳ ಮೇಲೆ ತುಂಬಿದ್ದು, ಕಣ್ಣಿಯ ಕಪ್ಪು ವರ್ಣದ ತೀಕ್ಷ್ಣತೆಯನ್ನು ಕಡಮೆಗೊಳಿಸಿತ್ತು.

ಊಟವನ್ನು ಹೊರತರುತ್ತ ತಾಯಿ, 'ಕೂತ್ಕೊಳ್ಳಿ' ಎಂದಳು.

ಉಣ್ಣುತ್ತಲಿದ್ದಾಗ ಅಂದ್ರೇಯ್, ರೀಬಿನ್ ವಿಚಾರವಾಗಿ ಪಾವೆಲ್‌ಗೆ ಹೇಳಿದ. ಅವನ ಮಾತು ಮುಗಿದಾಗ ಪಾವೆಲ್ ವಿಷಾದ ವ್ಯಕ್ತಮಾಡುತ್ತ, "ನಾನು ಮನೇ

ಲಿದ್ದಿದ್ದರೆ ಅವನನ್ನ ಹೋಗೋಕೆ ಬಿಡ್ತಿರ್ಲಿಲ್ಲ. ಏನು ಸಾಧಿಸೋಕೇಂತ ಅವನು ಹೋಗೋದು? ಏನಿದೆ ಅವನಲ್ಲಿ? – ಮಂಕುಬುದ್ಧಿ ಮತ್ತು ಉದ್ರೇಕ!" ಎಂದು ಉದ್ಗರಿಸಿದ.

ಅಂದ್ರೇಯ್ ನಗುತ್ತ ಹೇಳಿದ:

"ಹುಂ. ಒಬ್ಬನ ವಯಸ್ಸು ನಲ್ವತ್ತಾದಾಗ, ಹೆಚ್ಚಿನ ಸಮಯವನ್ನೆಲ್ಲಾ ಹೃದಯದಲ್ಲಿರೋ ಕರಡಿಗಳ ಜತೇಲಿ ಕುಸ್ತಿಯಾಡೋದರಲ್ಲೇ ಕಳೆದಾಗ, ಅವನನ್ನ ಸುಧಾರಿಸೋದು ಸುಲಭವಲ್ಲವಪ್ಪ."

ಹಾಗೆ, ಹೆಚ್ಚಿನ ಮಾತುಗಳು ತಾಯಿಗೆ ಅರ್ಥವಾಗದಿದ್ದಂಥ ಚರ್ಚೆಗಳಲ್ಲೊಂದು ಆರಂಭವಾಯಿತು. ಊಟ ಮುಗಿಯಿತು. ಆದರೆ ಅವರು ಒಬ್ಬರ ಮೇಲೊಬ್ಬರು ದೊಡ್ಡ ದೊಡ್ಡ ಮಾತುಗಳನ್ನು ಎಸೆಯುತ್ತಲೇ ಇದ್ದರು. ನಡುವೆ ಒಮ್ಮೊಮ್ಮೆ ಸರಳವಾಗಿಯೂ ಮಾತಾಡುತ್ತಿದ್ದರು.

"ಒಂದು ಹೆಜ್ಜೆಯೂ ಹಿಂದಿಡದೆ ನಾವು ಮುಂದಕ್ಕೆ ಹೋಗಲೇಬೇಕು," ಎಂದು ಪಾವೆಲ್ ದೃಢವಾಗಿ ಹೇಳಿದ.

"ಹಾಗೆ ಮುಂದಕ್ಕೆ ಹೋಗಿ, ನಮ್ಮನ್ನು ವೈರಿಗಳೂಂತ ತಪ್ಪು ತಿಳಿಯೋ ಲಕ್ಷಾವಧಿ ಜನಕ್ಕೆ ಢಿಕ್ಕಿ ಹೊಡೀಬೇಕು – ಅಲ್ಲ?"

ರೈತರು ಪ್ರಯೋಜನವಿಲ್ಲವೆಂಬುದು ಪಾವೆಲ್‌ನ ಅಭಿಪ್ರಾಯವೆಂತಲೂ ನ್ಯಾಯವಾದ್ದನ್ನ ರೈತರಿಗೂ ತೋರಿಸಿಕೊಡಲೇ ಬೇಕೆನ್ನುವುದು ಲಂದ್ರೇಯ್‌ಯ ಅಭಿಪ್ರಾಯವೆಂತಲೂ ಅವರ ವಿವಾದಕ್ಕೆ ಕಿವಿಗೊಡುತ್ತಿದ್ದ ತಾಯಿ ತಿಳಿದುಕೊಂಡಳು. ಅಂದ್ರೇಯ್‌ನ ವಿಚಾರ ಅವಳಿಗೆ ಹೆಚ್ಚು ಅರ್ಥವಾಗುತ್ತಿತ್ತು. ಅವನ ಮಾತು ಸತ್ಯಕ್ಕೇ ಹೆಚ್ಚು ಸಮೀಪವಿದ್ದ ಹಾಗೆ ತೋರುತ್ತಿತ್ತು. ಆದರೆ ಆತ ಪಾವೆಲ್‌ಗೆ ಏನಾದರೂ ಹೇಳಿದಾಗಲೆಲ್ಲ ಆಕೆ ಕಾತರಳಾಗಿ, ಜಾಗೃತಳಾಗಿ, ಉಸಿರು ಬಿಡದೆ, ಮಗನ ಉತ್ತರದ ಹಾದಿ ನೋಡುತ್ತಿದ್ದಳು. ಅಂದ್ರೇಯ್ ಮಗನ ಮನಸ್ಸನ್ನು ನೋಯಿಸಿಲ್ಲ ಎನ್ನುವುದಷ್ಟೇ ಆಕೆಗೆ ತಿಳಿಯಬೇಕಾಗಿದ್ದ ವಿಷಯ. ಆದರೆ ಅವರು ಒಬ್ಬರನ್ನೊಬ್ಬರು ನೋಯಿಸದೆಯೇ, ಏರು ಸ್ವರದಲ್ಲಿ ಮಾತಿನ ಜಗಳವನ್ನು ನಡೆಸಿಯೇ ಇದ್ದರು.

ಕೆಲವೊಮ್ಮೆ ತಾಯಿ ಮಗನನ್ನು ಕೇಳುತ್ತಿದ್ದಳು:

"ನೀನು ಹೇಳೋದು ನಿಜವೆ, ಪಾಷ?"

"ಹೌದು, ನಿಜ" ಎಂದು, ಮುಗುಳ್ನಕ್ಕು ಪಾವೆಲ್ ಉತ್ತರವೀಯುತ್ತಿದ್ದ.

ಮೈತ್ರಿಯ ಅಣಕದಿಂದ ಅಂದ್ರೇಯ್ ಹೇಳುತ್ತಿದ್ದ:

"ಓ ಮಹಾಶಯ! ಭರ್ಜರಿ ಊಟ ಮಾಡಿದ್ದೀಯೆ. ಆದರೆ ಆಹಾರಾನ ಸರಿಯಾಗಿ ಜಗಿದೇ ಇಲ್ಲ! ನಿನ್ನ ಗಂಟಲಲ್ಲೇನೋ ಸಿಕ್ಕಿಕೊಂಡಿದೆ. ಒಂದು ಗುಟುಕು ಏನಾದರೂ ಇಳಿಬಿಡು!"

"ಸಾಕು ಹುಚ್ಚುಚ್ಚಾಟ," ಎನ್ನುತ್ತಿದ್ದ ಪಾವೆಲ್.

"ಶ್ರಾದ್ಧದ ಊಟ ಹೊಡೆದ ಹಾಗೆ ಖುಷಿಯೇನೋ !"

ಇದನ್ನೆಲ್ಲ ಕೇಳಿ ತಾಯಿ ಮೆಲ್ಲನೆ ನಕ್ಕು, ತಲೆಯಲುಗಿಸುತ್ತಿದ್ದಳು.

೨೩

ವಸಂತ ಋತು ಬಂತು. ಹಿಮ ಕರಗಿತು. ಕೆಳಗಿದ್ದ ಕೆಸರೂ ಕೊಳೆಯೂ ಹೊರಗೆ ಕಂಡುಬಂದುವು. ದಿನಕಳೆದಂತೆ ಕೆಸರು ಹೆಚ್ಚು ಹೆಚ್ಚಾಗಿ ಕಾಣಿಸಿಕೊಂಡಿತು. ಆ ವಸತಿ ಪ್ರದೇಶ, ಕೊಳಕಾಗಿ, ಮೈ ತೊಳೆಯದೆ, ಹರಕು ಚಿಂದಿಯುಟ್ಟ ಹಾಗೆ ತೋರಿತು. ಹಗಲು ಹೊತ್ತು ಹಿಮಕರಗಿ ಮಾಡಿನಿಂದ ನೀರು ತೊಟ್ಟಿಕ್ಕಿತು. ಮನೆಗಳ ಬೂದು ಗೋಡೆಗಳಿಂದ ಬೆವರಿನ ಹಾಗೆ ಆವಿ ಎದ್ದಿತು. ಆದರೆ ರಾತ್ರಿ ಹೊತ್ತು ಮಂಜುಗಡ್ಡೆಯ ತುಣುಕುಗಳು ಬೆಳ್ಳಗೆ ಹೊಳೆಯುತ್ತಿದ್ದುವು. ಸೂರ್ಯಬಿಂಬ ಹೆಚ್ಚು ಹೆಚ್ಚಾಗಿ ಮುಖ ತೋರಿಸಿತು. ಜವುಗು ಪ್ರದೇಶಕ್ಕೆ ಹರಿದು ಬರುತ್ತಿದ್ದ ನೀರಿನ ತೊರೆಗಳ ಸಪ್ಪಳ ಕೇಳಿಸಿತು.

ಮೇ ದಿನವನ್ನು ಆಚರಿಸಲು ಸಿದ್ಧತೆ ಶುರುವಾಯಿತು.

ಈ ಹಬ್ಬ ದಿನದ ಮಹತ್ವವನ್ನು ವಿವರಿಸುವ ಕರಪತ್ರಗಳು ಕಾರಖಾನೆಯಲ್ಲೂ ವಸತಿ ಪ್ರದೇಶದಲ್ಲೂ ಹಂಚಲ್ಪಟ್ಟುವು. ಪ್ರಚಾರದಿಂದ ಅದುವರೆಗೂ ಎಚ್ಚರ ಗೊಳ್ಳದೇ ಇದ್ದ ಯುವಕರೂ ಕೂಡಾ ಕರಪತ್ರಗಳನ್ನೋದುತ್ತ, "ನಾವೂ ಏನಾದರೂ ಮಾಡಬೇಕು," ಎಂದರು.

ವೆಸೊವ್‌ಶ್ಚಿಕೋವ್ ತುಟಿ ಕಚ್ಚಿ ಮುಗುಳ್ನಗುತ್ತ, "ಕಣ್ಣುಮುಚ್ಚಾಲೆ ಸಾಕಿನ್ನು ! ಈಗಲಾದರೂ ತೋರಿಸಬೇಕು ಒಂದು ಕೈ !" ಎಂದ.

ಫ್ಯೋದೊರ್ ಮಾಜಿನ್ ಬಲು ಉತ್ಸಾಹಿತನಾಗಿದ್ದ. ಪಂಜರದಲ್ಲಿಟ್ಟ ಮೈನಾ ಹಕ್ಕಿಯನ್ನು ಹೋಲುತ್ತಿದ್ದನಾತ. ಅಷ್ಟು ತೆಳ್ಳಗಾಗಿದ್ದ; ಮಾತು – ಚಲನೆಯೆಲ್ಲ ಕಂಪನದಿಂದ ಕೂಡಿದ್ದುವು. ಅವನ ಜೊತೆಯಲ್ಲಿ ಯಾವಾಗಲೂ ಮೌನದ ಯಾಕೊವ್ ಸೋಮೊವ್ ಇರುತ್ತಿದ್ದ. ತನ್ನ ವಯಸ್ಸಿಗಿಂತಲೂ ಹೆಚ್ಚು ಗಂಭೀರವಾದ ಮುಖ ಮುದ್ರೆಯಿತ್ತು ಆತನಿಗೆ. ಈಗ ಅವನು ಶಹರದಲ್ಲಿ ಉದ್ಯೋಗದಲ್ಲಿದ್ದ. ಸಮೋಯ್ ಲೊವ್‌ನ ಕೂದಲು ಜೈಲುವಾಸದ ಅವಧಿಯಲ್ಲಿ ಮತ್ತಷ್ಟು ಕೆಂಪಗಾಗಿತ್ತು. ಆತ, ವಸೀಲಿಯ್ ಗೂಸೆವ್, ಬೂಕಿನ್, ದ್ರಗೂನೊವ್ ಮತ್ತು ಬೇರೆ ಕೆಲವರು, ಮೇ ದಿನದಂದು ಸಶಸ್ತ್ರ ಪ್ರದರ್ಶನವನ್ನೇ ನಡೆಸಬೇಕೆಂದು ಆಗ್ರಹ ತೊಟ್ಟರು. ಆದರೆ ಪಾವೆಲ್, ಹೊಹೋಲ್, ಸೋಮೊವ್ ಮತ್ತು ಬೇರೆ ಕೆಲವರು ಅದಕ್ಕೊಪ್ಪಲಿಲ್ಲ.

ಎಂದಿನಂತೆಯೇ ಬಳಲಿ, ಬೆವರುತ್ತ, ಉಸಿರಿಗಾಗಿ ಏದುತ್ತಾ ಇದ್ದ ಯೆಗೋರ್ ಅವರ ವಿವಾದವನ್ನೆಲ್ಲ 'ಫೂ' ಎಂದು ನಗೆಗೀಡು ಮಾಡಿದ.

"ಸಂಗಾತಿಗಳೇ, ಈಗಿರುವ ಸಮಾಜ ವ್ಯವಸ್ಥೇನ ಬದಲಾಯಿಸೋಕೆ ನಾವು ಪಡುತ್ತಿರೋ ಶ್ರಮ ನಿಜಕ್ಕೂ ದಿವ್ಯವಾದದ್ದೇ. ಆದರೆ ಆ ಶ್ರಮ ಸಾರ್ಥಕವಾಗೋದಕ್ಕೆ ನಾನೊಂದು ಜತೆ ಹೊಸ ಬೂಟ್ಸ್ ಕೊಳ್ಳಲೇಬೇಕು" ಎಂದು ಆತ ತನ್ನ ಒದ್ದೆಯಾದ ಹರಿದುಹೋದ ಪಾದರಕ್ಷೆಗಳನ್ನು ತೋರಿಸುತ್ತ ಹೇಳಿದ. "ಇವು ನೋಡಿ, ದುರಸ್ತಿಗೆ ಒಪ್ಪದೇ ಇರೋ ಸ್ಥಿತಿಗೆ ಬಂದಿವೆ. ಇದರಿಂದಾಗಿ ದಿನಾ ನನ್ನ ಪಾದಗಳು ಒದ್ದೆಯಾಗ್ತಿವೆ. ಹಳೆ ಪದ್ಧತಿಯ ಬಗ್ಗೆ ಬಹಿರಂಗವಾಗಿ ಖಡಾಖಂಡಿತವಾಗಿ ಧಿಕ್ಕಾರ ಸಾರೋಕೆ ಮುಂಚೆ ನೆಲದ ಬಿಲ ಸೇರೋದು ನನಗಿಷ್ಟವಿಲ್ಲ. ಆದ್ದರಿಂದ ಸಶಸ್ತ್ರ ಪ್ರದರ್ಶನ ನಡೆಸಬೇಕು ಅನ್ನೋ ಸಂಗಾತಿ ಸಮೋಯ್‌ಲೊವ್ ಸಲಹೇನ ನಾನು ತಿರಸ್ಕರಿಸ್ತೀನಿ. ಅದರ ಬದಲು ನನಗೊಂದು ಜತೆ ಹೊಸ ಬೂಟು ಒದಗಿಸ್ಬೇಕು ಅನ್ನೋ ಸಲಹೇನ ಮುಂದಿಡ್ತೀನಿ. ಯಾಕೆಂದರೆ, ಹಾಗೆ ಮಾಡೋದರಿಂದ, ಬಹಿರಂಗವಾದ ಬಿಟ್ಟೇ ಕುಸ್ತಿ ಗುದ್ದಾಟಕ್ಕಿಂತಲೂ ಬೇಗ ಸಮಾಜವಾದದ ಯಶಸ್ಸು ಸಾಧ್ಯವಾದೀತು !"

ಬೇರೆ ದೇಶಗಳಲ್ಲಿ ಜನರು ತಮ್ಮ ಜೀವನವನ್ನು ಸುಲಭಗೊಳಿಸಲು ಹೇಗೆ ಹೋರಾಡುತ್ತಿರುವರೆಂಬುದನ್ನೆ ಅದೇ ಶೃಂಗಾರದ ಭಾಷೆಯಲ್ಲಿ ಯೆಗೋರ್ ಕೂಲಿಕಾರರಿಗೆ ತಿಳಿಸಿ ಹೇಳಿದ. ಅವನ ಮಾತಿಗೆ ಕಿವಿಗೊಡುವುದೆಂದರೆ ತಾಯಿಗೆಷ್ಟೋ ಆಸೆ. ಅವನ ಮಾತುಗಳು ಆಕೆಯಲ್ಲಿ ಒಂದು ವಿಚಿತ್ರ ಭಾವನೆಯನ್ನು ಮೂಡಿಸುತ್ತಿದ್ದುವು. ವಿಷ ಮನಸ್ಸಿನ ದುರಾಸೆಯ ಕಪಟಿಗಳಾದ ಕ್ರೂರಿಗಳಾದ ಬೊಜ್ಜು ಬೆಳೆದ ಸಣ್ಣ ಕೆಂಪು ಮುಖದ ಕೆಲ ಮನುಷ್ಯರಿದ್ದಾರೆ. ಅವರೇ ಜನರ ಅತ್ಯಂತ ದುಷ್ಟರಾದ ವೈರಿಗಳು, ಜನರನ್ನು ಅತಿ ಹೆಚ್ಚು ಮೋಸಗೊಳಿಸುವವರು, ಅತ್ಯಂತ ಕ್ರೂರಿಗಳಾದವರು, ಎಂಬ ಭಾವನೆ ತಾಯಿಯಲ್ಲಿ ಉಂಟಾಗುತ್ತಿತ್ತು. ದೇಶದ ಅರಸನಿಂದ ತಮಗೆ ತೊಂದರೆಯಾದಾಗ ಈ ಸಣ್ಣ ವ್ಯಕ್ತಿಗಳು ಅವನ ವಿರುದ್ಧ ಜನತೆಯನ್ನು ಎತ್ತಿಕಟ್ಟುತ್ತಿದ್ದರು. ಜನತೆ ಅರಸನನ್ನು ಪದಚ್ಯುತಿಗೊಳಿಸಿದಾಗ ಆ ಸಣ್ಣ ವ್ಯಕ್ತಿಗಳು ಬಲು ಸೂಕ್ಷ್ಮ ಮೋಸದಿಂದ ಜನರನ್ನೋಡಿಸಿ ತಾವೇ ಅಧಿಕಾರವನ್ನು ಕಿತ್ತುಕೊಳ್ಳುತ್ತಿದ್ದರು. ಜನರು ಪ್ರತಿಭಟಿಸಿದರೆ, ನೂರು ಗಟ್ಟಲೆಯಲ್ಲಿ, ಸಾವಿರ ಗಟ್ಟಲೆಯಲ್ಲಿ ಅವರನ್ನು ಕೊಂದು ಅಧಿಕಾರವನ್ನು ವಶಪಡಿಸಿಕೊಳ್ಳುತ್ತಿದ್ದರು, ಎಂದು ತಾಯಿ ಅವನ ಮಾತುಗಳಿಂದ ಅರಿತಿದ್ದಳು.

ಯೆಗೋರ್‌ನ ಭಾಷಣಗಳನ್ನು ಕೇಳಿ. ತಾನು ಕಲ್ಪಿಸಿಕೊಂಡಿದ್ದ ಆ ಚಿತ್ರವನ್ನು ಒಂದು ದಿನ ತಾಯಿ, ಧೈರ್ಯ ತಂದುಕೊಂಡು, ಆತನಿಗೆ ವರ್ಣಿಸಿ ಹೇಳಿದಳು.

"ಸ್ಥಿತಿ ಹೀಗಿದೆಯಾ, ಯೆಗೋರ್ ಇವಾನೊವಿಚ್?" ಎಂದು ಪರೀಕ್ಷೆ ಕಟ್ಟಿದ ವಿದ್ಯಾರ್ಥಿಯಂತೆ ಮುಗುಳ್ನಗುತ್ತ ತಾಯಿ ಕೇಳಿದಳು.

ಕಣ್ಣಾಲಿಗಳನ್ನು ಹೊರಳಿಸುತ್ತ, ಉಸಿರಿಗಾಗಿ ಏದಿದಂತೆ ಎದೆಯುಜ್ಜಿಕೊಳ್ಳುತ್ತ, ಆತ ಬಿದ್ದು ಬಿದ್ದು ನಕ್ಕ.

"ಅದು ಇರೋದೇ ಹಾಗೆ, ತಾಯಿ! ಅಂತೂ ಇತಿಹಾಸಾನ ನುಂಗಿ ನೀರು ಕುಡಿದಿರಿ ನೀವು! ಏನೋ ಸ್ವಲ್ಪ ವರ್ಣನೆ–ಶೃಂಗಾರ ಹೆಚ್ಚು ಕಮ್ಮಿ. ಆದರೆ, ವಿಷಯ ನಿರೂಪಣೆ ಸರಿಯಾಗಿಯೇ ಇದೆ. ಈ ಬೊಜ್ಜು ಬೆಳೆದ ಸಣ್ಣ ಮನುಷ್ಯರೇ ಅತಿ ದೊಡ್ಡ ಪಾಪಿಗಳು, ಜನರ ರಕ್ತ ಹೀರುತ್ತಿರೋ ಅತಿ ಕ್ಷುದ್ರ ವಿಷಜಂತುಗಳು! ಬಂಡವಾಳಗಾರರೂಂತ ಅವರನ್ನ ಕರೆಯೋದು ಅದಕ್ಕೇನೇ–ಒಳ್ಳೇ ಭಂಡರು., ತಮಗಿಂತ ತಿಳಿವಳಿಕೆ ಕಮ್ಮಿ ಇರೋವರ ಮುಖಕ್ಕೆ ಮುಷ್ಟಿಯಿಂದ ಗುದ್ದಿ, ರಕ್ತ ಹೀರುವ ಜಾತಿ...."

"ಯಾರು, ಶ್ರೀಮಂತರೆ?" ಎಂದು ತಾಯಿ ಕೇಳಿದಳು.

"ಹೌದಮ್ಮ, ಅದು ಅವರ ದೌರ್ಭಾಗ್ಯ. ಮಗುವಿನ ಆಹಾರದಲ್ಲಿ ತಾಮ್ರ ಸೇರಿಸ್ತಾ ಹೋದರೆ ಅದರ ಎಲುಬಿನ ಬೆಳವಣಿಗೆ ಕುಂಟುತ್ತೆ; ಬೆಳೆದಾಗ ಅವನು ಮೂರಡಿ ಗಾತ್ರದ ಕುಳ್ಳನಾಗ್ತಾನೆ. ಆದರೆ ಒಬ್ಬ ಮನುಷ್ಯನಿಗೆ ಚಿನ್ನದ ಹುಚ್ಚ ತ್ತಿದ್ದರೆ, ಅವನ ಆತ್ಮ ಕಿರಿದಾಗಿ, ಮುಪ್ಪಾಗಿ ನಿರ್ಜೀವವಾಗ್ತದೆ. ಮಕ್ಕಳು ಐದು ಕೊಪೆಕ್ ಕೊಟ್ಟು ಕೊಳ್ಳೋ ರಬ್ಬರ್ ಚೆಂಡಿಲ್ವಾ, ಹಾಗಾಗ್ತದೆ."

....ಒಂದು ದಿನ, ಯೆಗೋರ್‌ನ ವಿಷಯವಾಗಿ ಮನೆಯಲ್ಲಿ ಮಾತು ಬಂದಾಗ, ಪಾವೆಲ್ ಹೇಳಿದ:

"ನಿಜಸಂಗತಿ ಏನು ಗೊತ್ತೆ, ಅಂದ್ರೇಯ್? ಅತಿ ಹೆಚ್ಚು ನಗ್ತಾ ನಗಿಸ್ತಾ ಯಾರಿರ್ತಾರೋ ಸಾಮಾನ್ಯವಾಗಿ ಅಂಥವರ ಹೃದಯದಲ್ಲೇ ಹೆಚ್ಚು ನೋವಿರೋದು."

ಉತ್ತರಿಸುವುದಕ್ಕೆ ಮುಂಚೆ ಸ್ವಲ್ಪ ತಡೆದು ಅಂದ್ರೇಯ್ ಕಣ್ಣನ್ನು ಕಿರಿದು ಗೊಳಿಸಿದ.

"ನೀನು ಹೇಳೋದು ನಿಜವೆಂದಾದರೆ ಇಡೀ ರಷ್ಯವೇ ನಕ್ಕು ನಕ್ಕು ಸತ್ತು ಹೋಗಬೇಕೆಂದಾಯ್ತು."

....ನತಾಷ ಬಂದಳು. ಬೇರೊಂದು ನಗರದಲ್ಲಿ ಆಕೆಯೂ ಜೈಲಿನಲ್ಲಿದ್ದು ಬಂದಿದ್ದಳು. ಆ ಅನುಭವದಿಂದ ಯಾವ ಬದಲಾವಣೆಯೂ ಅವಳಲ್ಲಿ ಆದ ಹಾಗಿರ ಲಿಲ್ಲ. ಅವಳೆದುರಲ್ಲಿ ಹೊಹೋಲ್ ಹೆಚ್ಚು ಚಟುವಟಿಕೆ ತೋರಿಸುತ್ತಿದ್ದುದನ್ನು ತಾಯಿ ಕಂಡುಕೊಂಡಳು. ಆತ ನಗೆಮಾತುಗಳನ್ನಾಡಿ ಎಲ್ಲರನ್ನೂ ತಮಾಷೆಗೆ ಗುರಿ ಪಡಿಸುತ್ತಿದ್ದ. ಪರಿಣಾಮವಾಗಿ ಆಕೆ ಮುಖವರಳಿಸಿ ನಗುವಂತೆ ಮಾಡುತ್ತಿದ್ದ..... ಆದರೆ ಅವಳು ಹೊರಟು ಹೋದ ಮೇಲೆ ತನ್ನ ಮೆಚ್ಚುಗೆಯ ಶೋಕ ಗೀತವನ್ನು ಸಿಳ್ಳು ಹಾಕುತ್ತ, ಬಳಲಿಕೆಯಿಂದ ಪಾದಗಳನ್ನು ಸೆಳೆಯುತ್ತ, ಕೊಠಡಿಯಲ್ಲಿ ಅತ್ತಿಂದಿತ್ತ ಅವನು ನಡೆದಾಡಿದ.

ಸಾಷ ಆಗಾಗ್ಗೆ ಬಂದು, ಒಂದು ಕ್ಷಣವಿದ್ದು, ಹೊರಟು ಹೋಗುತ್ತಿದ್ದಳು. ಯಾವಾಗಲೂ ಹುಬ್ಬು ಗಂಟಿಕ್ಕಿಕೊಂಡು ಅವಸರದಲ್ಲೇ ಇರುತ್ತಿದ್ದಳು. ಯಾಕೋ ಏನೋ, ಹೆಚ್ಚು ವಿಚಿತ್ರಳೂ ನಿಷ್ಠುರಳೂ ಆಗಿದ್ದಳು.

ಅವಳನ್ನು ಕಳುಹಿಸಿಕೊಡುವುದಕ್ಕೆಂದು ಒಮ್ಮೆ ಪಾವೆಲ್ ಅಂಗಳಕ್ಕಿಳಿದ. ಬಾಗಿಲೆಳೆದುಕೊಳ್ಳಲು ಮರೆತುದರಿಂದ, ಅವರ ಅವಸರದ ಸಂಭಾಷಣೆ ತಾಯಿಗೆ ಕೇಳಿಸಿತು:

"ಬಾವುಟ ನೀವು ಹೊರುತ್ತೀರಾ?" ಎಂದು ಹುಡುಗಿ ಕೇಳಿದಳು.

"ಹೌದು."

"ತೀರ್ಮಾನವಾಗಿದೆಯೆ?"

"ಹೌದು. ಅದು ನನ್ನ ಹಕ್ಕು."

"ಪುನಃ ಜೈಲಿಗೆ, ಹಾಗಾದರೆ?"

ಪಾವೆಲ್ ಉತ್ತರವೀಯಲಿಲ್ಲ.

"ನೀವು ಹೋ.... ಗದೆ" ಎಂದು ಆರಂಭಿಸಿ ಆಕೆ ಸುಮ್ಮನಾದಳು.

"ಏನು?"

"ಬೇರೆ ಯಾರಾದರೂ ಹಿಡೀಬಾರದೆ?"

"ಇಲ್ಲ," ಎಂದು ಅವನು ದೃಢವಾಗಿ ಹೇಳಿದ.

"ಪುನಃ ಯೋಚಿಸಿ ನೋಡಿ. ಇಷ್ಟೊಂದು ಪ್ರಭಾವ ಇದೆ ನಿಮಗೆ. ಎಲ್ಲರೂ ನಿಮ್ಮನ್ನ ಪ್ರೀತಿಸ್ತಾರೆ.... ನೀವು ಮತ್ತು ಅಂದ್ರೇಯ್‌ಯೇ ಅತಿ ಹೆಚ್ಚು ಜನಪ್ರಿಯರು. ಇಲ್ಲೇ ಇದ್ದು ನೀವು ಎಷ್ಟೊಂದು ಒಳ್ಳೇ ಕೆಲಸ ಮಾಡಬಹುದೂಂತ ಯೋಚಿಸಿ! ಆದರೆ ಬಾವುಟ ಹೊತ್ತೆ ಅಂದರೆ ನಿಮ್ಮನ್ನು ದೂರ ಕಳಿಸ್ತಾರೆ – ಬಹಳ ದೂರ ಎಷ್ಟೋ ವರ್ಷಗಳವರೆಗೆ ಗಡೀಪಾರು ಮಾಡ್ತಾರೆ!"

ಹುಡುಗಿಯ ಸ್ವರದಲ್ಲಿ ಭೀತಿ ಆಸೆಯ ಪರಿಚಿತವಾದ ಭಾವನೆಗಳನ್ನು ತಾಯಿ ಗುರುತಿಸಿಕೊಂಡಳು. ಸಾಷಳ ಮಾತುಗಳು ತಾಯಿಯ ಹೃದಯದ ಮೇಲೆ ಮಂಜು ನೀರಿನ ಹನಿಗಳಂತೆ ಬಿದ್ದುವು.

"ಇಲ್ಲ, ನಾನು ತೀರ್ಮಾನ ಮಾಡಿದೀನಿ. ಯಾವ ಕಾರಣದಿಂದಲೂ ಆ ತೀರ್ಮಾನ ಬದಲಾಯಿಸೋದಿಲ್ಲ," ಎಂದ ಪಾವೆಲ್.

"ನಾನು ಕೇಳಿದರೂ?"

"ನೀವು ಹಾಗೆ ಮಾತಾಡಬಾರದು. ಸಾಧ್ಯವಿಲ್ಲ. ಹಾಗೆ ಕೇಳಬಾರದು ನೀವು."

"ನಾನು ಮನುಷ್ಯಜೀವಿ," ಎಂದಾಕೆ ಮೃದುವಾಗಿ ಹೇಳಿದಳು.

"ಒಳ್ಳೇ ಅದ್ಭುತ ಮನುಷ್ಯಜೀವಿ," ಎಂದು ಅವನೂ ಅಷ್ಟೇ ಮೃದುವಾಗಿ ಹೇಳಿದ. ಆದರೆ ಸ್ವರ ಗಂಟಲಲ್ಲೇ ಸಿಲುಕಿಕೊಂಡ ಹಾಗೆ ಕೇಳಿಸುತ್ತಿತ್ತು. "ಸಾಷ, ನೀವು ನನಗೆ ತೀರಾ ಪ್ರಿಯಳಾದ ವ್ಯಕ್ತಿ. ಆದ್ದರಿಂದಲೇ – ಆದ್ದರಿಂದಲೇ – ನೀವು ಅಂಥ ಮಾತಾಡಬಾರದು."

"ಬರ್ತೀನಿ ಇನ್ನು" ಎಂದಳು ಹುಡುಗಿ.

ಆ ಹಿಮ್ಮಡಿಯ ಸಪ್ಪಳವನ್ನು ಕೇಳಿದಾಗ, ಆಕೆ ಓಡುತ್ತ ಹೋಗಿರಬೇಕೆಂದು ತಾಯಿ ಊಹಿಸಿಕೊಂಡಳು. ಪಾವೆಲ್‌ನೂ ಆಕೆಯ ಹಿಂದೆಯೇ ಸ್ವಲ್ಪ ದೂರ ಹೋದ.

ತಾಯಿಯ ಹೃದಯ ಭೀತಿಯಿಂದ ಮುದುಡಿಕೊಂಡಿತು. ಅವರು ಯಾವ ವಿಷಯ ಮಾತಾಡಿದರೆಂಬುದು ತಾಯಿಗೆ ಅರ್ಥವಾಗಲಿಲ್ಲ. ಆದರೂ ಯಾವುದೋ ದೊಡ್ಡ ದೌರ್ಭಾಗ್ಯ ತನಗಾಗಿ ಕಾದಿದೆಯೆಂದು ಅವಳು ಊಹಿಸಿಕೊಂಡಳು.

"ಇವನು ಏನು ಮಾಡಬೇಕೆಂದಿದ್ದಾನೆ?" ಎಂದು ತಾಯಿ ತನ್ನಷ್ಟಕ್ಕೆ ಕೇಳಿ ಕೊಂಡಳು.

ಪಾವೆಲ್ ಅಂದ್ರೇಯ್‌ಯೊಡನೆ ಒಳಬಂದ.

"ಓ್ಹ ಆ ಇಸಾಯ್ – ಇಸಾಯ್ ! ಏನು ಮಾಡೋಣ ಅವನನ್ನು ?" ಎಂದು ತಲೆಯಲುಗಿಸುತ್ತ ಹೊಹೋಲ್ ಹೇಳಿದ.

"ಆ ನಡತೆ ಬಿಟ್ಬಿಡೂಂತ ಅವನಿಗೆ ಎಚ್ಚರಿಸೋದು ವಾಸಿ," ಎಂದು ಪಾವೆಲ್ ಹುಬ್ಬುಗಂಟಿಕ್ಕಿ ಉತ್ತರವಿತ್ತ.

ತಾಯಿ ತಲೆ ಬಗ್ಗಿಸಿ, "ಪಾವೆಲ್, ಏನ್ಮಾಡ್ಬೇಕೂಂತ ಯೋಜನೆ ಹಾಕ್ಕೊಂಡಿ ದೀಯಾ?" ಎಂದು ಕೇಳಿದಳು.

"ಎಲ್ಲಿ? ಈಗಲೆ?"

"ಮೊದಲನೆ ತಾರೀಖು – ಮೇ ಮೊದಲನೆ ದಿವಸ."

"ಓ್ಹ?" ಎಂದು ಪಾವೆಲ್ ಸ್ವರ ತಗ್ಗಿಸಿ ಉದ್ಗಾರವೆತ್ತಿದ. "ನಮ್ಮ ಬಾವುಟಾನ ನಾನು ಹೊರ್‍ತೀನಿ – ಮೆರವಣಿಗೆಯ ಮುಂದುಗಡೆ. ಅದಕ್ಕಾಗಿ ಅವರು ನನ್ನನ್ನ ಪುನಃ ಜೈಲಿಗೆ ಕಳಿಸ್ಬಹುದೂಂತ ಕಾಣುತ್ತೆ."

ತಾಯಿಯ ಕಣ್ಣುಗಳು ತುಂಬಿ ಬಂದುವು; ಬಾಯಿಯೊಣಗಿತು. ಪಾವೆಲ್ ತಾಯಿಯ ಕೈಯನ್ನೆತ್ತಿಕೊಂಡು ಅದನ್ನು ತಡವಿದ.

"ಬೇರೆ ಹಾದಿಯೇ ಇಲ್ಲ. ತಿಳಕೊಳ್ಳೋಕೆ ಪ್ರಯತ್ನಿಸಮ್ಮ."

"ನಾನೇನೂ ಹೇಳಲಿಲ್ಲವಲ್ಲ" ಎಂದು ಅವಳು ಮೆಲ್ಲನೆ ತಲೆಯೆತ್ತಿ ಉತ್ತರಿಸಿ ದಳು. ಆದರೆ ಅವನ ಕಣ್ಣುಗಳ ಗರ್ವದ ಬೆಳಕನ್ನು ಕಂಡಾಗ ಆಕೆ ಚಡಪಡಿಸಿದಳು.

ಆತ ನಿಟ್ಟುಸಿರಿಟ್ಟು ಆಕೆಯ ಕೈಯನ್ನು ಇಳಿಬಿಟ್ಟ.

ಟೀಕಿಸುವ ಧ್ವನಿಯಲ್ಲಿ ಅವನು ಹೇಳಿದ:

"ಇದರಿಂದ ಬೇಸರದ ಬದಲು ಸಂತೋಷವಾಗ್ಬೇಕು ನಿನಗೆ. ಮುಗುಳ್ನಗುತ್ತ ಮಕ್ಕಳನ್ನು ಸಾವಿಗೆ ಕಳಿಸುವ ತಾಯಂದಿರು ಯಾವತ್ತು ದೊರೆತಾರು ನಮಗೆ?"

"ಹೊಹ್ಹೋ ! ಮಾತಾಡ್ತಿದ್ದಾನೆ ದೊಡ್ಡ ಮನುಷ್ಯ !" ಎಂದನು ಹೊಹೋಲ್.

"ನಾನೇನೂ ಹೇಳಲಿಲ್ಲವಲ್ಲ," ಎಂದಳು ತಾಯಿ ಮತ್ತೊಮ್ಮೆ. "ನಾನೇನೂ ಅಡ್ಡಿಯಾಗೋದಿಲ್ಲ.... ಆದರೂ ಸಹಿಸೋದು ಕಷ್ಟದ ಕೆಲಸ.... ತಾಯಿ ಅನ್ನೋ ದನ್ನ ಹ್ಯಾಗೆ ಮರೀಲಿ?"

ಪಾವೆಲ್ ತಾಯಿಯಿಂದ ದೂರ ಸರಿದ.

"ಇಷ್ಟವಿರೋಧಕ್ಕಿಂತಲೂ ಬೇರೆಯಾಗಿಯೇ ಜೀವಿಸೋ ಹಾಗೆ ಮಾಡುವ ಒಂದು ಪ್ರೇಮವಿದೆ" – ಎಂದ ಆತ.

ಆ ಮಾತುಗಳು ತನ್ನನ್ನು ಕಟುಕಿದ ಹಾಗೆ ತಾಯಿಗೆ ಭಾಸವಾಯಿತು.

ಆಕೆ ನಡುಗಿದಳು. ಮನನೋಯುವ ಇನ್ನೇನಾದರೂ ಮಾತನ್ನು ಆತ ಹೇಳ ಬಹುದೆಂಬ ಭೀತಿಯಿಂದ ತಾಯಿಯೆಂದಳು: "ಬೇಡವಪ್ಪ ಪಾಷ, ನನಗೆ ಅರ್ಥ ವಾಗ್ತದೆ. ನೀನು ಬೇರೇನನ್ನೂ ಮಾಡೋದು ಸಾಧ್ಯವಿಲ್ಲ.... ನಿನ್ನ ಸಂಗಾತಿಗಳಿಗೋ ಸ್ಕರ...."

"ಅಲ್ಲ, ನನ್ನ ಸ್ವಂತಕ್ಕೋಸ್ಕರವೇ !" ಎಂದು ಪಾವೆಲ್ ಉತ್ತರಿಸಿದ.

ಅಂದ್ರೇಯ್ ಬಾಗಿಲ ಬಳಿ ಕಾಣಿಸಿಕೊಂಡ. ಅದು ತೀರ ತಗ್ಗಾದ ಬಾಗಿಲು. ಮೊಣಕಾಲುಗಳನ್ನು ವಿಚಿತ್ರವಾದ ರೀತಿಯಲ್ಲಿ ಬಾಗಿಸಿ, ಒಂದು ಭುಜವನ್ನು ಬಾಗಿಲ ಕಂಬಕ್ಕೊರಗಿಸಿ, ತಲೆಯನ್ನೂ ಇನ್ನೊಂದು ಭುಜವನ್ನೂ ಮುಂದಕ್ಕೆ ನೂಕಿ, ಆತ ನಿಂತುಕೊಂಡ.

ಸಿಟ್ಟಿನಿಂದ, ಪಾವೆಲ್‌ನ ಮುಖವನ್ನೆ ತನ್ನ ದೊಡ್ಡ ಕಣ್ಣುಗಳಿಂದ ದಿಟ್ಟಿಸುತ್ತ, ಆತ ಹೇಳಿದ:

"ಈ ಮಾತು ಸಾಕು ಮಾಡು, ಮಹಾಶಯ !"

ಆ ಮಾತಿನಲ್ಲಿ ತೀಕ್ಷ್ಣತೆಯಿತ್ತು. ಬಂಡೆಯ ತುದಿಯಲ್ಲಿ ನಿಂತಿದ್ದ ಓತಿಯ ಹಾಗೆ ಅವನು ಕಾಣಿಸುತ್ತಿದ್ದ.

ಕಣ್ಣು ತೇವವಾಗಿ ಕಂಬನಿ ತೊಟ್ಟಿಕ್ಕುವ ಹಾಗಾಯಿತು ತಾಯಿಗೆ.

ತಾನು ಅಳುವುದನ್ನು ಮಗನು ಕಾಣಬಾರದೆಂದು ಬಾಗಿಲಿನತ್ತ ಓಡುತ್ತ, "ಅಯ್ಯೋ.... ಒಗೆಯೋಕಿದೆ ಅನ್ನೋದನ್ನೇ ಮರೆತು ಬಿಟ್ಟೆ" ಎಂದಳು. ಹೊರ ಬಂದೊ ಡನೆ, ಒಂದು ಮೂಲೆಯಲ್ಲಿ ಮುದುಡಿ ನಿಂತು ಮೌನವಾಗಿ ಅಳತೊಡಗಿದಳು. ಮನವಿರಿಯುವ ಹಾಗೆ, ಹೃದಯದ ರಕ್ತವೆಲ್ಲ ಕಣ್ಣೀರಿನೊಡನೆ ಬೆರೆತು ಸುರಿಯಿ ತೇನೋ ಎಂಬಂತೆ, ಅತ್ತಳು.

ಅರೆದೆರೆದ ಬಾಗಿಲೆಡೆಯಿಂದ ಅವರ ಮಾತು ಕೇಳಿಸುತ್ತಿತ್ತು. ತಗ್ಗಿದ ಸ್ವರದಲ್ಲಿ ಅವರು ವಾದಿಸುತ್ತಿದ್ದರು.

"ಏನು ವಿಚಾರ ನಿನ್ನದು? ಆಕೇನ ನೋಯಿಸೋದರಿಂದ ನಿನಗೆ ತೃಪ್ತಿ ಯಾಗುತ್ತೇನೊ?" ಎಂದು ಹೊಹೋಲ್ ಕೇಳಿದ.

"ಹಾಗೆ ಹೇಳಲು ನಿನಗೆ ಹಕ್ಕಿಲ್ಲ!" ಎಂದು ಪಾವೆಲ್ ಕೂಗಾಡಿದ.

"ನೀನು ಮೂರ್ಖನ ಹಾಗೆ ವರ್ತಿಸೋದನ್ನು ನೋಡಿಯೂ ಸುಮ್ಮನಿದ್ದರೆ ನಾನೊಳ್ಳೆಯ ಮಿತ್ರನೇ ಸರಿ! ತಾಯಿ ಜತೇಲಿ ಹಾಗೆ ಯಾಕೆ ಮಾತಾಡ್ಬೇಕು? ನಿನಗೆ ಏನೂ ಅರ್ಥವೇ ಆಗೋದಿಲ್ವೆ?"

"ಉತ್ತರ ಯಾವಾಗಲೂ ದೃಢವಾಗಿರ್ಬೇಕು. ಹೌದು – ಇಲ್ಲ ಅಂತ ಹೇಳೋಕೆ ಹೆದರ್ಬಾರದು."

"ತಾಯಿ ಜತೇಲೂ ಕೂಡಾ?"

"ಯಾರ ಜತೇಲಾದರೂ ಅಷ್ಟೇ. ಕುತ್ತಿಗೆಗೆ ಕೊರಡಾಗಿರೋ ಪ್ರೇಮವಾಗಲೀ ಸ್ನೇಹವಾಗಲೀ ನನಗೆ ಬೇಡ."

"ಭೇಷ್! ಸಿಂಬಳ ಸುರೀತಾ ಇದೆ. ಹೋಗು ಮೂಗೊರೆಸಿಕೋ! ಸಾಷನಿಗೆ ಹೇಳು ಆ ಮಾತು. ಆಕೆ...."

"ಆಗಲೇ ಹೇಳಿದೀನಿ."

"ಹೇಳಿದ್ದೀಯಾ? ಸುಳ್ಳು. ಆಕೆ ಜತೇಲಿ ನೀನು ನಯವಾಗಿ ಮಾತಾಡ್ದೆ, ಪ್ರೀತಿಯಿಂದ ಮಾತಾಡ್ದೆ. ನಾನು ಕೇಳಲಿಲ್ಲ. ಆದರೆ ನನಗೆ ಗೊತ್ತಿದೆ. ತಾಯಿ ಎದುರಲ್ಲಿ ಮಾತ್ರ ನೀನು ದೊಡ್ಡ ಮನುಷ್ಯ! ಈ ದೊಡ್ಡಸ್ತಿಕೆಗೆಲ್ಲ ಕಾಸಿನಷ್ಟೂ ಬೆಲೆಯಿಲ್ಲ, ಪಾವೆಲ್!"

ಪೆಲಗೇಯ ಅವಸರವಾಗಿ ಕಣ್ಣೊರೆಸಿಕೊಂಡಳು. ಹೊಹೋಲ್ ಕಠಿನ ವಾದ್ವನ್ನೇ ಇನ್ನೇನಾದರೂ ಹೇಳಬಹುದೆಂದು ಹೆದರಿ, ಆಕೆ ಬೇಗನೆ ಬಾಗಿಲು ತೆರೆದು, ಅಡುಗೆ ಮನೆಯೊಳಕ್ಕೆ ಬಂದಳು.

"ಅಬ್ಬ! ಎಂಥ ಚಳಿ!" ಎಂದಳಾಕೆ ಗಟ್ಟಿಯಾಗಿ. ಭೀತಿಯಿಂದಲೂ ದುಃಖದಿಂದಲೂ ಸ್ವರ ಕಂಪಿಸುತ್ತಿತ್ತು. "ವಸಂತ ಬಂದಿದೇಂತ ಹೇಳೋಹಾಗೆಯೇ ಇಲ್ಲ," ಎಂದಳು.

ಸಿಕ್ಕಾಪಟ್ಟೆಯಾಗಿ ಸಾಮಾನುಗಳನ್ನು ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ಒಯ್ದಿಡುತ್ತ, ಪಕ್ಕದ ಕೊಠಡಿಯ ಸಂಭಾಷಣೆಯ ಸ್ವರ ಕೇಳಿಸದಂತೆ ಮಾಡಲು ತಾಯಿ ಯತ್ನಿಸಿದಳು.

ಹೆಚ್ಚು ಗಟ್ಟಿಯಾದ ಸ್ವರದಲ್ಲಿ ಆಕೆ ಮಾತಾಡಿದಳು:

"ಪ್ರತಿಯೊಂದೂ ಬದಲಾಗಿದೆ. ಜನ ಹೆಚ್ಚು ಬಿಸಿಯಾಗಿದ್ದಾರೆ. ಹವಾ ಹೆಚ್ಚು ತಣ್ಣಗಾಗಿದೆ. ಪ್ರತಿವರ್ಷ ಇಷ್ಟೊತ್ತಿಗೆ ಆಕಾಶ ಶುಭ್ರವಾಗಿ ಸೂರ್ಯ ಕಾಣಿಸ್ಕೊಂಡು ಬೆಚ್ಚಗಿರ್ತಿತ್ತು...."

ಅವರಿಬ್ಬರ ಮಾತು ನಿಂತಿತು. ಅಡುಗೆ ಮನೆಯ ನಡುವೆ ನಿಂತು ಆಕೆ ಕಿವಿ ನಿಮಿರಿಸಿದಳು.

ಹೊಹೋಲ್ ಮೃದುವಾಗಿ ಹೇಳಿದ:

"ಕೇಳಿಸ್ತಾ? ನಿನ್ನ ಬುದ್ಧಿಯನ್ನಿಷ್ಟು ಸುಟ್ಟಿತು! ಅವಳಿಗೆ ಹೆಚ್ಚು ತಿಳಿವಳಿಕೆ ಇದೆ."

ಕಂಪಿಸುವ ಸ್ವರದಲ್ಲಿ, "ಸ್ವಲ್ಪ ಚಾ ಮಾಡೋಣವೆ?" ಎಂದು ತಾಯಿ ಕೇಳಿದಳು. ಸ್ವರದ ನಡುಕಕ್ಕೆ ವಿವರಣೆಯೆಂಬಂತೆ, "ಚಳಿಯಿಂದ ಹೆಪ್ಪುಗಟ್ಟಿದೀನಿ ನಾನು!" ಎಂದಳು.

ಪಾವೆಲ್ ನಿಧಾನವಾಗಿ ಒಳಕ್ಕೆ ಆಕೆಯ ಬಳಿಗೆ ಹೋದ. ತಲೆ ಬಾಗಿತು. ಅಪರಾಧದ ಮುಗುಳ್ನಗೆಯೊಂದು ಅವನ ತುಟಿಗಳಲ್ಲಿ ಮೂಡಿತು.

"ಕ್ಷಮಿಸು, ಅಮ್ಮ. ನಾನಿನ್ನೂ ಹುಡುಗ – ಮೂರ್ಖ."

ಅವನ ತಲೆಯನ್ನು ಎದೆಗೆ ಆನಿಸಿಕೊಳ್ಳುತ್ತ ಸಂಕಟದಿಂದ ತಾಯಿ ಅಂದಳು:

"ನನ್ನ ಬಿಟ್ಬಿಡಪ್ಪ. ಹೇಗಾದರೂ ಇರ್‍ತೀನಿ. ಏನೂ ಹೇಳ್ಬೇಡ! ನಿನ್ನ ಜೀವ ನಿನ್ನದೇ ಅಲ್ವೆ? ಏನು ಬೇಕಾದರೂ ಮಾಡಿಕೋ. ದೇವರಿಗೆ ಗೊತ್ತು. ಆದರೆ ನನ್ನ ಹೃದಯಾನ ನೋಯಿಸ್ಬೇಡ! ತಾಯಿ ಪ್ರೀತಿಸದೆ ಹ್ಯಾಗೆ ಇದ್ದಾಳು? ಅವಳು ಪ್ರೀತಿಸಲೇ ಬೇಕು. ನಾನು ನಿಮ್ಮನ್ನೆಲ್ಲಾ ಪ್ರೀತಿಸ್ತೀನಿ. ನೀವೆಲ್ಲರೂ ನನಗೆ ಬೇಕಾದವರು. ನೀವೆಲ್ಲರೂ ಪ್ರೀತಿ ಪಾತ್ರರು. ನಿಮ್ಮ ವಿಷಯದಲ್ಲಿ ನಾನು ಕನಿಕರ ತೋರಿಸ್ದೇ ಹೋದರೆ ಬೇರೆ ಯಾರು ತೋರಿಸ್ಬೇಕು? ನೀವೆಲ್ಲರೂ ಹೋಗ್ತೀರಿ ನೀನು ಮೊದಲು, ಉಳಿದವರು ಹಿಂದಿನಿಂದ, ಎಲ್ಲವನ್ನೂ ಬಿಟ್ಬಿಟ್ಟು, ಅಲ್ಲ? ಓ ಪಾಪ!"

ಹಿರಿಯ ಜ್ವಲಿಸುವ ವಿಚಾರಗಳು ಆಕೆಯ ಹೃದಯದಲ್ಲಿ ಮೂಡಿಬಂದುವು. ದುಃಖಪೂರ್ಣವಾದ ಆನಂದ ಆಕೆಯ ಹೃದಯವನ್ನು ಕೆದಕಿತು. ಆದರೆ ಅದನ್ನು ವ್ಯಕ್ತಪಡಿಸಲು ಮಾತುಗಳೇ ದೊರೆಯಲಿಲ್ಲ ತಾಯಿಗೆ. ಆ ಮೂಕ ಹಿಂಸೆಯಲ್ಲಿ ಆಕೆ, ತೀಕ್ಷ್ಣವಾದ ಆಳವಾದ್ದ ನೋವಿನಿಂದುರಿಯುತ್ತಿದ್ದ ಕಣ್ಣುಗಳಿಂದ ಮಗನನ್ನು ನೋಡಿದಳು.

"ಇರಲಿ ಬಿಡು, ಅಮ್ಮ. ನನ್ನನ್ನು ಕ್ಷಮಿಸು – ಎಲ್ಲಾ ಸ್ಪಷ್ಟವಾಯ್ತು ಈಗ. ನಾನೆಂದಿಗೂ ಮರೆಯೋದಿಲ್ಲ. ಆಣೆ ಮಾಡ್ತೀನಿ, ಎಂದಿಗೂ ಮರೆಯೋಲ್ಲ."

ಮುಗುಳ್ನಗೆಯೊಡನೆ ಪಾವೆಲ್ ಮುಖ ತಿರುಗಿಸಿದ. ಅವನಿಗೆ ಸಂತೋಷವಾಗಿತ್ತು. ಆದರೆ ಲಜ್ಜೆಯೂ ಆಗಿತ್ತು.

ಅವನನ್ನು ಅಲ್ಲಿಯೇ ಬಿಟ್ಟು ತಾಯಿ ಇನ್ನೊಂದು ಕೊಠಡಿಯ ಬಾಗಿಲಿನತ್ತ ಹೋದಳು.

ಮೃದುವಾದ ವಿನೀತ ಸ್ವರದಲ್ಲಿ ಆಕೆ ಹೇಳಿದಳು.

"ಅಂದ್ರ್ಯೂಷ! ಅವನನ್ನು ಬಯ್ಯಬೇಡವಪ್ಪ. ನಿಜ ನೀವು ಅವನಿಗಿಂತ ವಯಸ್ಸಿನಲ್ಲಿ ದೊಡ್ಡವರು...."

ಆಕೆಗೆ ಬೆನ್ನುತೋರಿಸಿ ನಿಂತಿದ್ದ ಅಂದ್ರೇಯ್ ಮುಖ ತಿರುಗಿಸಲಿಲ್ಲ.

"ಹೂಂ – ಹೂಂ –ಹ್ಯಾಗೆ ಬೈತೀನಿ ಗೊತ್ತೆ? ಇಷ್ಟೇ ಅಲ್ಲ, ಇನ್ನು ಮೇಲೆ ಹೊಡೀತೀನಿ ನೋಡಿ!" ಎಂದನಾತ.

ತಾಯಿ ಅವನ ಬಳಿ ಸಾರಿ ಕೈ ಚಾಚಿದಳು.

"ಎಷ್ಟು ಒಳ್ಳೆಯವರು ನೀವು...."

ಅಂದ್ರೇಯ್ ತಿರುಗಿ ನಿಂತು, ಸರಕ್ಕನೆ ಅವಳನ್ನು ಹಾದು, ಅಡುಗೆ ಮನೆಯೊಳಕ್ಕೆ ಹೋದ. ಬೆನ್ನ ಹಿಂದೆ ಆತ ಕೈ ಕಟ್ಟಿಕೊಂಡಿದ್ದ. ಹೋರಿಯಂತೆ ತಲೆ ಬಾಗಿಸಿದ್ದ. ಆತನ ವ್ಯಗ್ರವಾದ ಅಣಕದ ಸ್ವರ ತಾಯಿಗೆ ಕೇಳಿಸಿತು.

"ನಾನು ನಿನ್ನ ತಲೆ ಚಿವುಟೋಕೆ ಮುಂಚೆ ಹೊರಟ್ಹೋಗು, ಪಾವೆಲ್!"

ಆ ಮೇಲೆ ಬೇರೆ ಸ್ವರದಲ್ಲಿ:

"ಹೆದರಬೇಡವ್ವಾ, ಸುಮ್ನೆ ತಮಾಷೆಗೆ ಹೇಳ್ದೆ ಅಷ್ಟೆ. ತಾಳಿ ಸಮೊವಾರ್ ಹಚ್ತೀನಿ. ಹುಂ! ಎಂಥಾ ಇಜ್ಜಲು – ಎಲ್ಲಾ ಒದ್ದೆ!"

ಆತ ಸುಮ್ಮನಾದ. ತಾಯಿ ಅಡುಗೆಮನೆಯೊಳಕ್ಕೆ ಬಂದಾಗ ಅವನು ಸಮೊವಾರ್ ಉರಿಸುತ್ತ ನೆಲದ ಮೇಲೆ ಕುಳಿತಿದ್ದ.

ತಲೆಯನ್ನೆತ್ತದಯೇ ಅವನೆಂದ:

"ಹೆದರ್ಬೇಡ, ನಾನು ಅವನನ್ನು ಮುಟ್ಟೋದಿಲ್ಲ! ಬೆಣ್ಣೆಯ ಹಾಗೆ ಮೃದು ನಾನು! ಅಲ್ಲದೆ ಅವನೆಂದರೆ – ಏ ಮಹಾಪುರುಷ, ಕೇಳ್ಬೇಡ, ನಿನಗಲ್ಲ – ಅವನೆಂದರೆ ನನಗೆ ತುಂಬಾ ಪ್ರೀತಿ! ಆದರೆ ಅವನು ಹಾಕಿಕೊಂಡಿರೋ ಬನೀನು ಕಂಡರೆ ನನಗಾಗೋದಿಲ್ಲ. ತನ್ನಲ್ಲೊಂದು ಹೊಸ ಬನೀನಿದೆ, ಅದು ಸೊಗಸಾಗಿದೇಂತ ತಿಳಕೊಂಡಿದ್ದಾನೆ. ಹಾಗೇಂತ ಹೊಟ್ಟೇನ ಮುಂದಕ್ಕೆ ಚಾಚ್ಕೊಂಡು, ಎಲ್ಲರಿಗೂ ಢಿಕ್ಕಿ ಹೊಡೀತಾ, 'ನನ್ನ ಸೊಗಸಾದ ಹೊಸ ಬನೀನು ನೋಡಿದಿರಾ?' ಅಂತ ಕೇಳ್ಕೊಂಡು ಹೋಗ್ತಿದಾನೆ. ಬನೀನೇನೋ ಚೆನ್ನಾಗಿದೆ. ಆದರೆ ಎಲ್ಲರಿಗೂ ಢಿಕ್ಕಿ ಯಾಕೆ ಹೊಡೀಬೇಕು? ಹಾಗೆ ಮಾಡ್ದೇನೇ ಜನರಿಂದ ತಪ್ಪಿಸ್ಕೊಳ್ಳೋದೇ ಸಾಕಾಗಿದೆ!"

"ಎಷ್ಟೊತ್ತನ್ಕ ಈ ನಾಟಕ? ಇನ್ನು ಸಾಕು!" ಎಂದು ಪಾವೆಲ್, ಸಣ್ಣನೆ ನಕ್ಕ.

ಸಮೊವಾರ್‌ನ ಇಕ್ಕೆಲಗಳಲ್ಲಿ ಕಾಲಿರಿಸಿ ಕುಳಿತಿದ್ದ ಅಂದ್ರೇಯ್, ಅಲ್ಲಿಂದಲೇ ಮೇಲಕ್ಕೆ ದಿಟ್ಟಿಸಿದ. ಹಿಂಬದಿಯಿಂದ ಅಂದ್ರೇಯ್‌ನ ತಲೆಯನ್ನು ನೋಡುತ್ತ ತಾಯಿ ಬಾಗಿಲಲ್ಲಿ ನಿಂತಿದ್ದಳು. ಅಂದ್ರೇಯ್ ಮೊಣಕೈ ಮೇಲೆ ಭಾರ ಹಾಕಿ ದೇಹವನ್ನು ತಿರುಗಿಸಿ ತಾಯಿ ಮತ್ತು ಮಗನತ್ತ ನೋಡಿದ.

"ಪರವಾಗಿಲ್ಲ ನೀವಿಬ್ಬರೂ" ಎಂದನಾತ, ಪಿಳಿಪಿಳಿ ಕಣ್ಣು ಬಿಡುತ್ತ. ಎರಡು ಕಣ್ಣುಗಳೂ ಸ್ವಲ್ಪ ಕೆಂಪಗಾಗಿದ್ದುವು.

ಪಾವೆಲ್ ಬಾಗಿ, ಅಂದ್ರೇಯ್‌ನ ಕೈಯನ್ನು ಹಿಡಿದುಕೊಂಡ.

"ಎಳೀಬೇಡ, ಬಿದ್ದುಬಿಟ್ಟೇನು!" ಎಂದ ಹೊಹೋಲ್.

ತಾಯಿಯೆಂದಳು:

"ಯಾತರ ಹೆದರಿಕೆ? ಹೂಂ. ಒಬ್ಬರನ್ನೊಬ್ಬರು ಅಪ್ಪಿಕೊಳ್ಳಿ, ಗಟ್ಟಿಯಾಗಿ."

"ಹಾಗೆ ಮಾಡೋಣವೇನಯ್ಯ?"

ಏಳುತ್ತ ಹೊಹೋಲ್, "ಹೂಂ, ಬಾ." ಎಂದ.

ಅವರಿಬ್ಬರೂ ಬಲವಾಗಿ ಅಪ್ಪಿಕೊಂಡರು. ಎರಡು ದೇಹಗಳು – ಒಂದೇ ಆತ್ಮ – ಮೈತ್ರಿಯಿಂದ ಜ್ವಲಿಸಿದುವು. ತಾಯಿಯ ಕೆನ್ನೆಗಳ ಮೇಲಿಂದ ಕಣ್ಣೀರು ಹರಿಯಿತು. ಆದರೆ ಈ ಬಾರಿ ಅದು ಆನಂದಾಶ್ರು.

ಕಂಬನಿಯೊರಸುತ್ತ ಲಜ್ಜೆಯಿಂದ ತಾಯಿಯೆಂದಳು:

"ಹೆಂಗಸರಿಗೆ ಅಳೋದೆಂದರೆ ಇಷ್ಟ. ಸಂತೋಷವಾದಾಗಲೂ ಅಳೋದು; ದುಃಖವಾದಾಗಲೂ ಅಳೋದು...."

ಅಂದ್ರೇಯ್ ಪಾವೆಲ್‌ನನ್ನು ಮೆಲ್ಲಗೆ ತಳ್ಳಿದ.

ಕಿಟಕಿಯ ಬಳಿ ಕುಳಿತುಕೊಳ್ಳುತ್ತ ಪಾವೆಲ್ ಮೃದುವಾಗಿ, "ಅಂಥ ಕಣ್ಣೀರಿಗಾಗಿ ನಾಚಿಕೆ ಪಡಬೇಕಾದ್ದಿಲ್ಲ" ಎಂದ.

ಅಂದ್ರೇಯ್ ಕಣ್ಣುಗಳನ್ನೊರೆಸುತ್ತ ಹೇಳಿದ:

"ಸಾಕು. ಮಿತಿಮೀರಬಾರದು ಯಾವುದೂ. ಸುಟ್ಟಿತು ಈ ಇಜ್ಜಲನ್ನು! ಫೂ ಅಂದರೆ ಸಾಕು, ಕಣ್ಣಿಗೇ ತುಂಬಿಕೊಳ್ಳುತ್ತೆ! ಉಫ್."

ತಾಯಿ ಮಗನ ಬಳಿ ಸಾರಿ ಪಕ್ಕದಲ್ಲಿ ನಿಂತಳು. ಹೊಸ ಧೈರ್ಯ ಹೃದಯವನ್ನು ತುಂಬಿತ್ತು. ಇದರಿಂದ ಆಕೆ ಶಾಂತಳಾದಳು. ದುಃಖವಿದ್ದರೂ ಸಂತೃಪ್ತಿಯಿತ್ತು.

ಅಂದ್ರೇಯ್ ಕೊಠಡಿಯ ಹೊರಹೋಗುತ್ತ ಹೇಳಿದ:

"ಏಳ್ಬೇಡಿ, ತಾಯಿ; ತಟ್ಟೆ ನಾನು ತರ್‍ತೀನಿ. ಸ್ವಲ್ಪ ವಿಶ್ರಾಂತಿ ತಗೊಳ್ಳಿ.... ಆ ರೀತಿ ನಿನ್ನ ಹೃದಯಾನ ಹಿಂಡಿಸಿಕೊಂಡ್ಮೇಲೆ...."

ಪುಲಕವೆಬ್ಬಿಸುವ ಸ್ವರ ಮತ್ತೆ ಒಳಬಂತು.

"ಜೀವನದ ಮಧುರ ಸವೀನ ಸ್ವಲ್ಪ ನೋಡಿದ್ವಿ ಈಗ – ಸೊಗಸಾದ ಹಸುರಾದ ಜೀವನ!"

"ಹೌದು," ಎಂದ ಪಾವೆಲ್, ತಾಯಿಯತ್ತ ನೋಡುತ್ತ.

ಆಕೆ ಅಂದಳು:

"ಎಲ್ಲವನ್ನೂ ಇದು ಬದಲಾಯಿಸ್ಬಿಟ್ಟಿದೆ. ನಮ್ಮ ಸಂಕಟವೂ ವಿಶಿಷ್ಟವಾದದ್ದು, ನಮ್ಮ ಸಂತೋಷವೂ ವಿಶಿಷ್ಟವಾದದ್ದು...."

ಹೊಹೋಲನೆಂದ:

"ಅದು ಇರಬೇಕಾದ್ದೇ ಹಾಗೆ! ಯಾಕೇಂತಂದ್ರೆ ಒಂದು ಹೊಸ ಹೃದಯಾನೇ ಹುಟ್ತಿದೆ ನನ್ನವ್ವ, ಒಂದು ಹೊಸ ಹೃದಯ ಬೆಳಕಿಗೆ ಬರ್‍ತಿದೆ. ಮನುಷ್ಯ ಮುಂದಕ್ಕೆ ನುಗ್ತಿದ್ದಾನೆ. ವಿಚಾರದ ದೀಪದಿಂದ ಎಲ್ಲಕ್ಕೂ ಬೆಳಕು ತೋರಿಸ್ತಿದಾನೆ. 'ವಿಶ್ವದ ಜನರೇ! ಒಂದು ಕುಟುಂಬವಾಗಿ ಒಗ್ಗಟ್ಟಾಗಿ!' ಎಂದು ಕರೆ ಕೊಡ್ತಿದ್ದಾನೆ. ಇದಕ್ಕೆ ಉತ್ತರವಾಗಿ ಎಲ್ಲ ಒಳ್ಳೆಯ ಹೃದಯಗಳೂ ಬೆರೆತು, ಬಲಿಷ್ಠವಾದ ಸ್ವರ ಪೂರ್ಣವಾದ ಹಿರಿ ಘಂಟೆಯ ಹಾಗೆ, ದೊಡ್ಡ ಹೃದಯವಾಗ್ತದೆ...."

ತಾಯಿ, ತುಟಿಗಳು ನಡುಗಬಾರದೆಂದು ಅವುಗಳನ್ನು ಭದ್ರವಾಗಿ ಬಿಗಿಹಿಡಿದಳು. ಅಳಬಾರದೆಂದು ಕಣ್ಣುಗಳನ್ನು ಬಲವಾಗಿ ಮುಚ್ಚಿಕೊಂಡಳು....

ಏನೋ ಮಾತಾಡಲು ಹೊರಟವನಂತೆ ಪಾವೆಲ್ ತೋಳನ್ನು ಚಲಿಸಿದ. ಆದರೆ ತಾಯಿ, ಮಗನನ್ನು ತನ್ನೆಡೆಗೆ ಸೆಳೆದುಕೊಂಡು, "ಅವನ ಮಾತಿಗೆ ಅಡ್ಡಿಯಾಗ್ಬೇಡ" ಎಂದು ಪಿಸುಗುಟ್ಟಿದ್ದಳು.

ಅಂದ್ರೇಯ್ ಒಳಬಂದು ಬಾಗಿಲ ಬಳಿ ನಿಂತ:

"ಜನರು ಇನ್ನೂ ಅನುಭವಿಸಬೇಕಾದ ಸಂಕಷ್ಟ ಎಷ್ಟೋ ಇದೆ. ಇನ್ನೂ ಎಷ್ಟೋ ರಕ್ತ ಸುರೀಬೇಕಾಗಿದೆ. ನನ್ನ ಹೃದಯದಲ್ಲೂ ಮೆದುಳಲ್ಲೂ ಏನೇನಿಲ್ಲ! ಅದಕ್ಕೆ ಸರಿಯಾಗಿ ನಾನೆಷ್ಟು ಸಂಕಟ ಅನುಭವಿಸಿದರೂ ರಕ್ತ ಸುರಿದರೂ ಅದು ಅಲ್ಪವೇ. ನಾನು ನಕ್ಷತ್ರದ ಹಾಗೆ ಸಮೃದ್ಧವಾಗಿದ್ದೀನಿ. ಅದರೆಲ್ಲ ಕಿರಣಗಳೂ ಸುತ್ತಲೂ ಇವೆ. ಯಾರೂ ಏನೂ ನಾಶ ಮಾಡೋದು ಸಾಧ್ಯವೇ ಇಲ್ಲದಂಥ ಮಹಾ ಸಂತೋಷ ನನ್ನೊಳಗಿದೆ. ಆದ್ದರಿಂದ ನಾನು ಏನನ್ನೂ ಸಹಿಸಬಲ್ಲೆ, ಏನನ್ನೂ ಅನು ಭವಿಸಬಲ್ಲೆ. ನನ್ನ ಶಕ್ತಿ ಅಡಗಿರೋದು ಆ ಸಂತೋಷದಲ್ಲೇ!"

ಚಾ ಕುಡಿದು, ನಡು ರಾತ್ರಿಯವರೆಗೂ ಬಾಳ್ವೆ, ಮನುಷ್ಯರು ಮತ್ತು ಭವಿತ ವ್ಯದ ಬಗೆಗೆ ಅವರು ಬಲು ವಿವರವಾಗಿ, ಆತ್ಮೀಯವಾಗಿ, ಮಾತಾಡುತ್ತ ಕುಳಿತರು.

ಯಾವುದಾದರೊಂದು ವಿಚಾರ ತಾಯಿಗೆ ಸ್ಪಷ್ಟವಾದಾಗ, ತಾಯಿ ಗತ ಕಾಲದತ್ತ ಇಣಿಕಿ ನೋಡುತ್ತಿದ್ದಳು. ಯಾವುದಾದರೊಂದು ಒರಟಾದ ದುಃಖಮಯ ವಾದ ಸ್ಮರಣೆಯ ಒರೆಗಲ್ಲಿಗೆ ತಾನು ತಿಳಿದ ವಿಚಾರವನ್ನು ತೀಡಿ ನೋಡುತ್ತಿದ್ದಳು.

ಆತ್ಮೀಯವಾಗಿ ಮುಂದೆ ಸಾಗಿದ್ದ ಅವರ ಮಾತಿನ ಬೆಚ್ಚನೆಯ ಪ್ರವಾಹದಲ್ಲಿ ಆಕೆಯ ಭೀತಿಯೆಲ್ಲ ಕರಗಿಹೋಯಿತು.

ಎಷ್ಟೋ ಹಿಂದೆಯೊಮ್ಮೆ ಆಕೆಯ ತಂದೆ ಕಟ್ಟುನಿಟ್ಟಾಗಿ ಹೇಳಿದ್ದ:

"ಮುಖ ಮುದುರಿಕೊಳ್ಳೋದರಲ್ಲಿ ಅರ್ಥವಿಲ್ಲ. ನಿನ್ನ ಕೈ ಹಿಡಿಯೋವಂಥ ಮೂರ್ಖ ಒಮ್ಮೆ ಬಂದನೆಂದರೆ ಮುಂದೆ ಸಾಗೋದೇನೇ! ಅವಕಾಶಾನ ಬಿಟ್ಟು ಬಿಡೋ ಹಾಗಿಲ್ಲ! ಎಲ್ಲ ಹೆಂಗಸರೂ ಮದುವೆಯಾಗ್ತಾರೆ. ಅವರಿಗೆಲ್ಲಾ ಮಕ್ಕ ಳಾಗ್ತವೆ. ಆ ಮಕ್ಕಳೋ ಸಂಕಟವನ್ನಲ್ದೆ ಬೇರೇನೂ ತರೋದಿಲ್ಲ! ಹುಂ. ಯಾವ ದೊಡ್ಮನುಷ್ಯಳೂಂತ ತಿಳ್ಕೊಂಡೆ ನೀನು?"

ಆ ದಿನ ಆಕೆಗೆ ಎಂಥ ಅನುಭವವಾಗಿತ್ತೋ ಅಂಥ ಅನುಭಾವವೇ ಈ ದಿನವೂ ಆಯಿತು.

ಆ ಮಾತುಗಳ ಬಳಿಕ, ಅನಿವಾರ್ಯವಾದೊಂದು ಹಾದಿ ತನ್ನ ಮುಂದಿದ್ದು ದನ್ನು, ಕರಿದಾದ ಬರಡಾದ ಭೂಮಿಯ ಮೇಲೆ ವ್ಯರ್ಥವಾಗಿ ಆ ಹಾದಿ ಸುತ್ತಿ ಸುತ್ತಿ ಹೋಗುತ್ತಿದ್ದುದನ್ನು, ಆಕೆ ಕಂಡಳು. ಆ ಹಾದಿಯಲ್ಲಿ ಸಾಗಲೇಬೇಕಾದ ಅನಿ ವಾರ್ಯತೆ ಆಕೆಯ ಹೃದಯವನ್ನು ಅಂಥ ಶಾಂತಿಯಿಂದ ತುಂಬಿತ್ತು. ಈಗಲೂ ಅಷ್ಟೇ ಹೊಸ ದುಃಖ ಬರುತ್ತಿದೆ ಎಂಬುದರ ಅರಿವಾದಂತೆಯೇ ಆಕೆ, ಮನಸ್ಸಿನೊಳಗೇ ಅಪರಿಚಿತನಾದ ಯಾರನ್ನೋ ಉದ್ದೇಶಿಸಿ, "ಹೂಂ – ಅನುಭವಿಸು ಇದನ್ನು" ಎಂದು ಕಟುವಾಗಿ ಹೇಳುತ್ತಿದ್ದಳು.

ಎದೆಯೊಳಗೆ ಬಿಗಿದಾದ ತಂತಿಯಂತೆ ಮಿಡಿಯುತ್ತಿದ್ದ ನೋವಿನ ಹೃದಯಕ್ಕೆ, ಅದರಿಂದ ಸ್ವಲ್ಪ ಶಾಂತಿ ಒದಗುತ್ತಿತ್ತು.

ಆದರೆ ಆಕೆಯ ಆತ್ಮದ ಆಳದಲ್ಲಿ ಕ್ಷೀಣವಾದ ಆದರೂ ನಿರಂತರವಾದ ಆಸೆಯೊಂದಿತ್ತು. ತನ್ನಿಂದ ಎಲ್ಲವನ್ನೂ ಅವರು ಒಯ್ಯಲಾರರು – ಏನನ್ನೂ ಬಿಡದೆ ಎಲ್ಲವನ್ನೂ ಕಸಿದುಕೊಳ್ಳಲಾರರು! ಖಂಡಿತವಾಗಿಯೂ ಏನಾದರೂ ಉಳಿಯುದಿದ್ದೀತೆ? – ಉಳಿಯದೆ ಇದ್ದೀತೆ?

೨೪

ಒಂದು ದಿನ ನಸುಕಿನಲ್ಲೆ ಕೋರ್ಸುನೊವ ಬಂದಳು. ಪಾವೆಲ್ ಮತ್ತು ಅಂದ್ರೇಯ್ ಅದೇ ಆಗ ಕೆಲಸಕ್ಕೆ ಹೋಗಿದ್ದರು. ಕೋರ್ಸುನೊವ ಕಿಟಕಿಯನ್ನು ತಟ್ಟಿ ಗಟ್ಟಿಯಾಗಿ ಹೇಳಿದಳು:

"ಇಸಾಯ್‌ನ ಕೊಂದ್ಬಿಟ್ಟಿದ್ದಾರೆ! ಹೋಗಿ ನೋಡೋಣ ಬಾ...."

ತಾಯಿ ಬೆಚ್ಚಿದಳು. ಕೊಲೆಗಡಕನ ಹೆಸರು ಆಕೆಯ ಮನಸ್ಸಿನೆದುರು ಮಿಂಚಿತು. ಶಾಲನ್ನು ಹೊದ್ದುಕೊಳ್ಳುತ್ತಾ, "ಯಾರು ಕೊಂದರು?" ಎಂದು ಕೇಳಿದಳು.

"ಕೊಂದವನೇನು ಇಸ್ಶಾಯ್‌ಯ ಪಕ್ಕದಲ್ಲೇ ಕೂತಿಲ್ಲ. ತನ್ನ ಕೆಲಸ ಮುಗಿಸಿ ತಪ್ಪಿಸ್ಕೊಂಡಿದ್ದಾನೆ!"

ಬೀದಿಗಿಳಿದು ನಡೆಯುತ್ತಿದ್ದಾಗ ಮಾತು ಮುಂದುವರಿಸುತ್ತ ಕೋರ್ಸುನೊವ ಹೇಳಿದಳು:

"ಯಾರು ಮಾಡಿದರೂಂತ ಹುಡುಕೋಕೆ ಶುರು ಇನ್ನು. ಎಲ್ಲಾ ಕಡೆ ಪುನಃ ಝಡ್ತಿ ಮಾಡ್ತಾರೆ. ನಿಮ್ಮವರಿಬ್ಬರೂ ರಾತ್ರೆ ಮನೇಲೇ ಇದ್ದದ್ದು ಒಳ್ಳೇದಾಯ್ತು. ನಾನು ಅದಕ್ಕೆ ಸಾಕ್ಷಿ. ನಡುರಾತ್ರಿ ಆದ್ಮೇಲೆ ಬಂದು ನಾನು ಕಿಟಕಿಯೊಳಗೆ ಇಣಕಿ ನೋಡ್ದೆ.... ನೀವೆಲ್ಲಾ ಮೇಜಿನ ಸುತ್ತೂ ಕೂತಿದ್ದಿರಿ...."

ತಾಯಿ ಭೀತಿಯಿಂದ ಉದ್ಗಾರವೆತ್ತಿದಳು:

"ಓ! ಎಂಥ ವಿಚಾರ, ಮರೀಯ? ಇವರ ವಿಷಯದಲ್ಲಿ ಸಂಶಯವಾದರೂ ಹ್ಯಾಗೆ ಬಂದೀತು?"

"ಯಾಕೆ ಬರಕೂಡದು? ಯಾರು ಕೊಂದಿರಬಹುದು? ಯಾರೋ ನಿಮ್ಮವರಿಗೆ ಸಂಬಂಧಪಟ್ಟವರೇ ಇರಬೇಕು.... ಆತ ನಿಮ್ಮ ಮೇಲೆ ಕಣ್ಣಿಟ್ಟು ಗೂಢಚಾರನ ಕೆಲ್ಸ ಮಾಡ್ತಿದ್ದಾಂತ ಎಲ್ಲರಿಗೂ ಗೊತ್ತಿದೆ," ಎಂದು ಕೋರ್ಸುನೊವ ದೃಢ ನಂಬುಗೆಯಿಂದ ಹೇಳಿದಳು.

ತಾಯಿ ಅಲ್ಲೇ ನಿಂತಳು. ಉಸಿರು ಕಟ್ಟಿದ ಹಾಗಾಯಿತು. ಕೈಯನ್ನು ಎದೆಗೊತ್ತಿಕೊಂಡಳು.

"ಏನಾಯ್ತು? ಹೆದರ್ಬೇಡ.... ಏನೂ ಅನ್ಯಾಯವಾಗಿಲ್ಲ. ಆದದ್ದು ಒಳ್ಳೇದೇ ಆಯ್ತು! ಬೇಗ ಹೋಗೋಣ. ಇಲ್ದೆ ಹೋದ್ರೆ ಅಲ್ಲಿಂದ ಅವನನ್ನ ಒಯ್ದು ಬಿಡ್ತಾರೆ!"

ನಿಕೊಲಾಯ್ ವೆಸೊವ್‌ಶ್ಚಿಕೋವ್ ಆ ಕೆಲಸ ಮಾಡಿರಬಹುದೇ ಎಂದು

ತಾಯಿ ಶಂಕಿಸಿದಳು. ನಡೆಯುತ್ತಿದ್ದ ಅವಳನ್ನು ಕೈಹಿಡಿದು ತಡೆಯುತ್ತಿದ್ದಂತೆ ಆ ಶಂಕೆ ಬಾಧಿಸಿತು.

"ಹುಂ! ಅಂತೂ ಕೊನೆಗೂ ಮಾಡೇಬಿಟ್ಟ!" ಎಂದು ತನ್ನಷ್ಟಕ್ಕೇ ಯೋಚಿಸಿ ಕೊಂಡಳು.

ಕಾರಖಾನೆಗೆ ಸಮೀಪದಲ್ಲೇ ಇದ್ದೊಂದು ಬಹಿರಂಗ ಪ್ರದೇಶದಲ್ಲಿ, ಒಂದು ಮನೆ ಸುಟ್ಟುಹೋಗಿದ್ದ ಜಾಗದಲ್ಲಿ, ಜನರ ಗುಂಪು ನಿಂತಿತ್ತು. ಕಣಜದ ಹುಳುಗಳ ಹಾಗೆ ಗುಂಯ್‌ಗುಟ್ಟುತ್ತ, ಜನರು ಸುಟ್ಟುಹೋದ ಕಟ್ಟಿಗೆ ರಾಶಿಯನ್ನು ತುಳಿಯುತ್ತ ಕೆದಕಿದ ಬೂದಿ ಹಾರಾಡುವಂತೆ ಮಾಡುತ್ತಿದ್ದರು. ಅಲ್ಲಿ ಎಷ್ಟೋ ಹೆಂಗಸರಿದ್ದರು; ಅವರಿಗಿಂತಲೂ ಹೆಚ್ಚು, ಮಕ್ಕಳಿದ್ದರು; ಚಿಲ್ಲರೆ ವ್ಯಾಪಾರಿಗಳಿದ್ದರು, ಹೊಟೇಲು ಕೆಲಸಗಾರರಿದ್ದರು; ಪೋಲೀಸರಿದ್ದರು; ಎದೆಯ ಮೇಲೆ ಪದಕಗಳಿದ್ದ ದಪ್ಪನೆಯ ಬೂದು ಗಡ್ಡವಿದ್ದ ಎತ್ತರದ ಮುದುಕನಾದ ಪೋಲೀಸ ಪೆಟ್ಲಿನ್ ನಿಂತಿದ್ದ.

ಇಸಾಯ್ ನೆಲದ ಮೇಲೆ ಅರ್ಧ ಕುಳಿತಿದ್ದ, ಅರ್ಧ ಮಲಗಿದ್ದ. ಅವನ ಬೆನ್ನು ಸುಟ್ಟುಹೋಗಿದ್ದ ಒಂದು ಮರದ ದಿಂಬಿಗೆ ಒರಗಿತ್ತು. ಬೊಕ್ಕತಲೆ ಬಲಭುಜದ ಮೇಲೆ ವಾಲಿತ್ತು. ಬಲಗೈ ಅವನ ಷರಾಯಿಯ ಜೇಬಿನೊಳಗಿತ್ತು. ಎಡಗೈಯ ಬೆರಳುಗಳು ಬಿಡಿಮಣ್ಣನ್ನು ಹಿಡಿದಿದ್ದುವು.

ತಾಯಿ ಅವನ ಮುಖವನ್ನು ನೋಡಿದಳು. ಒಂದು ಕಣ್ಣು ಮಂದವಾಗಿ ಅಗಲಿಸಿಕೊಂಡ. ಕಾಲುಗಳೆಡೆಯಲ್ಲಿ ಬಿದ್ದಿದ್ದ ಟೋಪಿಯನ್ನೇ ದಿಟ್ಟಿಸುತ್ತಿತ್ತು. ಬಾಯಿ, ಆಶ್ಚರ್ಯ ಸೂಚಿಸುತ್ತಿದೆಯೋ ಎಂಬಂತೆ, ಅರೆದೆರೆದು ಜೋಲುತ್ತಿತ್ತು. ಅವನ ಕೆಂಪು ಗಡ್ಡ ಇನ್ನೊಂದೆಡೆಗೆ ಇಳಿಬಿದ್ದಿತ್ತು. ಚೂಪಾದ ತಲೆಯಿದ್ದ ಅವನ ಕೃಶ ಶರೀರವೂ ಸುಕ್ಕು ತುಂಬಿದ್ದ ಮಾಂಸರಹಿತ ಮುಖವೂ ಸಾವಿನ ಸೆಳೆತದಿಂದ ಮತ್ತಷ್ಟು ಕುಗ್ಗಿದ್ದುವು. ತಾಯಿ ಶಿಲುಬೆ ವಂದನೆ ಮಾಡಿ, ನಿಟ್ಟುಸಿರುಬಿಟ್ಟಳು. ಜೀವಂತವಿದ್ದಾಗ ಆತ ತುಚ್ಛನಾಗಿ ಕಂಡಿದ್ದ. ಈಗ ಅವನ ಬಗ್ಗೆ ಆಕೆಯಲ್ಲಿ ಶಾಂತವಾದ ಕನಿಕರ ಕಾಣಿಸುತ್ತಿತ್ತು.

"ರಕ್ತ ಸುರಿದಿಲ್ಲ. ಮುಷ್ಟಿಯಿಂದಲೇ ಹೊಡೆದು ಹಾಕಿರ್ಬೇಕು," ಎಂದು ತಗ್ಗಿದ ಸ್ವರದಲ್ಲಿ ಯಾರೋ ಹೇಳಿದ.

ಬೇರೆ ಯಾವನೋ ಒಬ್ಬ ಸೇಡಿನ ಧ್ವನಿಯಲ್ಲಿ, "ಅಂತೂ ಎಲುಬಿಲ್ಲದ ಆ ನಾಲಿಗೆಗೆ ಕತ್ತರಿ ಬಿತ್ತು" ಎಂದ.

ಪೋಲೀಸನು ಸೆಟೆದು ನಿಂತು ಹಾದಿ ಮಾಡಿಕೊಳ್ಳುತ್ತ, ಹೆಂಗಸರನ್ನು ದಾಟಿ ಮುಂದೆ ಬಂದ. "ಆ ಮಾತು ಹೇಳಿದ್ದು ಯಾರು?" ಎಂದು ಬೆದರಿಕೆಯ ಧ್ವನಿಯಲ್ಲಿ ಕೇಳಿದ.

ಜನರು ಅವನೆದುರು ಚೆದರಿದರು. ಕೆಲವರು ಓಡಿ ಹೋದರು. ಒಬ್ಬನು ಅಣಕದ ಧ್ವನಿಯಲ್ಲಿ ನಕ್ಕ.

ತಾಯಿ ಮನೆಗೆ ವಾಪಸು ಬಂದಳು.

"ಅವನಿಗಾಗಿ ಒಬ್ಬರೂ ವ್ಯಥೆ ಪಡೋದೇ ಇಲ್ಲ" ಎಂದು ತನ್ನಷ್ಟಕ್ಕೆ ಯೋಚಿಸಿ ಕೊಂಡಳು.

ಆಗತಾನೇ ನೋವಾಗಿದ್ದಂತೆ ಜೋಲುತ್ತಿದ್ದ ಬಲಗೈಯೊಡನೆ ನಿಕೊಲಾಯ್ ನಿಂತಿದ್ದ. ಬಲಾಢ್ಯ ವ್ಯಕ್ತಿ, ಅರೆತೆರೆದ ಕಣ್ಣುಗಳ ನೋಟದಿಂದ ತನ್ನನ್ನೇ ನೋಡುತ್ತಿದ್ದ ಹಾಗೆ ತಾಯಿಗೆ ಭಾಸವಾಯಿತು.

ಮಗನೂ ಅಂದ್ರೇಯ್‌ಯೂ ಮನೆಗೆ ಬಂದೊಡನೆ ತಾಯಿ ಆ ಬಗೆಗೆ ಕೇಳಿ ದಳು.

"ಇಸಾಯ್‌ನ ಕೊಂದಿದ್ದಕ್ಕೆ ಯಾರನ್ನಾದರೂ ಹಿಡಿದರಾ?"

"ಇಲ್ಲ, ಏನೂ ಗೊತ್ತಾಗಿಲ್ಲ," ಎಂದು ಪಾವೆಲ್ ಉತ್ತರವಿತ್ತ.

ಇಬ್ಬರ ಮನಸ್ಸೂ ಮುದುಡಿದ್ದುದು ಸ್ಪಷ್ಟವಾಗಿತ್ತು.

"ಯಾರಾದರೂ ನಿಕೊಲಾಯ್ ಹೆಸರು ಹೇಳಿದಾರಾ?" ಎಂದು ಅವಳು ಮೃದುವಾಗಿ ಕೇಳಿದಳು.

"ಇಲ್ಲ," ಎಂದು ಪಾವೆಲ್‌ನೆಂದ. ಕಣ್ಣುಗಳು ಕಟುವಾಗಿದ್ದುವು. ಸ್ವರ ಗಂಭೀರ ವಾಗಿತ್ತು. "ಪ್ರಾಯಶಃ ಅವನ ವಿಷಯದಲ್ಲಿ ಸಂದೇಹ ಇದ್ದ ಹಾಗೂ ಕಾಣೆ. ಅವನು ನದೀ ಕಡೆಗೆ ಹೋದವನು ಇನ್ನೂ ವಾಪಸು ಬಂದಿಲ್ಲ. ಅವನ ವಿಷಯ ವಿಚಾರಿಸ್ದೆ."

"ದೇವರು ಒಳ್ಳೆಯವನು!" ಎಂದಳು ತಾಯಿ, ಸಮಾಧಾನದ ನಿಟ್ಟುಸಿರು ಬಿಡುತ್ತ.... "ದೇವರು ದಯಾಮಯ!"

ಹೊಹೋಲ್ ಆಕೆಯತ್ತ ಒಮ್ಮೆ ನೋಡಿ ತಲೆ ತಗ್ಗಿಸಿದ.

ತಾಯಿ ರಾಗವಾಗಿ ಹೇಳಿದಳು:

"ಒಂದೂ ತಿಳೀದೆ ಆಶ್ಚರ್ಯ ಆದವನ ಹಾಗೆ ಅವನು ಅಲ್ಲಿ ಬಿದ್ದಿದ್ದಾನೆ. ಅವನ ವಿಷಯದಲ್ಲಿ ಯಾರೂ ಕನಿಕರ ತೋರಿಸುವವರೇ ಇಲ್ಲ. ಒಳ್ಳೇ ಒಂದು ಮಾತು ಹೇಳಿ ಆ ಕಣ್ಣುಗಳನ್ನು ಮುಚ್ಚೋಣ ಎನ್ನುವವರೇ ಇಲ್ಲ. ಅಲ್ಪ ಕ್ಷುಲ್ಲಕ ಪ್ರಾಣಿಯ ಹಾಗೆ ಬಿದ್ದಿದ್ದಾನೆ. ಏನೋ ಕಡಿದು ಬಿದ್ದಹಾಗೆ, ಯಾರೋ ಬೀಳಿಸಿ ಬಿಟ್ಟು ಹೋದ ಹಾಗೆ."

ಊಟ ಮಾಡುತ್ತಿದ್ದಾಗ ಪಾವೆಲ್ ಒಮ್ಮೆಲೆ ಚಮಚವನ್ನು ಕೆಳಕ್ಕೆಸೆದು ಕೂಗಿದ:

"ನನ್ನ ಕೈಲಿ ಸಹಿಸೋಕಾಗೋದಿಲ್ಲ."

"ಏನು?" ಎಂದು ಹೊಹೋಲ್ ಕೇಳಿದ.

"ಆಹಾರಕ್ಕೋಂತ ಸಾಕಿದ ಪ್ರಾಣಿಗಳನ್ನೂ ಕೊಲ್ತೀವಿ. ಅದೇ ಕೆಟ್ಟದ್ದು. ಕಾಡು ಪ್ರಾಣಿಗಳು ಅಪಾಯಕಾರಿಯಾದಾಗ ಅವುಗಳನ್ನ ಕೊಲ್ಬೇಕು ಅನ್ನೋದು ಸ್ಪಷ್ಟ. ಒಂದು ಮನುಷ್ಯ ಪ್ರಾಣಿ ಸಹಜೀವಿಗಳ್ನ ಬೇಟೆಯಾಡೋಕೆ ಶುರುಮಾಡ್ದಾಗ,

ಸ್ವತಃ ನಾನೇ ಆ ಮನುಷ್ಯ ಪ್ರಾಣೀನ ಕೊಂದೇನು. ಆದರೆ ಇವನಂಥ ಅಲ್ಪ ಕ್ಷುದ್ರ ಜಾತೀನ ಕೊಲ್ಲೋದೆಂದರೆ... ಹುಂ! ಯಾರಾದರೂ ಆ ಕೆಲಸಕ್ಕೆ ಕೈ ಎತ್ತೋದು ಸಾಧ್ಯವೆ!"

ಭುಜ ಕುಲುಕಿ ಹೊಹೋಲ್ ಹೇಳಿದ:

"ಕಾಡು ಜಂತುವಿನಷ್ಟೇ ಅಪಾಯಕಾರಿಯಾಗಿದ್ದ ಅವನು. ಒಂದು ತೊಟ್ಟು ರಕ್ತ ಹೀರಿದ್ದಕ್ಕೆ ಸೊಳ್ಳೆಗಳ್ನ ನಾವು ಹಿಸುಕಿಹಾಕ್ತೀವಿ."

"ಅದು ನಿಜವೆ. ಆ ವಿಷಯವಲ್ಲ ನಾನು ಹೇಳೋದು. ಇಂಥ ಕೆಲಸದಿಂದ ಎಷ್ಟೊಂದು ಹೇಸಿಕೆ ಅಂತ!"

ಮತ್ತೊಮ್ಮೆ ಭುಜ ಕುಲುಕಿ, "ಅದಕ್ಕೇನು ಮಾಡೋಣ" ಎಂದು ಅಂದ್ರೇಯ್ ಉತ್ತರವಿತ್ತ.

ದೀರ್ಘ ಹೊತ್ತು ಸುಮ್ಮನಿದ್ದು, "ಅಂಥ ಪ್ರಾಣೀನ ಕೊಲ್ಲೋಕೆ ನಿನ್ನಿಂದ ಸಾಧ್ಯವಿದೆಯೇನು?" ಎಂದು ಪಾವೆಲ್ ಕೇಳಿದ.

ಅಂದ್ರೇಯ್ ತನ್ನ ಅಗಲವಾದ ಕಣ್ಣುಗಳಿಂದ ನೆಟ್ಟ ದೃಷ್ಟಿಯಿಟ್ಟು ಆತನನ್ನೇ ನೋಡಿದ. ಬಳಿಕ ಒಮ್ಮೆಲೆ ತಾಯಿಯತ್ತ ದೃಷ್ಟಿ ಹರಿಸಿದ. ವೇದನಾಪೂರ್ಣವಾದ ಆದರೆ ದೃಢವಾದ ಸ್ವರದಲ್ಲಿ ಆತ ಹೇಳಿದ: "ನನ್ನ ಸಂಗಾತಿಗಳಿಗೋಸ್ಕರ ಮಹಾ ಧ್ಯೇಯಕ್ಕೋಸ್ಕರ ಏನು ಬೇಕಾದರೂ ಮಾಡಬಲ್ಲೆ—ನನ್ನ ಮಗನನ್ನು ಬೇಕಾದರೂ ಕೊಲ್ಲಬಲ್ಲೆ."

"ಆ್ಹ.... ಅಂದ್ರ್ಯೂಷ!" ಎಂದು ತಾಯಿ ಇಳಿಧ್ವನಿಯಲ್ಲಿ ಉದ್ಗರಿಸಿದಳು.

"ಏನು ಮಾಡೋಕಾಗತ್ತೆ ಹೇಳವ್ವ, ಜೀವನವೇ ಹಾಗಿದೆ," ಎಂದು ಅಂದ್ರೇಯ್ ಮುಗುಳ್ನಕ್ಕ.

"ನೀನು ಹೇಳೋದು ಸರಿ. ಜೀವನವೇ ಹಾಗಿದೆ," ಎಂದ ಪಾವೆಲ್.

ಅತಿಯಾಗಿ ಕ್ಷೋಭೆಗೊಂಡ ಸ್ಥಿತಿಯಲ್ಲಿ ಅಂದ್ರೇಯ್ ಒಮ್ಮೆಲೆ ಜಿಗಿದು ನಿಂತ. ತನ್ನ ಒಳಗಿನದೇನೋ ಕತ್ತರಿಸಿ ಬಿದ್ದಹಾಗಾಯಿತು ಅವನಿಗೆ.

ತೋಳುಗಳನ್ನು ಬೀಸುತ್ತಾ ಆತ ಕೂಗಾಡಿದ:

"ಏನು ಮಾಡೋಕಾಗುತ್ತೆ? ಜನರನ್ನು ಪ್ರೀತಿಸೋ ದಿನ ಬೇಗನೆ ಬರಲೀಂತ ಅವರನ್ನು ದ್ವೇಷಿಸೋ ಸ್ಥಿತಿ ಬಂದಿದೆ. ಪ್ರಗತಿಯ ಹಾದೀಲಿ ಯಾರೇ ಅಡ್ಡ ನಿಂತಿರ್ಲಿ, ತನಗೋಸ್ಕರ ಕೀರ್ತಿ ಭದ್ರತೆ ಸಂಪಾದಿಸೋಕೆ ಜನರನ್ನು ಹಣಕ್ಕಾಗಿ ಮಾರುವವನು ಯಾರೇ ಇರಲಿ, ಅವನನ್ನ ನಾವು ತೊಡೆದುಹಾಕಲೇಬೇಕು. ಪ್ರಾಮಾಣಿಕ ಜನರಿಗೆ ಅಡ್ಡಿಮಾಡಿ ದ್ರೋಹ ಬಗೆಯೋಕೆ ಅವಕಾಶ ಕಾಯ್ತಿರೋ ಒಬ್ಬ ದ್ರೋಹಿ ಇದಾ ನೇಂತಿಟ್ಕೊ, ಅಂಥವನನ್ನ ಅಳಿಸದೇ ಹೋದರೆ ನಾನೇ ದ್ರೋಹಿಯಾಗ್ತೀನಿ! ಹಾಗೆ ಮಾಡೋಕೆ ನನಗೆ ಅಧಿಕಾರವಿಲ್ಲ ಅಂತೀಯೇನು? ಆದರೆ ನಮ್ಮ ಮಾಲಿಕರಿಗೆ ಸೈನ್ಯ ಗಳನ್ನೂ ಕೊಲೆಗಡಕರನ್ನೂ ಇಡೋಕೆ ಅಧಿಕಾರ ಇದೆಯೊ? ತಮ್ಮ ಸುಖವನ್ನೂ

ಭದ್ರತೆಯನ್ನೂ ಕಾಪಾಡೋಕೋಸ್ಕರ, ಜನರಿಗಾಗಿ ವೇಶ್ಯೆಯರ ಮನೆಗಳು, ಜೈಲು ಗಳು, ಗಡೀಪಾರಿನ ಜಾಗಗಳು. ಇವನ್ನೆಲ್ಲ ಇಟ್ಟಿದಾರಲ್ಲ, ಹೀಗಿಡೋಕೆ ಅವರಿಗೆ ಆ ಅಧಿಕಾರ ಇದೆಯೊ? ಬೇರೆ ಹಾದಿ ಇಲ್ಲದೆ ಅವರ ಶಸ್ತ್ರಾನ ನಾನೂ ಒಮ್ಮೊಮ್ಮೆ ಕೈಲೆತ್ತಿಕೊಂಡರೆ ಅದು ನನ್ನ ತಪ್ಪೆ? ನಾನೇನೋ ಯಾವ ಯೋಚನೆಯೂ ಇಲ್ಲದೆ ಆ ಆಯುಧಾನ ಎತ್ಕೋತೀನಿ. ಸಹಸ್ರ ಸಹಸ್ರವಾಗಿ ನಮ್ಮನ್ನ ಅವರು ಕೊಲ್ಲೋವಾಗ, ನನ್ನ ತೋಳೆತ್ತಿ, ಅವರಲ್ಲಿ ಒಬ್ಬನ ತಲೆ ಮೇಲೆ ಏಟು ಬೀಸೋಕೆ ನನಗೆ ಅಧಿಕಾರವಿದೆ. ಅವರಲ್ಲಿ ಇತರ ಎಲ್ಲರಿಗಿಂತ ಹೆಚ್ಚಾಗಿ ನನ್ನ ಸಮೀಪಕ್ಕೆ ಬಂದು, ನನ್ನ ಜೀವನದ ಧ್ಯೇಯಕ್ಕೇ ಅಪಾಯಕಾರಿಯಾದ ಒಬ್ಬ ಕೆಟ್ಟ ಮನುಷ್ಯನ ಮೇಲೆ ಕೈ ಮಾಡೋಕೆ ನನಗೆ ಹಕ್ಕಿದೆ. ಜೀವನ ಇರೋದೆ ಹಾಗೆ.... ಆದರೆ ನಾನು ಅಂಥ ಜೀವನವನ್ನ ವಿರೋಧಿಸ್ತೀನಿ. ಅದು ಆ ರೀತಿ ಆಗಬೇಕೂಂತ ಅಪೇಕ್ಷೆ ಪಡೋದಿಲ್ಲ. ಅವರ ರಕ್ತ ದಿಂದ ಚಿಕ್ಕಾಸಿನ ಪ್ರಯೋಜನವೂ ಇಲ್ಲಾಂತ ನಂಗೆ ಗೊತ್ತಿದೆ. ಅದು ಬರಡಾದ ನಿಷ್ಫಲವಾದ ರಕ್ತ. ನಮ್ಮದಾದರೆ, ಚೆಲ್ಲಿ ಹೋದಾಗ ಅದರಿಂದ ಸತ್ಯ ಹುಟ್ಟುತ್ತೆ – ಭೂಮಿ ಮೇಲೆ ಬಿದ್ದ ಮಳೆ ನೀರಿನ ಹಾಗೆ. ಆದರೆ ಅವರ ರಕ್ತ ಒಂದು ಗುರುತನ್ನೂ ಬಿಡದೆ ನಶಿಸಿಹೋಗುತ್ತೆ. ನನಗೆ ಅದು ಗೊತ್ತು. ಆದರೆ ಈ ಪಾಪಾನ ಹೊರೋಕೆ ನಾನು ಸಿದ್ಧ.... ಅವಶ್ಯ ಅಂತ ತೋರಿದರೆ ನಾನು ಕೊಲ್ತೀನಿ! ನೆನಪಿರಲಿ.... ನಾನು ನನ್ನ ವಿಚಾರವಷ್ಟೇ ಹೇಳ್ತಿರೋದು. ನಾನು ಸತ್ತಾಗ ನನ್ನ ಪಾಪವೂ ಸಾಯುತ್ತೆ. ಭವಿಷ್ಯತ್ತಿನ ಮೇಲೆ ಅದರ ಕಲೆನ ಉಳಿಸಿ ಹೋಗೋದಿಲ್ಲ. ನನ್ನನ್ನು ಬಿಟ್ಟು ಬೇರೆ ಯಾರೊಬ್ಬನನ್ನೂ ಅದು ತಟ್ಟೋದಿಲ್ಲ!"

ಯಾವುದನ್ನೋ ಕತ್ತರಿಸಿಹಾಕುತ್ತಿದ್ದ ಹಾಗೆ, ತನ್ನ ಜೀವದಿಂದಲೇ ಯಾವು ದನ್ನೋ ಕೊಚ್ಚಿ ಕೊಚ್ಚಿ ಎಸೆಯುತ್ತಿದ್ದ ಹಾಗೆ, ಆತ ಕೊಠಡಿಯ ಉದ್ದಕ್ಕೂ ಅತ್ತಿತ್ತ ನಡೆದ. ದುಃಖದಿಂದಲೂ ಗಾಬರಿಯಿಂದಲೂ ತಾಯಿ ಅವನನ್ನೇ ನೋಡಿದಳು. ಅವನ ಹೃದಯಕ್ಕೆ ಹೊಡೆತ ಬಿದ್ದಿದೆ, ಅಲ್ಲೇನೋ ನೋವಿದೆ – ಎಂದು ಆಕೆ ಗ್ರಹಿಸಿದಳು. ಆ ಕೊಲೆಗೆ ಸಂಬಂಧಿಸಿದ ಭೀತಿಯ ಅಪಾಯದ ವಿಚಾರಗಳು ಆಕೆಯ ಮನಸ್ಸಿನಿಂದ ಎಂದೋ ದೂರವಾಗಿದ್ದುವು. ವೆಸೊವ್‌ಶ್ಚಿಕೋವ್ ಬಿಟ್ಟರೆ, ಪಾವೆಲ್‌ನ ಬೇರೆ ಯಾವ ಮಿತ್ರರೂ ಮಾಡಿರುವುದು ಸಾಧ್ಯವಿರಲಿಲ್ಲ.... ಅಂದ್ರೇಯ್‌ಯ ಬಲವಾದ ಎಡೆಬಿಡದ ವಾದಕ್ಕೆ ಕಿವಿಗೊಡುತ್ತ ಪಾವೆಲ್ ತಲೆ ಬಾಗಿಸಿ ಕುಳಿತಿದ್ದ.

"ಒಮ್ಮೊಮ್ಮೆ, ಕೆಲಸವಾಗಲೀಂತ ನಿನ್ನ ಮನಸ್ಸಾಕ್ಷಿಗೆ ನೀನು ವಿರುದ್ಧವಾಗಿಯೇ ಹೋಗಬೇಕಾಗುತ್ತೆ. ಎಲ್ಲವನ್ನೂ – ಇಡೀ ಹೃದಯವನ್ನೂ – ಬಿಟ್ಟುಕೊಡೋಕೆ ಸಿದ್ಧವಾಗಿರಬೇಕಾಗುತ್ತೆ. ಪ್ರಾಣ ಕೊಡೋದು – ಆ ಧ್ಯೇಯಕ್ಕಾಗಿ ಸಾಯೋದು – ಸುಲಭದ ಕೆಲಸ. ಅದಕ್ಕಿಂತಲೂ ಹೆಚ್ಚನ್ನು, ಪ್ರಾಣಕ್ಕಿಂತಲೂ ಹೆಚ್ಚು ಪ್ರಿಯ ವಾದ್ದನ್ನು, ಕೊಡಬೇಕಾಗುತ್ತೆ. ಅದನ್ನು ನೀನು ಕೊಟ್ಟಾಗ, ನೀನು ಯಾವುದಕೋಸ್ಕರ

ಹೋರಾಡ್ತಿದೀಯೋ ಆ ಸತ್ಯ, ಪ್ರಪಂಚದಲ್ಲೆಲ್ಲ ನಿನಗೆ ಅತ್ಯಂತ ಪ್ರಿಯವಾದ ಸತ್ಯ, ಎಷ್ಟು ಬಲವಾಗಿ ಬೆಳೆದಿದೆ ಅನ್ನೋದು ನಿನಗೆ ಗೊತ್ತಾಗುತ್ತೆ!"

ಕೊಠಡಿಯ ಮಧ್ಯದಲ್ಲಿ ಆತ ನಿಂತ. ಮುಖ ಬಾಡಿತ್ತು, ಕಣ್ಣುಗಳು ಅರೆ ಮುಚ್ಚಿದ್ದುವು. ದೃಢ ಆಶ್ವಾಸನೆಯನ್ನು ಕೊಡುವ ರೀತಿಯಲ್ಲಿ ಆತ ಕೈಯನ್ನು ಮೇಲಕ್ಕೆತ್ತಿದ್ದ:

"ನನಗೆ ಗೊತ್ತಿದೆ, ಜನ ತಮ್ಮ ಸೌಂದರ್ಯದ ಬಗೆಗೆ ತಾವೇ ಆಶ್ಚರ್ಯಪಡುವ ಒಂದು ದಿನ, ಪ್ರತಿಯೊಬ್ಬನೂ ಮಿನುಗುವ ನಕ್ಷತ್ರದ ಹಾಗೆ ಉಳಿದವರಿಗೆ ತೋರುವ ಒಂದು ದಿನ, ಮುಂದೆ ಬಂದೀತು. ಭೂಮಿಯ ಮೇಲೆಲ್ಲ, ಸ್ವತಂತ್ರರಾದ, ತಮ್ಮ ಸ್ವಾತಂತ್ರ್ಯದಲ್ಲಿ ಮಹಾ ಘನತೆ ಪಡೆದ, ಜನ ಆಗ ಕಾಣಿಸ್ತಾರೆ. ಎಲ್ಲರ ಹೃದಯಗಳೂ ತೆರೆದಿರ್ತವೆ. ಯಾವ ಹೃದಯದಲ್ಲೂ ಅಸೂಯೆ ಕಿಂಚಿತ್ತು ಇರದು, ದ್ವೇಷ ಏನೇನೂ ಇರದು. ಸ್ವತಂತ್ರರಾದವರಿಗೆ ಎಟಕದ ಎತ್ತರ ಉಂಟೆ? ಆಕಾಶದೆತ್ತರಕ್ಕೆ ಮನುಷ್ಯನ ಮೂರ್ತಿ ಆಗ ಏರ್ತದೆ. ಜೀವನವೆಲ್ಲ ಆ ಮಹಾ ಮಾನವನ ಸೇವೆಗಾಗಿ ಆಗ ಪರಿವರ್ತನೆಯಾಗ್ತದೆ. ಸೌಂದರ್ಯಕ್ಕೋಸ್ಕರ ಜನ ಸತ್ಯವಂತರಾಗಿಯೂ ಸ್ವತಂತ್ರರಾಗಿಯೂ ಬಾಳ್ತಾರೆ. ವಿಶ್ವವನ್ನೇ ಅಪ್ಪಿಕೊಳ್ಳಲು ಪ್ರೀತಿಸಲು ಅತ್ಯಂತ ಹೆಚ್ಚು ಸಮರ್ಥರಾದವರು, ಅತ್ಯಂತ ಹೆಚ್ಚು ಸ್ವತಂತ್ರರಾದವರು, ಪುರುಷೋತ್ತಮರಾಗ್ತಾರೆ. ಯಾಕೆಂದರೆ, ಅತಿ ಹೆಚ್ಚು ಸೌಂದರ್ಯ ಅವರಲ್ಲಿರ್ತದೆ! ಅವರು ನವಜೀವನದ ಮಹಾ ವ್ಯಕ್ತಿಗಳಾಗ್ತಾರೆ!"

ಕ್ಷಣಕಾಲ ಆತ ಸುಮ್ಮನಿದ್ದು, ಬಳಿಕ ನೆಟ್ಟಗೆ ನಿಂತುಕೊಳ್ಳುತ್ತ, ಆತ್ಮದ ಆಳದಿಂದ ಬಂದ ಸ್ವರದಲ್ಲಿ ಹೇಳಿದ:

"ಅಂಥ ಜೀವನಕ್ಕೋಸ್ಕರ – ನಾನೇನು ಮಾಡುವುದಕ್ಕೂ ಸಿದ್ಧ...."

ಮನೋವಿಕಾರದ ಸೆಳೆತದಿಂದ ಅವನ ಮುಖ ಒಂದು ಕ್ಷಣ ಕಳೆಗೆಟ್ಟಿತು. ಕಣ್ಣೀರು ದೊಡ್ಡದೊಡ್ಡ ಬಿಂದುಗಳಾಗಿ ಕೆನ್ನೆಗಳ ಮೇಲಿಂದ ಹರಿದು ಬಂತು. ಪಾವೆಲ್ ತಲೆಯೆತ್ತಿ ಅಗಲವಾಗಿ ತೆರೆದ ಕಣ್ಣುಗಳಿಂದ ಅವನನ್ನು ದಿಟ್ಟಿಸಿ ನೋಡಿದನು. ತಾಯಿಗೆ ಯಾವುದೋ ಅಪಾಯದ ಪೂರ್ವಗ್ರಹಿಕೆಯಾಯಿತು. ಕುಳಿತ್ತಿದ್ದ ಕುರ್ಚಿಯ ಮೇಲಿಂದ ಆಕೆ ಎದ್ದು ನಿಂತಳು.

"ನಿನಗೇನಾಗಿದೆ, ಅಂದ್ರೇಯ್?" ಎಂದು ಪಾವೆಲ್ ಮೃದುವಾಗಿ ಕೇಳಿದ.

ಅಂದ್ರೇಯ್ ತಲೆಯಲುಗಿಸಿ, ಮತ್ತೊಮ್ಮೆ ನೇರವಾಗಿ ಎತ್ತರವಾಗಿ ನಿಂತುಕೊಂಡು ತಾಯಿಯನ್ನೆ ದಿಟ್ಟಿಸುತ್ತಾ "ಅದು ಆದದ್ದನ್ನು ನಾನು ನೋಡಿದೆ... ನನಗೆ ಗೊತ್ತಿದೆ" ಎಂದನು.

ತಾಯಿ ಅವನತ್ತ ಧಾವಿಸಿ ಆ ಕೈಗಳೆರಡನ್ನೂ ಸೆಳೆದುಕೊಂಡಳು. ಬಲಗೈಯೊಂದನ್ನು ಬಿಡಿಸಿಕೊಳ್ಳಲು ಆತ ಯತ್ನಿಸಿದ. ಆದರೆ ಆಕೆ ಅದನ್ನು ಬಲವಾಗಿ ಅಮುಕಿ

ಕೊಂಡು, "ಶ್ ! ಓ ನನ್ನ ಮುದ್ದು ! ಮೆಲ್ಲಗೆ ! ನನ್ನ ಪ್ರೀತಿಯ ಮಗು...." ಎಂದು ಪಿಸುಗುಟ್ಟಿದಳು.

"ಒಂದು ಕ್ಷಣ ತಾಳಿ ! ಅದು ಹೇಗಾಯ್ತೂಂತ ಹೇಳ್ತೀನಿ...." ಎಂದು ಹೊಹೋಲ್ ತೊದಲಿದ.

"ಬೇಡ, ಬೇಡ. ಬೇಕಿಲ್ಲ, ಅಂದ್ರ್ಯೂಷ," ಎಂದು ತಾಯಿ ಕಣ್ಣೀರು ಸುರಿಸುತ್ತ, ಆತನನ್ನು ನೋಡುತ್ತ ಪಿಸುನುಡಿದಳು.

ಪಾವೆಲ್ ಮೆಲ್ಲನೆ ಅವರತ್ತ ನಡೆದು ಬಂದ. ಅವನ ಕಣ್ಣುಗಳೂ ತೇವವಾಗಿದ್ದುವು. ಮುಖ ಬಾಡಿತ್ತು. ಆತ ಮೆಲ್ಲನೆ ನಕ್ಕು, "ನೀನೇ ಆ ಕೆಲಸ ಮಾಡಿರ್ಬಹುದೂಂತ ತಾಯಿ ಹೆದರ್ಕೊಂಡಿದಾಳೆ" ಎಂದ.

"ಇಲ್ಲ – ನಾನು ಹೆದರ್ಕೊಂಡಿಲ್ಲ. ನಾನದನ್ನು ನಂಬೋದಿಲ್ಲ . ನನ್ನ ಕಣ್ಣಿಂದಲೇ ನಾನು ನೋಡಿದ್ದರೂ ಅದನ್ನು ನಂಬೋದಿಲ್ಲ !"

ತಲೆಯನ್ನು ಅತ್ತಿತ್ತ ತಿರುಗಿಸುತ್ತ, ಕೈಗಳನ್ನು ಬಿಡಿಸಿಕೊಳ್ಳಲೆತ್ನಿಸುತ್ತ, ಅಂದ್ರೇಯ್ ಹೇಳಿದ:

"ಒಂದು ಕ್ಷಣ ತಾಳಿ ! ನಾನಲ್ಲ ಮಾಡಿದ್ದು ಆದರೆ ನಾನು ಅದನ್ನು ತಪ್ಪಿಸಬಹುದಾಗಿತ್ತು...."

"ಸಾಕು ನಿಲ್ಲಿಸು, ಅಂದ್ರೇಯ್" ಎಂದ ಪಾವೆಲ್.

ಆ ಎತ್ತರದ ಶರೀರದ ನಡುಕವನ್ನು ನಿಲ್ಲಿಸಲೆಂಬಂತೆ ಆತ, ಅಂದ್ರೇಯ್‌ಯ ಒಂದು ಕೈಯನ್ನು ಬಿಗಿಯಾಗಿ ಹಿಡಿದುಕೊಂಡ. ತನ್ನ ಇನ್ನೊಂದು ಕೈಯನ್ನು ಅವನ ಭುಜದ ಮೇಲಿರಿಸಿದ. ಅಂದ್ರೇಯ್, ಪಾವೆಲ್‌ನತ್ತ ತಿರುಗಿ, ಮುರಿದ ಸ್ವರದಲ್ಲಿ ಹೇಳಿದ:

"ಅದು ಹಾಗೆ ಆಗ್ಬೇಕೂಂತ ನಾನು ಇಚ್ಛಿಸಿರಲಿಲ್ಲ, ಪಾವೆಲ್. ಆದದ್ದಿಷ್ಟು; ನೀನು ಮುಂದೆ ಹೋದಾಗ, ನಾನು ದ್ರಗುನೋವ್ ಜತೇಲಿ ಮಾತಾಡ್ತಾ ಮೂಲೇಲಿ ನಿಂತ್ಕೊಂಡೆ. ಆಗ ಇಸಾಯ್ ಬಂದು ಇನ್ನೊಂದು ಪಕ್ಕದಲ್ಲಿ ನಮ್ಮ ಮೇಲೆ ಕಣ್ಣಿಟ್ಟು ತುಚ್ಛವಾಗಿ ನೋಡ್ತಾ ನಿಂತ್ಕೊಂಡ. ಅವನನ್ನು ದಿಟ್ಟಿಸಿ, 'ರಾತ್ರಿಯೆಲ್ಲಾ ಅವನು ನನ್ನನ್ನೇ ಹಿಂಬಾಲಿಸ್ತಾನೆ. ಅವನ ಮೈ ಮುರೀತೀನಿ ನೋಡು'– ಎಂದು ದ್ರಗುನೋವ್ ಹೇಳ್ದ. ಹಾಗೆ ಹೇಳಿ ಅವನು ಹೊರಟ್ಹೋದ – ಮನೆಗೆ ಹೋದ – ಅಂತ ಭಾವಿಸ್ದೆ. ಆಮೇಲೆ ಇಸಾಯ್ ನನ್ನ ಸಮೀಪಕ್ಕೆ ಬಂದ....

ಆಳವಾಗಿ ಉಸಿರೆಳೆದ ಹೊಹೋಲ್.

"ಆ ನಾಯಿ ಅವಮಾನಿಸಿದ ಹಾಗೆ ನನ್ನನ್ನು ಯಾರೂ ಅವಮಾನಿಸಿದ್ದಿಲ್ಲ !"

ತಾಯಿ ಮೌನವಾಗಿ ಮೇಜಿನ ಬಳಿಗೆ ಅವನನ್ನು ನಡೆಸಿಕೊಂಡು ಬಂದು ಅಲ್ಲಿ ಕೂರಿಸಿದಳು. ತಾನೂ ಪಕ್ಕದಲ್ಲೇ ಕುಳಿತಳು. ಅವರ ಭುಜಗಳು ಒಂದಕ್ಕೊಂದು ತಾಗಿದ್ದುವು. ಪಾವೆಲ್ ಸಂಕಟಪಡುತ್ತ ಗಡ್ಡವನ್ನೆಳೆಯುತ್ತ ನಿಂತೇ ಇದ್ದ.

"ನಿಮ್ಮ ಹೆಸರೆಲ್ಲಾ ಅವರಿಗೆ ಗೊತ್ತಿದೆ; ರಹಸ್ಯ ಪೋಲೀಸರು ಬರೆದಿಟ್ಕೊಂಡಿದಾರೆ; ಮೇ ದಿನಾಚರಣೆಗೆ ಮುಂಚೆ ಎಲ್ಲರನ್ನ ಹಿಡಿದ್ಹಾಕ್ತಾರೆ – ಅಂತ ಹೇಳಿದ. ನಾನು ಉತ್ತರಕೊಡಲಿಲ್ಲ. ಸುಮ್ಮನೆ ನಕ್ಕೆ. ಆದರೆ ಒಳಗಿಂದೊಳಗೆ ಕುದಿಯುತ್ತಿದ್ದೆ. ಆಮೇಲೆ ಏನಂದ ಗೊತ್ತಾ? ನಾನೊಳ್ಳೇ ಬುದ್ಧಿವಂತ, ಈ ಹಾದಿ ಹಿಡಿದು ತಪ್ಪು ಮಾಡ್ದೆ, ಅದರ ಬದಲು ನಾನು...."

ಮಾತು ನಿಲ್ಲಿಸಿ ತನ್ನ ಎಡಗೈಯಿಂದ ಅಂದ್ರೇಯ್ ಮುಖವೊರಸಿಕೊಂಡ. ಆ ಕಣ್ಣುಗಳು ಒಣಗಿ ಮಿನುಗುತ್ತಿದ್ದುವು.

"ಅರ್ಥವಾಯ್ತು," ಎಂದ ಪಾವೆಲ್.

"'ಸರಕಾರದ ಸೇವೆ ಮಾಡಿದರೆ ಎಷ್ಟೋ ಲಾಭ' – ಎಂದ."

ಮುಷ್ಟಿ ಎತ್ತಿ ಝಾಡಿಸುತ್ತ ಅಂದ್ರೇಯ್, ಔಡುಗಚ್ಚಿದ್ದ ಹಲ್ಲುಗಳೆಡೆಯಿಂದ ಹೇಳಿದ:

"ಸರ್ಕಾರವಂತೆ – ಅದರ ಮುಂಡ ಮೋಚ್ತು! ನನ್ನ ಮುಖಕ್ಕಾತ ಗುದ್ದಿದ್ದರೂ ಮೇಲಾಗಿತ್ತು. ನನಗೆ ಅಷ್ಟು ಸಂಕಟವಾಗ್ತಿರ್ಲಿಲ್ಲ. ಪ್ರಾಯಶಃ ಅವನಿಗೂ ಹಿಗಾಗ್ತಿರ್ಲಿಲ್ಲ. ಅವನು ಆ ಕೆಟ್ಟ ವಾಸನೆಯ ಉಗುಳಿಂದ ನನ್ನ ಹೃದಯಕ್ಕೇ ಉಗುಳ್ದಾಗ ನಂಗೆ ಸಹಿಸೋಕಾಗ್ಲಿಲ್ಲ!"

ಅಂದ್ರೇಯ್ ಪಾವೆಲ್‌ನ ಕೈಯಿಂದ ತನ್ನ ಕೈ ಬಿಡಿಸಿಕೊಳ್ಳಲು ಜಗ್ಗುತ್ತಾ, ವಿದ್ವೇಷ ತುಂಬಿದ್ದ ಇಳಿದನಿಯಲ್ಲಿ ಮುಂದುವರಿಸಿದ:

"ಅವನ ಕೆನ್ನೆಗೊಂದು ಬಾರಿಸಿ ನಾನು ಮುಂದಕ್ಕೆ ಹೋದೆ. ಆಮೇಲೆ ನನ್ನ ಹಿಂದಿನಿಂದ "ಅಂತೂ ಕೊನೆಗಾದರೂ ಸಿಕ್ದೆ" ಎನ್ನುತ್ತಿದ್ದ ದ್ರಗುನೋವ್‌ನ ಸ್ವರ ಕೇಳಿಸ್ತು. ಆ ಮೂಲೆಯಲ್ಲಿ ಆತ ಕಾದು ನಿಂತಿದ್ದಾಂತ ಕಾಣುತ್ತೆ."

ಸ್ವಲ್ಪ ತಡೆದು ಅವನೆಂದ:

"ಹಿಂದುಗಡೆ ಏನಾಗ್ತಿತ್ತೂಂತ ನಾನು ಊಹಿಸ್ಕೊಂಡರೂ ತಿರುಗಿ ನೋಡ್ಲಿಲ್ಲ. ಹೊಡೆತದ ಸಪ್ಪಳ ಕೇಳಿಸ್ತು.... ಆದರೂ, ಕಪ್ಪೇನ ಮೆಟ್ಟಿ ಹಾರಿದವನ ಹಾಗೆ ನಾನು ಮುಂದೆ ನಡೀತಾನೇ ಇದ್ದೆ. ಕೆಲಸಮಾಡ್ತಿದ್ದಾಗ 'ಇಸಾಯ್‌ನ ಕೊಂದ್ಬಿಟ್ಟಿದ್ದಾರೆ!' ಅಂತ ಕೂಗು ಬಂತು. ನಾನು ನಂಬಲಿಲ್ಲ. ಆದರೆ ನನ್ನ ತೋಳು ನೋಯೋಕೆ ಶುರುವಾಯ್ತು. ಕೆಲಸ ಮಾಡೋಕೆ ಆಗಲಿಲ್ಲ. ನೋವೇನೂ ಆಗ್ತಿರ್ಲಿಲ್ಲ – ಆದರೆ ಯಾಕೋ ಕೈಯೇ ಕಳಚಿ ಹೋದ ಹಾಗೆ...."

ತನ್ನ ಕೈಯನ್ನಾತ ಕಳ್ಳನೋಟದಿಂದ ನೋಡಿಕೊಂಡ.

"ಬದುಕಿರೋವಷ್ಟು ಕಾಲ ಈ ಕಳಂಕಾನ ತೊಳೆಯೋಕೆ ಆಗೋಲ್ಲಾಂತ ಕಾಣುತ್ತೆ...."

"ನಿನ್ನ ಹೃದಯ ಸ್ವಚ್ಛವಾಗಿದೆಯಲ್ಲ – ಅದೇ ಮುಖ್ಯ," ಎಂದು ತಾಯಿ ಹೇಳಿದಳು.

ದೃಢ ಸ್ವರದಲ್ಲಿ ಹೊಹೋಲ್ ಎಂದ:

"ಅದಕ್ಕಾಗಿ ನನ್ನನ್ನು ನಾನು ದೂರ್‍ತಾ ಇಲ್ಲ – ಖಂಡಿತ ಇಲ್ಲ! ಆದರೂ ಅದು ಎಷ್ಟೊಂದು ಹೊಲಸು! ಅದರಲ್ಲಿ ನನ್ನ ಕೈ ಇರಬಾರದಾಗಿತ್ತು."

ಪಾವೆಲ್‌ಗೆ ಆ ಮಾತು ಒಪ್ಪಿಗೆಯಾಗಲಿಲ್ಲ.

"ನನಗೆ ಅರ್ಥವಾಗೋದಿಲ್ಲಪ್ಪ. ನೀನೇನೂ ಕೊಲೆ ಮಾಡಲಿಲ್ಲ – ಒಂದು ವೇಳೆ ಮಾಡಿದ್ದರೂ...."

"ಇಲ್ಲಿ ಕೇಳಪ್ಪ, ಕೊಲೆ ಆಗ್ತಾ ಇದೇಂತ ಗೊತ್ತಿದ್ದೂ ಗೊತ್ತಿದ್ದೂ ಅದನ್ನು ತಡೆಯೋಕೆ ನಾನೇನೂ ಮಾಡ್ದೇ ಇದ್ದರೆ...."

"ನನಗೆ ಅರ್ಥವಾಗೋದಿಲ್ಲ," ಎಂದು ಪಾವೆಲ್ ಮತ್ತೆ ಅದೇ ಮಾತು ಹೇಳಿದ. "ಅರ್ಥವಾಗ್ತಿದೆ, ಆದರೆ ಅದು ತಪ್ಪೂಂತ ಭಾವನೆಯಾಗೋದಿಲ್ಲ."

ಕಾರಖಾನೆಯ ಸಿಳ್ಳು ಕೇಳಿಸಿತು. ಅದರ ಆಗ್ರಹದ ಕರೆಗೆ ಅಂದ್ರೇಯ್ ಕಿವಿಗೊಟ್ಟು ಮೈ ಜಾಡಿಸುತ್ತ "ನಾನೀಗ ಕೆಲಸಕ್ಕೆ ಹೋಗೋದಿಲ್ಲ," ಎಂದ.

"ನಾನೂ ಹೋಗೋದಿಲ್ಲ," ಎಂದು ಪಾವೆಲ್‌ನೂ ದನಿಗೂಡಿಸಿದ.

"ನಾನಿಷ್ಟು ಸ್ನಾನ ಮಾಡ್ತೀನಿ," ಎಂದು ಸಣ್ಣನೆ ನಕ್ಕು, ಅಂದ್ರೇಯ್ ಬಟ್ಟೆ ಬರೆಗಳನ್ನು ಆಯ್ದುಕೊಂಡು ಸಾರ್ವಜನಿಕ ಸ್ನಾನಗೃಹಕ್ಕೆ ಹೋದನು.

ಮುಖ ಬಾಡಿಸಿಕೊಂಡೇ ಆತ ಮನೆಯಿಂದ ಹೊರಹೋದ. ಅವನು ಹೋಗುತ್ತಿದ್ದುದನ್ನೆ ಸಹಾನುಭೂತಿಯ ದೃಷ್ಟಿಯಿಂದ ತಾಯಿ ನೋಡಿದಳು.

ಅವನು ಮರೆಯಾದ ಬಳಿಕ ತಾಯಿಯೆಂದಳು:

"ನೀನು ಏನು ಬೇಕಾದರೂ ಹೇಳು, ಪಾಷ. ಒಬ್ಬ ಮನುಷ್ಯನನ್ನ ಕೊಲ್ಲೋದು ಪಾಪ ಅಂತ ನಂಗೆ ಗೊತ್ತಿದೆ. ಆದರೆ ನಾನು ಯಾರನ್ನೂ ಅಪರಾಧಿಯಾಗಿ ಭಾವಿಸೋದಿಲ್ಲ. ಇಸಾಯ್ ವಿಷಯದಲ್ಲಿ ಕನಿಕರ ನಂಗೆ – ಅಂಥ ಕ್ಷುಲ್ಲಕ ಮನುಷ್ಯನಾಗಿದ್ದ ಅವನು. ಅವನನ್ನು ಇವತ್ತು ನೋಡ್ದಾಗ, ಹಿಂದೆ ನಿನ್ನ ಗಲ್ಲಿಗೇರಿಸ್ತೀನಿ ಅಂತ ಆತ ಬೆದರಿಸಿದ್ದು ನೆನಪಾಯ್ತು. ಆದರೆ ಅದರಿಂದ ಅವನನ್ನ ದ್ವೇಷಿಸ್ಬೇಕೂಂತಾಗಲೀ ಸತ್ತಿದ್ದಕ್ಕೆ ಸಂತೋಷಪಡಬೇಕಂತಾಗಲಿ, ಅನ್ನಿಸಲಿಲ್ಲ. ಸುಮ್ಮನೆ ಕನಿಕರವಾಯಿತು. ಆದರೆ ಈಗ ಕನಿಕರ ಕೂಡಾ ಆಗ್ತಾ ಇಲ್ಲ."

ಆಕೆ ಸುಮ್ಮನಾಗಿ, ವಿಚಾರಕ್ರಾಂತಳಾದಳು. ಆಶ್ಚರ್ಯದ ಮುಗುಳ್ನಗೆಯೊಡನೆ ಆಕೆ ಹೇಳಿದಳು:

"ಓ ದೇವರೆ! ಪಾಷ, ನಾನು ಏನು ಹೇಳ್ದೆ ಕೇಳಿದಿಯಾ?"

ಅವನಿಗದು ಕೇಳಿಸಿಯೇ ಇರಲಿಲ್ಲ. ನೆಲವನ್ನೇ ದಿಟ್ಟಿಸಿಕೊಂಡು ಅತ್ತಿತ್ತ ನಡೆಯುತ್ತ ವ್ಯಗ್ರತೆಯ ಧ್ವನಿಯಿಂದ ಅವನು ಹೇಳಿದ:

"ಇದು ಜೀವನ! ಒಬ್ಬರನ್ನೊಬ್ಬರು ನೋಡಿ ಜನ ಹ್ಯಾಗೆ ದ್ವೇಷಿಸೋ ಹಾಗಾಗಿದೆ! ಇಷ್ಟವಿಲ್ದೇ ಇದ್ದರೂ ಹೋಗಿ ಯಾರನ್ನಾದರೂ ಹೊಡೀತೀವಿ. ಹೊಡಿಯೋದೂ

ಯಾರನ್ನ? ನಮ್ಮಷ್ಟೇ ನಿರ್ಗತಿಕವಾದ ಇನ್ನೊಂದು ಪ್ರಾಣಿಯನ್ನು ಆತನೋ ನಮಗಿಂತಲೂ ಹೆಚ್ಚು ನಿರ್ಭಾಗ್ಯ – ಯಾಕೆಂದರೆ ಇವನು ಮೂರ್ಖ. ಪೋಲೀಸರು, ರಹಸ್ಯ ಪೋಲೀಸರು, ಗೂಢಚಾರರು – ಎಲ್ಲರೂ ನಮ್ಮ ವೈರಿಗಳು. ಆದರೆ ಅವರೆಲ್ಲರೂ ನಮ್ಮ ಹಾಗೆಯೇ ಬಡವರು. ನಮ್ಮ ಹಾಗೆಯೇ ಅವರ ರಕ್ತಾನೂ ಹೀರ್ತಾರೆ. ನಮ್ಮ ಹಾಗೆಯೇ ಅವರನ್ನ ಮನುಷ್ಯರೆಂದು ಭಾವಿಸೋದಿಲ್ಲ. ಎಲ್ಲ ವಿಧದಲ್ಲೂ ಒಂದೇ ರೀತಿ! ಆದರೆ ಮಾಲೀಕರು ಒಬ್ಬರ ವಿರುದ್ಧ ಇನ್ನೊಬ್ಬರನ್ನ ಎತ್ತಿ ಕಟ್ತಾರೆ; ಹೆದರಿಕೆ ಹುಟ್ಟಿಸಿ ಕಟ್ಟು ಕತೆ ಹೇಳಿ ಜನರನ್ನ ಕುರುಡರನ್ನಾಗಿ ಮಾಡ್ತಾರೆ. ಅವರ ಕೈಕಾಲು ಕಟ್ಟಿ, ಹಿಂಡಿ, ರಕ್ತಹೀರಿ, ಒಬ್ಬರನ್ನೊಬ್ಬರು ಹೊಡೆದು ಮುರಿಯೋ ಹಾಗೆ ಮಾಡ್ತಾರೆ. ಮನುಷ್ಯರನ್ನ, ಬಂದೂಕು – ದೊಣ್ಣೆ – ಕಲ್ಲುಗಳಾಗಿ ಮಾರ್ಪಡಿಸಿ 'ಇದು ಸರಕಾರ!' ಅಂತಾರೆ."

ಆತ ತಾಯಿಯ ಬಳಿಗೆ ಬಂದು ನಿಂತ:

"ಇದು ಮಹಾಪಾತಕ, ಅಮ್ಮ! ಕೋಟಿ ಕೋಟಿ ಜನರ ಅತಿ ಕ್ರೂರವಾದ ಕೊಲೆ! ಮಾನವರ, ಅವರ ಆತ್ಮಗಳ, ಕೊಲೆ.... ಅರ್ಥವಾಗುತ್ತಾ? ಅವರು ಆತ್ಮಗಳ ಕೊಲೆಗಡಕರು! ನಮಗೂ ಅವರಿಗೂ ಇರುವ ವ್ಯತ್ಯಾಸ ತಿಳೀತಾ ನಿಂಗೆ? ನಾವು ಒಬ್ಬನನ್ನ ಹೊಡೀತೀವಿ. ಅದು ಅಸಹ್ಯವಾಗಿರುತ್ತೆ, ಲಜ್ಜಾಸ್ಪದವಾಗಿರುತ್ತೆ, ಮನಸ್ಸು ನೋಯುತ್ತೆ; ಎಲ್ಲದಕ್ಕಿಂತಲೂ ಹೆಚ್ಚು – ಅಸಹ್ಯವಾಗಿರುತ್ತೆ! ಆದರೆ ಅವರು ಸಹಸ್ರಾರು ಜನರನ್ನ ಸದ್ದಿಲ್ಲದೆ, ನಿರ್ದಯವಾಗಿ, ಯಾವ ಎದೆಗುದಿಯೂ ಇಲ್ಲದೆ, ಕೊಂದುಹಾಕ್ತಾರೆ. ಅದರಿಂದ ಒಂದು ರೀತಿಯ ಸಂತೋಷವೂ ಆಗ್ತದೆ ಅವರಿಗೆ. ಜನರನ್ನ ಸಾಯೋ ಹಾಗೆ ಹಿಂಡೋಕೆ ಅವರು ಕೊಡೋ ಕಾರಣವೇನು? ಒಂದೇ ಕಾರಣ. ಚಿನ್ನ ಬೆಳ್ಳಿ, ಆಸ್ತಿ ಪಾಸ್ತಿಗಳ್ನ, ನಮ್ಮ ಮೇಲೆ ಅಧಿಕಾರ ಚಲಾಯಿಸೋಕೆ ಬೇಕಾದ ಕ್ಷುದ್ರ ವಸ್ತುಗಳ್ನ ಕಾಪಾಡೋದೊಂದೇ ಅವರ ಉದ್ದೇಶ. ಯೋಚಿಸಿ ನೋಡು. ಜನರನ್ನ ಕೊಲೆಮಾಡಿ ಅವರ ಆತ್ಮಗಳನ್ನ ಊನಮಾಡೋವಾಗ ಅವರು ರಕ್ಷಿಸ್ತಿರೋದು ತಮ್ಮ ಪ್ರಾಣಾನಲ್ಲ. ಅವರು ಅಂತ ಕೃತ್ಯ ಮಾಡೋದು ತಮಗೋಸ್ಕರ ಅಲ್ಲ – ತಮ್ಮ ಆಸ್ತಿ ಐಶ್ವರ್ಯಕ್ಕೋಸ್ಕರ! ತಮ್ಮ ಒಳಗಿರೋದನ್ನಲ್ಲ ಅವರು ರಕ್ಷಿಸೋದು – ಹೊರಗಿರೋದನ್ನ...."

ತಾಯಿಯ ಕೈಗಳನ್ನು ಪಾವೆಲ್ ತನ್ನ ಕೈಗಳಲ್ಲಿರಿಸಿಕೊಂಡ. ಬಾಗುತ್ತ, ಅವುಗಳನ್ನೊತ್ತಿಕೊಂಡು ಹೇಳಿದ:

"ಅದೆಲ್ಲಾ ಎಷ್ಟು ಹೇಸಿಕೆ – ನಾಚಿಕೆಗೇಡು – ಹೊಲಸೂಂತ ನೀನು ಮನಗಂಡರೆ, ನಾವು ಪ್ರತಿಪಾದಿಸ್ತಿರೋ ಸತ್ಯ ನಿನಗೆ ಅರ್ಥವಾದೀತು. ಇದೆಷ್ಟು ಸೊಗಸಾದದ್ದು ಒಳಿದಾದದ್ದು ಅಂತ ನಿನಗೆ ಕಂಡೀತು!"

ತಾಯಿ ಎದ್ದಳು. ಬಲವಾದ ಕ್ಷೋಭೆ ಅವಳ ಮನಸ್ಸನ್ನು ಕಾಡಿತು. ಒಂದು ಶುಭ್ರ ಜ್ವಾಲೆಯಾಗುವಂತೆ ತನ್ನ ಹೃದಯವನ್ನು ಮಗನ ಹೃದಯದೊಡನೆ ಬೆರೆಸ

ಬೇಕೆಂಬ ಆಸೆ ಅವಳನ್ನು ಆವರಿಸಿತು. "ಸ್ವಲ್ಪ ತಡೆ, ಪಾವೆಲ್, ಸ್ವಲ್ಪ ತಡೆ! ನನಗೆ ತಿಳೀತಿದೆ – ಆದರೆ ಸ್ವಲ್ಪ ತಡೆ!" ಎಂದು ಅವಳು ಬಲು ಕಷ್ಟದಿಂದ ತೊದಲಿದಳು.

## ೨೫

ಯಾರೋ ಹೆಚ್ಚು ಸಪ್ಪಳ ಮಾಡುತ್ತ ಬಾಗಿಲಿನ ಬಳಿಗೆ ಬಂದ ಹಾಗಾಯಿತು. ತಾಯಿ ಮತ್ತು ಮಗ ಇಬ್ಬರೂ ಬೆಚ್ಚಿಬಿದ್ದು ಪರಸ್ಪರ ನೋಡಿಕೊಂಡರು.

ಮೆಲ್ಲನೆ ಬಾಗಿಲು ತೆರೆಯಿತು. ರೀಬಿನ್ ಒಳಬಂದ.

ಅವನು ತಲೆಯೆತ್ತಿ, ಮುಗುಳ್ನಗುತ್ತ "ಇಗೋ ಬಂದಿದೀನಿ! ಅಲ್ಲಿ ಇಲ್ಲಿ ಸುತ್ತಾಡ್ಕೊಂಡು, ಏನು ಎತ್ತ ಅಂತ ಕೇಳ್ಕೊಂಡು, ಕೊಟ್ಟ ಮಾತಿಗೆ ಸರಿಯಾಗಿ, ಅವಿಶ್ವಾಸಿ ಬಂದೇ ಬಿಟ್ಟಿದ್ದಾನೆ – ಇಗೋ!" ಎಂದ.

ಕುರಿಯ ಚರ್ಮದ ಕೋಟನ್ನಾತ ಹೊದ್ದಿದ್ದ. ಅದರ ಮೇಲೆ ಟಾರಿನ ಕಲೆಗಳಿದ್ದುವು. ಕಾಲಲ್ಲಿ ಮರದ ತೊಗಟೆಯ ಪಾದರಕ್ಷೆಗಳಿದ್ದುವು. ಒಂದು ಜೊತೆ ಕೈಚೀಲಗಳನ್ನು ಸೊಂಟದ ಪಟ್ಟಿಯೊಳಕ್ಕೆ ಸೇರಿಸಿದ್ದ. ಉಣ್ಣೆಯ ಟೋಪಿಯನ್ನು ಧರಿಸಿದ್ದ.

"ಹ್ಯಾಗಿದೀರಾ? ಆರೋಗ್ಯ ಹ್ಯಾಗಿದೆ, ಪಾವೆಲ್? ಅಂತೂ ಬಿಟ್ರಾ? ನೀನು ಹ್ಯಾಗಿದ್ದಿಯಾ, ಪೆಲಗೇಯ ನೀಲೊವ್ನ?"

ಅವನು ಹಲ್ಲು ಕಿಸಿದು ವಿಸ್ತಾರವಾಗಿ ನಕ್ಕ. ಸ್ವರ ಮೊದಲಿಗಿಂತ ಹೆಚ್ಚು ಮೃದುವಾಗಿತ್ತು. ಮುಖದ ಮೇಲೆ ಗಡ್ಡ ಇನ್ನೂ ದಟ್ಟವಾಗಿ ಬೆಳೆದಿತ್ತು.

ತಾಯಿಗೆ ಅವನನ್ನು ನೋಡಿ ಸಂತೋಷವಾಯಿತು. ಮುಂದೆ ಬಂದು ಅವನ ದೊಡ್ಡ ದಪ್ಪನಾಗಿದ್ದ ಕೈಯ್ಯನ್ನು ಕುಲುಕಿದಳು.

ಟಾರಿನ ಕಟುವಾಗಿದ್ದ ಬಲವಾಗಿದ್ದ ವಾಸನೆಯನ್ನು ದೀರ್ಘವಾಗಿ ಉಸಿರೆಳೆದುಕೊಳ್ಳುತ್ತ ಅವಳೆಂದಳು: "ಬಂದೆಯಲ್ಲಾ!.... ನಿನ್ನ ನೋಡಿ ಎಷ್ಟು ಖುಷಿ ಆಗಿದೇಂತ!"

ಪಾವೆಲ್ ಮುಗುಳ್ನಕ್ಕು ರೀಬಿನ್‌ನನ್ನು ನೋಡುತ್ತಾ, "ಒಳ್ಳೆ ರೈತ ಇದ್ದ ಹಾಗಿದೀಯಲ್ಲ," ಎಂದ.

ಮೇಲುಹೊದಿಕೆ ಕೈ ಚೀಲಗಳನ್ನೆಲ್ಲ ಮೆಲ್ಲನೆ ರೀಬಿನ್ ಒತ್ತಟ್ಟಿಗಿರಿಸಿದ.

"ಸರಿ ಹೇಳ್ದೆ – ಪುನಃ ರೈತನಾಗಿದ್ದೀನಿ. ನೀವು ಹೆಚ್ಚು ಹೆಚ್ಚು ಶಹರದವರಾಗ್ತಾ ಇದ್ದೀರಿ, ನಾನು ಅದರ ವಿರುದ್ಧ.... ಹೆಚ್ಚು ಹೆಚ್ಚು ರೈತನಾಗ್ತಿದೀನಿ!"

ತನ್ನ ಬಣ್ಣಬಣ್ಣದ ಅಂಗಿಯನ್ನು ಸರಿಪಡಿಸಿಕೊಳ್ಳುತ್ತಿದ್ದಂತೆ, ಅತ್ತಿತ್ತ ನಡೆದು, ಕೊಠಡಿಯನ್ನು ಆತ ಪರೀಕ್ಷಿಸಿದ.

"ಇಲ್ಲಿ ಪುಸ್ತಕಗಳು ಜಾಸ್ತಿಯಾಗಿವೆ ಹೊರತಾಗಿ ಹೊಸತು ಬೇರೆ ಹೆಚ್ಚೇನೂ ಇಲ್ಲ. ಹುಂ.... ಸರಿ – ಈಗ ಏನೇನು ಎಲ್ಲ ವಿಷಯ ನಂಗೆ ಹೇಳಿ."

ಕಾಲುಗಳನ್ನು ಹೆಚ್ಚು ಹೆಚ್ಚು ಅಗಲಿಸಿಕೊಂಡು ಎಡಗೈಯನ್ನು ತೊಡೆಯ ಮೇಲಿಡುತ್ತ, ಕರಿಯ ಕಣ್ಣುಗಳಿಂದ ಪಾವೆಲ್‌ನ ಮುಖವನ್ನೇ ಪರೀಕ್ಷಿಸುತ್ತ, ಒಂದು ಮುಗುಳ್ನಗೆಯಿಂದ ಉತ್ತರವನ್ನು ಇದಿರುನೋಡುತ್ತ, ರೀಬಿನ್ ಕುಳಿತ.

"ಎಲ್ಲವೂ ಸುಸೂತ್ರವಾಗಿ ನಡೀತಿದೆ," ಎಂದ ಪಾವೆಲ್.

"ನಾವು ಉಳ್ತೀವಿ, ಬಿತ್ತುತ್ತೀವಿ, ಬೆಳೆಯೋದನ್ನ ನೋಡ್ತೀವಿ, ಭಟ್ಟಿ ಇಳಿಸ್ತೀವಿ, ಆ ಮೇಲೆ ವರ್ಷವೆಲ್ಲ ನಿದ್ದೆ ಹೋಗ್ತೀವಿ – ಹೀಗೆ ತಾನೆ?" ಎಂದು ರೀಬಿನ್ ನಕ್ಕ.

"ಮಿಹಯಿಲ್ ಇವಾನೊವಿಚ್, ನಿಮ್ಮ ಕೆಲಸ ಹ್ಯಾಗೆ ನಡೆದಿದೆ ಹೇಳಿ," ಎಂದು ಪಾವೆಲ್, ರೀಬಿನ್ನನೆದುರು ಕುಳಿತುಕೊಳ್ಳುತ್ತ ಹೇಳಿದ.

"ಚೆನ್ನಾಗಿಯೇ ಇದೆ. ಯೆಗಿಲ್‌ದೇಯೆವೊನಲ್ಲಿದ್ದೀನಿ – ಕೇಳಿದ್ದೀರಾ ಆ ಹೆಸರು? – ಯೆಗಿಲ್‌ದೇಯೆವೊ. ಸೊಗಸಾದ ಗ್ರಾಮ. ವರ್ಷಕ್ಕೆರಡು ಜಾತ್ರೆಗಳು, ಎರಡು ಸಾವಿರ ನಿವಾಸಿಗಳು. ತುಂಬ ರೋಸಿದ ಜನ. ಯಾರಿಗೂ ಸ್ವಂತ ಜಮೀನಿಲ್ಲ. ಗೇಣಿಗೆ ಮಾಡಿಕೊಂಡಿರುವರೇ ಜಾಸ್ತಿ. ಜಮೀನೂ ಅಷ್ಟೇ – ಏನೂ ಚೆನ್ನಾಗಿಲ್ಲ. ಅಲ್ಲಿ ರಕ್ತ ಹೀರೋ ಒಂದು ಜಂತುವಿನ ಕೈಕೆಳಗೆ ನಾನು ಕೆಲಸಮಾಡ್ತಿದ್ದೀನಿ. ಬೆಲ್ಲದ ಮೇಲೆ ನೊಣಗಳು ಹ್ಯಾಗೋ ಹಾಗೆ, ಆ ಜಾಗದಲ್ಲೆಲ್ಲಾ ಅಂಥ ತಿಗಣೆಗಳಿವೆ. ಕೆಲಸ – ಇಜ್ಜಲು ಸುಡೋದು, ಟಾರು ಮಾಡೋದು. ಇಲ್ಲಿ ಆಗ್ತಿದ್ದ ಸಂಪಾದನೆಗಿಂತ ಕಾಲಂಶ ಆಗತ್ತೆ ಅಲ್ಲಿ. ಶ್ರಮ ಮಾತ್ರ ಇಲ್ಲಿಗಿಂತ ಇಮ್ಮಡಿ. ಹುಂ. ಆ ತಿಗಣೆ ಕೆಳಗೆ ಏಳು ಜನ ದುಡೀತೀವಿ. ಅವರೆಲ್ಲಾ ಒಳ್ಳೆಯವರು. ಯುವಕರು. ನನ್ನೊಬ್ಬನ್ನ ಬಿಟ್ಟರೆ ಉಳಿದವರೆಲ್ಲ ಸ್ಥಳೀಯರು. ಎಲ್ಲರಿಗೂ ಓದೋಕೆ ಬರೆಯೋಕೆ ಬರುತ್ತೆ. ಅವರಲ್ಲೊಬ್ಬನಿದಾನೆ – ಯೆಫೀಮ್ ಅಂತ. ಅವನನ್ನ ಹಿಡಿತದಲ್ಲಿಡೋ ಹಾಗೇ ಇಲ್ಲ. ಅವನನ್ನ ಏನ್ಮಾಡಬೇಕೋ ಗೊತ್ತಾಗೋದಿಲ್ಲ!"

"ನೀವು ಹ್ಯಾಗೆ ಮಾಡ್ತಿದೀರಿ? ಅವರ ಜತೇಲಿ ಚರ್ಚೆ ನಡಿಸ್ತಿರೇನು?" ಎಂದು ಪಾವೆಲ್ ಆತುರದಿಂದ ಕೇಳಿದನು.

"ನಾನೇನು ನಾಲಿಗೆ ಬಿಗಿಹಿಡ್ಕೊಂಡು ಕೂತಿರ್ತೀನಿ ಅಂತ ತಿಳಿದಿಯಾ? ಹುಂ! ನಿಮ್ಮ ಕರಪತ್ರಗಳನ್ನೆಲ್ಲಾ ತಗೊಂಡು ಹೋಗಿದ್ದೆ. ಒಟ್ಟು ಮೂವತ್ತನಾಲ್ಕು ಇದ್ದುವು. ಆದರೆ ನಾನು ಹೆಚ್ಚಾಗಿ ಉಪಯೋಗಿಸೋದು ಬೈಬಲನ್ನ. ಬೈಬಲಿನೊಳಗೆ ಬೇಕಾದಷ್ಟಿದೆ. ದಪ್ಪನೆಯ ಪುಸ್ತಕ. ಅಧಿಕೃತ, ಧರ್ಮ ಗುರುಗಳ ಒಪ್ಪಿಗೆ ಇದೆ ಅದಕ್ಕೆ. ಅದೀಗ ಬೇಕಾದ್ದು! ಅದರಲ್ಲಿ ಬರೆದದ್ದನ್ನು ಓದಿ ನಮ್ಮ ಶ್ರದ್ಧೇನ ವಿವರಿಸ್ಬಹುದು."

ಆತ ನಕ್ಕು, ಪಾವೆಲ್‌ನ ಕಡೆಗೆ ಕಣ್ಣುಮಿಟಿಕಿಸಿದ.

"ಆದರೆ ಅದೊಂದೇ ಸಾಲದು. ಅದಕ್ಕೇ ಪುಸ್ತಕಗಳನ್ನು ಕೇಳಿಕೊಂಡು ಹೋಗೋಣಾಂತ ಬಂದಿದ್ದೀನಿ. ನಾವು ಇಬ್ಬರು ಬಂದಿದೀವಿ – ಯೆಫೀಮ್ ಇದಾನೆ ನನ್ನತೇಲಿ. ಒಂದು ಗಾಡಿ ಟಾರು ಒಯ್ಯೋ ಕೆಲಸ ನಮಗೆ ಸಿಗ್ತು. ಒಳ್ಳೇ ಅವಕಾಶ! ಸ್ವಲ್ಪ

ಬಳಸು ಹಾದಿ ಹಿಡಿದು ಇಲ್ಲಿಗೆ ಬಂದಿದ್ದೀವಿ.... ಆ ಯೆಫೀಮ್ ಬರೋಕೆ ಮುಂಚೆ ಪುಸ್ತಕಗಳನ್ನ ಕೊಡು – ಎಲ್ಲಿಂದ ಬರುತ್ತೆ ಏನು ಅನ್ನೋದೆಲ್ಲಾ ಅವನಿಗೆ ಹೆಚ್ಚು ಗೊತ್ತಾಗೋದು ಸರಿಯಲ್ಲ."

ತಾಯಿ ರೀಬಿನ್‌ನನ್ನೆ ನೋಡಿದಳು. ಬಟ್ಟೆಯಷ್ಟೇ ಅಲ್ಲದೆ ಬೇರೆಯೂ ಏನೋ ಬದಲಾವಣೆ ಅವನಲ್ಲಿ ಆಗಿದ್ದ ಹಾಗೆ ಕಂಡಿತು. ಅವನ ವರ್ತನೆಯಲ್ಲಿ ಹಿಂದಿನ ಆಡಂಬರ ವಿರಲಿಲ್ಲ. ದೃಷ್ಟಿಯಲ್ಲಿ ಮುಚ್ಚುಮರೆಯಿತ್ತು. ಕಣ್ಣುಗಳು ಹಿಂದಿನ ಹಾಗೆ ಸರಳ ವಾಗಿರಲಿಲ್ಲ.

"ಅಮ್ಮ, ಪುಸ್ತಕ ತರ್‍ತೀಯಾ? ಯಾವು ಯಾವುದೂಂತ ಅವರಿಗೆ ಗೊತ್ತಿದೆ. ಹಳ್ಳೀಗೆ ಕಳಿಸೋಕೆ ಅಂತ ಹೇಳು," ಎಂದ ಪಾವೆಲ್.

"ಸರಿ. ಚಾ ಇಳಿಸಿ ಹೊರಡ್ತೀನಿ" ಎಂದು ತಾಯಿಯೆಂದಳು.

ರೀಬಿನ್ ನಕ್ಕು ಹೇಳಿದ:

"ಇದರಲ್ಲಿ ನೀನೂ ಸೇರ್ಕೊಂಡಿದಿಯಾ, ಪೆಲಗೇಯ ನೀಲೊವ್ನ? ಹುಂ. ಪುಸ್ತಕ ಬೇಕೂಂತ ಅಲ್ಲಿ ಬಹಳ ಜನ ಕೇಳ್ತಾರೆ. ಈ ಓದುವ ಅಭ್ಯಾಸಕ್ಕೆ ಅಲ್ಲಿಯ ಉಪಾಧ್ಯಾಯ ಕಾರಣ. ಪಾದ್ರಿ ಮನೆತನದವನಾದರೂ ಒಳ್ಳೆಯವನು; ಏಳು ಮೈಲಿ ಆಚೆ ಒಬ್ಬಳು ಉಪಾಧ್ಯಾಯಿನಿಯೂ ಇದ್ದಾಳೆ. ಅವರು ನಿಷಿದ್ಧ ಪುಸ್ತಕಗಳನ್ನ ಹಂಚೋದಿಲ್ಲ. ಕೆಲಸ ಹೋದೀತೂಂತ ಭಯ. ಆದರೆ ನಂಗೆ ಬೇಕಾದ್ದು ನಿಷಿದ್ಧ ಪುಸ್ತಕಗಳು – ಸ್ವಲ್ಪ ಕಹಿ ಖಾರ ಇರೋ ಪುಸ್ತಕಗಳು. ಪೋಲೀಸ್ ಅಧಿಕಾರಿ ಅಥವಾ ಪಾದ್ರಿ ಆ ಪುಸ್ತಕಗಳನ್ನ ನೋಡಿದರೆ, ಉಪಾಧ್ಯಾಯರಲ್ಲದೆ ಬೇರೆ ಯಾರ ಮೇಲೆ ಆರೋಪ ಹೊರಿಸ್ತಾನೆ ಹೇಳು? ಅಷ್ಟೊತ್ತಿಗೆ ನಾನು ಬೇರೆ ಕಡೆಗೆ ಎದ್ಬಿಡ್ತೀನಿ."

ತನ್ನ ತಂತ್ರದ ಬಗೆಗೆ ತಾನೇ ಸಂತೋಷಪಡುತ್ತ ರೀಬಿನ್ ಹಲ್ಲು ಕಿಸಿದ.

"ಆಹಾ! ನೋಡೋಕೆ ಕರಡಿ ಹಾಗಿದೀಯಾ, ಆದರೆ ನಿಜವಾಗಿ ಬುದ್ಧಿ ನರಿಯ ಹಾಗೆ!" ಎಂದು ತಾಯಿ ಮನಸ್ಸಿನಲ್ಲಿಯೇ ಅಂದಳು.

"ಉಪಾಧ್ಯಾಯರು ನಿಷಿದ್ಧ ಸಾಹಿತ್ಯ ಹಂಚ್ತಿದಾರೇಂತ ಸಂಶಯ ಬಂದರೆ, ಅವರನ್ನು ಜೈಲಿಗೆ ಕಳಿಸ್ಬಹುದೇನೋ?" ಎಂದು ಪಾವೆಲ್ ಕೇಳಿದ.

"ಹೌದು ಮತ್ತೆ. ಅದರಲ್ಲೇನು?"

"ಆದರೆ ತಪ್ಪು ಮಾಡೋರು ನೀವು, ಅವರಲ್ಲ. ಜೈಲಿಗೆ ಹೋಗಬೇಕಾದೋರು ನೀವು."

"ಒಳ್ಳೇ ಮಾತೇಳ್ದೆ!" ಎಂದು ತನ್ನ ಮೊಣಕಾಲನ್ನು ತಟ್ಟುತ್ತ ರೀಬಿನ್ ನಕ್ಕ. "ನನ್ನ ಮೇಲೆ ಯಾರಿಗೂ ಸಂಶಯ ಇರೋದಿಲ್ಲ. ರೈತರು ಅಂಥ ಕೆಲಸ ಮಾಡ್ತಾರಾ? ಪುಸ್ತಕ ಓದೋರೆಲ್ಲ ಕಲಿತವರು. ಅವರೇ ಹಂಚಬೇಕಲ್ದೆ ಬೇರೆ ಯಾರು ಮಾಡ್ತಾರೆ?"

ರೀಬಿನ್ನನ ವಾದ ಸರಣಿ ಪಾವೆಲ್‌ಗೆ ಅರ್ಥವಾಗಲಿಲ್ಲವೆಂದು ತಾಯಿ ಭಾವಿ

ಸಿದಳು. ಮಗನು ಕಣ್ಣನ್ನು ಕಿರಿದುಗೊಳಿಸಿದ್ದನ್ನು ಅವಳು ಕಂಡಳು. ಅವನು ಸಿಟ್ಟಾ ದಾಗಲೆಲ್ಲ ಹಾಗೆ ಮಾಡುತ್ತಿದ್ದನೆಂದು ತಾಯಿಗೆ ಗೊತ್ತಿತ್ತು.

ಅವಳು ಎಚ್ಚರಿಕೆಯಿಂದ ಮೆಲ್ಲನೆ ಹೇಳಿದಳು:

"ತಾನೇ ಕೆಲಸ ಮಾಡ್ಬೇಕು, ಆದರೆ ದೂರು ಬೇರೆಯವರ ಮೇಲೆ ಬರ್ಬೇಕು, ಅಂತ ಮಿಹಯಿಲ್ ಇವಾನೊವಿಚ್‌ನ ಯೋಚ್ನೆ...."

"ಸರಿ ಹೇಳಿದೆಯಮ್ಮ. ಸದ್ಯಕ್ಕೆ ನನ್ನ ಯೋಚ್ನೆ ಹಾಗೆ," ಎಂದು ರೀಬಿನ್ ಗಡ್ಡವನ್ನು ತೀಡುತ್ತ ಹೇಳಿದ.

ಜಡವಾದ ಸ್ವರದಲ್ಲಿ ಪಾವೆಲ್‌ನೆಂದ:

"ಅಮ್ಮ! ನಮ್ಮಲ್ಲೇ ಒಬ್ಬ – ಉದಾಹರಣೆಗೆ ಅಂದ್ರೇಯ್‌ನೇಂತಿಟ್ಕೊ – ಏನಾದರೊಂದು ಕೆಲಸಮಾಡಿ, ನನ್ನ ಬೆನ್ನ ಹಿಂದೆ ಅಡಗಿಕೊಂಡು, ನಾನು ಜೈಲಿಗೆ ಹೋಗೋ ಹಾಗೆ ಮಾಡಿದರೆ, ಹ್ಯಾಗೆ ಅನಿಸೀತು ನಿಂಗೆ?"

ಆ ಮಾತು ಕೇಳಿ ಬೆಚ್ಚಿಬಿದ್ದಳು ತಾಯಿ.

"ಒಬ್ಬ ಸಂಗಾತಿಗೆ ಅಂಥ ಮೋಸ ಹ್ಯಾಗೆ ಮಾಡೋಕಾಗ್ತತೆ?" ಎಂದು ತಲೆಯಾಡಿಸುತ್ತಾ ಅವಳು ಕೇಳಿದಳು.

"ಆಹಾ! ಅರ್ಥವಾಯ್ತು, ಪಾವೆಲ್!" ಎಂದು ರೀಬಿನ್ ಸ್ವರವೆಳೆಯುತ್ತ ತಾಯಿಯತ್ತ ಗರ್ವದ ನೋಟ ಬೀರಿ, ಕಣ್ಣು ಮಿಟಿಕಿಸಿದ. "ಇದೆಲ್ಲ ಸ್ವಲ್ಪ ಜಟಿಲವಾದ ಕೆಲಸ, ತಾಯಿ" ಎಂದ. ಮತ್ತೊಮ್ಮೆ ಪಾವೆಲ್‌ನತ್ತ ತಿರುಗಿ ಹಿರಿತನದ ಸ್ವರದಲ್ಲಿ ಹೇಳಿದ: "ನಿನ್ನ ವಿಚಾರಗಳಿನ್ನೂ ಬಾಲ್ಯ ಬುದ್ಧಿಯವು, ತಮ್ಮಾ! ಅಕ್ರಮ ಚಟು ವಟಿಕೆ ನಡೆಸೋವಾಗ ಗೌರವದ ಪ್ರಶ್ನೆ ಇಲ್ಲ. ನೀನೇ ತೀರ್ಮಾನಿಸು: ಮೊದಲು ಯಾರ ಕೈಲಿ ಪುಸ್ತಕ ಸಿಗುತ್ತೋ ಅವನನ್ನ ಜೈಲಿಗೆಸೀತಾರೆ, ಉಪಾಧ್ಯಾಯರನ್ನಲ್ಲ. ಇದು ಮೊದಲನೇದು. ಎರಡನೇದು, ಉಪಾಧ್ಯಾಯರು ಅಧಿಕೃತ ಪುಸ್ತಕಗಳನ್ನೇ ಉಪಯೋಗಿಸಿದರೂ, ಅವುಗಳಲ್ಲಿರೋ ವಿಚಾರನೂ ಒಂದೇ – ಪದಗಳು ಮಾತ್ರ ಬೇರೆ – ಸತ್ಯಾಂಶ ಕಡಮೆ. ಒಟ್ಟಿನಲ್ಲಿ ಹೇಳೋದಾದರೆ, ಅವರ ಮತ್ತು ನನ್ನ ಉದ್ದೇಶ ಒಂದೇ. ಅವರು ಕಾಲುದಾರೀಲಿ ಹೋಗ್ತಾರೆ. ನಾನು ಮುಖ್ಯ ಬೀದೀಲಿ ನಡೀತೀನಿ. ಆಳ್ವಿಕೆಗಾರರ ದೃಷ್ಟಿಯಿಂದ ನಾವಿಬ್ಬರೂ ತಪ್ಪಿತಸ್ಥರು – ಸರಿಯಾ? ಮೂರನೇ ದೇನೆಂದರೆ, ಅವರ ವಿಷಯದಲ್ಲಿ ನನಗೆ ಎಳ್ಳಷ್ಟೂ ಪ್ರೀತಿ ಇಲ್ಲವಪ್ಪ! ಕುದುರೆ ಸವಾರ ಕಾಲಾಳುಗಳ ಜತೇಲಿ ಸ್ನೇಹದಿಂದ ಇರೋದೆಂದರೇನು? ರೈತನ ವಿಷಯದಲ್ಲಾದರೆ ಈ ರೀತಿ ನಾನು ಮಾಡಲಾರೇಂತ ತೋರುತ್ತೆ. ಆದರೆ ಅವರೊ? ಅವರಲ್ಲೊಬ್ಬ ಪಾದ್ರಿಯ ಮಗ, ಇನ್ನೊಬ್ಬಳು ಜಮೀನ್ದಾರನ ಮಗಳು. ಜನರಲ್ಲಿ ಕ್ಷೋಭೆ ಹಬ್ಬಿ ಸೋಕೆ ಅವರು ಯಾಕೆ ಹೋಗ್ತಾರೆ? ಅವರ ಮನಸ್ಸನ್ನ ತಿಳಿಯೋದು ರೈತನಾದ ನನ್ನಿಂದ ಸಾಧ್ಯವಾಗದ ಕೆಲಸ. ನಾನೇನು ಮಾಡ್ತಿದೇನೆಂತ ನಂಗೆ ಗೊತ್ತಿದೆ. ಅವರ ಗುರಿ ಏನು ಅನ್ನೋದು ಮಾತ್ರ ನನಗೆ ಗೊತ್ತೇ ಆಗೋದಿಲ್ಲ. ಸಾವಿರಾರು ವರ್ಷ

ಕಾಲ ಈ ಸ್ಥಿತಿವಂತರು ರೈತರ ಚರ್ಮ ಸುಲೀತಾ ಇದ್ರು. ಈಗ ಒಮ್ಮೆಲೆ ಎಚ್ಚರವಾಗಿ ಸ್ವಂತ ಕೈಯಿಂದಲೇ ತಮ್ಮ ರೈತರ ಕಣ್‌ಪಟ್ಟಿ ಬಿಚ್ತಾರೆ! ದೇವ ದೇವತೆಗಳ ಕತೇನೆಲ್ಲ ನಂಬೋವನಲ್ಲ ನಾನು. ಇದೇನೋ ಅಂಥ ಅಜ್ಜೀ ಕತೆಯ ಹಾಗೆ ಇದೆ. ತಿಳೀತಾ? ಎಲ್ಲ ರೀತಿಯ ಶ್ರೀಮಂತರಿಗೂ ನನಗೂ ಅಜಗಜಾಂತರ ವ್ಯತ್ಯಾಸ.... ಚಳಿಗಾಲದಲ್ಲಿ ಹೊಲಗಳ ಮೇಲಿಂದ ಕುದುರೆ ಸವಾರಿ ಮಾಡಿದ ಹಾಗೆ; ದೂರದಲ್ಲಿ ಹಾದಿಗೆ ಅಡ್ಡವಾಗಿ ಏನೋ ಹೋದಹಾಗಾಗುತ್ತೆ. ಏನದು? ತೋಳವೊ, ನರಿಯೊ, ಅಥವಾ ಕೇವಲ ನಾಯಿಯೊ? ಹೇಳೋಕಾಗೊಲ್ಲ. ಬಹಳ ದೂರ."

ತಾಯಿ ಮಗನತ್ತ ನೋಡಿದಳು. ಆತ ಅಸಮಾಧಾನಪಡುತ್ತ ಕುಳಿತಿದ್ದ

ಆತ್ಮಸಂತೋಷದಿಂದ ನಡುಗುವ ಬೆರಳುಗಳಿಂದ ಗಡ್ಡವನ್ನು ಬಾಚುತ್ತ, ರೀಬಿನ್ ಪಾವೆಲ್‌ನನ್ನೇ ನೋಡುತ್ತ ಕುಳಿತ. ಅವನ ಕಣ್ಣುಗಳು ತೀಕ್ಷ್ಣ ಬೆಳಕಿನಿಂದ ಹೊಳೆಯುತ್ತಿದ್ದುವು.

ಅವನು ಮಾತು ಮುಂದುವರಿಸಿದ:

"ಒಳ್ಳೇ ನಡತೆ ವಿಷಯ ಯೋಚಿಸೋಕೆ ಪುರಸತ್ತಿಲ್ಲ. ಜೀವನ ಕಠಿನವಾದದ್ದು. ನಾಯಿಗಳ ತಂಡವೆಂದರೆ ಕುರಿಗಳ ಮುಂದೆ ಇದ್ದ ಹಾಗಲ್ಲ. ಪ್ರತಿಯೊಂದು ನಾಯಿಯೂ ತನಗಿಷ್ಟ ಬಂದಂತೆ ಬೊಗಳುತ್ತೆ."

ತನಗೆ ಪರಿಚಿತರಾದ ಕೆಲವರನ್ನು ಸ್ಮರಿಸಿಕೊಳ್ಳುತ್ತ ತಾಯಿಯೆಂದಳು:

"ಸಾಮಾನ್ಯ ಜನರಿಗೋಸ್ಕರ ಪ್ರಾಣ ಕೂಡಾ ಅರ್ಪಿಸೋ ಹಣವಂತರಿಲ್ವ? ಜೀವಮಾನವೆಲ್ಲ ಜೈಲಲ್ಲಿ ಕಳೆಯೋರಿಲ್ವಾ?"

"ಅವರೊಂದು ವಿಶಿಷ್ಟ ಜಾತಿ. ರೈತನ ಕೈಯಲ್ಲಿ ದುಡ್ಡು ಓಡಾಡಿದಾಗ–ಅವನು ಮೇಲಕ್ಕೇರಿ ಹಣವಂತನಾಗ್ತಾನೆ. ಹಣವಂತ ಬಡವನಾದಾಗ ಕೆಳಕ್ಕೆ ಇಳಿದು ರೈತನಾಗ್ತಾನೆ. ಒಬ್ಬ ಮನುಷ್ಯ ಜೀವಿಸೋ ರೀತಿಯೇ ಅವನ ವಿಚಾರಾನ ನಿರ್ಧರಿಸುತ್ತೆ ಅಂತ ನೀನು ವಿವರಿಸಿದ್ದು ನೆನಪಿದೆಯಾ, ಪಾವೆಲ್? ಅದೀಗ ಸತ್ಯ. ಕೆಲಸಗಾರ 'ಹೌದು' ಅಂದರೆ ಮಾಲೀಕ 'ಅಲ್ಲ' ಅಂತಾನೆ. ಕೆಲಸಗಾರ 'ಅಲ್ಲ' ಅಂದರೆ ಮಾಲೀಕ 'ಹೌದು' ಅಂತಾನೆ. ರೈತ–ಜಮೀನ್ದಾರರಲ್ಲೂ ಅಂತದೇ ವ್ಯತ್ಯಾಸ ಇದೆ. ರೈತನಿಗೆ ಉಣ್ಣೋಕೆ ಸಾಕಷ್ಟು ಸಿಗ್ತು ಅಂದರೆ ಸಾಕು, ಜಮೀನ್ದಾರನ ಹೊಟ್ಟೆಯುರಿಯೋಕೆ ಶುರು. ಎಲ್ಲ ರೈತರೂ ಒಳ್ಳೆಯವರಂತಲ್ಲ ನಾನು ಹೇಳೋದು–ಪ್ರತಿಯೊಂದು ವರ್ಗದಲ್ಲೂ ಹಾದರಕ್ಕೆ ಹುಟ್ಟಿದವರು ಇದ್ದಾರೇಂತಿಟ್ಕೊ...." ಎಂದ ರೀಬಿನ್.

ರೀಬಿನ್ ಎದ್ದು ನಿಂತ. ಕರ್‍ರಗಿನ ಬಲಾಢ್ಯ ದೇಹ. ಸದ್ದಿಲ್ಲದೆ ಹಲ್ಲು ಕಚ್ಚಿದ, ಅವನ ಗಡ್ಡ ನಡುಗಿತು. ಮೃದು ಸ್ವರದಲ್ಲಿ ಅವನು ಮಾತು ಮುಂದುವರಿಸಿದ:

"ಐದು ವರ್ಷ ನಾನು ಕಾರಖಾನೆಯಿಂದ ಕಾರಖಾನೆಗೆ ಸುತ್ತಾಡಿದೆ. ಹಳ್ಳಿ ಹ್ಯಾಗಿದೆ ಅನ್ನೋದೆ ಮರೆತುಹೋಯ್ತು. ವಾಪಸು ಹೋಗಿ ನೋಡಿದಾಗ, ಇನ್ನು

ಆ ರೀತಿ ಬದುಕೋದು ಸಾಧ್ಯವೇ ಇಲ್ಲ ಅನ್ನಿಸ್ತು. ತಿಳೀತಾ? ಸಾಧ್ಯವೇ ಇಲ್ಲ! ಇಲ್ಲಿ ಇರೋ ನಿಮಗೆ ಅಲ್ಲಿ ಆಗ್ತಿರೋ ಅನ್ಯಾಯ ಕಾಣಿಸೋದಿಲ್ಲ. ಅಲ್ಲಿ ಉಪವಾಸ, ನೆರಳಿನ ಹಾಗೆ ಜನರ ಬೆನ್ನು ಹತ್ತಿದೆ. ರೊಟ್ಟಿ ಸಿಗೋ ಆಸೆಯೇ ಇಲ್ಲ – ಏನೇನೂ ಇಲ್ಲ. ಉಪವಾಸ ಅವರ ಆತ್ಮಗಳನ್ನು ನುಂಗುತ್ತೆ, ಮನುಷ್ಯ ಮುಖಗಳನ್ನ ಅಳಿಸುತ್ತೆ. ಆ ಜನರು ಬದುಕ್ತಾ ಇಲ್ಲ, ಕೊಳೀತಾ ಇದ್ದಾರೆ. ಯಾವುದಕ್ಕಾದರೂ ಆ ಜನ ಕೈ ಹಾಕಿಯಾರೂಂತ ಸುತ್ತಮುತ್ತಲ ಅಧಿಕಾರಿಗಳು ಗಿಡುಗಗಳ ಹಾಗೆ ಕಾವಲು ಕುಳಿತಿದ್ದಾರೆ. ಕೈಯಲ್ಲೇನಾದರೂ ಇದ್ದ ರೈತ ಸಿಕ್ದ ಅಂದರೆ, ಅದನ್ನು ಕಸಕೊಂಡು ಕೆನ್ನೇಗೆರಡೇಟು ಬಿಗಿದು ಹಲ್ಲುಮುರೀತಾರೆ...."

ರೀಬಿನ್ ಸುತ್ತಲೂ ನೋಡಿ, ಮೇಜಿಗೆ ಅಡ್ಡವಾಗಿ ಪಾವೆಲ್‌ನತ್ತ ಬಾಗಿದ.

"ಪುನಃ ಹಾಗೆ ಬದುಕೋದು ನನ್ನಿಂದ ಸಾಧ್ಯವಿಲ್ಲ ಅನಿಸ್ತು, ಸಹಿಸೋಕಾಗಲ್ಲ ಅಂತ ತೋರ್ತು. ಆಮೇಲೆ ನನ್ನಷ್ಟಕ್ಕೆ ನಾನೇ ಹೇಳ್ಕೊಂಡೆ: 'ಅದು ಸರಿಯಲ್ಲ, ಸಹಿಸಲೇಬೇಕು. ಅವರಿಗೆ ರೊಟ್ಟಿ ಕೊಡೋದು ನಿನ್ನಿಂದ ಆಗ್ದೇ ಹೋಗಬಹುದು. ಆದರೆ ಖಂಡಿತ ಅವರನ್ನು ಕೆರಳಿಸಿ ಎಬ್ಬಿಸಬಹುದು!' ಹಾಗೆಂದು ಅಲ್ಲೇನಿಂತೆ, ಪ್ರತೀಕಾರದಿಂದ ಬಿರಿಯೋ ಹೃದಯ ಹೊತ್ಕೊಂಡು, ಆ ನೋವು ಈಗಲೂ ಹಾಗೆಯೇ ಇದೆ. ಕಠಾರಿ ಹಾಗೆ ಹೃದಯಾನ ತಿವಿದು ನಿಂತಿದೆ."

ಮೆಲ್ಲನೆ ಪಾವೆಲ್‌ನ ಬಳಿಗೆ ನಡೆದು ಅವನ ಭುಜದ ಮೇಲೆ ರೀಬಿನ್ ಕೈ ಇರಿಸಿದ. ಹುಬ್ಬಿನಿಂದ ಬೆವರು ತೊಟ್ಟಿಕ್ಕುತ್ತಿತ್ತು; ಕೈ ನಡುಗುತ್ತಿತ್ತು.

"ನಂಗೆ ನಿನ್ನ ಸಹಾಯ ಬೇಕು, ನನಗೆ ಪುಸ್ತಕ ಕೊಡು – ಒಮ್ಮೆ ಒಬ್ಬ ಓದಿದರೆ, ಮನವನ್ನ ಕದಡಿ ರಾತ್ರೆ ಹೊತ್ತು ಅವನಿಗೆ ನಿದ್ದೆಯೇ ಬಾರದಂಥ ಪುಸ್ತಕ. ಅವರ ತಲೆಬುರುಡೆ ಕೆಳಗೆ, ಚೂಪಾದ ಮೊನೆಯಿರೋ ಮುಳ್ಳುಹಂದಿ ಇಡ್ಬೇಕು! ನಿಮಗೆ ಬರೆದು ಕೊಡ್ತಾರಲ್ಲ, ಅವರಿಗೆ ಹೇಳು: ಹಳ್ಳಿಗಾಗಿಯೂ ಸ್ವಲ್ಪ ಬರೀರೀಂತ. ಪದಗಳು ತೀಕ್ಷ್ಣವಾಗಿ ಚಕಚಕಿಸೋ ಹಾಗೆ ಬರೀಲಿ! ಅದನ್ನು ಓದಿ ಮಹಾ ಧ್ಯೇಯಕ್ಕೋಸ್ಕರ ಜನ ಸಾಯೋಕೂ ಮುಂದಾಗ್ಬೇಕು!"

ತೋಳನ್ನೆತ್ತಿ ಪ್ರತಿಯೊಂದು ಶಬ್ದವನ್ನೂ ಪ್ರತ್ಯೇಕವಾಗಿ ಸ್ಪಷ್ಟವಾಗಿ ಆತ ಹೇಳಿದ:

"ಸಾವಿನಿಂದ ಸಾವನ್ನೇ ಜಯಿಸುತ್ತೇವೆ! ಬೇರೆ ರೀತಿ ಹೇಳೋದಾದರೆ, ಜನರಿಗೆ ಪುನರ್ಜನ್ಮ ಕೊಡೋಕೋಸ್ಕರ ಸಾಯೋದು! ಪ್ರಪಂಚದಲ್ಲೆಲ್ಲಾ ಕೋಟ್ಯಾಂತರ ಜನರಿಗೆ ಪುನರ್ಜನ್ಮ ಕೊಡಿಸೋದಕ್ಕೋಸ್ಕರ ನಾವು ಸಹಸ್ರಾರು ಜನ ಸಾಯೋಣ! ಇದೀಗ ವಿಷಯ! ಸುಲಭವಾಗಿ ನಗು ನಗ್ತಾ ಸಾಯೋದು – ಜನರ ಪುನರ್ಜನ್ಮಕ್ಕಾಗಿ! ಜನರ ಜಾಗೃತಿಗಾಗಿ!"

ಸಮೊವಾರನ್ನು ತಾಯಿ ಒಳಕ್ಕೆ ತಂದು ರೀಬಿನ್‌ನತ್ತ ನೋಡಿದಳು. ಅವನ ಮಾತುಗಳ ಭಾರ ಮತ್ತು ರಭಸದ ಕೆಳಗೆ ತಾಯಿ ನಜ್ಜುಗುಜ್ಜಾದಳು. ಅವನ ವರ್ತನೆಯಲ್ಲಿ, ಗತಿಸಿದ ತನ್ನ ಗಂಡನನ್ನು ನೆನಪಿಗೆ ತರುವ ಅಂಶಗಳಿದ್ದುವು. ತನ್ನ ಗಂಡ ಅಂಗಿಯ ತೋಳುಗಳನ್ನು ಮೇಲಕ್ಕೆತ್ತಿ ಕೈಬೀಸಿ ಹಲ್ಲು ಕಿಸಿಯುತ್ತಿದ್ದ. ರೀಬಿನ್ನನೂ

ಮಾಡುತ್ತಿದ್ದುದು ಅದೇ ರೀತಿ. ತನ್ನ ಗಂಡನಲ್ಲಿ ಕಂಡುಬರುತ್ತಿದ್ದ ಅಸಹನೆಯ ಕ್ರೋಧವೇ ಇಲ್ಲೂ ಇತ್ತು. ಗಂಡನದು ಅಸಹನೆಯ ಕ್ರೋಧವಾದರೂ ಅದು ವ್ಯಕ್ತವಾಗುತ್ತಿರಲಿಲ್ಲ, ಸ್ಪಷ್ಟವಾಗುತ್ತಿರಲಿಲ್ಲ. ಆದರೆ ಈತ ತನ್ನ ಭಾವನೆಗಳನ್ನು ಪ್ರಕಟಗೊಳಿಸುತ್ತಿದ್ದ, ಹೇಳುತ್ತಿದ್ದ. ಇದರಿಂದಾಗಿ ರೌದ್ರತೆ ಅಷ್ಟು ಕಠಿನವಾಗಿರಲಿಲ್ಲ.

ಪಾವೆಲ್ ತಲೆಯಾಡಿಸಿ ಹೇಳಿದ:

"ನಾವು ಹೀಗೆ ಮಾಡೋಣ. ನಮಗೆ ವಿಷಯ ಕೊಡು. ನಿಮಗಾಗಿ ನಾವೊಂದು ಪತ್ರಿಕೆ ಪ್ರಕಟಿಸ್ತೀವಿ."

ಮಗನತ್ತ ನೋಡುತ್ತ ತಾಯಿ ಮುಗುಳ್ನಕ್ಕಳು. ಮಾತಾಡದೆ ಶಾಲು ಹೊದ್ದು ಕೊಂಡು ಅವಳು ಮನೆಯಿಂದ ಹೊರಬಿದ್ದಳು.

"ಒಳ್ಳೇದು; ವಿಷಯವನ್ನೆಲ್ಲ ನಾವು ಸಂಗ್ರಹಿಸಿ ತಿಳಿಸ್ತೀವಿ! ಎಳೆಗರುವಿಗೆ ಕೂಡಾ ತಿಳಿಯುವಷ್ಟು ಸರಳವಾಗಿ ಬರೀರಿ!" ಎಂದು ರೀಬಿನ್ ಸಂತೋಷದ ಏರು ಧ್ವನಿಯಲ್ಲಿ ಹೇಳಿದ:

ಅಡುಗೆ ಮನೆಯ ಬಾಗಿಲು ತೆರೆಯಿತು. ಯಾರೋ ಒಬ್ಬ ಒಳಕ್ಕೆ ಬಂದ.

ಅತ್ತ ನೋಡಿ ರೀಬಿನ್‌ನೆಂದ:

"ಆತ ಯೆಫೀಮ್.... ಯೆಫೀಮ್, ಇಲ್ಲಿ ಬಾ! ಇವನೇ ಯೆಫೀಮ್– ಈತನೇ ಪಾವೆಲ್. ಇವನ ವಿಷಯ ಹೇಳಿದ್ದೆ ನೋಡು."

ಪಾವೆಲ್‌ನೆದುರು ಎತ್ತರದ, ಸೊಗಸಾದ ತಲೆಗೂದಲಿದ್ದ, ವಿಶಾಲ ಮುಖದ ಹುಡುಗನೊಬ್ಬ ನಿಂತುಕೊಂಡ. ಕುರಿ ಚರ್ಮದ ಕೋಟನ್ನು ತೊಟ್ಟಿದ್ದ. ಟೋಪಿ ಕೈಯಲ್ಲಿತ್ತು. ಬಾಗಿದ ಹುಬ್ಬುಗಳಡಿಯಿಂದ ಪಾವೆಲ್‌ನನ್ನು ಆತ ನೋಡಿದ. ಬಲು ಬಲಿಷ್ಠನಿದ್ದಂತೆ ಕಾಣಿಸಿತು.

"ನೋಡಿ ಸಂತೋಷವಾಯ್ತು," ಎಂದನಾತ ಒರಟಾಗಿ. ಪಾವೆಲ್‌ನೊಡನೆ ಕೈಕುಲುಕಿದ ಬಳಿಕ, ತನ್ನ ನೇರವಾದ ಕೂದಲ ಮೇಲೆ ತನ್ನೆರಡೂ ಕೈಗಳನ್ನು ಓಡಿಸಿದ. ಆಮೇಲೆ ಆತ ಕೊಠಡಿಯ ಸುತ್ತಲೂ ನೋಡಿದ. ಪುಸ್ತಕಗಳು ಕಣ್ಣಿಗೆ ಬಿದ್ದೊಡನೆ, ಮೆಲ್ಲಮೆಲ್ಲನೆ ಅವುಗಳತ್ತ ಸಾಗಿದ.

ರೀಬಿನ್ ಪಾವೆಲ್‌ನತ್ತ ನೋಡಿ ಕಣ್ಣು ಮಿಟಿಕಿಸಿ, "ನೋಡ್ದಾ? ನೋಡ್ಕೊಂಡ್ಬಿಟ್ಟ," ಎಂದ. ಯೆಫೀಮ್ ಕತ್ತು ತಿರುಗಿಸಿ ಅವನತ್ತ ನೋಡಿ, ಬಳಿಕ ಪುಸ್ತಕಗಳನ್ನು ಪರೀಕ್ಷಿಸತೊಡಗಿದ.

"ಓದೋಕೆ ಎಷ್ಟೊಂದು ಇದೆ!" ಎಂದು ಅವನು ಉದ್ಗಾರವೆತ್ತಿದ. "ನಿಮಗೆ ಇಲ್ಲಿ ಓದೋಕೆ ಬಹುಶಃ ಪುರುಸೊತ್ತಿಲ್ಲವೇನೋ. ನೀವು ಹಳ್ಳೀಲ್ಲಿದ್ದರೆ ಓದೋಕೆ ಬೇಕಾದಷ್ಟು ಪುರಸತ್ತಿರತ್ತೆ."

"ಆದರೆ ಆಸಕ್ತಿ ಕಡಮೆ ಏನೋ?" ಎಂದು ಪಾವೆಲ್ ಕೇಳಿದ.

"ಯಾಕೆ? ಆಸಕ್ತಿಯೂ ಬೇಕಾದಷ್ಟಿದೆ" ಎಂದು ಹುಡುಗ ತನ್ನ ಗಲ್ಲ ಮುಟ್ಟುತ್ತ

ಹೇಳಿದ, "ಜನರು ತಮ್ಮ ಮೆದುಳನ್ನ ಕಲಕೋದಕ್ಕೆ ಶುರುಮಾಡಿದ್ದಾರೆ. 'ಭೂಗರ್ಭ ಶಾಸ್ತ್ರ' .... ಇದೇನು ?"

ಪಾವೆಲ್ ಏನೆಂದು ವಿವರಿಸಿದ.

"ಇದು ನಮಗೆ ಬೇಕಾಗಿಲ್ಲ" ಎಂದು ಹುಡುಗ ಪುಸ್ತಕವನ್ನು ಪುನಃ ಹಲಗೆಯ ಮೇಲೆ ಇಡುತ್ತ ಹೇಳಿದ.

ಗಟ್ಟಿಯಾಗಿ ನಿಟ್ಟುಸಿರು ಬಿಡುತ್ತ ರೀಬಿನನೆಂದ:

"ಭೂಮಿ ಎಲ್ಲಿಂದ ಬಂದರೇನಂತೆ ರೈತರಿಗೆ? ಅದನ್ನು ಹ್ಯಾಗೆ ತುಣುಕು ತುಣುಕಾಗಿ ವಿಂಗಡಿಸಿದರು ಅನ್ನೋದರಲ್ಲೇ ಅವರಿಗೆ ಆಸಕ್ತಿ ಇರೋದು. ಜಮೀನ್ದಾರರು ನಡುಹಗಲಲ್ಲೇ ಕಣ್ಣೆದುರಲ್ಲೇ ಆ ಭೂಮಿಯನ್ನು ಹ್ಯಾಗೆ ತಮ್ಮಿಂದ ಕಸಕೊಂಡ್ರು ಅದು ಮುಖ್ಯ. ಭೂಮಿ ಉರುಳುತ್ತೋ, ನಿಂತಲ್ಲೇ ನಿಲ್ಲುತ್ತೋ? ಅವನಿಗೆ ಅದರ ಯೋಚನೆ ಇಲ್ಲ, ಅದು ತಲೆ ಕೆಳಗಾಗಿರ್ಲಿ, ಆಕಾಶದಿಂದ ತೂಗ್ತಿರ್ಲಿ – ಅವರಿಗೆ ದವಸ ಧಾನ್ಯ ಕೊಟ್ಟರಾಯ್ತು."

"ಗುಲಾಮಗಿರಿಯ ಇತಿಹಾಸ" ಎಂದು ಯೆಫೀಮ್ ಓದಿದ; "ಇದರಲ್ಲಿ ನಮ್ಮ ವಿಷಯ ಬರೆದಿದಾರಾ?"

ಪಾವೆಲ್ ಒಂದು ಪುಸ್ತಕವನ್ನೆತ್ತಿಕೊಡುತ್ತಾ, "ರಷ್ಯದ ಜೀತದಾಳು ಪದ್ಧತಿಯ ವಿಷಯವಾಗಿ ಇಲ್ಲೊಂದು ಅಧ್ಯಾಯವಿದೆ" ಎಂದ. ಯೆಫೀಮ್ ಅದನ್ನು ತೆಗೆದುಕೊಂಡು, ಹೊರಳಿಸಿ ನೋಡಿ, "ಇದು ಗತಕಾಲದ ವಿಷಯ" ಎಂದು ಕೆಳಕ್ಕಿಟ್ಟ.

"ನಿಮಗೆ ಸ್ವಂತ ಹೊಲವಿದಿಯೆ?" ಎಂದು ಪಾವೆಲ್ ಕೇಳಿದ.

"ಓಹೋ. ನಾವು ಮೂವರು ಸೋದರರು. ನಮಗೆ ಹತ್ತು ಎಕರೆ ಹೊಲ ಇದೆ. ಎಲ್ಲಾ ಮರಳು. ಹಿತ್ತಾಳೆ ತಿಕ್ಕೋಕೆ ಆದೀತು, ಸಾಗುವಳಿ ಮಾಡೋದಕ್ಕಲ್ಲ."

ಕ್ಷಣ ತಡೆದು ಯೆಫೀಮ್ ಮಾತು ಮುಂದುವರಿಸಿದ:

"ನಾನು ಹೊಲಬಿಟ್ಟು ಬಂದಿದ್ದೀನಿ. ಅದರಿಂದೇನು ಪ್ರಯೋಜನ? ಅದು ನನಗೆ ಆಹಾರ ಕೊಡೋದಿಲ್ಲ. ಸುಮ್ಮನೆ ಕೈಕಾಲು ಕಟ್ಟಿಹಾಕುತ್ತೆ. ಈ ನಾಲ್ಕು ವರ್ಷ ನಾನು ಕೂಲಿ ರೈತನಾಗಿ ಕೆಲಸಮಾಡಿದೆ. ಬರುವ ಶರತ್ಕಾಲದಲ್ಲಿ ಸೈನ್ಯ ಸೇವೆಗೆ ಹೋಗಬೇಕಾಗಿದೆ. ನನ್ನ ಮಾವ ಬೇಡ ಅಂತಾನೆ, ಈಗ ಸೈನಿಕರಿಂದ ಜನರನ್ನು ಹೊಡಿಸ್ತಾರೆ ಅಂತಾನೆ. ಆದರೆ ನಾನೇನೋ ಹೋಗೋಣಾಂತಿದೀನಿ. ಸೈನಿಕರು ಜನರನ್ನ ಹೊಡಿಯೋದು ಹೊಸತೇನಲ್ಲವಲ್ಲ. ಸ್ತೆಪಾನ್ ರಾಜಿನ್ ಕಾಲದಲ್ಲೂ, ಪುಗಚೋವ್ ಕಾಲದಲ್ಲೂ ಸೈನಿಕರು ಜನರನ್ನ ಬಡಿಯುತ್ತಿದ್ದರು. ಇನ್ನಾದರೂ ಸ್ಥಿತಿಗತಿ ಬದಲಾಯಿಸ್ಬೇಕು. ನಿಮ್ಮ ಅಭಿಪ್ರಾಯವೇನು?" ಎಂದು ಆತ ಪರೀಕ್ಷಕ ದೃಷ್ಟಿಯಿಂದ ಪಾವೆಲ್‌ನನ್ನು ನೋಡಿದ.

"ಹೌದು, ಆ ಕೆಲಸ. ಆದರೆ ಸುಲಭವಲ್ಲ, ಸೈನಿಕರಿಗೆ ಏನು ಹೇಳ್ಬೇಕು, ಹ್ಯಾಗೆ

ಹೇಳ್ಬೇಕು ಅನ್ನೋದು ಗೊತ್ತಿರ್ಬೇಕು ಮೊದಲು," ಎಂದು ಪಾವೆಲ್ ಮುಗುಳ್ನ ಗುತ್ತ ಉತ್ತರವಿತ್ತ.

"ಕಲಿತ್ಕೊತೀವಿ" ಎಂದನು ಯೆಫೀಮ್.

"ಅಧಿಕಾರಿಗಳಿಗೆ ಗೊತ್ತಾದರೆ ನಿನ್ನ ಗುಂಡಿಕ್ಕಿ ಸಾಯಿಸ್ತಾರೆ" ಎಂದು ಪಾವೆಲ್, ಕುತೂಹಲದ ದೃಷ್ಟಿಯಿಂದ ಯೆಫೀಮ್‌ನನ್ನು ನೋಡುತ್ತ ಹೇಳಿದ.

ಯೆಫೀಮ್ ಅಳುಕಲಿಲ್ಲ. "ಅಧಿಕಾರಿಗಳಿಂದ ಹೆಚ್ಚಿನ ದಯೆ ನಿರೀಕ್ಷಿಸೋ ಹಾಗೇ ಇಲ್ಲ," ಎಂದು ಆತ ಶಾಂತನಾಗಿ ಸಮ್ಮತಿ ಸೂಚಿಸಿ, ಪುಸ್ತಕಗಳನ್ನು ಪರೀಕ್ಷಿ ಸುವುದರಲ್ಲಿ ನಿರತನಾದ.

"ಚಾ ಕುಡಿ, ಯೆಫೀಮ್; ನಾವು ಬೇಗನೆ ಹೊರಡ್ಬೇಕು," ಎಂದ ರೀಬಿನ್.

"ಆಗಲಿ, ಕ್ರಾಂತಿಯೆಂದರೆ ಬಂಡಾಯವೆ?"

ಅಂದ್ರೇಯ್ ಆಗ ಒಳಬಂದ. ಸ್ನಾನ ಮಾಡಿದ್ದ ಮೈಯಿಂದ ಆವಿ ಏಳುತ್ತಿತ್ತು. ಮುಖದ ಮೇಲೆ ಗಂಭೀರತೆ ಇತ್ತು. ಆತ ಮೌನವಾಗಿ ಯೆಫೀಮ್‌ನೊಡನೆ ಕೈಕು ಲುಕಿ ರೀಬಿನ್‌ನ ಪಕ್ಕದಲ್ಲೆ ಕುಳಿತು, ಆತನನ್ನು ಮೇಲಕ್ಕೂ ಕೆಳಕ್ಕೂ ನೋಡುತ್ತ ಸಣ್ಣನೆ ನಕ್ಕ.

ರೀಬಿನ್, ಅಂದ್ರೇಯ್‌ನ ಮೊಣಕಾಲಿಗೊಂದು ಗುದ್ದು ಬಿಗಿಯುತ್ತಾ, "ಏನು ಯೋಚ್ನೆ? ದುಃಖದಲ್ಲಿದೀಯಲ್ಲ?" ಎಂದ.

"ವಿಶೇಷವೇನಿಲ್ಲ" ಎಂದು ಅಂದ್ರೇಯ್ ಉತ್ತರವಿತ್ತ.

ಯೆಫೀಮ್ ಅಂದ್ರೇಯತ್ತ ದೃಷ್ಟಿ ಹಾಯಿಸಿ, "ಇವನೂ ಕೆಲಸಗಾರನೇ?" ಎಂದು ಕೇಳಿದ.

"ಹೌದು. ಯಾಕೆ ಕೇಳಿದೆ?" ಎಂದನು ಅಂದ್ರೇಯ್.

"ಅವನು ಈ ವರೆಗೆ ಕಾರಖಾನೆ ಕೆಲಸಗಾರರನ್ನು ನೋಡಿಯೇ ಇಲ್ಲ. ಆ ಕೆಲಸಗಾರರು ಅವನಿಗೆ ಸ್ವಲ್ಪ ವಿಚಿತ್ರವಾಗಿ ತೋರ್ತಾರೆ," ಎಂದು ರೀಬಿನ್ ವಿವರಿಸಿದ.

"ವಿಚಿತ್ರ. ಅಂದರೆ?" ಎಂದು ಪಾವೆಲ್ ಕೇಳಿದ.

ಅಂದ್ರೇಯ್‌ಯನ್ನು ಸೂಕ್ಷ್ಮವಾಗಿ ಪರೀಕ್ಷಿಸಿದ ಬಳಿಕ ಯೆಫೀಮ್ ಉತ್ತರ ವಿತ್ತ:

"ನಿಮ್ಮ ಎಲುಬುಗಳು ಚೂಪಾಗಿವೆ. ರೈತರ ಎಲುಬುಗಳು ದುಂಡಗಿವೆ."

ರೀಬಿನ್ ಮಾತು ಮುಂದುವರಿಸಿದ:

"ರೈತ ಸದ್ದಿಲ್ಲದೆ ನಿಲ್ತಾನೆ. ಹೊಲ ತನ್ನದಲ್ಲವಾದರೂ ಪಾದದಿಂದ ಮೆಟ್ಟಿ ನೋಡ್ತಾನೆ. ಆದರೆ ಕೆಲಸಗಾರ ಹಕ್ಕಿಯ ಹಾಗೆ. ಹುಟ್ಟು ಭೂಮಿಯಿಲ್ಲ, ಮನೆಯಿಲ್ಲ. ಇಂದು ಇಲ್ಲಿ, ನಾಳೆ ಇನ್ನೊಂದು ಕಡೆ. ಅವನನ್ನು ಒಂದೇ ಕಡೆ ಕಟ್ಟಿಹಾಕೋದು ಒಂದು ಹೆಂಗಸಿಂದ ಕೂಡಾ ಸಾಧ್ಯವಿಲ್ಲ. ಏನಾದರೂ ಹೆಚ್ಚು ಕಡಮೆಯಾದರೆ, ಅವಳನ್ನ ಬಿಟ್ಟು, ಬೇರೇನಾದರೂ ಒಳ್ಳೇದನ್ನ ಹುಡುಕಿಕೊಂಡು ಹೊರಟೇಬಿಡ್ತಾನೆ.

ರೈತನಾದರೆ ಇದ್ದಲ್ಲೇ ಇದ್ದುಕೊಂಡು ಬೇರೆಡೆಗೆ ಹೋಗಲು ಬಯಸದೆ ಪರಿಸ್ಥಿತಿ ಸುಧಾರಿಸಲು ಯತ್ನಿಸ್ತಾನೆ.... ಅಗೋ, ನಿನ್ನ ತಾಯಿ ಬಂದ್ಲು."

ಯೆಫೀಮ್ ಪಾವೆಲ್‌ನ ಬಳಿಗೆ ಬಂದು, "ನನಗಾವುದಾದರೂ ಪುಸ್ತಕ ಕೊಡ್ತೀರಾ?" ಎಂದು ಕೇಳಿದ.

"ಓಹೋ ಅದಕ್ಕೇನಂತೆ!" ಎಂದ ಪಾವೆಲ್.

ಹುಡುಗನ ಕಣ್ಣುಗಳು ತೃಪ್ತಿಯಿಂದ ಬೆಳಗಿದುವು.

ಅವನು ವೇಗವಾಗಿ ಮಾತನಾಡುತ್ತ ಆಶ್ವಾಸನೆ ನೀಡಿದ:

"ನಾನದನ್ನ ವಾಪಸು ಮಾಡ್ತೀನಿ. ನಮ್ಮವರು ಈ ಭಾಗಕ್ಕೆ ಟಾರು ತರ್‍ತಾನೇ ಇರ್‍ತಾರೆ. ಅವರು ತಂದು ತಲಪಿಸ್ತಾರೆ."

ಅಷ್ಟರಲ್ಲಿ ಕುರಿ ಚರ್ಮದ ಕೋಟನ್ನು ಧರಿಸಿ, ಬಲವಾಗಿ ಸೊಂಟದ ಪಟ್ಟಿ ಬಿಗಿದ ರೀಬಿನ್ "ಹೊರಡೋ ಹೊತ್ತಾಯ್ತು" ಎಂದ.

ಯೆಫೀಮ್ ತನ್ನ ಕೈಲಿದ್ದ ಪುಸ್ತಕವನ್ನು ತೋರಿಸುತ್ತ "ಓದ್ತಾ ಎಷ್ಟೊಂದು ಖುಷಿಯಾಗಿ ಕಾಲ ಕಳೀಬಹುದು!" ಎಂದು ಉದ್ಗರಿಸಿದ. ಮನೆಯವರನ್ನು ಬೀಳ್ಕೊಟ್ಟು ಇಬ್ಬರೂ ಹೊರಟರು.

ರೀಬಿನ್ ಮತ್ತು ಯೆಫೀಮ್ ಹೊರಟುಹೋದಮೇಲೆ ಪಾವೆಲ್, ಅಂದ್ರೇಯ್‌ಯತ್ತ ತಿರುಗಿ, ಉದ್ವೇಗದಿಂದ, "ನೋಡ್ದಾ? ಹ್ಯಾಗಿದ್ದಾರೆ?" ಎಂದ.

"ಹುಂ...." ಎಂದು ಹೊಹೋಲ್ ಸ್ವರವೆಳಿದ; "ಒಂದು ಜತೆ ಬಿರುಗಾಳಿ, ಮೋಡಗಳ ಹಾಗಿದ್ದಾರೆ."

ತಾಯಿ ಕೇಳಿದಳು:

"ಯಾರು ರೀಬಿನ್ನೆ? ಕಾರಖಾನೇಲಿ ಯಾವತ್ತೂ ದುಡಿಯದ ಒಳ್ಳೇ ರೈತನ ಹಾಗಿದಾನೆ! ಅದೂ ಎಷ್ಟು ಭಯಂಕರ!"

ಮೇಜಿನ ಬಳಿ, ಚಹಾದ ಲೋಟವನ್ನೆತ್ತಿ ಹುಬ್ಬು ಗಂಟಿಕ್ಕಿ ಅದನ್ನೇ ನೋಡುತ್ತಿದ್ದ ಅಂದ್ರೇಯ್‌ಯೊಡನೆ ಪಾವೆಲ್‌ನೆಂದ:

"ನೀನು ಆಗಿಂದಲೇ ಇಲ್ಲಿ ಇರ್‍ಬೇಕಾಗಿತ್ತು. ಮಾನವ ಹೃದಯ–ಹೃದಯ ಅಂತ ಯಾವಾಗಲೂ ಹೇಳ್ತಾ ಇದ್ದೆಯಲ್ಲ? ಅವನ ಹೃದಯದೊಳಗೆ ಏನಾಗ್ತಿದೇಂತ ನೀನು ಸ್ವಲ್ಪ ಇಣಿಕಿ ನೋಡ್ಬೇಕಾಗಿತ್ತು! ಎಷ್ಟು ಉರಿ ಕಾರಿದ ಅಂತೀಯ! ಅಡಗಿ ಹೋದೆ ನಾನು. ಅವನ ಮಾತಿಗೆ ವ್ಯತಿರಿಕ್ತ ಹೇಳಲಾಗಲಿಲ್ಲ ನನ್ನ ಕೈಯಲ್ಲಿ. ಮನುಷ್ಯ ಜೀವಿಗಳಲ್ಲಿ ಎಷ್ಟೊಂದು ಕಡಮೆ ವಿಶ್ವಾಸ ಅವನಿಗೆ!.... ಮನುಷ್ಯ ಜೀವಿಗಳೆಂದರೆ ಎಷ್ಟೊಂದು ಅಗ್ಗ ಅವನ ದೃಷ್ಟೀಲಿ! ಅಮ್ಮ ಹೇಳಿದ್ದು ಸರಿಯೆ. ಈ ಮನುಷ್ಯ ತನ್ನಲ್ಲಿ ಭಯಂಕರ ಶಕ್ತಿಯನ್ನು ಅಡಗಿಸಿಕೊಂಡಿದಾನೆ."

ಖಿನ್ನ ಸ್ವರದಲ್ಲೇ ಅಂದ್ರೇಯ್ ಉತ್ತರವಿತ್ತು:

"ನಾನೂ ನೋಡಿದೆ ಅದು ಸ್ಪಷ್ಟವಾಗಿದೆಯಪ್ಪ. ಆಳುವವರು ಜನರ ಮನ

ಸ್ಸನ್ನೇ ವಿಷಮಯ ಮಾಡಿದ್ದಾರೆ. ಒಮ್ಮೆ ಜನಸಮುದಾಯ ಕೆರಳಿ ಎದ್ದರೆ ಸಾಕು, ಎಲ್ಲವನ್ನೂ ಅವರು ಕೆಡವಿ ಅಪ್ಪಳಿಸ್ತಾರೆ! ಅವರಿಗೆ ಬರೇ ಹೊಲ ಬೇಕು – ಕಡೆಗೂ ಉಳಿಯೋದು ಬರಿದು ಹೊಲವೇ! ಎಲ್ಲವನ್ನೂ ಅವರು ಕಿತ್ತು ಹಾಕ್ತಾರೆ!"

ಅವನು ನಿಧಾನವಾಗಿ ಮಾತಾಡಿದ. ಬೇರೇನೋ ಯೋಚನೆ ಅವನ ಮನಸ್ಸನ್ನು ಆವರಿಸಿತ್ತೆಂಬುದು ಸ್ಪಷ್ಟವಾಗಿತ್ತು. ತಾಯಿ ಕೈಚಾಚಿ ಅವನನ್ನು ಮುಟ್ಟಿ ತಟ್ಟಿದಳು.

"ಯಾಕೆ ಹೀಗೆ, ಅಂದ್ರ್ಯೂಷ? ಎಲ್ಲಿ ನಗು, ನೋಡೋಣ!" ಎಂದಳು.

"ಸ್ವಲ್ಪ ಸುಮ್ನಿರಿ, ನನ್ನವ್ವ" ಎಂದು ಶಾಂತವಾಗಿ ಮೃದುವಾಗಿ ಆತ ಉತ್ತರವಿತ್ತು, ಬಳಿಕ ಒಮ್ಮೆಲೆ ಸಿಡಿದೆದ್ದು, ಕೈಯಿಂದ ಮೇಜನ್ನು ಒಡಿದು, ಪಾವೆಲ್‌ನನ್ನು ಕುರಿತು ಹೇಳಿದ:

"ಅದು ನಿಜ, ಪಾವೆಲ್! ರೈತ ಒಮ್ಮೆ ಎದ್ದು ನಿಂತನೆಂದರೆ, ಭೂಮೀನೆಲ್ಲಾ ತನ್ನ ಉಪಯೋಗಕ್ಕಾಗಿಯೇ ಬರಡು ಮಾಡ್ತಾನೆ! ಎಲ್ಲವನ್ನೂ ಸುಟ್ಟುಹಾಕ್ತಾನೆ. ಮಹಾ ಮಾರಿರೋಗ ಬಂದು ಹೋದ್ಮೇಲೆ ಇರೋ ಹಾಗೆ! ತಾನು ಅನುಭವಿಸಿದ ನೋವಿನ ಎಲ್ಲ ಚಿಹ್ನೆಗಳನ್ನೂ ಸುಟ್ಟುಹಾಕ್ತಾನೆ ಆತ."

"ಆಮೇಲೆ ನಮ್ಮ ಹಾದಿಗೆ ಅಡ್ಡಿಯಾಗ್ತಾನೆ" ಎಂದು ಪಾವೆಲ್ ಅಭಿಪ್ರಾಯ ವ್ಯಕ್ತಪಡಿಸಿದ.

"ಹಾಗಾಗದಂತೆ ನೋಡೋದು ನಮ್ಮ ಜವಾಬ್ದಾರಿ! ಅವನನ್ನು ಹತೋಟೀಲಿ ಇಡಬೇಕಾದವರು ನಾವು! ಎಲ್ಲರಿಗಿಂತ ಹೆಚ್ಚಾಗಿ ನಾವೇ ರೈತನಿಗೆ ಸಮೀಪವಾಗಿದ್ದೀವಿ – ಆತ ನಮ್ಮಲ್ಲಿ ವಿಶ್ವಾಸವಿಟ್ಟು ನಮ್ಮನ್ನ ಹಿಂಬಾಲಿಸ್ತಾನೆ!"

"ನಾವು ಹಳ್ಳಿಗಾಗಿ ಒಂದು ವೃತ್ತಪತ್ರಿಕೆ ಹೊರಡಿಸ್ಬೇಕೂಂತ ರೀಬಿನ್ ಕೇಳಿದ್ದಾನೆ," ಎಂದನು ಪಾವೆಲ್.

"ಅದು ಸರಿಯಾದದ್ದು!"

"ಅವನ ಜತೇಲಿ ಚರ್ಚೆ ಮಾಡದೆ ಇದ್ದದ್ದು ತಪ್ಪಾಯ್ತು," ಎಂದು ಪಾವೆಲ್ ಸಣ್ಣನೆ ನಕ್ಕು ಹೇಳಿದ.

"ಅದಕ್ಕೇನೀಗ? ಬೇಕಾದಷ್ಟು ಸಮಯವಿದೆ," ಎಂದು ತನ್ನ ಬೆರಳುಗಳಿಂದ ಕೂದಲನ್ನು ಬಾಚುತ್ತ, ಶಾಂತನಾಗಿ ಹೊಹೋಲ್ ಉತ್ತರವಿತ್ತ. "ನೀನು ತಾಳ ಹಾಕ್ತಾಹೋಗು; ಪಾದ ನೆಲಕ್ಕೆ ಅಂಟದೇ ಇರೋರೆಲ್ಲ ಕುಣಿದೇ ಕುಣೀತಾರೆ. ನಾವು, ನಿಂತ ಭೂಮೀನ ಮುಟ್ಟಿ ನೋಡೋದಿಲ್ಲ ಅಂತ ರೀಬಿನ್ ಹೇಳಿದ್ದು ನಿಜ. ಯಾಕೆ ನೋಡ್ಬೇಕು? ಆ ಭೂಮೀನ ಹಿಡಿದು ಚೆನ್ನಾಗಿ ಅಲುಗಿಸೋರು ನಾವು. ಒಂದು ಸಾರಿ ಅಲುಗಿಸಿದರೆ, ಜನರು ಸಡಿಲಾಗ್ತಾರೆ. ಇನ್ನೊಂದು ಸಾರೆ ಅಲುಗಿಸಿದರೆ, ಅವರು ಸ್ವತಂತ್ರರಾಗ್ತಾರೆ...."

ತಾಯಿ ನಕ್ಕು, "ನಿನ್ನ ದೃಷ್ಟೀಲಿ ಪ್ರತಿಯೊಂದೂ ಎಷ್ಟೊಂದು ಸುಲಭ, ಅಂದ್ರ್ಯೂಷ !" ಎಂದಳು.

"ಹೂಂ. ಜೀವನ ಎಷ್ಟು ಸುಲಭವೋ ಇದು ಅಷ್ಟೇ ಸುಲಭ !" ಎಂದ ಅಂದ್ರೇಯ್.

ನಾಲ್ಕಾರು ನಿಮಿಷಗಳ ಬಳಿಕ, ಆತನೆಂದ: "ಹೊಲದಲ್ಲಿ ಸ್ವಲ್ಪ ತಿರುಗಾಡ್ಕೊಂಡು ಬರ್ತೀನಿ."

"ಸ್ನಾನವಾದ್ಮೇಲೆ ಎಂಥಾ ತಿರುಗಾಟ ? ಗಾಳಿ ಬೀಸ್ತಿದೆ. ನಿಂಗೆ ನೆಗಡಿಯಾದೀತು" ಎಂದು ತಾಯಿ ಎಚ್ಚರಿಸಿದಳು.

"ನಂಗೆ ಸ್ವಲ್ಪ ಗಾಳಿಸ್ನಾನವಾಗ್ಬೇಕಮ್ಮ," ಎಂದು ಆತ ಉತ್ತರವಿತ್ತ.

"ನೆಗಡಿಯಾಗದ ಹಾಗೆ ನೋಡ್ಕೋ. ಸ್ವಲ್ಪ ಮಲಗಿಕೊಂಡರೆ ಇನ್ನೂ ವಾಸಿ," ಎಂದ ಪಾವೆಲ್, ಪ್ರೀತಿ ಬೆರೆತ ಸ್ವರದೊಡನೆ.

"ಇಲ್ಲ, ನಾನು ಹೋಗ್ತೀನಿ."

ನಡೆಯಲು ಸಿದ್ಧನಾಗಿ, ಬೇರೆ ಮಾತಾಡದೆ, ಆತ ಹೊರಬಿದ್ದ.

ತಾಯಿ ನಿಟ್ಟುಸಿರುಬಿಟ್ಟು, "ಮನಸ್ನಲ್ಲೇ ಅಂದ್ರೇಯ್ ತುಂಬ ಸಂಕಟ ಪಡ್ತಿದ್ದಾನೆ," ಎಂದಳು.

ಪಾವೆಲ್‌ನೆಂದ:

"ಆ ಘಟನೆ ಆದ್ಮೇಲೆ, ಇನ್ನೂ ಹೆಚ್ಚು ಪ್ರೀತಿಯಿಂದ ಅವನನ್ನ ಏಕವಚನ ದಿಂದ ಮಾತಾಡಿಸ್ತಿದೀಯ. ತುಂಬ ಒಳ್ಳೆಯವಳಮ್ಮ ನೀನು."

"ಹಾಗಾ ? ನಂಗೇ ಗೊತ್ತಾಗಿಲ್ಲ ಅದು. ಅವನನ್ನ ನಾನೆಷ್ಟು ಪ್ರೀತಿಸ್ತೀನಿಂತ ಹೇಳೋಕೂ ಕೂಡಾ ಆಗೋದಿಲ್ಲ !"

"ನಿನಗೆ ಪ್ರೀತಿಸೋ ಒಳ್ಳೇ ಹೃದಯವಿದೆಯಮ್ಮ," ಎಂದು ಪಾವೆಲ್ ಮೃದು ವಾಗಿ ಹೇಳಿದ.

"ನಿನಗೂ ನಿನ್ನ ಎಲ್ಲಾ ಸ್ನೇಹಿತರಿಗೂ ನಾನು ಸ್ವಲ್ಪಾದರೂ ಸಹಾಯ ಮಾಡೋದು ಸಾಧ್ಯವಾದರೆ ! ಹ್ಯಾಗೆ ಸಹಾಯ ಮಾಡೋದೂಂತ ನಂಗೆ ಗೊತ್ತಾದರೆ !"

"ಹೆದರ್ಬೇಡ, ಹ್ಯಾಗೇಂತ ಕಲಿತ್ಕೋತೀಯಾ !"

"ಹೆದರ್ದೆ ಇರೋಕಾದರೂ ನಾನು ಕಲಿತಿದ್ದರೆ !" ಎಂದು ಮೃದುವಾಗಿ ಸಣ್ಣನೆ ನಕ್ಕಳು ತಾಯಿ.

"ಹೋಗಲಿ ಬಿಡಮ್ಮ. ಸಾಕು ಈ ವಾದ. ಆದರೆ ಒಂದು ವಿಷಯ ನೆನಪಿಡು. ನಾನು ನಿಂಗೆ ತುಂಬಾ ಕೃತಜ್ಞನಾಗಿದ್ದೀನಿ !"

ಮಗನು ತನ್ನ ಕಂಬನಿಯನ್ನು ನೋಡಬಾರದೆಂದು ತಾಯಿ ಅಡುಗೆ ಮನೆ ಯೊಳಕ್ಕೆ ಹೋದಳು.

ಅಂದ್ರೇಯ್ ಹಿಂತಿರುಗಿದಾಗ ಕತ್ತಲಾಗಿ ಹೊತ್ತಾಗಿತ್ತು. "ನಾನು ಹತ್ತು ಮೈಲು ನಡೆದಿರ್ಬೇಕು" ಎನ್ನುತ್ತ ಬಂದವನೇ ಆತ ಮಲಗಿಕೊಂಡನು.

"ಅದರಿಂದ ಸಹಾಯವಾಯ್ತೆ?" ಎಂದ ಪಾವೆಲ್.

"ಮಾತಾಡಿಸ್ಬೇಡ. ನಿದ್ದೆ ಬರ್‍ತಿದೆ ನಂಗೆ."

ಆಮೇಲಾತ ಮಾತಾಡಲಿಲ್ಲ.

ಸ್ವಲ್ಪ ಹೊತ್ತಿನಲ್ಲೆ, ವೆಸೊವ್‌ಶ್ಚಿಕೋವ್, ಎಂದಿನಂತೆ ಚಿಂದಿಯುಟ್ಟು ಕೊಳಕಾಗಿ ಅತೃಪ್ತಿಯಿಂದಲೇ, ಒಳಕ್ಕೆ ಬಂದ.

ಕೊಠಡಿಯಲ್ಲಿ ಅಡ್ಡಾದಿಡ್ಡಿಯಾಗಿ ನಡೆಯುತ್ತ, "ಇಸಾಯಿಯನ್ನು ಯಾರು ಕೊಂದರು ಗೊತ್ತೆ?" ಎಂದು ಆತ ಪಾವೆಲ್‌ನನ್ನು ಕೇಳಿದ.

"ಇಲ್ಲ" ಎಂದು ಪಾವೆಲ್ ಚುಟುಕಾಗಿ ಉತ್ತರವಿತ್ತ.

"ಆ ಕೆಲಸ ಮಾಡೋಕೆ ಏನೂ ಹಿಂಜರೀದೇ ಇದ್ದ ಯಾವನೋ ಸಿಕ್ಕಿರ್ಬೇಕು. ಅವನನ್ನು ಅಪ್ಪಳಿಸಿಬಿಡೋಕೆ ನಾನೇ ತಯಾರಾಗ್ತಾ ಇದ್ದೆ. ನಾನೇ ಅದನ್ನು ಮಾಡ್ತಿದ್ದೆ – ನಾನೇ ಅದಕ್ಕೆ ಸರ್‍ಯಾಗಿದ್ದೋನು......"

"ಸಾಕು ಆ ಮಾತು, ನಿಕೊಲಾಯ್" ಎಂದು ಸ್ನೇಹಸ್ವರದಲ್ಲಿ ಪಾವೆಲ್ ಹೇಳಿದ.

ತಾಯಿ ಮಮತೆಯಿಂದ ಮಾತಾಡಿದಳು:

"ಹೂಂ, ದೊಡ್ಡ ಯೋಚ್ನೆ! ಹೃದಯ ಇರೋದು ಬೆಣ್ಣೆ ಹಾಗೆ! ಮಾತು ಸಿಂಹದ್ದು! ಯಾಕೆ ಹೀಗಾಡ್ಬೇಕು?"

ಆ ಕ್ಷಣದಲ್ಲಿ ನಿಕೊಲಾಯಿಯನ್ನು ಕಂಡು ಆಕೆಗೆ ಸಂತೋಷವಾಯಿತು. ಸಿಡುಬಿನ ಕಲೆಯಿದ್ದ ಮುಖವೂ ಆಕರ್ಷಕವಾಗಿ ಆಕೆಗೆ ತೋರಿತು.

ಭುಜ ಕುಪ್ಪಳಿಸಿ ನಿಕೊಲಾಯ್‌ನೆಂದ:

"ಅಂಥ ಕೆಲಸವಲ್ಲದೆ ಬೇರೆ ಯಾವುದಾದೀತು ನನ್ನಿಂದ? ನನ್ನ ಸ್ಥಾನ ಎಲ್ಲೀಂತ ಯೋಚ್ನೆ ಮಾಡ್ತಾಲೇ ಇರ್‍ತೇನೆ. ನನಗೆ ಸ್ಥಾನವೇ ಇಲ್ಲ. ಜನರ ಜತೇಲಿ ಮಾತಾಡ್ಬೇಕು. ಏನು ಮಾತಾಡ್ಬೇಕೂಂತ ನಂಗೆ ಗೊತ್ತಿಲ್ಲ. ನನಗೆ ಎಲ್ಲಾ ಅರ್ಥವಾಗುತ್ತೆ. ನಾನು ಎಲ್ಲಾ ಅನ್ಯಾಯಗಳನ್ನೂ ಕಾಣ್ತೇನಿ. ಆದರೆ ಶಬ್ದಗಳ ರೂಪದಲ್ಲಿ ಹೇಳೋಕೆ ಆಗೋದಿಲ್ಲ. ಮೂಕಪ್ರಾಣಿ ಇದ್ದಹಾಗೆ ನಾನು...."

ನಿಕೊಲಾಯ್ ಪಾವೆಲ್‌ನತ್ತ ಸಾಗಿದ. ದೃಷ್ಟಿಯನ್ನು ಕೆಳಕ್ಕೆ ಬಾಗಿಸಿ, ಎಂದಿನ ಸ್ವರದ ಬದಲು ಮಗುವಿನಂತೆ ಮಾತಾಡುತ್ತಾ, ಮೇಜನ್ನು ತಟ್ಟುತ್ತಾ ನಿಂತ:

"ಮಾಡೋಕೆ ಏನಾದರೂ ಕಷ್ಟದ ಕೆಲಸ ನಂಗೆ ಕೊಡಿ, ಸೋದರರೆ. ಸುಮ್ಮನೆ ಏನೂ ಮಾಡದೆ ಕಾಲ ಕಳೆಯೋದು ನನ್ನಿಂದಾಗೋದಿಲ್ಲ. ನೀವೆಲ್ಲ ಮೈತುಂಬ ಕೆಲಸ ಹಚ್ಚಿಕೊಂಡಿದ್ದೀರಿ. ಚಳುವಳೀನೂ ಬೆಳೀತಿದೆ. ಆದರೆ ನಾನು ಕೈಕಟ್ಕೊಂಡು ಒಂದು ಬದೀಲಿ

ನಿಂತಿದ್ದೀನಿ ! ಮರ-ಹಲಗೆ ಸಾಗಿಸೋದೇ ನನ್ನ ಕೆಲಸ. ಇದೊಂದು ಬದುಕಿನ, ದುಡಿಮೆಯ ಗುರಿಯೆ ? ಹೆಚ್ಚಿನ ಕಷ್ಟದ ಕೆಲಸವೇನಾದರೂ ಕೊಡಿ !"

ಪಾವೆಲ್, ನಿಕೊಲಾಯ್‌ನ ಕೈಹಿಡಿದು ಎಳೆದುಕೊಂಡ.

"ಆಗಲಿ, ಕೊಡೋಣ," ಎಂದ.

ಕೊಠಡಿಯ ಆಚೆಯ ಭಾಗದಿಂದ ಅಂದ್ರೇಯ್‌ಯ ಸ್ವರ ಕೇಳಿಸಿತು:

"ನಿಕೊಲಾಯ್, ನಿಂಗೆ ಮೊಳೆ ಜೋಡಿಸೋಕೆ ಕಲಿಸ್ತೀನಿ. ಏನಂತೀಯಾ ?"

ನಿಕೊಲಾಯ್, ಅಂದ್ರೇಯ್‌ನ ಬಳಿಗೆ ಹೋದನು.

"ಕಲಿಸಿದರೆ – ನಾನು ನನ್ನ ಚೂರೀನ ನಿಂಗೆ ಬಹುಮಾನ ಕೊಡ್ತೀನಿ !" ಎಂದನು.

"ಬೆಂಕಿ ಹಾಕು ನಿನ್ನ ಚೂರಿಗೆ !" ಎಂದು ಗಟ್ಟಿ ಸ್ವರದಲ್ಲಿ, ಗೊಳ್ಳನೆ ನಕ್ಕು, ಅಂದ್ರೇಯ್ ಹೇಳಿದ.

"ಒಳ್ಳೇ ಚೂರಿಯಪ್ಪ," ಎಂದು ನಿಕೊಲಾಯ್ ಒತ್ತಾಯಿಸಿದ.

ಪಾವೆಲ್‌ಗೂ ನಗು ಬಂತು. ಕೊಠಡಿಯ ನಡುವೆ ನಿಂತು ನಿಕೊಲಾಯ್, "ನನ್ನನ್ನು ನೋಡಿ ನಗ್ತೀದೀರಾ ?" ಎಂದ.

ಹಾಸಿಗೆಯಿಂದ ಹಾರಿ ಎದ್ದು ಅಂದ್ರೇಯ್‌ನೆಂದ:

"ಅಲ್ಲದೆ ! ಇಲ್ಲಿ ಕೇಳು, ಸ್ವಲ್ಪ ತಿರುಗಾಡ್ಕೊಂಡು ಬರೋಣ ನಾವು. ತಿಂಗಳ ಬೆಳಕು ಎಷ್ಟೊಂದು ಸೊಗಸಾಗಿದೆ – ಬರ್ತೀರಾ !"

"ಸರಿಯಪ್ಪ," ಎಂದ ಪಾವೆಲ್.

"ನಾನೂ ಬರ್ತೀನಿ. ಅಂದ್ರೇಯ್ ನಗೋದನ್ನ ಕೇಳೋಕೆ ತುಂಬಾ ಇಷ್ಟ ನಂಗೆ" ಎಂದು ನಿಕೊಲಾಯ್‌ನೂ ಹೊರಡಲು ಸಿದ್ಧವಾದ.

"ನೀನು ಬಹುಮಾನದ ವಾಗ್ದಾನ ಮಾಡೋದನ್ನ ಕೇಳೋ ಇಷ್ಟ ನಂಗೆ" ಎಂದ ಅಂದ್ರೇಯ್ ನಗುತ್ತ.

ಆತ ಬಟ್ಟೆ ಹಾಕಿಕೊಳ್ಳಲೆಂದು ಅಡುಗೆ ಮನೆಯೊಳಕ್ಕೆ ಹೋದ.

"ಬೆಚ್ಚಗಿರೋ ಬಟ್ಟೆ ಹಾಕ್ಕೊಳ್ಳಪ್ಪ," ಎಂದು ತಾಯಿ ಒತ್ತಾಯಿಸಿದಳು.

ಮೂವರು ಹೊರಟ ಬಳಿಕ, ತಾಯಿ ಅವರನ್ನೆ ದಿಟ್ಟಿಸುತ್ತ ನಿಂತಳು. ಆ ಮೇಲೆ ಕ್ರಿಸ್ತನ ಚಿತ್ರ ಫಲಕವನ್ನ ನೋಡಿ ಪಿಸುಧ್ವನಿಯಲ್ಲಿ ತೊದಲಿದಳು:

"ದೇವರೇ, ಅವರಿಗೆ ಒಳ್ಳೇದು ಮಾಡು, ಅವರಿಗೆ ಸಹಾಯ ಮಾಡು !"

## ೨೬

ಮೇ ದಿನ ಸಮೀಪಿಸುತ್ತಿದ್ದುದನ್ನು ನೆನೆಸಿಕೊಳ್ಳುವುದಕ್ಕೂ ಪುರಸೊತ್ತಿಲ್ಲದ ಹಾಗೆ, ದಿನಗಳು ಬೇಗ ಬೇಗನೆ ಉರುಳುತ್ತಿದ್ದುವು. ಆದರೆ ರಾತ್ರೆ ಹೊತ್ತು, ದಿನದ ಗದ್ದಲ ಗೊಂದಲದ ಕಾರ್ಯಕಲಾಪಗಳ ಬಳಿಕ ಮಲಗಿಕೊಂಡಾಗ, ತಾಯಿಯ ಹೃದಯದಲ್ಲಿ ಹೊಯ್ದಾಟವಾಗುತ್ತಿತ್ತು.

"ಒಮ್ಮೆ ಆ ದಿನ ವೇಗನೆ ಬಂದು ಮುಗಿದುಹೋದರೆ ...."

ಉಷಃಕಾಲದಲ್ಲಿ ಕಾರಖಾನೆಯ ಸಿಳ್ಳು ಕೇಳಿಸುತ್ತಿತ್ತು. ಮಗನೂ ಅಂದ್ರೇಯ್‌ನೂ ಅವಸರದಲ್ಲೇ ತಿಂಡಿ ತಿಂದು ಚಾ ಕುಡಿದು ಹೊರಡುತ್ತಿದ್ದರು. ತಾಯಿಗೆ ಹತ್ತಾರು ಕೆಲಸ ಹೇಳಿ ಹೋಗುತ್ತಿದ್ದರು. ಪಂಜರದಲ್ಲಿದ್ದ ಅಳಿಲಿನ ಹಾಗೆ ದಿನವೆಲ್ಲಾ, ಚಟುವಟಿಕೆಯಿಂದ, ಊಟ ತಯಾರಿಸುವುದು, ಪೋಸ್ಟರ್ ಬರೆಯಲು ಕೆಂಪು ಶಾಯಿಯನ್ನು ಹಾಗೂ ಅಂಟಿಸಲು ಗೋಂದು ಸಿದ್ಧಪಡಿಸುವುದು ಈ ಕೆಲಸಗಳನ್ನೆಲ್ಲಾ ಮಾಡುತ್ತಿದ್ದಳು. ಅಪರಿಚಿತರು ಎಲ್ಲಿಂದಲೋ ರಹಸ್ಯವಾಗಿ ಬರುತ್ತಿದ್ದರು. ಪಾವೆಲ್‌ಗೆಂದು ಚೀಟಿಗಳನ್ನು ಕೊಟ್ಟು ಅಷ್ಟೇ ರಹಸ್ಯವಾಗಿ ಅದೃಶ್ಯರಾಗಿ, ತಮ್ಮ ಉದ್ವಿಗ್ನತೆಯ ಶಾಖವನ್ನು ಆಕೆಗೂ ತಗಲಿಸಿ ಹೋಗುತ್ತಿದ್ದರು.

ಹೆಚ್ಚು ಕಡಮೆ ಪ್ರತಿ ರಾತ್ರೆಯೂ, ಮೇ ದಿನಾಚರಣೆಯಲ್ಲಿ ಭಾಗವಹಿಸಲು ಕಾರ್ಮಿಕರಿಗೆ ಕರೆ ಕೊಡುವ ಕರಪತ್ರಗಳನ್ನು ಬೇಲಿಗಳ ಮೇಲೆ ಅಂಟಿಸಲಾಗುತ್ತಿತ್ತು. ಪೋಲೀಸ್ ಠಾಣ್ಯದ ಬಾಗಿಲಿನ ಮೇಲೂ ಆ ಕರಪತ್ರಗಳಿರುತ್ತಿದ್ದುವು. ಕಾರಖಾನೆಯಲ್ಲಿ ದಿನವೂ ಅವು ಸಿಗುತ್ತಿದ್ದುವು. ಪ್ರತಿ ದಿನವೂ ಬೆಳಗ್ಗೆ, ಪೋಲೀಸರು ಕಾರ್ಮಿಕರ ವಸತಿಗೆ ಬಂದು ಆ ಕರಪತ್ರಗಳನ್ನು ಹರಿದು ತೆಗೆಯುತ್ತಿದ್ದರು. ಆದರೆ ಊಟದ ಹೊತ್ತಿಗೆ ಹೊಸ ಕರಪತ್ರಗಳು ಗಾಳಿಯಲ್ಲಿ ಹಾರಾಡಿಕೊಂಡು ಬರುತ್ತಿದ್ದುವು. ಶಹರದಿಂದ ಗೂಢಚಾರರು ಬಂದರು. ಅವರು ಊಟದ ಹೊತ್ತು ಕಾರಖಾನೆಯ ಹೊರಕ್ಕೂ ಒಳಕ್ಕೂ ನಗು ನಗುತ್ತ ಹೋಗುತ್ತ ಬರುತ್ತಲಿದ್ದ ಕೂಲಿಕಾರರ ಮುಖಗಳನ್ನು ಪರೀಕ್ಷಿಸಿದರು. ಪರಿಸ್ಥಿತಿಯನ್ನು ಹತೋಟಿಯಲ್ಲಿಡಲಾರದೆ ಅಸಹಾಯರಾಗಿದ್ದ ಪೋಲೀಸರನ್ನು ಕಂಡು ಪ್ರತಿಯೊಬ್ಬನಿಗೂ ಸಂತೋಷವಾಗಿತ್ತು. ವೃದ್ಧರಾದ ಕೆಲಸಗಾರರು ಕೂಡಾ "ಅವರು ಮಾಡ್ತಿರೋದನ್ನ ನೋಡಿದಿಯಾ !" ಎಂದು ಮುಗುಳ್ನಗುತ್ತಲೇ ಪರಸ್ಪರ ಆಪ್ತರೊಡನೆ ಮಾತನಾಡುತ್ತಿದ್ದರು.

ವಿನಂತಿಯ ಕರಪತ್ರವನ್ನು ಉತ್ಸಾಹದಿಂದ ಚರ್ಚಿಸುತ್ತಿದ್ದ ಜನರ ಗುಂಪುಗಳನ್ನು ಎಲ್ಲೆಲ್ಲಿಯೂ ಕಾಣಬಹುದಾಗಿತ್ತು. ಜೀವನ ಚೇತನಪೂರ್ಣವಾಗಿತ್ತು. ಆ ವಸಂತ ಕಾಲ ರಸಭರಿತವಾಗಿ, ಪ್ರತಿಯೊಬ್ಬರಿಗೂ ಹೊಸ ಹೊಸ ಅನುಭವಗಳಾಗುತ್ತಿದ್ದುವು. ಕೆಲವರಿಗೆ ಆ ಚಟುವಟಿಕೆಗಳಿಂದ ಹೆಚ್ಚು ಸಿಟ್ಟು ಬಂತು. ಅವರು ಬಂಡಾಯಗಾರರನ್ನು ಚೆನ್ನಾಗಿ ಶಪಿಸಿದರು. ಕೆಲವರಲ್ಲಿ ಅಸ್ಪಷ್ಟ ಆಸೆ ಉದಯವಾಯಿತು; ಕಾತರ ತಲೆದೋರಿತು. ಅಲ್ಪ ಸಂಖ್ಯೆಯಲ್ಲಿದ್ದ ಇನ್ನಿತರರಿಗೆ, ಜನರ ನಡುವಿನ ಈ ಎಲ್ಲ ಪ್ರಕ್ಷೋಭೆಗೆ ತಾವೇ ಕಾರಣರೆಂಬ ತೀವ್ರ ಆನಂದದ ಅನುಭವವಾಯಿತು.

ಪಾವೆಲ್ ಮತ್ತು ಅಂದ್ರೇಯ್‌ಗೆ ನಿದ್ದೆ ಎಂಬುದೇ ಇರಲಿಲ್ಲ. ಅವರು ಮುಂಬೆಳಗಿನ ಹೊತ್ತಿಗೆ, ಬಾಡಿದ ಬಳಲಿದ ಮುಖದೊಡನೆ, ಸ್ವರ ಒಡೆದ ಗಂಟಲಿನೊಡನೆ, ಮನೆಗೆ ಮರಳುತ್ತಿದ್ದರು. ರಾತ್ರೆ ಹೊತ್ತು, ಜವುಗು ಪ್ರದೇಶದಲ್ಲೂ ಕಾಡಿನಲ್ಲೂ ಅವರು ಸಭೆ ಜರುಗಿಸುತ್ತಿದ್ದರೆಂದು ತಾಯಿಗೆ

ಗೊತ್ತಿತ್ತು. ಕುದುರೆ ಸವಾರರಾದ ಪೋಲೀಸರು ರಾತ್ರಿ ವೇಳೆ, ವಸತಿ ಪ್ರದೇಶದ ಸುತ್ತಲೂ ಗಸ್ತು ತಿರುಗುತ್ತಿದ್ದರು. ಗೂಢಚಾರರು ಎಲ್ಲೆಡೆಗಳಲ್ಲೂ ನುಸುಳಿಕೊಂಡಿದ್ದರು. ಕೆಲಸಗಾರರು ಒಬ್ಬೊಬ್ಬರಾಗಿ ದೊರೆತಾಗ ಹಿಡಿದು ಅವರನ್ನು ಶೋಧಿಸುತ್ತಿದ್ದರು. ಜನರ ಗುಂಪುಗಳು ತಮ್ಮ ಕಣ್ಣಿಗೆ ಬಿದ್ದಾಗ ಹೋಗಿ ಚೆದರಿಸುತ್ತಿದ್ದರು. ಕೆಲವೊಮ್ಮೆ ಕೆಲವರನ್ನು ಬಂಧಿಸುತ್ತಿದ್ದರು. ಇದೆಲ್ಲವೂ ತಾಯಿಗೆ ಗೊತ್ತಿತ್ತು. ತನ್ನ ಮಗನಿಗೂ ಅಂದ್ರೇಯ್‌ಗೂ ಬಂಧನದ ಅಪಾಯ ಹೆಜ್ಜೆ ಹೆಜ್ಜೆಗೂ ತಪ್ಪಿದ್ದಲ್ಲವೆಂದು ಅವಳು ಮನಗಂಡಿದ್ದಳು. ಆಗಲೇ ಅವರ ಬಂಧನವಾದರೆ ಹಿತವೆಂದು ಯೋಚಿಸಿ, ಹಾಗಾಗಲೆಂದು ಅವಳು ಆಶಿಸಿದ್ದಳು.

ಯಾವುದೋ ಅವ್ಯಕ್ತ ಕಾರಣಕ್ಕಾಗಿ ಟೈಮ್‌ಕೀಪರ್‌ನ ಕೊಲೆಯ ತನಿಖೆಯು ಸದ್ದೇ ನಿಂತು ಹೋಯಿತು. ಎರಡು ದಿನ ಸ್ಥಳೀಯ ಪೋಲೀಸರು ತನಿಖೆ ನಡೆಸಿದರು. ಆದರೆ ಹತ್ತು ಹನ್ನೆರಡು ಜನರನ್ನು ವಿಚಾರಿಸಿದ ಮೇಲೆ, ಆ ಕೊಲೆಯ ವಿಷಯದಲ್ಲಿ ಅವರು ಆಸಕ್ತಿ ತೋರಿಸಲಿಲ್ಲ.

ಮರೀಯ ಕೊರ್ಸುನೋವ, ಎಲ್ಲರ ಜೊತೆಯಲ್ಲಿದ್ದಂತೆ ಪೋಲೀಸರೊಡನೆಯೂ ಒಳ್ಳೆಯ ಸಂಬಂಧವಿರಿಸಿಕೊಂಡಿದ್ದಳು. ತಾಯಿಯೊಡನೆ ಮಾತನಾಡುತ್ತಿದ್ದಾಗ ಒಂದು ದಿನ ಕೊಲೆಯ ಬಗೆಗೆ ಪೋಲೀಸರ ಅಭಿಪ್ರಾಯವೇನೆಂಬುದನ್ನು ಆಕೆ ತಿಳಿಸಿದಳು.

"ಕೊಲೆ ಮಾಡಿದವನನ್ನ ಹುಡುಕೋದಾದರೂ ಎಲ್ಲಿ ಸಾಧ್ಯ? ಆ ದಿನ ಬೆಳಿಗ್ಗೆ ಸುಮಾರು ನೂರು ಜನರಾದರೂ ಇಸಾಯ್‌ನನ್ನು ಕಂಡಿರ್ಬೇಕು. ಅವರಲ್ಲಿ ಕಡಮೆ ಯೆಂದರೆ ತೊಂಭತ್ತು ಜನರಾದರೂ ತಾವೇ ಸ್ವತಃ ಇಸಾಯ್‌ನ ಮುಗಿಸಿಬಿಡೋಕೆ ಸಂತೋಷದಿಂದ ಮುಂದಾಗುವಂಥವರು. ಏಳು ವರ್ಷ ಕಾಲ ಎಷ್ಟೊಂದು ಜನರಿಗೆ ಅವನು ಹಿಂಸೆ ಕೊಟ್ಟಿಲ್ಲ?"

....ಅಂದ್ರೇಯ್ ತುಂಬ ಬದಲಾದ. ಮುಖ ತೆಳ್ಳಗಾಯಿತು. ಕಣ್ಣೆವೆಗಳು ಊದಿಕೊಂಡು, ಅವನ ವಿಶಾಲವಾದ ಕಣ್ಣುಗಳನ್ನು ಅರ್ಧ ಮುಚ್ಚಿದುವು. ಮೂಗಿನ ಹೊಳ್ಳೆಗಳಿಂದ ಬಾಯಿಯವರೆಗೆ ಅಗಲ ಕಿರಿದಾದ ರೇಖೆಗಳು ಕಾಣಿಸಿಕೊಂಡುವು. ದಿನನಿತ್ಯದ ವಿಷಯಗಳ ಬಗೆಗೆ ಅವನು ಮಾತಾಡುವುದು ಕಡಮೆಯಾಯಿತು. ಆದರೆ ಹೆಚ್ಚು ಹೆಚ್ಚಾಗಿ ಆತ, ಆಗಾಗ್ಗೆ ಮೈಮರೆತು, ವಿಚಾರವೂ ಸ್ವಾತಂತ್ರ್ಯವೂ ವಿಜಯಿಯಾಗುವಂಥ ಭವಿಷ್ಯತ್ತಿನ ಚಿತ್ರವನ್ನು ಕಲ್ಪಿಸಿ – ವಿವರಿಸಿ, ಕೇಳುವವರಲ್ಲಿ ರೋಮಾಂಚವೆಬ್ಬಿಸುತ್ತಿದ್ದ.

ಇಸಾಯ್‌ನ ಕೊಲೆಯ ಮಾತು ನಿಂತು ಹೋದಾಗಲೊಮ್ಮೆ ಒಡನೆಯೆ ಒಡನೆ ಆತ ಹೇಳಿದ:

"ಜನರೆಂದರೆ ಚಿಕ್ಕಾಸಿನ ಬೆಲೆಯೂ ಇಲ್ಲ ಅವರಿಗೆ. ನಮ್ಮ ಮೇಲೆ ಬೇಟೆ ನಾಯಿಗಳಾಗಿ ಉಪಯೋಗಿಸೋ ತಮ್ಮ ಜನರೆಂದರೂ ಅಷ್ಟೇ. ಅವರಿಗೆ ದುಃಖ ವಾಗೋದು ತಮ್ಮ ಬಾಡಿಗೆಯ ಬಂಟರು ಹೋದರೂಂತಲ್ಲ – ತಮ್ಮ ಹಣ ವ್ಯರ್ಥವಾಯಿತಲ್ಲಾ ಅಂತ!"

"ಅಂದ್ರೇಯ್ ! ಸಾಕು ಅಂಥ ಮಾತು !" ಎಂದು ಪಾವೆಲ್ ದೃಢವಾಗಿ ಹೇಳಿದ.

"ಮೊದಲೇ ಕೊಳೆತಿತ್ತು. ಮುಟ್ಟಿದ್ಕೂಡಲೆ ಬಿತ್ತು. ಅಷ್ಟೆ," ಎಂದು ತಾಯಿ ಸ್ವರ ಕೂಡಿಸಿದಳು.

"ಹಾಗೆ ಹೇಳೋದೇನೋ ನ್ಯಾಯ; ಆದರೆ ಹೆಚ್ಚಿನ ಸಮಾಧಾನವಿಲ್ಲ ಅದರಿಂದ," ಎಂದು ಅಂದ್ರೇಯ್ ಖಿನ್ನನಾಗಿ ಉತ್ತರವಿತ್ತ.

ಈ ಮಾತನ್ನಾತ ಆಗಾಗ್ಗೆ ಹೇಳುತ್ತಿದ್ದ. ಹಾಗೆ ಹೇಳಿದಾಗ ಆ ಪದಗಳು, ಎಲ್ಲರಿಗೂ ಅನ್ವಯಿಸುವ ತೀಕ್ಷ್ಣವಾದ ಕಟುವಾದ ಮಾತಾಗಿ ವಿಸ್ತಾರಗೊಳ್ಳುತ್ತಿದ್ದುವು.

ಅಂತೂ ಕೊನೆಗೆ ಬಹಳ ಕಾಲದಿಂದ ನಿರೀಕ್ಷಿಸಿದ್ದ ಮೇ ಮೊದಲ ದಿನ ಬಂತು.

ಎಂದಿನಂತೆ ಚುರುಕಾಗಿಯೇ ಕೇಳಿಸಿತು ಸಿಳ್ಳು. ರಾತ್ರೆಯೆಲ್ಲಾ ಕಣ್ಣನ್ನೇ ಮುಚ್ಚದೆ ಇದ್ದ ತಾಯಿ, ಹಾಸಿಗೆಯಿಂದ ಹಾರಿ ಎದ್ದು, ಹಿಂದಿನ ಸಂಜೆಯೇ ಸಿದ್ಧಗೊಳಿಸಿದ್ದ ಸಮೊವಾರನ್ನು ಹಚ್ಚಿದಳು. ಇನ್ನೇನು, ಎಂದಿನಂತೆ ಹುಡುಗರ ಕೊಠಡಿಯ ಬಾಗಿಲನ್ನು ಆಕೆ ಬಡೆಯಬೇಕು. ಆದರೆ ಆಕೆ, ಅವರನ್ನು ಎಬ್ಬಿಸದಿರುವುದೇ ವಾಸಿ ಎಂದುಕೊಂಡು, ಹಲ್ಲುನೋವಿದ್ದವರ ಹಾಗೆ ಮುಖದ ಮೇಲೊಂದು ಕೈ ಇರಿಸಿ, ಕಿಟಕಿಯ ಬಳಿ ಕುಳಿತಳು.

ಮ್ಲಾನವಾದ ನೀಲ ಆಕಾಶದ ಅಗಲಕ್ಕೆ, ನಸುಗೆಂಪಿನ, ಮತ್ತು ಬಿಳಿಯ ಮೋಡಗಳ ಗುಂಪು ತೇಲಿಹೋಗುತ್ತಿತ್ತು. ಕಾರಖಾನೆಯ ಉರಿಯ ಗರ್ಜನೆಗೆ ಹೆದರಿ ಹಾರಿಹೋಗುವ ಸಹಸ್ರಾರು ಹಕ್ಕಿಗಳ ಹಾಗೆ ತಾಯಿ ಮೋಡಗಳನ್ನೆ ನೋಡುತ್ತ, ತನ್ನದೇ ವಿಚಾರಗಳಲ್ಲಿ ಮಗ್ನಳಾಗಿ ಕುಳಿತಳು. ತಲೆ ಭಾರವಾಗಿತ್ತು. ಕಣ್ಣುಗಳು ಒಣಗಿದ್ದು, ರಾತ್ರೆ ನಿದ್ದೆಯಿಲ್ಲದೆ ಕೆಂಪಗಾಗಿದ್ದುವು. ವಿಚಿತ್ರವಾದ ಶಾಂತತೆ ಅವಳನ್ನು ಆವರಿಸಿತ್ತು. ಹೃದಯ ಒಂದೇ ಸಮನೆ ಬಡಿದುಕೊಳ್ಳುತ್ತಿತ್ತು. ಸರಳ ವಿಚಾರಗಳು ಮನಸ್ಸನ್ನು ತುಂಬಿದ್ದುವು.

"ಸುಮ್ಮನೆ ಇಷ್ಟು ಬೇಗ ಸಮೊವಾರ್ ಹಚ್ಚಿದೆ.... ನೀರೆಲ್ಲ ಕುದಿದು ಹೋಗುತ್ತಲ್ಲಾ.... ಇವರಿಬ್ಬರಿಗೂ ಆಯಾಸವಾಗಿದೆ. ಈ ಬೆಳಿಗ್ಗೆ ಇಬ್ಬರೂ ಸ್ವಲ್ಪ ಹೆಚ್ಚು ಹೊತ್ತೇ ಮಲಕ್ಕೊಳ್ಳಲಿ...." ಎಂದು ಆಕೆ ಯೋಚಿಸಿದಳು.

ಸೂರ್ಯನದೊಂದು ಎಳೆಯ ಕಿರಣ ನಗುತ್ತ ಕಿಟಕಿಯತ್ತ ಹಣಿಕಿ ಹಾಕಿತು. ತಾಯಿ ಅದರೆಡೆಗೆ ಕೈ ಚಾಚಿದಳು. ಆಕೆಯ ಚರ್ಮದ ಮೇಲೆ ಅದು ಬೆಚ್ಚಗೆ ತಗಲಿಕೊಂಡಾಗ, ಸೌಮ್ಯವಾಗಿ ಧ್ಯಾನಾಸಕ್ತವಾಗಿ ಮುಗುಳ್ನಗುತ್ತ, ಇನ್ನೊಂದು ಕೈಯಿಂದ ಆ ರಶ್ಮಿಯನ್ನು ಮೆಲ್ಲನೆ ತಟ್ಟಿದಳು. ಆಮೇಲೆ ಎದ್ದು, ಸದ್ದಿಲ್ಲದೆ, ಬೆಂಕಿಯನ್ನು ಕಡಮೆ ಮಾಡಿದಳು. ಅದಾದ ಮೇಲೆ, ಮುಖ ತೊಳೆದುಕೊಂಡು, ನಿರಂತರವಾಗಿ ಶಿಲುಬೆಯ ವಂದನೆ ಮಾಡುತ್ತ, ಮೌನವಾಗಿ ತುಟಿಯಲುಗಿಸುತ್ತ, ಪ್ರಾರ್ಥಿಸತೊಡಗಿದಳು. ಆಕೆಯ ಮುಖ ಬೆಳಗಿತು. ಬಲ ಹುಬ್ಬು ಮೆಲ್ಲನೆ ಏರುತ್ತ ಇಳಿಯುತ್ತಲಿತ್ತು.

ಎರಡನೆಯ ಸಿಳ್ಳು ಮೊದಲಿನಂತೆ ಬಲವಾಗಿರಲಿಲ್ಲ; ತೀಕ್ಷ್ಣವಾಗಿರಲಿಲ್ಲ. ದಪ್ಪಗಿನ

ಆವಿ ತುಂಬಿದ ಆ ಸ್ವರದಲ್ಲಿ ಸಣ್ಣ ನಡುಕವಿದ್ದ ಹಾಗೆ ತೋರುತ್ತಿತ್ತು. ಎಂದಿಗಿಂತ ಹೆಚ್ಚು ದೀರ್ಘವಾಗಿ ಅದು ಶಬ್ದಿಸಿದಂತೆ ತಾಯಿಗೆ ಭಾಸವಾಯಿತು.

ಪಕ್ಕದ ಕೊಠಡಿಯಿಂದ, ಅಂದ್ರೇಯ್‌ನ ಆಳವಾದ ಸ್ವಚ್ಛವಾದ ಸ್ವರ ಬಂತು:

"ಕೇಳಿಸ್ತಾ, ಪಾವೆಲ್?"

ಯಾರದೋ ಬರಿಗಾಲು ಒಳಗೆ ನೆಲವನ್ನು ಹಾದು ನಡೆದ ಸಪ್ಪಳವಾಯಿತು. ಅವರಲ್ಲೊಬ್ಬ ಅತಿ ದೊಡ್ಡದಾಗಿ ಆಕಳಿಸಿದ.

"ಚಹಾ ಮಾಡಲು ನೀರು ಬಿಸಿಯಾಗಿದೆ," ಎಂದು ತಾಯಿ ಕರೆದು ಹೇಳಿದಳು.

"ಏಳ್ತಿದ್ದೀವಿ," ಎಂದು ಪಾವೆಲ್ ಆನಂದದ ಸ್ವರದಲ್ಲಿ ಉತ್ತರವಿತ್ತ.

"ಸೂರ್ಯ ಏಳ್ತಿದ್ದಾನೆ. ಆಕಾಶದಲ್ಲಿ ಮೋಡಗಳೂ ಇವೆ. ಈ ದಿವಸ ಶುಭ್ರವಾಗಿದ್ದರೆ ಚೆನ್ನಾಗಿತ್ತು," ಎಂದ ಅಂದ್ರೇಯ್.

ಆತ ಅಡುಗೆಮನೆಯೊಳಕ್ಕೆ ಬಂದ. ನಿದ್ದೆಯಲ್ಲಿ ಮುದುಡಿ ಆತ ಸುಕ್ಕುಗಟ್ಟಿದ್ದ. ಆದರೆ ಮನಸ್ಸು ತುಂಬ ಉಲ್ಲಾಸವಾಗಿತ್ತು.

"ಎದ್ದೆಯಾ ಅವ್ವ? ರಾತ್ರೆ ಚೆನ್ನಾಗಿ ನಿದ್ದೆಬಂತಾ?"

ತಾಯಿ ಅವನ ಬಳಿಗೆ ಹೋಗಿ ಮೆಲ್ಲನೆ, "ಅಂದ್ರ್ಯೂಷ, ಮೆರವಣಿಗೇಲಿ ನೀನು ಅವನ ಜತೇಲೇ ಇರಬೇಕಪ್ಪ" ಎಂದಳು.

"ಖಂಡಿತ ಇರ್ತೇನೆ! ಯೋಚನೆಯೇ ಬೇಡ, ಅವ್ವ. ಒಟ್ಟಿಗೆ ಇರೋವಷ್ಟು ಕಾಲ ಅವನ ಪಕ್ಕದಲ್ಲೇ ನಡೀತೀನಿ!" ಎಂದು ಆತ ಪಿಸುಗುಟ್ಟಿದ.

"ಏನದು ಪಿಸುಮಾತು?" ಎಂದು ಕೇಳಿದ ಪಾವೆಲ್.

"ವಿಶೇಷವೇನೂ ಇಲ್ಲ, ಪಾಷ," ಎಂದಳು ತಾಯಿ.

"ಕಿವಿ ಹಿಂದುಗಡೇನೂ ಚೆನ್ನಾಗಿ ತೊಳಕೋಂತ ಹೇಳ್ತಿದಾಳೆ! ಹುಡುಗೀರು ಇವತ್ತು ನನ್ನ ಮೇಲೆ ಕಣ್ಣಿಡ್ತಾರಂತೆ!" ಎಂದು ಅಂದ್ರೇಯ್, ಮುಖ ತೊಳೆದುಕೊಳ್ಳಲೆಂದು ಬಾಗಿಲತ್ತ ಹೋಗುತ್ತ, ಹೇಳಿದ.

"ಹೋರಾಡಲೇಳಿ, ಓ ಕಾರ್ಮಿಕರೇ, ಏಳಿ!" ಎಂದು ಪಾವೆಲ್ ಮೆಲು ಸ್ವರದಲ್ಲಿ ಹಾಡಿದ.

ಹಗಲು ಹೆಚ್ಚಿದಂತೆ ವಾತಾವರಣ ಶುಭ್ರವಾಯಿತು. ಮೋಡಗಳನ್ನು ಗಾಳಿ ಓಡಿಸಿಬಿಟ್ಟಿತು. ಬೆಳಿಗ್ಗೆ ನಗೆಮಾತುಗಳನ್ನಾಡುತ್ತಾ ಅವರು ಹೊತ್ತು ಕಳೆಯುತ್ತಿದ್ದರು. ಮುಂದೆ ಆ ದಿನ ಏನಾಗಲಿತ್ತೋ ಯಾರಿಗೂ ಗೊತ್ತಿರಲಿಲ್ಲ. ಇದೆಲ್ಲಾ ಎಷ್ಟು ವಿಚಿತ್ರವೆಂದು ತನ್ನಷ್ಟಕ್ಕೇ ಯೋಚಿಸುತ್ತ ತಾಯಿ, ತಲೆಯಲುಗಿಸುತ್ತ, ತಿಂಡಿಯ ತಟ್ಟೆಗಳನ್ನು ತಂದು ಮೇಜಿನ ಮೇಲಿರಿಸಿದಳು. ಅಂತೂ ಯಾಕೋ, ಸಮಾಧಾನದಿಂದ, ಹೆಚ್ಚು ಕಡಮೆ ಸಂತೋಷದಿಂದಲೇ, ಆಕೆ ಹೊತ್ತು ಕಳೆದಳು.

ಹೊತ್ತು ಕಳೆಯಲೆಂದು ನಿಧಾನವಾಗಿ ತಿಂಡಿ ತಿನ್ನುತ್ತ ಚಹಾ ಹೀರುತ್ತಿದ್ದರು. ಎಂದಿನಂತೆ ನಿಧಾನವಾಗಿ, ಎಚ್ಚರಿಕೆಯಿಂದ, ಲೋಟದಲ್ಲಿದ್ದ ಸಕ್ಕರೆಯನ್ನು ಪಾವೆಲ್

ಕಲಕಿದ. ಬ್ರೆಡ್ಡಿನ ಮೇಲೆ, ತಾನು ಯಾವಾಗಲೂ ಮೆಚ್ಚುವ ಅದರ ಕೊನೇ ತುಂಡಿನ ಮೇಲೆ, ಉಪ್ಪನ್ನು ಮಿತವಾಗಿ ಸಮವಾಗಿ ಹರಡಿದ. ಅಂದ್ರೇಯ್ ಮೇಜಿನ ಕೆಳಗೆ ಕಾಲುಗಳನ್ನು ಅತ್ತಿತ್ತ ಆಡಿಸುತ್ತ, ಜಹಾದಿಂದ ಪ್ರತಿಬಿಂಬಿತವಾದ ಸೂರ್ಯರಶ್ಮಿ ಯೊಂದು ಗೋಡೆಯ ಮೇಲೂ ಮಾಡಿನಲ್ಲೂ ಕುಣಿಯುತ್ತಿದ್ದುದನ್ನು ನೋಡುತ್ತ ಕುಳಿತ.

ಅವನೆಂದ:

"ನಾನು ಹತ್ತು ವರ್ಷದ ಹುಡುಗನಾಗಿದ್ದಾಗ ಒಮ್ಮೆ, ಗ್ಲಾಸಿನಲ್ಲಿ ಸೂರ್ಯನನ್ನ ಹಿಡೀಬೇಕೂಂತ ಆಸೆಯಾಯ್ತು. ಒಂದು ಗಾಜಿನ ಲೋಟವನ್ನೆತ್ತಿ, ಸೂರ್ಯನಿಗೆ ಅಡ್ಡ ಹಿಡಿದೆ. ಒಡೀತು ಗ್ಲಾಸು! ಕೈಗೆ ಗಾಯವಾಯ್ತು; ಮನೇಲಿ ಏಟೂ ಬಿತ್ತು. ಏಟು ಬಿದ್ಮೇಲೆ ನಾನು ಹಿತ್ತಿಲಿಗೆ ಹೋದೆ. ಅಲ್ಲಿ ಒಂದು ಕಡೆ ಕೆಸರಿನಲ್ಲಿ ಸೂರ್ಯ ಇದ್ದುದನ್ನು ಕಂಡೆ. ಎಲ್ಲ ಶಕ್ತಿ ಪ್ರಯೋಗಿಸಿ ಅವನನ್ನ ತುಳಿದೆ. ಕೆಸರಿನ ಸ್ನಾನ ಆಗಿಯೇ ಆಯ್ತು ನನಗೆ. ಅದಕ್ಕಾಗಿ ಮತ್ತೊಂದು ಸಾರಿ ಏಟು ಬಿತ್ತು. ಸೂರ್ಯನ ಕಡೆ ತಿರುಗಿ ನಾಲಿಗೆ ಚಾಚಿ 'ನೋವಾಗಿಲ್ಲ, ನಂಗೆ, ಕೆಂಪು ತಲೆಯ ಸೈತಾನ! ನೋವಾಗಿಲ್ಲ!' ಎಂದು ಬೊಬ್ಬಿಟ್ಟೆ. ಅದೊಂದೇ ನನ್ ಕೈಲಿ ಸಾಧ್ಯವಾದ ಪ್ರತೀಕಾರ. ಹಾಗೆ ಹೇಳಿ ದ್ದರಿಂದ ನನಗೆ ಸ್ವಲ್ಪ ಸಮಾಧಾನವಾಯ್ತು."

"ಸೂರ್ಯನನ್ನ ಕೆಂಪು ತಲೆಯವನೂಂತ ಯಾಕೆ ಕರೆದಿದ್ದು?" ಎಂದು ಪಾವೆಲ್ ನಗುತ್ತ ಕೇಳಿದ.

"ನಮ್ಮ ಬೀದಿಯಾಚೆಗೆ ದೊಡ್ಡ ಕೆಂಪು ಮುಖದ ಕೆಂಪು ಗಡ್ಡದ ಕಮ್ಮಾರ ನೊಬ್ಬನಿದ್ದ. ಆತ ರಸಿಕ, ಒಳ್ಳೆ ಹೃದಯದವ. ಸೂರ್ಯ ಅವನನ್ನ ಹೋಲುತ್ತಿದ್ದ ಹಾಗೆ ನನಗೆ, ಅನಿಸಿತ್ತು."

ಇಂಥ ಮಾತು ಕೇಳಿ ತಾಯಿಗೆ ಸಾಕಾಯಿತು.

"ಈ ದಿನದ ಮೆರವಣಿಗೆ ಏರ್ಪಾಟಿನ ವಿಷಯ ನೀವು ಯಾಕೆ ಮಾತಾಡೋದಿಲ್ಲ?" ಎಂದು ಅವಳು ಕೇಳಿದಳು.

ಅಂದ್ರೇಯ್ ನಯವಾಗಿ ಹೇಳಿದ:

"ಒಮ್ಮೆ ತೀರ್ಮಾನವಾಗಿರೋ ವಿಷಯ ಪುನಃ ಮಾತಾಡೋದರಿಂದ ಅನ ವಶ್ಯ ಗಲಿಬಿಲಿ.... ಎಲ್ಲಾದರೂ ನಾವೆಲ್ಲರೂ ದಸ್ತಗಿರಿಯಾದರೆ, ನಿಕೊಲಾಯ್ ಇವಾನೊವಿಚ್ ಬಂದು ನೀನೇನು ಮಾಡಬೇಕೂಂತ ಹೇಳ್ತಾನವ್ವ."

"ಹಾಗೇ ಆಗಲಿ," ಎಂದು ತಾಯಿ ನಿಟ್ಟುಸಿರು ಬಿಟ್ಟಳು.

"ತಿರುಗಾಡ್ಕೊಂಡು ಬರೋಣವೆ?" ಎಂದು ಪಾವೆಲ್ ಕನಸು ಕಾಣುತ್ತಿದ್ದವನಂತೆ ಹೇಳಿದ.

ಅಂದ್ರೇಯ್ ಎಂದ:

"ಸದ್ಯಃ ಮನೇಲಿರೋದೇ ವಾಸಿ. ಹೊತ್ತಿಗೆ ಮುಂಚೆಯೇ ಯಾಕೆ ಪೋಲೀಸ

ರಿಗೆ ಕಣ್ಣೀರು ಬರಿಸ್ಬೇಕು? ಈಗಾಗಲೇ ಅವರಿಗೆ ನಿನ್ನ ಪರಿಚಯ ಚೆನ್ನಾಗಾಗಿದೆ."

ಫ್ಯೋದೊರ್ ಮಾಜಿನ್ ಓಡಿಕೊಂಡು ಬಂದ. ಅವನ ಮುಖ ಮಿನುಗುತ್ತಿತ್ತು. ಕೆನ್ನೆಗಳು ಉರಿಯುತ್ತಿದ್ದುವು. ಅವನ ಆನಂದೋದ್ರೇಕ ಅವರ ಸಹನೆಯ ನಿರೀಕ್ಷಣೆಗೆ ಭಂಗ ತಂದಿತ್ತು.

ಅವನು ಉತ್ಸಾಹದಿಂದ ಹೇಳಿದ:

"ಶುರುವಾಗ್ಬಿಟ್ಟಿದೆ! ಜನ ಏಳ್ತಿದ್ದಾರೆ! ಉಗ್ರ ಮೋರೆ ತೋರಿಸ್ಕೊಂಡು ಬೀದಿಗೆ ಬರ್‍ತಿದಾರೆ. ವೆಸೊವ್‌ಶ್ಚಿಕೋವ್, ವಾಸ್ಯ ಗೂಸೆವ್ ಮತ್ತು ಸಮೋಯ್‌ಲೊವ್ ಕಾರಖಾನೆ ಗೇಟಿನ ಹತ್ತಿರ ನಿಂತು ಭಾಷಣಮಾಡ್ತಿದ್ದಾರೆ. ಎಷ್ಟೋ ಜನ ಕೆಲಸಗಾರರು ವಾಪಸು ಮನೆಗೆ ಹೋದ್ರು. ಬನ್ನಿ! ಹೊತ್ತಾಯ್ತು, ಹೋಗೋಣ! ಈಗಾಗಲೇ ಗಂಟೆ ಹತ್ತಾಯ್ತು!

"ನಾನು ಹೊರಡ್ತೀನಿ," ಎಂದು ಪಾವೆಲ್ ನಿರ್ಧಾರದ ಧ್ವನಿಯಲ್ಲಿ ಹೇಳಿದ.

"ನೋಡೀರಂತೆ! ಊಟದ ಹೊತ್ತಿಗೆ ಕಾರಖಾನೆಯೆಲ್ಲ ಖಾಲಿಯಾಗತ್ತೆ!" ಎಂದು ಫ್ಯೋದೊರ್ ಓಡುತ್ತ ಹೊರಟುಹೋದ.

"ಇವನು ಗಾಳೀಲಿ ಮೋಂಬತ್ತಿ ಉರಿದ ಹಾಗೆ ಉರೀತಿದ್ದಾನೆ" ಎಂದಳು ತಾಯಿ. ಆಮೇಲೆ ಆಕೆ ಎದ್ದು, ಬಟ್ಟೆ ಬದಲಾಯಿಸಿಕೊಳ್ಳಲೆಂದು ಅಡುಗೆಮನೆಗೆ ಹೋದಳು.

"ನೀನೆಲ್ಲಿಗೆ ಹೊರಟೆಯವ್ವ?"

"ನಿಮ್ಮ ಜತೇಲಿ," ಎಂದು ತಾಯಿ ಉತ್ತರವಿತ್ತಳು.

ಅಂದ್ರೇಯ್ ಮೀಸೆ ತುರಿಸಿಕೊಳ್ಳುತ್ತ ಪಾವೆಲ್‌ನತ್ತ ನೋಡಿದ. ಪಾವೆಲ್ ಕೂದಲ ಮೇಲೆ ಕೈಯೋಡಿಸಿ, ತಾಯಿಯತ್ತ ಸಾಗಿದ.

"ಹಾದೀಲಿ ನಿನ್ನ ಕೂಡೆ ನಾನೇನೂ ಮಾತಾಡೋದಿಲ್ಲವಮ್ಮ. ನೀನೂ ಏನೂ ಮಾತಾಡ್ಬಾರದು. ಸರಿಯಾ?"

"ಆಗಲಿ, ಆಗಲಿ. ದೇವರು ನಿಮಗೆ ಒಳ್ಳೇದು ಮಾಡಲಿ," ಎಂದು ತಾಯಿ ತೊದಲಿದಳು.

## ೨೭

ಹೊರಬಂದಾಗ, ಉದ್ವಿಗ್ನಗೊಂಡ ಕಾತರದ ವಿವಿಧ ಸ್ವರಗಳು ತಾಯಿಗೆ ಕೇಳಿಬಂದುವು. ಜನರು ಗುಂಪು ಗುಂಪಾಗಿ ಬಾಗಿಲು ಕಿಟಕಿಗಳ ಬಳಿ, ಕುತೂಹಲದಿಂದ, ಆಕೆಯ ಮಗನನ್ನೂ ಅಂದ್ರೇಯ್‌ನನ್ನು ನೋಡುತ್ತ ನಿಂತಿದ್ದರು. ಇದನ್ನೆಲ್ಲ ತಾಯಿ ಕಂಡಾಗ, ಬೂದು ಹಸುರು ಕಲೆಗಳು ಅಸ್ಪಷ್ಟವಾಗಿ ಆಕೆಯ ಕಣ್ಣ ಮುಂದೆ ಕುಣಿದ ಹಾಗಾಯಿತು.

ವಂದನೆ ಮರುವಂದನೆಗಳಾಗುತ್ತಿದ್ದುವು. ಆದರೆ ಈ ಸಾರೆ ಜನರು ಪಾವೆಲ್‌ಗೂ ಅಂದ್ರೇಯ್‌ಗೂ ವಂದಿಸಿದಾಗ ಆ ಮಾತುಗಳಲ್ಲಿ ವಿಶೇಷ ಮಹತ್ವವಿತ್ತು.

"ಮುಖಂಡರು ಹೋಗ್ತಿದ್ದಾರೆ ನೋಡು."

"ಮುಖಂಡರು ಯಾರೂಂತ ನಮಗೆ ಗೊತ್ತಿಲ್ಲ."

"ನಾನೇನೂ ಕೆಟ್ಟ ಅರ್ಥದಲ್ಲಿ ಹೇಳಲಿಲ್ಲ!"

ಇನ್ನೊಂದೆಡೆಯಿಂದ ಯಾರೋ ಸಿಟ್ಟಿನ ಸ್ವರದಲ್ಲಿ ಹೇಳಿದರು:

"ಪೋಲೀಸರು ಅವರನ್ನ ಹಿಡೀತಾರೆ, ಅಲ್ಲಿಗಾಗುತ್ತೆ ಅವರ ಕಥೆ."

"ಒಮ್ಮೆ ಹಿಡಿದಿದ್ದರಲ್ಲಾ!"

ಕಿಟಕಿಯಿಂದ ಕೆಳಕ್ಕೆ ಬೀದಿಯತ್ತ ಬಾಗಿ ಯಾವಳೋ ಹೆಂಗಸು ರೋದಿಸುತ್ತಿದ್ದಳು:

"ಏನ್ಮಾಡ್ತಿದೀಯೋ ಯೋಚಿಸ್ಕೋ. ನೀನೇನೂ ಅವರ ಹಾಗೆ ಹೆಂಡತಿ ಮಕ್ಕಳಿಲ್ಲದವನಲ್ಲ!"

ಕುಂಟ ಜೋಸೀಮೊವ್‌ನ ಮನೆ ಸಮೀಪಿಸಿತು. ಕೆಲಸ ಮಾಡುತ್ತಿದ್ದಾಗ ಕಾಲು ಮುರಿದು ಹೋದುದಕ್ಕೆ ಕಾರಖಾನೆಯವರು ಅವನಿಗೆ ಮಾಸಾಶನ ಕೊಡುತ್ತಿದ್ದರು. ಆತ ತನ್ನ ಮನೆಯ ಕಿಟಕಿಯಿಂದ ತಲೆ ಹೊರಹಾಕಿ ಕೂಗಾಡಿದ:

"ಪಾವೆಲ್! ಪಾಪಿ! ಅವರು ನಿನ್ನ ಗೋಣು ಮುರೀತಾರೆ ನೋಡು! ನಿನಗೆ ತಕ್ಕ ಶಾಸ್ತಿ ಆಗಿಯೇ ಆಗತ್ತೆ!"

ಆ ಮಾತು ಕೇಳಿ ತಾಯಿ ನಡುಗಿಹೋದಳು; ತಟಸ್ಥಳಾಗಿ ನಿಂತಳು. ಕ್ರೋಧದ ತೀಕ್ಷ್ಣ ಅನುಭವವಾಯಿತು ಅವಳಿಗೆ. ಆ ಕುಂಟನ ಕೊಬ್ಬಿ ಊದಿಕೊಂಡಿದ್ದ ಮುಖದತ್ತ ಆಕೆ ದೃಷ್ಟಿ ಹಾಯಿಸಿದಳು. ಅವನು ಶಪಿಸಿ ತಲೆಯನ್ನೊಳಕ್ಕೆ ಸೆಳೆದುಕೊಂಡ. ವೇಗವಾಗಿ ಹೆಜ್ಜೆ ಇಟ್ಟು ಅವಳು ಪುನಃ ಮಗನನ್ನು ಸೇರಿಕೊಂಡು ಹಿಂದುಳಿಯದಂತೆ ಬೇಗ ಬೇಗನೆ ಅವನನ್ನೆ ಹಿಂಬಾಲಿಸುತ್ತ ನಡೆದಳು.

ಪಾವೆಲ್ ಮತ್ತು ಅಂದ್ರೇಯ್, ಯಾವುದನ್ನೂ ಕಾಣದವರಂತೆ, ತಾವು ಮುನ್ನಡೆಯುತ್ತಿದ್ದಾಗ ಜನರಾಡುತ್ತಿದ್ದ ಮಾತುಗಳನ್ನು ಗಮನಿಸದವರಂತೆ, ತೋರುತ್ತಿದ್ದರು. ಶಾಂತವಾಗಿ ಅವಸರವಿಲ್ಲದೆ ಅವರು ನಡೆದರು. ಹಾದಿಯಲ್ಲಿ ಮಿರೋನೊವ್ ಅವರನ್ನು ಸ್ವಲ್ಪ ತಡೆದು ನಿಲ್ಲಿಸಿದ. ಆತ ವಿನಯಶೀಲನಾದ ಮಧ್ಯವಯಸ್ಸಿನ ಕೆಲಸಗಾರ. ಅವನ ನಿರ್ದಿಷ್ಟ ಪ್ರಾಮಾಣಿಕ ಜೀವನಕ್ಕಾಗಿ ಎಲ್ಲರೂ ಅವನನ್ನು ಗೌರವಿಸುತ್ತಿದ್ದರು.

"ನೀವೂ ಕೆಲಸಕ್ಕೆ ಹೋಗಿಲ್ವೆ, ದನೀಲ್ ಇವಾನೊವಿಚ್?" ಎಂದು ಪಾವೆಲ್ ಅವನನ್ನು ಕೇಳಿದ.

"ನನ್ನ ಹೆಂಡತಿ ಇಷ್ಟರಲ್ಲಿಯೇ ಹೆರುತ್ತಾಳೆ. ಅಲ್ಲದೆ, ಇಂಥಾ ದಿನ ಎಲ್ಲರೂ ಅಸಮಾಧಾನದಿಂದಿರೋವಾಗ...."

ಮತ್ತೆ ತನ್ನ ಸಂಗಾತಿಗಳತ್ತ ನೆಟ್ಟ ದೃಷ್ಟಿಯಿಂದ ನೋಡುತ್ತ ಸ್ವರ ತಗ್ಗಿಸಿ ಅಪನೆಂದ:

"ಈ ದಿವಸ ಡೈರೆಕ್ಟರಿಗೆ ತೊಂದರೆ ಕೊಡಬೇಕೂಂತಿದೀರಂತೆ.... ಕಿಟಕಿ ಗಿಟಕಿ ಪುುರಿತೀರಂತೆ, ಹೌದೆ?"

"ನಾವೇನು ಕುಡುಕರೆ?" ಎಂದು ಪಾವೆಲ್ ಉದ್ಗರಿಸಿದ.

ಅಂದ್ರೇಯ್ ಹೇಳಿದ:

"ನಮ್ಮ ಬಾವುಟ ತಗೊಂಡು ಬೀದೀಲಿ ಮೆರವಣಿಗೆ ಹೋಗೋದು. ನಮ್ಮ ಹಾಡುಗಳನ್ನ ಹಾಡೋದು; ಇಷ್ಟೇ ನಮ್ಮ ಕಾರ್ಯಕ್ರಮ. ಹಾಡುಗಳನ್ನ ನೀವು ಕೇಳ್ಬೇಕು. ನಮ್ಮ ಧ್ಯೇಯಾನ ಅವು ವಿವರಿಸ್ತವೆ."

ಮಿರೋನೊವ್ ಯೋಚನಾಮಗ್ನನಾಗಿ, "ನಿಮ್ಮ ಧ್ಯೇಯ ಗೊತ್ತಿದೆಯಪ್ಪ ನನಗೆ. ನಿಮ್ಮ ಕರಪತ್ರಿಕೆಗಳನ್ನ ನಾನು ಓದ್ತೀನಿ," ಎಂದ. ಪಾವೆಲ್‌ನ ತಾಯಿಯನ್ನು ಕಂಡೊಡನೆ ತನ್ನ ತೀಕ್ಷ್ಣ ಕಣ್ಣುಗಳಿಂದ ಮುಗುಳ್ನಗುತ್ತ, "ಆ! ಪೆಲಗೇಯ ನೀಲೊವ್ನ! ನೀನೂ ಬಂಡಾಯವೇಳ್ತಿದೀಯಾ?" ಎಂದ.

"ನಾನು ಸಾಯೋಕೆ ಮುಂಚೆಯೊಮ್ಮೆ ಸತ್ಯದ ಜತೇಲಿ ಮೆರವಣಿಗೆ ಹೋಗೋದು ಬೇಡವಾ?" ಎಂದಳು ತಾಯಿ.

"ನಿಜಕ್ಕೂ! ಹುಂ.... ಆ ನಿಷಿದ್ಧ ಕರಪತ್ರಗಳನ್ನ ಕಾರಖಾನೆಯೊಳಕ್ಕೆ ತಂದದ್ದು ನೀನೇ ಅಂತಿದ್ರು. ಅದು ನಿಜಾಂತ ಕಾಣುತ್ತೆ!"

"ಯಾರಂದರು ಹಾಗೆ?" ಎಂದು ಪಾವೆಲ್ ಕೇಳಿದ.

"ಹುಂ.... ಯಾರೋ ಅಂದರು....ಆಗಲಿ.... ಬರ್ತೀನಿ. ನೀವು ಸಹನೆ ಮೀರಿ ಹೋಗ್ಬೇಡಿ.

ತಾಯಿ ಶಾಂತವಾಗಿ ಮುಗುಳ್ನಕ್ಕಳು. ಜನರು ತನ್ನ ಬಗೆಗೆ ಹಾಗೆ ಆಡಿಕೊಂಡುದನ್ನು ಕೇಳಿ ಅವಳಿಗೆ ಸಂತೋಷವೆನಿಸಿತು.

"ನೀನೂ ಒಂದಿನ ಜೈಲಿಗೆ ಬರ್ತಿ ನೋಡಮ್ಮ!" ಎಂದನು ಪಾವೆಲ್ ನಗುತ್ತ.

ವಸಂತದ ಸೂಕ್ಷ್ಮ ಹೊಸತನಕ್ಕೆ ಬಿಸಿಯೇರಿಸುತ್ತ ಸೂರ್ಯ ಮೇಲೇರುತ್ತಲೇ ಇದ್ದ. ಮೋಡಗಳ ಚಲನೆ ಕಡಮೆಯಾಯಿತು. ಅವುಗಳ ನೆರಳು ಹಗುರವಾಯಿತು, ಅಸ್ಪಷ್ಟವಾಯಿತು. ಅದು ಬೀದಿಯುದ್ದಕ್ಕೂ ಮನೆಯ ಮಾಡಿಗಳ ಮೇಲೂ ಮೆಲ್ಲನೆ ನುಸುಳಿಕೊಂಡು ಹೋಗುತ್ತಿತ್ತು. ಜನರನ್ನು ಮುಚ್ಚಿಕೊಳ್ಳುತ್ತಾ ವಸತಿ ಪ್ರದೇಶವನ್ನು ಶುಚಿಗೊಳಿಸುವಂತೆ, ಗೋಡೆ ಮಾಡಗಳ ಮೇಲಿಂದ ಧೂಳು ಕೊಳೆಯನ್ನೂ ಜನರ ಮುಖಗಳಿಂದ ಬೇಸರವನ್ನೂ ತೊಳೆಯುವಂತೆ, ಅದು ಚಲಿಸುತ್ತಿತ್ತು. ಪ್ರತಿಯೊಂದೂ ಹೆಚ್ಚು ಉತ್ಸಾಹಪ್ರದವಾಗಿ ತೋರಿತು. ಸ್ವರಗಳು ಹೆಚ್ಚು ಗಟ್ಟಿಯಾಗಿ ಶಬ್ದಮಾಡಿ, ದೂರದ ಯಂತ್ರಗಳ ಸಪ್ಪಳವನ್ನು ಮರೆಮಾಡಿದುವು.

ಮತ್ತೊಮ್ಮೆ ಮಾತುಗಳು ಕಿಟಕಿಗಳಿಂದಲೂ ಅಂಗಳಗಳಿಂದಲೂ ಹಾರಿ ನುಸುಳಿ

ಕೊಂಡು ಬಂದು ತಾಯಿಯ ಕಿವಿಯನ್ನು ಸೇರಿದುವು. ಕ್ಷುದ್ರ ರೀತಿಯ, ಗಾಬರಿಯ, ವಿಚಾರಪೂರ್ಣವಾದ, ಉತ್ಸಾಹದ ಮಾತುಗಳೆಲ್ಲ ಅಲ್ಲಿದ್ದುವು. ಆದರೆ ಈಗ ಆಕೆಗೆ ಕೆಲವೆಡೆ, ಹಾಗಲ್ಲವೆಂದು ಅಲ್ಲಗಳೆಯಬೇಕೆನ್ನಿಸುತ್ತಿತ್ತು. ವಿವರಿಸಬೇಕು; ಕೃತಜ್ಞತೆ ತೋರಿಸಬೇಕು ಎನ್ನಿಸುತ್ತಿತ್ತು. ಒಟ್ಟಿನಲ್ಲಿ, ವಿಚಿತ್ರ ರೀತಿಯಲ್ಲಿ ವಿಭಿನ್ನವಾದ ಆ ದಿನದ ಜೀವನದಲ್ಲಿ ಭಾಗವಹಿಸಲು ಆಕೆ ಆತುರಳಾಗಿದ್ದಳು.

ಅಗಲ ಕಿರಿದಾಗಿದ್ದ ಅಡ್ಡಹಾದಿಯೊಂದರ ಮೂಲೆಯಲ್ಲಿ ಸುಮಾರು ನೂರು ಜನರು ಸೇರಿದ್ದರು. ಅವರ ನಡುವಿಂದ ವೆಸೊವ್‌ಶ್ಚಿಕೋವ್‌ನ ಸ್ವರ ಎದ್ದು ಕೇಳಿ ಸುತ್ತಿತ್ತು.

"ಮುಸುಂಬಿಯ ರಸ ಹಿಂಡಿದ ಹಾಗೆ ನಮ್ಮಿಂದ ಅವರು ರಕ್ತಾನ ಹಿಂಡ್ತಾರೆ."

ಅವನ ಮಾತುಗಳು ಒರಟೊರಟಾಗಿ ಜನರ ನಡುವೆ ಹರಡುತ್ತಿದ್ದುವು.

"ಅದು ನಿಜ," ಎಂದು ಏಕಕಾಲದಲ್ಲೇ ಹಲವು ಸ್ವರಗಳು ಕೇಳಿಸಿದುವು.

"ಹುಡುಗ ಕೈಲಾದ ಯತ್ನ ಮಾಡ್ತಿದ್ದಾನೆ. ನಾನೂ ಹೋಗಿ ಸಹಾಯ ಮಾಡ್ತೀನಿ," ಎಂದ ಆಂದ್ರೇಯ್.

ಅವನನ್ನು ಪಾವೆಲ್ ತಡೆಯುವುದು ಸಾಧ್ಯವಾಗುವುದಕ್ಕೆ ಮುಂಚೆಯೇ ಅಂದ್ರೇಯ್, ತನ್ನ ಎತ್ತರದ ತೆಳುವಾದ ದೇಹದೊಡನೆ ಜನರ ನಡುವೆ ನುಸುಳಿ ಬಿಟ್ಟಿದ್ದ.

ಅಲ್ಲಿಂದ ಅವನ ಗಾಯನ ರೀತಿಯ ಸ್ವರ ಕೇಳಿಸಿತು:

"ಸಂಗಾತಿಗಳೆ! ವಿವಿಧ ಜನ ಜನಾಂಗಗಳು ಈ ಪ್ರಪಂಚದಲ್ಲಿ ಇದ್ದಾರಂತೆ— ಯೆಹೂದ್ಯರು, ಜರ್ಮನರು, ಆಂಗ್ಲರು, ತತಾರರು ಹೀಗೆಲ್ಲಾ ಇದ್ದಾರಂತೆ. ಆದರೆ ನಾನದನ್ನು ನಂಬೋದಿಲ್ಲ. ಪ್ರಪಂಚದಲ್ಲಿರೋದು ಎರಡೇ ರೀತಿ ಜನ; ಒಂದಕ್ಕೊಂದು ಮೇಳವಿಲ್ಲದ ಎರಡು ರೀತಿಯ ಪಂಗಡಗಳು—ಶ್ರೀಮಂತರು ಮತ್ತು ಬಡವರು. ಜನರು ವಿಧವಿಧವಾಗಿ ಮಾತಾಡ್ತಾರೆ ವಿಭಿನ್ನ ರೀತಿ ಉಡುಪು ಧರಿಸುತ್ತಾರೆ. ಆದರೆ, ಫ್ರೆಂಚ್-ಜರ್ಮನ್-ಇಂಗ್ಲಿಷ್ ಶ್ರೀಮಂತರೆಲ್ಲಾ ಕೆಲಸಗಾರರನ್ನು ನಡೆಸಿಕೊಳ್ಳೋ ರೀತಿ ನೋಡಿ. ಕೆಲಸಗಾರರ ಪಾಲಿಗೆ ಅವರೆಲ್ಲಾ ಅಯೋಗ್ಯರೇ ಅನ್ನೋದು ನಿಮಗೆ ಸ್ಪಷ್ಟವಾದೀತು. ಅವರ ಜಾತಿಗೆ ಕೊಳ್ಳಿ ಇಡ್ತು!"

ಜನಸಂದಣಿಯಿಂದ ಯಾರೋ ಒಬ್ಬ ನಕ್ಕ.

"ಆದರೆ ಕೂಲಿಕಾರರತ್ತ ನೋಡಿದಾಗ ಏನು ಕಾಣ್ತೀರಾ? ಫ್ರೆಂಚ್, ತತಾರ್ ಮತ್ತು ತುರ್ಕಿ ಕೂಲಿಕಾರರೆಲ್ಲ ರಷ್ಯದ ಕೂಲಿಕಾರರು ಬಾಳುವ ನಾಯಿ ಬಾಳನ್ನೇ ಬಾಳ್ತಾರೆ!"

ಹೆಚ್ಚು ಹೆಚ್ಚು ಜನರು ಬಂದು ಆ ಗಲ್ಲಿಯನ್ನು ಸೇರುತ್ತಾ, ಕಾಲ್ಬೆರಳ ಮೇಲೆ ನಿಂತು ಕೊರಳನ್ನು ಉದ್ದಕ್ಕೆ ನೀಡುತ್ತಾ, ಚಕಾರವೆತ್ತದೆ ನಿಂತರು.

ಅಂದ್ರೇಯ್ ಸ್ವರವೇರಿಸಿದ:

"ಈ ಸರಳ ಸತ್ಯಾನ ವಿದೇಶಗಳ ಕೂಲಿಕಾರರು ಆಗಲೇ ತಿಳಿದಿದ್ದಾರೆ. ಈ ದಿನ ಮೇ ಮೊದಲ ದಿನ –"

"ಪೋಲೀಸರು ಬಂದ್ರು !" ಎಂದು ಯಾರೋ ಕೂಗಿದರು.

ನಾಲ್ವರು ಪೋಲೀಸ್ ಸವಾರರು, ಚಾಟಿಗಳನ್ನು ಬೀಸುತ್ತ "ಚೆದರಿ ಹೋಗಿ !" ಎಂದು ಗದರಿಸುತ್ತ, ಕುದುರೆಗಳನ್ನೋಡಿಸಿಕೊಂಡು ಆ ಗಲ್ಲಿಯೊಳಕ್ಕೆ ಬಂದರು.

ಜನ ಹುಬ್ಬು ಗಂಟಿಕ್ಕಿದರು. ಮನಸ್ಸಿಲ್ಲದ ಮನಸ್ಸಿನಿಂದ ಕುದುರೆಗಳಿಗೆ ಹಾದಿ ಮಾಡಿಕೊಟ್ಟರು. ಕೆಲವರು ಬೇಲಿಗಳನ್ನೇರಿ ನಿಂತರು.

ಅಣಕದ ಸ್ವರದಲ್ಲಿ ಯಾರೋ ಒಬ್ಬನೆಂದ:

"ಹಂದಿಗಳನ್ನ ಕುದುರೆ ಮೇಲೆ ಕೂರಿಸಿದ್ದಾರೆ. ಈ ಹಂದಿಗಳು ತಾವೇ ವೀರನಾಯಕರು ಎಂದು ಅರಚುತ್ತಿವೆ."

ಅಂದ್ರೇಯ್ ನಡು ಬೀದಿಯಲ್ಲೇ ನಿಂತಿದ್ದ. ಎರಡು ಕುದುರೆಗಳು ಮುಸುಡೆತ್ತಿ ಅವನೆಡೆಗೆ ಧಾವಿಸಿದುವು. ಆತ ಒಂದು ಬದಿಗೆ ಸರಿದ. ತಾಯಿ ಆ ಕ್ಷಣವೇ, ಅವನ ಕೈ ಹಿಡಿದು ತನ್ನೊಡನೆ ಎಳೆದುಕೊಂಡು ಬಂದಳು.

"ಪಾವೆಲ್ ಜತೇಲೇ ಇರ್ತೀನೀಂತ ಮಾತು ಕೊಟ್ಟು, ಈಗ ಒಬ್ಬನೇ ಅಪಾಯದಲ್ಲಿದೇಂತ ಹುಡುಕ್ಕೊಂಡು ಹೋಗ್ತಿದೀಯಲ್ಲಪ್ಪ" ಎಂದು ಅವಳು ಗೊಣಗಿದಳು.

"ಮಹಾಪರಾಧವಾಯ್ತು, ಕ್ಷಮಿಸಮ್ಮ" ಎಂದ ಅಂದ್ರೇಯ್, ಮುಗುಳ್ನಕ್ಕು.

ಮನನೋಯಿಸುವ ಭಯಸೂಚಕವಾದ ಬೇಸರ ಪೆಲಗೇಯಳನ್ನು ಆವರಿಸಿತು. ಆ ಬೇಸರ ದೇಹದೊಳಗಿನ ಆಳದಿಂದ ಹುಟ್ಟಿ ಬಂದಂತೆ ಕಂಡಿತು. ಆಕೆಗೆ ಬವಳಿ ಬಂದಂತಾಯಿತು. ಒಂದರ ಅನಂತರ ಒಂದಾಗಿ ಸುಖದ ದುಃಖದ ಅನುಭವವಾಯಿತು ಅವಳಿಗೆ. ಬೇಗನೆ ಮಧ್ಯಾಹ್ನ ಊಟದ ಸಿಳ್ಳು ಕೇಳಿಸಲಿ, ಎಂದು ಆಕೆ ಹಂಬಲಿಸಿದಳು.

ಬೀದಿಯ ಚೌಕದಲ್ಲಿದ್ದ ಚರ್ಚಿನ ಬಳಿಗೆ ಅವರು ಬಂದರು. ಐನೂರು ಜನರಷ್ಟು ಅತ್ಯುತ್ಸಾಹಿ ಯುವಕರೂ ಮಕ್ಕಳೂ ಚರ್ಚಿನ ಅಂಗಳದಲ್ಲಿ ನೆರೆದಿದ್ದರು. ಗುಂಪು ಹಿಂದಕ್ಕೂ ಮುಂದಕ್ಕೂ ಸರಿಯುತ್ತಿತ್ತು. ಜನರು ಚಡಪಡಿಸುತ್ತ ತಲೆಯೆತ್ತಿ ದೂರ ನೋಡುತ್ತ, ತಾಳ್ಮೆಯಿಲ್ಲದೆ ಯಾವುದನ್ನೋ ಇದಿರುನೋಡುತ್ತ ನಿಂತಿದ್ದರು. ವಾತಾವರಣದಲ್ಲೆಲ್ಲ ಉದ್ವಿಗ್ನತೆ ತುಂಬಿತ್ತು. ಏನು ಮಾಡಬೇಕೆಂದು ತಿಳಿಯದವರ ಹಾಗಿದ್ದರು ಕೆಲವರು. ಉಳಿದವರು ಧೈರ್ಯವಂತರ ಹಾಗೆ ಓಡಾಡುತ್ತಿದ್ದರು. ಹೆಂಗಸರ ಪಿಸ್ತಿಕ್ಕಿದ ಸ್ವರಗಳು ಮೆಲ್ಲನೆ ಕೇಳಿಬರುತ್ತಿದ್ದುವು. ಗಂಡಸರು ಬೇಸರಗೊಂಡು ಅವರಿಂದ ದೂರಸರಿಯುತ್ತಿದ್ದರು. ಕೆಲವೊಮ್ಮೆ ಸಣ್ಣ ಸ್ವರದಲ್ಲಿ ಬೈಗಳ ಮಾತು ಕೇಳಿಬರುತ್ತಿತ್ತು. ರಂಗುರಂಗಿನ ಆ ಗುಂಪನ್ನು, ದ್ವೇಷದ ನಿರುತ್ಸಾಹಿಯಾದ ಗೊಣಗಾಟ ಆವರಿಸಿತ್ತು.

ಮೃದುವಾದ ನಡುಗುವ ಸ್ವರದಲ್ಲಿ ಹೆಂಗಸೊಬ್ಬಳು ಕೂಗಿಕೊಂಡಳು:

"ಮೀತೆಂಕ! ಹೀಗೆ ಮಾಡಬಾರದಪ್ಪಾ, ನೀನು ಸ್ವಲ್ಪವಾದರೂ ಕನಿಕರವಿಡು."

"ಬಿಟ್ಬಿಡು ನನ್ನ !" ಎಂದು ಉತ್ತರ ಬಂತು.

ಸಿಜೋವನ ಪ್ರಭಾವಶಾಲಿಯಾದ ಸ್ವರ, ಶಾಂತವಾಗಿ ಮನಮುಟ್ಟುವ ಹಾಗೆ ಕೇಳಿಸಿತು:

"ಇಲ್ಲ, ಯುವಜನರ ಕೈ ಬಿಡಬಾರದು ನಾವು; ಅವರಿಗೆ, ನಮಗಿಂತ ಹೆಚ್ಚು ಬುದ್ಧಿಯಿದೆ; ಅವರು ನಮಗಿಂತ ಹೆಚ್ಚು ಧೈರ್ಯವಂತರು. ಜವುಗಿನ ಗಲಾಟೇಲಿ ನಮ್ಮ ಕೊಪೆಕ್ ಉಳಿಸಿದವರು ಯಾರು? ಅವರೇ! ಅದನ್ನು ನಾವು ಮರೀಬಾರ್ದು. ಅದಕ್ಕಾಗಿ ಅವರ್ಗೆ ಜೈಲು ಸಿಗ್ತು. ನಮಗೆಲ್ಲಾ ಲಾಭವಾಯ್ತು."

ಸಿಳ್ಳು ಧ್ವನಿ ಗರ್ಜಿಸಿತು. ಅದರ ಕರಿಯ ಶಬ್ದ, ಜನರ ಸ್ವರಗಳನೆಲ್ಲಾ ನುಂಗಿತು. ಜನರ ಗುಂಪು ಕ್ಷಣಕಾಲ ನಡುಗಿದ ಹಾಗಾಯಿತು. ಕುಳಿತವರು ಎದ್ದು ನಿಂತರು. ಕ್ಷಣಕಾಲ ಪ್ರತಿಯೊಬ್ಬರೂ ಮೌನ ತಳೆದರು. ಎಚ್ಚೆತ್ತು ತಮ್ಮ ರಕ್ಷಣೆಗೆ ಸಿದ್ಧ ವಾದರು. ಕೆಲವರ ಮುಖಗಳು ಕೂಡಾ ಬಾಡಿದುವು.

"ಸಂಗಾತಿಗಳೇ!" ಎಂದು ಪಾವೆಲ್‌ನ ಬಲವಾದ ಸಮೃದ್ಧವಾದ ಸ್ವರ ಕೇಳಿ ಸಿತು. ಉಷ್ಣೋದಕ ತಾಯಿಯ ಕಣ್ಣನ್ನು ಚುಚ್ಚಿದ ಹಾಗಾಯಿತು. ಸರಕ್ಕನೆ ಚಲಿಸಿ ಆಕೆ ಮಗನ ಹಿಂಭಾಗದಲ್ಲೇ ನಿಂತಳು. ಎಲ್ಲರೂ ಪಾವೆಲ್‌ನತ್ತ ತಿರುಗಿದರು. ಉಕ್ಕಿನ ತುಣುಕುಗಳು ಅಯಸ್ಕಾಂತದತ್ತ ಆಕರ್ಷಿತವಾದಂತೆ, ಜನರು ಪಾವೆಲ್‌ನನ್ನು ಮುತ್ತಿ ಕೊಂಡರು.

ತಾಯಿ ಅವನ ಮುಖವನ್ನು ನೋಡಿದಳು; ಹೆಮ್ಮೆಯ ಧೈರ್ಯದ ಉರಿಯು ತ್ತಿದ್ದ ಆ ಕಣ್ಣುಗಳನ್ನಷ್ಟೇ ಕಂಡಳು.

"ಸಂಗಾತಿಗಳೇ! ನಾವೊಂದು ತೀರ್ಮಾನ ಮಾಡಿ ಆ ದಿನ ಇಲ್ಲಿಗೆ ಬಂದಿದ್ದೀವಿ. ನಾವು ಯಾರು ಅನ್ನೋದನ್ನ ಈ ದಿನ ಘೋಷಿಸ್ಬೇಕು; ವಿಚಾರದ, ನ್ಯಾಯದ, ಸ್ವಾತಂತ್ರ್ಯದ ನಮ್ಮ ಬಾವುಟಾನ ಈ ದಿನ ಹಾರಿಸ್ಬೇಕು ಅನ್ನೋದೇ ಆ ನಿರ್ಧಾರ!"

ಉದ್ದನೆಯ ಬಿಳಿಯ ಧ್ವಜದ ಕೋಲೊಂದು ಗಾಳಿಯಲ್ಲಿ ಚಮಕಿಸಿತು. ಜನರ ಗುಂಪಿಗೆ ಬಾಗಿ, ಅದನ್ನು ಇಬ್ಭಾಗಿಸಿ, ಅದರೊಳಗೆ ಅಡಗಿಕೊಂಡು ಕ್ಷಣಕಾಲದ ಬಳಿಕ ಮತ್ತೆ ಮೇಲಕ್ಕೆದ್ದಿತು. ಕೂಲಿಕಾರ ವರ್ಗದ ವಿಶಾಲವಾದ ಕೆಂಪು ಬಾವುಟ, ದೊಡ್ಡದೊಂದು ಹಕ್ಕಿಯ ರೆಕ್ಕೆಗಳಂತೆ, ಮೇಲ್ಮುಖವಾಗಿದ್ದ ಜನರ ದೃಷ್ಟಿಗಳನ್ನು ದಾಟಿ ಎತ್ತರಕ್ಕೆ ಏರಿತು.

ಪಾವೆಲ್ ತೋಳನ್ನು ಮೇಲಕ್ಕೆತ್ತಿದ; ಬಾವುಟ ಓಡಾಡಿತು. ಹತ್ತಾರು ಕೈಗಳು ಮುಂಚಾಚಿ ಮೃದುವಾದ ಆ ಬಿಳಿಯ ಧ್ವಜಕೋಲನ್ನು ಹಿಡಿದುವು. ತಾಯಿಯ ಕೈಯೂ ಮುಂದೆ ಬಂದು ಧ್ವಜಗೋಲನ್ನು ಮುಟ್ಟಿತು.

"ಕೂಲಿಕಾರ ವರ್ಗ ಚಿರಾಯುವಾಗಲಿ!" ಎಂದು ಪಾವೆಲ್ ಜಯಕಾರ ಮಾಡಿದ.

ಉತ್ತರವಾಗಿ ನೂರಾರು ಕಂಠಗಳು ಗರ್ಜಿಸಿದುವು.

"ಸಂಗಾತಿಗಳೇ ! ಸೋಶಿಯಲ್ ಡೆಮೊಕ್ರಾಟಿಕ್ ಕಾರ್ಮಿಕ ಪಾರ್ಟಿ, – ನಮ್ಮ ವಿಚಾರಗಳ ಉತ್ಪತ್ತಿಸ್ಥಾನ, – ಚಿರಾಯುವಾಗಲಿ !"

ಗುಂಪಿಗೆ ಕಳೆ ಬಂತು; ಉತ್ಸಾಹ ಚಿಮ್ಮಿತು. ಬಾವುಟದ ಮಹತ್ವ ತಿಳಿದವರು ಅದರ ಬಳಿ ಬಂದರು. ಮಾಜಿನ್, ಸಮೋಯ್‌ಲೊವ್, ಗೂಸೆವ್‌ರು ಪಾವೆಲ್‌ನ ಬಳಿಗೆ ಬಂದು ನಿಂತರು. ನಿಕೊಲಾಯ್, ತಲೆ ಬಗ್ಗಿಸಿಕೊಂಡು, ಜನರ ಒತ್ತಡವನ್ನು ಭೇದಿಸಿಕೊಂಡು ಮುಂದೆ ಬಂದ. ಶುಭ್ರ ಕಣ್ಣುಗಳ ಅಪರಿಚಿತರಾದ ಯುವಕರು ತನ್ನನ್ನು ಬದಿಗೊತ್ತಿ ಮುಂದೆ ಸಾಗುತ್ತಿದ್ದಂತೆ ತಾಯಿಗೆ ಭಾಸವಾಯಿತು.

"ಎಲ್ಲ ದೇಶಗಳ ಶ್ರಮಿಕರು ದೀರ್ಘಕಾಲ ಬಾಳಲಿ !" ಎಂದು ಪಾವೆಲ್ ಘೋಷಿಸಿದ.

ಹೃದಯ ಕಲಕುವ ಸ್ವರವೊಂದು ಸಾವಿರ ಕಂಠಗಳಿಂದ ಹೊರಟು, ಸಂತೋಷದ ಶಕ್ತಿಯ ತಾರಕ ಸ್ವರವಾಗಿ ಉತ್ತರವಿತ್ತಿತು.

ನಿಕೊಲಾಯ್ ಮತ್ತು ಬೇರೆ ಯಾವನೋ ಒಬ್ಬನ ಕೈಗಳನ್ನು ತಾಯಿ ಗಟ್ಟಿಯಾಗಿ ಹಿಡಿದುಕೊಂಡಳು. ಒತ್ತರಿಸಿ ಬರುತ್ತಿತ್ತು ಕಣ್ಣೀರು. ಆದರೆ ಆಕೆ ಅಳಲಿಲ್ಲ. ಅವಳ ಮೊಣಕಾಲು ಕಂಪಿಸಿತು. ನಡುಗುತ್ತಿದ್ದ ತುಟಿಗಳೆಡೆಯಿಂದ "ಓ ನನ್ನ ಬಾಂಧವರೇ...." ಎಂದವಳು ತೊದಲಿದಳು.

ಸಿಡುಬಿನ ಕಲೆಯಿದ್ದ ನಿಕೊಲಾಯಿಯ ಮುಖದ ಮೇಲೆ ವಿಶಾಲವಾದೊಂದು ಮುಗುಳ್ನಗು ಹರಡಿತು. ಬಾವುಟದತ್ತ ನೋಡುತ್ತ, ಏನನ್ನೋ ಗೊಣಗುತ್ತ, ಆತ ಕೈಯನ್ನು ಮುಂದೆ ಚಾಚಿದ. ಒಮ್ಮೆಲೆ ಅದೇ ಕೈಯನ್ನು ತಾಯಿಯ ಕತ್ತಿನ ಸುತ್ತಲೂ ಬಳಸಿ, ನಗುತ್ತ, ಅವಳನ್ನು ಚುಂಬಿಸಿದ.

ಗುಂಪಿನ ಗರ್ಜನೆಯನ್ನು ಬೇಧಿಸಿ ಅಂದ್ರೇಯ್‌ನ ಸ್ವರ ಕೇಳಿಸಿತು. ಉಕ್ರೇನಿನ ಮೃದು ಪದೋಚ್ಚಾರವಿತ್ತು ಆ ಮಾತಿನಲ್ಲಿ. ಅವನೆಂದ:

"ಸಂಗಾತಿಗಳೇ ! ನಾವೊಂದು ಹೊಸ ದೇವರ ಹೆಸರಲ್ಲಿ ಧರ್ಮಯುದ್ಧ ಹೂಡಿದ್ದೀವಿ. ಬೆಳಕಿನ ವಿಚಾರದ ದೇವರು. ಒಳಿತಿನ ಸತ್ಯದ ದೇವರು. ನಮ್ಮ ಅಂತಿಮ ಗುರಿ ದೂರವಿದೆ. ಆದರೆ ನಮ್ಮ ಮುಳ್ಳಿನ ಕಿರೀಟ ಸಮೀಪವಾಗಿಯೇ ಇದೆ ! ಸತ್ಯದ ವಿಜಯದಲ್ಲಿ ಯಾರಿಗಾದರೂ ಸಾಕಷ್ಟು ಧೈರ್ಯವಿಲ್ಲವೆಂದಾದರೆ, ತನ್ನ ಬಲದಲ್ಲೇ ಯಾರಿಗಾದರೂ ಅಪನಂಬಿಕೆ ಇದ್ದರೆ, ಕಷ್ಟಪಡಲು ಅವನು ಹೆದರೋದಾದರೆ, ದಯವಿಟ್ಟು ಆತ ಬದಿಗೆ ಸರಿಯಲಿ ! ನಮ್ಮ ವಿಜಯದಲ್ಲಿ ವಿಶ್ವಾಸ ಇರುವವರಿಗೆ ಮಾತ್ರ ನಾವು ವಿನಂತಿ ಮಾಡ್ತಿದ್ದೇವೆ ! ನಮ್ಮೆದುರಿನ ಭವ್ಯ ಮುನ್ನೋಟವನ್ನು ಕಾಣದೇ ಇರುವವರಿಗೆ ನಮ್ಮೊಡನೆ ನಡೆಯುವ ಹಕ್ಕಿಲ್ಲ. ಯಾಕೆಂದರೆ, ಅವರು ವೃಥಾ ಬಳಲಬೇಕಾಗುತ್ತೆ. ನಮ್ಮ ಜತೆ ಸೇರಿರಿ, ಬಾಂಧವರೇ ! ಸ್ವತಂತ್ರ ಜನತೆಯ ಈ ರಜಾದಿನ ಚಿರಾಯುವಾಗಲಿ !"

ಜನ ಹೆಚ್ಚಿತು. ಪಾವೆಲ್ ಬಾವುಟವನ್ನೆತ್ತಿ ಹಿಡಿದು, ಮುಂದಕ್ಕೆ ನಡೆದ. ಮುಖವರಳಿಸಿ ಶುಭ್ರವಾಗಿ ನಗುತ್ತಿದ್ದ ಸೂರ್ಯನ ಬೆಳಕಿನಲ್ಲಿ, ಬಾವುಟ ಕಂಗೊಳಿಸಿತು.

ಫ್ಯೋದೊರ್ ಮಾಜಿನ್ ಹಾಡತೊಡಗಿದ:

"ಹಳೆಯ ಲೋಕವನೆಂದೆಂದಿಗೂ ನಾವು ತ್ಯಜಿಸೀ....

ಹತ್ತಾರು ಇತರ ಕಂಠಗಳಿಂದಲೂ ಎರಡನೆಯ ಚರಣ ಬಂತು:

"ನಂಪಾದಗಳಿಂದದರ ಧೂಳನು ಹೊಡೆದು ಝಾಡಿಸೀ....

ತಾಯಿ ಮಾಜಿನನ ಹಿಂದೆಯೇ ನಡೆದಳು. ಮಿನುಗುವ ಮುಗುಳ್ನಗುವಿತ್ತು ಅವಳ ತುಟಿಗಳ ಮೇಲೆ. ಕಣ್ಣುಗಳು, ಫ್ಯೋದೊರ್‌ನ ತಲೆಯನ್ನು ದಾಟಿ, ಬಾವುಟವನ್ನೂ ತನ್ನ ಮಗನನ್ನೂ ದಿಟ್ಟಿಸುತ್ತಿದ್ದುವು. ತನ್ನ ಸುತ್ತಲೂ ಸಂತೋಷದ ಮುಖಗಳನ್ನೂ ಹೊಳೆಯುವ ಕಣ್ಣುಗಳನ್ನೂ ಅವಳು ಕಂಡಳು. ಆಕೆಯ ಮಗನೂ ಅಂದ್ರೇಯ್‌ನೂ ಮೆರವಣಿಗೆಯ ಮುಂಭಾಗದಲ್ಲಿ ನಡೆದಿದ್ದರು. ಅಂದ್ರೇಯ್‌ನ ನಾಭಿ ಸ್ವರ ಪಾವೆಲ್‌ನ ದಪ್ಪನೆಯ ಧ್ವನಿಯೊಡನೆ ಮಿಲನಗೊಂಡು ಅವರಿಬ್ಬರೂ ಹಾಡುತ್ತಿದ್ದುದು ತಾಯಿಗೆ ಕೇಳಿಸುತ್ತಿತ್ತು.

"ಹೋರಾಡಲೇಳಿ, ಓ ಕಾರ್ಮಿಕರೇ,
ಏಳಿ, ದುಡಿಮೆಯುಪವಾಸದಾ ಬಂದಿಗಳೇ ಏಳಿ!

ಕೆಂಪು ಬಾವುಟವನ್ನು ಕಾಣಲು ಜನರು ಓಡಿಯೋಡಿ ಬರುತ್ತಾ, ಗದ್ದಲಮಾಡುತ್ತಲೇ ಇದ್ದರು. ಆ ಗದ್ದಲ, ಹಾಡಿನ ಸ್ವರಕ್ಕೆ ಶ್ರುತಿಯಾಯಿತು. ಮನೆಗಳಲ್ಲಿ ತಗ್ಗಿದ ಸ್ವರದಲ್ಲಿ ಅದೇ ಹಾಡನ್ನು ಕಾರ್ಮಿಕರು ಹಿಂದೆ ಹಾಡಿದ್ದರು. ಆದರೆ ಇಲ್ಲಿ, ಬೀದಿಯಲ್ಲಿ ನಿರಂಕುಶವಾಗಿ ಪ್ರಬಲ ಶಕ್ತಿಯಿಂದ ಆ ಹಾಡು ಹರಿಯಿತು. ಅದಮ್ಯವಾದ ಧೈರ್ಯ ಆ ಹಾಡಿನಲ್ಲಿ ಪ್ರತಿಧ್ವನಿಸುತ್ತಿತ್ತು. ಭವಿಷ್ಯತ್ತಿನ ಹಾದಿಯಲ್ಲಿ ನಡೆದು ಬನ್ನಿರೆಂದು ಜನರನ್ನದು ಕರೆಯುತ್ತಿತ್ತು. ಆದರೆ ಜೊತೆಯಲ್ಲೇ, ಮುಚ್ಚುಮರೆಯಿಲ್ಲದೆ, ಅದೆಷ್ಟು ಕಷ್ಟದ ಹಾದಿ ಎಂಬುದನ್ನೂ ಹಾಡು ಹೇಳುತ್ತಿತ್ತು. ಸತ್ತು ಜಡವಾಗಿದ್ದ ವಿಚಾರಗಳ ಕರಿಯ ಇಜ್ಜಲನ್ನು, ಪರಂಪರಾಗತವಾದ ಭಾವನೆಗಳ ಭಾರವಾದ ಕೊಳಚೆಯನ್ನು, ಹಾಡಿನ ಶಾಂತವಾದ ಜ್ವಾಲೆ ದಹಿಸಿತು; ಹೊಸತಿನ ಕುರಿತಾದ ಭೀತಿಯನ್ನು ಸುಟ್ಟು ಭಸ್ಮಮಾಡಿತು.

ಭೀತಿಗೊಂಡಿದ್ದ, ಆದರೆ ಆನಂದಿತವಾಗಿದ್ದ ಯಾರದೋ ಮುಖ, ತಾಯಿಯ ಪಕ್ಕಕ್ಕೆ ಬಂತು. ನಡುಗುತ್ತಿದ್ದ ಸುಂಯ್‌ಗುಡುತ್ತಿದ್ದ ಸ್ವರವೊಂದು ಉದ್ಗಾರವೆತ್ತಿತು:

"ಮೀತ್ಯ! ಎಲ್ಲಿಗೆ ಹೋಗ್ತಿದೀಯಾ?

ನಿಲ್ಲದೆ ನಡೆಯುತ್ತ ತಾಯಿಯೆಂದಳು:

"ಹೋಗಲಿ. ಅವನ ವಿಷಯ ಚಿಂತಿಸ್ಬೇಡ. ಮೊದಮೊದಲು ನನಗೂ ಹೆದರಿಕೆಯಾಗಿತ್ತು. ನನ್ನ ಮಗ, ನೋಡು, ಎಲ್ಲರ ಮುಂದಿದ್ದಾನೆ – ಬಾವುಟ ಹೊತ್ತಿರೋನು."

"ಎಲ್ಲಿಗೆ ಹೋಗ್ತಿದೀರಿ, ಬಂಡಾಯಗಾರರೆ? ಮುಂದೆ ಸೈನಿಕರು ನಿಂತಿದ್ದಾರೆ!"

ಒಮ್ಮೆಲೆ ಕ್ಷೀಣವಾದ ಕೈಯಿಂದ ತಾಯಿಯನ್ನು ಬಿಗಿಹಿಡಿದುಕೊಂಡು, ತೆಳ್ಳನೆಯ ಎತ್ತರದ ಆ ಹೆಂಗಸು ಹೇಳಿದಳು:

"ಆ! ಹ್ಯಾಗೆ ಹಾಡ್ತಿದಾರೆ ಕೇಳಿದಿಯಾ? ಅಮ್ಮ! ನನ್ನ ಮಿತ್ಯ ಕೂಡಾ ಹಾಡ್ತಿದ್ದಾನೆ!"

ಆಗ್ರಹದಿಂದ ಸಮಜಾಯಿಸುವ ಧ್ವನಿಯಲ್ಲಿ ತಾಯಿ ಹೇಳಿದಳು:

"ಹೆದರಬೇಡವಮ್ಮ. ಇದು ಪವಿತ್ರ ಕೆಲಸ. ಯೋಚಿಸಿ ನೋಡು. ಜನರು ಹೋಗಿ ದೇವರಿಗಾಗಿ ಪ್ರಾಣ ತೆರದೇ ಇದ್ದಿದ್ದರೆ, ಕ್ರಿಸ್ತ ದೊರೀತಿದ್ದನೇ?"

ಈ ವಿಚಾರ ಆಕಸ್ಮಿಕವಾಗಿ ಆಕೆಯ ಮನಸ್ಸಿನಲ್ಲಿ ಮಿನುಗಿತ್ತು. ಅದರ ಸರಳವಾದ ಸ್ಪಷ್ಟವಾದ ಸತ್ಯತೆ ಆಕೆಯನ್ನು ಸ್ತಂಭಿತಳಾಗಿ ಮಾಡಿತು. ತನ್ನ ಕೈಯನ್ನು ಗಟ್ಟಿಯಾಗಿ ಹಿಡಿದಿದ್ದ ಹೆಂಗಸಿನ ಮುಖವನ್ನೆ ಅವಳು ದಿಟ್ಟಿಸಿ ನೋಡಿದಳು.

"ಜನರು ಹೋಗಿ, ಅವನಿಗಾಗಿ, ದೇವನಿಗಾಗಿ, ಪ್ರಾಣ ತೆರದೇ ಇದ್ದಿದ್ದರೆ, ಕ್ರಿಸ್ತ ದೊರೀತಿರ್ಲಿಲ್ಲ," ಎಂದು ಆಶ್ಚರ್ಯದ ಮುಗುಳ್ನಗೆಯೊಡನೆ ಅದೇ ಮಾತನ್ನು ಮತ್ತೊಮ್ಮೆ ಆಕೆ ಹೇಳಿದಳು.

ಸಿಜೋವ್ ಅವಳ ಸಾಲಿಗೆ ಬಂದ.

ಟೋಪಿ ತೆಗೆದು ಹಾಡಿನ ತಾಳಕ್ಕೆ ಸರಿಯಾಗಿ ಅದನ್ನು ಬೀಸುತ್ತ ಅವನೆಂದ:

"ಈ ದಿನ ಬಹಿರಂಗ ಮೆರವಣಿಗೆ ಅಲ್ವ? ಒಂದು ಹಾಡು ಬೇರೆ ರಚಿತವಾಗಿದೆ, ಅಮ್ಮ ಎಷ್ಟೊಳ್ಳೆ ಹಾಡು, ಅಲ್ಲ?"

"ತ್ಸಾರನಿಗೆ ಬೇಕು ಸೈನಿಕರು ಸಮರಭೂಮಿಗೆ ಕಳುಹಿಸಲು.
ಅದಕ್ಕಾಗಿ ಕೊಡಿರಿ ನಿಮ್ಮ ಬಸಿರ ಮಕ್ಕಳನ್ನು...."

"ಯಾವುದರ ಹೆದರಿಕೆಯೂ ಇಲ್ಲ," ಎಂದನು ಸಿಜೋವ್; "ನನ್ನ ಮಗನೋ ಗೋರೀಲಿದ್ದಾನೆ. ಅವನೂ ಇದ್ದಿದ್ದರೆ!"

ತಾಯಿಯ ಹೃದಯದ ಬಡಿತ ಹೆಚ್ಚಾಗಿ, ಆಕೆ ಹಿಂದುಳಿಯಬೇಕಾಯಿತು. ತಕ್ಷಣವೇ ಯಾರೋ ಆಕೆಯನ್ನು ಬದಿಗೆ ಬೇಲಿಯತ್ತ ತಳ್ಳಿದರು. ಅವಳನ್ನು ಹಾದು ದೊಡ್ಡ ತೆರೆಯಂತೆ ಜನಸಂದಣಿ ಧಾವಿಸಿ ಹೋಯಿತು. ಎಷ್ಟೊಂದು ಜನರಿದ್ದರು! ಅದನ್ನು ಕಂಡು ತಾಯಿಗೆ ಸಂತೋಷವಾಯಿತು.

"ಹೋರಾಡಲೇಳಿ, ಓ ಕಾರ್ಮಿಕರೇ, ಏಳಿ....

ದೊಡ್ಡದೊಂದು ಹಿತ್ತಾಳೆಯ ತುತ್ತೂರಿಯಲ್ಲಿ ಆ ಹಾಡನ್ನು ಗಾಳಿಗೆ ತೂರಿ

ಬಿಟ್ಟಂತೆ ಕೇಳಿಸುತ್ತಿತ್ತು. ಆ ಹಾಡು ಕೆಲವರನ್ನು ಜಾಗ್ರತಗೊಳಿಸುತ್ತಿತ್ತು. ಇನ್ನಿತರರಲ್ಲಿ ತೀವ್ರ ಕುತೂಹಲವನ್ನು, ಸುಖದ ಯಾವುದೋ ಹೊಸತಿನ ಅಸ್ಪಷ್ಟ ಭಾವನೆಯನ್ನು ಅದು ಅರಳಿಸುತ್ತಿತ್ತು. ಒಂದೆಡೆ ಎಳೆಯ ಆಸೆಗಳಿಗೆ ಎಡೆಕೊಡುತ್ತಿತ್ತು. ಇನ್ನೊಂದೆಡೆ ದೀರ್ಘಕಾಲದಿಂದ ಹತ್ತಿಕ್ಕಿದ್ದ ಕ್ರೋಧದ ಅಣೆಕಟ್ಟನ್ನು ಕಡಿಯುತ್ತಿತ್ತು. ಪ್ರತಿಯೊಬ್ಬನೂ ಗಾಳಿಯಲ್ಲಿ ಕೆಂಪು ಬಾವುಟ ಹಾರಾಡುತ್ತಿದ್ದ ಜಾಗದತ್ತ ನೋಡಿದನು.

ಅತ್ಯಾನಂದದ ಸ್ವರದಲ್ಲಿ ಯಾವನೋ ಒಬ್ಬ ಕೂಗಿದ:

"ಹೋಗ್ತಿದಾರೆ ಮುಂದೆ. ಸೊಗಸಾಗಿ ಕಾಣಿಸ್ತಿದ್ದೀರಿ ನೀವೆಲ್ಲ !"

ಸಾಮಾನ್ಯ ಮಾತುಗಳಲ್ಲಿ ವ್ಯಕ್ತಪಡಿಸಲಾಗದಂಥ ಯಾವುದೋ ಹಿರಿಯ ಭಾವನೆ ಅವನಲ್ಲಿ ತುಂಬಿದ್ದುದರಿಂದ ಆತ ಪ್ರೀತಿಯಿಂದಲೇ ಬಿರುನುಡಿಗಳನ್ನಾಡಿದ.

ಆದರೆ ದ್ವೇಷ – ಕರಿದಾದ ಕುರುಡಾದ ದಾಸ್ಯ ಭಾವನೆಯ ದ್ವೇಷ ಕೂಡಾ – ಸೂರ್ಯನ ಬೆಳಕಿನಿಂದ ತಾಳ್ಮೆಗೆಟ್ಟು, ಹಾವಿನಂತೆ ಬುಸುಗುಟ್ಟುತ್ತಾ ಸುಳಿದಾಡಿತು. ಕೆಟ್ಟ ಮಾತುಗಳು ಕೇಳಿಸಿದುವು.

ಮನೆಯೊಂದರ ಕಿಟಕಿಯಿಂದ ಯಾವನೊ ಒಬ್ಬನು ಮುಷ್ಟಿಯಲುಗಿಸುತ್ತ "ಪಾಪಿಗಳು ! ದೈವದ್ರೋಹಿಗಳು !" ಎಂದು ಶಪಿಸಿದ.

"ಮಹಾ ಚಕ್ರವರ್ತಿ, ಮಹಾ ಸಾಮ್ರಾಟ, ತ್ಸಾರನ ವಿರುದ್ಧ ಚಳುವಳಿ ! ಬಂಡಾಯ ! ಹುಂ !"

ಕೊರೆಯುವ ಆ ಸ್ವರ ತಾಯಿಯ ಕಿವಿಗಳೊಳಕ್ಕೆ ಸೀದುಹೋಗುವಂತೆ ಇಳಿದು ಬರುತ್ತಿತ್ತು.

ಗಂಡಸರೂ ಹೆಂಗಸರೂ ತನ್ನನ್ನು ಹಾದು ಮುಂದೆ ಹೋಗುತ್ತಿದ್ದಾಗ ಅವರ ಗಾಬರಿಯ ಮುಖಗಳನ್ನು ತಾಯಿ ಕಂಡಳು. ಲಾವಾರಸದಂತೆ ಜನಸಂದಣಿ ಮುಂದಕ್ಕೆ ಪ್ರವಹಿಸುತ್ತಲೇ ಇತ್ತು. ಆ ಹಾಡು, ಅವರನ್ನು ಮುಂದಕ್ಕೆಳೆಯುತ್ತಲೇ ಇತ್ತು. ತನ್ನ ಒತ್ತಡದ ಶಕ್ತಿಯೊಂದರಿಂದಲೇ, ಎದುರಿಗಿದ್ದುದೆಲ್ಲವನ್ನೂ ಝಾಡಿಸುತ್ತ ಹಾದಿ ಮಾಡಿಕೊಳ್ಳುತ್ತ ಆ ಪ್ರವಾಹ, ಮುಂದೆ ಸಾಗಿತ್ತು. ದೂರದಲ್ಲಿದ್ದ ಕೆಂಪು ಬಾವುಟವನ್ನು ನೋಡುತ್ತ ತಾಯಿ ಮಗನ ಮುಖವನ್ನು ಕಾಣದೆಯೇ ಅದನ್ನು ಕಲ್ಪಿಸಿಕೊಂಡಳು. ಕಂಚಿನ ಹುಬ್ಬಿನ, ಪವಿತ್ರ ನಂಬುಗೆಯ ಉಜ್ವಲ ಬೆಂಕಿಯಿಂದ ಬೆಳಗುತ್ತಿದ್ದ ಕಣ್ಣುಗಳ, ಆ ಮುಖ !

ತಾಯಿ ಬಲು ಹಿಂದೆ, ಮೆರವಣಿಗೆಯ ತೀರಾ ಹಿಂದೆ ಉಳಿದುಹೋದಳು. ಅಲ್ಲಿ ಕೆಲವರು, ನಿಧಾನವಾಗಿ ಮುಂದೇನಾಗುವುದೆಂದು ಗೊತ್ತಿದ್ದವರಂತೆ ಅನಾಸಕ್ತಿಯ ನಿರೀಕ್ಷಕ ದೃಷ್ಟಿಯನ್ನು ಬೀರುತ್ತ, ನಡೆಯುತ್ತಿದ್ದರು. ನಿರ್ವಿಕಾರವಾದ ಸ್ವರದಲ್ಲಿ ಎಲ್ಲ ಬಲ್ಲವರಂತೆ ಅವರು ಮಾತನಾಡುತ್ತಿದ್ದರು.

"ಸೈನಿಕರ ಒಂದು ತಂಡಾನ ಶಾಲೆ ಹತ್ತಿರ ಇಟ್ಟಿದಾರೆ: ಇನ್ನೊಂದು ಕಾರಖಾನೆ ಹತ್ತಿರವಿದೆ."

"ಗವರ್ನರ್ ಬಂದಿದ್ದಾರೆ."

"ನಿಜಕ್ಕೂ?"

"ನನ್ನ ಕಣ್ಣಿಂದಲೇ ನೋಡ್ದೆ. ಇದೇ ಈಗ ಬಂದರು."

"ನಮ್ಮನ್ನ ಕಂಡು ಹೆದರೋಕೆ ಶುರು ಮಾಡಿದಾರೆ. ನೀನೇ ನೋಡು ಸೈನಿಕರು ಮತ್ತು ಗವರ್ನರು ನಮ್ಮೂರಿಗೆ ಬಂದಿರೋದು!"

ಹಾಗೆ ಹೇಳಿದವನಿಗೆ ತುಂಬ ಸಂತೋಷವಾಗಿತ್ತು.

"ಆ! ಪ್ರಿಯ ಬಂಧುಗಳೇ" ಎಂದು ತಾಯಿ ಯೋಚಿಸಿಕೊಂಡಳು.

ಆದರೆ ಅವಳು ಕೇಳುತ್ತಿದ್ದ ಮಾತುಗಳು ಶೀತಲವಾಗಿದ್ದುವು. ನಿರ್ಜೀವವಾಗಿದ್ದುವು. ಅವರಿಂದ ದೂರ ಹೋಗಲೆಂದು ತಾಯಿ ಬೇಗಬೇಗನೆ ಮುಂದೆ ಹೋದಳು. ಅವರು ಬಲು ಮೆಲ್ಲನೆ ಸೋಮಾರಿಗಳಂತೆ ಬರುತ್ತಿದ್ದುದರಿಂದ ಅವರನ್ನು ಹಾದು ಹೋಗುವುದು ಕಷ್ಟವಾಗಿರಲಿಲ್ಲ.

ಒಮ್ಮೆಲೆ ಮೆರವಣಿಗೆಯ ಮುಂಭಾಗ ಯಾವುದಕ್ಕೋ ಢಿಕ್ಕಿ ಹೊಡೆದಂತಾಯಿತು. ಮೆರವಣಿಗೆಯ ದೇಹವೇ ಹಿಂದಕ್ಕೆ ಬಾಗಿ ಮೆಲ್ಲನೆ ಕೋಪದ ಗರ್ಜನೆ ಮಾಡಿದಹಾಗಾಯಿತು. ಹಾಡು ಕೂಡಾ ಕಂಪಿಸಿತು. ಆದರೆ ಅದು ಕ್ಷಣಕಾಲ. ಬಳಿಕ ಮೊದಲಿಗಿಂತ ಹೆಚ್ಚು ವೇಗವಾಗಿ ಗಟ್ಟಿಯಾಗಿ ಹಾಡು ಕೇಳಿಸಿತು. ಆದರೆ ಮತ್ತೊಮ್ಮೆ ಸ್ವರ ನಿಂತಿತು. ಒಬ್ಬರ ಹಿಂದೊಬ್ಬರಾಗಿ ಜನರು ಹಾಡುವುದನ್ನು ನಿಲ್ಲಿಸಿದರು. ಅಲ್ಲಲ್ಲಿ ಸ್ವರಗಳು ಮತ್ತೆ ಆ ಹಾಡನ್ನೆತ್ತಿ ಹಿಂದಿನ ಗಂಭೀರತೆಗೇರಿಸಿ ಮುಂದುವರಿಸಲು ಯತ್ನಿಸಿದುವು.

"ಹೋರಾಡಲೇಳಿ, ಓ ಕಾರ್ಮಿಕರೇ,
ಏಳಿ!
ಏಳಿ, ದುಡಿಮೆಯುಪವಾಸದಾ ಬಂದಿಗಳೇ...."

ಆದರೆ ಈ ಯತ್ನದಲ್ಲಿ ಸಾಮೂಹಿಕ ನಿರ್ಧಾರವಿರಲಿಲ್ಲ. ಒಗ್ಗೂಡಿದ ಶ್ರದ್ಧೆ ಇರಲಿಲ್ಲ. ಸ್ವರಗಳಲ್ಲಿ ಗಾಬರಿಯ ಕಂಪನವಿತ್ತು.

ಮುಂದುಗಡೆ ಏನಾಗುತ್ತಿತ್ತೆಂಬುದು ತಾಯಿಗೆ ಕಾಣುತ್ತಿರಲಿಲ್ಲ. ಏನು ಸಂಭವಿಸಿತೆಂದೂ ಅವಳಿಗೆ ಗೊತ್ತಾಗಲಿಲ್ಲ. ಆ ಕಾರಣದಿಂದ ಅವಳು ಮೆರವಣಿಗೆಯಲ್ಲಿದ್ದವರನ್ನು ಬದಿಗೆ ತಳ್ಳಿ ಮುಂದಕ್ಕೆ ಹೋಗತೊಡಗಿದಳು. ಮುಂದೆ ಸರಿದಂತೆ, ಹಿಂದಕ್ಕೆ ಬರುತ್ತಿದ್ದ ಜನರಿಗೆ ಆಕೆ ಢಿಕ್ಕಿ ಹೊಡೆಯಬೇಕಾಯಿತು. ಅವರಲ್ಲಿ ಕೆಲವರು ಹುಬ್ಬು ಗಂಟಿಕ್ಕಿ ತಲೆಬಾಗಿಸಿದ್ದರು. ಕೆಲವರು ಅಸಮಾಧಾನದಿಂದ ಮುಗುಳ್ನಗುತ್ತಿದ್ದರು. ಬೇರೆ ಕೆಲವರು ವ್ಯಂಗ್ಯವಾಗಿ ಸಿಳ್ಳು ಹೊಡೆಯುತ್ತಿದ್ದರು. ನಿರೀಕ್ಷಣೆ, ವಿನಂತಿ, ಪ್ರಾರ್ಥನೆಗಳಿಂದ ತುಂಬಿದ್ದ ತನ್ನ ಕಣ್ಣುಗಳಿಂದ ತಾಯಿ ಅವರ ಮುಖಗಳನ್ನು ಶೋಧಿಸಿದಳು.

"ಸಂಗಾತಿಗಳೇ!" ಎಂದು ಪಾವೆಲ್‌ನ ಸ್ವರ ಕೇಳಿಸಿತು. "ಸೈನಿಕರೂ ನಮ್ಮ

ಹಾಗೆಯೇ ಮನುಷ್ಯರು! ಅವರು ನಮ್ಮನ್ನ ಮುಟ್ಟಲಾರರು. ಅವರು ಯಾಕೆ ನಮ್ಮ ಮೇಲೆ ಕೈ ಎತ್ತಬೇಕು? ಎಲ್ಲರಿಗೂ ಅನ್ವಯಿಸೋ ಸತ್ಯಾನ ನಾವು ಹೇಳ್ತಿರೋದಕ್ಕಾ? ಆ ಸತ್ಯ ನಮಗೆಷ್ಟು ಪ್ರಿಯವಾದದ್ದೊ ಅವರಿಗೂ ಅಷ್ಟೇ ಪ್ರಿಯವಾದದ್ದು. ಈಗ ಅವರಿಗೆಲ್ಲ ಅರ್ಥವಾಗದೇ ಇರಬಹುದು. ಆದರೆ, ಕೊಲೆ, ಲೂಟಿಯ ಬಾವುಟದ ಕೆಳಗೆ ನಿಂತು ನಮ್ಮನ್ನು ಇದಿರಿಸೋ ಬದಲು, ಅವರು ನಮ್ಮ ಜತೆ ಸೇರಿ, ಸ್ವಾತಂತ್ರ್ಯ ಬಾವುಟದ ಕೆಳಗೆ ನಿಲ್ಲೋ ದಿನ ದೂರವಿಲ್ಲ, ಆ ಸತ್ಯವನ್ನ ಅವರು ಬೇಗನೇ ತಿಳಿಯೋವಂತೆ ಮಾಡೋದಕ್ಕಾಗಿ ನಾವು ಮುಂದೆ ಸಾಗ್ಬೇಕು. ಮುನ್ನಡೆಯಿರಿ, ಬಾಂಧವರೇ! ಮುನ್ನಡೆಯಿರಿ!"

ಪಾವೆಲ್‌ನ ಸ್ವರ ದೃಢವಾಗಿತ್ತು. ಅವನ ಮಾತು ತೀಕ್ಷ್ಣವಾಗಿ ಸ್ಪಷ್ಟವಾಗಿ ಕೇಳಿಸಿತು. ಆದರೆ ಗುಂಪು ಚದರತೊಡಗಿತು. ಒಬ್ಬರ ಹಿಂದೊಬ್ಬರು ಮೆರವಣಿಗೆಯ ಸಾಲಿನಿಂದ ಹೊರಬಿದ್ದರು. ಅಕ್ಕಪಕ್ಕ ಮನೆಗಳ ಬೇಲಿಗೊರಗಿ ನಿಂತರು. ಮೆರವಣಿಗೆಯೀಗ ಮೊನಚಾದ ಗೂಟದ ರೂಪ ತಳೆಯಿತು. ಪಾವೆಲ್ ಅದರ ಮುಂಚೂಣಿಯಾಗಿದ್ದ. ಕೂಲಿಕಾರರ ಆ ಕೆಂಪು ಬಾವುಟ ಅವನ ಮೇಲ್ಗಡೆ ಶುಭ್ರವಾಗಿ ಹಾರಾಡುತ್ತಿತ್ತು. ಅದಕ್ಕಿಂತಲೂ ಹೆಚ್ಚು ಚೆನ್ನಾಗಿ ಹಾರಲು ಸಿದ್ಧವಾಗಿ ರೆಕ್ಕೆ ಬಿಡಿಸಿದ್ದ ಕಪ್ಪು ಹಕ್ಕಿಯನ್ನು ಆ ಮೆರವಣಿಗೆ ಹೋಲುತ್ತಿತ್ತು. ಪಾವೆಲ್ ಆ ಹಕ್ಕಿಯ ಕೊಕ್ಕಿನಂತೆ ನಿಂತಿದ್ದ....

## ೨೮

ಬೀದಿಯ ಕೊನೆಯಲ್ಲಿ, ನಿರ್ವಿಕಾರ ಮುಖದ ಜನರ ಏಕಪ್ರಕಾರವಾದ ಬೂದು ಗೋಡೆಯಿತ್ತು. ಚೌಕದ ಹೆದ್ದಾರಿಗೆ ಅಡ್ಡವಾಗಿ ನಿಂತಿತ್ತು ಆ ಮಾನವ ಗೋಡೆ. ತಾಯಿ ಅದನ್ನು ಕಂಡಳು. ಪ್ರತಿಯೊಬ್ಬನ ಭುಜದಿಂದಲೂ ಬಯನೆಟಿನ ಶೀತಲವಾದ ಸೊಗಸಾದ ಹೊಳೆತ ಕಾಣಿಸುತ್ತಿತ್ತು. ಮೌನವಾಗಿದ್ದ ಅಚಲವಾಗಿದ್ದ ಆ ಗೋಡೆಯಿಂದ ಶೈತ್ಯದ ಉಸಿರೊಂದು ಹೊರಟು ಕಾರ್ಮಿಕರನ್ನು ಆವರಿಸಿತು. ತಾಯಿಯ ಹೃದಯ ವನ್ನು ಹೆಪ್ಪುಗಟ್ಟಿಸಿತು.

ತಾಯಿಗೆ ಪರಿಚಯವಿದ್ದವರು ಜನರ ನಡುವೆ ಹಂಚಿ ಹೋಗಿದ್ದರು. ಬಾವು ಟವನ್ನು ಸಮೀಪಿಸಲೆಂದು, ಬೆಂಬಲ ಪಡೆಯಲೋಸುಗ ಪರಿಚಯವಿದ್ದವರ ಬಳಿ ಸಾರಲೆಂದು, ತಾಯಿ ಜನರ ಗುಂಪನ್ನು ಭೇದಿಸುತ್ತ ಮುಂದೆ ಸಾಗಿದಳು. ಎತ್ತರ ವಾಗಿದ್ದ, ನುಣ್ಣನೆ ಮುಖಕ್ಷೌರ ಮಾಡಿಕೊಂಡಿದ್ದ, ಒಕ್ಕಣ್ಣಿನ ಒಬ್ಬನಿಗೊತ್ತಿಕೊಂಡು ತಾಯಿ ನಿಲ್ಲಬೇಕಾಯಿತು.

ಆಕೆಯನ್ನು ಕಾಣಲೆಂದು, ತಿರುಗಿ ನೋಡುತ್ತಾ "ನೀನು ಯಾರು?" ಎಂದು ಅವನು ಕೇಳಿದ.

"ನಾನು ಪಾವೆಲ್ ವ್ಲಾಸೊವ್‌ನ ತಾಯಿ" ಎಂದಳಾಕೆ. ತನ್ನ ಮೊಣಕಾಲು ಗಳು ನಡುಗುತ್ತಿದ್ದುದನ್ನು, ತುಟಿ ಬಿಗಿಹಿಡಿದು ನಿಂತಿರುವುದು ತನ್ನ ಕೈಲಾಗದ್ದನ್ನು, ತಾಯಿ ತಿಳಿದುಕೊಂಡಳು.

"ಆಹಾ!" ಎಂದ ಒಕ್ಕಣ್ಣಿನ ಮನುಷ್ಯ.

ಪಾವೆಲ್‌ನ ಸ್ವರ ಕೇಳಿಬಂತು:

"ಬಾಂಧವರೇ! ನಮ್ಮ ಜೀವಮಾನವೆಲ್ಲಾ ನಾವು ಮುನ್ನುಗ್ಗುತ್ತಲೇ ಇರ್ಬೇಕು. ಬೇರೆ ಹಾದಿಯೇ ಇಲ್ಲ ನಮಗೆ!"

ವಾತಾವರಣ ಶಾಂತವಾಯಿತು. ನಿರೀಕ್ಷಣೆಯಿಂದ ತುಂಬಿತು. ಮೇಲಕ್ಕೆ ಏರಿ ಕೊಂಡಿತು ಬಾವುಟ. ಕ್ಷಣಕಾಲ ಚಂಚಲವಾದರೂ ಜನರ ತಲೆಗಳ ಮೇಲ್ಗಡೆ ಅದು ತೇಲಾಡಿತು. ಸೈನಿಕರ ಬೂದುಗೋಡೆಯ ಕಡೆಗೆ ದೃಢವಾಗಿ ಮುಂದಕ್ಕೆ ಅದನ್ನೊ ಯ್ದರು. ತಾಯಿಯ ಶರೀರ ಕಂಪಿಸಿತು. ಉಸಿರು ಕಟ್ಟಿದಂತಾಗಿ ಆಕೆ ಕಣ್ಣು ಮುಚ್ಚಿ ಕೊಂಡಳು. ಪಾವೆಲ್, ಅಂದ್ರೇಯ್, ಸಮೋಯ್‌ಲೊವ್ ಮತ್ತು ಮಾಜಿನ್ – ಈ ನಾಲ್ವರು ಮಾತ್ರ ಜನಸಂದಣಿಯಿಂದ ಪ್ರತ್ಯೇಕಗೊಂಡು ಮುಂದೆ ನಡೆದಿದ್ದರು.

ಗಾಳಿಯನ್ನು ಭೇದಿಸಿಕೊಂಡು ಫ್ಯೋದೊರ್ ಮಾಜಿನ್‌ನ ಸ್ಪಷ್ಟ ಸ್ವರ ಕೇಳಿ ಸಿತು.

"ದೇಹವಿಟ್ಟಿರಿ ನೀವು ಮಹಾ ತ್ಯಾಗದೀ....

ಆಳವಾದ ನಿಟ್ಟುಸಿರಿನಂತೆ ತಗ್ಗಿದ ಸ್ವರದಲ್ಲಿ ಉತ್ತರ ಬಂತು:

"ಅಸಮವೆನಿಸುವ ರುದ್ರ ಸಮರದೀ....

ಗೀತದ ತಾಳಕ್ಕೆ ಸರಿಯಾಗಿ ಅವರು ಮುಂದೆ ಸಾಗಿದರು.

ಫ್ಯೋದೊರ್‌ನ ಸ್ವರ, ನಿರ್ಧಾರದಿಂದ ತುಂಬಿ ಘೋಷಿಸುತ್ತ, ಪ್ರಕಾಶಮಾನವಾದ ಸುರುಳಿಯಂತೆ ಬಿಚ್ಚಿಕೊಂಡಿತು.

"ಇದ್ದುದೆಲ್ಲವನ್ನೂ ಕೊಟ್ಟಿರಿ ನೀವೂ....

ಅವನ ಸಂಗಾತಿಗಳು ಎರಡನೆಯ ಚರಣದಲ್ಲಿ ಧ್ವನಿಗೂಡಿಸಿದರು.

"ಸ್ವಾತಂತ್ರ್ಯಕ್ಕಾಗೀ....

"ಆಹಾ! ಶೋಕಗೀತೆ ಹಾಡ್ತಿದ್ದಾರೆ ಹಾದರಕ್ಕೆ ಹುಟ್ಟಿದವರು!" ಎಂದು ಯಾರೋ ಒಂದೆಡೆ ಅರಚಿದರು.

"ಬಿಗಿಯಿರಿ ಅವನಿಗೊಂದು!" ಎಂದೊಂದು ಸಿಟ್ಟಿನ ಸ್ವರ ಗರ್ಜಿಸಿತು.

ಕೈಗಳಿಂದ ಎದೆಯನ್ನೊತ್ತಿಕೊಳ್ಳುತ್ತ ತಾಯಿ ಸುತ್ತಲೂ ನೋಡಿದಳು. ಹಿಂದೆ ಜನಸಂದಣಿ ಮಹಾಪೂರದಂತೆ ಬೀದಿಯನ್ನು ತುಂಬಿತ್ತು. ಈಗ ಬಾವುಟದೊಡನೆ

ಆ ನಾಲ್ವರು ಮುಂದುವರಿಯುತ್ತಿದ್ದುದನ್ನು ಈಕ್ಷಿಸುತ್ತಿದ್ದಂತೆ ಜನಸಂದಣಿ ಅಸ್ಥಿರವಾಯಿತು. ಹತ್ತಾರು ಜನ ಆ ನಾಲ್ವರ ಹಿಂದೆಯೇ ಸಾಗುತ್ತಿದ್ದರು. ಆದರೆ ಉರಿಯುವ ನೆಲ ಅವರ ಹಿಮ್ಮಡಿಗಳನ್ನು ಸುಡುತ್ತಿತ್ತೋ ಎಂಬಂತೆ, ಪ್ರತಿ ಹೆಜ್ಜೆ ಮುಂದಿಟ್ಟಾಗಲೂ ಒಬ್ಬೊಬ್ಬರೇ ಹಿಂದೆ ನಿಂತರು.

"ಹಿಂಸೆಗೊಳಗಾಗುವುದು ಕೊನೆಗಾಲ...."

ಎಂದು ಫ್ಯೋದೊರ್ ಭವಿಷ್ಯದ್ವಾಣಿ ನುಡಿಯುತ್ತ ಹಾಡಿದನು. ಅದಕ್ಕೆ ಉತ್ತರವಾಗಿ ಉಳಿದವರ ಏರುಸ್ವರದ ಅನುಪಲ್ಲವಿ ಬಂತು:

"ಜನರೇಳುವರು. ಏಳುವರು...."

ಆದರೆ ಹಾಡಿನ ಜೊತೆಯಲ್ಲಿ ಮುನ್ನೆಚ್ಚರಿಕೆಯ ಪಿಸುಮಾತುಗಳು ಕೇಳಿಸಿದುವು.

"ಆಜ್ಞೆ ಕೊಡೋದರಲ್ಲಿದ್ದಾರೆ!"

ಅದು ಸರಿ ಎಂಬಂತೆ, ಎದುರುಗಡೆಯಿಂದ ತೀಕ್ಷ್ಣ ಸ್ವರವೊಂದು ಕೇಳಿಸಿತು:

"ಬಂದೂಕು ಕೈಯಲ್ಲಿ ಹಿಡಿಯಿರಿ!"

ತೆರೆಯ ಏರು ತಗ್ಗಿನಂತೆ ಬಯನೆಟುಗಳು ಬಾಗಿ ಮುಂಬರುತ್ತಿದ್ದ ಬಾವುಟವನ್ನು, ಉಕ್ಕಿನ ಕುಟಿಲ ಅಣಕದೊಡನೆ ಇದಿರ್ಗೊಂಡುವು.

"ಮುನ್ನಡೆಯಿರಿ!"

ಒಕ್ಕಣ್ಣಿನ ಮನುಷ್ಯ, "ಅಗೋ ಬಂದ್ರು!" ಎನ್ನುತ್ತ, ಜೇಬುಗಳೊಳಕ್ಕೆ ಕೈ ತುರುಕಿಸಿ, ಒಂದು ಪಕ್ಕಕ್ಕೆ ನಡೆದು ಹೋದ.

ಎವೆ ಮುಚ್ಚದೆ ತಾಯಿ ಅದನ್ನೆಲ್ಲ ನೋಡಿದಳು. ಸೈನಿಕರ ಬೂದು ತೆರೆ ಬೀದಿಯಗಲಕ್ಕೂ ಹರಡಿಕೊಂಡು, ಕ್ರೂರ ಹಟದಿಂದ ಬಯನೆಟುಗಳ ಬೆಳ್ಳಿಯ ಬಾಚಣಿಗೆಯ ಹಲ್ಲುಗಳನ್ನು ಮುಂದಕ್ಕೆ ಚಾಚುತ್ತ, ನಡೆದು ಬಂತು. ತಾಯಿ ಬೇಗನೆ ಸಾಗಿ ಪಾವೆಲ್‌ನ ಸಮೀಪಕ್ಕೆ ಬಂದಳು. ಅಂದ್ರೇಯ್ ಆಗಲೆ ಪಾವೆಲ್‌ನ ಮುಂಭಾಗದಲ್ಲಿ ತನ್ನ ಎತ್ತರದ ದೇಹವನ್ನು ಅಡ್ಡವಾಗಿಟ್ಟು, ಅವನನ್ನು ರಕ್ಷಿಸಲೆಂಬಂತೆ ನಿಂತಿದ್ದುದನ್ನು ತಾಯಿ ಕಂಡಳು.

"ನಿನ್ನ ಸ್ಥಾನಕ್ಕೆ ಹೋಗಿ ನಿಲ್ಲು!" ಎಂದು ಪಾವೆಲ್ ಅಂದ್ರೇಯ್‌ಯನ್ನು ಕುರಿತು ತೀಕ್ಷ್ಣ ಸ್ವರದಲ್ಲಿ ಗದರಿಸಿದ.

ಅಂದ್ರೇಯ್ ತಲೆಯನ್ನು ಎತ್ತಿ ಹಿಂದಕ್ಕೆ ಚಾಚಿ, ಬೆನ್ನ ಹಿಂದೆ ಕೈಗಳನ್ನು ಕಟ್ಟಿಕೊಂಡು ಹಾಡುತ್ತಲಿದ್ದ. ಪಾವೆಲ್ ಅವನ ಭುಜ ಹಿಡಿದು ತಳ್ಳಿ ಮತ್ತೊಮ್ಮೆ ಕೂಗಿದ:

"ಹಿಂದಕ್ಕೆ ಸರಿ! ಹೀಗೆ ಮಾಡುವ ಹಕ್ಕಿಲ್ಲ ನಿನಗೆ! ಬಾವುಟ ಮೊದಲು ಹೋಗ್ಬೇಕು!"

"ಚೆದರಿ ಹೋಗಿ!" ಎಂದು ಕಿರುಗಾತ್ರದ ಅಧಿಕಾರಿಯೊಬ್ಬ ತನ್ನ ತಲವಾರನ್ನು

ಝಳಪಿಸುತ್ತಾ ಸಣ್ಣ ಸ್ವರದಲ್ಲಿ ಆಜ್ಞಾಪಿಸಿದ. ನಡೆಯುತ್ತಿದ್ದಾಗ ಮೊಣಕಾಲು ಬಗ್ಗಿಸದೆಯೇ ಕಾಲುಗಳನ್ನೆತ್ತಿ ಇಡುತ್ತ, ಬೂಟುಗಳ ಹಿಮ್ಮಡಿಯಿಂದ ನೆಲಕ್ಕೆ ಬಲ ವಾಗಿ ಬಡಿಯುತ್ತಿದ್ದ. ಆ ಬೂಟುಗಳು ಹೊಳೆಯುತ್ತಿದ್ದುದನ್ನು ತಾಯಿ ಕಂಡಳು.

ತೀರ ಚಿಕ್ಕದಾಗಿ ತಲೆಗೂದಲು ಕತ್ತರಿಸಿದ್ದ ದಪ್ಪಗಿನ ಬೂದು ಮೀಸೆಯಿದ್ದ, ಎತ್ತರದ ಮನುಷ್ಯನೊಬ್ಬ ಆ ಅಧಿಕಾರಿಯ ಪಕ್ಕದಲ್ಲೆ ಸ್ವಲ್ಪ ಹಿಂದಾಗಿ ನಡೆಯು ತ್ತಿದ್ದ. ಕೆಂಪು ಸಂದು ಕಟ್ಟುಗಳಿದ್ದ ಬೂದುಬಣ್ಣದ ಉದ್ದನೆಯ ಕೋಟನ್ನು ಆತ ಧರಿ ಸಿದ್ದ. ಅಗಲವಾದ ಹಳದಿ ಗೆರೆಗಳು ಷರಾಯಿಯ ಉದ್ದಕ್ಕೂ ಕೆಳಕ್ಕೆ ಇಳಿದಿದ್ದುವು. ಅಂದ್ರೇಯ್‌ಯಂತೆ ಅವನೂ ಬೆನ್ನ ಹಿಂದೆ ಕೈಕಟ್ಟಿಕೊಂಡೇ ನಡೆಯುತ್ತಿದ್ದ. ಕೂದಲು ತುಂಬಿದ್ದ ಕಣ್ಣ ಹುಬ್ಬುಗಳನ್ನಾತ ಮೇಲಕ್ಕೇರಿಸಿದ್ದ. ಪಾವೆಲ್‌ನ ಮೇಲೆ ನೆಟ್ಟಿತ್ತು ಅವನ ದೃಷ್ಟಿ.

ಎದುರಿಗಿದ್ದುದನ್ನೆಲ್ಲ ತಾಯಿಯ ನೋಟ ಕಾಣುವುದು ಸಾಧ್ಯವಾಗಲಿಲ್ಲ. ದೊಡ್ಡ ಕರೆಯೊಂದು ಅವಳ ಹೃದಯದಲ್ಲಿ ತುಂಬಿ ಬಂದಿತ್ತು. ಪ್ರತಿಕ್ಷಣವೂ ಬಿರಿದು ಹೊರ ಬೀಳುವೆನೆನ್ನುತ್ತಿತ್ತು. ಆ ಕರೆಯಿಂದ ಉಸಿರು ಕಟ್ಟಿದಂತಾಗಿತ್ತು ಆಕೆಗೆ. ಹೃದಯ ವನ್ನು ಕೈಯಲ್ಲೊತ್ತಿಕೊಂಡು ಆ ಕರೆಯನ್ನಾಕೆ ತಡೆಹಿಡಿದಳು. ಜನರು ಅವಳನ್ನು ಅತ್ತಿತ್ತ ತಳ್ಳುತ್ತಿದ್ದರು. ಯೋಚನಾರಹಿತಳಾಗಿ, ಹೆಚ್ಚು ಕಡಮೆ ಪ್ರಜ್ಞಾಶೂನ್ಯಳಾ ಗಿಯೇ, ಅವಳು ತನ್ನ ಪಾದಗಳ ಮೇಲೆ ಅತ್ತಿತ್ತ ತೂಗಾಡಿದಳು. ಮುಂಭಾಗದಿಂದ ಬರುತ್ತಲಿದ್ದ ತಣ್ಣನೆಯ ತೆರೆಯೆದುರು, ತನ್ನ ಹಿಂದಿದ್ದ ಜನರ ಸಂದಣಿ ಕರಗಿ ಹೋಗುತ್ತಿದ್ದುದು ಆಕೆಗೆ ಅರಿವಾಯಿತು.

ಕೆಂಪು ಬಾವುಟ ಹಿಡಿದಿದ್ದ ಗುಂಪು ಮುಂದು ಮುಂದಕ್ಕೆ ಹೋಯಿತು. ಅದ ಕ್ಕೆದುರಾಗಿ ಬೂದು ಜನರ ಘನವಾದ ತೆರೆಯೂ ಮುಂದು ಮುಂದಕ್ಕೆ ಬಂತು. ಸೈನಿಕರ ಮುಖವೂ ತಾಯಿಗೆ ಸ್ಪಷ್ಟವಾಗಿ ಕಾಣಿಸಿತು. ವಿರೂಪವಾದ ವಿಶಾಲವಾದ ಅವರ ಮುಖ ಹಳದಿ ಪಟ್ಟಿಯಂತೆ ತೋರುತ್ತಿತ್ತು. ಬೀದಿಯ ಅಗಲಕ್ಕೂ ವಿವಿಧ ಬಣ್ಣಗಳ ಕಣ್ಣುಗಳಿದ್ದುವು. ಅವರಿಗಿಂತಲೂ ಮುಂದೆ ಹೊಳೆಯುವ ಉಕ್ಕಿನ ಕ್ರೂರ ತುಕ್ಕಿಗಳಿದ್ದುವು. ಮೆರವಣಿಗೆಯಲ್ಲಿ ಬರುತ್ತಿದ್ದವರ ಎದೆಗಳಿಗಿದಿರು ಮಟ್ಟವಾಗಿ ಅವು ನಿಂತಿದ್ದುವು. ಜನರನ್ನು ಮುಟ್ಟದೆಯೇ ಆ ಉಕ್ಕು ಒಬ್ಬರ ಅನಂತರ ಒಬ್ಬರನ್ನಾಗಿ ನೂಗುಚಿಹಾಕಿತು. ಹೀಗೆ ಗುಂಪನ್ನು ಮುರಿದುಬಿಟ್ಟಿತು.

ತನ್ನ ಹಿಂಭಾಗದಲ್ಲಿ ಜನರು ಓಡುತ್ತಿದ್ದ ಸದ್ದು ತಾಯಿಗೆ ಕೇಳಿಸಿತು. ಉದ್ವಿಗ್ನ ಗೊಂಡ ಸ್ವರಗಳೂ ಕೇಳಿಸಿದುವು.

"ಚದುರಿರಿ, ಸಂಗಾತಿಗಳೆ...."

"ವ್ಲಾಸೊವ್, ಓಡು !"

"ಹಿಂದಕ್ಕೆ ಬಾ, ಪಾವೆಲ್ !"

ವೆಸೊವ್‌ಶ್ಚಿಕೋವ್ ವ್ಯಗ್ರವಾಗಿ ಹೇಳಿದ:

"ಬಾವುಟ ಬಿಟ್ಟಿಡು, ಪಾವೆಲ್! ಇಲ್ಲಿ ಕೊಡು, ಬಚ್ಚಿಡ್ತೀನಿ."

ಆತ ಧ್ವಜಕೋಲಿನತ್ತ ಕೈ ಚಾಚಿ ಅದನ್ನೆಳೆದ. ಬಾವುಟ ಹಿಂದಕ್ಕೆ ಸರಿಯಿತು.

"ಬಿಡು! ದೂರ ಹೋಗು!" ಎಂದು ಪಾವೆಲ್ ಗದರಿದ.

ಸುಟ್ಟುಹೋಯಿತೇನೋ ಎಂಬಂತೆ ಸರಕ್ಕನೆ ನಿಕೊಲಾಯ್ ಕೈಯನ್ನು ಹಿಂದಕ್ಕೆಳೆದ. ಹಾಡು ನಿಂತಿತು. ಜನರು ಅಲ್ಲೆ ತಡೆದು, ಪಾವೆಲ್‌ನ ಸುತ್ತಲೂ ಭದ್ರವಾದ ಗೋಡೆಯಾಗಿ ನಿಂತರು. ಆದರೆ ಪಾವೆಲ್ ಎಲ್ಲರಿಗಿಂತ ಮುನ್ನುಗ್ಗಿದನು. ಮೇಲಿನಿಂದು ದುರಿ, ತೆಳ್ಳನೆಯ ಮೋಡದ ಹಾಗೆ ಎಲ್ಲರನ್ನೂ ಮುಚ್ಚಿಕೊಂಡಂತೆ, ಮಹಾ ಮೌನ ಒಮ್ಮೆಲೆ ನೆಲೆಸಿತು.

ಹೆಚ್ಚಿಲ್ಲ, ಸುಮಾರು ಇಪ್ಪತ್ತು ಜನರಷ್ಟೇ ಬಾವುಟದ ಸುತ್ತಲೂ ನಿಂತಿದ್ದರು. ಆದರೆ ಅಷ್ಟು ಜನ ದೃಢವಾಗಿ ಕದಲದೆ ನಿಂತರು. ಕಾತರಗೊಂಡ ತಾಯಿಗೆ ಅವರ ಬಳಿ ಸಾರುವ ಆಸೆಯಾಯಿತು. ಅವರಿಗೇನಾದರೂ ಹೇಳಬೇಕೆಂಬ ಅಸ್ಪಷ್ಟ ಹಂಬಲ ಹುಟ್ಟಿತು.

ಎತ್ತರದ ಆ ವೃದ್ಧ ಮನುಷ್ಯ, ಬಾವುಟದತ್ತ ಬೊಟ್ಟು ಮಾಡುತ್ತ, "ಅದನ್ನು ಅವನಿಂದ ಕಿತ್ತುಕೋ, ಲೆಫ್ಟಿನೆಂಟ್!" ಎಂದ.

ಆ ಕಿರಿಯ ಗಾತ್ರದ ಅಧಿಕಾರಿ ಪಾವೆಲ್‌ನ ಬಳಿಗೋಡಿ ಧ್ವಜಕ್ಕೆ ಕೈ ಹಾಕಿದ.

"ಇಲ್ಲಿ ಕೊಡು!" ಎಂದು ಕಿರಿಚಿದ.

"ನಿನ್ನ ಕೈ ತೆಗೆ!" ಎಂದು ಪಾವೆಲ್ ಗಟ್ಟಿಯಾದ ಸ್ವರದಲ್ಲಿ ಉತ್ತರವಿತ್ತ.

ಬಾವುಟ ಶುಭ್ರವಾಗಿ ಗಾಳಿಯಲ್ಲಿ ಹಾರಾಡಿತು. ಬಲಕ್ಕೂ ಎಡಕ್ಕೂ, ಇಳಿದು ಏರಿತು. ಕೊನೆಗೊಮ್ಮೆ ನೇರವಾಗಿ ಸೆಟೆದು ನಿಂತಿತು. ಆ ಪುಟ್ಟ ಅಧಿಕಾರಿ ಹಿಂದಕ್ಕೆ ಹಾರಿ ಬಿದ್ದುಬಿಟ್ಟ. ನಿಕೊಲಾಯ್ ಮುಷ್ಟಿಯಲುಗಿಸುತ್ತಾ ತಾಯಿಯನ್ನು ಹಾದು ಹೋದ.

"ಅವರನ್ನು ಬಂಧಿಸಿರಿ!" ಎಂದು ಮುದುಕ ಕಾಲ್ತುಳಿತದ ಸದ್ದಿನೊಡನೆ ಗರ್ಜಿಸಿದ.

ಹಲವು ಸೈನಿಕರು ಮುಂದಕ್ಕೋಡಿದರು. ಅವರಲ್ಲೊಬ್ಬ ಬಂದೂಕಿನ ಹಿಡಿಯನ್ನು ಬೀಸಿದ. ಬಾವುಟ ಕಂಪಿಸಿ, ಮುಂದಕ್ಕೆ ಬಿದ್ದು, ಸೈನಿಕರ ಬೂದು ಸಮೂಹದಲ್ಲಿ ಅದೃಶ್ಯವಾಯಿತು.

"ಆ!" ಎಂದು ಯಾರೋ ಕಟು ವಿಷಾದದ ಉದ್ಗಾರವೆತ್ತಿದರು.

ಗಾಯಗೊಂಡ ಮೃಗದಂತೆ ತಾಯಿಯ ಗಂಟಲಿನಿಂದ ರೋದನ ಹೊರಚಿಮ್ಮಿತು. ಉತ್ತರವಾಗಿ, ಸೈನಿಕರೆಡೆಯಿಂದ ಪಾವೆಲ್‌ನ ಸ್ಪಷ್ಟ ಸ್ವರ ಕೇಳಿಸಿತು:

"ಹೋಗ್ಬರ್ತೀನಿ, ಅಮ್ಮಾ; ಹೋಗ್ಬರ್ತೀನಿ, ಅಮ್ಮಾ...."

ಎರಡು ವಿಚಾರಗಳು ಒಮ್ಮೆಲೆ ಆಕೆಗೆ ಹೊಳೆದುವು: "ಆತ ಜೀವಂತವಾಗಿ ದಾನೆ. ನನ್ನನ್ನು ಸ್ಮರಿಸಿಕೊಂಡ...."

ಆಗಲೆ ಅಂದ್ರೇಯ್‌ನ ಸ್ವರ ಕೇಳಿಸಿತು:

"ಬರ್‍ತೀನವ್ವಾ !"

ಕಾಲ್ಬೆರಳುಗಳ ಮೇಲೆ ನಿಂತು ಕತ್ತನ್ನು ಎತ್ತಿ ಹಿಡಿದು, ಅವರನ್ನೊಮ್ಮೆ ಕಾಣಲು ತಾಯಿ ಯತ್ನಿಸಿದಳು. ಅಲ್ಲಿ ಸೈನಿಕರ ತಲೆಗಳಿಗಿಂತ ಎತ್ತರವಾಗಿ ಅಂದ್ರೇಯ್‌ನ ಮುಖ ಕಾಣಿಸುತ್ತಿತ್ತು. ಆತ ಮುಗುಳ್ನಗುತ್ತ ಆಕೆಗೆ ವಂದಿಸುತ್ತಿದ್ದ.

"ಹ.... ಕಂದಮ್ಮಗಳೇ !... ಅಂದ್ರ್ಯೂಷ ! ಪಾಪ !" ಎಂದು ಅವಳು ಕೂಗಿ ನುಡಿದಳು.

"ವಂದನೆ, ಬಾಂಧವರೇ !" ಎಂದು ಅವರೆಲ್ಲ, ಸೈನಿಕರೆಡೆಯಿಂದ, ಗಟ್ಟಿಯಾಗಿ ಅಂದರು.

ವಿವಿಧ ಸ್ವರಗಳ ಪ್ರತಿಧ್ವನಿಯೊಂದು ಅವರಿಗೆ ಮರುವಂದನೆಯನ್ನಿತ್ತಿತ್ತು. ಕಿಟಕಿಗಳಿಂದ, ಎಲ್ಲೋ ಮೇಲಿನಿಂದ, ಮಾಡಗಳಿಂದಲೂ ಆ ಪ್ರತಿಧ್ವನಿ ಬಂತು.

೨೯

ಯಾರೋ ತಾಯಿಯ ಎದೆಗೆ ಗುದ್ದಿದರು. ಕಣ್ಣೆದುರು ಮುಸುಕು ತೆರೆ ಕವಿಯಿತಾದರೂ ತನ್ನೆದುರು ನಿಂತಿದ್ದ ಕಿರಿಯ ಗಾತ್ರದ ಅಧಿಕಾರಿಯ ಕೆಂಪಗಿನ ಉಬ್ಬಿದ ಮುಖವನ್ನು ಅವಳು ಕಂಡಳು.

"ತೊಲಗಾಚೆ, ಹೆಂಗಸೆ !" ಎಂದು ಅವನು ಗದರಿದ. ಮೇಲಿನಿಂದ ಕೆಳಗಿನವರೆಗೂ ಒಂದೇ ನೋಟದಿಂದ ತಾಯಿ ಅವನನ್ನು ನೋಡಿದಳು. ಅವನ ಪಾದಗಳ ಬಳಿಯಲ್ಲಿ ಧ್ವಜ ಕೋಲು ಎರಡು ತುಂಡಾಗಿ ಬಿದ್ದಿತು. ಒಂದರ ಕೊನೆಯಲ್ಲಿ ಕೆಂಪು ಬಟ್ಟೆಯ ಚೂರೊಂದು ಇನ್ನೂ ಉಳಿದಿತ್ತು. ಆಕೆ ಬಾಗಿ, ಅದನ್ನೆತ್ತಿಕೊಂಡಳು. ಅಧಿಕಾರಿ ಅವಳ ಕೈಯಿಂದ ಅದನ್ನು ಕಸಿದುಕೊಂಡು, ಆಕೆಯನ್ನು ಬದಿಗೆ ತಳ್ಳಿ, ಕಾಲುಗಳಿಂದ ನೆಲವನ್ನು ತುಳಿಯುತ್ತಾ, "ಹೋಗೂಂತಲ್ಲವೆ ನಿನಗೆ ಹೇಳಿದ್ದು ?" ಎಂದು ಅರಚಿದ.

ಸೈನಿಕರ ನಡುವಿನಿಂದ ಹಾಡು ಕೇಳಿಸಿತು:

"ಹೋರಾಡಲೇಳಿ, ಓ ಕಾರ್ಮಿಕರೇ, ಏಳಿ !..."

ಪ್ರತಿಯೊಂದು ವಸ್ತುವೂ ತತ್ತರಿಸಿತು, ಓಲಾಡಿತು, ಕಂಪಿಸಿತು. ಟೆಲಿಗ್ರಾಫ್ ತಂತಿಗಳ ಗುಂಯ್ ಗುಂಯಾಟದಂಥ ಸದ್ದು ವಾತಾವರಣವನ್ನು ತುಂಬಿತು. ಅಧಿಕಾರಿ ಅಲ್ಲಿಗೆ ಧಾವಿಸಿದ.

"ಹಾಡು ನಿಲ್ಲಿಸಿ !" ಎಂದು ಕ್ರೋಧದಿಂದ ಅವನು ಕಿರಿಚಿದ. "ಸಾರ್ಜೆಂಟ್-ಮೇಜರ್ ಕ್ರೈನೋವ್ !..."

ಆತ ಕೆಳಕ್ಕೆಸೆದ ಬಾವುಟದ ತುಣುಕು ಇದ್ದ ಸ್ಥಳಕ್ಕೆ ಅಸ್ಥಿರಳಾಗಿ ತಾಯಿ ಮುನ್ನಡೆದು ಮತ್ತೊಮ್ಮೆ ಅದನ್ನೆತ್ತಿಕೊಂಡಳು.

"ಮುಚ್ಚಿಸು ಅವರ ಬಾಯಿ!"

ಹಾಡು ತವತವಿಸಿತು. ಸ್ವರ ಕಂಪಿಸಿತು. ಅರ್ಧದಲ್ಲೇ ಮುರಿದುಹೋಗಿ ಕೊನೆಗಂಡಿತು. ಯಾರೋ ತಾಯಿಯ ಭುಜ ಹಿಡಿದು ಕುಲುಕಿ ಹಿಂದಕ್ಕೆ ತಿರುಗಿಸಿ, "ಹೋಗು, ದೂರ ಹೋಗಮ್ಮ," ಎಂದು ಅವಳನ್ನು ತಳ್ಳುತ್ತ ಹೇಳಿದರು.

"ಬೀದಿಯನ್ನು ಖಾಲಿಮಾಡಿ!" ಎಂದು ಅಧಿಕಾರಿ ಕೂಗಾಡಿದ.

ಹತ್ತು ಹೆಜ್ಜೆಗಳಾಚೆ ಜನರ ಇನ್ನೊಂದು ಗುಂಪು ಇದ್ದುದನ್ನು ತಾಯಿ ಕಂಡಳು, ಅವರು ಕೂಗಾಡುತ್ತಾ, ಸಿಳ್ಳು ಹೊಡೆಯುತ್ತಾ, ಮೆಲ್ಲಮೆಲ್ಲನೆ ಬೀದಿಯ ಪಕ್ಕಗಳಿಗೆ ತಿರುಗಿ ಮನೆಯ ಅಂಗಳಗಳನ್ನು ಹೊಕ್ಕರು.

"ನಡೆಯಾಚೆ, ಹೆಣ್ಣುದೆವ್ವ!" ಎಂದು ಮೀಸೆ ಬೆಳೆಸಿದ್ದ ಯುವಕ ಸೈನಿಕನೊಬ್ಬ ತಾಯಿಯ ಕಿವಿಯೊಳಕ್ಕೆ ಘೀಳಿಡುತ್ತ, ಬೀದಿಯ ಬದಿಗೆ ಅವಳನ್ನು ತಳ್ಳಿದ.

ತಾಯಿಯ ಮೊಣಕಾಲುಗಳು ತೀರ ನಿಶ್ಶಕ್ತವಾಗಿದ್ದುವು. ಧ್ವಜಗೋಲನ್ನು ಊರಿಕೊಳ್ಳುತ್ತ ಆಕೆ ದೂರ ಹೋದಳು. ತಾನು ಬೀಳದಂತೆ ಇನ್ನೊಂದು ಕೈಯಿಂದ ಗೋಡೆಗಳನ್ನೂ ಬೇಲಿಗಳನ್ನೂ ಆಧರಿಸಿಕೊಂಡು ನಡೆದಳು. ಅವಳ ಮುಂದೆಯೇ ಜನರು ಹಿಂತಿರುಗಿ ಹೋಗುತ್ತಿದ್ದರು. ಹಿಂಭಾಗದಲ್ಲೂ ಪಕ್ಕಗಳಲ್ಲೂ "ತೊಲಗಿರಿ! ತೊಲಗಿರಿ!" ಎಂದು ಕೂಗಾಡುತ್ತ ಸೈನಿಕರು ಬರುತ್ತಿದ್ದರು.

ಸೈನಿಕರು ತನ್ನನ್ನು ದಾಟಿ ಮುಂದೆ ಹೋಗುವಂತೆ, ತಾಯಿ ಬದಿಗೆ ಸರಿದಳು. ಆ ಮೇಲೆ ನಿಂತು ಹಿಂದಿರುಗಿ ನೋಡಿದಳು. ಬೀದಿಯ ಕೊನೆಯಲ್ಲಿ ಮತ್ತಷ್ಟು ಸೈನಿಕರು, ಬರಿದಾಗಿದ್ದ ಚೌಕದ ದಾರಿಗೆ ಅಡ್ಡವಾಗಿ ಸಾಲಾಗಿ ನಿಂತಿದ್ದರು. ಈ ಕಡೆಯಿಂದ ಆ ಬೂದು ವ್ಯಕ್ತಿಗಳು ಜನರನ್ನು ಬೆನ್ನಟ್ಟುತ್ತ ಸಾಗಿದ್ದರು.

ಹಿಂತಿರುಗುವ ಆಸೆಯಾಯಿತು ಅವಳಿಗೆ. ಆದರೂ ತನಗರಿಯದಂತೆ ಅವಳು ಎದುರು ದಿಕ್ಕಿಗೆ ನಡೆದಳು. ಅಗಲ ಕಿರಿದಾದ ಬರಿದಾದ ಗಲ್ಲಿಯೊಂದನ್ನು ಸಮೀಪಿಸಿ, ಅಲ್ಲಿ ಮತ್ತೊಮ್ಮೆ ನಿಂತಳು.

ಹಾಗೆ ನಿಂತು, ದೀರ್ಘವಾದ ನಿಟ್ಟುಸಿರು ಬಿಟ್ಟು, ಕಿವಿಗೊಟ್ಟು ಆಲಿಸಿದಳು. ಮುಂದುಗಡೆ ಎಲ್ಲಿಂದಲೋ ಜನರ ಒಂದು ಗುಂಪಿನ ಮಾತಿನ ಸದ್ದು ಕೇಳಿಸಿತು.

ಧ್ವಜಕೋಲನ್ನೂರಿಕೊಂಡು ಪುನಃ ನಡೆದಳಾಕೆ. ಮೈ ಬೆವತಿತ್ತು. ಹುಬ್ಬುಗಳು ಕಂಪಿಸುತ್ತಿದ್ದುವು, ತುಟಿಯಲುಗುತ್ತಿತ್ತು. ಕೈಗಳು ಏನೋ ಸನ್ನೆ ಮಾಡುತ್ತಿದ್ದುವು. ಚೆಲ್ಲಾಪಿಲ್ಲಿಯಾದ ಪದಗಳು, ಬೆಂಕಿಯ ಕಿಡಿಗಳಂತೆ, ಅವಳ ಮನಸ್ಸಿನಲ್ಲಿ ಹಾರಾಡುತ್ತಿದ್ದುವು. ಆ ಕಿಡಿಗಳ ಗಾತ್ರ ದೊಡ್ಡದಾಗುತ್ತ ಆಗುತ್ತ, ಮಾತಾಡಬೇಕೆಂಬ, ಗಟ್ಟಿಯಾಗಿ ಕೂಗಾಡಬೇಕೆಂಬ ಆಸೆಯು ಜ್ವಾಲೆಯಾಗಿ ಉರಿಯಿತು.

ಅಲ್ಲೆ ಆ ಗಲ್ಲಿ ಎಡಕ್ಕೆ ತಿರುಗಿತ್ತು. ಜನರ ದೊಡ್ಡದೊಂದು ಗುಂಪು ಮೂಲೆಯಲ್ಲಿ ನಿಂತಿದ್ದುದನ್ನು ತಾಯಿ ಕಂಡಳು.

"ಬಯನೆಟುಗಳ ಸಾಲನ್ನು ಇದಿರಿಸಿ ಹೋಗೋದು ತಮಾಷೆಯಲ್ಲ, ಸೋದ ರರೇ ! ಅದಕ್ಕೆ ಧೈರ್ಯ ಬೇಕು !" ಎಂದು ಯಾರೋ ಗಟ್ಟಿಯಾಗಿ ಶಕ್ತಿಪೂರ್ಣವಾದ ಸ್ವರದಲ್ಲಿ ಹೇಳಿದರು.

"ಅಬ್ಬ ! ಅವರನ್ನು ನೋಡಿದಿಯಾ ನೀನು ! ಬಯನೇಟುಗಳು ನೇರವಾಗಿ ಅವರಿಗಿದಿರು ಬರ್ತಿದ್ದುವು. ಆದರೂ ಅವರು ಅಲುಗಾಡದೆ ನಿಂತಿದ್ರು. ಅಲ್ಲೆ ! ಕಲ್ಲಿನ ಹಾಗೆ ದೃಢವಾಗಿ, ಒಂದಿಷ್ಟೂ ಹೆದರದೆ !"

"ಪಾವೆಲ್ ವ್ಲಾಸೊವ್ ಸಾಮಾನ್ಯನಲ್ಲ !"

"ಮತ್ತೆ ಅಂದ್ರೇಯ್ ಕಡಮೆಯೇ ?"

"ಬೆನ್ನಹಿಂದೆ ಕೈ ಕಟ್ಟಿಕೊಂಡು ಮುಗುಳ್ನಗುತ್ತಲೇ ನಿಂತಿದ್ದ ಭೂಪ !"

ಜಾಗ ಮಾಡಿಕೊಂಡು ಅವರೆಡೆಗೆ ಸಾಗುತ್ತ ತಾಯಿ, "ಸ್ನೇಹಿತರೇ !" ಎಂದು ಕೂಗಿದಳು. ಜನರು ಗೌರವದಿಂದ ಪಕ್ಕಕ್ಕೆ ಸರಿದು, ಅವಳಿಗೆ ಹಾದಿಮಾಡಿಕೊಟ್ಟರು. ಯಾರೋ ಒಬ್ಬರು ನಕ್ಕರು.

"ನೋಡು, ಬಾವುಟ ಅವಳ ಕೈಲಿದೆ !"

"ಬಾಯ್ಮುಚ್ಚು !" ಎಂದಿತೊಂದು ಒರಟು ಸ್ವರ.

ತಾಯಿ ತನ್ನ ತೋಳುಗಳನ್ನು ಅಗಲವಾಗಿ ಚಾಚಿದಳು.

"ದೇವರಾಣೆಯಿದೆ – ನನ್ನ ಮಾತು ಕೇಳಿ ! ಸಾಧುಜನರೇ, ಪ್ರೀತಿಯ ಜನರೇ, ಏನಾಗಿದೇಂತ ಹೆದರದೆ ನೋಡಿ, ನಮ್ಮ ಮಕ್ಕಳೇನೇ – ನಮ್ಮದೇ ಮಾಂಸದ ತುಣುಕು – ಎಲ್ಲರಿಗೋಸ್ಕರ ನ್ಯಾಯಗಳಿಸೋಕೆ ಅಂತ, ಮುಂದಕ್ಕೆ ಹೋಗಿದಾರೆ. ನಮ್ಮ ಮಕ್ಕಳಿಗಾಗಿ, ಹೆಚ್ಚು ಶೋಭೆಯ ಶೋಧನೆಗಾಗಿ ಬಾವುಟವನ್ನು ಅವರು ಎತ್ತಿ ಹಿಡಿದಿದ್ದಾರೆ ! ಅವರಿಗೆ ಇನ್ನೊಂದು ಬಾಳ್ವೆ ಬೇಕಾಗಿದೆ; ಸತ್ಯ ಮತ್ತು ನ್ಯಾಯ ಇರೋ ಬಾಳ್ವೆ ಬೇಕಾಗಿದೆ. ಎಲ್ಲ ಜನರಿಗೂ ಹಿತವಾಗಬೇಕೂಂತ ಅವರು ಇಚ್ಛಿಸ್ತಾರೆ !"

ಎದೆಯೊಳಗೆ ಅವಳ ಹೃದಯ ಬಿರಿಯುತ್ತಿತ್ತು. ಬಿಸಿಯೇರಿ ಒಣಗಿತ್ತು ಗಂಟಲು. ಆಳಆಳದಿಂದ ಹೊಸ ಪದಗಳೇರಿ ಬಂದು, ನಾಲಿಗೆಯಲ್ಲಿ ಕುಪ್ಪಳಿಸಿ, ಆಕೆ ಹೆಚ್ಚು ಸ್ವತಂತ್ರವಾಗಿ ಅರ್ಥಪೂರ್ಣವಾಗಿ ಮಾತಾಡುವಂತೆ ಮಾಡಿದುವು.

ಎಲ್ಲರೂ ಮೌನವಾಗಿ ತನ್ನ ಮಾತಿಗೆ ಕಿವಿಗೊಡುತ್ತಿದ್ದುದು ಕಾಣುತ್ತಿತ್ತು. ತನ್ನ ಸುತ್ತಲೂ ಅಷ್ಟು ಸಮೀಪವಾಗಿ ನೆರೆದಿದ್ದ ಆ ಜನರು ವಿಚಾರಮಗ್ನರಾಗಿದ್ದಂತೆ ಆಕೆಗೆ ಅನಿಸಿತು. ತನ್ನ ಮಗನನ್ನು, ಅಂದ್ರೇಯ್‌ನನ್ನು, ಸೈನಿಕರ ಕೈಗೆ ಸಿಕ್ಕಿದವರೆಲ್ಲ ರನ್ನು, ಅವರ ಪಾಡಿಗವರು ಎಂದು ದೂರೀಕರಿಸಿದವರು ಅನುಸರಿಸುವಂತೆ ಮಾಡುವ ಆಸೆ ಸ್ಪಷ್ಟವಾಗಿ ಅವಳಲ್ಲಿ ಮೂಡಿತು.

ತನ್ನ ಸುತ್ತಲೂ ಹುಬ್ಬುಗಂಟಿಕ್ಕಿ, ಆಸಕ್ತಿಯಿಂದ ಆಲಿಸುತ್ತಿದ್ದ ಮುಖಗಳತ್ತ ಕ್ಷಣಕಾಲ ದಿಟ್ಟಿಸಿ, ಕ್ಷೀಣಬಲದಿಂದ ತಾಯಿ ಮಾತು ಮುಂದುವರಿಸಿದಳು:

"ಸುಖವನ್ನು ಹುಡುಕಿಕೊಂಡು ನಮ್ಮ ಮಕ್ಕಳು ಪ್ರಪಂಚದಲ್ಲಿ ಮುಂದೆ ಸಾಗಿದ್ದಾರೆ. ಎಲ್ಲಾ ಜನರಿಗೋಸ್ಕರ ಅವರು ಮುಂದೆ ಹೋಗಿದ್ದಾರೆ. ಕ್ರಿಸ್ತದೇವರ ಸತ್ಯಕ್ಕಾಗಿ, ಈ ಪ್ರಪಂಚದ ಠಕ್ಕರೂ ದುಷ್ಟರೂ ದುರಾಸೆಯುವರೂ ನಮ್ಮನ್ನು ಉಸಿರು ಕಟ್ಟಿಸಿ ಕೈ ಬಿಗಿದು ಬೆನ್ನಲ್ಲಿ ಬಾಸುಂಡೆ ಬರಿಸಿರೋದಕ್ಕೆಲ್ಲಾ ಇದಿರಾಗಿ, ಅವರು ಮುಂದೆ ಹೋಗಿದಾರೆ. ಪ್ರಿಯ ಜನರೇ, ನಮ್ಮ ಎಳೆಯ ಮಕ್ಕಳು ಎದ್ದು ನಿಂತಿರೋದು ಎಲ್ಲ ಜನರಿಗಾಗಿ. ಅವರನ್ನು ಬಿಟ್ಟಿಡಬೇಡಿ, ಅವರನ್ನು ಛೀಗಳೀಬೇಡಿ, ಒಬ್ಬಂಟಿಗರಾಗಿ ಅವರು ಹೋಗೋಹಾಗೆ ಮಾಡ್ಬೇಡಿ! ನಿಮ್ಮ ಮೇಲೇ ನಿಮಗೆ ಕನಿಕರವಿರಲಿ! ನಮ್ಮ ಮಕ್ಕಳು ಸತ್ಯಕ್ಕೆ ಜನ್ಮಕೊಟ್ಟಿದಾರೆ. ಆ ಸತ್ಯಕ್ಕಾಗಿ ತಮ್ಮ ಜೀವ ಕೊಡೋಕೂ ಸಿದ್ಧವಿದ್ದಾರೆ. ಅಂಥ ನಮ್ಮ ಮಕ್ಕಳ ವಿಚಾರದಲ್ಲಿ ವಿಶ್ವಾಸವಿಡಿ! ಅವರಲ್ಲಿ ಶ್ರದ್ಧೆ ಇಡಿ!"

ಸ್ವರ ಕುಂಠಿತವಾಯಿತು. ದೇಹ ಓಲಾಡಿತು. ಬವಳಿ ಬಂತು. ಯಾರೋ ಆಕೆಯನ್ನು ಹಿಡಿದೆತ್ತಿದರು.

ಉದ್ವಿಗ್ನಗೊಂಡ ಸ್ವರದಲ್ಲಿ ಯಾರೋ ಒಬ್ಬ ಕೂಗಾಡಿದ:

"ದೇವರ ಸತ್ಯಾನ ಅವಳು ಆಡ್ತಿದಾಳೆ! ದೇವರ ಸತ್ಯ, ಒಳ್ಳೇ ಜನರೇ! ಕಿವಿ ಗೊಟ್ಟು ಕೇಳಿ!"

"ನೋಡಿ, ಹ್ಯಾಗೆ ತನ್ನನ್ನು ತಾನೇ ಸಂಕಟಕ್ಕೆ ಗುರಿ ಮಾಡ್ಕೊಳ್ತಿದ್ದಾಳೆ," ಎಂದು ಯಾರೋ ಸಹಾನುಭೂತಿ ತೋರಿಸಿದರು.

ಅದನ್ನು ಅಲ್ಲಗಳೆಯುವ ಇನ್ನೊಂದು ಸ್ವರ ಹೀಗೆ ಹೇಳಿತು:

"ತನಗಲ್ಲ ಆಕೆ ಸಂಕಟ ಕೊಡ್ತಿರೋದು. ನಮಗೆ, ಸಂಕಟವಾಗ್ತಿರೋದು ಮೂರ್ಖ ರಾದ ನಮ್ಮೊಳಗೆ! ಇನ್ನೂ ನಮಗೆ ತಿಳಿದೇ ಇಲ್ವಲ್ಲಾ ಈ ವಿಷಯ!"

"ನಿಜವಾದ ದೈವಭಕ್ತರೆ!" ಎಂದು ಹೆಂಗಸೊಬ್ಬಳು ಎತ್ತರದ ನಡುಗುತಿದ್ದ ಸ್ವರದಲ್ಲಿ ಹೇಳಿದಳು. "ನನ್ನ ಮೀತ್ಯ – ಅವನೊಂದು ಪರಿಶುದ್ಧ ಆತ್ಮ. ಅವನೇನು ಕೆಟ್ಟದ್ದು ಮಾಡಿದ್ದಾನೆ? ತಾನು ಪ್ರೀತಿಸಿದ ಬಾಂಧವರನ್ನ ಅನುಸರಿಸ್ದ, ಅಷ್ಟೆ. ಅವಳು ಹೇಳ್ತಿರೋದು ಸರಿ – ನಮ್ಮ ಮಕ್ಕಳನ್ನ ನಾವು ಯಾಕೆ ಕೈಬಿಡ್ಬೇಕು? ಅವರೇನು ತಪ್ಪು ಮಾಡಿದ್ದಾರೆ?"

ಆ ಮಾತುಗಳನ್ನು ಕೇಳುತ್ತ ತಾಯಿ ಕಂಪಿಸತೊಡಗಿದಳು; ಮೌನವಾಗಿ ಅತ್ತಳು.

"ಮನೆಗೆ ಹೋಗಮ್ಮ ಪೆಲಗೇಯ ನೀಲೊವ್ನ. ಮನೆಗೆ ಹೋಗು. ಒಂದು ದಿವಸಕ್ಕೆ ಇದು ಬಹಳವಾಯ್ತು" ಎಂದನು ಸಿಜೋವ್.

ಅವನ ಮುಖ ಮ್ಲಾನವಾಗಿತ್ತು; ಕೆದರಿತ್ತು ಗಡ್ಡ. ಒಮ್ಮೆಲೆ ಆತ ಸೆಟೆದು

ನಿಂತು, ತೀಕ್ಷ್ಣ ನೋಟದಿಂದ ಸುತ್ತಲೂ ನೋಡಿ, ಪರಿಣಾಮಕಾರಿಯಾಗುವ ರೀತಿ ಯಲ್ಲಿ ಹೇಳಿದ:

"ನನ್ನ ಮಗ ಮತ್ವೇಯ್ ಕಾರಖಾನೆಯ ಅಪಘಾತದಲ್ಲಿ ಸತ್ತದ್ದು ನಿಮಗೆಲ್ಲಾ ಗೊತ್ತಿದೆ. ಆದರೆ ಆತ ಬದುಕಿದ್ದರೆ, ಅವನನ್ನ ನಾನೇ ಅವರೆಲ್ಲರ ಹಿಂದೆ ಕಳಿಸ್ತಿದ್ದೆ. ನೀನೂ ಹೋಗು, ಮತ್ವೇಯ್. ಅದೊಂದೇ ನಿಜವಾದ ದಾರಿ, ಅದೊಂದೇ ಪ್ರಾಮಾ ಣಿಕ ದಾರಿ ಅಂತ ಸ್ವತಃ ನಾನೇ ಹೇಳ್ತಿದ್ದೆ."

ಆತ ಮಾತು ನಿಲ್ಲಿಸಿ ಸುಮ್ಮನಾದ, ಉಳಿದ ಪ್ರತಿಯೊಬ್ಬರೂ ಮುಖಬಾಡಿಸಿ ಮೌನ ತಳೆದರು. ಹೊಸತಾದ, ಅಪಾರವಾದ, ತಮಗೆ ಭೀತಿಯೇ ಇಲ್ಲದ, ಯಾವುದೋ ಒಂದು ಭಾವನೆ ಅವರನ್ನು ಬಲವಾಗಿ ಆವರಿಸಿದಂತಿತ್ತು.

ಏರಿಸಿದ ಮುಷ್ಟಿಯನ್ನಲುಗಿಸುತ್ತ ಸಿಜೋವ್ ಮುಂದುವರಿಸಿದ:

"ಮಾತಾಡ್ತಿರೋನು ನಾನೊಬ್ಬ ಮುದುಕ. ನೀವೆಲ್ಲಾ ನನ್ನನ್ನು ಬಲ್ಲಿರಿ. ಐವ ತ್ಮೂರು ವರ್ಷಗಳಿಂದ ಈ ಪ್ರಪಂಚದಲ್ಲಿ ನಾನೂ ಬದುಕಿದ್ದೀನಿ. ಮೂವತ್ತೊಂಭತ್ತು ವರ್ಷಗಳಿಂದ ಇಲ್ಲಿ ಕೆಲಸ ಮಾಡ್ತಿದೀನಿ. ಈ ದಿವಸ ನನ್ನ ಅಳಿಯನನ್ನ ಮತ್ತೆ ಬಂಧಿ ಸಿದ್ದಾರೆ. ಅವನೊಳ್ಳೆಯ ಜಾಣ ಹುಡುಗ. ಅವನೂ ಮೆರವಣಿಗೆ ಮುಂದುಗಡೇನೆ ಇದ್ದ – ವ್ಲಾಸೊವ್ ಪಕ್ಕದಲ್ಲಿ, ಬಾವುಟದ ಹಿಂದುಗಡೆಯೇ –"

ಆತ ಕೈಬೀಸಿ ಭಾವನೆಗಳನ್ನು ಹಗುರಮಾಡಿಕೊಂಡ. ತಾಯಿಯ ಕೈಹಿಡಿದು ಕೊಂಡ.

"ಈ ಹೆಂಗಸು ಹೇಳಿದ್ದು ಸತ್ಯ. ನಮ್ಮ ಮಕ್ಕಳು ಪ್ರಾಮಾಣಿಕವಾಗಿ ನ್ಯಾಯ ಬದ್ಧವಾಗಿ ಬದುಕಬೇಕು ಅಂತಾರೆ. ನಾವು ಅವರ ಕೈ ಬಿಟ್ಬಿಟ್ಟೆವು. ದೂರ ಸರಿದ್ಬಿಟ್ಟೆವು. ಸುಳ್ಳು ಹೇಳಿ ಏನು ಪ್ರಯೋಜನ?.... ಬಾಮ್ಮ ಪೆಲಗೇಯ ನೀಲೊವ್ನ."

ಅತ್ತು ಕೆಂಪಗಾಗಿದ್ದ ಕಣ್ಣುಗಳಿಂದ ಸುತ್ತಲೂ ನೋಡುತ್ತ ತಾಯಿಯೆಂದಳು:

"ಒಳ್ಳೇ ಜನರೆ! ಜೀವನವಿರೋದು ನಮ್ಮ ಮಕ್ಕಳಿಗಾಗಿ. ಭೂಮಿ ಇರೋದು ನಮ್ಮ ಮಕ್ಕಳಿಗಾಗಿ."

"ಬಾ ಪೆಲಗೇಯ ನೀಲೊವ್ನ. ತಗೋ ಇಲ್ಲಿದೆ ಕೋಲು," ಎಂದು ಸಿಜೋವ್, ಧ್ವಜ ಕೋಲಿನ ಉಳಿದಿದ್ದ ತುಂಡನ್ನು ಆಕೆಗೆ ಕೊಟ್ಟ.

ವಿಷಾದ ಗೌರವಗಳಿಂದ ಕೂಡಿದ ಜನರ ದೃಷ್ಟಿ, ತಾಯಿಯನ್ನು ಹಿಂಬಾಲಿ ಸಿತು. ನಾಲ್ಕು ಸುತ್ತಲಿಂದಲೂ ಸಹಾನುಭೂತಿಯ ಮಾತು ಗುಂಯ್‌ಗುಟ್ಟುತ್ತಿ ದ್ದಂತೆ ಆಕೆ ಹೊರಟಳು. ಸಿಜೋವ್ ಮೌನವಾಗಿ ಹಾದಿ ಬಿಡಿಸಿಕೊಂಡು ಆಕೆಯನ್ನು ಕರೆದೊಯ್ದು. ಜನರು ಚಕಾರವೆತ್ತದೆ ಪಕ್ಕಕ್ಕೆ ಸರಿದರು. ತಿಳಿಯಲಾರದೊಂದು ಶಕ್ತಿ ಯಿಂದ ಸೆಳೆಯಲ್ಪಟ್ಟ ಅವರೂ ತಾಯಿಯನ್ನು ಬೀದಿಯುದ್ದಕ್ಕೂ ಹಿಂಬಾಲಿಸಿದರು. ಹಿಂಬಾಲಿಸುತ್ತ, ತಮ್ಮ ತಮ್ಮೊಳಗೆ ಚುಟುಕು ಚುಟುಕಾಗಿ ಮಾತಾಡಿಕೊಂಡರು.

ಅವರೆಲ್ಲ ತಾಯಿಯ ಮನೆಯ ಬಾಗಿಲ ಬಳಿಗೆ ಬಂದಾಗ, ಆಕೆ ಅವರತ್ತ ತಿರುಗಿ,

ತಲೆಬಾಗಿ, ಧ್ವಜಕೋಲಿನ ಮೇಲೆ ಆಧರಿಸಿ ನಿಲ್ಲುತ್ತಾ, ಮೃದುವಾಗಿಯೂ ಕೃತಜ್ಞತಾ ಪೂರ್ವಕವಾಗಿಯೂ "ತುಂಬ ಉಪಕಾರವಾಯ್ತು, ನಿಮಗೆ ವಂದನೆ" ಎಂದಳು.

ಹೃದಯದ ಆಳದಿಂದ ಹುಟ್ಟಿದ್ದಂತೆ ತೋರಿದ್ದ ಆ ಹೊಸ ವಿಚಾರ ಮತ್ತೊಮ್ಮೆ ಅವಳ ಮನಸ್ಸಿನಲ್ಲಿ ಹೊಳೆಯಿತು. ಆಕೆಯೆಂದಳು:

"ಅವನಿಗೆ ಕೀರ್ತಿ ತರೋದಕ್ಕಾಗಿ ಜನ ಪ್ರಾಣಗಳ ಬಲಿದಾನ ಮಾಡದೇ ಇದ್ದಿದ್ದರೆ, ಕ್ರಿಸ್ತ ದೇವನೇ ಇರ್ತಿರಲಿಲ್ಲ."

ಜನರ ಗುಂಪು ಮೌನವಾಗಿ ಆಕೆಯನ್ನೇ ನೋಡಿತು.

ಆಕೆ ಮತ್ತೊಮ್ಮೆ ಜನರಿಗೆ ಬಾಗಿ ವಂದಿಸಿ, ತನ್ನ ಮನೆಯನ್ನು ಹೊಕ್ಕಳು. ಸಿಜೋವ್ ತಲೆ ಬಾಗಿಸಿ ಅವಳನ್ನು ಹಿಂಬಾಲಿಸಿದ.

ಸ್ವಲ್ಪ ಹೊತ್ತು ಜನರು ಬಾಗಿಲ ಬಳಿ ಮಾತಾಡುತ್ತಾ ನಿಂತುಕೊಂಡರು.

ಬಳಿಕ ಮೆಲ್ಲಮೆಲ್ಲನೆ ಅವರೆಲ್ಲರೂ ಹೊರಟು ಹೋದರು.

೧

ನೆನಪುಗಳ ಮಂಜು-ಮುಸುಕಿನಲ್ಲಿ, ಹೃದಯವನ್ನೂ ದೇಹವನ್ನೂ ಬಿಗಿ ಹಿಡಿದ ಅತೀವ ಆಯಾಸದಲ್ಲಿ, ದಿನದ ಉಳಿದ ಭಾಗ ಕಳೆಯಿತು. ಆ ಗಿಡ್ಡ ಅಧಿಕಾರಿಯ ಬೂದು ಚುಕ್ಕೆಯೂ, ಪಾವೆಲ್‌ನ ಕಂಚು ಮುಖವೂ, ಅಂದ್ರೇಯ್‌ನ ನಗುವ ಕಣ್ಣುಗಳೂ ಆಕೆಯ ಮುಂದೆ ಕುಣಿದುವು.

ಆಕೆ ಕೊಠಡಿಯಲ್ಲಿ ಅತ್ತಿತ್ತ ನಡೆದಳು. ಕಿಟಕಿಯ ಬಳಿ ಕುಳಿತು ಹೊರಗೆ ಬೀದಿಯತ್ತ ನೋಡಿದಳು. ಪುನಃ ಎದ್ದು, ಸಣ್ಣ ಸಪ್ಪಳವಾದರೂ ಗಾಬರಿಬೀಳುತ್ತ, ಅತ್ತಿತ್ತ ದಿಟ್ಟಿಸುತ್ತ ಅಥವಾ ಇಂಥದೇ ಎನ್ನದೆ ಏನನ್ನಾದರೂ ಹುಡುಕುತ್ತ, ಆಕೆ ಕೊಠಡಿಯಲ್ಲೆಲ್ಲ ನಡೆದಾಡಿದಳು. ನೀರು ಕುಡಿದಳಾಕೆ. ಆದರೆ ದಾಹವನ್ನೇನೂ ಅದು ತಣಿಸಲಿಲ್ಲ; ಹೃದಯದೊಳಗೆ ಭಣಗುಡುತ್ತಿದ್ದ ನೋವನ್ನಾಗಲೀ ಬಯಕೆಯನ್ನಾಗಲೀ ಶಮನಮಾಡಲಿಲ್ಲ. ಅಂದಿನ ದಿವಸ ಎರಡು ಹೋಳಾಗಿತ್ತು. ಮೊದಲ ಅರ್ಧಕ್ಕೆ ಅರ್ಥವಿತ್ತು. ಆದರೆ ಈಗ ಅರ್ಥವೆಲ್ಲ ಬತ್ತಿಹೋಗಿ ಬರಡಾಗಿತ್ತು ಎರಡನೆಯ ಅರ್ಧದಲ್ಲಿ. ಅವಳ ಮುಂದಿದ್ದುದು ನೋವನ್ನುಂಟು ಮಾಡುತ್ತಿದ್ದ ಶೂನ್ಯ. ಅದರಿಂದೊಂದು ಪ್ರಶ್ನೆ ಎದ್ದೇಳುತ್ತಿತ್ತು:

"ಈಗೇನು ?"

ಕೊರ್ಸುನೋವ ತಾಯಿಯನ್ನು ನೋಡಲು ಬಂದಳು. ಆಕೆ ಗಟ್ಟಿಯಾಗಿ ಕೈ ಬೀಸುತ್ತ ಕೂಗಾಡಿದಳು, ಅತ್ತಳು. ಅತ್ಯಾನಂದವಾಗಿತ್ತು ಆಕೆಗೆ; ಅತ್ಯಂತ ದುಃಖವೂ ಆಗಿತ್ತು. ನೆಲವನ್ನು ತುಳಿದಳು; ಶಾಪವಿತ್ತಳು. ಭರವಸೆಯ ಮಾತನ್ನಾಡಿದಳು; ಸಲಹೆ ಇತ್ತಳು. ಆದರೆ ತಾಯಿಯ ಮನಸ್ಸಿನ ಮೇಲೆ ಅದರಿಂದ ಯಾವ ಪರಿಣಾಮವೂ ಆಗಲಿಲ್ಲ.

ಕರ್ಕಶ ಧ್ವನಿಯಲ್ಲಿ ಕೊರ್ಸುನೋವ ಹೇಳಿದಳು:

"ಆಹಾ! ಜನರು ಬಂಡಾಯವೆದ್ದಿದ್ದಾರೆ! ಇಡೀ ಕಾರ್ಖಾನೆಯೇ ಬಂಡಾಯವೆದ್ದಿದೆ – ಇಡೀ ಕಾರ್ಖಾನೆ!"

"ಹೌದು ಹೌದು," ಎಂದಳು ತಾಯಿ, ಮೃದುವಾಗಿ, ತಲೆಯಾಡಿಸುತ್ತ.

ಆದರೆ ಆಕೆಯ ದೃಷ್ಟಿ, ಕಳೆದುಹೋದುದರ ಮೇಲೆ, ಪಾವೆಲ್ ಮತ್ತು ಅಂದ್ರೇಯ್‌ನ ಜತೆಯಲ್ಲೇ ತನ್ನಿಂದ ದೂರವಾದ ಎಲ್ಲದರ ಮೇಲೆ ನೆಟ್ಟಿತ್ತು. ಅವಳಿಂದ ಅಳುವು ದಕ್ಕಾಗಲಿಲ್ಲ. ಆಕೆಯ ಹೃದಯ ಮುದುಡಿಕೊಂಡು ಒಣಗಿಹೋಗಿತ್ತು. ತುಟಿಗಳೂ ಒಣಗಿದ್ದುವು. ಬಾಯಿಯಲ್ಲಿ ತೇವವಿರಲಿಲ್ಲ. ಆಕೆಯ ಕೈಗಳು ನಡುಗುತ್ತಿದ್ದುವು. ಬೆನ್ನು ಚಳಿಯಿಂದ ಬೆಚ್ಚಿ ಕಂಪಿಸತೊಡಗಿತು.

ಅದೇ ದಿನ ಸಂಜೆ ಪೋಲೀಸರು ಬಂದರು. ಆಶ್ಚರ್ಯ, ಭಯ ಒಂದೂ ಇಲ್ಲದೆ ಅವರನ್ನಾಕೆ ಇದಿರುಗೊಂಡಳು. ಸದ್ದುಮಾಡುತ್ತಲೆ ಅವರು ಒಳಬಂದರು. ಅವರು, ಬಲು ಉಲ್ಲಾಸವಾಗಿದ್ದಂತೆ, ಸಂತೃಪ್ತರಾಗಿದ್ದಂತೆ ಕಂಡಿತು. ಹಳದಿ ಮುಖದ ಅಧಿಕಾರಿ ನಕ್ಕು ಎಲ್ಲ ಹಲ್ಲುಗಳನ್ನೂ ತೋರಿಸುತ್ತ ಹೇಳಿದ:

"ಹ್ಯಾಗಿದೀಯಾ? ನಾವು ಭೇಟಿಯಾಗ್ತಿರೋದು ಇದು ಮೂರನೇ ಸಲ ಅಂತ ಕಾಣುತ್ತೆ, ಅಲ್ವೇ?"

ಆಕೆ ಸುಮ್ಮನಿದ್ದಳು. ಒಣಗಿದ ನಾಲಿಗೆಯಿಂದ ತುಟಿಯನ್ನು ಸವರಿದಳಷ್ಟೆ. ಆ ಅಧಿಕಾರಿ ಹಿತವಚನ ಹೇಳುವವನಂತೆ ಬಹಳ ಮಾತನಾಡಿದ. ಮಾತನಾಡು ವುದೆಂದರೆ ಆತನಿಗೆ ಬಲು ಖುಷಿ ಎಂಬುದನ್ನು ತಾಯಿ ಮನಗಂಡಳು. ಆದರೆ ಆತನ ಮಾತುಗಳಿಂದ ಆಕೆಗೆ ಕಸಿವಿಸಿಯಾಗಲಿಲ್ಲ. ಆ ಮಾತುಗಳು ಆಕೆಗೆ ಕೇಳಿಸಲೇ ಇಲ್ಲ.

"ನಿನ್ನ ಮಗ ದೇವರಿಗೂ ಚಕ್ರವರ್ತಿಗೂ ಯೋಗ್ಯ ಗೌರವ ತೋರಿಸೋ ಹಾಗೆ ಮಾಡೋದು ನಿನ್ನಿಂದಾಗದೇ ಹೋದರೆ, ಆ ತಪ್ಪು ನಿನ್ನದೇ ಕಣಮ್ಮ" ಎಂದು ಆತ ಹೇಳಿದಾಗ ಮಾತ್ರ, ಮುಖಭಾವವನ್ನು ಬದಲಾಯಿಸದೆಯೇ ಬಾಗಿಲ ಬಳಿ ನಿಂತಲ್ಲಿಂದಲೇ ಆಕೆ ಉತ್ತರವಿತ್ತಳು:

"ನಮ್ಮ ಮಕ್ಕಳೇ ನಮ್ಮ ನ್ಯಾಯಾಧೀಶರು. ಅವರು ಅಂಥ ಕಷ್ಟ ಹಾದಿಯಲ್ಲಿ ಹೋಗ್ತಾ ಇದ್ರೆ, ನಾವು ಹೀಗೆ ದೂರ ನಿಂತಿದೀವಲ್ಲಿ? – ಆ ವಿಷಯವಾಗಿ ಯೋಗ್ಯ ರೀತೀಲಿ ಅವರೇ ತೀರ್ಪುಕೊಡೋರು."

ಅಧಿಕಾರಿ ಕೂಗಾಡಿದ:

"ಏನು? ಗಟ್ಟಿಯಾಗಿ ಹೇಳು!"

"ನಮ್ಮ ಮಕ್ಕಳೇ ನಮ್ಮ ನ್ಯಾಯಾಧೀಶರು ಅಂದೆ," ಎಂದು ನಿಟ್ಟುಸಿರು ಬಿಡುತ್ತ ತಾಯಿ ಉತ್ತರಕೊಟ್ಟಳು.

ಬೇಗನೆ ಸಿಡುಕಿನಿಂದ ಅವನೇನನ್ನೋ ಗೊಣಗಿದ. ಆದರೆ ಆ ಮಾತುಗಳು ತಾಯಿಗೆ ಕೇಳಿಸಲಿಲ್ಲ.

ಶೋಧನೆ ನಡೆದಾಗ ಸಾಕ್ಷಿಯಾಗಿ ಮರೀಯ ಕೊರ್ಸುನೋವಳನ್ನು ಕರೆದರು. ಅವಳು ತಾಯಿಯ ಪಕ್ಕದಲ್ಲಿ ನಿಂತಳು; ಆದರೆ ಆಕೆಯತ್ತ ನೋಡಲಿಲ್ಲ. ಅಧಿ

ಕಾರಿ ಏನಾದರೂ ಪ್ರಶ್ನೆ ಕೇಳಿದಾಗ ಮಾತ್ರ ಆಕೆ ಆತುರದಿಂದ ಬಾಗಿ ವಂದಿಸಿ ಬಾರಿ ಬಾರಿಗೂ ಒಂದೇ ಉತ್ತರವನ್ನೀಯುತ್ತಿದ್ದಳು:

"ನನಗೇನೂ ತಿಳೀದು, ಮಹಾಸ್ವಾಮಿ, ಅದೂ ಇದೂ ಮಾರಿ ಬದುಕೋ ಬಡವಿ ನಾನು. ಓದು ಬರಹಾ ಏನೂ ತಿಳೀದ ಬೆಪ್ಪು."

ಆ ಉತ್ತರ ಕೇಳಿ ಬೇಸರವಾಗಿ "ಸಾಕು, ಸುಮ್ನಿರು," ಎಂದು ಅಧಿಕಾರಿ ಮೀಸೆ ಕುಣಿಸುತ್ತ ಆಜ್ಞಾಪಿಸುತ್ತಿದ್ದ. ಆಕೆ ಮತ್ತೊಮ್ಮೆ ಬಾಗಿ ವಂದಿಸುತ್ತಿದ್ದಳು.

ಆದರೆ ಆತ ಅತ್ತ ಮುಖ ತಿರುಗಿಸಿದೊಡನೆ, ಅವನ ಕಡೆ ನೋಡುತ್ತ ವಕ್ರ ವಾಗಿ ಮೂತಿ ಮಾಡಿ, ತಾಯಿಯೊಡನೆ ಆಕೆ ಪಿಸುಗುಟ್ಟಿದಳು.

"ಅವನ ಮನೆ ಹಾಳಾಗ!"

ಪೆಲಗೇಯಳ ಪೋಷಾಕಿನಲ್ಲೇನಾದರೂ ಇದೆಯೇ ಎಂದು ಶೋಧಿಸಲು ಕೊರ್ಸು ನೋವಗೆ ಆಜ್ಞೆಯಾಯಿತು. ಆಕೆ ಕಣ್ಣು ಪಿಳಿ ಪಿಳಿ ಬಿಟ್ಟು, ನೇರವಾಗಿ ಅಧಿಕಾರಿಯನ್ನು ನೋಡುತ್ತ, ಬೆದರಿದ ಧ್ವನಿಯಲ್ಲಿ ಅಂದಳು:

"ಓ! ಅದನ್ನ ಹ್ಯಾಗೆ ಮಾಡ್ಬೇಕೋ ನನಗೆ ತಿಳೀದು, ಮಹಾಸ್ವಾಮಿ!"

ಅಧಿಕಾರಿ ಬೂಟುಗಾಲಿನಿಂದ ನೆಲವನ್ನು ತುಳಿಯುತ್ತ ರೇಗಾಡಿದ. ಮರೀಯ ದೃಷ್ಟಿ ಬಾಗಿಸಿ ಮೆಲ್ಲನೆ ತಾಯಿಯೊಡನೆಂದಳು:

"ಸರಿ, ಹಾಗಾದರೆ, ಬಟ್ಟೆ ಸಡಿಲಿಸು, ಪೆಲಗೇಯ ನೀಲೊವ್ನ."

ತಾಯಿಯ ಉಡುಗೆಯ ಮೇಲೆ ಕೈಯಾಡಿಸಿದಂತೆ ಆಕೆಯ ಮುಖ ಕೆಂಪೇರಿತು.

"ಥೂ! ನಾಯಿಗಳು!" ಎಂದಾಕೆ ಪಿಸುಧ್ವನಿಯಲ್ಲಿ ಗೊಣಗಿದಳು.

"ಅದೇನು ಹೇಳ್ದೆ?" ಎಂದು ಅಧಿಕಾರಿ, ಹೆಂಗಸರು ನಿಂತಿದ್ದ ಮೂಲೆಯತ್ತ ದೃಷ್ಟಿ ಹಾಯಿಸುತ್ತ ಗದರಿದ.

"ಏನೋ ಹೆಂಗಸರ ವಿಷಯ, ಮಹಾಸ್ವಾಮಿ" ಎಂದು ಹೆದರಿಕೊಂಡ ಧ್ವನಿ ಯಿಂದ ಮರೀಯ ಅಂದಳು.

ಕೊನೆಯಲ್ಲಿ, ತಾನು ಬರೆದುದಕ್ಕೆ ಸಹಿ ಹಾಕುವಂತೆ ಆತ ಆಜ್ಞಾಪಿಸಿದ. ತಾಯಿಯ ಅಭ್ಯಾಸವಿಲ್ಲದ ಕೈ ಎದ್ದು ಕಾಣುವಂತೆ ದಪ್ಪಕ್ಷರಗಳಲ್ಲಿ ಬರೆಯಿತು:

"ಕೂಲಿಕಾರನೊಬ್ಬನ ವಿಧವೆ ಪೆಲಗೇಯ ವ್ಲಾಸೊವ."

"ಅದೇನು ಬರೆದೆ? ಅದ್ಯಾಕೆ ಬರೆದೆ?" ಎಂದು ಅಧಿಕಾರಿ ವಕ್ರಮುಖದಿಂದ ಕೇಳಿದ.

"ಕಾಡು ಮನುಷ್ಯರು," ಎನ್ನುತ್ತ ಆತ ಸಣ್ಣನೆ ನಕ್ಕ.

ಅವರು ಹೊರಟು ಹೋದರು. ತಾಯಿ, ಎದೆಗಡ್ಡವಾಗಿ ಕೈಕಟ್ಟಿಕೊಂಡು, ಎವೆಯಿಕ್ಕದೆ ತನ್ನೆದುರು ದಿಟ್ಟಿಸುತ್ತಾ ಕಿಟಕಿಯ ಬಳಿ ನಿಂತಳು. ಆಕೆಗೇನೂ ಕಾಣಿ ಸುತ್ತಿರಲಿಲ್ಲ. ಹುಬ್ಬುಗಳು ಮೇಲಕ್ಕೆ ಹೋಗಿದ್ದುವು. ತುಟಿಗಳು ಬಿಗಿದುಕೊಂಡಿ ದ್ದುವು. ಬಲವಾಗಿ ಔಡುಕಚ್ಚಿದ ರಭಸಕ್ಕೆ ನೋವಾಯಿತು. ಸೀಮೆಎಣ್ಣೆಯ ದೀಪ

ದಲ್ಲಿ ಎಣ್ಣೆ ತೀರಿತ್ತು. ಬತ್ತಿ ಅದುರಿ ಆರಿಹೋಗುವುದರಲ್ಲಿತ್ತು. ಫೂ ಎಂದು ಅದನ್ನು ನಂದಿಸಿ, ತಾಯಿ ಕತ್ತಲೆಯಲ್ಲೇ ನಿಂತಳು. ಹೃದಯ, ಶೂನ್ಯ ಬಯಕೆಗಳಿಂದ ತುಂಬಿ ಕೊಂಡು, ಎದೆಗುಂಡಿಗೆಯ ಬಡಿತಕ್ಕೇ ತಡೆಮಾಡಿತು. ಹೀಗೆ ಬಹಳ ಹೊತ್ತು ಆಕೆ ನಿಂತಳು; ಕಣ್ಣುಗಳೂ ಕಾಲುಗಳೂ ನೋಯತೊಡಗಿದವು. ಮರೀಯ ತನ್ನ ಕಿಟಕಿಯ ಬಳಿಗೆ ಬಂದು ಅಮಲೇರಿದ ಸ್ವರದಲ್ಲಿ ಅರಚಿದ್ದು ಕೇಳಿಸಿತು:

"ನಿದ್ದೆ ಬಂತೆ, ಪೆಲಗೇಯ? ಅಯ್ಯೋ ಪಾಪ, ಎಷ್ಟೊಂದು ಕಷ್ಟ! ಮಲಕೋ ಹೋಗು, ತಾಯಿ!"

ಉಡುಗೆ ಹಾಕಿಕೊಂಡೇ ತಾಯಿ ಮಲಗಿಕೊಂಡಳು. ತಕ್ಷಣವೇ ಕೊಳದ ನೀರಿ ನಂತೆ ಆಳವಾದ ನಿದ್ದೆ ಆಕೆಯನ್ನು ಆವರಿಸಿತು.

ಶಹರದತ್ತ ಸಾಗಿದ್ದ ರಸ್ತೆಯ ಬಳಿ ಜವುಗಿನಾಚೆ ಹಳದಿ ಬಣ್ಣದ ಮರಳ ರಾಶಿ ಯನ್ನು ದಾಟಿ ತಾನು ನಡೆಯುತ್ತಿದ್ದಂತೆ ತಾಯಿ ಕನಸುಕಂಡಳು. ಕೆಲಸಗಾರರು ಮರಳು ಅಗೆಯುತ್ತಿದ್ದ ಹಳ್ಳದ ಮೇಲ್ಭಾಗದಲ್ಲಿದ್ದ ಎತ್ತರದೊಂದು ಕೋಡುಗಲ್ಲಿನ ಮೇಲೆ ಪಾವೆಲ್ ನಿಂತಿದ್ದ. ಅಂದ್ರೇಯ್‌ನಂತೆಯೇ ಮಧುರಸ್ವರದಲ್ಲಿ ಮೆಲುದನಿ ಯಲ್ಲಿ ಪಾವೆಲ್ ಹಾಡುತ್ತಿದ್ದ:

"ಹೋರಾಡಲೇಳಿ, ಓ ಕಾರ್ಮಿಕರೇ, ಏಳಿ!..."

ಕೈಯಿಂದ ತನ್ನ ಹುಬ್ಬನ್ನೊತ್ತಿಕೊಂಡು ಮಗನತ್ತ ನೋಡುತ್ತ ಬೆಟ್ಟವನ್ನು ದಾಟಿ ತಾಯಿ ನಡೆಯುತ್ತಲೇ ಹೋದಳು. ನೀಲಿ ಆಕಾಶದ ಹಿನ್ನೆಲೆಯಲ್ಲಿ ಮಗನ ಸ್ವರೂಪ ಸ್ಫುಟವಾಗಿ ಕಾಣಿಸುತ್ತಿತ್ತು. ಆತನ ಬಳಿಗೆ ಹೋಗಲು ಲಜ್ಜೆಯಾಯಿತು ತಾಯಿಗೆ; ಆಕೆ ಗರ್ಭಿಣಿಯಾಗಿದ್ದಳು, ಆಕೆಯ ಕಂಕುಳಲ್ಲಿ ಇನ್ನೊಂದು ಮಗು ಕೂಡ ಇತ್ತು. ಹುಡುಗರು ಚೆಂಡಾಟವಾಡುತ್ತಿದ್ದ ಒಂದು ಬಯಲನ್ನು ತಲಪುವವರೆಗೂ ಆಕೆ ನಡೆದಳು. ಅಲ್ಲಿ ಹಲವಾರು ಹುಡುಗರಿದ್ದರು. ಆ ಚೆಂಡು ಕೆಂಪಗಿತ್ತು. ಕಂಕು ಳಲ್ಲಿದ್ದ ಮಗು ಚೆಂಡು ಬೇಕೆಂದು ಕೈಚಾಚುತ್ತಾ ಅಳತೊಡಗಿತು. ತಾಯಿ ಮಗುವಿಗೆ ಮೊಲೆಯೂಡಿಸಿ ಅಲ್ಲಿಂದ ಹಿಂತಿರುಗಿದಳು. ಆದರೆ ಈಗ ಬೆಟ್ಟದ ಮೇಲೆ ಆಕೆಗಿ ದಿರಾಗಿ ಬಯನೇಟುಗಳನ್ನು ಹಿಡಿದು ಸೈನಿಕರು ನಿಂತಿದ್ದರು. ಒಡನೆಯೇ ಆಕೆ, ಒಂದು ಹೊಲದ ನಡುವೆ ಇದ್ದ ಚರ್ಚಿನತ್ತ ಓಡಿದಳು. ಆ ಚರ್ಚು ಬೆಳ್ಳಗಿದ್ದು, ಬಿಳಿಯ ಆವಿಯಿಂದ ಮುಚ್ಚಿತ್ತು. ಅಳೆಯಲಾಗದಷ್ಟು ಎತ್ತರವಿದ್ದು, ಮೋಡಗಳಿಂದಲೆ ಮಾಡ ಲ್ಪಟ್ಟಂತೆ ತೋರುತ್ತಿತ್ತು. ಯಾರದೋ ಅಂತ್ಯಸಂಸ್ಕಾರ ನಡೆಯುತ್ತಿತ್ತು. ಶವ ದಾನಿಯು ದೊಡ್ಡದಾಗಿತ್ತು, ದಪ್ಪಗಿತ್ತು. ಅದನ್ನು ಗಟ್ಟಿಯಾಗಿ ಮುಚ್ಚಿದ್ದರು. ಪಾದ್ರಿಯೂ, ಸಹಪಾದ್ರಿಯೂ ಬಿಳಿಯ ಪೋಷಾಕಿನಲ್ಲಿ ಚರ್ಚಿನಲ್ಲಿ ನಡೆಯುತ್ತ ಹಾಡುತ್ತಿದ್ದರು.

"ದಿವಂಗತರಿಂದ ಕ್ರಿಸ್ತನೆದ್ದು ಬಂದ...."

ಸಹಪಾದ್ರಿಯು ಧೂಪ ಉರಿಯುತ್ತಿದ್ದ ಪಾತ್ರವನ್ನು ತೂಗಾಡಿಸುತ್ತ, ತಾಯಿ

ಯತ್ತ ನೋಡಿ ಬಾಗಿ ಮುಗುಳ್ನಕ್ಕ. ಆತನಿಗೆ ಸಮೋಯ್‌ಲೊವ್‌ನ ಹಾಗೆ ಶುಭ್ರ ವಾದ ಕೆಂಪಗಿನ ಕೂದಲಿತ್ತು; ತಮಾಷೆಯ ನಗುಮುಖವಿತ್ತು. ಆಕಾಶದೆತ್ತರಕ್ಕೆ ಏರಿದ್ದ ಗೋಪುರಗಳೆಡೆಯಿಂದ ಸೂರ್ಯನ ಬೆಳಕಿನ ವಿಶಾಲ ಕಿರಣಗಳು ಉದ್ದನೆಯ ಬಿಳಿಯ ಕಾಲುಗಳ ಹಾಗೆ ಕೆಳಕ್ಕೆ ಬೀಳುತ್ತಿದ್ದವು.

ಚರ್ಚಿನಲ್ಲಿ ಹಾಡುವ ಎರಡೂ ಬದಿಗಳಿಂದ ಹುಡುಗರು ಹಾಡುತ್ತಿದ್ದರು:

"ದಿವಂಗತರಿಂದ ಕ್ರಿಸ್ತನೆದ್ದು ಬಂದ...."

ನಡೆಯುತ್ತಿದ್ದ ಪಾದ್ರಿ ಚರ್ಚಿನ ಮಧ್ಯದಲ್ಲೇ ನಿಂತು ಒಮ್ಮೆಲೆ ಕೂಗಿಕೊಂಡ: "ಅವರನ್ನು ಬಂಧಿಸಿ!" ಅವನ ಧಾರ್ಮಿಕ ಪೋಷಾಕು ಮಾಯವಾಯಿತು. ಮೇಲು ತುಟಿಯಲ್ಲಿ ಉಗ್ರವಾದ ಬೂದುಬಣ್ಣದ ಮೀಸೆ ಕಾಣಿಸಿತು. ಚರ್ಚಿನ ಸಹಪಾದ್ರಿ ಯನ್ನೊಳಗೊಂಡು ಎಲ್ಲರೂ ಓಡತೊಡಗಿದರು. ಸಹಪಾದ್ರಿ, ಧೂಪದ ತಟ್ಟೆಯನ್ನು ಒಂದೆಡೆಗೆ ಎಸೆದು, ಹೊಹೋಲನಂತೆಯೇ ತಲೆಗೆ ಕೈ ಆನಿಸಿ ಓಡಿದ. ತಾಯಿ, ಓಡು ತ್ತಿದ್ದ ಜನರ ಪಾದಗಳೆಡೆಯಲ್ಲಿ ತನ್ನ ಮಗುವನ್ನು ಕೆಡವಿದಳು. ಆದರೆ ಜನರು ಮಗು ವಿನ ನಗ್ನ ಶರೀರವನ್ನು ಗಾಬರಿಯ ಕಣ್ಣುಗಳಿಂದ ನೋಡುತ್ತ, ಅದನ್ನು ತುಳಿಯದೆ ಬಳಸಿ ಓಡಿದರು. ತಾಯಿ ಮೊಣಕಾಲೂರಿ ಕುಳಿತು, ಜನರನ್ನು ಕೂಗಿ ಕೇಳಿಕೊಂಡಳು:

"ಮಗೂನ ಬಿಟ್ಟು ಹೋಗ್ಬೇಡೀ! ನಿಮ್ಮ ಜತೇಲೆ ಕರಕೊಂಡು ಹೋಗಿ!"

"ದಿವಂಗತರಿಂದ ಕ್ರಿಸ್ತನೆದ್ದು ಬಂದ...."

ಹಾಗೆಂದು ಹೊಹೋಲ್ ಬೆನ್ನಹಿಂದೆ ಕೈಗಳನ್ನಿರಿಸಿ ಮುಗುಳ್ನಗುತ್ತ ಹಾಡಿದ. ತಾಯಿ ಬಾಗಿ ಮಗುವನ್ನೆತ್ತಿಕೊಂಡು ಹಲಗೆ ತುಂಬಿದ ಗಾಡಿಯೊಂದರ ಮೇಲೆ ಕೂರಿ ಸಿದಳು. ಗಾಡಿಯ ಜತೆ ನಡೆಯುತ್ತಿದ್ದ ನಿಕೊಲಾಯ್ "ಅಂತೂ ಅವರು ನನಗೆ ಶ್ರಮದ ಕೆಲಸ ಕೊಟ್ರು" ಎಂದು ಹೇಳಿದ.

ಬೀದಿಗಳು ಹೊಲಸಾಗಿದ್ದುವು. ಮನೆಯ ಕಿಟಕಿಗಳಿಂದ ಜನರು ಹೊರಗಿಣಿಕಿ, ಗಟ್ಟಿಯಾಗಿ ಕೂಗಾಡುತ್ತ ಸಿಳ್ಳುಹಾಕುತ್ತ ಕೈಬೀಸುತ್ತಲಿದ್ದರು. ವಾತಾವರಣ ಸ್ವಚ್ಛ ವಾಗಿತ್ತು. ಸೂರ್ಯ ಶುಭ್ರವಾಗಿ ಬೆಳಗಿದ. ಎಲ್ಲಿಯೂ ನೆರಳಿನ ಚಿಹ್ನೆಯೇ ಇರಲಿಲ್ಲ.

"ಹಾಡು, ನನ್ನವ್ವ!" ಎಂದ ಹೊಹೋಲ್, "ಇದುವೆ ಜೀವನ!"

ಆತನೇ ಹಾಡತೊಡಗಿದ. ಆ ಗಂಟಲಿನೆದುರು ಉಳಿದ ಸ್ವರಗಳೆಲ್ಲ ಅಡಗಿಹೋದುವು. ತಾಯಿ ಆತನನ್ನು ಹಿಂಬಾಲಿಸಿದಳು. ಒಮ್ಮೆಲೆ ಕಾಲು ಎಡವಿ ತಳವೇ ಇಲ್ಲದ ಹೊಂಡಕ್ಕೆ ಆಕೆ ಬಿದ್ದಳು. ಆ ಹೊಂಡದೊಳಗಿನ ಶೂನ್ಯ ಕರ್ಕಶವಾಗಿ ಚೀರಿಕೊಳ್ಳುತ್ತ ಆಕೆಯನ್ನು ಇದಿರ್ಗೊಳ್ಳಲೆಂದು ಉಕ್ಕೇರಿ ಬಂತು....

ತಾಯಿಗೆ ಎಚ್ಚರವಾಯಿತು. ಮೈ ನಡುಗುತ್ತಿತ್ತು. ಒರಟಾದ ಭಾರವಾದ ಕೈಯೊಂದು ತನ್ನ ಹೃದಯವನ್ನು ಅದುಮಿ, ನಿಧಾನವಾಗಿ ಹಿಂಡುತ್ತ ಸಂತೋಷ ಪಡುತ್ತಿದ್ದಂತೆ, ತಾಯಿಗೆ ಅನಿಸಿತು. ಕಾರಖಾನೆಯ ಸಿಳ್ಳು ಒಂದೇ ಸಮನೆ ಕೂಗುತ್ತ ಕೂಲಿಕಾರರನ್ನು ಕರೆಯುತ್ತಿತ್ತು. ಅದು ಎರಡನೆಯ ಸಿಳ್ಳು ಎಂಬುದನ್ನು ತಾಯಿ

ಗುರುತಿಸಿದಳು. ಕೊಠಡಿಯಲ್ಲಿ ಪುಸ್ತಕಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದುವು. ಪ್ರತಿಯೊಂದೂ ತಲೆಕೆಳಗಾಗಿತ್ತು. ನೆಲದ ಮೇಲೆ ಬೂಟುಗಾಲುಗಳ ಮುದ್ರೆಗಳಿದ್ದುವು.

ತಾಯಿ ಎದ್ದು, ಮೈತೊಳೆದುಕೊಳ್ಳುವ ಇಲ್ಲವೆ ಪ್ರಾರ್ಥನೆ ಮಾಡುವ ಗೊಡವೆಗೆ ಹೋಗದೆ, ಕೊಠಡಿಯನ್ನು ನಿರ್ಮಲಗೊಳಿಸತೊಡಗಿದಳು. ಅಡುಗೆ ಮನೆಯಲ್ಲಿ ಬಾವುಟದೊಂದು ಚೂರನ್ನು ಹೊತ್ತ ಕೋಲು ನಿಂತಿತ್ತು. ಆ ಕೋಲನ್ನು ಕಂಡ ತಾಯಿ ಒಲೆಯೊಳಕ್ಕೆ ತುರುಕಲೆಂದು ಅದನ್ನೆತ್ತಿಕೊಂಡಳು. ಆದರೆ ಮರು ಕ್ಷಣವೆ ಆ ನಿರ್ಧಾರ ಬದಲಾಯಿತು. ನಿಟ್ಟುಸಿರು ಬಿಟ್ಟು ತಾಯಿ, ವಸ್ತ್ರವನ್ನು ಕೋಲಿನಿಂದ ಬೇರ್ಪಡಿಸಿ, ಜಾಗರೂಕತೆಯಿಂದ ಅದನ್ನು ಮಡಚಿ, ತನ್ನ ಮೇಲಂಗಿಯ ಜೇಬಿನೊಳಗಿಟ್ಟುಕೊಂಡಳು. ಕೋಲನ್ನು ಮೊಣಕಾಲ ಮೇಲಿರಿಸಿ ಮುರಿದು ಒಲೆಯ ಬಳಿ ಇರಿಸಿದಳು. ಆ ಬಳಿಕ ಕಿಟಕಿಗಳನ್ನೂ, ನೆಲವನ್ನೂ ತಣ್ಣೀರಿನಿಂದ ತೊಳೆದಳು. ಸಮೊವಾರ್ ಹೊತ್ತಿಸಿ ಬಿಸಿನೀರು ಕಾಯಿಸಿದಳು. ಬಟ್ಟೆ ಬದಲಿಸಿದಳು. ಆ ಬಳಿಕ ಅಡುಗೆ ಮನೆಯ ಕಿಟಕಿಯ ಬಳಿ ಕುಳಿತು, ಮತ್ತೊಮ್ಮೆ ಅದೇ ಪ್ರಶ್ನೆಯನ್ನೇ ತಾಯಿ ಇದಿರಿಸಿದಳು:

"ಈಗೇನು ಮಾಡಬೇಕು?"

ಪ್ರಾತಃಕಾಲದ ಪ್ರಾರ್ಥನೆಯನ್ನು ತಾನು ಮಾಡಿಯೇ ಇಲ್ಲವೆಂಬುದು ನೆನಪಾಗಿ ತಾಯಿ, ಕುಳಿತಲ್ಲಿಂದೆದ್ದು ದೇವಪ್ರತಿಮೆ ಫಲಕಗಳ ಬಳಿಗೆ ಹೋದಳು. ಅವುಗಳ ಮುಂದೆ ಕೆಲವು ಕ್ಷಣ ನಿಂತಮೇಲೆ ಪುನಃ ಕುಳಿತುಕೊಂಡಳು – ಆಕೆಯ ಹೃದಯ ಬರಿದಾಗಿತ್ತು.

ವಿಚಿತ್ರವೆನಿಸುವ ರೀತಿಯಲ್ಲಿ ವಾತಾವರಣ ಶಾಂತವಾಗಿತ್ತು. ಹಿಂದಿನ ದಿನ ಬೀದಿಗಳಲ್ಲಿ ಗಂಟಲು ಬಿರಿಯುವಂತೆ ಘೋಷಣೆ ಮಾಡಿದ್ದ ಜನರೆಲ್ಲ ಇಂದು ತಮ್ಮ ತಮ್ಮ ಮನೆಗಳೊಳಗೆ ಅಡಗಿ ಕುಳಿತು, ನಡೆದು ಹೋದ ಅಸಾಮಾನ್ಯ ಸಂಭವಗಳ ಬಗೆಗೆ ಶಾಂತವಾಗಿ ಯೋಚಿಸುವಂತಿತ್ತು ಪರಿಸ್ಥಿತಿ.

ಒಮ್ಮೆಲೆ, ತನ್ನ ಯೌವನದಲ್ಲಿ ತಾನು ನೋಡಿದ್ದ ಸಂಗತಿಯೊಂದು ತಾಯಿಯ ನೆನಪಿಗೆ ಬಂತು; ಆಕೆಯ ಹಳ್ಳಿಯ ಜಮೀನ್ದಾರ ಜವುಸಾಯ್‌ಲವ್‌ನ ಹಳೆಯ ಉದ್ಯಾನದಲ್ಲೊಂದು ಸಣ್ಣ ಕೆರೆಯಿತ್ತು. ಅದರಲ್ಲಿ ಯಾವಾಗಲೂ ನೈದಿಲೆಗಳು ಹೇರಳವಾಗಿರುತ್ತಿದ್ದುವು. ಚಳಿಗಾಲಕ್ಕೆ ಮುಂಚೆಯೊಂದು ಸಂಜೆ ತಾಯಿ ಆ ಕೆರೆಯ ಏರಿಯ ಮೇಲೆ ನಡೆದು ಬಂದಿದ್ದಳು. ಕೆರೆಯ ನಡುವೆ ಒಂದು ದೋಣಿ ಇದ್ದುದು ಆಕೆಯ ಕಣ್ಣಿಗೆ ಬಿತ್ತು. ಕೆರೆ ಕಪ್ಪಗಿತ್ತು, ಶಾಂತವಾಗಿತ್ತು. ದೋಣಿ ಚಲಿಸುತ್ತಿರಲಿಲ್ಲ. ಕರಿ ನೀರಿಗೆ ಅದನ್ನು ಅಂಟಿಸಿದ್ದಂತೆ ತೋರುತಿತ್ತು. ಅದರ ಸುತ್ತಲೂ ಒಣಗಿದ್ದ ಹಳದಿ ಎಲೆಗಳಿದ್ದುವು. ಒಂಟಿ ದೋಣಿ – ಮನುಷ್ಯನಿಲ್ಲ, ಚುಕ್ಕಾಣಿ ಇಲ್ಲ. ಸ್ತಬ್ಧ ನೀರಿನ ಮೇಲೆ, ನಿರ್ಜೀವ ಎಲೆಗಳ ನಡುವೆ, ಅದು ನಿಂತಲ್ಲೆ ನಿಂತಿತ್ತು. ಆ ದೃಶ್ಯ ಯಾವುದೋ ಅರಿಯದ ಯಾತನೆಯ ಆಳವಾದ ದುಃಖವನ್ನು ಸೂಚಿಸುತ್ತಿತ್ತು.

ಯಾರು, ಯಾತಕ್ಕಾಗಿ, ಈ ದೋಣಿಯನ್ನು ನೀರೊಳಕ್ಕೆ ತಳ್ಳಿರಬಹುದು? – ಎಂದು ಆಶ್ಚರ್ಯಪಡುತ್ತ ತಾಯಿ ಬಹಳ ಹೊತ್ತು ದಂಡೆಯ ಮೇಲೆ ನಿಂತಳು.... ಆ ತೋಟದ ಮೇಸ್ತ್ರಿಯೊಬ್ಬನ ಹೆಂಡತಿ – ಕರಿಯ ಗುಂಗುರು ಕೂದಲಿದ್ದ ತೀವ್ರ ನಡಿಗೆಯ ಪುಟ್ಟ ಹೆಂಗಸೊಬ್ಬಳು – ಆ ಕೆರೆಯಲ್ಲಿ ಮುಳುಗಿ ಸತ್ತಳೆಂಬ ವಿಷಯ ಆ ಸಂಜೆ ತಾಯಿಗೆ ತಿಳಿಯಿತು....

ತಾಯಿ ಹುಬ್ಬಿನ ಮೇಲೆ ಕೈಯಾಡಿಸಿದಂತೆ, ಯೋಚನೆಗಳು ನಡುಗುತ್ತ, ಹಿಂದಿನ ದಿನದ ಘಟನೆಯ ನೆನಪಿನತ್ತ ಸುಳಿದುವು. ಆ ನೆನಪಿನಲ್ಲೆ ಮಂತ್ರಮುಗ್ಧಳಾಗಿ, ಗಾಜಿನ ಲೋಟದಲ್ಲಿದ್ದ ಆರಿಹೋಗಿದ್ದ ಚಹವನ್ನೇ ದಿಟ್ಟಿಸುತ್ತ, ಬಹಳ ಹೊತ್ತು ತಾಯಿ ಕುಳಿತಳು. ತನ್ನ ಎಲ್ಲ ಪ್ರಶ್ನೆಗಳಿಗೂ ಉತ್ತರಕೊಡಬಲ್ಲ ಯಾವನಾದರೂ ಬುದ್ಧಿವಂತ ಸರಳ ವ್ಯಕ್ತಿಯೊಡನೆ ಮಾತನಾಡಬೇಕೆಂಬ ಬಯಕೆ ತಾಯಿಯ ಹೃದಯದಲ್ಲಿ ಬೆಳೆಯಿತು.

ಆ ಆಸೆಯನ್ನು ಪೂರೈಸುವುದಕ್ಕೋ ಎಂಬಂತೆ ನಿಕೊಲಾಯ್ ಇವಾನೊವಿಚ್, ಮಧ್ಯಾಹ್ನದ ಊಟದ ಬಳಿಕ ತಾಯಿಯ ಮನೆಗೆ ಬಂದ. ಆದರೆ ಆತನನ್ನು ನೋಡಿದೊಡನೆಯೇ ತಾಯಿಗೆ ಗಾಬರಿಯಾಯಿತು. ಆತನಿಗೆ ಮರುವಂದನೆಯನ್ನೂ ಮಾಡದೆ ತಾಯಿ ಮೆಲುದನಿಯಲ್ಲಿ ಹೇಳಿದಳು:

"ಯಾಕೆ ಬಂದಿರಿ? ಇದು ಮೂರ್ಖತನ! ನಿಮ್ಮನ್ನ ಇಲ್ಲಿ ನೋಡಿದ್ರೆ ಹಿಡಿಕೊಂಡು ಹೋಗ್ತಾರೆ!"

ಆತ ತಾಯಿಯ ಕೈಯನ್ನು ಬಿಗಿಯಾಗಿ ಅದುಮಿ, ತನ್ನ ಕನ್ನಡಕವನ್ನು ಸರಿಪಡಿಸುತ್ತ, ತಾಯಿಯತ್ತ ಬಾಗಿ ವೇಗವಾದ ಮಾತುಗಳಲ್ಲಿ ವಿವರಣೆಯನ್ನಿತ್ತ:

"ಪಾವೆಲ್, ಅಂದ್ರೇಯ್ ಮತ್ತು ನಾನು ಒಂದು ಒಪ್ಪಂದಕ್ಕೆ ಬಂದಿದ್ವಿ – ಅವರ ದಸ್ತಗಿರಿಯಾದ ಮಾರನೆ ದಿವಸವೇ ನಿಮ್ಮನ್ನ ನಾನು ಶಹರಕ್ಕೆ ಕರಕೊಂಡು ಹೋಗ್ಬೇಕೂಂತ."

ಆ ಧ್ವನಿ ಮೃದುವಾಗಿತ್ತು. ಅದರಲ್ಲಿ, ತಾಯಿಯ ಹಿತರಕ್ಷಣೆಯ ಕಾತರವಿತ್ತು.

"ಇಲ್ಲೇನಾದರೂ ಶೋಧೆ ನಡೆಸಿದ್ರೆ?"

"ಹೌದು. ನಾಚಿಕೆ ಹೇಚಿಕೆ ಇಲ್ಲ ಈ ಜನರಿಗೆ. ಪ್ರತಿಯೊಂದನ್ನೂ ಶೋಧಿಸಿ ಮುಗುಚಿ ಹಾಕಿದ್ರು."

"ಅವರು ಯಾಕೆ ನಾಚ್ಬೇಕು?" ಎಂದು ನಿಕೊಲಾಯ್ ಭುಜ ಕುಪ್ಪಳಿಸಿ ಕೇಳಿದ. ಆ ಬಳಿಕ, ಆಕೆ ಶಹರಕ್ಕೆ ಯಾಕೆ ಬರಬೇಕೆಂಬುದನ್ನು ವಿವರಿಸತೊಡಗಿದ.

ಆತನ ಸ್ನೇಹದ ಹಿತಚಿಂತನೆಯ ಸ್ವರಕ್ಕೆ ತಾಯಿ ಕಿವಿಗೊಟ್ಟಳು; ಹೌದೋ ಅಲ್ಲವೋ ಎನ್ನುವಂತೆ ಮುಗುಳ್ನಕ್ಕಳು. ಆತ ಮುಂದಿಟ್ಟ ಕಾರಣಗಳು ಯಾವುವೂ ತಾಯಿಗೆ ಅರ್ಥವಾಗಲಿಲ್ಲ. ಆದರೆ ಆತನಲ್ಲಿ ತಾಯಿಗೆ ಪ್ರೀತಿಯ ನಂಬಿಕೆ ಹುಟ್ಟಿತು. ಅದನ್ನು ಕಂಡು ಆಕೆಗೇ ಆಶ್ಚರ್ಯವಾಯಿತು.

"ನಾನು ಶಹರಕ್ಕೆ ಹೋಗ್ಬೇಕು ಅನ್ನೋದು ಪಾಷನ ಅಪೇಕ್ಷೆಯಾದರೆ.... ಅಲ್ದೆ, ನನ್ನಿಂದ ನಿಮಗೇನೂ ತೊಂದರೆ..."

ತಾಯಿಯ ಮಾತನ್ನು ಅಲ್ಲಿಗೇ ತಡೆದು ನಿಕೊಲಾಯ್ ಹೇಳಿದ:

"ಅದರ ಯೋಚ್ನೆ ಮಾಡಬೇಡಿ. ನಾನಿರೋದು ಒಬ್ನೇ. ಯಾವತ್ತಾದರೊಮ್ಮೆ ನನ್ನ ಸೋದರಿ ಬರ್ತ್ತಾಳೆ."

"ನಾನು ಬಿಟ್ಟಿ ಊಟ ತಿಂದ್ಕೊಂಡಿರೋದಿಲ್ಲ," ಎಂದಳು ತಾಯಿ.

"ಬೇಕೂಂತಾದ್ರೆ ಮಾಡೋಕೆ ಕೆಲಸ ಹುಡುಕ್ಬಹುದು" ಎಂದನು ನಿಕೊಲಾಯ್.

ತಾಯಿಯ ದೃಷ್ಟಿಯಲ್ಲಿ ಕೆಲಸವೆಂದರೆ, ಮಗನ, ಅಂದ್ರೇಯ್‌ನ, ಅವರ ಸಂಗಾತಿಗಳ ಕೆಲಸಕ್ಕಿಂತ ಬೇರೆಯಾಗಿರಲಿಲ್ಲ. ಆಕೆ ನಿಕೊಲಾಯ್‌ನನ್ನು ಮತ್ತಷ್ಟು ಸಮೀಪಿಸಿ, ಆ ಕಣ್ಣುಗಳನ್ನೆ ದಿಟ್ಟಿಸಿದಳು.

"ಖಂಡಿತವೆ?"

"ನಾನು ಒಬ್ಬಂಟಿಗನಾದ್ದರಿಂದ ನಮ್ಮನೇಲಿ ಅಷ್ಟೇನೂ ಕೆಲಸವಿಲ್ಲ...."

"ಅದಲ್ಲ, ಆ ಕೆಲಸವಲ್ಲ," ಎಂದಳು ತಾಯಿ ಮೆಲ್ಲನೆ.

ಆತನಿಗೆ ಅರ್ಥವಾಗಲಿಲ್ಲವೆಂದು, ನೊಂದು, ತಾಯಿ ನಿಟ್ಟುಸಿರುಬಿಟ್ಟಳು.

ಆದರೆ ನಿಕೊಲಾಯ್ ಮುಗುಳ್ನಕ್ಕು ಯೋಚಿಸುತ್ತ ಹೇಳಿದ:

"ನೀವು ಪಾವೆಲ್‌ನನ್ನು ನೋಡೋಕೆ ಸಮ್ಮತಿ ಸಿಕ್ದಾಗ, ತಮಗೋಸ್ಕರ ಪತ್ರಿಕೆ ಅಚ್ಚು ಹಾಕಿಸ್ಬೇಕೂಂತ ಕೇಳಿರ್ಲಿಲ್ವೆ – ಆ ರೈತರ ವಿಳಾಸ ಹ್ಯಾಗಾದರೂ ಮಾಡಿ ನೀವು ತಿಳಕೊಳ್ಳೋದು ಸಾಧ್ಯವಾದರೆ...."

ತಾಯಿ ಸಂತೋಷದಿಂದ ಗಟ್ಟಿಯಾಗಿಯೆ ಅಂದಳು:

"ನನಗೆ ಅವರ ಪರಿಚಯವಿದೆ! ನಾನು ಅವರ್ನ ಹುಡುಕಿ ಹಿಡೀತಿನಿ, ನೀವು ಹೇಳಿದ್ದೆಲ್ಲ ಮಾಡ್ತೀನಿ! ಅವರಿಗೆ ನಿಷಿದ್ಧ ಸಾಹಿತ್ಯ ಒದಗಿಸೋದು ನಾನೂಂತ ಯಾರೂ ಸಂಶಯ ಪಡೋದಿಲ್ಲ. ಕಾರಖಾನೆಯೊಳಕ್ಕೆ ನಾನು ಕರಪತ್ರ ತಗೊಂಡು ಹೋಗ್ಲಿಲ್ವೆ?"

ಬೆನ್ನಮೇಲೊಂದು ಗಂಟನ್ನಿರಿಸಿ, ಕೈಯಲ್ಲೊಂದು ಕೋಲನ್ನೂರಿಕೊಂಡು, ಕಾಡುಗಳನ್ನೂ ಹಳ್ಳಿಗಳನ್ನೂ ದಾಟಿ ದೇಶದ ಎಲ್ಲೆಡೆಗೂ ಹಾದಿ ತುಳಿಯುವ ಬಯಕೆ ಒಮ್ಮೆಲೆ ತಾಯಿಗುಂಟಾಯಿತು.

"ನಿಮ್ಮ ಈ ಕೆಲಸಗಳಲ್ಲಿ ನನಗೇನಾದರು. ಮಾಡಲು ಕೊಡಿ. ಯಾವ ಸ್ಥಳಕ್ಕೆ ಬೇಕಾದರೂ ನಾನು ಹೋಗ್ತೀನಿ – ನೀವೇ ನೋಡುವಿರಂತೆ! ಎಲ್ಲಾ ಪ್ರಾಂತಗಳ ರಸ್ತೆ ಮೇಲೂ ಹೋಗ್ತೀನಿ. ಬೇಸಿಗೆ ಇರಲಿ, ಚಳಿಗಾಲವಿರಲಿ... ನಾನು ಸಾಯೋವರೆಗೂ... ದೇಶಾಂತರ ಹೊರಟ ಧರ್ಮಪ್ರವಾಸಿಯ ಹಾಗೆ.... ಇದೇನು ನಾನು ಮಾಡಲಾಗದ ಕೆಲಸವೆ?"

ಅನಾಥೆಯಾದ ಧರ್ಮಪ್ರವಾಸಿ.... ಹಳ್ಳಿಯ ಪಟ್ಟಿಗಳೆದುರು ನಿಂತು ಕ್ರಿಸ್ತನ ಹೆಸರಲ್ಲಿ ಭಿಕ್ಷೆ ಬೇಡುವುದು.... ಅದನ್ನು ಚಿತ್ರಿಸಿಕೊಳ್ಳುತ್ತಿದ್ದಂತೆ ತಾಯಿಗೆ ಬಲು ದುಃಖವಾಯಿತು.

ನಿಕೊಲಾಯ್ ಮೃದುವಾಗಿ ಆಕೆಯ ಕೈಯನ್ನೆತ್ತಿಕೊಂಡು, ತನ್ನ ಬೆಚ್ಚಗಿನ ಅಂಗೈಯಿಂದ ಮೆಲ್ಲನೆ ತಟ್ಟಿದ. ಆಮೇಲೆ ಗಡಿಯಾರದತ್ತ ನೋಡಿದ.

"ಆ ವಿಷಯವೆಲ್ಲಾ ನಿಧಾನವಾಗಿ ಮಾತಾಡೋಣ...."

"ನಮ್ಮ ಮಕ್ಕಳು, ನಮ್ಮ ಹೃದಯದ ಮುದ್ದುಮಕ್ಕಳು, ತಮ್ಮ ಸ್ವಂತದ ವಿಷಯ ಯೋಚನೆಯನ್ನೇ ಮಾಡ್ದೆ, ತಮ್ಮ ಆಸೆ ಜೀವ ಎಲ್ಲಾ ಬಲಿಕೊಡೋದೇ ಉಂಟೂಂತಾದ್ರೆ, ನನ್ನಿಂದ, ತಾಯಿಯಿಂದ ಏನು ನಿರೀಕ್ಷಿಸಬಹುದು ಹೇಳಿ?"

ಆ ಮಾತನ್ನು ಕೇಳುತ್ತ ನಿಕೊಲಾಯ್‌ನ ಮುಖ ಬಾಡಿತು.

"ಹೀಗೆ ಹಿಂದೆ ಯಾರು ಹೇಳಿದ್ದನ್ನೂ ನಾನು ಕೇಳಿಲ್ಲ," ಎಂದು ನಿಕೊಲಾಯ್ ಶಾಂತವಾದ ಧ್ವನಿಯಲ್ಲಿ, ದಯಾಪೂರ್ಣ ದೃಷ್ಟಿಯಿಂದ ಆಕೆಯ ಮುಖವನ್ನೇ ದಿಟ್ಟಿಸುತ್ತ ಹೇಳಿದ.

"ನಾನೇನು ಹೇಳ್ಲಿ?" ಎಂದಳಾಕೆ, ದುಃಖದಿಂದ ತಲೆಯಲುಗಿಸಿ, ನಿರಾಸೆಯಿಂದ ಕೈಗಳನ್ನಾಡಿಸಿ. "ಒಳಗೆ ಹೊಡೆದುಕೊಳ್ಳುತ್ತಿರೋ ಈ ಮಾತ್ರ ಹೃದಯದ ವಿಷಯ ಹೇಳೋಕೆ ಸರಿಯಾದ ಮಾತುಗಳಾದರೂ ನನ್ನಲ್ಲಿ ಇದ್ದಿದ್ರೆ...."

ಹೃದಯದೊಳಗಿಂದ ಧಾವಿಸಿ ಬಂದು, ತಲೆಯನ್ನು ಗಿರ್ರೆಂದು ಸುತ್ತಿಸಿ, ಉದ್ವೇಗದ ಮಾತುಗಳನ್ನು ಹೊರಡಿಸುತ್ತ ಮಹಾ ಶಕ್ತಿಯೊಂದು ಆಕೆಯನ್ನು ಹಿಡಿದೆತ್ತಿ ನಿಲ್ಲಿಸಿತು.

"ಆಗ ಎಷ್ಟೋ ಜನ ಅಳುತ್ತಿದ್ದರು – ಅತ್ಯಂತ ಕೆಟ್ಟವರು ಕೂಡಾ, ಅತ್ಯಂತ ನಿರ್ಲಜ್ಜರು ಕೂಡಾ!"

ನಿಕೊಲಾಯ್‌ನೂ ಎದ್ದುನಿಂತು, ಮತ್ತೊಮ್ಮೆ ಗಡಿಯಾರದತ್ತ ನೋಡಿದ.

"ನಿರ್ಧಾರವಾಯ್ತು ತಾನೆ? ಶಹರದಲ್ಲಿರೋ ನನ್ನ ಮನೆಗೆ ಬರ್ತೀರಿ ಹಾಗಾದರೆ?"

ಆಕೆ ಒಪ್ಪಿಗೆಯೆಂದು ತಲೆದೂಗಿದಳು.

"ಬೇಗನೆ ಬರೋದೇ ಮೇಲು" ಎನ್ನುತ್ತ, ಮೃದುಧ್ವನಿಯಲ್ಲಿ, "ನೀವು ಬರೋವರೆಗೂ ನಿಮ್ಮ ವಿಷಯದಲ್ಲಿ ಕಾತರ ಇದ್ದೇ ಇರತ್ತೆ," ಎಂದ ನಿಕೊಲಾಯ್.

ತಾಯಿ ಆಶ್ಚರ್ಯದಿಂದ ಆತನನ್ನು ನೋಡಿದಳು. ಆತನಿಗೆ ತಾನು ಏನಾಗಬೇಕು? ಸರಳವಾದ ಕರಿಯ ಕೋಟು ಧರಿಸಿ, ತಲೆ ಬೆನ್ನು ಬಾಗಿಸಿ, ಸಂಕೋಚದಿಂದ ಮುಗುಳ್ನಗುತ್ತ, ದೃಷ್ಟಿಯನ್ನು ಕುಂಠಿತಗೊಳಿಸುತ್ತ ಆತ ಅಲ್ಲಿ ನಿಂತಿದ್ದ....

"ನಿಮ್ಮಲ್ಲಿ ಏನಾದರೂ ದುಡ್ಡಿದೆಯೇ?" ಎಂದು ನಿಕೊಲಾಯ್ ನೇರವಾಗಿ ತಾಯಿಯನ್ನು ನೋಡದೆ ನೆಲವನ್ನು ದಿಟ್ಟಿಸುತ್ತ ಕೇಳಿದ.

ಇಲ್ಲ."

ಬೇಗನೆ ಅವನು ತನ್ನ ಜೇಬಿನೊಳಕ್ಕೆ ಕೈ ಹಾಕಿ, ಹಣದ ಚೀಲವನ್ನು ಹೊರ ತೆಗೆದು ಬಿಚ್ಚಿ, ಹಣವನ್ನೆತ್ತಿಕೊಂಡು ಕೈಯನ್ನು ಮುಂದಕ್ಕೆ ಚಾಚಿದ.

"ಇಗೋ, ದಯವಿಟ್ಟು ತೆಗೆದುಕೊಳ್ಳಿ.

ತಾಯಿಯ ಅರಿವಿಲ್ಲದೆಯೇ ಮುಗುಳುನಗು ಆಕೆಯ ತುಟಿಗಳ ಮೇಲೆ ಮೂಡಿತು. ತಲೆಯಾಡಿಸುತ್ತ ಆಕೆಯೆಂದಳು:

"ನಿಮ್ಮಲ್ಲೆಲ್ಲಾ ಪ್ರತಿಯೊಂದೂ ವಿಚಿತ್ರವೇ! ನಿಮ್ಮ ದೃಷ್ಟೀಲಿ ಹಣಕ್ಕೊ ಬೆಲೆ ಇಲ್ಲ. ಕೆಲವರು ಹಣಕ್ಕಾಗಿ ಆತ್ಮವನ್ನೇ ಮಾರ್ತಾರೆ. ಆದರೆ ನಿಮಗೆ ಅದು ಹುಲ್ಲಿಗೂ ಕಡೆ! ಏನೋ ಮಹಾ ದೊಡ್ಡ ಮನಸ್ಸು ಮಾಡಿ ಇಷ್ಟವಿಲ್ಲದಿದ್ದರೂ ಇಟ್ಟುಕೊಳ್ಳೋ ಹಾಗೆ."

ನಿಕೊಲಾಯ್ ಸದ್ದಿಲ್ಲದೆ ನಕ್ಕ.

"ಈ ಹಣ ಅನ್ನೋದು ತುಂಬಾ ಕೆಟ್ಟದ್ದು. ತಗೊಳ್ಳೋದು ಕೊಡೋದು ಎರಡು ವಿಷಯದಲ್ಲೂ ಸಂಕೋಚಪಡಬೇಕಾದ ವಸ್ತುವೇ."

ಆತ ತಾಯಿಯ ಕೈ ಕುಲುಕಿ, ಅದನ್ನು ಬಲವಾಗಿ ಹಿಸುಕಿ, ಮತ್ತೊಮ್ಮೆ ಹೇಳಿದ:

"ಆದಷ್ಟು ಬೇಗನೆ ಬಂದ್ಬಿಡಿ!"

ಆ ಬಳಿಕ ತನ್ನ ಪದ್ಧತಿಯಂತೆ ಸದ್ದಿಲ್ಲದೆಯೇ ನಿಕೊಲಾಯ್ ಹೊರಟು ಹೋದ.

ಬಾಗಿಲವರೆಗೂ ಆತನ ಹಿಂದೆ ಬಂದ ತಾಯಿ ಯೋಚಿಸಿದಳು:

"ಬಹಳ ಒಳ್ಳೆಯ ಮನುಷ್ಯ. ಆದರೆ ನನ್ನ ವಿಷಯದಲ್ಲಿ ಅವನಿಗೆ ಕನಿಕರವಿಲ್ಲ."

ಇದರಿಂದ ತನಗೆ ಅತೃಪ್ತಿಯಾಯಿತೆ, ಅಥವಾ ಆಶ್ಚರ್ಯ ಮಾತ್ರವಾಯಿತೆ, ಎಂಬುದು ಆಕೆಗೆ ತಿಳಿಯಲಿಲ್ಲ.

೨

ನಿಕೊಲಾಯ್ ಬಂದು ಹೋದ ನಾಲ್ಕನೆಯ ದಿನ ತಾಯಿ ಆತನ ಮನೆಗೆ ಹೊರಟಳು. ಆಕೆಯ ಎರಡು ಪೆಟ್ಟಿಗೆಗಳನ್ನು ಹೊತ್ತ ಗಾಡಿ ಹೊಲಗಳನ್ನು ಹಾದು ಆ ವಸತಿ ಪ್ರದೇಶವನ್ನು ದಾಟುತ್ತಿದ್ದಂತೆ ತಾಯಿ ತಿರುಗಿ ನೋಡಿದಳು. ಬದುಕಿನ ಅತ್ಯಂತ ಕರಿದಾದ ಕಷ್ಟಮಯವಾದ ಕಾಲಾವಧಿಯನ್ನು ಅಲ್ಲಿ ಆಕೆ ಕಳೆದಿದ್ದಳು. ಆ ಬಳಿಕ ಬೇಗ ಬೇಗನೆ ದಿನಗಳುರುಳುವಂತೆ ಮಾಡಿದಂತಹ ಹೊಸ ಸುಖ ದುಃಖಗಳ ಕಾಲಾವಧಿ ಅಲ್ಲೇ ಆರಂಭವಾಗಿತ್ತು. ಈಗ ಆ ಜಾಗವನ್ನು ಬಿಟ್ಟು ಮರಳಿ ಬರದ ಹಾದಿಯಲ್ಲಿ ತಾನು ಹೊರಟೆನೆಂಬುದನ್ನು ತಾಯಿ ಒಮ್ಮೆಲೆ ಮನಗಂಡಳು.

ಆಕಾಶದತ್ತ ಹೊಗೆಯುಗುಳುವ ಆ ಕಾರಖಾನೆ, ಇಜ್ಜಲು ಮಸಿಯಿಂದ ಕರಿದಾದ ಭೂಮಿಯ ಮೇಲೆ, ದೊಡ್ಡ ಕೆಂಪು ಜೇಡನ ಹಾಗೆ ಹರಡಿತ್ತು. ಅದರ ಸುತ್ತಲೂ ಕೂಲಿಕಾರರ ಒಂದಂತಸ್ತಿನ ಮನೆಗಳಿದ್ದುವು. ಜವುಗು ಪ್ರದೇಶದ ಅಂಚಿನಲ್ಲಿ ಬೂದು ಬಣ್ಣದ ಮುರುಟಿಕೊಂಡ ಮನೆಗಳು, ತಮ್ಮ ನೀರಸವಾದ ಪುಟ್ಟ ಕಿಟಕಿಗಳ ಮೂಲಕ

ಒಂದನ್ನೊಂದು ನೋಡುತ್ತ, ಒಟ್ಟಾಗಿ ಒಂದಕ್ಕೊಂದು ಅಂಟಿಕೊಂಡಿದ್ದುವು. ಚರ್ಚು ಚಪ್ಪುಗಳಿಗಿಂತ ಎತ್ತರವಾಗಿ ನಿಂತಿತ್ತು. ಅದರ ಬಣ್ಣ ಕಾರಖಾನೆಯಷ್ಟೇ ಕಡುಗೆಂಪು. ಆದರೆ ಅದರ ಗೋಪುರ ಮಾತ್ರ ಕಾರಖಾನೆಯ ಹೊಗೆಕೊಳವೆಗಿಂತ ಕೆಳಗಿತ್ತು.

ತಾಯಿ ನಿಟ್ಟುಸಿರು ಬಿಟ್ಟು, ತನ್ನ ಕತ್ತನ್ನು ಒತ್ತುತ್ತಿದ್ದ ರವಕೆಯ ಕೊರಳ ಗುಂಡಿಯನ್ನು ಬಿಚ್ಚಿದಳು.

ಗಾಡಿಯಾತ, ಕಡಿವಾಣದಿಂದ ಕುದುರೆಯನ್ನು ಮುಟ್ಟಿ, "ಹೈ, ಹೈ, ನಡಿ!" ಎಂದು ಗೊಣಗಿದ. ಆ ಮನುಷ್ಯನ ಕಾಲುಗಳು ಕಮಾನಿನ ಆಕೃತಿಯಲ್ಲಿ ಬಾಗಿದ್ದುವು. ಆತನ ವಯಸ್ಸು ಇಷ್ಟೇ ಎಂದು ಹೇಳುವ ಹಾಗಿರಲಿಲ್ಲ. ತಲೆಯ ಮೇಲೂ ಮುಖದ ಮೇಲೂ ತೆಳ್ಳಗಿನ ಬಾಡಿದ ಕೂದಲಿತ್ತು. ಕಣ್ಣುಗಳು ನಿಸ್ತೇಜವಾಗಿದ್ದುವು. ಗಾಡಿಯ ಬದಿಯಲ್ಲಿ ನಡೆಯುತ್ತಿದ್ದಂತೆ ಆತ, ಅತ್ತಿತ್ತ ಪಕ್ಕಕ್ಕೆ ವಾಲುತ್ತಿದ್ದ. ಆತ ಬಲಕ್ಕಾಗಲಿ ಎಡಕ್ಕಾಗಲಿ ಎಲ್ಲಾ ಒಂದೆ ಎಂಬ ಉದಾಸೀನ ಮನಸ್ಸಿನಿಂದ ನಡೆಯುತ್ತಿದ್ದ.

"ಹುಂ ನಡಿ!" ಎಂದನಾತ ಮತ್ತೊಮ್ಮೆ. ಒಣ ಕೆಸರಿನ ಹೊದಿಕೆ ಹೊತ್ತ ಭಾರವಾದ ಬೂಟುಗಳಿದ್ದ ಕಾಲುಗಳನ್ನು ವಿಚಿತ್ರವಾಗಿ ಜಾಡಿಸುತ್ತ ಆತ ನಡೆದ. ತಾಯಿ ತನ್ನ ಸುತ್ತಮುತ್ತಲೂ ನೋಡಿದಳು. ಹೊಲಗಳು ಆಕೆಯ ಹೃದಯದಷ್ಟೇ ಬರಿದಾಗಿದ್ದುವು.

ಆಳವಾದ ಬೆಚ್ಚಗಿದ್ದ ಮರಳಿನ ಮೇಲೆ ಗಾಡಿಯನ್ನೆಳೆಯುತ್ತಿದ್ದಂತೆ ಕುದುರೆ ಏಕ ಪ್ರಕಾರವಾಗಿ ತಲೆಯಾಡಿಸಿತು. ಮರಳು ಸರಿದು, ಎಣ್ಣೆ ಕಾಣದ ಮುರುಕಲು ಗಾಡಿ ಗಿರ್ರೆಂದು ಸದ್ದುಮಾಡಿತು. ಬಳಿಕ ಸಪ್ಪಳವೆಲ್ಲವೂ ಗಾಡಿಯ ಗಾಲಿಗಳೆಬ್ಬಿಸಿದ ಧೂಳಿ ಯೊಡನೆ ಬೆರೆತು ಹೋಯಿತು....

ಶಹರದ ಬದಿಯಲ್ಲಿ ನಿರ್ಜನ ಬೀದಿಯಲ್ಲಿ ನಿಕೊಲಾಯ್ ಇವಾನೊವಿಚ್‌ನ ಮನೆ ಇತ್ತು. ಹಳೆಯದಾಗಿದ್ದ ಎರಡು ಅಂತಸ್ತಿನ ಮನೆ ಇತ್ತು. ಹಳೆಯದಾಗಿದ್ದ ಎರಡು ಅಂತಸ್ತಿನ ಮನೆಗೆ ತಗಲಿಕೊಂಡಂತೆ ಕಟ್ಟಿದ್ದ ಒಂದು ಹಸಿರು ಮನೆಯಲ್ಲಿ ಆತ ವಾಸಿಸುತ್ತಿದ್ದ. ಎದುರಲ್ಲೊಂದು ಪುಟ್ಟ ಉದ್ಯಾನವಿತ್ತು. ಅದರ ಚಿಗುರುಗಳೂ ಹೂಗಳೂ ಮೂರು ಕೊಠಡಿಗಳ ಒಳಕ್ಕೂ ಕಿಟಕಿಗಳೆಡೆಯಿಂದ ಇಣಿಕಿ ನೋಡು ತ್ತಿದ್ದುವು. ಒಳಗೆ ಪ್ರತಿಯೊಂದೂ ಸ್ವಚ್ಛವಾಗಿತ್ತು, ನೀರವವಾಗಿತ್ತು. ಮೌನವಾದ ನೆರಳುಗಳು ನೆಲದ ಮೇಲೆ ಕಂಪಿಸುವ ಚಿತ್ರಗಳನ್ನು ಬರೆಯುತ್ತಿದ್ದುವು. ಗೋಡೆ ಗೋಡೆಗಕ್ಕೂ ಪುಸ್ತಕ ತುಂಬಿದ ಬೀರುಗಳು... ಆ ಬೀರುಗಳ ಮೇಲೆ ಯೋಚನಾಮಗ್ನ ರಾದ ವ್ಯಕ್ತಿಗಳ ಭಾವಚಿತ್ರಗಳು....

ನಿಕೊಲಾಯ್ ತಾಯಿಯನ್ನು ಸಣ್ಣದೊಂದು ಕೊಠಡಿಗೆ ಕರೆದೊಯ್ದ. ಅದರ ಒಂದು ಕಿಟಕಿಯಿಂದ ಉದ್ಯಾನವೂ, ಇನ್ನೊಂದರಿಂದ ದಟ್ಟನೆ ಹುಲ್ಲುಬೆಳೆದ ಅಂಗಳವೂ ಕಾಣಿಸುತ್ತಿದ್ದುವು; ಈ ಕೊಠಡಿಯ ಗೋಡೆಗಳಲ್ಲೂ ಪುಸ್ತಕ ತುಂಬಿದ ಬೀರು-ಕಪಾ ಟುಗಳಿದ್ದುವು.

"ಈ ಕೊಠಡಿ ನಿಮಗೆ ಆಗ್ಬಹುದೆ?" ಎಂದು ನಿಕೊಲಾಯ್ ಕೇಳಿದ.

"ನಾನು ಅಡುಗೆಮನೇಲಿ ಇರೋಕೆ ಇಷ್ಟಪಡ್ತೀನಿ. ಅಡುಗೆಮನೆ ಸೊಗಸಾಗಿದೆ, ಸ್ವಚ್ಛವಾಗಿದೆ...." ಎಂದಳು ತಾಯಿ.

ಈ ಯೋಚನೆ ಕೇಳಿ ಆತನು ಗಾಬರಿಯಾದನೆಂದೆನಿಸಿತು ತಾಯಿಗೆ. ಅಂತೂ ಪ್ರಯಾಸ ಪಟ್ಟು ವಿವರಿಸಿ, ಅಡುಗೆಮನೆಯಲ್ಲಿ ಮಲಗಿಕೊಳ್ಳುವುದು ಸರಿಯಲ್ಲವೆಂದು ತಾಯಿಯನ್ನು ಒಪ್ಪಿಸಿದ ಮೇಲೆ, ಆತ ನಗುಮುಖನಾದ.

ಮೂರು ಕೊಠಡಿಗಳಲ್ಲೂ ವಿಶಿಷ್ಟ ವಾತಾವರಣವಿತ್ತು. ಇಲ್ಲಿ ಉಸಿರಾಡುವುದು ಸುಲಭವಾಗಿತ್ತು, ಸೊಗಸಾಗಿತ್ತು. ಆದರೆ ಗಟ್ಟಿಯಾಗಿ ಮಾತನಾಡಲು ಯಾರಿಗಾದರೂ ಅಳುಕು ಎನಿಸದೆ ಇರುತ್ತಿರಲಿಲ್ಲ. ಹಾಗೆ ಮಾತನಾಡಿ, ಆಳವಾದ ಯೋಚನೆಯಲ್ಲಿ ತಲ್ಲೀನರಾಗಿ ಗೋಡೆಯಿಂದ ಕೆಳಕ್ಕೆ ನೋಡುತ್ತಿದ್ದವರ ಶಾಂತ ಚಿಂತನೆಗೆ ಭಂಗ ತರಲು ಇಚ್ಛಿಸುವುದು ಸಾಧ್ಯವಿರಲಿಲ್ಲ.

ಕಿಟಕಿಗಳ ಪಟ್ಟಿಯಮೇಲಿದ್ದ ಕುಂಡಗಳಲ್ಲಿನ ಮಣ್ಣನ್ನು ಮುಟ್ಟಿ ನೋಡಿ ತಾಯಿ, "ಈ ಗಿಡಗಳಿಗೆ ನೀರು ಸಾಲದು" ಎಂದಳು.

ಗಿಡಗಳ ಒಡೆಯ ತಪ್ಪು ಮಾಡಿದವನಂತೆ ಹೇಳಿದ:

"ಹೌದು, ಹೌದು. ನನಗೆ ಹೂವಿನ ಗಿಡಗಳೆಂದರೆ ತುಂಬಾ ಪ್ರೀತಿ. ಆದರೆ ಅವುಗಳ ಆರೈಕೆ ಮಾಡೋಕೆ ನನಗೆ ಬಿಡುವೇ ಇಲ್ಲ."

ತನ್ನದೇ ಆದ ಈ ಬೆಚ್ಚಗಿನ ಮನೆಯಲ್ಲಿ ನಿಕೊಲಾಯ್‌ನೂ, ಆ ವಾತಾವರಣಕ್ಕೆ ತಾನು ಪರಕೀಯನೆಂಬಂತೆ ವರ್ತಿಸುತ್ತಿದ್ದುದನ್ನು ತಾಯಿ ಕಂಡಳು. ಬಲಗೈಯ ತೆಳುವಾದ ಬೆರಳುಗಳಿಂದ ಕನ್ನಡಕವನ್ನು ಸರಿಪಡಿಸುತ್ತಾ, ಮುಖವನ್ನು ಬೇರೆ ಬೇರೆ ಸಾಮಗ್ರಿಗಳ ಸಮೀಪಕ್ಕೆ ತಂದು ದಿಟ್ಟಿಸಿ ನೋಡುತ್ತಾ, ತನ್ನ ಗಮನ ಸೆಳೆದುದನನ್ನು ಕಿರಿದುಗೊಳಿಸಿದ ಕಣ್ಣಿನಿಂದ ಕಾಣುತ್ತಾ ನಿಕೊಲಾಯ್ ಅತ್ತಿತ್ತ ಚಲಿಸುತ್ತಿದ್ದ. ಒಮ್ಮೊಮ್ಮೆ ಆತ ಏನಾದರೂ ವಸ್ತುವನ್ನು ಮುಖದ ಸಮೀಪಕ್ಕೆ ಎತ್ತಿಕೊಂಡು, ತನ್ನ ಕಣ್ಣುಗಳಿಂದದನ್ನು ಮುಟ್ಟಿ ನೋಡುವವನಂತೆ ತೋರುತ್ತಿದ್ದ. ತಾಯಿಯಂತೆ ಆತನೂ ಮೊದಲ ಬಾರಿ ಆ ಮನೆಗೆ ಕಾಲಿಟ್ಟಹಾಗಿತ್ತು. ಆಕೆಯಂತೆ ಆತನಿಗೂ ಪ್ರತಿಯೊಂದೂ ಹೊಸತಾಗಿಯೂ ಅಪರಿಚಿತವಾಗಿಯೂ ಕಾಣುವಂತಿತ್ತು. ಇದರಿಂದ ತಕ್ಷಣವೇ ಆಕೆಯ ಮನಸ್ಸಿನಲ್ಲಿ ಒಂದು ರೀತಿಯ ನೆಮ್ಮದಿ ನೆಲೆಸಿತು. ನಿಕೊಲಾಯ್‌ನೊಡನೆ ಆಕೆ ಮನೆಯೆಲ್ಲಾ ಸುತ್ತಾಡಿ ಎಲ್ಲೆಲ್ಲಿ ಏನೇನಿದೆಯೆಂಬುದನ್ನೂ ಆತ ಅವುಗಳನ್ನು ಇಡಬಯಸುವ ರೀತಿ ನೀತಿಗಳನ್ನೂ ಗುರುತಿಸಿಕೊಂಡಳು. ಮಾಡಬಯಸಿದರೂ ಕೈಲಾಗದೆ ಹಾಗೆಯೇ ಉಳಿಯಗೊಟ್ಟ ಅಸಹಾಯಕನಾದ ನಿಕೊಲಾಯ್, ತಾಯಿಯ ಪ್ರಶ್ನೆಗಳಿಗೆಲ್ಲ ಉತ್ತರ ಹೇಳಿದ.

ತಾಯಿ ಹೂಗಿಡಗಳಿಗೆ ನೀರೆರೆದಳು. ಪಿಯಾನೋದ ಮೇಲೆ ಹರಡಿದ್ದ ಸ್ವರ ಚಿಹ್ನೆ ಪುಸ್ತಕದ ಹಾಳೆಗಳನ್ನು ಸರಿಪಡಿಸಿದಳು. ಸಮೊವಾರನ್ನು ನೋಡಿ ಆಕೆಯೆಂದಳು:

"ಇದನ್ನೊಂದಿಷ್ಟು ಬೆಳಗ್ಬೇಕು."

ಆತ ಆ ಪಾತ್ರೆಯ ಮಂಕಾದ ಲೋಹದ ಮೇಲೆ ಬೆರಳೋಡಿಸಿ, ಪರೀಕ್ಷೆಗೆಂದು ಮೂಗಿನ ಬಳಿ ತಂದ. ಅದನ್ನು ಕಂಡು ತಾಯಿ ಸಣ್ಣನೆ ನಕ್ಕಳು.

ರಾತ್ರೆ ಹಾಸಿಗೆಯ ಮೇಲೆ ಮಲಗಿ, ಹಗಲು ಹೊತ್ತು ನಡೆದುದನ್ನೆಲ್ಲ ತಾಯಿ ಸ್ಮರಿಸಿಕೊಂಡಳು. ದಿಂಬಿನಿಂದ ತಲೆಯನ್ನೆತ್ತಿ ತನ್ನನ್ನೇ ತಾನು ನಂಬಲಾರದವಳ ಹಾಗೆ ಸುತ್ತಲೂ ನೋಡಿದಳು. ಆವರೆಗಿನ ಜೀವಮಾನದಲ್ಲೆಲ್ಲಾ ಇನ್ನೊಬ್ಬರ ಮನೆಯಲ್ಲಿ ಆಕೆ ಕಳೆದುದು ಇದೇ ಮೊದಲನೆಯ ರಾತ್ರೆ. ಆದರೂ ಆಕೆಗೇನೂ ಮುಜು ಗರವೆನಿಸಲಿಲ್ಲ; ಅತೃಪ್ತಿ ಇರಲಿಲ್ಲ. ನಿಕೊಲಾಯ್‌ನ ಒಳ್ಳೆಯತನ ಕುರಿತು ಆಕೆ ಯೋಚಿ ಸಿದಳು. ಆತನ ಪಾಲಿಗೆ ಜೀವನ ಇನ್ನಷ್ಟು ಸುಖಕರವಾಗುವಂತೆ, ಆತನ ಬದುಕಿನಲ್ಲಿ ಸೌಹಾರ್ದ ಸೌಕರ್ಯ ದೊರೆಯುವಂತೆ, ತಾನು ಏನನ್ನಾದರೂ ಮಾಡಬೇಕೆಂದು ತಾಯಿ ಬಯಸಿದಳು. ಆತನ ಸಂಕೋಚಪ್ರವೃತ್ತಿ, ತಮಾಷೆಯಾಗಿ ತೋರುವ ಅಸಾ ಮರ್ಥ್ಯ, ಇತರ ಜನರಿಗೂ ಆತನಿಗೂ ಇದ್ದ ವ್ಯತ್ಯಾಸ, ಆ ಸ್ವಚ್ಛ ಕಣ್ಣುಗಳ ಮಗು ವಿನಂತಹ ತಿಳಿವಳಿಕೆಯುಳ್ಳ ಭಾವಮುದ್ರೆ – ಅವುಗಳೆಲ್ಲಕ್ಕೂ ತಾಯಿ ಮಾರುಹೋ ದಳು. ಆ ಬಳಿಕ ಯೋಚನೆ ಮಗನತ್ತ ತಿರುಗಿತು. ಮತ್ತೊಮ್ಮೆ ಮೇ ದಿನದ ಘಟ ನೆಗಳು ಆಕೆಯ ಮುಂದೆ ಸುಳಿದುಹೋದುವು. ಈಗ ಆ ಘಟನೆಗಳು ಹೊಸ ಸ್ವರದ ಉಡುಗೆ ಧರಿಸಿದ್ದುವು, ಅವುಗಳಿಗೀಗ ಹೊಸ ಅರ್ಥದ ರೆಕ್ಕೆಗಳಿದ್ದುವು. ಆ ದಿನ ದಷ್ಟೇ ಆ ದಿನದ ದುಃಖಕ್ಕೂ ಮಹತ್ವವಿತ್ತು. ಈ ದುಃಖ, ಪ್ರಜ್ಞೆ ತಪ್ಪಿಸುವ ಬಿಗಿ ಮುಷ್ಟಿಯ ಹೊಡೆತದ ಹಾಗೆ, ತಲೆಯನ್ನು ಭೂಮಿಗೆ ಬಾಗಿಸುತ್ತಿರಲಿಲ್ಲ. ಬದಲು ಹೃದಯವನ್ನಿರಿದು ವಿವಿಧ ನೋವುಗಳಿಗೆ ಎಡೆಕೊಡುತ್ತಿತ್ತು. ಆ ನೋವುಗಳ ಫಲವಾಗಿ ರೋಷ ಕ್ರಮೇಣ ಉಕ್ಕೇರಿ, ಬಾಗಿದ ಬೆನ್ನು ನೆಟ್ಟಗಾಗುವಂತೆ ಮಾಡು ತ್ತಿತ್ತು.

ನಗರದ ಅಪರಿಚಿತ ಸ್ವರಗಳು ರಾತ್ರೆ ಹೊತ್ತು, ಉದ್ಯಾನದ ಎಲೆಗಳಿಗೆ ಕಚ ಕುಳಿ ಇಡುತ್ತಾ, ತೆರೆದ ಕಿಟಕಿಯೆಡೆಯಿಂದ ಒಳಕ್ಕೆ ಹರಿಯುತ್ತಿದ್ದುವು. ಬಲು ದೂರ ದಿಂದ ಆಯಾಸಗೊಂಡು ಬಸವಳಿದು ಬಂದು ಆ ಸ್ವರಗಳು ಕೊಠಡಿಯೊಳಗೆ ಶಾಂತ ವಾಗಿ ಕ್ಷೀಣಿಸುತ್ತಿದ್ದುವು.

ಆ ಸದ್ದುಗಳಿಗೆ ಕಿವಿಗೊಡುತ್ತ ತಾಯಿ ಯೋಚಿಸಿದಳು:

"ನಮ್ಮ ಮಕ್ಕಳು ಜಗತ್ತಿನಲ್ಲಿ ಮುನ್ನಡೆಯ ಹೆಜ್ಜೆಗಳನ್ನಿಡುತ್ತಿದ್ದಾರೆ...."

ಬೆಳಿಗ್ಗೆ ಬೇಗನೆದ್ದು ತಾಯಿ ಸಮೊವಾರನ್ನು ಬೆಳಗಿದಳು. ಚಾ ತಯಾರಿಸ ಲೆಂದು ನೀರು ಬಿಸಿಮಾಡಿದಳು. ಸದ್ದಿಲ್ಲದೆ ಮೇಜನ್ನು ಸಿದ್ಧಪಡಿಸಿದಳು. ನಿಕೊಲಾಯ್ ಏಳುವುದನ್ನೇ ಇದಿರುನೋಡುತ್ತ ಅಡುಗೆಮನೆಯಲ್ಲಿ ಕುಳಿತಳು. ಕೊನೆಗೊಮ್ಮೆ ಆತ ಕೆಮ್ಮುತ್ತ ಬಾಗಿಲು ತೆರೆದ. ಕನ್ನಡಕವನ್ನು ಒಂದು ಕೈಯಲ್ಲೂ ಇನ್ನೊಂದು ಕೈಯಲ್ಲಿ ಷರ್ಟಿನ ಕಾಲರನ್ನೂ ಬಲವಾಗಿ ಆತ ಹಿಡಿದಿದ್ದ. ಪರಸ್ಪರ ವಂದನೆಗಳಾದ ಮೇಲೆ

ತಾಯಿ ಸಮೋವಾರನ್ನು ಇನ್ನೊಂದು ಕೊಠಡಿಗೆ ಒಯ್ದಳು. ನೆಲದಮೇಲೆ ನೀರು ಚೆಲ್ಲುತ್ತ, ಹಲ್ಲುಜ್ಜುವ ಬ್ರಷನ್ನೂ ಸಾಬೂನನ್ನೂ ನೆಲದ ಮೇಲೆ ಬೀಳಿಸುತ್ತ, ತನ್ನ ಒರಟುತನಕ್ಕಾಗಿ ಗೊಣಗಿಕೊಳ್ಳುತ್ತ, ನಿಕೊಲಾಯ್ ಕೈಮುಖತೊಳೆದು ಕೊಂಡ.

ಚಾ ಕುಡಿಯುತ್ತಿದ್ದಾಗ ತಾಯಿಯೊಡನೆ ಆತನೆಂದ:

"ನನಗೊಂದು ಬಹಳ ವ್ಯಸನಕಾರಿ ಉದ್ಯೋಗ ಇದೆ, ಅವ್ವ – ನಮ್ಮ ರೈತರು ಹೇಗೆ ದರಿದ್ರರಾಗ್ತಿದಾರೇಂತ ನಿರೀಕ್ಷಿಸೋ ಕೆಲಸ."

ತಪ್ಪಿತಸ್ಥನ ಮುಗುಳ್ನಗೆಯೊಡನೆ ಆತ ಮುಂದುವರಿಸಿದ:

"ಸರಿಯಾದ ಆಹಾರವಿಲ್ಲದೆ ರೈತರು ಅಕಾಲ ಮರಣಕ್ಕೆ ಗುರಿಯಾಗ್ತಾರೆ; ಮಕ್ಕಳು ಬಡಕಲಾಗಿ ಹುಟ್ಟುತ್ತವೆ, ನೊಣಗಳ ಹಾಗೆ ಸಾಯುತ್ತವೆ. ಇದು ನಮಗೆ ಗೊತ್ತಿದೆ. ಇದರ ಕಾರಣವೂ ಗೊತ್ತಿದೆ. ಹೀಗೆ ಆಗ್ತಿರೋದನ್ನ ವೀಕ್ಷಿಸುತ್ತಿರುವುದಕ್ಕೆ ನಮಗೆ ಸಂಬಳವನ್ನೂ ಕೊಡ್ತಾರೆ. ಇದು ಒಂದು ವಿಚಾರ...."

"ನೀವು ವಿದ್ಯಾರ್ಥಿಯೇನು?" ಎಂದು ತಾಯಿ ಕೇಳಿದಳು.

"ಅಲ್ಲ. ಮೊದಲು ಕೈಕೊಂಡ ವೃತ್ತಿ ಉಪಾಧ್ಯಾಯನದು. ನನ್ನ ತಂದೆ ವ್ಯಾತ್ಕ ದಲ್ಲಿ ಒಂದು ಕಾರಖಾನೆಯ ಮ್ಯಾನೇಜರು. ನಾನು ಶಿಕ್ಷಕ ವೃತ್ತಿ ಕೈಕೊಂಡೆ. ಹಳ್ಳಿ ಯಲ್ಲಿ ನಾನು ರೈತರಿಗೆ ಓದೋಕ್ಕೆ ಪುಸ್ತಕ ಕೊಟ್ಟೆ. ಅದಕ್ಕಾಗಿ ನನ್ನನ್ನು ಜೈಲಿಗೆ ಕಳಿ ಸಿದ್ರು. ಜೈಲುವಾಸ ಮುಗಿದ್ಮೇಲೆ ಒಂದು ಪುಸ್ತಕದಂಗಡಿಯಲ್ಲಿ ಕೆಲಸಕ್ಕೆ ನಿಂತೆ. ಆದರೆ ನನ್ನ ಅಜಾಗರೂಕತೆಯಿಂದ ಮತ್ತೊಮ್ಮೆ ಜೈಲು ಸುಖ ದೊರೀತು. ಕೊನೇಲಿ ಆರ್ಕೇಂಜಲಿಗೆ ಗಡೀಪಾರು ಮಾಡಿದ್ರು. ಅಲ್ಲಿಯ ಗವರ್ನರರ ಕೋಪಕ್ಕೆ ತುತ್ತಾದೆ. ಹಡಗನ್ನು ಹತ್ತಿಸಿ ಶ್ವೇತಸಮುದ್ರ ದಡದಲ್ಲಿ ಒಂದು ಸಣ್ಣ ಹಳ್ಳಿಗೆ ನನ್ನನ್ನು ಸಾಗಹಾಕಿದ್ರು. ಅಲ್ಲಿ ಐದು ವರ್ಷ ಇದ್ದೆ."

ಸೂರ್ಯನ ಕಿರಣ ತುಂಬಿದ್ದ ಶುಭ್ರವಾಗಿದ್ದ ಆ ಕೊಠಡಿಯಲ್ಲಿ ಆತನ ಸ್ವರ ಮೃದುವಾಗಿ ಏಕಪ್ರಕಾರವಾಗಿ ಹರಿಯಿತು. ತಾಯಿ ಈಗಾಗಲೇ ಅಂತಹ ಎಷ್ಟೋ ಕಥೆ ಗಳನ್ನು ಕೇಳಿದ್ದಳು. ಆದರೆ ಆ ಕಥೆ ಹೇಳುವವರೆಲ್ಲ ಯಾವುದೋ ಅನಿವಾರ್ಯವಾದು ದನ್ನೇ ಹೇಳುವವರಂತೆ ಏಕೆ ಶಾಂತವಾಗಿ ಇರುತ್ತಿದ್ದರೆಂಬುದು ಮಾತ್ರ ಆಕೆಗೆ ಎಂದೂ ಅರ್ಥವಾಗಿರಲಿಲ್ಲ.

"ಈ ದಿವಸ ನನ್ನ ಸೋದರಿ ಬರ್ತಾಳೆ," ಎಂದ ನಿಕೊಲಾಯ್.

"ಅವಳಿಗೆ ಮದುವೆಯಾಗಿದೆಯೆ?"

"ಆಕೆ ವಿಧವೆ. ಗಂಡನ್ನ ಸೈಬೀರಿಯಾಕ್ಕೆ ಗಡೀಪಾರು ಮಾಡಿದ್ರು. ಆದರೆ ಆತ ತಪ್ಪಿಸ್ಕೊಂಡು ಹೋದ. ಎರಡು ವರ್ಷಗಳ ಹಿಂದೆ ಪರದೇಶದಲ್ಲಿ ಕ್ಷಯ ತಗಲಿ ತೀರಿಕೊಂಡ."

"ಆಕೆ ನಿಮಗಿಂತಲೂ ಚಿಕ್ಕವಳೆ?"

"ನನಗಿಂತ ಆರು ವರ್ಷ ದೊಡ್ಡವಳು. ಎಷ್ಟೋ ವಿಷಯದಲ್ಲಿ ಆಕೆಗೆ ನಾನು ಋಣಿಯಾಗಿದ್ದೀನಿ. ಆಕೆ ಪಿಯಾನೋ ಬಾರಿಸೋದನ್ನು ನೀವು ಕೇಳಬೇಕು! ಅದು ಅವಳ ಪಿಯಾನೋ. ಇಲ್ಲಿರೋದರಲ್ಲಿ ಹೆಚ್ಚಿನದೆಲ್ಲಾ ಅವಳದೇ. ಪುಸ್ತಕಗಳು ನನ್ನವು."

"ಆಕೆ ಎಲ್ಲಿ ವಾಸವಾಗಿರ್ತಾಳೆ?"

ನಿಕೊಲಾಯ್ ಮುಗುಳ್ನಗುತ್ತ ಉತ್ತರವಿತ್ತ:

"ಎಲ್ಲಾ ಕಡೇಲೂ. ಧೈರ್ಯವಂತ ವ್ಯಕ್ತಿಯ ಅಗತ್ಯ ಎಲ್ಲೆಲ್ಲಿ ಇದೆಯೋ ಅಲ್ಲೆಲ್ಲಾ ಆಕೆ ಇರ್ತಾಳೆ."

"ಆಕೇನೂ ಈ – ಇದೇ – ಕೆಲಸ ಮಾಡ್ತಾಳೆಯೆ?"

"ಹೌದು ಮತ್ತೆ!"

....ಆತ ಹೊರಹೋದ. ತಾಯಿ, 'ಈ ಕೆಲಸ'ದ ವಿಷಯ, ದಿನದಿನವೂ ಶಾಂತವಾಗಿ ಎಡೆಬಿಡದೆ ಈ ಕೆಲಸದಲ್ಲೇ ನಿರತರಾಗುತ್ತಿದ್ದವರ ವಿಷಯ, ಯೋಚಿಸತೊಡಗಿದಳು. ಅವರೆಲ್ಲರ ಎದುರಲ್ಲಿ, ರಾತ್ರೆ ಹೊತ್ತು ಮಹಾಪರ್ವತದ ಭಯೋತ್ಪಾದಕ ಗಂಭೀರತೆಯನ್ನು ಕಂಡಾಗ ಆಗುವಂತೆ, ತಾನು ಅತ್ಯಲ್ಪಳೆಂದು ತಾಯಿಗೆ ತೋರಿತು.

ಮಧ್ಯಾಹ್ನದ ಹೊತ್ತಿಗೆ, ಎತ್ತರದ ಸುಂದರಿಯಾದ ಕರಿಯ ಪೋಷಾಕು ಧರಿಸಿದ್ದ ಹೆಂಗಸೊಬ್ಬಳು ಬಂದಳು. ತಾಯಿ ಬಾಗಿಲು ತೆರೆದೊಡನೆಯೇ ಆ ಹೆಂಗಸು, ತನ್ನ ಪುಟ್ಟ ಹಳದಿ ಸೂಟ್‌ಕೇಸನ್ನು ನೆಲದ ಮೇಲಿಸೆದು, ತಾಯಿಯ ಕೈಯನ್ನು ಹಿಡಿದುಕೊಂಡು "ನೀವು ಪಾವೆಲ್ ಮಿಹೈಲೊವಿಚ್‌ನ ತಾಯಿ ಅಲ್ಲವೆ?" ಎಂದಳು.

"ಹೌದು," ಎಂದಳು ತಾಯಿ. ಆ ಹೆಂಗಸಿನ ಬೆಲೆಬಾಳುವ ಬಟ್ಟೆ ಕಂಡು ತಾಯಿ ಅಚ್ಚರಿಗೊಂಡಳು.

ಕನ್ನಡಿಯ ಮುಂದೆ ನಿಂತು ತಲೆಯ ಮೇಲಿಂದ ಹ್ಯಾಟು ತೆಗೆಯುತ್ತ ಆ ಹೆಂಗಸೆಂದಳು:

"ನಾನು ಊಹಿಸ್ಕೊಂಡಿದ್ದ ಹಾಗೇ ಇದೀರಾ ನೀವು. ಇಲ್ಲೇ ಬಂದು ವಾಸವಾಗಿರ್ತೀರಿ ಅಂತ ನನ್ನ ತಮ್ಮ ಬರೆದಿದ್ದ. ನಾನು ಮತ್ತು ನಿಮ್ಮ ಮಗ ಪಾವೆಲ್ ಮಿಹೈಲೊವಿಚ್ ಬಹಳ ಕಾಲದಿಂದ ಸ್ನೇಹಿತರು. ಆತ ನಿಮ್ಮ ವಿಷಯ ಹೇಳಿದ್ದ."

ಆಕೆಯ ಸ್ವರ ಒಣಗಿತ್ತು. ಮಾತು ನಿಧಾನವಾಗಿತ್ತು. ಆದರೆ ಚಲನವಲನ ವೇಗವಾಗಿ ಬಲಶಾಲಿಯಾಗಿತ್ತು. ಆಕೆಯ ಬೂದು ಕಣ್ಣುಗಳ ಯೌವನಕ್ಕೆ ವ್ಯತಿರಿಕ್ತವಾಗಿ ಕಣ್ಣುಗಳ ಕೊನೆಯಲ್ಲಿ ಸಣ್ಣ ಸುಕ್ಕುಗಳಿದ್ದುವು; ಕಿವಿಗಳ ಮೇಲುಗಡೆ ನರೆ ಕೂದಲು ಹೊಳೆಯುತ್ತಿತ್ತು.

"ನನಗೆ ಹಸಿವಾಗ್ತಿದೆ!" ಎಂದಳಾಕೆ, "ಒಂದು ಲೋಟ ಕಾಫಿ ದೊರೆತರಾ ಬೇತು."

"ಮಾಡ್ತೀನಿ" ಎಂದಳು ತಾಯಿ.

ಬೀರುವಿನಿಂದ ಕಾಫಿಯ ಪಾತ್ರೆಯನ್ನೆತ್ತಿಕೊಳ್ಳಲು ಕೈಹಾಕುತ್ತಿದ್ದಂತೆ ತಾಯಿ ಕೇಳಿದಳು:

"ಪಾವೆಲ್ ನನ್ನ ವಿಷಯ ಹೇಳಿದನೆ?"

"ಬಹಳ ಹೇಳಿದ."

ಹೆಂಗಸು ಚರ್ಮದ ಪುಟ್ಟ ಸಿಗರೇಟು ಪೆಟ್ಟಿಗೆಯೊಂದನ್ನು ಹೊರತೆಗೆದು ಸಿಗರೇಟು ಹಚ್ಚಿದಳು.

"ಅವನ ವಿಷಯವಾಗಿ ನಿನಗೆ ತುಂಬಾ ಭಯವೇನೊ" ಎಂದು ಆಕೆ, ಕೊಠಡಿಯಲ್ಲಿ ಅತ್ತಿತ್ತ ನಡೆಯುತ್ತಾ, ತಾಯಿಯನ್ನು ಕೇಳಿದಳು.

ಕಾಫಿ ಪಾತ್ರೆಯ ಕೆಳಗಿದ್ದ ಬೆಂಕಿಯ ನೀಲಿ ನಾಲಿಗೆಗಳನ್ನು ನೋಡುತ್ತ ತಾಯಿ ಮುಗುಳ್ನಕ್ಕಳು. ಆ ಹೆಂಗಸನ್ನು ಕಂಡಾಗ ಆದ ಸಂಕೋಚವನ್ನು ಈಗ ಸಂತೋಷ ನುಂಗಿಕೊಂಡಿತು.

"ಹಾಗಾದರೆ ನನ್ನ ಮುದ್ದು ಪಾಷ ನನ್ನ ವಿಷಯ ಆಕೆಗೆ ಹೇಳಿದ್ದ," ಎಂದು ಮನಸ್ಸಿನಲ್ಲೆ ಯೋಚಿಸುತ್ತ ತಾಯಿ ನಿಧಾನವಾಗಿ ಹೇಳಿದಳು.

"ಭಯವಿಲ್ವೆ ಮತ್ತೆ? ಈ ಕಷ್ಟ ಸಹಿಸ್ಕೊಳ್ಳೋದು ಸುಲಭವಲ್ಲ–ಆದರೆ ಹಿಂದೆ ಅದು ಇನ್ನೂ ಕಷ್ಟವಾಗಿತ್ತು. ಈಗ, ಆತ ಒಬ್ಬನೇ ಅಲ್ಲ ಅನ್ನೋದು ನನಗೆ ಗೊತ್ತಾಗಿದೆ."

ಆ ಹೆಂಗಸಿನ ಮುಖದತ್ತ ದೃಷ್ಟಿಹಾಯಿಸಿ ಹೆಸರೇನೆಂದು ತಾಯಿ ಕೇಳಿದಳು.

"ಸೋಫಿಯ" ಎಂದು ಉತ್ತರ ಬಂತು.

ಪೆಲಗೇಯ ನೆಟ್ಟ ದೃಷ್ಟಿಯಿಂದ ಆಕೆಯನ್ನೇ ನೋಡಿದಳು. ಆ ಧೈರ್ಯ, ಆ ಅವಸರ.... ಅಸಾಮಾನ್ಯವಾದುದೇನೋ ಆ ಹೆಂಗಸಿನಲ್ಲಿತ್ತೆಂಬುದು ಸ್ಪಷ್ಟವಾಗಿತ್ತು.

ನಿರ್ಧಾರದ ಮಾತುಗಳಲ್ಲಿ ಸೋಫಿಯ ಹೇಳಿದಳು:

"ಅವರು ಬಹಳ ದಿನ ಜೈಲಿನಲ್ಲಿ ಇರಬಾರದು ಅನ್ನೋದೇ ಅತ್ಯಂತ ಮುಖ್ಯ ವಿಷಯ. ಅವರ ವಿಚಾರಣೆಯನ್ನೊಮ್ಮೆ ಬೇಗನೆ ಮುಗಿಸಿದರೆ! ಅವರನ್ನು ಗಡೀಪಾರು ಮಾಡಿದ ತಕ್ಷಣ ಪಾವೆಲ್ ಮಿಹಾಯ್‌ಲೊವಿಚ್ ತಪ್ಪಿಸಿಕೊಳ್ಳೋದಕ್ಕೆ ನಾವು ಏರ್ಪಾಟುಮಾಡ್ತೀವಿ. ಆತ ಇಲ್ಲಿ ಬಹಳ ಬೇಕಾಗಿದ್ದಾನೆ."

ಸಿಗರೇಟಿನ ತುಂಡನ್ನು ಎಸೆಯಲು ಜಾಗ ಹುಡುಕುತ್ತಿದ್ದ ಸೋಫಿಯಳನ್ನೇ ಅನಿಶ್ಚಯದ ದೃಷ್ಟಿಯಿಂದ ತಾಯಿ ನೋಡಿದಳು. ಸೋಫಿಯ ಹೂವಿನ ಕುಂಡದಲ್ಲಿದ್ದ ಮಣ್ಣಿಗೇ ಸುಟ್ಟ ಸಿಗರೇಟನ್ನು ತುರುಕಿದಳು.

"ಹೂಗಳು ಕೆಟ್ಟು ಹೋಗ್ತವೆ," ಎಂದಳು ತಾಯಿ, ತನಗರಿಯದಂತೆಯೇ.

"ಕ್ಷಮಿಸಿ. ನಿಕೊಲಾಯ್‌ನೂ ಯಾವಾಗ್ಲೂ ಅದನ್ನೇ ಹೇಳ್ತಾನೆ."

ಸಿಗರೇಟಿನ ತುಂಡನ್ನೆತ್ತಿ ಸೋಫಿಯ ಕಿಟಕಿಯಾಚೆ ಹೊರಕ್ಕೆಸೆದಳು.

ತಾಯಿ ತಕ್ಷಣ ಕಕ್ಕಾಬಿಕ್ಕಿಯಾಗಿ ಕಂಗಾಲಾದಳು.

"ದಯುವಿಟ್ಟು ನನ್ನ ಕ್ಷಮಿಸಿ. ನಾನು ಯೋಚಿಸ್ದೇನೆ ಹಾಗೆ ಹೇಳ್ದೆ. ನಾನೆ ಲ್ಲಾದರೂ ನಿಮಗೆ ಕಲಿಸುವುದುಂಟೆ?"

"ಯಾಕೆ? ನಾನು ಅಷ್ಟು ಕೊಳಕಾಗಿರೋವಾಗ ಯಾಕೆ ಒಳ್ಳೇದನ್ನ ಕಲಿಸ್ಬಾರ್ದು ?" ಎಂದು ಸೋಫಿಯ ವ್ಯಕುಲುಕಿ ಉತ್ತರವಿತ್ತಳು. "ಕಾಫಿ ಸಿದ್ಧವಾಯ್ತೆ? ಉಪ ಕಾರವಾಯ್ತಮ್ಮ. ಆದರೆ ಒಂದೇ ಲೋಟ ಯಾಕೆ? ನೀವು ತಗೋಳಲ್ವೇ?"

ಒಮ್ಮೆಲೆ ಆಕೆ, ತಾಯಿಯ ಭುಜ ಹಿಡಿದು ಹತ್ತಿರಕ್ಕೆಳೆದು ಆಳವಾಗಿ ಆಕೆಯ ಕಣ್ಣುಗಳನ್ನೇ ನೋಡುತ್ತ ಕೇಳಿದಳು:

"ಸಂಕೋಚವಾಗುತ್ತಾ?"

ತಾಯಿ ಮುಗುಳ್ನಕ್ಕಳು.

"ಸಿಗರೇಟಿನ ವಿಷಯ ನಾನು ಹಾಗೆ ಹರಟಿದ ಮೇಲೂ "ಸಂಕೋಚವೆ" ಅಂತ ಕೇಳ್ತಿದೀರಲ್ಲ!" ತನಗಾದ ಆಶ್ಚರ್ಯವನ್ನು ಮರೆಮಾಚಲೆತ್ನಿಸದೆ ತಾಯಿ ಮುಂದುವರಿಸಿದಳು: "ನಾನು ನಿನ್ನೆಯಷ್ಟೇ ಇಲ್ಲಿಗೆ ಬಂದೆ. ಅಷ್ಟರಲ್ಲೇ, ಇದು ನನ್ನ ಮನೆಯೇ ಅನ್ನೋ ಹಾಗೆ ವರ್ತಿಸ್ತಿದ್ದೀನಿ. ಯಾವುದರ ಹೆದರಿಕೇನೂ ಇಲ್ಲ. ಬಾಯಿಗೆ ಬಂದಿದ್ದೆಲ್ಲಾ ಹೇಳೋದು...."

"ಹಾಗೇ ಇರ್ಬೇಕು" ಎಂದು ಸೋಫಿಯ ಉದ್ಗಾರವೆತ್ತಿದಳು.

ತಾಯಿ ಮುಂದುವರಿಸಿದಳು.

"ನನ್ನ ತಲೆಯೇ ತಿರುಗ್ತಿದೆ. ನನಗೆ ನಾನೇ ಅಪರಿಚಿತಳು. ಅನ್ನೋ ಹಾಗೆ ಆಗಿದೆ. ಹಿಂದೆ, ಯಾರ ಮುಂದಾದರೂ ಹೃದಯದಲ್ಲಿರೋದನ್ನ ಹೇಳೋದಕ್ಕೆ ಬಹಳ ಕಾಲ ಹಿಡೀತಿತ್ತು. ಈಗ ಸದಾ ಹೃದಯ ತೆರೆದೇ ಇದೆ. ಹಿಂದೆ ಕನಸಿನಲ್ಲಿ ಕೂಡಾ ಹೇಳೋಕೆ ಆಗದೇ ಇದ್ದದ್ದನ್ನ ಈಗ ಹೇಳಿಯೇ ಬಿಡ್ತೇನೆ."

ತನ್ನ ಬೂದುಗಣ್ಣುಗಳ ಬೆಳಕಿನಿಂದ ತಾಯಿಯ ಮುಖವನ್ನು ನೋಡುತ್ತಾ ಸೋಫಿಯ ಇನ್ನೊಂದು ಸಿಗರೇಟನ್ನು ಹಚ್ಚಿಕೊಂಡಳು.

"ಅವನು ತಪ್ಪಿಸ್ಕೊಳ್ಳೋಕೆ ಏರ್ಪಾಟು ಮಾಡ್ತೀವಿ ಅಂತ ಹೇಳಿದ್ರಿ. ಆದರೆ ಆತ ದಿನ ಕಳೆಯೋದು ಹ್ಯಾಗೆ– ತಲೆಮರೆಸಿಕೊಂಡೆ?" ಎಂದು ತಾಯಿ ತನ್ನನ್ನು ಬಲವಾಗಿ ಬಾಧಿಸುತ್ತಿದ್ದ ಪ್ರಶ್ನೆಯೊಂದನ್ನೂ ಹೃದಯದಿಂದ ಹೊರತೆಗೆದಳು.

ಇನ್ನೊಂದು ಲೋಟ ಕಾಫಿ ಬಗ್ಗಿಸಿಕೊಳ್ಳುತ್ತಾ ಸೋಫಿಯ ಉತ್ತರವಿತ್ತಳು:

"ಅದೇನೂ ದೊಡ್ಡ ವಿಷಯವಲ್ಲ. ತಲೆಮರೆಸ್ಕೊಂಡಿರೋ ಬೇರೆ ಎಷ್ಟೋ ಜನ ಇರೋ ಹಾಗೆ ಅವನೂ ಇರ್ತಾನೆ. ಇದೇ ಈಗ ಅಂಥ ಒಬ್ಬನನ್ನು ಕಂಡು ಆತ ವಾಸ ಮಾಡ್ಬೇಕಾದ ಜಾಗಕ್ಕೆ ಕರಕೊಂಡು ಹೋಗಿ ಬಿಟ್ಬಂದೆ. ಅವನೂ ಅಮೂಲ್ಯ ವ್ಯಕ್ತಿ. ಅವನಿಗೆ ಐದು ವರ್ಷಗಳ ಗಡೀಪಾರು ಶಿಕ್ಷೆ ಕೊಟ್ಟಿದ್ರು. ಆದರೆ ಅವನು ಅನುಭವಿಸಿದ್ದು ಮೂರೂವರೆ ತಿಂಗಳು ಮಾತ್ರ."

ತಾಯಿ ಸ್ವಲ್ಪ ಹೊತ್ತು ಅವಳನ್ನೇ ನೋಡಿದಳು. ಆ ಬಳಿಕ ಮುಗುಳ್ನಕ್ಕಳು. ತಲೆಯಾಡಿಸುತ್ತ ಮೃದುವಾಗಿ ಅಂದಳು:

"ಅಂತೂ ಮೇ ದಿನದ ಆಚರಣೆ ನನ್ನನ್ನ ಬಹಳ ಬದಲಾಯಿಸಿಬಿಟ್ಟಿದೆ. ನನಗೆ ನಾನೇ ಕಾಣಿಸ್ತಾ ಇಲ್ಲ. ಒಂದೇ ಸಲ ಎರಡು ಬೇರೆ ಬೇರೆ ಹಾದಿಗಳಲ್ಲಿ ಹೋಗುತ್ತಿರುವೆನೆನೋ ಎನಿಸುತ್ತಿದೆ. ಒಮ್ಮೊಮ್ಮೆ, ನನಗೆ ಪ್ರತಿಯೊಂದೂ ತಿಳಿದ ಹಾಗೆ ಭಾಸವಾಗ್ತದೆ. ಮತ್ತೊಮ್ಮೊಮ್ಮೆ, ಏನೇನೂ ಕಾಣಿಸದ ಮೋಡ ಕವಿದ ವಾತಾವರಣ. ಈಗ ನಿಮ್ಮ ಉದಾಹರಣೇನೆ ತಗೊಳ್ಳೋಣ.... ದುಡಿಯುವವಳೇನಲ್ಲ. ಕಲಿತವಳು, ಕುಲೀನಳು.... ನೀವೂ ಈ ಕೆಲಸದಲ್ಲೇ ಇದ್ದೀರಾ.... ಪಾವೆಲ್ ನಿಮಗೆ ಗೊತ್ತು. ಅವನ ವಿಷಯದಲ್ಲಿ ಒಳ್ಳೇ ಮಾತುಗಳನ್ನೂ ಆಡಿದ್ರಿ.... ನಿಮಗೆ ಅಭಿನಂದನೆಯಮ್ಮ."

"ಅಭಿನಂದನೆ ಸಲ್ಲಬೇಕಾದ್ದು ನಿಮಗೆ," ಎಂದು ಸೋಫಿಯ ನಕ್ಕಳು.

"ನಾನೇನು ಮಾಡಿದ್ದೀನಿ? ಅವನಿಗೆ ಇದನ್ನೆಲ್ಲಾ ಕಲಿಸ್ದೋಳು ನಾನೇನೂ ಅಲ್ಲವಲ್ಲ," ಎಂದು ತಾಯಿ ನಿಟ್ಟುಸಿರು ಬಿಟ್ಟಳು.

ಸೋಫಿಯ ಸಿಗರೇಟನ್ನು ಸಾಸರಿನಲ್ಲಿ ಚಿರುಟಿದಳು. ಗಟ್ಟಿಯಾಗಿ ತಲೆಯನ್ನು ಕುಲುಕಿದಳು. ಹಿಡಿಹಿಡಿಯಾಗಿ ಚಿನ್ನದಂತಹ ರಾಶಿಕೂದಲು ಆಕೆಯ ನಡುವಿನ ತನಕವೂ ಕೆಳಕ್ಕಿಳಿಯಿತು.

"ಈಗ ಶೃಂಗಾರ ಸಂಭ್ರಮದ ಉಡುಪು ಆಭರಣವನ್ನು ಕಳಚಲು ಸಮಯ," ಎಂದು ಆಕೆ ಎದ್ದು ಇನ್ನೊಂದು ಕೊಠಡಿಗೆ ಹೋದಳು.

೩

ನಿಕೊಲಾಯ್ ಸಂಜೆ ಮನೆಗೆ ಹಿಂತಿರುಗಿದ. ಊಟಮಾಡುತ್ತಿದ್ದಾಗ ಸೋಫಿಯ, ಶಿಕ್ಷೆಯಿಂದ ತಪ್ಪಿಸಿಕೊಂಡು ಬಂದಿದ್ದ ಮನುಷ್ಯನನ್ನು ತಾನು ಸಂಧಿಸಿದ್ದು, ಅವನನ್ನು ಬಚ್ಚಿಟ್ಟಿದ್ದು, ಗೂಢಚಾರರ ವಿಷಯದಲ್ಲಿ ತಾನು ಭೀತಳಾದುದು, ತಾನು ಕಂಡವರೆಲ್ಲ ಗೂಢಚಾರರೇ ಇರಬಹುದೆಂದು ಸಂದೇಹಪಟ್ಟದ್ದು, ತಪ್ಪಿಸಿಕೊಂಡು ಬಂದವನು ತಮಾಷೆಯಾಗಿ ವರ್ತಿಸಿದ್ದು, – ಇವೆಲ್ಲವನ್ನೂ ನಗುತ್ತ ವರ್ಣಿಸಿದಳು. ತಾನು ಮಾಡಿ ಮುಗಿಸಿದ ದುಡಿಮೆಯನ್ನು ಬಣ್ಣಿಸುವ ಕೆಲಸಗಾರನ ಹಾಗೆ, ಆಕೆಯ ಮಾತಿನಲ್ಲಿ ಒಂದು ರೀತಿಯ ಜಂಭವಿದ್ದುದನ್ನು ತಾಯಿ ಗುರುತಿಸಿದಳು.

ಈಗ ಆಕೆ ಪಾದಗಳವರೆಗೂ ಇದ್ದ ಲಂಗವನ್ನು, ಬೇಸಿಗೆಯ ಬೂದು ಬಣ್ಣದ ಪೋಷಾಕನ್ನು, ಧರಿಸಿದ್ದಳು. ಈ ಉಡುಗೆಯಲ್ಲಿ ಆಕೆ ಮತ್ತಷ್ಟು ಎತ್ತರವಾಗಿ ಕಾಣುತ್ತಿದ್ದಳು. ಕಣ್ಣುಗಳು ಹೆಚ್ಚು ಕಪ್ಪೆನಿಸಿದವು. ಚಲನವಲನದಲ್ಲಿ ಹೆಚ್ಚಿನ ಗಾಂಭೀರ್ಯವಿತ್ತು.

ಊಟವಾದ ಬಳಿಕ ನಿಕೊಲಾಯ್ ಹೇಳಿದ:

"ಇನ್ನೊಂದು ಕೆಲಸ ನಿನಗಾಗಿ ಕಾದಿದೆ, ಸೋಫಿಯ. ರೈತರಿಗಾಗಿ ನಾವೊಂದು ಪತ್ರಿಕೆ ಹೊರಡಿಸ್ತೀವಿ ಅಂತ ಹಿಂದೆ ಒಪ್ಪಿಕೊಂಡಿದ್ದೆವು ನೋಡು. ಆದರೆ ಈಚೆಗಿನ ದಸ್ತಗಿರಿಗಳ ಕಾರಣದಿಂದ, ಆ ಪತ್ರಿಕೆಗಳನ್ನು ಹಂಚೋ ಮನುಷ್ಯನ ಸಂಪರ್ಕ ತಪ್ಪಿ ಹೋಯಿತು. ಅವನನ್ನ ಹುಡುಕಿ ಹಿಡಿಯೋದರಲ್ಲಿ ನಮಗೆ ಸಹಾಯ ಮಾಡೋದು ಪೆಲಗೇಯ ನೀಲೊವ್ನ ಒಬ್ಬಳಿಂದಲೇ ಸಾಧ್ಯ. ಅವಳ ಜತೇಲಿ ನೀನು ಆ ಹಳ್ಳಿಗೆ ಹೋಗಿ ಬರ್ಬೇಕು. ಆದಷ್ಟು ಬೇಗನೆ ಆ ಕೆಲಸ ಮಾಡು."

"ಆಗಲಿ," ಎಂದಳು ಸೋಫಿಯ, ಸಿಗರೇಟು ಹಚ್ಚುತ್ತಾ: "ನಾವು ಹೋಗೋಣ ಅಲ್ವೆ, ಪೆಲಗೇಯ ನೀಲೊವ್ನ?"

"ಓಹೋ, ಖಂಡಿತವಾಗಿ."

"ಆ ಹಳ್ಳಿ ಬಹಳ ದೂರವೆ?"

"ಸುಮಾರು ಐವತ್ತು ಮೈಲಿ."

"ಸರಿ.... ಈಗ ನನಗೆ ಒಂದಿಷ್ಟು ಸಂಗೀತ ಬೇಕು. ನಾನು ಪಿಯಾನೋ ಬಾರಿಸ್ತಾ ಇದ್ದರೆ ತಡಕೊಳ್ಳೋಕೆ ಆಗುತ್ತೆ, ಪೆಲಗೇಯ ನೀಲೊವ್ನ?"

"ನನ್ನ ವಿಷಯ ಚಿಂತಿಸ್ಬೇಡಿ. ನಾನು ಇಲ್ಲಿ ಇಲ್ಲವೇ ಇಲ್ಲಾಂತ ಭಾವಿಸ್ಕೊಳ್ಳಿ," ಎಂದು ತಾಯಿ ಸೋಫಾದ ಮೂಲೆಯಲ್ಲಿ ಕುಳಿತಳು. ಆಗ ಅಕ್ಕನೂ ತಮ್ಮನೂ ಅಷ್ಟಾಗಿ ತಾಯಿಯ ಬಗೆಗೆ ಗಮನ ಕೊಡದೇ ಹೋದರೂ, ಆಗಾಗ್ಗೆ ಸೂಕ್ಷ್ಮವಾಗಿ ಆಕೆಯನ್ನು ಮಾತುಕತೆಗೆ ಎಳೆಯುತ್ತಿದ್ದರು.

"ಕೇಳು, ನಿಕೊಲಾಯ್! ಇದು ಗ್ರೀಗ್‌ನ ರಚನೆ. ಈ ದಿನ ಬರ್‍ತಾ ತಂದೆ.... ಕಿಟಕಿ ಮುಚ್ಚು."

ಸ್ವರಚಿಹ್ನೆ ಪುಸ್ತಕದ ಹಾಳೆಯನ್ನು ತೆರೆದು ಎಡಗೈಯಲ್ಲಿ ಮೃದುವಾಗಿ ಸೋಫಿಯ ಬಾರಿಸತೊಡಗಿದಳು. ಮನೆಗಳು ಆಳವಾಗಿ ಪರಸ್ಪರ ಹೊದಿಕೆಯಾಗಿ ಮಿಡಿದುವು. ಕ್ಷೀಣವಾದ ನಿಟ್ಟುಸಿರೊಡನೆ ಇನ್ನೊಂದು ಸ್ವರ ಸೇರಿಕೊಂಡಿತು. ಬಲಗೈಯ ಬೆರಳುಗಳ ಕೆಳಗಿಂದ, ಪಿಯಾನೋದ ಕರಿ ಹಲಗೆಯ ಹಿನ್ನೆಲೆಯಲ್ಲಿ ಭಯಗೊಂಡ ಹಕ್ಕಿಗಳ ಹಾಗೆ ಧಾವಿಸುತ್ತ ಥೀಂಗುಡುತ್ತ, ಮಧುರ ಸ್ವರಗಳು ಗೊಂಚಲು ಗೊಂಚಲಾಗಿ ಹಾರಿಬಂದುವು.

ತಾಯಿಯ ಪಾಲಿಗೆ ಅದು ಮೊದಮೊದಲು ಅರಾಜಕ ಸ್ವರಗಳ ಕೋಲಾಹಲ ವಾಗಿತ್ತು; ಹೃದಯಸ್ಪರ್ಶಿಯಾಗಿರಲಿಲ್ಲ. ಆ ವಾದನದ ಕ್ಲಿಷ್ಟ ನೆಯ್ಗೆಯಲ್ಲಿ ಸುಸ್ವರವನ್ನು ಗುರುತಿಸಲು ತಾಯಿಯ ಕಿವಿ ಸಮರ್ಥವಾಗಲಿಲ್ಲ. ಸುವರ್ಣ ಬಣ್ಣದ ಬೆರಳುಗಳ ಕಿರೀಟ ಹೊತ್ತಿದ್ದ ಸೋಫಿಯಳ ಗಂಭೀರ ಮುಖವನ್ನೇ ದಿಟ್ಟಿಸುತ್ತ ನಿಕೊಲಾಯ್ ಸೋಫಾದ ಇನ್ನೊಂದು ಮೂಲೆಯಲ್ಲಿ ಕಾಲುಗಳನ್ನು ಮಡಚಿ ಕುಳಿತಿದ್ದ. ತಾಯಿ, ಕನಸು ಕಾಣುವವಳಂತೆ ಆತನನ್ನೇ ನೋಡುತ್ತಲಿದ್ದಳು. ಸೂರ್ಯನ ಕಿರಣಗಳು ಸೋಫಿಯಳ ತಲೆ ಭುಜಗಳನ್ನು ಬೆಳಗಿಸಿ, ಕೆಳಕ್ಕೆ ಪಿಯಾನೋದತ್ತ

ಇಳಿದು, ಆಕೆಯ ಬೆರಳುಗಳನ್ನು ಮುದ್ದಿಸುತ್ತಿದ್ದವು.... ಪಿಯಾನೋದ ಸುಸ್ವರ ಕೊಠಡಿಯಲ್ಲೆಲ್ಲ ತುಂಬಿ ಹರಿಯಿತು. ತಾಯಿಯ ಅರಿವಿಲ್ಲದೆಯೇ ಹೃದಯವನ್ನದು ಹೊಕ್ಕಿತು.

ಯಾವ ಕಾರಣಕ್ಕಾಗಿಯೋ ಏನೋ ತಾಯಿಯ ಗತಕಾಲದ ಕರಿಯ ಆಳದಿಂದ, ಎಂದೋ ಮರೆತು ಹೋಗಿದ್ದೊಂದು ಮಹಾ ನೋವು, ಅತ್ಯಂತ ಸ್ಪಷ್ಟವಾಗಿ ಮತ್ತೊಮ್ಮೆ ರೂಪು ತಳೆಯಿತು.

ಒಂದು ರಾತ್ರೆ ಆಕೆಯ ಗಂಡ ಕುಡಿದು ಅಮಲೇರಿ ಬಲು ತಡವಾಗಿ ಮನೆಗೆ ಬಂದಿದ್ದ. ಆಕೆಯ ತೋಳನ್ನು ಹಿಡಿದು, ಹಾಸಿಗೆಯಿಂದ ನೆಲಕ್ಕೆಳೆದು, ಕಾಲಿನಿಂದ ತುಳಿದು ಹೇಳಿದ್ದ:

"ಇಲ್ಲಿಂದ ಹೊರಟು ಹೋಗು, ಬೇವಾರ್ಸಿ! ನೀನು ನನ್ನನ್ನ ಸಾಕ್ಮಾಡ್ಬಿಟ್ಟಿದ್ದೀಯ!"

ಆತನ ಹೊಡೆತಗಳಿಂದ ತಪ್ಪಿಸಿಕೊಳ್ಳುವುದಕ್ಕೋಸ್ಕರ ತಾಯಿ ಎರಡು ವರ್ಷದ ತನ್ನ ಮಗುವನ್ನೆತ್ತಿಕೊಂಡು ತನಗೆ ರಕ್ಷಣೆಯಾಗಿ ಎದೆಗಪ್ಪಿಕೊಂಡು ಮಂಡಿಯೂರಿ ಕುಳಿತಳು. ಬೆಚ್ಚಗಿದ್ದ ನಗ್ನವಾದ ಭಯಗೊಂಡ ಮಗು ಆಕೆಯ ಹಿಡಿತದಿಂದ ತಪ್ಪಿಸಿಕೊಳ್ಳಲೆತ್ನಿಸುತ್ತ ಅತ್ತು ರಂಪಮಾಡಿತ್ತು.

"ಹೊರಟು ಹೋಗು!" ಎಂದು ಮತ್ತೊಮ್ಮೆ ಕೂಗಾಡಿದ ಗಂಡ.

ಆಕೆ ಆಗ ಹಾರಿ ಎದ್ದು ಅಡುಗೆಮನೆಗೆ ಧಾವಿಸಿದಳು. ಅವಸರವಾಗಿ ಹೆಗಲ ಮೇಲೆ ಜಾಕೀಟು ಹಾಕಿಕೊಂಡು, ಶಾಲಿನಲ್ಲಿ ಮಗುವನ್ನು ಸುತ್ತಿ, ರಾತ್ರೆಯ ಉಡುಗೆಯಲ್ಲೇ ಮೌನವಾಗಿ, ಅಳದೆ ಗೊಣಗದೆ, ಬರಿಗಾಲಿನಲ್ಲೇ ಬೀದಿಗಿಳಿದಳು. ಅದು ಮೇ ತಿಂಗಳು. ಚಳಿ ರಾತ್ರಿ. ಬೀದಿಯ ಹುಡಿ ಮಣ್ಣು ಪಾದಗಳಿಗೆ ತಣ್ಣನೆ ಅಂಟಿಕೊಂಡಿತು. ಕಾಲಿನ ಬೆರಳುಗಳೆಡೆಯಿಂದ ಹಸಿಹಸಿಯಾಗಿ ಮೇಲೇರಿ ಬಂತು. ಮಗು ಅತ್ತಿತು, ತುಳಿದಾಡಿತು. ತಾಯಿ, ಎದೆಗಪ್ಪಿಕೊಂಡು ಮಂಡಿಯೂರಿ ಕುಳಿತಳು, ಭೀತಿಯಿಂದ ನಡುಗುತ್ತ, ಬೀದಿಯುದ್ದಕ್ಕೂ ಓಡಿದಳು. ಓಡುತ್ತ, ಅಳದಂತೆ ಮಗುವನ್ನು ಸಂತೈಸಿದಳು.

"ಆ....ಆ...! ಆ.... ಆ.... ಆ!... ಆ.... ಆ.... ಆ!"

ಬೆಳಗಾಗುವ ಹೊತ್ತಿಗೆ ಆಕೆಗೆ ನಾಚಿಕೆಯಾಯಿತು. ಆ ಬಟ್ಟೆಯಲ್ಲೆ ತನ್ನನ್ನು ಬೀದಿಯಲ್ಲಿ ಯಾರಾದರೂ ನೋಡಬಹುದೆಂದು ಭಯವಾಯಿತು. ಅದಕ್ಕಾಗಿ ಆಕೆ ಜವುಗಿನತ್ತ ಹೋಗಿ, ಪೊದೆಪೊದರುಗಳ ಕೆಳಗೆ ಕುಳಿತಳು. ಇನ್ನೂ ಕತ್ತಲಿತ್ತು. ದೀರ್ಘಹೊತ್ತು ತೆರೆದ ಕಣ್ಣುಗಳಿಂದ ಕತ್ತಲನ್ನೆ ನೋಡುತ್ತ, ನಿದ್ದೆಹೋಗುತ್ತಿದ್ದ ಮಗುವನ್ನೂ ಹೃದಯದೊಳಗಿನ ನೋವನ್ನೂ ಸಂತೈಸಲೆಂದು "ಆ.... ಆ...! ಆ.... ಆ.... ಆ...!" ಎಂದು ರಾಗವೆಳೆಯುತ್ತ, ತಾಯಿ ಕುಳಿತಳು.

ಆಕೆ ಅಲ್ಲಿದ್ದಂತೆ, ಕರಿಯ ಹಕ್ಕಿಯೊಂದು ಮೌನವಾಗಿ ಆಕೆಯ ಬಳಿಯಿಂದಲೇ

ಹಾರಿಹೋಯಿತು. ಆಗಿನ ಮನೋಸ್ಥಿತಿಗೆ ಭಂಗ ಬಂದು ತಾಯಿ ಗಾಬರಿಯಾಗಿ ಎದ್ದಳು. ಚಳಿಯಿಂದ ನಡುಗುತ್ತ ಮನೆಯತ್ತ – ತನಗೆ ಪರಿಚಿತವಾದ ಹೊಡೆತ ಅವ ಮಾನಗಳ ಭೀಕರ ಬದುಕಿನತ್ತ – ಆಕೆ ಹೊರಟಳು....

ಕೊನೆಯ ಬಾರಿ ಮನೆ ಮೀಟಿತು. ಶೀತಲವಾದ ಯಾವ ಯೋಚನೆಯೂ ಇಲ್ಲದ ಬಿಟ್ಟುಸಿರಿನೊಡನೆ ಆ ಸ್ವರ ವಾತಾವರಣದಲ್ಲಿ ನಂದಿ ಹೋಯಿತು.

ಸೋಫಿಯ ತಮ್ಮನತ್ತ ತಿರುಗಿ ಶಾಂತವಾಗಿ ಕೇಳಿದಳು.

"ನಿನಗೆ ಹಿಡಿಸಿತೆ?"

"ಓಹೋ! ಹಿಡಿಸ್ತು, ತುಂಬಾ ಹಿಡಿಸ್ತು," ಎಂದು ಆತ ನಿದ್ದೆಯಿಂದ ಎಚ್ಚ ತ್ತವನಂತೆ ಉತ್ತರವಿತ್ತ.

ನೆನಪುಗಳ ಪ್ರತಿಧ್ವನಿ ನಡುಗುತ್ತ ತಾಯಿಯ ಹೃದಯದಲ್ಲಿ ಮೊರೆಯಿತು. ಅಲ್ಲೇ ಇನ್ನೊಂದೆಡೆ ಬೇರೊಂದು ಯೋಚನೆ ತಲೆದೋರಿತು:

"ಜೊತೆಯಾಗಿ ನೆಮ್ಮದಿಯಿಂದ ಪ್ರೀತಿಯಿಂದ ಬದುಕುವ ಜನರೂ ಇದ್ದಾರೆ. ಆ ಕರಿಯ ಬದುಕಿನ ಜನರ ರೀತಿ ಇವರೇನೂ ಜಗಳವಾಡುವುದಿಲ್ಲ: ವೋದ್ಕ ಕುಡಿ ಯುವುದಿಲ್ಲ; ತುಣುಕು ರೊಟ್ಟಿಗಾಗಿ ಕಾದಾಡುವುದಿಲ್ಲ......"

ಸೋಫಿಯ ಸಿಗರೇಟು ಹಚ್ಚಿದಳು. ಹೆಚ್ಚು ಕಡಮೆ ಎಡೆಬಿಡದೆ ಸೇದುತ್ತಿ ದ್ದಳಾಕೆ.

"ಇದು ದಿವಂಗತ ಕೋಸ್ತ್ಯನ ಮೆಚ್ಚುಗೆಯ ಹಾಡು!" ಎಂದಳು ಸೋಫಿಯ ಆಳವಾಗಿ ಉಸಿರುತೆಗೆದು, ಮತ್ತೊಮ್ಮೆ ಪಿಯಾನೋದ ಸ್ವರ ಹಲಿಗೆಯ ಮೇಲೆ ಬೆರಳಾಡಿಸಿ, ದುಃಖಪೂರ್ಣವಾದೊಂದು ಮನೆಯನ್ನು ಮೃದುವಾಗಿ ಮೀಟಿದಳು. "ಅವನಿಗೋಸ್ಕರ ಪಿಯಾನೋ ಬಾರಿಸೋದು ಎಷ್ಟೊಂದು ಪ್ರಿಯವಾಗಿತ್ತು ನನಗೆ! ಎಷ್ಟು ಸೂಕ್ಷ್ಮ ಜೀವಿಯಾಗಿದ್ದ ಆತ! ಪ್ರತಿಯೊಂದಕ್ಕೂ ಆ ಹೃದಯ ಮಿಡಿಯು ತ್ತಿತ್ತು, ತುಂಬಿ ಹರಿಯುತ್ತಿತ್ತು!"

"ಈಕೆ ತನ್ನ ಗಂಡನ ವಿಷಯ ಯೋಚಿಸ್ತಿರ್ಬೇಕು. ಅದೂ ಮುಗುಳ್ನಗುತ್ತ ಯೋಚಿಸ್ತಿದ್ದಾಳೆ," ಎಂದು ತಾಯಿ ಮನಸ್ಸಿನಲ್ಲೆ ಅಂದುಕೊಂಡಳು.

ಸ್ವರ ಹಲಗೆಯ ಮೇಲೆ ಮೆಲ್ಲನೆ ಬೆರಳಾಡಿಸುತ್ತ ಮೆಲುದನಿಯಲ್ಲಿ ಸೋಫಿಯ ಮುಂದುವರಿಸಿದಳು:

"ನನಗೆ ಎಷ್ಟೊಂದು ಸುಖಕೊಟ್ಟ! ಹ್ಯಾಗೆ ಬದುಕ್ಬೇಕು ಅನ್ನೋದು ಅವನಿಗೆ ಎಷ್ಟು ಚೆನ್ನಾಗಿ ಗೊತ್ತಿತ್ತು!"

"ಹೌದು, ಅವನಿಗೆ ಹಾಡುವ ಹೃದಯವಿತ್ತು" ಎಂದು ನಿಕೊಲಾಯ್, ತನ್ನ ಗಡ್ಡವನ್ನು ತೀಡುತ್ತಾ, ಧ್ವನಿಗೂಡಿಸಿದ.

ಅದೇ ಆಗ ಹಚ್ಚಿದ ಸಿಗರೇಟನ್ನು ಎಲ್ಲಿಗೋ ಎಸೆದು, ತಾಯಿಯತ್ತ ತಿರುಗಿ, ಸೋಫಿಯ ಕೇಳಿದಳು:

"ನಾನು ಮಾಡೋ ಸದ್ದಿನಿಂದ ನಿಮಗೆ ಬೇಸರವಾಗೋದಿಲ್ಲವಲ್ಲ !"

ಆ ಮಾತಿನಿಂದ ತನಗಾದ ನೋವನ್ನು ತಾಯಿ ಮರೆಮಾಚುವುದಾಗಲಿಲ್ಲ:

"ನನ್ನನ್ನು ಗಮನಿಸಲೇಬೇಡಿ. ನನಗೆ ಅರ್ಥವಾಗೋದಿಲ್ಲ. ನಾನು ಸುಮ್ನೆ ಕೇಳ್ತಾ, ನನ್ನದೇ ಏನೋ ಯೋಚನೆ ಮಾಡ್ತಾ, ಕೂತಿರ್ತೀನಿ ಅಷ್ಟೆ."

ಸೋಫಿಯಗೆ ಆ ಉತ್ತರದಿಂದ ಸಮಾಧಾನವಾಗಲಿಲ್ಲ.

"ನೀವು ತಿಳಕೋಬೇಕೂಂತ ನನ್ನ ಅಪೇಕ್ಷೆ! ಹೆಂಗಸು – ಅದೂ ದುಃಖಿನಿಯಾಗಿರುವಾಗ, ಸಂಗೀತವನ್ನ ಖಂಡಿತ ಅರ್ಥಮಾಡಿಕೊಳ್ಳಬಲ್ಲಳು."

ಆಕೆ ತೀಕ್ಷ್ಣವಾಗಿ ಸ್ವರಹಲಗೆಗಳನ್ನೊತ್ತಿದಳು. ಭೀಕರವಾರ್ತೆಯನ್ನು ಕೇಳಿ ತೆಂಬಂತೆ ಪಿಯಾನೋ ಕೂಗಿತು. ದಂಗು ಬಡಿಸುವ ಆ ವಾರ್ತೆ ಹೃದಯಕ್ಕೇ ಹೊಡೆದಿರಬೇಕು. ಉತ್ತರ ರೂಪವಾಗಿ, ಬೆದರಿದ ಎಳೆಯ ಸ್ವರಗಳು ಎದ್ದು ಹಾರಿ, ಧಾವಿಸಿ ಹೋದುವು. ಮತ್ತೊಮ್ಮೆ ಗಟ್ಟಿಯಾಗಿ, ಇನ್ನೆಲ್ಲ ಸ್ವರಗಳನ್ನೂ ಅಡಗಿಸಿ, ಕ್ರೋಧದ ಧ್ವನಿ ಬಂತು. ಏನೋ ಮಹಾ ದುರದೃಷ್ಟಕರ ಘಟನೆಯಾಗಿರಬೇಕು. ಆದರೆ ಅದರಿಂದ ಉಂಟಾದುದು ಕ್ರೋಧದ ಭಾವನೆಯೇ ಹೊರತು ಕನಿಕರವಲ್ಲ. ಆ ಬಳಿಕ ಬಲವಾದೊಂದು ಕಂಠದ ಸರಳವಾದ ಸುಂದರವಾದ ಮನಮೆಚ್ಚಿಸುವ ತನ್ನೆಡೆಗೆ ಸೆಳೆಯುವ ಸ್ವರದ ಹಾಡು ಕೇಳಿಸಿತು.

ತಾಯಿಯ ಹೃದಯ, ಈ ಜನರನ್ನು ಕುರಿತು ಕರುಣೆಯ ಒಳ್ಳೆಯ ಮಾತನ್ನಾಡಬೇಕೆಂಬ ಆಸೆಯಿಂದ ತುಂಬಿತು. ಪಿಯಾನೋ ವಾದನದಿಂದ ಆಕೆ ಮತ್ತಳಾಗಿದ್ದಳು. ಈ ಅಕ್ಕನಿಗೂ ತಮ್ಮನಿಗೂ ನೆರವಾಗುವ ಸಾಮರ್ಥ್ಯ ಖಂಡಿತವಾಗಿಯೂ ತನಗಿದೆ ಎಂಬ ನಂಬುಗೆಯಿಂದ ಆಕೆ ಮುಗುಳ್ನಕ್ಕಳು.

ತಾಯಿ ಸುತ್ತಲೂ ನೋಡಿದಳು – ನೆರವಾಗಲು ಆಕೆ ಏನು ಮಾಡಬೇಕು? ಸದ್ದಿಲ್ಲದೆ ಅಡುಗೆಮನೆಗೆ ನುಸುಳಿ ತಾಯಿ ಸಮೊವಾರನ್ನು ಸಿದ್ಧಪಡಿಸಿದಳು. ಅವರಿಗಾಗಿ ಏನಾದರೂ ಮಾಡಬೇಕೆಂಬ ಆಸೆ ಮನದಲ್ಲಿಯೇ ಉಳಿಯಿತು. ಎಲ್ಲರನ್ನೂ ಉದ್ದೇಶಿಸಿ ಆಡುವ ಮಾತುಗಳಿಂದ ತನ್ನ ಹೃದಯವನ್ನು ಸಂತೈಸುವ ಹಾಗೆ, ಸಂತೋಷದ ನಗೆಯೊಡನೆ ಆಕೆ, ಲೋಟಗಳಿಗೆ ಚಾ ಸುರಿಯುತ್ತ ಹೇಳಿದಳು:

"ಕರಿಯ ಬದುಕಿನ ಜನರಾದ ನಮಗೆ ಪ್ರತಿಯೊಂದೂ ಅರ್ಥವಾಗ್ತದೆ. ಆದರೆ ಮಾತುಗಳಲ್ಲಿ ಅದನ್ನು ಹೇಳೋದು ಕಷ್ಟ. ನಮಗೆ ನಾಚಿಕೆಯೂ ಆಗ್ತದೆ – ಯಾಕೆಂದರೆ, ನಮಗೆ ಅರ್ಥವಾದರೂ, ಹೇಳೋದಕ್ಕೆ ತಿಳೀದು ಅಂತ. ಎಷ್ಟೋ ಸಲ ಈ ಅವಮಾನದಲ್ಲಿ ನಮ್ಮ ವಿಚಾರಗಳಿಗಾಗಿ ನಾವೇ ಸಿಟ್ಟಿಗೇಳ್ತೇವೆ. ಬದುಕು ಎಲ್ಲಾ ದಿಕ್ಕಿನಿಂದಲೂ ನಮಗೆ ಹಿಂಸೆಕೊಡ್ತಾನೇ ಇರ್ತದೆ. ವಿರಮಿಸ್ಬೇಕೂಂತ ಅಪೇಕ್ಷೆಯಾಗ್ತದೆ. ಆದರೆ ನಮ್ಮ ವಿಚಾರಗಳು ವಿಶ್ರಾಂತಿ ಕೊಡೋದಿಲ್ಲ."

ತಾಯಿಯ ಮಾತಿಗೆ ಕಿವಿಗೊಡುತ್ತ ನಿಕೊಲಾಯ್ ತನ್ನ ಕನ್ನಡಕವನ್ನೊರೆಸಿದ. ಸೋಫಿಯ ತನ್ನ ವಿಶಾಲ ಕಣ್ಣುಗಳನ್ನು ತೆರೆದು ಆಲಿಸುತ್ತಿದ್ದಳು. ಆರುವ

ಸ್ಥಿತಿಯಲ್ಲಿದ್ದ ಸಿಗರೇಟನ್ನು ಸೇದಲೂ ಮರೆತಳು. ತನ್ನ ಸೋದರನತ್ತ ಅರೆತಿರುಗಿ, ಬಲಗೈಯಿಂದ ಆಗಾಗ್ಗೆ ಮೃದುವಾಗಿ ಸ್ವರಹೊರಡಿಸುತ್ತ, ಪಿಯಾನೋದ ಬಳಿಯಲ್ಲೆ ಆಕೆ ಕುಳಿತಿದ್ದಳು. ತಾಯಿ ತನ್ನೊಳಗಿನ ಭಾವನೆಗಳಿಗೆ ರೂಪುಗೊಟ್ಟು ಹೇಳುತ್ತಿದ್ದ ಸರಳವಾದ ಹೃದಯಸ್ಪರ್ಶಿಯಾದ ಮಾತುಗಳೊಡನೆ ಆ ಸ್ವರಗಳು ಮೃದುವಾಗಿ ಬೆರೆತುವು.

"ಈಗ ನನ್ನ ವಿಷಯವಾಗಿಯೂ, ಬೇರೆ ಜನರ ವಿಷಯವಾಗಿಯೂ ಸ್ವಲ್ಪ ಹೇಳಬಲ್ಲೆ. ಯಾಕೆಂದರೆ ಈಗ ನನಗೆ ಅರ್ಥವಾಗ್ತಿದೆ; ನಾನು ಹೋಲಿಸಿ ನೋಡ ಬಲ್ಲೆ. ಹಿಂದೆಯಾದರೆ, ಹೋಲಿಸಿ ನೋಡೋದಕ್ಕೆ ಏನೂ ಇರ್ಲಿಲ್ಲ. ಆಗ ನಮ್ಮ ಜೀವನದಲ್ಲಿ ಎಲ್ಲರದೂ ಒಂದೇ ರೀತಿಯಾಗಿತ್ತು. ಆದರೆ ಈಗ ಬೇರೆ ಜನ ಹ್ಯಾಗೆ ಜೀವಿಸ್ತಾರೆ ಅನ್ನೋದು ನನಗೆ ಗೊತ್ತಾದಾಗ, ನಾನು ಹ್ಯಾಗೆ ಜೀವಿಸ್ತಿದ್ದೆ ಅನ್ನೋದು ನೆನಪಾದಾಗ – ಅಯ್ಯೋ, ಅದು ಬಹಳ ಕಹಿಯಾದ ವಿಷಯ."

ಸ್ವರತಗ್ಗಿಸಿ ತಾಯಿ ಮುಂದುವರಿಸಿದಳು:

"ಬಹುಶಃ ನಾನು ಸರಿಯಾದ ರೀತೀಲಿ ಹೇಳ್ತಿಲ್ವೇನೋ.... ಅಥವಾ ಹೇಳೋದ್ರಲ್ಲೆಲ್ಲಾ ಅರ್ಥವೇ ಇಲ್ವೇನೋ.... ಎಲ್ಲಾ ನಿಮಗೆ ಗೊತ್ತಿರೋದೇ...."

ಆಕೆಯ ಧ್ವನಿ ಅಶ್ರುಪೂರ್ಣವಾಗಿತ್ತು; ಆದರೆ ಕಣ್ಣುಗಳು ಅವರನ್ನು ನೋಡುತ್ತಂತೆ ಮುಗುಳ್ನಗುತ್ತಿದ್ದುವು.

"ಆದರೆ ನಿಮ್ಮ ಮುಂದೆ ನಾನು ಹೃದಯ ತೆರೆದಿಡ್ಬೇಕು. ಆ ಮೂಲಕ, ನಿಮಗೆ ಒಳಿತಾಗ್ಬೇಕು ಅನ್ನೋ ನನ್ನ ಹಂಬಲ ಎಷ್ಟೊಂತ ನಿಮಗೇ ಅರ್ಥವಾಗ್ಬೇಕು."

"ನಮಗೆ ಅದು ಗೊತ್ತು" ಎಂದು ನಿಕೊಲಾಯ್ ಮೆಲ್ಲನೆ ಹೇಳಿದ.

ತನ್ನೊಳಗಿನ ಹಂಬಲವನ್ನು ಪೂರ್ತಿಪಡಿಸುವುದು ಆಕೆಯಿಂದಾಗಲಿಲ್ಲ. ಆದರೂ ಮತ್ತೊಮ್ಮೆ, ತನಗೆ ಹೊಸತಾಗಿ ಕಂಡುದೆಲ್ಲವನ್ನೂ ತನ್ನ ಪಾಲಿಗೆ ಅತ್ಯಂತ ಮಹತ್ವದ್ದಾದುದೆಲ್ಲವನ್ನೂ ಆಕೆ ಹೇಳಿದಳು. ತನ್ನ ಕಹಿಯಾದ ಬಾಳ್ವೆಯನ್ನು, ಸಹನೆಯಿಂದ ತಾನು ಅನುಭವಿಸಿದ್ದನ್ನು, ಆಕೆ ವಿವರಿಸತೊಡಗಿದಳು. ಮಾತಿನಲ್ಲಿ ಕ್ರೋಧವಿರಲಿಲ್ಲ; ಆದರೆ ವ್ಯಂಗ್ಯಪೂರ್ಣ ವಿಷಾದದ ಛಾಯೆ ಇತ್ತು. ತನ್ನ ಗತಜೀವನದ ಬರಡು ದಿನಗಳ ಸುರುಳಿಯನ್ನಾಕೆ ಬಿಚ್ಚಿದಳು. ಗಂಡನಿಂದ ತನಗೆ ದೊರೆತ ಹೊಡೆತಗಳನ್ನು ಕುರಿತು ಹೇಳಿದಳು. ಎಂತಹ ಅಲ್ಪ ಕಾರಣಗಳಿಗಾಗಿ ಆ ಕಹಿ ಪ್ರಕರಣಗಳಾಗುತ್ತಿದ್ದುವು, ತಾನು ಹೇಗೆ ಅವುಗಳನ್ನು ತಪ್ಪಿಸಲಾರದೇ ಹೋದೆ, ಎಂಬ ವಿಷಯವಾಗಿ ಆಶ್ಚರ್ಯಪಡುತ್ತಾ ಎಲ್ಲವನ್ನೂ ಆಕೆ ವಿವರಿಸಿದಳು....

ಅವರು ಮೌನವಾಗಿ ಕಿವಿಗೊಟ್ಟರು. ಪ್ರಾಣಿಯ ಹಾಗೆಯೋ ಆಕೆಯನ್ನು ನೋಡಿಕೊಳ್ಳಲಾಗಿತ್ತು. ದೀರ್ಘಕಾಲ ಆ ರೀತಿಯಲ್ಲೇ ತಲೆಬಾಗಿ ಎಲ್ಲವನ್ನೂ ಆಕೆ ಸಹಿಸಿದ್ದಳು. ಅಂಥವಳ ಸರಳ ಜೀವನಕಥೆಯ ಹಿಂದಿನ ಆಳವಾದ ಅರ್ಥವನ್ನು ಗ್ರಹಿಸುತ್ತ ಅವರು ಸ್ತಬ್ಧರಾಗಿ ಕುಳಿತರು. ಆ ಒಂದು ನಾಲಿಗೆಯ ಮೂಲಕ ಸಹಸ್ರ

ಬಾಳುವೆಗಳೇ ಮಾತನಾಡಿದ ಹಾಗಿತ್ತು. ಆಕೆಯ ಬದುಕೆಲ್ಲ ಸರಳವಾಗಿತ್ತು, ಸಾಮಾನ್ಯವಾಗಿತ್ತು. ಈ ಭೂಮಿಯ ಮೇಲಿನ ಅಗಣಿತ ಬಹುಸಂಖ್ಯಾತರ ಜೀವನದಷ್ಟೇ ಸರಳ ಮತ್ತು ಸಾಮಾನ್ಯ. ಹಾಗೆ ಆಕೆಯ ಕಥೆ ಒಂದು ಸಂಕೇತದ ಮಹತ್ವವನ್ನು ತಳೆಯಿತು. ನಿಕೊಲಾಯ್ ಮೇಜಿನ ಮೇಲೆ ಮೊಣಕೈಗಳನ್ನೂರಿ, ಅಂಗೈಗಳ ಮೇಲೆ ತಲೆಯಿರಿಸಿ, ಕನ್ನಡಕದೆಡೆಯಿಂದ ಕಿರಿದುಗೊಳಿಸಿದ ಕಣ್ಣುಗಳಿಂದ ತಾಯಿಯನ್ನೇ ನೋಡುತ್ತ ಕುಳಿತ. ಸೋಫಿಯ ಕುರ್ಚಿಯಲ್ಲಿ ಹಿಂದಕ್ಕೆ ಬಾಗಿ ಕುಳಿತಳು. ಆಗಾಗ್ಗೆ ಆಕೆಯ ಶರೀರ ಕಂಪಿಸುತ್ತಿತ್ತು; ತಲೆಯಲುಗುತ್ತಿತ್ತು. ಆಕೆಯ ಮುಖ ಮತ್ತಷ್ಟು ಬಾಡಿದಂತೆ, ಮ್ಲಾನವಾದಂತೆ ತೋರುತ್ತಿತ್ತು. ಸಿಗರೇಟು ಸೇದಲಿಲ್ಲ ಆಕೆ.

ಸೋಫಿಯ ಕೆಳಗೆ ನೋಡುತ್ತಾ ಮೃದುವಾಗಿ ಹೇಳಿದಳು:

"ಒಮ್ಮೆ, ನಾನು ನಿರ್ಭಾಗ್ಯಳೆಂದು ನನಗೆ ಅನಿಸಿತ್ತು. ನನ್ನ ಜೀವನವೆಲ್ಲ ಅರ್ಧ ಎಚ್ಚರ ಅರ್ಧ ನಿದ್ದೆಯ ಸ್ಥಿತಿಯಲ್ಲಿದ್ದ ಹಾಗೆ ತೋರಿತು. ಹಾಗಾದದ್ದು, ನಾನು ಗಡೀಪಾರಾಗಿ ಒಂದು ಸಣ್ಣ ಊರಲ್ಲಿದ್ದಾಗ. ಅಲ್ಲಿ ಮಾಡೋದಕ್ಕೆ ಯಾವ ಕೆಲಸವೂ ಇರಲಿಲ್ಲ. ನನ್ನ ವಿಷಯದ ಹೊರತಾಗಿ ಯೋಚಿಸೋದಕ್ಕೆ ಬೇರೇನೂ ಇರಲಿಲ್ಲ. ಬೇರೆ ಏನೂ ಕೆಲಸವಿಲ್ಲದೆ, ನನ್ನ ದೌರ್ಭಾಗ್ಯವನ್ನು ಒಟ್ಟುಗೂಡಿಸಿ ಅಳೆದು ನೋಡಿದೆ: ನಾನು ಪ್ರೀತಿಸಿದ ತಂದೆಯೊಡನೆ ಜಗಳವಾಡಿದ್ದೆ; ಶಾಲೆಯಿಂದ ನನ್ನನ್ನು ಹೊರ ಹಾಕಿ ನನ್ನನ್ನು ಅವಮಾನಿಸಿದ್ದರು; ನನ್ನನ್ನು ಜೈಲಿಗೆ ಹಾಕಿದ್ದರು; ಆಪ್ತನಾದ ಸಂಗಾತಿಯೊಬ್ಬ ನನಗೆ ದ್ರೋಹ ಬಗೆದಿದ್ದ; ನನ್ನ ಗಂಡನನ್ನು ದಸ್ತಗಿರಿ ಮಾಡಿದ್ದರು; ಪುನಃ ಸೆರೆಮನೆ. ಪುನಃ ಗಡೀಪಾರು; ಆ ಬಳಿಕ ಗಂಡನ ಮರಣ. ಜಗತ್ತಿನಲ್ಲೆಲ್ಲಾ ಅತ್ಯಂತ ದುಃಖಿಯಾದ ವ್ಯಕ್ತಿ ನಾನೇ ಎಂದು ತೋರಿತು. ಆದರೆ ಪೆಲಗೇಯ ನೀಲೊವ್ನ, ನನ್ನ ಎಲ್ಲಾ ದೌರ್ಭಾಗ್ಯ ಮತ್ತು ಅದರ ಹತ್ತರಷ್ಟು ಹೆಚ್ಚು ಒಟ್ಟು ಸೇರಿದರೂ ನಿಮ್ಮ ಒಂದು ತಿಂಗಳ ಬದುಕಿಗೆ ಸರಿಹೋಗಲಾರದವು. ನಿಮ್ಮದು ವರ್ಷಗಟ್ಟಲೆ ನಡೆದ ದಿನನಿತ್ಯದ ಹಿಂಸೆ. ಹೀಗೆ ಸಂಕಟ ಅನುಭವಿಸೋಕೆ ಬೇಕಾದ ಶಕ್ತಿ ನಮ್ಮ ಜನರಿಗೆ ಎಲ್ಲಿಂದ ಬರುತ್ತೆ?"

"ಅಭ್ಯಾಸ ಬಲದಿಂದ!" ಎಂದು ತಾಯಿ ನಿಟ್ಟುಸಿರು ಬಿಟ್ಟು ಉತ್ತರವಿತ್ತಳು.

ನಿಕೊಲಾಯ್ ಯೋಚನಾಮಗ್ನನಾಗಿ ಹೇಳಿದ:

"ಜೀವನವನ್ನು ಸಾಕಷ್ಟು ಚೆನ್ನಾಗಿಯೇ ನಾನು ಬಲ್ಲೆ ಅನಿಸುತ್ತಿತ್ತು. ಆದರೆ, ಪುಸ್ತಕದ ದೃಷ್ಟಿಯ ಬದಲು, ನನ್ನದೇ ಹರುಕು ಮುರುಕು ಗ್ರಹಿಕೆಯ ಬದಲು, ಇಂತಹ ಪ್ರತ್ಯಕ್ಷ ತಿಳಿವಳಿಕೆ ಆದಾಗಲೆಲ್ಲಾ ಜೀವನ ಅತಿ ಭೀಕರವಾಗಿ ಕಾಣ್ತದೆ. ವರ್ಷಗಳನ್ನು ರೂಪಿಸುವ ಕ್ಷುಲ್ಲಕ ಕ್ಷಣಗಳೇ, ಸಣ್ಣ ಪುಟ್ಟ ವಿಷಯಗಳೇ, ಅತಿ ಭೀಕರವಾಗಿರೋದು...."

ಸಂಭಾಷಣೆ ಮುಂದುವರಿಯಿತು, ವಿಸ್ತಾರವಾಯಿತು. ಕಗ್ಗತ್ತಲೆಯ ಬದುಕಿನ ಎಲ್ಲ ಅಂಶಗಳೂ ಚರ್ಚಿಸಲ್ಪಟ್ಟುವು. ತಾಯಿ, ನೆನಪಿನ ಆಳ ಆಳಕ್ಕೆ ಇಳಿದು,

ತನ್ನ ಯೌವನ ಕಾಲದ ಭೀಕರತೆಗೆ ಕಾರಣವಾಗಿದ್ದ ದಿನನಿತ್ಯದ ಅವಮಾನ ಆಘಾತದ ಸರಪಳಿಯನ್ನೇ ಹೊರಗೆಳೆದಳು. ಕೊನೆಯಲ್ಲಿ ಆಕೆ ಅಂದಳು:

"ನಾನೋ, ನೀವು ಮಲಕೊಳ್ಳೋ ಹೊತ್ತಾಗಿದ್ರೂ ಮಾತಾಡ್ತಾನೇ ಇದೀನಿ. ಹೇಳಬೇಕಾದ್ದನ್ನೆಲ್ಲಾ ಹೇಳಿ ಪೂರೈಸೋದುಂಟೆ?"

ಅಕ್ಕನೂ ತಮ್ಮನೂ ತಾಯಿಗೆ ವಂದಿಸಿದರು. ನಿಕೊಲಾಯ್ ವಂದಿಸಿದಾಗ ಎಂದಿಗಿಂತ ಹೆಚ್ಚು ಕೆಳಕ್ಕೆ ಬಾಗಿದಂತೆ, ತನ್ನ ಕೈಯನ್ನು ಭಾವಪೂರ್ಣವಾಗಿ ಎಂದಿಗಿಂತ ಹೆಚ್ಚು ಬಿಗಿಯಾಗಿ ಅದುಮಿದಂತೆ ತಾಯಿಗೆ ತೋರಿತು. ತಾಯಿಯೊಂದಿಗೆ ಕೊಠಡಿಯವರೆಗೂ ಹೋಗಿ ಸೋಫಿಯ ವಂದಿಸಿ, "ಚೆನ್ನಾಗಿ ನಿದ್ದೆ ಮಾಡಿ," ಎಂದಳು. ಆ ಸ್ವರ ಸೌಹಾರ್ದಪೂರ್ಣವಾಗಿತ್ತು. ಆಕೆಯ ಬೂದುಗಣ್ಣುಗಳು ತಾಯಿಯ ಮುಖವನ್ನು ಮುದ್ದಿಸಿದುವು.

ತಾಯಿ, ಸೋಫಿಯಳ ಕೈಯನ್ನು ತನ್ನೆರಡೂ ಕೈಗಳಲ್ಲಿರಿಸಿಕೊಂಡು ಅದುಮಿದಳು.

"ಉಪಕಾರವಾಯ್ತು," ಎಂದಳಾಕೆ.

೪

ಕೆಲದಿನಗಳ ಬಳಿಕ, ತಾಯಿ ಮತ್ತು ಸೋಫಿಯ ಪಟ್ಟಣದ ಬಡ ಹೆಂಗಸರಂತೆ ಉಡುಪನ್ನು ಧರಿಸಿ, ನಿಕೊಲಾಯ್‌ನ ಮುಂದೆ ಕಾಣಿಸಿಕೊಂಡರು. ಹತ್ತಿಯ ಬಟ್ಟೆಯ ಪೋಷಾಕು ಜಾಕೀಟುಗಳನ್ನು ಅವರು ಧರಿಸಿದ್ದರು. ಹೆಗಲ ಮೇಲೆ ಬಟ್ಟೆ ಗಂಟು; ಕೈಯಲ್ಲಿ ಊರುಗೋಲುಗಳು. ಈ ಉಡುಗೆಯಲ್ಲಿ ಸೋಫಿಯ ಸ್ವಲ್ಪ ಗಿಡ್ಡಾಗಿ ಕಂಡಳು; ಆಕೆಯ ಮ್ಲಾನ ಮುಖ ಮತ್ತಷ್ಟು ಗಂಭೀರವಾಗಿ ತೋರಿತು.

ಬೀಳ್ಕೊಟ್ಟಾಗ ನಿಕೊಲಾಯ್ ಅಕ್ಕನ ಕೈಯನ್ನು ಗಟ್ಟಿಯಾಗಿ ಹಿಸುಕಿದ. ತಾಯಿ ಮತ್ತೊಮ್ಮೆ ಅವರ ನಡುವಣ ಸಂಬಂಧದ ಶಾಂತ ಸರಳ ಸ್ವರೂಪವನ್ನು ಗಮನಿಸಿದಳು. ಅವರು ಒಬ್ಬರನ್ನೊಬ್ಬರು ಮುದ್ದಿಸಲಿಲ್ಲ, ಪ್ರೀತಿಯ ಮಾತುಗಳನ್ನಾಡಲಿಲ್ಲ. ಆದರೆ ಪರಸ್ಪರರ ವಿಷಯವಾಗಿ ಅವರಲ್ಲಿ ಆತಂಕ ಎಂದಿನಂತೆಯೇ ಇತ್ತು. ಆಕೆ ಹಿಂದೆ ಜೀವಿಸಿದ್ದ ಕಡೆ, ಜನರು ಯಾವಾಗಲೂ ಒಬ್ಬರನೊಬ್ಬರು ಚುಂಬಿಸುತ್ತಲೇ ಇದ್ದರು, ಪ್ರೀತಿಯ ಮಾತುಗಳನ್ನಾಡುತ್ತಲೇ ಇದ್ದರು. ಆದರೆ, ಹಸಿದ ನಾಯಿಗಳ ಹಾಗೆ, ಒಬ್ಬರನ್ನೊಬ್ಬರು ಕಚ್ಚುವುದನ್ನು ಮಾತ್ರ ಬಿಡುತ್ತಿರಲಿಲ್ಲ.

ಇಬ್ಬರು ಹೆಂಗಸರೂ ಮೌನವಾಗಿ ಶಹರದ ಬೀದಿಗಳಲ್ಲಿ ನಡೆದು, ಹೊಲಗಳತ್ತ ಇಳಿದು, ಎರಡು ಸಾಲಾಗಿ ಬೆಳೆದ ಬರ್ಚ್ ಮರಗಳ ನಡುವಿನ ಕೊರಕಲು ಹಾದಿಯಲ್ಲಿ ಭುಜಕ್ಕೆ ಭುಜ ತಗಲಿಸಿ ನಡೆದರು.

"ನಿಮಗೆ ಆಯಾಸವಾಗುವುದಿಲ್ಲವೆ?" ಎಂದು ತಾಯಿ ಸೋಫಿಯಳನ್ನು ಕೇಳಿದಳು.

"ನಾನೇನು ಜಾಸ್ತಿ ನಡೆದೇ ಇಲ್ಲ ಅಂತಲೇ ನಿಮ್ಮ ಯೋಚ್ನೆ? ಇದೆಲ್ಲಾ ನನಗೆ ಅಭ್ಯಾಸವಾಗಿದೆ."

ಬಾಲ್ಯದ ಚೆಲ್ಲಾಟಗಳನ್ನು ವರ್ಣಿಸುವಂತೆ ಸೋಫಿಯು ತನ್ನ ಕ್ರಾಂತಿಕಾರಿ ಚಟುವಟಿಯನ್ನು ಕುರಿತು ತಾಯಿಗೆ ತಿಳಿಸಿದಳು. ಬೇರೆ ಬೇರೆ ಹೆಸರುಗಳನ್ನಿಟ್ಟು ಕೊಂಡು ಕೃತಕ ದಾಖಲೆ ಪತ್ರಗಳೊಡನೆ ಆಕೆ ಜೀವಿಸಿದ್ದಳು. ವೇಷಪಲ್ಲಟ ಮಾಡಿ ಗೂಢಚಾರರಿಂದ ತಲೆಮರೆಸಿಕೊಂಡಿದ್ದಳು. ಬಹಳ ನಿಷಿದ್ಧ ಸಾಹಿತ್ಯವನ್ನು ನಗರ ದಿಂದ ನಗರಕ್ಕೆ ಸಾಗಿಸಿದ್ದಳು; ಗಡೀಪಾರಾದ ಸಂಗಾತಿಗಳು ತಪ್ಪಿಸಿಕೊಳ್ಳಲು ಏರ್ಪಾಟು ಮಾಡಿ, ವಿದೇಶದ ನಗರಗಳಿಗೆ ಸುರಕ್ಷಿತವಾಗಿ ಅವರನ್ನು ತಲಪಿಸಿದ್ದಳು. ಒಮ್ಮೆ ಆಕೆ ವಾಸವಾಗಿದ್ದ ಮನೆಯಲ್ಲೇ ಒಂದು ಗುಪ್ತ ಮುದ್ರಣಾಲಯವಿತ್ತು. ಪೋಲೀಸ ರಿಗೆ ಅದು ಗೊತ್ತಾಗಿ ಅವರು ಝಡ್ತಿ ಮಾಡಲು ಬಂದರು. ಆಗ ಆಕೆ ಬೇಗನೆ ಕೆಲಸದವಳ ವೇಷ ಧರಿಸಿ, ಪೋಲೀಸರನ್ನು ಹೆಬ್ಬಾಗಿಲಲ್ಲೇ ಇದಿರ್ಗೊಂಡು, ಹಾಗೆಯೇ ತಪ್ಪಿಸಿಕೊಂಡು ಹೊರಟು ಹೋದಳು. ಅದು ಚಳಿಗಾಲವಾಗಿತ್ತು. ಉಟ್ಟ ತೆಳು ಬಟ್ಟೆಯಲ್ಲೇ, ಹತ್ತಿಯ ಕರಿವಸ್ತ್ರವೊಂದನ್ನೇ ತಲೆಗೆ ಬಿಗಿದು, ಕೈಯಲ್ಲಿ ಎಣ್ಣೆಯ ಡಬ್ಬ ಹಿಡಿದುಕೊಂಡು, ಸೀಮೆಎಣ್ಣೆ ತರಲು ಹೊರಟವಳಂತೆ ನಗರದ ಆ ಕೊನೆ ಯವರೆಗೂ ನಡೆದಳು.

ಒಮ್ಮೆ ಆಕೆ ಒಂದು ಅಪರಿಚಿತ ನಗರಕ್ಕೆ ಕೆಲವು ಸ್ನೇಹಿತರನ್ನು ಕಾಣಲೆಂದು ಬಂದಳು. ಅವರು ವಾಸವಾಗಿದ್ದಲ್ಲಿಗೆ ಹೋಗಲೆಂದು ಮಹಡಿಯ ಮೆಟ್ಟಲೇರುತ್ತಿ ದ್ದಂತೆ, ಆ ಫ್ಲಾಟ್‌ನ ಶೋಧನೆ ನಡೆಯುತ್ತಿದ್ದುದು ಆಕೆಗೆ ಕಂಡಿತು. ಹಿಂತಿರುಗುವುದು ಸಾಧ್ಯವಿರಲಿಲ್ಲ. ಆಕೆ ಧೈರ್ಯವಾಗಿ ಅಲ್ಲೇ ಕೆಳಗಡೆ ಇದ್ದ ಫ್ಲಾಟ್‌ನ ಬಾಗಿಲು ತಟ್ಟಿ ದಳು. ಅಲ್ಲಿದ್ದ ಅಪರಿಚಿತ ಜನರೆದುರು ತನ್ನ ಸೂಟ್‌ಕೇಸನ್ನು ಹಿಡಿದು ನಿಂತಳು. ಪರಿಸ್ಥಿತಿಯನ್ನು ಇದ್ದುದಿದ್ದಂತೆ ವಿವರಿಸಿ ಅವಳೆಂದಳು:

"ಬೇಕಿದ್ದರೆ ನೀವು ನನ್ನನ್ನ ಪೋಲೀಸರಿಗೆ ಕೊಡಬಹುದು. ಆದರೆ ಅಂಥ ಕೆಲಸ ನೀವು ಮಾಡ್ತೀರೀಂತ ನಾನು ನಂಬೋದಿಲ್ಲ."

ಅವರು ಎಷ್ಟೊಂದು ಭಯಭೀತರಾದರೆಂದರೆ, ರಾತ್ರೆ ಅರೆಕ್ಷಣವೂ ಅವರಿಗೆ ನಿದ್ದೆ ಹತ್ತಲಿಲ್ಲ. ಪ್ರತಿ ನಿಮಿಷವೂ ಬಾಗಿಲು ತಟ್ಟುವ ಸದ್ದನ್ನೇ ಅವರು ನಿರೀಕ್ಷಿಸು ತ್ತಿದ್ದರು. ಆದರೆ ಸೋಫಿಯಳನ್ನು ಪೋಲೀಸರಿಗೆ ಒಪ್ಪಿಸಲಿಲ್ಲ. ಮರುದಿನ ಬೆಳಿಗ್ಗೆ ತಮ್ಮ ಸಾಹಸವನ್ನು ನೆನೆಸಿಕೊಂಡು ಅವರು ಗಟ್ಟಿಯಾಗಿ ನಕ್ಕರು.

ಮತ್ತೊಮ್ಮೆ ಆಕೆ, ಕ್ರಿಸ್ತ ಸನ್ಯಾಸಿನಿಯ ಹಾಗೆ ವೇಷ ಧರಿಸಿ, ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದಳು. ಆಕೆಯನ್ನು ಹಿಂಬಾಲಿಸುತ್ತಿದ್ದ ಗೂಢಚಾರ ಅದೊಂದೂ ತಿಳಿಯದೆ ಅವಳ ಪಕ್ಕದಲ್ಲೇ ಇದ್ದ. ಎಂತಹ ಚಾತುರ್ಯದಿಂದ ಈ ಹೆಂಗಸನ್ನು ತಾನು ಹಿಂಬಾ ಲಿಸುತ್ತಿರುವೆನೆಂದು ಆಕೆಯೊಡನೆ ಆತ ಜಂಭ ಕೊಚ್ಚಿಕೊಂಡ. ಆಕೆ ಅದೇ ರೈಲಿನಲ್ಲಿ ಸೆಕೆಂಡ್ ಕ್ಲಾಸಿನಲ್ಲಿ ಇದ್ದಳೆಂಬುದು ಅವನ ದೃಢ ನಂಬುಗೆಯಾಗಿತ್ತು. ಪ್ರತಿ ನಿಲ್ದಾ

ಎವಲ್ಲೂ ಕೆಳಕ್ಕಿಳಿದು, ಅವಳಿಗಾಗಿ ಹುಡುಕಿ ಹಿಂತಿರುಗಿ ಸನ್ಯಾಸಿನಿಯೊಡನೆ ಹೇಳುತ್ತಿದ್ದ:
"ಕಾಣಿಸೋದೇ ಇಲ್ಲ. ಬಹುಶಃ ನಿದ್ದೆ ಹೋಗಿರ್ಬೇಕು. ಅವರಿಗೂ ಆಯಾ ಸವಾಗ್ತದೆ. ಅವರ ಜೀವನ ನಮ್ಮದಕ್ಕಿಂತ ಸುಲಭವಾದದ್ದೇನೂ ಅಲ್ಲ."

ಈ ಕತೆಗಳನ್ನು ಕೇಳುತ್ತ ತಾಯಿ ಸೋಫಿಯಳನ್ನು ಪ್ರೀತಿಯಿಂದ ನೋಡುತ್ತ ಸಕ್ಕಳು. ತೆಳುವಾಗಿ ಎತ್ತರವಾಗಿ ಭದ್ರವಾದ ಕಾಲುಗಳನ್ನೆತ್ತಿ ಹಗುರ ಹೆಜ್ಜೆಗಳನ್ನಿ ಡುತ್ತ ಸೋಫಿಯ ನಡೆದಿದ್ದಳು. ಆ ಮಾತಿನಲ್ಲಿ, ನಡಿಗೆಯಲ್ಲಿ, ಉತ್ಸಾಹದಾಯಕ ಒಣ ಸ್ವರದಲ್ಲಿ, ನೇರವಾದ ಆಕೃತಿಯಲ್ಲಿ, ಮನಸ್ಥೈರ್ಯ, ಸರಳ ನಿರ್ಭಯತೆ ಒಡೆದು ತೋರುತ್ತಿದ್ದುವು. ಪ್ರತಿಯೊಂದು ವಿಷಯದಲ್ಲೂ ಯೌವನದ ದೃಷ್ಟಿಯಿತ್ತು ಆಕೆಗೆ. ನೋಡಿದ್ದರಲ್ಲೆಲ್ಲಾ ಸಂತೋಷದಾಯಕವಾದುದೇನನ್ನಾದರೂ ಸೋಫಿಯ ಖಂಡಿತ ವಾಗಿಯೂ ಕಾಣುತ್ತಿದ್ದಳು.

"ಓ ! ಎಷ್ಟೊಂದು ಸೊಗಸಾಗಿದೆ ಆ ದೇವದಾರು ಮರ !" ಎಂದಳು ಸೋಫಿಯ ಒಮ್ಮೆ. ತಾಯಿ ನಿಂತು ನೋಡಿದಳು. ಸೋಫಿಯ ತೋರಿಸಿದ ಮರ, ಇತರ ಮರ ಗಳಿಗಿಂತ ಯಾವ ರೀತಿಯಲ್ಲೂ ಭಿನ್ನವಾಗಿರಲಿಲ್ಲ.

ಸೋಫಿಯಳ ಕಿವಿಯ ಬಳಿ ಇದ್ದ ಬಿಳಿಕೂದಲು ಗಾಳಿಗೆ ಹಾರುತ್ತಿದ್ದುದನ್ನು ಗಮನಿಸುತ್ತಾ ತಾಯಿ, "ಹೌದು, ಸೊಗಸಾದ ಮರ," ಎಂದಳು.

"ನೋಡಿ, ಟಿಟ್ಟಿಭ ಹಕ್ಕಿ !"

ಸೋಫಿಯಳ ಬೂದುಗಣ್ಣುಗಳು ಕರುಣೆಯಿಂದ ಬೆಳಗಿದುವು. ಸ್ವಚ್ಛ ಆಕಾಶ ದಿಂದ ಕೇಳಿ ಬರುತ್ತಿದ್ದ ಅವ್ಯಕ್ತ ಸಂಗೀತವನ್ನು ಸಮೀಪಿಸಲು ಆಕೆಯ ದೇಹ ನಿಡಿದು ಕೊಂಡಿತು. ಕೆಲವೊಮ್ಮೆ ಆಕೆಯ ತೆಳು ದೇಹ ಕೆಳಕ್ಕೆ ಬಾಗುತ್ತಿತ್ತು. ಆಕೆ ಯಾವುದಾ ದರೂ ಕಾಡು ಹೂವನ್ನೆತ್ತಿಕೊಂಡು ಏನಾದರೂ ಹಾಡನ್ನು ಗುಣಗುಣಿಸುತ್ತಾ ತನ್ನ ಸೂಕ್ಷ್ಮನೆಯ ಬೆರಳುಗಳಿಂದ ಆ ದಳಗಳನ್ನು ನೇವರಿಸುತ್ತಿದ್ದಳು.

ಇದರಿಂದೆಲ್ಲ ತಾಯಿ ಆಕರ್ಷಿತಳಾಗಿ ಸೋಫಿಯಳಿಗೆ ಅಂಟಿಕೊಂಡೇ ಅವ ಳಷ್ಟೇ ವೇಗವಾಗಿ ಹೆಜ್ಜೆ ಇಟ್ಟಳು. ಆದರೆ ಒಮ್ಮೊಮ್ಮೆ ಸೋಫಿಯಳ ಮಾತು ತೀಕ್ಷ್ಣ ವಾಗಿರುತ್ತಿತ್ತು. ಅದನ್ನು ಕೇಳಿದಾಗ ತಾಯಿ ಬೇಸರಪಡುತ್ತಿದ್ದಳು. ರೀಬಿನ್ ಇವಳನ್ನು ಮೆಚ್ಚಲಾರ ಎಂದು ತನ್ನೊಳಗೇ ಕಾತರದಿಂದ ಅಂದುಕೊಳ್ಳುತ್ತಿದ್ದಳು.

ಆದರೆ ಮರುಕ್ಷಣವೇ ಸೋಫಿಯ ಸರಳವಾಗಿ ಹೃದಯಸ್ಪರ್ಶಿಯಾಗಿ ಮಾತ ನಾಡುತ್ತಿದ್ದಳು. ಆಗ ತಾಯಿ ಅವಳತ್ತ ನೋಡಿ ಮುಗುಳ್ನಕ್ಕಳು.

"ನೀವು ಎಷ್ಟೊಂದು ಚಿಕ್ಕವರು !" ಎಂದು ನಿಟ್ಟುಸಿರು ಬಿಟ್ಟಳು.

"ನನಗೆ ಆಗಲೇ ಮುವತ್ತೆರಡು ಆಯಿತವ್ವಾ !" ಎಂದು ಸೋಫಿಯ ಉದ್ಗ ರಿಸಿದಳು.

ಪೆಲಗೇಯಳ ಮುಖದ ಮೇಲೆ ಮುಗುಳ್ನಗು ತೇಲಿತು.

"ಅದಲ್ಲ ನಾನು ಹೇಳಿದ್ದು. ನಿಮ್ಮನ್ನು ನೋಡಿದರೆ ಇನ್ನೂ ಹೆಚ್ಚು ವಯ

ಸ್ನಾಗಿದೇಂತ ಯಾರಾದರೂ ಹೇಳಬಹುದು. ಆದರೆ ನಿಮ್ಮ ಮಾತಿಗೆ ಕಿವಿಗೊಟ್ಟು ನಿಮ್ಮ ಕಣ್ಣುಗಳನ್ನು ನೋಡಿದಾಗ, ನನಗೆ ಯಾವಾಗಲೂ ಆಶ್ಚರ್ಯವಾಗುತ್ತೆ. ನೀವು ಚಿಕ್ಕ ಹುಡುಗಿಯ ಹಾಗಿದ್ದೀರಿ. ನೀವು ನಡೆಸ್ತಿರೋದು ಕಷ್ಟದ ಅಪಾಯದ ಜೀವನ. ಆದರೂ ನಿಮ್ಮ ಹೃದಯ ಯಾವಾಗಲೂ ಮುಗುಳ್ನಗ್ತಾನೇ ಇರ್ತದೆ."

"ನನ್ನ ಜೀವನ ಕಷ್ಟದ್ದೂಂತ ನಾನು ಯಾವತ್ತೂ ತಿಳಿದಿಲ್ಲ. ನನ್ನದಕ್ಕಿಂತ ಬೇರೆ ಜೀವನ ಹೆಚ್ಚು ಸ್ವಾರಸ್ಯಕರವಾಗಿದ್ದೀತೆಂದು ನನಗೆ ತೋರೋದಿಲ್ಲ.... ನಿಮ್ಮನ್ನ ನಾನು ನೀಲೊವ್ನ ಅಂತ ಕೂಗಲೆ? ಪೆಲಗೇಯ ಯಾಕೋ ನಿಮಗೆ ಸರಿಹೋಗೋದಿಲ್ಲ."

ಯೋಚಿಸುತ್ತಾ ತಾಯಿ ಹೇಳಿದಳು:

"ಹ್ಯಾಗೆ ಬೇಕಾದರೂ ಕೂಗಿ. ನಿಮಗೆ ಹ್ಯಾಗೆ ಇಷ್ಟವೋ ಹಾಗೆ.... ನಾನು ನಿಮ್ಮನ್ನೇ ನೋಡ್ತಾ ಮಾತು ಕೇಳ್ತಾ ಯೋಚಿಸ್ತಾ ಇರ್ತೀನಿ. ಮಾನವ ಹೃದಯಕ್ಕೆ ಹಾದಿ ಯಾವುದೂಂತ ನೀವು ತಿಳಕೊಂಡು ಬಿಟ್ಟಿದ್ದೀರಿ. ನನಗೆ ಅದರಿಂದ ಸಂತೋಷವಾಗಿದೆ. ನಿಮ್ಮಂಥವರೊಡನೆ ಯಾರಾದರೂ ಯಾವ ಹೆದರಿಕೆಯೂ ಇಲ್ದೆ, ಮನಸ್ಸಿನೊಳಗೆ ಇರೋದನ್ನೆಲ್ಲಾ ಹೇಳ್ತಾರೆ. ತಾವಾಗಿಯೇ ಎಲ್ಲವನ್ನೂ ಮುಂದಿಡ್ತಾರೆ. ನಾನು ಮತ್ತೆ ಮತ್ತೆ ನಿಮ್ಮೆಲ್ಲರ ವಿಚಾರ ಮಾಡ್ತೇನೆ; ನಿಮ್ಮ ಜನರು, ಬದುಕಿನಲ್ಲಿರೋ ಕೆಟ್ಟದ್ದನ್ನು ಕೊನೇದಾಗಿ ಜಯಿಸ್ತಾರೆ – ಖಂಡಿತವಾಗಿ ಜಯಿಸ್ತಾರೆ!"

ಸೋಫಿಯ ಗಟ್ಟಿಯಾಗಿ ಆತ್ಮ ವಿಶ್ವಾಸದಿಂದ ಹೇಳಿದಳು:

"ನಾವು ಜಯಿಸೋದು ಖಂಡಿತ. ಯಾಕೆಂದರೆ ನಾವು ಕೂಲಿಕಾರರ ಜತೆ ಸೇರಿದ್ದೇವೆ. ಅವರಲ್ಲಿ ಮಹಾಶಕ್ತಿಯೊಂದು ಅಡಗಿದೆ. ಅವರೊಡನೆ ಏನು ಬೇಕಾದರೂ ಸಾಧಿಸಬಹುದು. ಬೆಳೆಯೋ ಸ್ವಾತಂತ್ರ್ಯ ಅವರಿಗೆ ಸಿಗೋ ಹಾಗೆ, ಅವರ ಅಂತರಂಗವನ್ನು ಜಾಗೃತಗೊಳಿಸುವುದು ಮಾತ್ರ ಅಗತ್ಯ...."

ಆ ಮಾತುಗಳನ್ನು ಕೇಳಿ ತಾಯಿಯ ಹೃದಯದಲ್ಲಿ ವಿಧ ವಿಧದ ಭಾವನೆಗಳಾದುವು. ಯಾವುದೋ ಕಾರಣಕ್ಕಾಗಿ ಸೋಫಿಯಳ ಬಗೆಗೆ ತಾಯಿಗೆ ಕನಿಕರವೆನಿಸಿತು – ಸ್ನೇಹದ ನೋವನ್ನುಂಟುಮಾಡದ ಕನಿಕರ. ಸೋಫಿಯ ಇನ್ನೂ ಸರಳವಾದ ಮಾತನ್ನಾಡಬೇಕೆಂದು ತಾಯಿ ಬಯಸಿದಳು.

"ನಿಮ್ಮ ಈ ಪ್ರಯತ್ನಕ್ಕೆಲ್ಲಾ ಯಾರು ಪ್ರತಿಫಲ ಕೊಡ್ತಾರೆ?" ಎಂದು ತಾಯಿ ಶಾಂತವಾಗಿಯೂ ವಿಷಾದದಿಂದಲೂ ಕೇಳಿದಳು.

"ನಮಗೆ ಈಗಾಗಲೇ ಪ್ರತಿಫಲ ಸಿಕ್ಕಿದೆ. ನಮಗೆ ತೃಪ್ತಿ ಕೊಡುವಂತ ಬದುಕನ್ನು ನಾವು ಕಂಡುಕೊಂಡಿದ್ದೇವೆ. ಪೂರ್ಣ ಅಂತಃಸ್ಫೂರ್ತಿಯಿಂದ ನಾವು ಬದುಕ್ತಿದೇವೆ. ಜೀವನದಿಂದ ನಾವು ಅಪೇಕ್ಷಿಸುವಂಥಾದ್ದು ಬೇರೇನಿದೆ?"

ಆ ಮಾತಿನ ಧ್ವನಿಯಲ್ಲಿ ಅಭಿಮಾನ ತುಳುಕುತ್ತಿದ್ದಂತೆ ತಾಯಿಗೆ ತೋರಿತು. ಆಕೆ ಸೋಫಿಯಳತ್ತ ನೋಡಿ, ದೃಷ್ಟಿ ತಗ್ಗಿಸಿ, ಮತ್ತೊಮ್ಮೆ ಯೋಚಿಸಿದಳು:

"ಇಲ್ಲ, ರೀಬಿನ್ ಇವಳನ್ನು ಮೆಚ್ಚಲಾರ."

ಅವರು ವೇಗವಾಗಿ, ಆದರೆ ಅವಸರವಿಲ್ಲದೆ ಸೊಗಸಾದ ಗಾಳಿಯನ್ನು ಆಳವಾಗಿ ಎಳೆದುಕೊಳ್ಳುತ್ತ ನಡೆದರು. ತಾಯಿಗೆ ತಾನೊಂದು ಪುಣ್ಯಸ್ಥಳಕ್ಕೆ ಯಾತ್ರೆ ಹೊರಟಿದ್ದ ಹಾಗೆ ತೋರಿತು. ಚಿಕ್ಕವಳಿದ್ದಾಗ ತಾನು ಹಳ್ಳಿಯಿಂದ ಪವಾಡ ವಿಗ್ರಹವನ್ನಿರಿಸಿದ್ದ ದೂರದ ಕ್ರೈಸ್ತ ಸನ್ಯಾಸಿಮಠಕ್ಕೆ ಹೋಗಿ ಬಂದುದನ್ನು ತಾಯಿ ಸಂತೋಷದಿಂದ ಸ್ಮರಿಸಿಕೊಂಡಳು.

ಒಂದೊಂದು ಸಲ ಸೋಫಿಯ ಮೃದುವಾದ ಮಂಜುಳ ಸ್ವರದಲ್ಲಿ ಆಕಾಶವನ್ನು ಕುರಿತೋ ಪ್ರೀತಿಯನ್ನು ಕುರಿತೋ ಹಾಡುತ್ತಿದ್ದಳು; ಕೆಲವು ಸಲ ಹೊಲಗಳನ್ನು, ಕಾಡುಗಳನ್ನು ಇಲ್ಲವೆ ವೋಲ್ಗಾ ನದಿಯನ್ನು ಕುರಿತಾದ ಕವನಗಳನ್ನು ಹೇಳುತ್ತಿದ್ದಳು. ತಾಯಿ ತನಗರಿಯದಂತೆಯೇ, ಸ್ವರ ಮಾಧುರ್ಯಕ್ಕೆ ಮಾರುಹೋಗಿ, ತಾಳಕ್ಕೆ ಸರಿಯಾಗಿ ತಲೆದೂಗುತ್ತಾ ಆಲಿಸುತ್ತಿದ್ದಳು.

ಬೇಸಗೆಯ ಸಂಜೆ ಉದ್ಯಾನವನದ ಬೆಚ್ಚಗಿನ ಮೂಲೆಯಲ್ಲಿದ್ದಂತೆ, ತಾಯಿಯ ಹೃದಯದಲ್ಲಿ ಶಾಂತವಾದ, ಬೆಚ್ಚಗಿನ ವಾತಾವರಣವಿತ್ತು.

೫

ತಲುಪಬೇಕಾಗಿದ್ದ ಹಳ್ಳಿಗೆ ಮೂರನೆಯ ದಿನ ಅವರು ಬಂದು ಸೇರಿದರು. ಹೊಲದಲ್ಲಿ ದುಡಿಯುತ್ತಿದ್ದ ಒಬ್ಬ ರೈತನೊಡನೆ, ಟಾರು ಕಾರ್ಖಾನೆ ಎಲ್ಲಿದೆ ಎಂದು ತಾಯಿ ಕೇಳಿದಳು. ಅದನ್ನು ತಿಳಿದುಕೊಂಡು, ಮರಗಳು ಬೆಳೆದಿದ್ದ ಹಾದಿಯಲ್ಲಿ ಅವರು ಕೆಳಕ್ಕಿಳಿದರು. ಕಡಿದ ಮರಗಳ ಬುಡಗಳೇ ಅಲ್ಲಿ ಇಳಿಯಲು ಮೆಟ್ಟಲುಗಳಾಗಿದ್ದುವು. ಕೆಳಕ್ಕಿಳಿದು ಇಜ್ಜಲು, ಸೌದೆ ಚೂರು, ಟಾರು ಹರಡಿದ್ದ ಜಾಗವನ್ನು ಸೇರಿದರು.

ಸುತ್ತಲೂ ನೋಡಿದಾಗ ತಾಯಿಗೆ ಸಂತೋಷವಾಗಲಿಲ್ಲ. "ಅಂತೂ ಜಾಗ ತಲಪಿದೆವು!" ಎಂದು ಆಕೆ ಹೇಳಿದಳು.

ಮರದ ಕೊಂಬೆ ರೆಂಬೆಗಳನ್ನು ಕಡಿದು ಮಾಡಿದ್ದ ಚಪ್ಪರದ ಕೆಳಗೆ, ನೆಲದೊಳಕ್ಕೆ ಹುಗಿದಿದ್ದ ಗೂಟಗಳಿಗೆ ಮೂರು ಹಲಗೆಗಳನ್ನು ಮೊಳೆ ಹೊಡೆದು ಮಾಡಿದ್ದ ಮೇಜಿತ್ತು. ರೀಬಿನ್ ಮೇಜಿನ ಬಳಿ ಕುಳಿತು ಯೆಫೀಮ್ ಮತ್ತು ಇಬ್ಬರು ಯುವಕರೊಡನೆ ಊಟಮಾಡುತ್ತಿದ್ದನು. ಆತನ ಮೈಗೆಲ್ಲ ಕರಿಯ ಟಾರು ಮೆತ್ತಿಕೊಂಡಿತ್ತು. ಷರಟಿನ ಮುಂಭಾಗ ತೆರೆದಿತ್ತು. ರೀಬಿನ್ ಮೊದಲು ಆ ಹೆಂಗಸರನ್ನು ಕಂಡು ಅಂಗೈಯನ್ನು ಹುಬ್ಬಿನ ಮೇಲಿರಿಸಿ, ದಿಟ್ಟಿಸುತ್ತ ಕಾದು ಕುಳಿತ.

"ನಮಸ್ಕಾರ, ತಮ್ಮ, ಮಿಹಯಿಲ್!" ಎಂದು ತಾಯಿ ದೂರದಿಂದಲೇ ಕೂಗಿದಳು.

ಆತ ಎದ್ದು ನಿಧಾನವಾಗಿ ಅವರೆಡೆಗೆ ನಡೆದ. ತಾಯಿಯನ್ನು ಗುರುತಿಸಿದಾಗ ರೀಬಿನ್, ತನ್ನ ಗಡ್ಡವನ್ನು ಕರಿಯ ಕೈಯಿಂದ ನೇವರಿಸುತ್ತಾ ಮುಗುಳ್ನಕ್ಕ.

ತಾಯಿ ಆತನನ್ನು ಸಮೀಪಿಸಿ ಹೇಳಿದಳು:

"ನಾವು ಯಾತ್ರೆ ಹೋಗ್ತಿದ್ದೇವೆ. ಹೋಗ್ತಾ, ತಮ್ಮ ಇಲ್ಲಿದ್ದಾನೆ, ಅವನನ್ನ ಯಾಕೆ ನೋಡಿಕೊಂಡು ಹೋಗ್ಬಾರ್ದು ಅಂತ ಯೋಚಿಸ್ದೆ.... ಇವಳು ನನ್ನ ಸ್ನೇಹಿತೆ – ಆನ್ನ."

ತನ್ನ ಕಟ್ಟು ಕತೆಯ ಬಗೆಗೆ ಹೆಮ್ಮೆಪಡುತ್ತ ತಾಯಿ, ಕುಡಿಗಣ್ಣಿನಿಂದ ಸೋಫಿ ಯಳ ಗಂಭೀರ ಮುಖವನ್ನು ನೋಡಿದಳು.

ರೀಬಿನ್, "ನಮಸ್ಕಾರ" ಎಂದು, ಒಣನಗೆಯೊಡನೆ, ಆಕೆಯ ಕೈ ಕುಲುಕಿದ. ಸೋಫಿಯಗೆ ಬಾಗಿ ವಂದಿಸಿದ.

"ಸುಳ್ಳಾಡ್ಬೇಡ. ಇದು ನಗರವಲ್ಲ – ಇಲ್ಲಿ ಸುಳ್ಳಿನ ಅಗತ್ಯವಿಲ್ಲ. ಇವರೆಲ್ಲಾ ನಮ್ಮವರೇ."

ಯೆಫೀಮ್, ಮೇಜಿನ ಬಳಿ ಕುಳಿತಲ್ಲಿಂದಲೇ ಯಾತ್ರಿಕರನ್ನು ಅವಲೋಕಿಸಿ, ಪಿಸುಮಾತಿನಲ್ಲಿ ಸಂಗಡಿಗರಿಗೆ ಏನನ್ನೋ ಹೇಳಿದ. ಹೆಂಗಸರು ಬಳಿಗೆ ಬಂದಾಗ ಮೌನವಾಗಿ ಎದ್ದುನಿಂತು ಅವರಿಗೆ ಬಾಗಿ ವಂದಿಸಿದ. ಅವನ ಸಂಗಡಿಗರು, ಅತಿಥಿ ಗಳನ್ನು ಕಂಡೂ ಕಾಣದವರಂತೆ ನಿಶ್ಚಲರಾಗಿ ಕುಳಿತರು.

ಪೆಲಗೇಯಳ ಭುಜವನ್ನು ಮೆಲ್ಲನೆ ಮುಟ್ಟುತ್ತಾ ರೀಬಿನ್ ಹೇಳಿದ:

"ನಾವಿಲ್ಲಿ ಸನ್ಯಾಸಿಗಳ ಹಾಗೆ ಜೀವಿಸ್ತೀವಿ. ನಮ್ಮನ್ನು ನೋಡೋಕೆ ಯಾರೂ ಬರೋದಿಲ್ಲ. ಮಾಲೀಕ ಊರಲ್ಲಿಲ್ಲ. ಅವನ ಹೆಂಡತಿ ಆಸ್ಪತ್ರೇಲಿದ್ದಾಳೆ. ಇಲ್ಲಿ ಹೆಚ್ಚು ಕಡಮೆ ನನ್ನದೇ ಮೇಲ್ವಿಚಾರಣೆ. ಕೂತ್ಕೊಳ್ಳಿ, ತಿನ್ನೋಕೆ ಏನಾದರೂ ಬೇಕೇನೋ.... ಯೆಫೀಮ್, ಸ್ವಲ್ಪ ಹಾಲು ತಾ."

ಯೆಫೀಮ್ ನಿಧಾನವಾಗಿ ಚಪ್ಪರದೊಳಕ್ಕೆ ಹೋದ. ಯಾತ್ರಿಕರು ಬೆನ್ನ ಮೇಲಿನ ಚೀಲಗಳನ್ನು ಕೆಳಕ್ಕಿಳಿಸಿದರು. ಹುಡುಗರಲ್ಲೊಬ್ಬ – ತೆಳ್ಳಗೆ ಎತ್ತರವಿದ್ದ ವನು – ಚೀಲಗಳನ್ನು ತೆಗೆದಿಡಲು ಅವರಿಗೆ ನೆರವಾದ. ಒರಟಾದ ದಪ್ಪನೆಯ ಇನ್ನೊಬ್ಬ ಸಂಗಡಿಗ ಮೇಜಿನ ಮೇಲೆ ಮೊಣಕೈಗಳನ್ನೂರಿ, ತಲೆ ತುರಿಸುತ್ತ ಯಾವುದೋ ರಾಗವನ್ನು ಮೆಲ್ಲನೆ ಹಾಡುತ್ತ, ಯೋಚನಾಮಗ್ನನಾಗಿ ಅವರನ್ನೆ ನೋಡುತ್ತಿದ್ದನು.

ಟಾರು ಮತ್ತು ಕೊಳೆಯುತ್ತಿದ್ದ ಎಲೆಗಳ ಕಟುವಾಸನೆ ಹೆಂಗಸರ ತಲೆ ಗಿರ್ರೆ ನ್ನುವಂತೆ ಮಾಡಿತು.

ಎತ್ತರದ ಹುಡುಗನತ್ತ ಬೊಟ್ಟುಮಾಡಿ ರೀಬಿನ್ ಹೇಳಿದ:

"ಅವನ ಹೆಸರು ಯಾಕೊವ್. ಇನ್ನೊಬ್ಬನು ಇಗ್ನಾತ್. ಹುಂ.... ನಿನ್ನ ಮಗ ಹ್ಯಾಗಿದ್ದಾನೆ?"

ತಾಯಿ ನಿಟ್ಟುಸಿರುಬಿಟ್ಟು, "ಮಗ ಜೈಲಲ್ಲಿ" ಎಂದಳು.

ರೀಬಿನ್ ಉದ್ಗರಿಸಿದ:

"ಪುನಃ ಜೈಲಲ್ಲಿ? ಜೈಲೆಂದರೆ ಇಷ್ಟವೇನೋ!"

ಇಗ್ನಾತ್ ಹಾಡುವುದನ್ನು ನಿಲ್ಲಿಸಿದ. ಯಾಕೊವ್ ತಾಯಿಯ ಕೈಯಿಂದ ನಡೆಗೋಲನ್ನು ತೆಗೆದುಕೊಂಡು ಹೇಳಿದ:

"ಕೂತ್ಕೋ, ಅಮ್ಮ."

"ಯಾಕೆ ನಿಂತಿದ್ದೀರಿ? ಕೂತುಕೊಳ್ಳಿ," ಎಂದು ರೀಬಿನ್ ಸೋಫಿಯಳಿಗೂ ಹೇಳಿದ. ಆಕೆ, ನೆಟ್ಟದೃಷ್ಟಿಯಿಂದ ರೀಬಿನ್ನನ್ನೇ ದಿಟ್ಟಿಸುತ್ತ ಒಂದು ಕೊರಡಿನ ಮೇಲೆ ಕುಳಿತಳು.

ರೀಬಿನ್ ತಾಯಿಯ ಎದುರು ಕುಳಿತು, ತಲೆಯಲುಗಿಸುತ್ತ ಕೇಳಿದ:

"ಯಾವಾಗ ದಸ್ತಗಿರಿ ಮಾಡಿದರು? ನಿನ್ನದೃಷ್ಟ ಚೆನ್ನಾಗಿಲ್ಲ, ನೀಲೊವ್ನ!"

"ಆಗಲಿ ಬಿಡು."

"ರೂಢಿಯಾಯ್ತೇನು?"

"ಹಾಗಲ್ಲ. ರೂಢಿಯಾಗೋದಲ್ಲ. ಆದರೆ ಬೇರೆ ಹಾದಿಯೇ ಇಲ್ಲಾಂತ ನನಗೆ ಸ್ಪಷ್ಟವಾಗಿದೆ."

"ಹುಂ. ಸರಿ.... ಆ ವಿಷಯವೆಲ್ಲಾ ಹೇಳು."

ಯೆಫೀಮ್ ಒಂದು ಪಾತ್ರೆ ತುಂಬಾ ಹಾಲನ್ನು ತಂದು, ಮೇಜಿನ ಮೇಲಿದ್ದ ಲೋಟವನ್ನು ತೊಳೆದು, ಅದರ ತುಂಬ ಹಾಲನ್ನು ಸೋಫಿಯಳಿಗೆ ಕೊಟ್ಟು, ತಾಯಿ ಹೇಳುತ್ತಿದ್ದ ಕತೆಯನ್ನು ಕಿವಿಗೊಟ್ಟು ಕೇಳಿದ. ಆತ ಹಾಲು ಕೊಡುವಾಗ ಸದ್ದು ಮಾಡಲಿಲ್ಲ. ತಾಯಿ ಚುಟುಕಾಗಿ ಹೇಳಿ ಮುಗಿಸಿದ ಮೇಲೆ ಮೌನ ನೆಲೆಸಿತು. ಆಗ ಒಬ್ಬರು ಇನ್ನೊಬ್ಬರನ್ನು ನೋಡಲಿಲ್ಲ. ಇಗ್ನಾತ್ ಮೇಜಿನ ಬಳಿ ಕುಳಿತು ಉಗುರಿನಿಂದ ಹಲಗೆಯ ಮೇಲೆ ಗೆರೆ ಎಳೆದ. ಯೆಫೀಮ್ ರೀಬಿನ್ನನ ಹಿಂದೆ, ತನ್ನ ಮೊಣಗೈಗಳನ್ನು ಆತನ ಭುಜದ ಮೇಲಿಟ್ಟು ನಿಂತ. ಯಾಕೊವ್ ಕೈಕಟ್ಟಿ ತಲೆ ಬಾಗಿಸಿ ಮರಕ್ಕೊರಗಿ ನಿಂತುಕೊಂಡ. ಸೋಫಿಯ ಆ ರೈತರನ್ನು ನೋಡುತ್ತ ಕುಳಿತಳು.

ರೀಬಿನ್ ನಿಧಾನವಾಗಿ ಅಸಂತೋಷದಿಂದ ಹೇಳಿದ:

"ಹುಂ.... ಹೀಗೋ ವಿಷಯ.... ಬಹಿರಂಗವಾಗಿಯೇ...."

"ನಾವು ಹಾಗೇನಾದ್ರೂ ಮೆರವಣಿಗೆ ಮಾಡಿದ್ರೆ ರೈತರು ನಮ್ಮನ್ನ ಹೊಡೆದು ಸಾಯಿಸಿಬಿಡ್ತಾರೆ", ಎಂದು ಯೆಫೀಮ್ ಕಹಿಯಾದ ನಗುವಿನೊಡನೆ ಹೇಳಿದ.

"ಹೌದು, ಕೊಂದೇಬಿಡ್ತಾರೆ," ಎಂದು ತಲೆದೂಗಿ ಒಪ್ಪಿಕೊಂಡು ಇಗ್ನಾತ್ ಮುಂದುವರಿಸಿದ: "ನಾನು ಕಾರಖಾನೇಲಿ ಕೆಲಸಮಾಡೋಕೆ ಹೋಗ್ತೀನಿ. ಅಲ್ಲೇ ಮೇಲು."

"ಪಾವೆಲ್ನ ವಿಚಾರಣೆಯಾಗ್ತದೆ ಅಂದೆಯಾ? ಎಂಥ ಶಿಕ್ಷೆ ಕೊಡ್ತಾರೆ? ನಿನಗೇನಾದ್ರೂ ಗೊತ್ತೆ?" ಎಂದು ರೀಬಿನ್ ಕೇಳಿದ.

"ಸಶ್ರಮಶಿಕ್ಷೆ ಇಲ್ಲವೆ ಸೈಬೀರಿಯಾಕ್ಕೆ ಜೀವಾವಧಿ ಗಡೀಪಾರು," ಎಂದು ತಾಯಿ ಮೆಲ್ಲನೆ ಹೇಳಿದಳು.

ಮೂವರು ಎಳೆಯರೂ ಏಕ ಕಾಲದಲ್ಲೇ ಆಕೆಯತ್ತ ತಿರುಗಿದರು. ರೀಬಿನ್ ತಲೆತಗ್ಗಿಸಿಕೊಂಡು ಕೇಳಿದ:

"ಮೆರವಣಿಗೆ ಹೋದಾಗ ಪಾವೆಲ್‌ಗೆ ಅದು ಗೊತ್ತಿತ್ತೆ?"

"ಗೊತ್ತಿತ್ತು," ಎಂದು ಸೋಫಿಯ ಗಟ್ಟಿಯಾದ ಸ್ವರದಲ್ಲಿ ಉತ್ತರವಿತ್ತಳು.

ಒಂದು ಶೀತಲ ವಿಚಾರದಲ್ಲಿ ಚಿಂತಾಕ್ರಾಂತರಾದ ರೀತಿ ಎಲ್ಲರೂ ಮೌನ ತಳೆದರು.

ಗಂಭೀರ್ಯದ ಮಹತ್ವದ ಧ್ವನಿಯಲ್ಲಿ ರೀಬಿನ್ ಮುಂದುವರಿಸಿದ:

"ಹುಂ.... ನನಗೂ ಹಾಗೇ ಅನಿಸುತ್ತೆ. ಅವನಿಗೆ ಗೊತ್ತಿದ್ದಿರ್ಬೇಕು. ಅವನು ಯೋಚನೆಮಾಡದೆ ಕತ್ತಲೆಯಲ್ಲಿ ಧುಮುಕುವಾತನೇ ಅಲ್ಲ – ಹುಡುಗಾಟದವನಲ್ಲ. ಕೇಳಿದಿರೇನ್ರೂ? ಬಯನೆಟಿಂದ ತಿವೀಬಹುದು, ಸೈಬೀರಿಯಾಕ್ಕೆ ಕಳಿಸ್ಬಹುದು ಅಂತ ಆತನಿಗೆ ಗೊತ್ತಿತ್ತು. ಆದರೂ ಆತ ಹಿಂತೆಗೀಲಿಲ್ಲ. ತಾಯಿಯೇ ಹಾದಿಗಡ್ಡವಾಗಿ ಮಲಗಿದ್ರೂ ಆತ ಹಾದು ಹೋಗ್ತಿದ್ದ, ಅಲ್ವೆ ನೀಲೊವ್ನ?"

"ಹೌದು, ಹೋಗ್ತಿದ್ದ," ಎಂದಳು ತಾಯಿ, ಗಾಬರಿಯಿಂದ. ನಿಟ್ಟುಸಿರುಬಿಟ್ಟು ಆಕೆ ಸುತ್ತಲೂ ನೋಡಿದಳು. ಆಕೆಯ ಕೈಯನ್ನು ಸೋಫಿಯ ಸದ್ದಿಲ್ಲದೆ ತಟ್ಟುತ್ತಾ, ಹುಬ್ಬೇರಿಸಿ ರೀಬಿನ್ನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಾ ಕುಳಿತಳು.

"ಅವನು ನಿಜವಾದ ಗಂಡಸು!" ಎಂದು ರೀಬಿನ್ ತನ್ನ ಕರಿಯ ಕಣ್ಣುಗಳಿಂದ ಶಾಂತವಾಗಿ ಅವರೆಲ್ಲರನ್ನೂ ನೋಡುತ್ತ ಹೇಳಿದ. ಮತ್ತೊಮ್ಮೆ ಆ ಆರು ಜನರೂ ಮೌನ ತಳೆದರು. ಸೂರ್ಯನ ಸೊಗಸಾದ ಕಿರಣಗಳು ಚಿನ್ನದ ರಿಬ್ಬನುಗಳ ಹಾಗೆ ಗಾಳಿಯಲ್ಲಿ ತೂರಾಡಿದುವು. ಎಲ್ಲೋ ದೊಡ್ಡ ಕಾಗೆಯೊಂದು "ಕಾ" ಎಂದಿತು. ಮೇ ದಿನ, ಪಾವೆಲ್, ಅಂದ್ರೇಯ್‌ರ ನೆನಪಿನಿಂದ ತಾಯಿಯ ಮನಸ್ಸು ಕಲಕಿಹೋಯಿತು. ಟಾರಿನ ಖಾಲಿ ಪೀಪಾಯಿಗಳು ಅಲ್ಲಿ ಇಲ್ಲಿ ಉರುಳಿಕೊಂಡಿದ್ದುವು. ಮರದ ಕಾಂಡಗಳು ತಲೆಕೆಳಗಾಗಿ ಬಿದ್ದಿದ್ದುವು. ಮರಗಳು ಮೂಲೆಯಲ್ಲಿ ಚಲಿಸದೆ ನಿಂತು ಬೆಚ್ಚನೆಯ ಕರಿಯ ನೆರಳನ್ನು ಭೂಮಿಯ ಮೇಲೆ ಚೆಲ್ಲಿದ್ದುವು.

ಒಮ್ಮೆಲೆ ಯಾಕೊವ್ ನಿಂತಲ್ಲಿಂದ ದೂರಸರಿದು ಇನ್ನೊಂದು ಬದಿಗೆ ಹೋಗಿ "ಅವನಂಥವರಿಗೆ ಇದಿರು ನನ್ನೂ ಯೆಫೀಮ್‌ನೂ ಉಪಯೋಗಿಸ್ತಾರೇನು?" ಎಂದು ಆತ ಗಟ್ಟಿಯಾಗಿ ಹಿಂದಕ್ಕೆ ತಲೆಬಾಗಿಸಿ ಕೇಳಿದ.

"ಬೇರೆ ಯಾರ ವಿರುದ್ಧ ಕಳಿಸ್ತಾರೆ ಅಂದ್ಕೊಂಡಿದೀಯಾ? ನಮ್ಮ ಕೈಯಿಂದ್ಲೇ ನಮ್ಮ ಕತ್ತು ಹಿಸುಕೋದು. ಅದೇ ತಂತ್ರ!"

"ಏನೇ ಆಗಲಿ, ನಾನು ಸೈನ್ಯ ಸೇರ್‍ತೀನಿ," ಎಂದು ಯೆಫೀಮ್ ಹಟದ ಧ್ವನಿಯಲ್ಲಿ ಹೇಳಿದ.

"ಹೋಗು. ಯಾರು ಬೇಡ ಅಂದೋರು?" ಎಂದು ಇಗ್ನಾತ್ ಕೂಗಾಡಿದ. ಹಾಗೆಯೇ ಸಣ್ಣನೆ ನಕ್ಕು ಮುಂದುವರಿಸಿದ: "ಆದರೆ ಒಂದು ಮಾಡು. ನನಗೆ ಗುಂಡಿಕ್ಕುವಾಗ ಮಾತ್ರ ತಲೇಗೆ ಹೊಡಿ. ಅಂಗಹೀನನನ್ನಾಗಿ ಮಾಡ್ಬೇಡ – ಒಂದೇ ಸಲಕ್ಕೆ ಮುಗಿಸ್ಬಿಡು."

"ಸಾಕು, ಬಹಳ ಕೇಳಿದ್ದೀನಿ!" ಎಂದು ಯೆಫೀಮ್ ತೀಕ್ಷ್ಣವಾಗಿಯೆ ಉತ್ತರವಿತ್ತ.

"ಒಂದು ಕ್ಷಣ ತಡೆಯಿರೋ," ಎಂದ ರೀಬಿನ್ ಕೈಯೆತ್ತಿ. ತಾಯಿಯತ್ತ ಬೊಟ್ಟುಮಾಡಿ ಆತ ಮುಂದುವರಿಸಿದ: "ಈ ಹೆಂಗಸನ್ನ ನೋಡಿ. ಅವಳ ಮಗನ ಕತೆ ಮುಗಿಯಿತೂಂತ್ಲೇ ಹೇಳ್ಬೇಕು...."

"ಯಾಕೆ ಹಾಗಂತೀಯಾ?" ಎಂದು ತಾಯಿ ನೊಂದು ಮೆಲ್ಲನೆ ಕೇಳಿದಳು.

ರೀಬಿನ್ ಗಂಭೀರವಾಗಿ ಉತ್ತರವಿತ್ತ:

"ಹೇಳೀ ಬಿಡೋಣ, ಅದರಲ್ಲೇನು? ಸುಮ್‌ಸುಮ್ನೆ ಕೂದಲು ಬೆಳ್ಳಗಾಗೋದಿಲ್ಲಾಂತ ಎಲ್ಲರಿಗೂ ಗೊತ್ತಾಗ್ಲಿ. ಮಗನಿಗೆ ಆ ಗತಿ ಮಾಡಿ ತಾಯಿಯನ್ನು ಮುಗಿಸಿಬಿಡೋದಕ್ಕಾಯ್ತು?... ನೀಲೊವ್ನ, ಕರಪತ್ರಗಳನ್ನು ತಂದಿದೀಯ?"

ತಾಯಿ ರೀಬಿನ್‌ನತ್ತ ನೋಡಿದಳು.

"ಹೂಂ...." ಎಂದಳಾಕೆ, ಸ್ವಲ್ಪ ತಡೆದು.

ತನ್ನ ಮುಷ್ಟಿಯಿಂದ ಮೇಜಿಗೆ ಗುದ್ದುತ್ತಾ ರೀಬಿನ್ ಹೇಳಿದ:

"ನೋಡಿದಿಯಾ? ನಿನ್ನ ನೋಡಿದ ತಕ್ಷಣ ನನಗೆ ಗೊತ್ತಾಗಿಹೋಯ್ತು. ನೀನು ಇಲ್ಲಿಗೆ ಬರೋಕೆ ಬೇರೆ ಯಾವ ಕಾರಣ ಇದ್ದೀತು ಹೇಳು? ತಿಳಿಯಿತೆ? ಮಗ ನನ್ನ ಜಾಗದಲ್ಲಿದ್ರು – ತಾಯಿ ಆ ಸ್ಥಾನಕ್ಕೆ ಬಂದ್ಲು!"

ಮುಷ್ಟಿಯಲುಗಿಸುತ್ತ ರೀಬಿನ್ ಗಟ್ಟಿಯಾಗಿ ಹೂಂಕರಿಸಿದ.

ತಾಯಿ ಆ ಸ್ವರಕ್ಕೆ ಬೆದರಿ, ರೀಬಿನ್ನಿನ ಮುಖವನ್ನೇ ದಿಟ್ಟಿಸಿದಳು. ಆ ಮುಖ ಬದಲಾಗಿದ್ದುದು ಆಕೆಗೆ ಕಂಡಿತು. ಅದು ಬಡಕಲಾಗಿತ್ತು; ಗಡ್ಡ ಸಿಕ್ಕುಗಟ್ಟಿತ್ತು; ಅದರ ಕೆಳಗೆ ಮುಖದ ಮೂಳೆಗಳು ಎದ್ದು ಕಾಣುತ್ತಿದ್ದುವು. ಬಹಳ ಕಾಲ ನಿದ್ದೆಯನ್ನೇ ಮಾಡದ ಮನುಷ್ಯನಂತೆ, ನೀಲಿ-ಬಿಳಿಯ ಕಣ್ಣುಗೊಂಬೆಗಳ ಮೇಲೆ ಕೆಂಪು ರಕ್ತನಾಳಗಳು ಹರಡಿಕೊಂಡಿದ್ದುವು. ಮೂಗು, ಬೇಟೆಯಾಡುವ ಹಕ್ಕಿಯ ಹಾಗೆ ಕೊರಕಲಾಗಿ ಚಿರುಟಿಕೊಂಡಿತ್ತು. ಒಮ್ಮೆ ಕೆಂಪಗಿದ್ದ ಷರಟಿನ ತೆರೆದ ಕಾಲರು ಈಗ ಕೊಳಕಾಗಿತ್ತು. ಅದರೊಳಗಿಂದ ಕತ್ತಿನ ಎಲುಬುಗಳೂ ಎದೆಯ ಮೇಲಿನ ದಪ್ಪನೆಯ ಕಪ್ಪಗಿನ ರೋಮವೂ ಕಾಣಿಸುತ್ತಿದ್ದವು. ಆತನ ಸ್ವರೂಪ ಎಂದಿಗಿಂತ ಹೆಚ್ಚು ತಣ್ಣಗಾಗಿ ಮಸಣಪ್ರಾಯವಾಗಿತ್ತು. ಉರಿಯುತ್ತಿದ್ದ ಕಣ್ಣುಗಳಿಂದ ಕ್ರೋಧದ ಬೆಂಕಿ ಆ ಕರಿಯ ಮುಖವನ್ನು ಬೆಳಗುತ್ತಿತ್ತು. ಸೋಫಿಯ ರೈತರ ಮೇಲಿನ ನೆಟ್ಟ ದೃಷ್ಟಿಯನ್ನು ತೆಗೆಯಲಾರದೆ, ಮ್ಲಾನಮುಖದಿಂದ ಮೌನವಾಗಿ ಕುಳಿತಳು. ಇಗ್ನಾತ್ ತಲೆಯಾಡಿಸಿ ಕಣ್ಣನ್ನು ಕಿರಿದುಗೊಳಿಸಿದ. ಯಾಕೊವ್ ಚಪ್ಪರದ ಬದಿಯಲ್ಲಿ ತೊಗ

ಟೆಯನ್ನು ಸ್ವಲ್ಪ ಸ್ವಲ್ಪವಾಗಿ ಕೀಳುತ್ತ ನಿಂತ. ಯೆಫೀಮ್ ತಾಯಿಯ ಬೆನ್ನಹಿಂದೆ ಮೇಜಿನ ಉದ್ದಕ್ಕೂ ಶತಪಥ ತುಳಿದ.

ರೀಬಿನ್ ಮಾತು ಮುಂದುವರಿಸಿದ:

"ಸ್ವಲ್ಪ ಸಮಯದ ಹಿಂದೆ ಈ ಜಿಲ್ಲೆಯ ಅಧಿಕಾರಿ ನನ್ನನ್ನು ಕರೆದ. 'ರ್‍ಯಾಸ್ಕಲ್, ನೀನು ಪಾದ್ರಿಗೆ ಏನು ಹೇಳ್ದೆ?' ಎಂದ. 'ನನ್ನನ್ನ ಯಾಕೆ ರ್‍ಯಾಸ್ಕಲ್ ಅಂತೀರಾ? ನಾನು ಬೆವರು ಸುರಿಸಿ ನನ್ನ ರೊಟ್ಟಿ ಸಂಪಾದಿಸ್ತೀನಿ. ಜನರಿಗೆ ನಾನು ಅನ್ಯಾಯ ಮಾಡೋದಿಲ್ಲ,' ಅಂದೆ. ಆತ ರೇಗಾಡಿ, ನನ್ನ ಮುಖವನ್ನು ಜಜ್ಜಿ ಮೂರು ದಿನ ನನ್ನನ್ನ ಜೈಲಿನಲ್ಲಿಟ್ಟ. 'ಇದು ನೀನು ಸಾಮಾನ್ಯ ಜನರ ಜತೇಲಿ ಮಾತನಾಡೋ ರೀತಿ' ಎಂದು ಯೋಚಿಸ್ದೆ. 'ಇದನ್ನು ಮರೆತು ಬಿಡ್ತೀವೀಂತ ಭಾವಿಸ್ಬೇಡ, ಹಳೇ ಪಿಶಾಚಿ! ನಾನಲ್ಲದೆ ಹೋದರೆ ಬೇರೆ ಯಾರಾದರೂ ನಿನಗಲ್ಲದೆ ಹೋದರೆ, ನಿನ್ನ ಮಕ್ಕಳಿಗೆ ಇದರ ಪ್ರತಿಫಲ ಕೊಟ್ಟೇ ಕೊಡ್ತಾರೆ – ನೆನಪಿಟ್ಕೊ? ನೀವು ಕಬ್ಬಿಣದ ಉಗುರುಗಳಿಂದ ಜನರ ಎದೆಗಳನ್ನು ಅಗೆದು ಅಲ್ಲಿ ದ್ವೇಷವನ್ನ ಬಿತ್ತಿದ್ದೀರಾ! ನಮ್ಮಿಂದ ದಯೆ ನಿರೀಕ್ಷಿಸ್ಬೇಡಿ, ರಾಕ್ಷಸರೇ!' ಎಂದುಕೊಂಡೆ. ಇದು ನಡೆದ ವಿಷಯ!"

ಒಳಗೆ ಉರಿಯುತ್ತಿದ್ದ ಕೋಪದಿಂದ ಆತನ ಮುಖ ಕೆಂಪಗಾಯಿತು. ಆ ಧ್ವನಿಯನ್ನು ಕೇಳಿ ತಾಯಿ ಭೀತಳಾದಳು.

ರೀಬಿನ್ ಶಾಂತನಾಗಿ ಮುಂದುವರಿಸಿದ:

"ಆ ಪಾದ್ರಿಗೆ ನಾನು ಹೇಳಿದ್ದಾದರೂ ಏನು? ಹಳ್ಳಿಯೆಲ್ಲಾ ಸುತ್ತಾಡಿದ್ಮೇಲೆ, ಒಂದು ಕಡೆ ರೈತರ ಜತೇ ಮಾತಾಡ್ತಾ ಆತ ಕೂತಿದ್ದ. ಅವನ ಮಾತು ಹ್ಯಾಗಿತ್ತೂಂತ! ರೈತರೆಲ್ಲಾ ಯಾವಾಗಲೂ ಕುರುಬನ ಅವಶ್ಯತೆ ಇರೋ ಕುರಿ ಮಂದೆ ಅನ್ನೋ ರೀತಿ ಮಾತಾಡ್ತಿದ್ದ. ಹುಂ. ನಾನು ತಮಾಷೆಗೆ, "ಒಮ್ಮೆ ಗುಳ್ಳೇ ನರೀನ ಪ್ರಾಣಿಗಳ ನಾಯಕನನ್ನಾಗಿ ಮಾಡಿದ್ರೆ, ಹಕ್ಕಿಗಳ ಬದಲು ಪುಕ್ಕಗಳೇ ಹಾರಾಡ್ತವೆ,' ಅಂದೆ. ಅವನು ನನ್ನನ್ನ ನೋಡಿ ತಲೆ ಸೊಟ್ಟಗೆಮಾಡಿ, ಜನರು ದೀರ್ಘ ಕಾಲ ಸಂಕಟ ಅನುಭವಿಸೋಕೆ ಸಿದ್ಧವಾಗ್ಬೇಕು, ಆ ಯಾತನೆ ಸಹಿಸೋಕೆ ಶಕ್ತಿಕೊಡೋ ಹಾಗೆ ದೇವರನ್ನ ಪ್ರಾರ್ಥಿಸ್ಬೇಕು, ಅಂದ. 'ಈಗಾಗ್ಲೇ ಜನರು ತುಂಬಾ ಪ್ರಾರ್ಥನೆ ಮಾಡ್ತಾರೆ, ಆದರೆ ದೇವರು ಕಿವಿಕೊಡೋದು ಕಾಣೆಸ್ತಾ ಇಲ್ಲ, ಬಹುಶಃ ದೇವರಿಗೆ ಪುರಸೊತ್ತಿಲ್ವೇನೋ,' ಅಂದೆ. ಹುಂ. 'ನೀನು ಯಾವ ಪ್ರಾರ್ಥನೆ ಮಾಡ್ತೀಯಾ?' ಅಂದ. 'ಜೀವಮಾನವೆಲ್ಲಾ ಎಲ್ಲರ ಹಾಗೆ ನಾನೂ ಒಂದೇ ಪ್ರಾರ್ಥನೆ ಮಾಡ್ತೀನಿ – ಪ್ರೀತಿಯ ದೇವರೇ, ಕಲ್ಲು ಹ್ಯಾಗೆ ತಿನ್ಬೇಕೂಂತಲೂ, ಶ್ರೀಮಂತರ ಮನೇಲಿ ಹ್ಯಾಗೆ ಕಟ್ಟಿಗೆ ಒಡೆದು ಇಟ್ಟಿಗೆ ಹೊರ್ಬೇಕೂಂತಲೂ ದಯವಿಟ್ಟು ಕಲಿಸು – ಅಂತ' ಅಂದೆ. ನಾನು ಮಾತು ಪೂರ್ತಿಮಾಡೋಕೆ ಆತ ಬಿಡಲೇ ಇಲ್ಲ."

ಒಮ್ಮೆಲೆ ರೀಬಿನ್ ಸೋಫಿಯಳತ್ತ ತಿರುಗಿ, "ನೀವು ಕುಲೀನರೆ?" ಎಂದು ಕೇಳಿದ.

"ನಾನೇಕೆ ಕುಲೀನಳಾಗಬೇಕು?" ಎಂದು ಆಶ್ಚರ್ಯಗೊಂಡು ಆ ಕ್ಷಣವೇ ಆಕೆ ಮರುಪ್ರಶ್ನೆ ಕೇಳಿದಳು.

"ಯಾಕೆ?" ರೀಬಿನ್ನನ ಸ್ವರ ಗಡಸಾಗಿತ್ತು. "ಯಾಕೆಂದರೆ, ನೀವು ಹುಟ್ಟಿದ್ದೇ ಆ ರೀತಿ ಅಂತ ನನ್ನ ಊಹೆ. ಹ್ಯಾಗೆ ಹುಟ್ಟಿದೆವೋ ಹಾಗಿರೋದು ಪ್ರತಿಯೊಬ್ಬರ ವಿಧಿ. ಹುಂ. ನೀವು ತಲೆಗೆ ಕಟ್ಟಿರೋ ಅರಳೆಯ ಕರವಸ್ತ್ರದ ಕೆಳಗೆ ಶ್ರೀಮಂತರ ಪಾಪಗಳನ್ನೆಲ್ಲ ಬಚ್ಚಿಡ್ಬಹುದೂಂತ ಭಾವಿಸಿದಿರಾ? ಒಬ್ಬ ಪಾದ್ರೀನ ಗೋಣೀಲಿ ಬೇಕಾದರೆ ಸುತ್ತಿರಿ, ನೋಡಿದ ತಕ್ಷಣ ನಾವು ಹೇಳ್ತೀವಿ. ಮೇಜಿನ ಮೇಲೆ ನೀವು ಮೊಣಕೈ ಇಟ್ಟಾಗ ನೀರೋ ಏನೋ ತಗಲಿತು. ಆಗ ನೀವು ಅಳುಕಿದಿರಿ; ಮುಖ ಒಂದು ತರ ಆಯ್ತು. ನಿಮ್ಮ ಬೆನ್ನು ಬಹಳ ನೆಟ್ಟಗಿದೆ – ಕೂಲಿಕಾರ ಹೆಂಗಸರದ್ದು ಹಾಗಲ್ಲ...."

ಹೀಗೆ ಒರಟಾಗಿ ನಿಂದಿಸಿ ಸೋಫಿಯಳನ್ನು ಆತ ನೋಯಿಸಬಹುದೆಂದು ತಾಯಿ ನಡುವೆ ಬಾಯಿ ಹಾಕಿದಳು:

"ಈಕೆ ನನ್ನ ಗೆಳತಿ, ಮಿಹಾಯ್‌ಲೊ ಇವಾನೊವಿಚ್. ಸಾಮಾನ್ಯಳಲ್ಲ, ಗಣ್ಯ ವ್ಯಕ್ತಿ. ನಮ್ಮ ಧ್ಯೇಯಕ್ಕಾಗಿ ದುಡಿದು ಆಕೆಯ ಕೂದಲು ಬೆಳ್ಳಗಾಗಿದೆ. ನೀನಿಷ್ಟು ಕಟುವಾಗಿ...."

ರೀಬಿನ್ ಆಳವಾಗಿ ನಿಟ್ಟುಸಿರುಬಿಟ್ಟ.

"ಯಾಕೆ, ಯಾರನ್ನಾದರೂ ನೋಯಿಸುವಂಥಾದ್ದು ನಾನೇನಾದರೂ ಅಂದ್ನೆ?"

"ನೀವು ನನಗೇನೋ ಹೇಳ್ಬೇಕೂಂತಿದ್ರಿ, ಅಲ್ವೆ?" ಎಂದು ಸೋಫಿಯ ಒಣ ಧ್ವನಿಯಲ್ಲಿ ಕೇಳಿದಳು.

"ನಾನು? ಓ ಹೌದು. ಸ್ವಲ್ಪ ಸಮಯದ ಹಿಂದೆ ಇಲ್ಲಿಗೊಬ್ಬ ಹೊಸಬ ಬಂದ, – ಯಾಕೊವ್‌ನ ದಾಯಾದಿ. ಅವನಿಗೆ ಕ್ಷಯರೋಗ. ಅವನನ್ನ ಕರಿಸ್ಲೆ?"

"ಅಗತ್ಯವಾಗಿ ಕರೆಸಿ."

ರೀಬಿನ್ ಕಿರಿದುಗೊಳಿಸಿದ ಕಣ್ಣುಗಳಿಂದ ಆಕೆಯನ್ನು ನೋಡಿ, ಬಳಿಕ ಯೆಫೀಮ್ ನತ್ತ ತಿರುಗಿ ಮೆಲುಧ್ವನಿಯಲ್ಲಿ ಹೇಳಿದ:

"ಈ ರಾತ್ರಿ ಬರ್ಬೇಕೂಂತ ಹೇಳು."

ಯೆಫೀಮ್ ಟೋಪಿಯನ್ನಿಟ್ಟುಕೊಂಡು, ಒಂದು ಮಾತನ್ನೂ ಆಡದೆ ಯಾರನ್ನೂ ನೋಡದೆ ಕಾಡಿನಲ್ಲಿ ಮರೆಯಾದ. ಅವನು ಹೋದತ್ತ ತಲೆಯಾಡಿಸಿ ರೀಬಿನ್ ಹೇಳಿದ:

"ಕಷ್ಟದ ದಿನಗಳು. ಅವನು ಮತ್ತು ಯಾಕೊವ್ ಮಿಲಿಟರಿ ಸೇರದ ಹೊರತು ಬೇರೆ ಹಾದಿಯೇ ಇಲ್ಲ. ಯಾಕೊವ್ ಸ್ಪಷ್ಟವಾಗಿ ಹೇಳ್ತಾನೆ ಹೋಗೋಕೆ ಇಷ್ಟ ವಿಲ್ಲಾಂತ. ಅವನೂ ಅಷ್ಟೇ. ಆದರೂ ಹೋಗೋದೇ ಸರಿ ಅಂತ ತೀರ್ಮಾನಿಸಿದಾನೆ. ಸೈನಿಕರೆಲ್ಲ ಬಂಡಾಯ ಏಳೋ ಹಾಗೆ ಮಾಡ್ಬಹುದೂಂತ ಅವನ ಯೋಚ್ನೆ. ತಲೆ

ಚಚ್ಚಿ ಗೋಡೇನ ಉರುಳಿಸೋಕೆ ಆಗೋದಿಲ್ಲಾಂತ ನನ್ನ ಅಭಿಪ್ರಾಯ. ಕೈಗೊಂದು ಬಯನೆಟು ಸಿಕ್ಕಿದರೆ ಸಾಕು – ಎಲ್ಲರ ಹಾಗೆಯೇ ಅವರೂ. ಅವನಿಗೂ ಸಾಕಾಗಿ ಹೋಗಿದೆ. ಇಲ್ಲಿ ಈ ಇಗ್ನಾತ್ ಅಂತೂ ಅದೇ ವಿಷಯ ಮಾತಾಡಿ ಮನಸ್ನ ಚುಚ್ತಿರ್‍ತಾನೆ. ಅದರಲ್ಲಿ ಅರ್ಥವಿಲ್ಲ."

ರೀಬಿನ್‌ನತ್ತ ನೋಡದೆಯೇ ನಸುಗೋಪದಿಂದ ಇಗ್ನಾತ್ ಹೇಳಿದ:

"ಅರ್ಥವಿದೆ. ಬೇಗ್ನೆ ಎಲ್ಲರಷ್ಟೇ ಚೆನ್ನಾಗಿ ಅವನೂ ಗುಂಡಿಕ್ತಾನೆ ಅಷ್ಟೆ."

ರೀಬಿನ್ ವಿಚಾರಮಗ್ನನಾಗಿ ಉತ್ತರವಿತ್ತ:

"ಹಾಗೇಂತ ನಾನು ನಂಬೋದಿಲ್ಲ. ಆದರೂ ಆತ ಹೋಗದೆ ಇದ್ದರೇ ಮೇಲು. ರಷ್ಯಾ ದೊಡ್ಡ ದೇಶ – ಅವನನ್ನು ಎಲ್ಲಿ ಹುಡುಕೋಕಾಗುತ್ತೆ? ಒಂದು ಖೋಟಾ ಗುರುತುಚೀಟಿ ದೊರಕಿಸ್ಕೊಂಡು ಹಳ್ಳಿಯಿಂದ ಹಳ್ಳಿಗೆ ಹೋದರಾಯ್ತು."

ಒಂದು ಕೋಲಿನಿಂದ ಪಾದಕ್ಕೆ ತಟ್ಟುತ್ತಾ ಇಗ್ನಾತ್ ಹೇಳಿದ:

"ಅದನ್ನೇ ನಾನ್ಮಾಡೋದು. ಒಮ್ಮೆ ಅವರ್‍ನ ವಿರೋಧಿಸೋಕೆ ತೀರ್‍ಮಾನಿಸಿದ್ಮೇಲೆ ಮನಬದಲಿಸದೆ ನೇರವಾಗಿ ಹೋಗ್ತಾನೇ ಇರ್‍ಬೇಕು."

ಸಂಭಾಷಣೆ ಅಲ್ಲಿಗೆ ನಿಂತಿತು. ಜೇನು ನೊಣಗಳು ಗುಂಪು ಗುಂಪಾಗಿ ಹಾರಿ ಬಂದುವು. ವಾತಾವರಣ ಆ ಗುಂಯಾರವದಿಂದ ತುಂಬಿತು. ಹಕ್ಕಿಗಳು ಚಿಲಿಪಿಲಿ ಗುಟ್ಟಿದುವು. ಹೊಲಗಳನ್ನು ಹಾದು ಅಲೆದಾಡುತ್ತಾ ಒಂದು ಹಾಡು ಕೇಳಿ ಬಂತು. ಸ್ವಲ್ಪ ಹೊತ್ತು ಮೌನವಾಗಿದ್ದು ರೀಬಿನ್ ಹೇಳಿದ:

"ನಾವು ಕೆಲಸಕ್ಕೆ ಹೋಗೋ ಹೊತ್ತಾಯ್ತು. ನೀವು ವಿಶ್ರಾಂತಿ ತಗೋತೀರೇನು? ಚಪ್ಪರದಲ್ಲೇ ಮರದ ದಿನ್ನೆಗಳಿವೆ. ಯಾಕೊವ್, ಹಾಸೋಕೆ ಒಂದಷ್ಟು ತರಗೆಲೆ ತಾರಪ್ಪ.... ನೀನು ಕರಪತ್ರಗಳನ್ನ ಇಲ್ಲಿ ಕೊಡವ್ವ."

ತಾಯಿಯೂ ಸೋಫಿಯಳೂ ತಮ್ಮ ಚೀಲಗಳನ್ನು ಬಿಚ್ಚತೊಡಗಿದರು.

"ಎಷ್ಟೊಂದು ತಂದಿದೀರ!" ಎಂದು, ಪುಸ್ತಕಗಳತ್ತ ಬಾಗಿ ನೋಡುತ್ತ ರೀಬಿನ್ ಸಂತೋಷದಿಂದ ಉದ್ಗರಿಸಿದ. ಸೋಫಿಯಳತ್ತ ತಿರುಗಿ, ಆಕೆಯ ಹೆಸರು ತಿಳಿಯದೆ ತಡವರಿಸುತ್ತಾ ರೀಬಿನ್ ಕೇಳಿದ: "ನೀವು.... ಬಹಳ ಕಾಲದಿಂದ ಈ ಕೆಲಸದಲ್ಲಿದೀರಾ? ನಿಮ್ಮ ಹೆಸರೇನು?"

"ಆನ್ನ ಇವಾನೊವ್ನ.... ಹನ್ನೆರಡು ವರ್ಷಗಳಿಂದ ಇದೀನಿ. ಯಾಕೆ?"

"ಸುಮ್ನೆ. ಬಹುಶಃ ಜೈಲಿಗೂ ಹೋಗಿರ್‍ಬೇಕು?"

"ಹೌದು."

"ನೋಡಿದ್ಯಾ?" ಎಂದು ತಾಯಿ ಟೀಕಿಸುವ ಧ್ವನಿಯಲ್ಲಿ ಅಂದಳು. "ಆಗ ನೀನು ಎಷ್ಟೊಂದು ಒರಟಾಗಿ ಮಾತಾಡ್ದೆ...."

"ಸಿಟ್ಟಾಗ್ಬೇಡಿ," ಎಂದ ರೀಬಿನ್; ಒಂದು ಪುಸ್ತಕದ ಕಟ್ಟನ್ನೆತ್ತಿ ಹಿಡಿದು ನಕ್ಕು; "ಶ್ರೀಮಂತರೂ ರೈತರೂ, ಎಣ್ಣೆ ಸೀಗೇಕಾಯಿ ಇದ್ದಹಾಗೆ – ಬೆರೆಯೋದಿಲ್ಲ."

"ನಾನು ಶ್ರೀಮಂತಳಲ್ಲ, ಮನುಷ್ಯಳು," ಎಂದು ಸೋಫಿಯಾ ಮೃದುವಾಗಿ ನಕ್ಕು ಆಕ್ಷೇಪಿಸಿದಳು.

"ಇರಬಹುದು. ನಾಯಿಗಳೂ ಒಂದು ಕಾಲದಲ್ಲಿ ತೋಳಗಳಾಗಿದ್ದುವಂತೆ.... ಸ್ವಲ್ಪ ಇರಿ ನಾನು ಇದನ್ನೆಲ್ಲ ಅಡಗಿಸಿಟ್ಟು ಬರ್ತೀನಿ."

ಇಗ್ನಾತ್ ಮತ್ತು ಯಾಕೊವ್ ಕೈಚಾಚಿಕೊಂಡೇ ಅವನತ್ತ ಹೋದರು.,

"ಎಲ್ಲಿ ನೋಡೋಣ," ಎಂದ ಇಗ್ನಾತ್.

"ಇವೆಲ್ಲಾ ಒಂದೇನೇ?" ಎಂದು ರೀಬಿನ್ ಸೋಫಿಯಳನ್ನು ಕೇಳಿದ.

"ಅಲ್ಲ, ಬೇರೆ ಬೇರೆ ಕರಪತ್ರಗಳಿವೆ; ಪತ್ರಿಕೆಯೂ ಇದೆ."

"ನಿಜವಾಗಿಯೂ?"

ಮೂವರೂ ಚಪ್ಪರದೊಳಕ್ಕೆ ಧಾವಿಸಿದರು.

ತಾಯಿಯ ಯೋಚನೆಯ ದೃಷ್ಟಿ ರೀಬಿನನ್ನು ಹಿಂಬಾಲಿಸಿತು. "ಈ ರೈತ ಉರಿಕೆಂಡವಾಗಿದ್ದಾನೆ," ಎಂದು ಆಕೆ ಮೆಲ್ಲನೆ ಹೇಳಿದಳು.

"ಹೌದು. ಇಂಥಾ ಮುಖ ನಾನು ಈವರೆಗೆ ನೋಡಿಲ್ಲ – ಹುತಾತ್ಮನ ಮುಖ! ನಾವೂ ಒಳಗೆ ಹೋಗೋಣ. ಅವರನ್ನು ನಾನು ನೋಡಬಯಸುತ್ತೇನೆ."

"ಅವನ ಒರಟುತನದಿಂದ ನೊಂದ್ಕೋಬೇಡ," ಎಂದು ತಾಯಿ ಮೃದುವಾಗಿ ಅಂದಳು.

ಸೋಫಿಯ ನಕ್ಕಳು.

"ನೀವೆಂಥಾ ಮುದ್ದು ತಾಯಿ ನೀಲೊವ್ನ!"

ಅವರು ಒಳ ಬಾಗಿಲ ಬಳಿ ಬಂದಂತೆ, ಇಗ್ನಾತ್ ತಲೆಯೆತ್ತಿ, ಶೀಘ್ರ ನೋಟ ಒಂದೊಮ್ಮೆ ಅವರನ್ನು ನೋಡಿ, ಗುಂಗುರು ಕೂದಲ ಮೇಲೆ ಬೆರಳನ್ನೋಡಿಸಿ, ಪುನಃ ಬಗ್ಗಿಕೊಂಡು ಮೊಣಕಾಲಮೇಲೆ ಹರಡಿದ್ದ ಪತ್ರಿಕೆಯನ್ನೋದತೊಡಗಿದ. ಛಾವಣಿಯ ಬಿರುಕಿನೆಡೆಯಿಂದ ಬರುತ್ತಿದ್ದ ಸೂರ್ಯರಶ್ಮಿಯ ಬೆಳಕಿನಲ್ಲಿ ರೀಬಿನ್ ಪತ್ರಿಕೆಯನ್ನು ನೋಡುತ್ತ ನಿಂತಿದ್ದ. ಓದುತ್ತಿದ್ದಂತೆ ಅವನ ತುಟಿಗಳು ಚಲಿಸುತ್ತಿದ್ದುವು. ಯಾಕೊವ್, ಹರಡಿದ್ದ ಕರಪತ್ರಗಳ ರಾಶಿಯ ಎದುರು ಮೊಣಕಾಲೂರಿ ಕುಳಿತಿದ್ದ. ಅವನೂ ಓದುತ್ತಿದ್ದನು.

ತಾಯಿ ಒಂದು ಮೂಲೆಗೆ ಸರಿದು ಕುಳಿತಳು. ಸೋಫಿಯ ಕೈಗಳನ್ನು ತಾಯಿಯ ಭುಜದಮೇಲಿರಿಸಿ, ಒರಗಿಕೊಂಡು ಮೌನವಾಗಿ ಆ ಮೂವರನ್ನೂ ನಿರೀಕ್ಷಿಸುತ್ತ ನಿಂತಳು.

ತಿರುಗಿನೋಡದೆಯೇ ಯಾಕೊವ್, "ರೈತರ್ನೆಲ್ಲಾ ಬೈದಿದಾರೆ ಇದರಲ್ಲಿ, ಮಿಹಾಯ್‌ಲೊ ಮಾವ – ಚಾಟಿ ಏಟು," ಎಂದ. ರೀಬಿನ್ ಯಾಕೊವ್ ಕಡೆ ತಿರುಗಿ, ದಿಟ್ಟಿಸಿ ಮುಗುಳ್ನಗುತ್ತಾ, "ಪ್ರೀತಿಯಿಂದ ಬೈದಿದಾರೆ," ಎಂದ.

ಇಗ್ನಾತ್ ದೀರ್ಘವಾಗಿ ಉಸಿರುಬಿಟ್ಟು ತಲೆ ಎತ್ತಿದ:

"ಇಲ್ಲಿ ಬರೆದಿದ್ದಾರೆ – 'ರೈತನಲ್ಲಿ ಮನುಷ್ಯ ಪ್ರಾಣಿಯ ಯಾವ ಲಕ್ಷಣಗಳೂ ಉಳಿದಿಲ್ಲ.' ನಿಜ !" ಅವನ ಅಗಲವಾದ ಸರಳಮುಖವನ್ನೊಂದು ಛಾಯೆ ಆವರಿಸಿತು, ಆತನಿಗೆ ನೋವಾಯಿತು. "ಹುಂ. ನನ್ನ ಸ್ಥಿತೀಲಿ ಸ್ವಲ್ಪ ಹೊತ್ತು ಇದ್ದು ನೋಡಲಿ ಈ ನಿಪುಣ. ಆಗ ಗೊತ್ತಾಗುತ್ತೆ !"

"ನಾನಿನ್ನು ಮಲಕೋತೇನೆ. ನನಗೆ ಸ್ವಲ್ಪ ಆಯಾಸವಾಗಿದೆ. ಈ ವಾಸನೆಯಿಂದ ಬವಳಿ ಬರೋ ಹಾಗಾಗುತ್ತೆ. – ನೀವು ?" ಎಂದು ತಾಯಿ ಸೋಫಿಯಳನ್ನು ಕೇಳಿದಳು.

"ಇಲ್ಲ, ನಾನು ಮಲಕೊಳ್ಳೋದಿಲ್ಲ."

ತಾಯಿ, ಅಲ್ಲೇ ಹಾಸಿದ್ದ ಮರದ ಮಂಚದ ಮೇಲೆ ಮಲಗಿಕೊಂಡಳು. ಸೋಫಿಯ ಆಕೆಯ ಬಳಿಯಲ್ಲೆ ಕುಳಿತು, ಓದುತ್ತಿದ್ದವರನ್ನು ನಿರೀಕ್ಷಿಸಿದಳು. ತಾಯಿಯ ನಿದ್ದೆಗೆ ಭಂಗ ತರಲೆತ್ನಿಸಿದ ನೊಣ ಜೇನುನೊಣಗಳನ್ನು ಎಚ್ಚರದಿಂದ ಓಡಿಸಿದಳು. ಅರ್ಧ ಎಚ್ಚರದಲ್ಲಿ ಅರೆತೆರೆದ ಕಣ್ಣುಗ್ಳಳೆಡೆಯಿಂದ, ಸೋಫಿಯ ಮಾಡುತ್ತಿದ್ದುದನ್ನು ತಾಯಿ ನೋಡಿದಳು. ಅದನ್ನು ಕಂಡು ಆಕೆಗೆ ಸಂತೋಷವಾಯಿತು.

ರೀಬಿನ್ ಬಳಿಗೆ ಬಂದು ಒರಟು ಸ್ವರದ ಪಿಸುಮಾತಿನಲ್ಲಿ ಕೇಳಿದ:

"ನಿದ್ದೆ ಹೋದಳೆ ?"

"ಹೌದು."

ಸ್ವಲ್ಪ ಹೊತ್ತು ಮೌನವಾಗಿ ತಾಯಿಯ ಮುಖವನ್ನೇ ನೋಡುತ್ತ ನಿಂತು, ನಿಟ್ಟುಸಿರುಬಿಟ್ಟು, ಮೃದುವಾಗಿ ರೀಬಿನ್ ಹೇಳಿದ:

"ಈ ಹಾದಿ ಹಿಡಿದು ಮಗನನ್ನು ಹಿಂಬಾಲಿಸಿದ ತಾಯಂದಿರಲ್ಲಿ ಪ್ರಾಯಶಃ ಇವಳೇ ಮೊದಲಿಗಳು."

"ಆಕೆಗೆ ಎಚ್ಚರವಾದೀತು, ಹೊರ ಹೋಗೋಣ," ಎಂದಳು ಸೋಫಿಯ.

"ನಿಜ, ಕೆಲಸಕ್ಕೆ ಹೋಗೋ ಹೊತ್ತಾಯ್ತು. ನಿಮ್ಮ ಜತೇಲಿ ಮಾತಾಡ್ಬೇಕು ಅನಿಸುತ್ತೆ. ಆಗಲಿ, ಸಾಯಂಕಾಲ ಮಾತಾಡೋಣ.... ಇನ್ನು ಹೋಗೋಣ ಬನ್ರೋ... !"

ಸೋಫಿಯಳನ್ನು ಅಲ್ಲೇ ಬಿಟ್ಟು ಆ ಮೂವರೂ ಹೊರಹೋದರು.

ಆ ಸಂಭಾಷಣೆಯನ್ನು ಕೇಳಿದ ತಾಯಿ, "ಸದ್ಯಃ ಇವರು ಸ್ನೇಹಿತರಾದರಲ್ಲ !" ಎಂದುಕೊಂಡಳು.

ಆ ಬಳಿಕ, ಮರಗಳ, ಟಾರಿನ ವಾಸನೆ ಮೂಗಿನ ಹೊಳ್ಳೆಗಳನ್ನು ತುಂಬಿದ್ದಂತೆಯೇ ತಾಯಿ ನಿದ್ದೆಹೋದಳು.

ದಿನದ ದುಡಿಮೆ ಮುಗಿಯಿತೆಂದು ಸಂತೋಷಪಡುತ್ತ ಐದಾರು ಕೆಲಸಗಾರರು ಹಿಂತಿರುಗಿದರು.

ಅವರ ಸ್ವರಗಳ ಸದ್ದಿನಿಂದ ತಾಯಿಗೆ ಎಚ್ಚರವಾಯಿತು. ಆಕೆ ಎದ್ದು ಮೈ ಮುರಿದು ಆಕಳಿಸುತ್ತ, ಮುಗುಳ್ನಗುತ್ತ ಹೊರಬಂದಳು.

"ನೀವು ಅಲ್ಲಿ ಕೆಲಸಮಾಡ್ತಾ ಇದ್ರೆ, ನಾನಿಲ್ಲಿ ದೊಡ್ಡಮನುಷ್ಯಳ ಹಾಗೆ ನಿದ್ದೆ ಹೋದೆ," ಎಂದು ಪ್ರೀತಿಯಿಂದ ಅವರನ್ನು ನೋಡುತ್ತ, ತಾಯಿಯೆಂದಳು.

"ಅದನ್ನು ಕ್ಷಮಿಸಬಹುದು," ಎಂದನು ರೀಬಿನ್. ಆತನ ಹೆಚ್ಚಿನ ಶಕ್ತಿಯನ್ನೆಲ್ಲ ಕೆಲಸದ ಆಯಾಸ ಕಬಳಿಸಿಬಿಟ್ಟಿತ್ತು. ಪರಿಣಾಮವಾಗಿ ಆತ ಹೆಚ್ಚು ಶಾಂತವಾಗಿದ್ದ.

"ಇಗ್ನಾತ್ ನೋಡು ಸ್ವಲ್ಪ ಚಹಾ ಏರ್ಪಾಟು ಮಾಡು!" ಎಂದ ರೀಬಿನ್: "ಇಲ್ಲಿ ಅಡುಗೆ ಕೆಲಸವನ್ನ ನಾವು ಸರದಿ ಪ್ರಕಾರ ಮಾಡ್ತೀವಿ. ಇವತ್ತು ಇಗ್ನಾತ್‌ನ ಸರದಿ," ಎಂದು ವಿವರಿಸಿದ.

ಬೆಂಕಿಗಾಗಿ ಒಣಗಿದ ಕಡ್ಡಿ ಸೌದೆ ಚೂರುಗಳನ್ನಾರಿಸುತ್ತ ಇಗ್ನಾತ್ ಹೇಳಿದ.

"ಇವತ್ತು ಯಾರಾದರೂ ಬದಲಿಮಾಡೋ ಹಾಗಿದ್ರೆ ಸಿದ್ಧವಾಗಿದ್ದೀನಿ!"

"ಅತಿಥಿಗಳ ಜತೆ ಇರೋಕೆ ಇಷ್ಟಪಡೋನು ನೀನೊಬ್ನೇ ಅಲ್ಲ," ಎಂದು ಯೆಫೀಮ್ ಸೋಫಿಯಾಳ ಬಳಿ ಕುಳಿತುಕೊಳ್ಳುತ್ತ ಹೇಳಿದ.

"ನಾನು ಸಹಾಯ ಮಾಡ್ತೀನಿ, ಇಗ್ನಾತ್," ಎಂದ ಯಾಕೊವ್. ಅವನು ಒಳಹೋಗಿ ಬ್ರೆಡ್ಡನ್ನು ತಂದು ಚೂರುಗಳಾಗಿ ಕತ್ತರಿಸಿ ಮೇಜಿನ ಮೇಲಿರಿಸಿದ.

"ಕೇಳಿ! ಯಾರೋ ಕೆಮ್ಮುತ್ತಿದ್ದಾರೆ...." ಎಂದನು ಯೆಫೀಮ್. ರೀಬಿನ್ ಕಿವಿ ನಿಗುರಿಸಿ, ತಲೆದೂಗಿ, ಸೋಫಿಯಾಗೆ ಹೇಳಿದ:

"ಅವನೇ – ನಮ್ಮವನೇ. ಜೀವಂತ ಸಾಕ್ಷಿದಾರ ಬರ್ತಿದಾನೆ. ನನ್ನ ಅಪೇಕ್ಷೆ ನಡೆಯೋ ಹಾಗಿದ್ರೆ ಅವನನ್ನ ಊರಿಂದೂರಿಗೆ ಕರಕೊಂಡು ಹೋಗಿ, ಬೀದಿ ಚೌಕ ಗಳಲ್ಲಿ ನಿಲ್ಲಿಸಿ, ಎಲ್ಲರೂ ಅವನ ಮಾತು ಕೇಳೋ ಹಾಗೆ ಮಾಡ್ತಿದ್ದೆ. ಅವನು ಪ್ರತಿ ಸಲವೂ ಹೇಳೋದು ಒಂದೇ ವಿಷಯ. ಆದರೆ ಅದು ಪ್ರತಿಯೊಬ್ಬರೂ ಕೇಳ ಬೇಕಾದ್ದು."

ಮತ್ತಷ್ಟು ಕತ್ತಲಾಯಿತು. ಮೌನ ಹೆಚ್ಚಿತು. ಎಲ್ಲರ ಸ್ವರಗಳು ಮೆತ್ತಗಾದುವು. ಎಚ್ಚರಿಕೆಯ ಭಾರದಿಂದ ರೈತರ ಚಲನವಲನಗಳು ನಿಧಾನವಾದುದನ್ನು ಸೋಫಿಯ ಮತ್ತು ತಾಯಿ ಕಂಡರು. ಪ್ರತಿಯಾಗಿ ರೈತರೂ ಹೆಂಗಸರನ್ನು ವೀಕ್ಷಿಸಿದರು.

ಕಾಡಿನಿಂದೊಂದು ನೀಳವಾದ ಬಾಗಿದ ವ್ಯಕ್ತಿ ನಡೆಗೋಲನ್ನು ಆಧರಿಸಿ ಬಂತು. ಆತನ ಪ್ರಯಾಸದ ಉಸಿರಾಟ ಎಲ್ಲರಿಗೂ ಕೇಳಿಸುತ್ತಿತ್ತು.

"ಅಂತೂ ಬಂದೆ," ಎಂದವನೇ ಆತ ಒಂದೇ ಸಮನೆ ಕೆಮ್ಮತೊಡಗಿದ.

ಆತ ಧರಿಸಿದ್ದುದು ಪಾದವನ್ನು ಮುಟ್ಟುತ್ತಿದ್ದ ಹರಿದ ಕೋಟು. ನೇರವಾದ ತೆಳ್ಳನೆಯ ಹಳದಿ ಕೂದಲು ಹಿಡಿ ಹಿಡಿಯಾಗಿ ಚಪ್ಪಟೆಯಾಗಿದ್ದ ವೃತ್ತಾಕಾರದ ಹ್ಯಾಟಿನ ಕೆಳಗಿಂದ ತೂಗುತ್ತಿದ್ದುವು. ಎಲುಬುಗಳು ಎದ್ದು ಕಾಣಿಸುತ್ತಿದ್ದ ಅರಸಿನ ಮುಖದ ಮೇಲೆ ಬಿಳಿಯ ಗಡ್ಡವಿತ್ತು. ತುಟಿಗಳು ಸದಾಕಾಲವೂ ತೆರೆದೇ ಇದ್ದುವು. ಕರಿಯ ಆಳಕ್ಕೆ ಇಳಿದುಹೋಗಿದ್ದ ಕಣ್ಣುಗಳು ತಪ್ತವಾಗಿ ಹೊಳೆಯುತ್ತಿದ್ದುವು.

ರೀಬಿನ್ ಆತನಿಗೆ ಸೋಫಿಯಳ ಪರಿಚಯ ಮಾಡಿಕೊಟ್ಟಾಗ ಆತ ಹೇಳಿದ:

"ನೀವು ಪುಸ್ತಕಗಳನ್ನ ತಂದಿದ್ದೀರಂತೆ."

"ಹೌದು," ಎಂದಳಾಕೆ.

"ಎಲ್ಲ ಜನರ ಪರವಾಗಿಯೂ ನಿಮಗೆ ಧನ್ಯವಾದಗಳು. ಅವರಿನ್ನೂ ಸತ್ಯಾಂಶ ವನ್ನ ಗ್ರಹಿಸೋ ಸ್ಥಿತೀಲಿಲ್ಲ. ಆದರೆ, ಅದೇನೂಂತ ತಿಳಿದಿರೋ ನಾನು.... ಅವರ ಪರವಾಗಿ ನಿಮಗೆ ಧನ್ಯವಾದ ಅರ್ಪಿಸ್ತೀನಿ."

ಉಸಿರು ವೇಗವಾಗಿತ್ತು. ಗಾಳಿಯನ್ನಾತ ಚುಟುಕು ಚುಟುಕಾಗಿ ಅತ್ಯಾಸೆ ಯಿಂದ ಸೇವಿಸುತ್ತಿದ್ದ. ಮಾತನಾಡುತ್ತಿದ್ದಂತೆ ಸ್ವರ ಆಗಾಗ್ಗೆ ಕಡಿದು ಹೋಗು ತ್ತಿತ್ತು. ಕ್ಷೀಣವಾದ ಬೆರಳುಗಳು ಕೋಟಿನ ಎದೆ ಭಾಗದ ಗುಂಡಿಯೊಂದನ್ನು ಹಾಕಲು ನಡುಗುತ್ತ ಯತ್ನಿಸುತ್ತಿದ್ದುವು.

"ಇಷ್ಟು ತಡವಾಗಿ ಹೀಗೆ ಕಾಡಿನಲ್ಲಿರೋದು ನಿಮ್ಮ ಆರೋಗ್ಯಕ್ಕೆ ಒಳಿತಲ್ಲ. ಮರಗಳಿಂದಾಗಿ ಗಾಳಿ ತೇವವಾಗಿ ಭಾರವಾಗುತ್ತೆ," ಎಂದಳು ಸೋಫಿಯ.

"ನನಗಿನ್ನು ಯಾವುದೂ ಒಳ್ಳೆಯದಲ್ಲ. ನನಗೆ ಒಳ್ಳೇದಾಗೋದು ಸಾವಿನಿಂದ ಮಾತ್ರ," ಎಂದು ಆತ ಉಸಿರು ತಡೆದುಕೊಂಡು ಉತ್ತರವಿತ್ತ.

ಆ ಸ್ವರವನ್ನು ಕೇಳುವುದೂ ಕಷ್ಟವಾಗಿತ್ತು. ಆತನ ವ್ಯಕ್ತಿತ್ವ ಅತಿಯಾದ ಸಹಾನು ಭೂತಿಯನ್ನು ಹುಟ್ಟಿಸುತ್ತಿತ್ತು. ಹಾಗೆ ಸಹಾನುಭೂತಿಯನ್ನು ತೋರುವವರಿಗೆ, ಅದು ನಿರರ್ಥಕವೆಂಬ ತಿಳಿವಳಿಕೆ ಇದ್ದು, ತೀವ್ರ ವಿಷಾದಕ್ಕೆ ಮಾತ್ರವೇ ಅದು ಕಾರಣ ವಾಗುತ್ತಿತ್ತು. ಆತ, ಮುರಿದು ಹೋಗುತ್ತವೇನೋ ಎಂದು ಹೆದರುವಂತೆ, ಕಾಲುಗಳನ್ನು ಮಡಚಿ ಒಂದು ಪೀಪಾಯಿಯ ಮೇಲೆ ಕುಳಿತು, ಹುಬ್ಬಿನ ಮೇಲಿಂದ ಬೆವರನ್ನೊರೆಸತೊಡಗಿದ. ಅವನ ಕೂದಲುಗಳು ಒಣಗಿ ನಿರ್ಜೀವವಾಗಿದ್ದವು.

ಸುತ್ತಲಿದ್ದುದೆಲ್ಲವೂ ಬೆಚ್ಚಿಬಿದ್ದು ಚಂಚಲವಾಗುವಂತೆ ಬೆಂಕಿ ಭಗ್ಗನೆ ಉರಿ ಯಿತು. ಸುಟ್ಟುಕೊಂಡ ನೆರಳುಗಳು ಬೆದರಿ ಕಾಡುಗಳತ್ತ ಓಡಿದುವು. ಬೆಂಕಿಯಿಂದಲೂ ಮೇಲಕ್ಕೆ ಇಗ್ನಾತ್‌ನ ಉಬ್ಬು ಕೆನ್ನೆಗಳ ವಿಶಾಲ ಮುಖ ಕಾಣಿಸಿತು. ಬೆಂಕಿ ಆರಿತು. ಹೊಗೆಯ ವಾಸನೆ ಬಂದು, ಮತ್ತೊಮ್ಮೆ ಕತ್ತಲೂ ಮೌನವೂ ಆ ಪ್ರದೇಶದಲ್ಲಿ ನೆಲೆಸಿ, ಕಾಹಿಲೆ ಮನುಷ್ಯನ ಒರಟು ಸ್ವರವನ್ನು ಕೇಳಲು ಸಿದ್ಧವಾದುವು.

"ನನ್ನಿಂದ ಜನಮಾನ್ಯರಿಗೆ ಇನ್ನೂ ಪ್ರಯೋಜನವಿದೆ. ಒಂದು ಮಹಾ ಪಾತಕಕ್ಕೆ ಜೀವಂತ ಸಾಕ್ಷ್ಯವಾಗಿ ನಾನಿದ್ದೀನಿ.... ನೋಡಿ, ಇಲ್ನೋಡಿ.... ಇಪ್ಪತ್ತೆಂಟನೆ

ವಯಸ್ಸಿನಲ್ಲೇ ನಾನು ಸಾಯ್ತಿದ್ದೇನೆ. ಹತ್ತು ವರ್ಷಗಳಿಗೆ ಹಿಂದೆ ಎಂಥ ದೈತ್ಯ ಭಾರವನ್ನಾದರೂ ನಾನು ಬೆನ್ನಿನ ಮೇಲೆ ಹೊರ್ತಿದ್ದೆ. ಅಂಥ ದೇಹವಿಟ್ಕೊಂಡು ಎಪ್ಪತ್ತು ವರ್ಷಗಳವರೆಗಾದರೂ ಜೀವಿಸ್ಬಹುದೂಂತ ಆಗ ನಾನು ಯೋಚಿಸ್ತಿದ್ದೆ.... ಆದರೆ ನಾನು ಆಮೇಲೆ ಬದುಕಿದ್ದು ಹತ್ತು ವರ್ಷ ಮಾತ್ರ.... ಈಗ.... ಇದು ಕೊನೆ.... ನನ್ನ ಮಾಲೀಕರು ನನ್ನನ್ನ ದೋಚಿದ್ರು. ನನ್ನ ಆಯುಷ್ಯದಿಂದ ನಾಲ್ವತ್ತು ವರ್ಷಗಳನ್ನ ದೋಚಿದ್ರು – ನಾಲ್ವತ್ತು ವರ್ಷಗಳನ್ನ !"

"ಇದು ಇವನು ಹಾಡೋ ಹಾಡು," ಎಂದ ರೀಬಿನ್, ಒರಟು ಧ್ವನಿಯಲ್ಲಿ.

ಮತ್ತೊಮ್ಮೆ ಬೆಂಕಿ, ಮೊದಲಿಗಿಂತಲೂ, ಹೆಚ್ಚು ಶುಭ್ರವಾಗಿ ಬಲವಾಗಿ ಭಗ್ಗನೆ ಉರಿಯಿತು. ಮತ್ತೊಮ್ಮೆ ನೆರಳುಗಳು ಕಾಡಿಗೆ ಓಡಿದುವು, ಬೆಂಕಿಗೆ ಹಿಂತಿರುಗಿದುವು. ಸದ್ದಿಲ್ಲದ ಆದರೆ ದ್ವೇಷಪೂರ್ಣವಾದ ಕುಣಿತವನ್ನು ಕುಣಿದುವು. ಒದ್ದೆ ಕೊರಡುಗಳು ಸುಂಯ್ ಎಂದುವು, ಚಿಟಿಲೆಂದುವು. ಬೆಚ್ಚಗಿನ ಗಾಳಿಯ ಪ್ರವಾಹದಲ್ಲಿ ಮರದ ಎಲೆಗಳು ಉದ್ವಿಗ್ನಗೊಂಡು ಸದ್ದುಮಾಡಿದುವು. ಕೆಂಪು ಹಳದಿ ಜ್ವಾಲೆಯ ಉತ್ಸಾಹಿ ನಾಲಿಗೆಗಳು ಚುರುಕಾದ ಆಟದಲ್ಲಿ ಒಂದನ್ನೊಂದು ಅಪ್ಪಿಕೊಂಡುವು; ಮೇಲೇರಿದಂತೆ ಕಿಡಿಗಳ ಮಳೆ ಸುರಿದುವು. ಉರಿಯುತ್ತಿದ್ದ ಒಂದೆಲೆ ಗಾಳಿಗೆ ಮೇಲೆ ಹಾರಿತು; ಕತ್ತಲೆಯ ಆಕಾಶದಲ್ಲಿದ್ದ ನಕ್ಷತ್ರಗಳು ಕೆಳಗೆ ನೋಡಿ, ಕಿಡಿಗಳನ್ನು ತಮ್ಮೆಡೆಗೆ ಸೆಳೆಯಲೆತ್ನಿಸುತ್ತಾ ಮುಗುಳ್ನಕ್ಕುವು.

"ಇದು ನನ್ನ ಹಾಡಲ್ಲ. ಇದು, ತಮ್ಮ ದುಃಖ ಜೀವನ, ಬೇರೆ ಜನರಿಗೆ ಒಂದು ಒಳ್ಳೆಯ ಪಾಠವೆಂಬುದನ್ನು ತಿಳಿಯದೆಯೇ, ಸಾವಿರಾರು ಜನ ಹಾಡುವ ಹಾಡು. ಎಷ್ಟೊಂದು ಜನ ಕೆಲಸದಿಂದ ಕುಂಠಿತರಾಗಿ ಉಪವಾಸ ಬಿದ್ದು ಮೌನವಾಗಿ ಸಾಯ್ತಾರೆ...."

ಆ ಮನುಷ್ಯ ಮತ್ತೊಮ್ಮೆ ಕೆಮ್ಮತೊಡಗುತ್ತಾ ಕೆಳಕ್ಕೆ ಬಾಗಿದ.

ಒಂದು ಪಾತ್ರೆ ತುಂಬ ಹುಳೀ ಪಾನಕವನ್ನು ಒಂದು ಗೊಂಚಲು ಹಸಿ ಈರುಳ್ಳಿಯನ್ನೂ ಯಾಕೊವ್ ಮೇಜಿನ ಮೇಲಿಟ್ಟ.

"ಬಾ, ಸವೇಲಿಯ್, ನಿನಗಾಗಿ ಸ್ವಲ್ಪ ಹಾಲು ತಂದಿದ್ದೇನೆ," ಎಂದ.

ಆ ಮನುಷ್ಯ – ಬೇಡವೆಂದು ತಲೆಯಾಡಿಸಿದ. ಆದರೂ ಯಾಕೊವ್ ಆತನ ತೋಳು ಹಿಡಿದುಕೊಂಡು ಮೇಜಿನ ಬಳಿಗೆ ಒಯ್ದು.

ಸೋಫಿಯ ಮೆಲ್ಲನೆ ರೀಬಿನ್ನನ್ನು ಟೀಕಿಸಿದಳು:

"ನೀವು ಅವನನ್ನ ಇಲ್ಲಿಗೆ ಯಾಕೆ ಕರಕೊಂಡು ಬರಬೇಕಾಗಿತ್ತು? ಆತ ಯಾವ ಕ್ಷಣವಾದರೂ ಸಾಯಬಹುದು."

ರೀಬಿನ್ ಒಪ್ಪುತ್ತ ಹೇಳಿದ:

"ನಾನು ಬಲ್ಲೆ. ಆದರೆ ಶಕ್ತಿ ಇರುವಷ್ಟು ಕಾಲ ಆತ ಮಾತಾಡ್ಲಿ. ಯಾವ ಒಳ್ಳೆಯ ಉದ್ದೇಶ ಸಾಧನೆಯೂ ಇಲ್ಲದೆ ಅವನ ಜೀವ ವ್ಯರ್ಥವಾಯ್ತು. ಈಗ ಒಂದು ಒಳ್ಳೆಯ

ಕೆಲಸಕ್ಕಾಗಿ ಇನ್ನೂ ಸ್ವಲ್ಪ ಹೊತ್ತು ಸಹಿಸಿಕೊಂಡಿರ್ರಿ. ಎಲ್ಲಾ ಸರಿಯಾಗಿದೆ – ನೀವೇನೂ ಯೋಚಿಸ್ಬೇಡಿ !"

"ಇದರಿಂದ ನಿಮಗೇನು ಸಂತೋಷವೊ !" ಎಂದು ಸೋಫಿಯ ಉದ್ಗರಿಸಿದಳು.

ರೀಬಿನ್ ಆವಳತ್ತ ತಿರುಗಿ ನಸುಗೋಪದಿಂದ ಉತ್ತರಿಸಿದ:

"ಸಂತೋಷವಾಗೋದು, ಏಸುಕ್ರಿಸ್ತ ಶಿಲುಬೆ ಮೇಲೆ ನರಳ್ತಿರೋವಾಗ ಮೆಚ್ಚಿಕೊಳ್ಳೋ ಶ್ರೀಮಂತರಿಗೆ. ಆದರೆ ನಮ್ಮ ಅಪೇಕ್ಷೆ ಇರೋದು – ಈ ಮನುಷ್ಯನಿಂದ ಪಾಠ ಕಲೀಬೇಕೂಂತ, ನೀವೂ ಪಾಠ ಕಲೀಬೇಕೂಂತ...."

ತಾಯಿ ಕಾತರಳಾಗಿ ಒಂದು ಹುಬ್ಬನ್ನೇರಿಸಿ ಕೇಳಿದಳು.

"ನಿಲ್ಲಿಸು, ಇಷ್ಟು ಸಾಕು !"

ಕಾಹಿಲೆ ಮನುಷ್ಯ, ಮೇಜಿನ ಬಳಿ ಕುಳಿತಿದ್ದಲ್ಲಿಂದಲೆ ಮತ್ತೊಮ್ಮೆ ಮಾತನಾಡತೊಡಗಿದ.

"ಅವರು ಜನರನ್ನ ದುಡಿಸಿ ಸಾಯಿಸ್ತಾರೆ. ಏಕೆ? ಒಬ್ಬ ಮನುಷ್ಯನ ಪ್ರಾಣವನ್ನ ಅವರು ಯಾಕೆ ದೋಚ್ಬೇಕು? ನಾನು ನೆಫ್ಯೋದೊವ್ ಕಾರಖಾನೇಲಿ ಕೆಲಸ ಮಾಡ್ದೆ. ನಮ್ಮ ಮಾಲೀಕ ಯಾವಳೋ ಸಂಗೀತಗಾರಳಿಗೆ ಚಿನ್ನದ ಒಂದು ಪಾತ್ರೆಯನ್ನ ಕೊಟ್ಟ – ಮುಖ ತೊಳೆಯೋಕೆ ಅಂತ. ಮಂಚದ ಕೆಳಗೆ ಇಟ್ಟುಕೊಳ್ಳೋಕೆ ಒಂದು ಚಿನ್ನದ ಗಡಿಗೇನೂ ಕೊಟ್ಟ. ನನ್ನ ಶಕ್ತಿ, ಜೀವಮಾನವೆಲ್ಲಾ ಆ ಗಡಿಗೆಯ ತಯಾರಿಕೆಗಾಗಿ ವ್ಯಯವಾಯ್ತು ! ನಾನು ಪ್ರಾಣವನ್ನರ್ಪಿಸಿದ್ದು ಅದಕ್ಕೋಸ್ಕರ ! ನನ್ನ ಜೀವನದ ರಕ್ತ ಬಸಿದು ತಾನು ಇಟ್ಟುಕೊಂಡವಳನ್ನ ಸಂತೋಷಪಡಿಸೋದಕ್ಕೋಸ್ಕರ ಒಬ್ಬ ಮನುಷ್ಯ ನನ್ನನ್ನು ದುಡಿಸಿ ದುಡಿಸಿ ಕೊಂದ ! ನನ್ನ ಜೀವನದ ರಕ್ತದ ಬೆಲೆಗೆ ಆತ ಅವಳಿಗೊಂದು ಚಿನ್ನದ ಗಡಿಗೆ ಕೊಂಡುಕೊಟ್ಟ !"

ತಿರಸ್ಕಾರದ ಧ್ವನಿಯಲ್ಲಿ ಯೆಫೀಮ್ ಹೇಳಿದ:

"ಮನುಷ್ಯನನ್ನು ದೇವರ ಪ್ರತಿಬಿಂಬವಾಗಿಯೂ ಪ್ರತಿರೂಪವಾಗಿಯೂ ನಿರ್ಮಿಸಲಾಗಿದೆ. ಹುಂ. ಇದು ಅವರು ಮನುಷ್ಯನನ್ನ ನಡೆಸಿಕೊಳ್ಳೋ ರೀತಿ."

ರೀಬಿನ್ ಅಂಗೈಯಿಂದ ಮೇಜನ್ನು ತಟ್ಟುತ್ತಾ, "ಅದು ಸರೀಂತ ಅನ್ಬೇಡಿ ಹಾಗಾದರೆ," ಎಂದ.

"ಅದನ್ನ ಸಹಿಸ್ಬೇಡಿ," ಎಂದು ಯಾಕೊವ್ ಮೃದುವಾಗಿ ಹೇಳಿದ.

ಇಗ್ನಾತ್ ನಕ್ಕ. ಈ ಮೂವರು ಹುಡುಗರೂ ರೀಬಿನ್ ಮಾತನಾಡಿದಾಗಲೆಲ್ಲ, ಹಸಿದ ಜೀವಗಳ ಹಾಗೆ ಇಂಗದ ಕುತೂಹಲದಿಂದ ತಲ್ಲೀನರಾಗಿ ಕಿವಿಗೊಡುತ್ತಿದ್ದುದನ್ನು ತಾಯಿ ಕಂಡಳು. ಸವೇಲಿಯಸ್ ಮಾತನಾಡಿದಾಗಲೆಲ್ಲ, ತಿರಸ್ಕಾರದ ದ್ವೇಷದ ಛಾಯೆಯೊಂದು ಅವರ ಮುಖಗಳ ಮೇಲೆ ಸ್ಪಷ್ಟವಾಗಿ ಮೂಡುತ್ತಿತ್ತು. ಕಾಹಿಲೆ ಮನುಷ್ಯನ ಬಗೆಗೆ ಅವರಿಗೆ ಯಾವ ಕನಿಕರವೂ ಇದ್ದಂತೆ ತೋರಲಿಲ್ಲ.

ತಾಯಿ ಸೋಫಿಯಳತ್ತ ಬಾಗಿ ಇಳಿ ಧ್ವನಿಯಲ್ಲಿ "ಅವನು ಹೇಳೋದು ನಿಜವೆ?" ಎಂದು ಕೇಳಿದಳು.

"ಹೌದು, ನಿಜ. ಪತ್ರಿಕೆಗಳಲ್ಲಿ ಇದರಂಥ ವಿಷಯವಾಗಿ ಒಮ್ಮೆ ವರದಿಯೂ ಬಂದಿತು ಇದು ನಡೆದದ್ದು ಮಾಸ್ಕೋದಲ್ಲಿ," ಎಂದು ಸೋಫಿಯ ಗಟ್ಟಿಯಾದ ಸ್ವರದಲ್ಲಿ ಉತ್ತರವಿತ್ತಳು.

ರೀಬಿನ್‌ನ ಒರಟು ಧ್ವನಿ ಕೇಳಿಸಿತು:

"ಆದರೆ ಆ ಪಾಪಿಗೆ ಶಿಕ್ಷೆಯಾಗಲೇ ಇಲ್ಲ. ಅವನಿಗೆ ಶಿಕ್ಷೆಯಾಗ್ಬೇಕಿತ್ತು. ಜನರ ಮುಂದೆ ಅವನನ್ನು ಎಳೆದು ತಂದು ಚೂರು ಚೂರಾಗಿ ಕತ್ತರಿಸಿ ಆ ಹೊಲಸು ಮಾಂಸವನ್ನು ನಾಯಿಗಳಿಗೆ ಎಸೀಬೇಕಿತ್ತು! ಒಮ್ಮೆ ಜನ ಎದ್ದೇಳಲಿ, ಆಮೇಲೆ ಎಂಥೆಂತ ಶಿಕ್ಷೆಯನ್ನ ಅವರು ಕೊಡ್ತಾರೆ! ತಮಗಾದ ಅನ್ಯಾಯಗಳನ್ನ ತೊಳೆಯೋದಕ್ಕಾಗಿ ಅವರು ಎಷ್ಟೋ ರಕ್ತ ಹರಿಸ್ತಾರೆ! ಅದು ಅವರದೇ ರಕ್ತ, ಅವರ ನಾಳಗಳಿಂದಲೇ ಹೀರಲ್ಪಟ್ಟ ರಕ್ತ. ಆದ್ದರಿಂದ ತಮಗೆ ಸರಿ ಕಂಡದ್ದನ್ನ ಮಾಡೋಕೆ ಅವರಿಗೆ ಹಕ್ಕಿದೆ!"

ಕಾಹಿಲೆಯವನು, "ಚಳಿಯಾಗ್ತದೆ," ಎಂದ.

ಯಾಕೊವ್ ಅವನನ್ನು ಕೈಹಿಡಿದೆಬ್ಬಿಸಿ ಬೆಂಕಿಯ ಬಳಿಗೆ ಕರೆದೊಯ್ದ.

ಈಗ ಬೆಂಕಿ ಶುಭ್ರವಾಗಿ ಬೆಳಗುತ್ತಿತ್ತು. ರೂಪಿಲ್ಲದ ನೆರಳುಗಳು ಅದರ ಸುತ್ತಲೂ ಕಂಪಿಸುತ್ತ, ಜ್ವಾಲೆಗಳ ಉತ್ಸಾಹದ ಆಟವನ್ನು ಆಶ್ಚರ್ಯದಿಂದ ನೋಡುತ್ತಿದ್ದವು. ಸವೇಲಿಯ್ ಒಂದು ಮರದ ಕೊರಡಿನ ಮೇಲೆ ಕುಳಿತು, ತನ್ನ ಒಣಗಿದ ತೆಳ್ಳಗಿನ ಕೈಗಳನ್ನು ಉರಿಯತ್ತ ಚಾಚಿದ. ರೀಬಿನ್ ಅವನತ್ತ ಬೊಟ್ಟು ಮಾಡಿ ಸೋಫಿಯಗೆ ಹೇಳಿದ:

"ಅವನು ಪುಸ್ತಕಗಳಿಗಿಂತಲೂ ಚೆನ್ನಾಗಿ ಸ್ಪಷ್ಟಪಡಿಸ್ತಾನೆ. ಒಂದು ಯಂತ್ರ ಒಬ್ಬ ಕೆಲಸಗಾರನನ್ನು ಕೊಂದರೆ ಇಲ್ಲವೆ ಕೈಯನ್ನು ಕತ್ತರಿಸಿದರೆ ಅದು ಅವನದೇ ತಪ್ಪು ಅಂತಾರೆ. ಆದರೆ ಅವರು ಒಬ್ಬನ ರಕ್ತವನ್ನ ಪೂರ್ತಿ ಹೀರಿ ಹಿಪ್ಪೆಮಾಡಿ ಎಸೆದಾಗ ಅವನನ್ನ ಕೇಳುವವರೇ ಇಲ್ಲ. ನೇರವಾಗಿ ಕೊಲೆಮಾಡೋದು ಸರಿ – ಆದರೆ ತಮಾಷೆಗಾಗಿ ಒಬ್ಬನನ್ನ ಹಿಂಸಿಸಿ ಪ್ರಾಣ ತೆಗೆಯೋದು ನನಗೆ ಅರ್ಥವಾಗೋದಿಲ್ಲ. ಅವರು ಜನರಿಗೆ ಯಾಕೆ ಹಿಂಸೆಕೊಡ್ತಾರೆ? ನಮಗೆಲ್ಲರಿಗೆ ಯಾಕೆ ಹಿಂಸೆ ಕೊಡ್ತಾರೆ? ತಮಾಷೆಗಾಗಿ, ತಮ್ಮ ಸಂತೋಷಕ್ಕೋಸ್ಕರ, ಈ ಭೂಮಿ ಮೇಲೆ ಸುಖಪಡೋದಕ್ಕಾಗಿ, ಮಾನವರಕ್ತದ ಬೆಲೆ ಕೊಟ್ಟು ಹಾಡುಗಾರ್ತಿಯರು, ಪಂದ್ಯಾಟದ ಕುದುರೆಗಳು, ಬೆಳ್ಳಿಯ ಚಾಕುಗಳು, ಚಿನ್ನದ ತಟ್ಟೆಗಳು, ಮಕ್ಕಳಿಗಾಗಿ ಬೆಲೆ ಬಾಳುವ ಆಟದ ಸಾಮಾನುಗಳು, ಇವನ್ನೆಲ್ಲಾ ಕೊಳ್ಳೋದಕ್ಕೋಸ್ಕರ. 'ನೀನು ಒಂದೇ ಸಮನೆ ಕೆಲಸ ಮಾಡು – ಇನ್ನಷ್ಟು ಕೆಲಸಮಾಡು. ನಿನ್ನ ಶ್ರಮದಿಂದ ನಾನು ಹಣ ಉಳಿಸಿ ನನ್ನ ಸೂಳೆಗಾಗಿ ನಾನೊಂದು ಚಿನ್ನದ ಪೀಕದಾನಿ ಕೊಂಡುಕೋತೀನೀ!"

ತಾಯಿ ಅವರೆಲ್ಲರನ್ನೂ ನೋಡುತ್ತ ಕಿವಿಗೊಡುತ್ತ ಕುಳಿತಳು. ಮತ್ತೊಮ್ಮೆ, ಪಾವೆಲ್ ಮತ್ತು ಸಂಗಾತಿಗಳು ಆಯ್ದುಕೊಂಡಿದ್ದ ಶುಭ್ರವಾದ ಹಾದಿ ರಾತ್ರಿಯ ಕತ್ತಲಲ್ಲಿ ಹೊಳೆಯಿತು.

....ಊಟವಾದ ಮೇಲೆ ಅವರೆಲ್ಲ ಬೆಂಕಿಯ ಸುತ್ತಲೂ ಕುಳಿತರು. ಜ್ವಾಲೆಯ ನಾಲಿಗೆಗಳು ಅತ್ಯಾಸೆಯಿಂದ ಸೌದೆಯನ್ನು ಕಬಳಿಸಿದುವು. ಅವರ ಹಿಂದೆ, ಕಾಡು ಆಕಾಶ ಒಂದೂ ಕಾಣಿಸದಂತೆ ಕರಿಯ ಪರದೆಯಾಗಿ ಎತ್ತರಕ್ಕೆ ಎದ್ದಿತ್ತು. ಕಾಹಿಲೆ ಮನುಷ್ಯ ತೆರೆದ ಕಣ್ಣುಗಳಿಂದ ಬೆಂಕಿಯನ್ನೇ ದಿಟ್ಟಿಸುತ್ತ ಕುಳಿತ. ಆತ ಆಗಾಗ್ಗೆ ಕೆಮ್ಮುತ್ತಿದ್ದ; ಅಳಿದುಳಿದ ಜೀವ ಬಲು ಕ್ಷೀಣವಾಗಿದ್ದ ಆ ದೇಹದಿಂದ ಬಿಡುಗಡೆ ಹೊಂದಲು ಚಡಪಡಿಸುತ್ತಿದ್ದಂತೆ ಆತ ನಡುಗುತ್ತಿದ್ದ. ಬೆಂಕಿಯ ಪ್ರಭೆಯಿಂದ ಆತನ ನಿರ್ಜೀವ ಚರ್ಮ ಬೆಳಗಲೇ ಇಲ್ಲ. ಕಣ್ಣುಗಳು ಮಾತ್ರ ಆಳಿಯುತ್ತಿದ್ದ ಬೆಂಕಿಯ ಹಾಗೆ ಉರಿಯುತ್ತಿದ್ದುವು.

ಯಾಕೊವ್ ಆವನತ್ತ ಬಾಗಿ, "ನೀನು ಒಳಹೋಗೋದು ಮೇಲು, ಸವೇಲಿಯ್," ಎಂದ.

"ಯಾಕೆ? ನಾನು ಇಲ್ಲೇ ಇರ್ತೀನಿ, ಮನುಷ್ಯರ ಜತೇಲಿ ಇರೋದಕ್ಕೆ ನನಗಿನ್ನು ಹೆಚ್ಚು ಕಾಲವಿಲ್ಲ," ಎಂದು ಕಾಹಿಲೆಯವನು ಪ್ರಯತ್ನಪೂರ್ವಕವಾಗಿ ಹೇಳಿದ.

"ಸುತ್ತಲೂ ನೋಡಿ, ಸ್ವಲ್ಪ ತಡೆದು, ಹೌದೋ ಅಲ್ಲವೋ ಎನ್ನುವಂತೆ ಮುಗುಳ್ನಕ್ಕು ಆತನೆಂದ:

"ನಿಮ್ಮ ಜತೇಲಿರೋದು ನನಗೆ ಸುಖವೆನಿಸುತ್ತದೆ. ನಿಮ್ಮನ್ನು ನೋಡ್ದಾಗ, ದೋಚಲ್ಪಟ್ಟವರ ಪರವಾಗಿ, ದುರಾಶೆಗೋಸ್ಕರ ಕೊಲ್ಲಲ್ಪಟ್ಟವರ ಪರವಾಗಿ, ನೀವು ಪ್ರತೀಕಾರ ಮಾಡ್ಬಹುದೂಂತ ನನಗೆ ಅನಿಸುತ್ತೆ."

ಆ ಮಾತಿಗೆ ಯಾರೂ ಉತ್ತರಕೊಡಲಿಲ್ಲ. ಬೇಗನೆ ಆತ, ತಲೆಯನ್ನು ಕ್ಷೀಣವಾಗಿ ಎದೆಯ ಮೇಲೆ ಬಾಗಿಸಿ, ನಿದ್ದೆ ಹೋದ. ಆತನತ್ತ ನೋಡುತ್ತ ರೀಬಿನ್ ಶಾಂತವಾಗಿ ಹೇಳಿದ:

"ಇಲ್ಲಿಗೆ ಬಂದು ಕೂತ್ಕೊಂಡು ಪ್ರತಿ ಸಾರಿಯೂ ಅದನ್ನೇ ಹೇಳ್ತಾನೆ– ಮನುಷ್ಯನನ್ನ ಹಂಗಿಸಿ ಮೋಸಪಡಿಸೋ ವಿಷಯ. ಅವನ ಇಡೀ ಆತ್ಮ ಅದರಿಂದಲೇ ತುಂಬಿದೆ. ಅದನ್ನೇ ಕಣ್ಣುಗಳಿಗೆ ಕಟ್ಟಿ, ಬೇರೇನೂ ಕಾಣಿಸದ ಹಾಗೆ ಮಾಡಿದಾರೆ ಅನ್ನೊ ಹಾಗೆ."

ತಾಯಿ ಯೋಚನಾಮಗ್ನಳಾಗಿ ಕೇಳಿದಳು:

"ಅವನು ಬೇರೇನು ಕಾಣೋದು ಸಾಧ್ಯ? ಮಾಲೀಕರು ಸಿಕ್ಕಾಪಟ್ಟೆ ದುಡ್ಡು ಖರ್ಚು ಮಾಡೋದಕ್ಕೋಸ್ಕರ ದಿನಾಲೂ ಸಾವಿರಾರು ಜನ ದುಡಿದೂ ದುಡಿದೂ ಸಾಯ್ಬೇಕೂಂತಾದರೆ, ಬೇರೇನಿದೆ?"

"ಅವನು ಹೇಳೋದನ್ನ ಕೇಳೋದೂಂದ್ರೆ ಬೇಜಾರು. ಒಂದು ಸಲ ಕೇಳಿದ್ರೆ ಅದನ್ನು ಮರೆಯೋಕಾಗೋದಿಲ್ಲ. ಅವನೋ – ಪ್ರತಿಸಲವೂ ಅದೇ ಹಾಡು ಹಾಡ್ತಾನೆ," ಎಂದನು ಇಗ್ನಾತ್.

ರೀಬಿನ್ ಗಂಭೀರನಾಗಿ ಹೇಳಿದ:

"ಈ ಹಾಡಿನಲ್ಲಿ ಇಡೀ ಬದುಕೇ ತುಂಬಿಕೊಂಡಿದೆ. ಅದನ್ನು ತಿಳಕೋಬೇಕು. ನಾನು ಈ ಕಥೇನ ಹತ್ತಾರು ಸಲ ಕೇಳಿದ್ದೇನೆ. ಹೀಗಿದ್ದರೂ ಒಂದೊಂದು ಸಲ ಸಂಶಯ ಬರುತ್ತೆ. ಕೆಲವು ಸಮಯ ಮನುಷ್ಯ ಮೂರ್ಖನಾಗಿ ಕೊಳೆತು ಕೆಟ್ಟುಹೋಗಿದ್ದಾ ನೇಂತ ನಂಬೋಕೆ ನಾವು ಇಷ್ಟಪಡೋದಿಲ್ಲ. ಆಗ ಶ್ರೀಮಂತರು ಬಡವರು ಎಲ್ಲ ರನ್ನೂ ಒಂದೇ ರೀತಿಯಾಗಿ ನಾವು ಪ್ರೀತಿಸ್ತೇವೆ. ಶ್ರೀಮಂತರೂ ಪಾಪ ತಿಳೀದೆ ಹಾದಿ ತಪ್ಪೋರು! ಕೆಲವರು ಹಸಿವಿನಿಂದ ಕುರುಡರಾದರೆ, ಬೇರೆ ಕೆಲವರು ಬಂಗಾರ ಬಂದ ಕುರುಡರು. ಅಷ್ಟೆ! 'ಆಹಾ, ಒಳ್ಳೆಯ ಜನರೇ! ನನ್ನ ಸೋದರರೇ! ಎಚ್ಚರಗೊಂಡು, ಪ್ರಾಮಾಣಿಕರಾಗಿ, ನಿಮ್ಮ ವಿಷಯವನ್ನೂ ಸೇರಿಸ್ಕೊಂಡೇ ಯೋಚಿಸಿ!' ಅನ್ನೇವೆ.

ಕಾಹಿಲೆಯವನು ಕುಳಿತಲ್ಲೆ ತೂರಾಡಿ, ಕಣ್ಣು ತೆರೆದು ಮುಚ್ಚಿ, ನೆಲದ ಮೇಲೆ ಒರಗಿಕೊಂಡ. ಯಾಕೊವ್ ಮೌನವಾಗಿ ಎದ್ದು ಒಳಹೋಗಿ ಬೆಚ್ಚಗಿನ ಹೊದಿಕೆ ಯನ್ನು ತಂದು ತನ್ನ ದಾಯಾದಿಯ ಮೈಯನ್ನು ಅದರಿಂದ ಮುಚ್ಚಿದ. ಮತ್ತೆ ಸೋಫಿಯಳಿಗೆ ಸಮೀಪವಾಗಿ ಕುಳಿತ.

ಬೆಂಕಿಯ ತುಂಟನಗೆ, ತನ್ನ ಸುತ್ತಲಿದ್ದ ಕರಿಯ ಆಕೃತಿಗಳನ್ನು ಬೆಳಗಿತು. ಜನರ ಸ್ವರಗಳು ಧ್ಯಾನಮಗ್ನವಾಗಿ ಜ್ವಾಲೆಗಳ ಶಾಂತ ಸದ್ದುಗಳೊಡನೆ ಬೆರೆತುವು.

ಬದುಕುವ ಹಕ್ಕಿಗಾಗಿ ಜಗತ್ತಿನ ಜನರೆಲ್ಲ ನಡೆಸುವ ಹೋರಾಟ, ಜರ್ಮನಿ ಯಲ್ಲಿ ರೈತರ ಬಂಡಾಯ, ಐರ್ಲೆಂಡಿನಲ್ಲಿ ಜನರ ನರಕ ಜೀವನ, ಸ್ವಾತಂತ್ರ್ಯಕ್ಕೋಸ್ಕರ ಫ್ರೆಂಚ್ ಜನತೆ ಆಗಾಗ್ಗೆ ನಡೆಸುವ ಹೋರಾಟಗಳಲ್ಲಿ ಅವರ ಸಾಹಸ.... ಇವೆಲ್ಲವನ್ನು ಕುರಿತು ಸೋಫಿಯ ಆ ಜನರಿಗೆ ಹೇಳಿದಳು.

ಇಲ್ಲಿ ಕತ್ತಲೆಯ ಮುಸುಕು ಧರಿಸಿದ ಕಾಡುಗಳ ನಡುವೆ,—ಮರಗಳು ಮುಚ್ಚಿ ಕೊಂಡಿದ್ದ, ಕರಿಯ ಆಕಾಶಗಳು ಛಾವಣಿ ಹೊದಿಸಿದ್ದ, ಬೆಂಕಿಯಿಂದ ಬೆಳಗಿದ್ದ, ಆಶ್ಚರ್ಯಗೊಂಡ ದ್ವೇಷತಳೆದ ನೆರಳುಗಳಿಂದ ಸುತ್ತುವರಿದಿದ್ದ ಈ ಜಾಗದಲ್ಲಿ— ದುರಾಶೆಯ ಧನಿಕರ ಜಗತ್ತನ್ನು ನಡುಗಿಸಿದಂತಹ ಘಟನೆಗಳ ವಿವರವನ್ನು ಸೋಫಿಯ ಕೊಟ್ಟಳು. ಸತ್ಯಕ್ಕೋಸ್ಕರ ಸ್ವಾತಂತ್ರ್ಯಕ್ಕೋಸ್ಕರ ಹೋರಾಡಿದ ವೀರರ ಹೆಸರುಗಳು ಇಲ್ಲಿ ಉಚ್ಚರಿಸಲ್ಪಟ್ಟುವು. ಜಗತ್ತಿನ ಜನರೆಲ್ಲ, ಹೋರಾಟದಲ್ಲಿ ಆಯಾಸಗೊಂಡು ರಕ್ತಸಿಕ್ತರಾಗಿ, ಒಬ್ಬೊಬ್ಬರಾಗಿ ಅವರೆದುರು ಹಾದುಹೋದರು.

ಆ ಹೆಂಗಸಿನ ಸ್ವರ ಮೃದುವಾಗಿ ಏಕಪ್ರಕಾರವಾಗಿ ಮುಂದುವರಿಯಿತು. ಅದು ಇಂಪಾಗಿರಲಿಲ್ಲ. ಆದರೆ ಅದು ಗತಕಾಲದಿಂದ ಬಂದ ಧ್ವನಿಯ ಹಾಗೆ, ಕೇಳು ತ್ತಿದ್ದವರ ಆಸೆ, ನಂಬಿಕೆಗಳನ್ನು ಕೆದಕಿ, ಆತ್ಮ ವಿಶ್ವಾಸವನ್ನುಂಟುಮಾಡಿತು. ಆ ಜನರು ಬಿಟ್ಟ ಮನಸ್ಸಿನಿಂದ, ಬೇರೆ ದೇಶಗಳ ತಮ್ಮ ಸೋದರರ ಕತೆಗಳಿಗೆ ಕಿವಿಗೊಡುತ್ತ ಕುಳಿತರು. ಈ ಹೆಂಗಸಿನ ನಿಸ್ತೇಜ, ಕ್ಷೀಣ ಮುಖವನ್ನು ನೋಡುತ್ತ ಕುಳಿತಂತೆ,

ಜಗತ್ತಿನ ಜನರೆಲ್ಲರೂ ನಡೆಸುತ್ತಿದ್ದ ಸ್ವಾತಂತ್ರ್ಯಕ್ಕೋಸ್ಕರವಾದ ನಿರಂತರ ಹೋರಾಟ – ಆ ಪವಿತ್ರ ಧ್ಯೇಯ – ಅವರೆಲ್ಲರಿಗೂ ಹೆಚ್ಚು ಸ್ಪಷ್ಟವಾಗಿ ಅರ್ಥವಾಯಿತು. ಗತಕಾಲ ವನ್ನು ಈಗಿನ ಬದುಕಿನಿಂದ, ಕರಿಯ ರಕ್ತಮಯ ಪರದೆಯನ್ನು ಇಳಿ ಬಿಟ್ಟು ಬೇರ್ಪ ಡಿಸಲಾಗಿತ್ತು. ಆದರೆ ಗತಕಾಲದ ಆ ಜನರಲ್ಲೂ ತಮ್ಮವೇ ವಿಚಾರಗಳನ್ನೂ ಬಯಕೆಗಳನ್ನೂ ಅವರು ಕಂಡರು. ತಾವೆಂದೂ ಕೇಳಿರದ ದೂರ ದೇಶಗಳ ಜನರ ಜೀವನ ಮತ್ತು ಚಟುವಟಿಕೆಗಳಲ್ಲೂ ತಮ್ಮ ವಿಚಾರಬಯಕೆಗಳನ್ನೇ ಅವರು ಗುರು ತಿಸಿದರು. ಹೃದಯ ಮನಸ್ಸುಗಳ ಬಲದಿಂದ ವಿಶಾಲ ಪ್ರಪಂಚದೊಡನೆ ಅವರು ಸಂಪರ್ಕ ಬೆಳೆಸಿದರು. ಭೂಮಿಯ ಮೇಲೆ ನ್ಯಾಯವನ್ನು ಸ್ಥಾಪಿಸಬೇಕೆಂಬ ದೃಢ ನಿರ್ಧಾರದಿಂದ ಎಂದೋ ಒಗ್ಗಟ್ಟಾಗಿದ್ದ ಜನರನ್ನು ಅವರು ಕಂಡರು. ಆ ದೃಢ ನಿರ್ಧಾ ರವಂತೂ ಭವ್ಯವಾದ ಹೊಸ ಬಾಳಿಗೋಸ್ಕರ ಅವರು ಅನುಭವಿಸಿದ ಅತೀವ ಸಂಕ ಟದಿಂದಲೂ ಸುರಿಸಿದ ರಕ್ತದಿಂದಲೂ ಹೆಚ್ಚು ಬಲಗೊಂಡಿತ್ತು. ಎಲ್ಲ ಜನರೊಡನೆಯೂ ಆತ್ಮೀಯ ಬಾಂಧವ್ಯವಿರುವ ಹೊಸ ಭಾವನೆಯೊಂದರ ಉದಯವಾಯಿತು. ಪ್ರತಿಯೊಂದನ್ನೂ ತಿಳಿಯುವ, ಎಲ್ಲವನ್ನೂ ತಬ್ಬಿಕೊಳ್ಳುವ ಬಲವಾದ ಬಯಕೆಯಿಂದ ಮಿಡಿಯುತ್ತಿದ್ದ ಹೊಸ ಹೃದಯವೊಂದು ಜಗತ್ತಿನಲ್ಲಿ ಜನ್ಮ ತಳೆಯಿತು.

ಸೋಫಿಯ ಆತ್ಮ ವಿಶ್ವಾಸದಿಂದ ಹೇಳಿದಳು:

"ಎಲ್ಲಾ ದೇಶಗಳ ದುಡಿಯುವ ಜನರೂ ತಮ್ಮ ತಲೆಗಳನ್ನೆತ್ತಿ, ದೃಢವಾಗಿ, 'ಸಾಕು, ಈ ಜೀವನ ಇನ್ನು ಸಾಕು!' ಎನ್ನುವ ದಿನ ಬಂದೇ ಬರ್ತದೆ. ದುರಾಶೆಯಲ್ಲಿ ಮಾತ್ರವೇ ಬಲಶಾಲಿಗಳಾಗಿರುವವರ ಕಾಲ್ಪನಿಕ ಶಕ್ತಿ ಆಗ ನಾಶವಾಗ್ತದೆ. ಅವರ ಪಾದದ ಕೆಳಗಿನ ಭೂಮಿ ಕರಗಿ ಹೋಗಿ, ನಿಲ್ಲಲು ಯಾವ ಆಸರೆಯೂ ಇಲ್ಲದೆ ಹೋಗ್ತದೆ."

ತಲೆಬಾಗಿ ರೀಬಿನ್‌ನೆಂದ:

"ಅದೀಗ ಸರಿ! ಯಾವುದಕ್ಕೂ ಗಣನೆ ಮಾಡದೆ ನಮ್ಮ ಕೈಲಾದ ಎಲ್ಲ ಪ್ರಯತ್ನ ಗಳನ್ನೂ ಮಾಡಿದರೆ ನಾವು ಸಾಧಿಸಲಾಗದ್ದು ಏನೂ ಇಲ್ಲ."

ತಾಯಿ ಹುಬ್ಬುಗಳನ್ನೇರಿಸಿ, ಸಂತೋಷಕರವಾದ ಆಶ್ಚರ್ಯದಿಂದ ಮುಗುಳ್ನ ಗುತ್ತ ಆಲಿಸಿದಳು. ಸೋಫಿಯಳ ಉತ್ಸಾಹಪ್ರದವಾದ ಏಕ ರೀತಿಯ ಕಥನದ ನಡುವೆ, ಆಕೆಯ ಸ್ವಭಾವಕ್ಕೆ ಸರಿಹೋಗದಂತಹ ಕೆಲವು ಗುಣಗಳು – ಕಟ್ಟುನಿಟ್ಟಿನ ವರ್ತನೆ, ಗಟ್ಟಿಯಾದ ಸ್ವರ ಇವುಗಳೆಲ್ಲ – ಮಾಯವಾಗಿದ್ದುವು. ತಾಯಿ ರಾತ್ರೆಯ ಶಾಂತತೆ ಯನ್ನೂ ಬೆಂಕಿಯ ಚೆಲ್ಲಾಟವನ್ನು, ಸೋಫಿಯಳ ಮುಖವನ್ನೂ, ಎಲ್ಲದಕ್ಕಿಂತ ಹೆಚ್ಚಾಗಿ ರೈತರ ಗಂಭೀರ ತಲ್ಲೀನತೆಯನ್ನೂ ಮೆಚ್ಚಿಕೊಂಡಳು. ಒಂದೇ ಪ್ರಕಾರವಾಗಿ ಸುರುಳಿ ಬಿಚ್ಚುತ್ತಿದ್ದ ಕಥೆಗೆ ಎಲ್ಲಿಯೂ ತಡೆಯಾಗಬಾರದೆಂದು, ಇಡಿಯ ಜಗತ್ತಿ ನೊಡನೆ ತಮ್ಮನ್ನು ಬಂಧಿಸಿದ ದಾರ ಕಡಿದು ಹೋಗಬಹುದೆಂಬ ಭಯದಿಂದ, ರೈತರು ನಿಶ್ಚಲರಾಗಿ ಕುಳಿತಿದ್ದರು. ಆಗೊಮ್ಮೆ ಈಗೊಮ್ಮೆ ಅವರಲ್ಲೊಬ್ಬ ಬಲು

ಎಚ್ಚರಿಕೆಯಿಂದ ಬೆಂಕಿಗೆ ಹೊಸ ಸೌದೆಯನ್ನಿಡುತ್ತಿದ್ದ. ಆಗ ಕಿಡಿಮಳೆಯೂ ಹೊಗೆ ಮೋಡವೂ ಉಂಟಾದಾಗ, ಕಿಡಿ ಮತ್ತು ಹೊಗೆ ಹೆಂಗಸರಿಗೆ ತಾಕದಂತೆ ಆತ ಕೈಬೀಸುತ್ತಿದ್ದ.

ಒಮ್ಮೆ ಯಾಕೊವ್ ಎದ್ದು ಮೆಲ್ಲನೆ ಹೇಳಿದ:

"ಒಂದು ಕ್ಷಣ ಮಾತನಾಡೋದು ನಿಲ್ಲಿಸಿ."

ಆತ ಒಳಕ್ಕೋಡಿ ಕೆಲ ಬಟ್ಟೆಗಳನ್ನು ತಂದ. ಅವನೂ ಇಗ್ನಾತನೂ ಆ ಬಟ್ಟೆಗಳನ್ನು ಅತಿಥಿಗಳ ಭುಜಗಳಿಗೂ ಪಾದಗಳಿಗೂ ಹೊದಿಸಿದರು,... ವಿಜಯದ ದಿನವನ್ನು ಚಿತ್ರಿಸುತ್ತ, ತಮ್ಮ ಶಕ್ತಿಯಲ್ಲೇ ತಮಗೆ ನಂಬಿಕೆಯಾಗುವಂತೆ ಸ್ಫೂರ್ತಿ ಹುಟ್ಟಿಸುತ್ತ, ಕೆಲವೇ ಜನರ ದುರಾಸೆಯನ್ನೂ ಮೂರ್ಖ ಹಂಬಲವನ್ನೂ ತೃಪ್ತಿಪಡಿಸುವುದಕ್ಕೋಸ್ಕರ ಅತೀವ ದುಡಿಮೆಯಲ್ಲಿ ಜೀವ ಸವೆಸುತ್ತಿದ್ದವರೊಡನೆ ತಾವು ಒಂದೆಂಬ ಬೋಧೆಯನ್ನು ಅವರಲ್ಲಿ ಉಂಟುಮಾಡುತ್ತ, ಸೋಫಿಯ ಮಾತನಾಡಿದಳು. ಸೋಫಿಯಳ ಮಾತುಗಳಿಂದ ತಾಯಿ ಕ್ಷೋಭೆಗೊಳ್ಳಲಿಲ್ಲ. ಬದಲು, ಅವರೆಲ್ಲರಲ್ಲೂ ಸೋಫಿಯಳ ಮಾತು ಉಂಟುಮಾಡಿದ ಆಳವಾದ ಭಾವನೆಯಿಂದ, ಆಕೆ ಮೂಕಳಾದಳು. ಟನದ ದುಡಿಮೆಯ ಸಂಕೋಲೆಯೊಳಗೆ ಬಂಧಿತರಾದವರಿಗೆ, ಪ್ರೇಮದ ಸತ್ಯದ ಪ್ರಾಮಾಣಿಕ ಚಿಂತನೆಯ ಫಲಗಳನ್ನು ತರಬಯಸಿ ತಮ್ಮ ಪ್ರಾಣವನ್ನೆ ಅಪಾಯಕ್ಕೆ ಗುರಿಮಾಡಿದ ಜನರ ಬಗೆಗೆ ನಿಷ್ಠೆಯ ಕೃತಜ್ಞತೆಯಿಂದ ಆಕೆಯ ಹೃದಯ ತುಂಬಿತು.

"ದೇವರು ಅವರಿಗೆ ನೆರವಾಗಲಿ," ಎಂದು ತಾಯಿ ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತ ಯೋಚಿಸಿದಳು.

ಮುಂಜಾವದ ಹೊತ್ತಿಗೆ ಸೋಫಿಯ ಮಾತು ನಿಲ್ಲಿಸಿ, ತನ್ನ ಸುತ್ತಲೂ ಇದ್ದ ಪ್ರಕಾಶಮಾನವಾದ ಯೋಚನಾಪೂರ್ಣವಾದ ಮುಖಗಳನ್ನು ನೋಡಿ ಮುಗುಳ್ನಕ್ಕಳು.

"ನಾವು ಹೊರಡೋ ಹೊತ್ತಾಯ್ತು," ಎಂದಳು ತಾಯಿ.

"ಹೌದು, ಹೊತ್ತಾಯ್ತು," ಎಂದು ಸೋಫಿಯಳೂ ಧ್ವನಿಗೂಡಿಸಿದಳು.

ಹುಡುಗರಲ್ಲೊಬ್ಬ ಗಟ್ಟಿಯಾಗಿ ನಿಟ್ಟುಸಿರುಬಿಟ್ಟ.

ಅನಿರೀಕ್ಷಿತವಾದ ಮೃದು ಸ್ವರದಲ್ಲಿ ರೀಬಿನ್‌ನೆಂದ:

"ನೀವು ಹೋಗಲೇಬೇಕಾಗಿರುವುದು ನಮಗೆ ಬೇಸರವಾಗಿದೆ. ನೀವು ಚೆನ್ನಾಗಿ ಹೇಳಿದಿರಿ. ಜನರೆಲ್ಲಾ ಒಂದು ಎಂಬ ಭಾವನೆ ಹುಟ್ಟಿಸೋದು ದೊಡ್ಡ ವಿಷಯ. ನಾವು ಬಯಸೋದನ್ನೇ ಕೋಟ್ಯಂತರ ಜನರೂ ಬಯಸ್ತಾರೆ ಅಂತ ತಿಳಿದಾಗ ನಮ್ಮ ಹೃದಯ ಹೆಚ್ಚು ಮೃದುವಾಗ್ತದೆ. ಅಂಥ ಮೃದುತನವೇ ಬಲಶಾಲಿಯಾದ ಶಕ್ತಿ!"

ಯೆಫೀಮ್ ಮೆಲ್ಲನೆದ್ದು ನಕ್ಕು ಹೇಳಿದ:

"ಒಳ್ಳೇ ಮೃದುತನ! ಇನ್ನೊಬ್ಬ ಹಿಂದೆ ಬಂದು ಬೂಟುಗಾಲಿನಿಂದ ತುಳಿಯೋಕೆ ಅನುಕೂಲವಾಗ್ತದೆ. ಮಿಹಾಯ್‌ಲೊ ಮಾವಾ, ಬೇರೆ ಯಾರಾದರೂ ನೋಡೋಕ್ಮುಂಚೇನೇ ಅವರು ಹೊರಟುಹೋಗೋದು ಮೇಲು. ಕರಪತ್ರ

ಹಂಚೋಕೆ ಶುರು ಮಾಡಿದ ತಕ್ಷಣ, ಅದನ್ನು ತಂದವರು ಯಾರೂಂತ ಅಧಿಕಾರಿಗಳು ಹುಡುಕುತ್ತಾರೆ. ಆ ಯಾತ್ರಿಕರು ಇಲ್ಲಿಗೆ ಬಂದಿದ್ದರಲ್ಲಾ ನೆನಪಿದ್ಯೆ ಅಂತ ಯಾರಾದರೂ ಕೇಳ್ತಾರೆ...."

ಯೆಫಿಮ್ ಮಾತನ್ನು ಅಲ್ಲಿಗೇ ತಡೆದು ರೀಬಿನ್ ಹೇಳಿದ:

"ತಾಯಿ, ನೀನು ನಮಗೋಸ್ಕರ ವಹಿಸಿದ ತೊಂದರೆಗಾಗಿ ಧನ್ಯವಾದವಮ್ಮ. ನಿನ್ನ ನೋಡಿದಾಗಲೆಲ್ಲಾ ಪಾವೆಲ್‌ನ ನೆನಪಾಗ್ತದೆ. ನೀನು ಮಾಡ್ತಿರೋದು ಒಳ್ಳೇ ಕೆಲಸ."

ಈಗ ರೀಬಿನ್ ಸಾತ್ವಿಕನಾಗಿದ್ದ. ಮುಖದ ಮೇಲೆ ವಿಶಾಲವಾದ ಹೃತ್ಪೂರ್ವಕ ವಾದ ಮುಗುಳ್ನಗೆಯಿತ್ತು. ಗಾಳಿ ಶೀತಲವಾಗಿದ್ದರೂ ಕೋಟು ಧರಿಸದೆಯೇ, ತೆರೆದ ಷರಟಿನಲ್ಲೆ, ಎದೆ ತೋರಿಸುತ್ತ ಆತ ನಿಂತಿದ್ದ. ಆತನ ಆ ದೊಡ್ಡ ಆಕೃತಿಯನ್ನು ನೋಡಿ ತಾಯಿ ಮೆಲುದನಿಯಲ್ಲಿ ಹೇಳಿದಳು:

"ನೀನು ಏನನ್ನಾದರೂ ಹೊದ್ದುಕೊಳ್ಳೋದು ಮೇಲು. ಈಗ ಚಳಿ...."

"ನನ್ನ ಒಳಗಡೆ ಬೆಚ್ಚಗಿದೆ, ತಾಯಿ," ಎಂದು ಆತ ಉತ್ತರವಿತ್ತ.

ಮೂವರು ಹುಡುಗರು ಬೆಂಕಿಯ ಬಳಿ ತಗ್ಗಿದ ಧ್ವನಿಯಲ್ಲಿ ಮಾತನಾಡುತ್ತಿದ್ದರು. ಬೆಚ್ಚನೆ ಹೊದೆದುಕೊಂಡಿದ್ದ ಕಾಹಿಲೆ ಮನುಷ್ಯ ಅವರ ಪಾದಗಳ ಸಮೀಪದಲ್ಲಿ ಮಲಗಿದ್ದ. ಆಕಾಶ ನಿಸ್ತೇಜವಾಯಿತು, ನೆರಳುಗಳು ಕರಗಿದುವು, ಸೂರ್ಯನ ನಿರೀಕ್ಷಣೆಯಲ್ಲಿ ಎಲೆಗಳು ನಡುಗಿದುವು.

ರೀಬಿನ್ ತನ್ನ ಕೈಯನ್ನು ಸೋಫಿಯಳತ್ತ ಚಾಚುತ್ತ ಹೇಳಿದ:

"ಸರಿ. ಹೊರಡ್ತೀರಾ ಇನ್ನು?... ನಿಮ್ಮನ್ನು ಶಹರದಲ್ಲಿ ಭೇಟಿಯಾಗೋದು ಹ್ಯಾಗೆ?"

"ನೀನು ಹುಡುಕಬೇಕಾದ್ದು ನನ್ನನ್ನು," ಎಂದಳು ತಾಯಿ.

ಮೂವರು ಹುಡುಗರೂ ಸೋಫಿಯಳ ಬಳಿಗೆ ಬಂದು ಕೋಮಲವಾಗಿ ಸಂಕೋಚದಿಂದ ಆಕೆಯ ಕೈ ಕುಲುಕಿದರು. ಅವರಲ್ಲಿ ಪ್ರತಿಯೊಬ್ಬರೂ ಗುಪ್ತವಾದ ಸಂತೋಷದ ಸ್ನೇಹದ ಭಾವನೆಯನ್ನು ಅನುಭವಿಸುತ್ತಿದ್ದರು. ಆ ಭಾವನೆಯ ಹೊಸ ತನದಿಂದ ಅವರ ಸಂಕೋಚ ಮತ್ತಷ್ಟು ಹೆಚ್ಚಿತು. ಕಾಲುಗಳನ್ನು ಬದಲಾಯಿಸುತ್ತ ದೇಹವನ್ನು ಅಲುಗಿಸುತ್ತ, ನಿದ್ದೆಯಿಲ್ಲದೆ ಉರಿಯುತ್ತಿದ್ದ ಕಣ್ಣುಗಳಿಂದ ಮುಗುಳ್ನ ಗುತ್ತ, ಅವರು ಸೋಫಿಯಳನ್ನು ನೋಡಿದರು.

"ಹೊರಡೋಕ್ಮುಂಚೆ ಒಂದಿಷ್ಟು ಹಾಲು ಕುಡೀತೀರಾ?" ಎಂದು ಯಾಕೊವ್ ಕೇಳಿದ.

"ಮಿಕ್ಕಿದೆಯೇನು?" ಎಂದ ಯೆಫಿಮ್.

ಸಂಕಟಪಡುತ್ತ, ಕೂದಲಮೇಲೆ ಕೈಯಾಡಿಸುತ್ತಾ, ಇಗ್ನಾತ್‌ನೆಂದ:

"ಇಲ್ಲ, ನನ್ನ ಕಾಲೆಡವಿ ಹಾಲು ಚೆಲ್ಲಿಹೋಯ್ತು."

ಆ ಮಾತು ಕೇಳಿ ಎಲ್ಲರೂ ನಕ್ಕರು.

ಅವರೇನೋ ಹಾಲಿನ ಪ್ರಸ್ತಾಪವೆತ್ತಿದ್ದರು. ಆದರೆ ತಾಯಿಗೆ ಆ ಪ್ರಸ್ತಾಪದಿಂದ ಬೇರೆ ಯೋಚನೆಗಳು ಮೂಡಿದುವು. ಮಾತು ಹಾಲಿನದಾದರೂ ವಾಸ್ತವವಾಗಿ ಅವರು, ತನ್ನ ಮತ್ತು ಸೋಫಿಯಳ ಬಗ್ಗೆ ಸದ್ಭಾವನೆಯಿಂದ ತುಂಬಿ ಶುಭವನ್ನು ಬಯಸುತ್ತಿದ್ದಾರೆಂದು ತಾಯಿ ಮನಗಂಡಳು. ಸೋಫಿಯಳಿಗೂ ಇದು ಅರಿವಾಗದಿರಲಿಲ್ಲ. ಕಸಿವಿಸಿಯಿಂದಲೂ ಪರಿಶುದ್ಧವಾದ ವಿನಯದಿಂದಲೂ ಆಕೆಯ ಹೃದಯ ತುಂಬಿ ಬಂದು ಕಂಠ ಬಿಗಿದುಕೊಂಡಿತು.

"ಉಪಕಾರವಾಯ್ತು, ಸಂಗಾತಿಗಳೆ," ಎಂದಷ್ಟೆ ಹೇಳಲು ಆಕೆ ಸಮರ್ಥಳಾದಳು.

"ಸಂಗಾತಿಗಳೆ" ಎಂಬ ಪದ, ತಮ್ಮನ್ನು ಮೆಲ್ಲನೆತ್ತಿ ಗಾಳಿಯಲ್ಲಿ ಬೀಸಿದ ಹಾಗಾಗಿ. ಹುಡುಗರು ಪರಸ್ಪರರನ್ನು ನೋಡಿದರು.

ಕಾಹಿಲೆ ಮನುಷ್ಯ ಅಳ್ಳೆ ಬಿರಿಯುವ ಹಾಗೆ ಕೆಮ್ಮಿದ. ಅಳಿಯುತ್ತಿದ್ದ ಬೆಂಕಿಯ ಕೆಂಡಗಳು ಜ್ವಲಿಸುವುದು ನಿಂತಿತು.

"ನಮಸ್ಕಾರ," ಎಂದರು ರೈತರು ಶಾಂತವಾಗಿ. ಅಗಲಿಕೆಯ ವ್ಯಥೆಯಿಂದ ಹೊರಟು ಬಂದ ವಿಷಾದದ ಈ ಪದ ಹೆಂಗಸರ ಕಿವಿಗಳಲ್ಲಿ ದೀರ್ಘಕಾಲದವರೆಗೂ ಮೊರೆಯಿತು.

ಆ ಮುಂಬೆಳಗಿನಲ್ಲಿ ಕಾಡು ಹಾದಿಯಲ್ಲಿ ಅವರಿಬ್ಬರು ಸಾವಧಾನವಾಗಿ ನಡೆದರು.

ಸೋಫಿಯಳ ಹಿಂದೆ ನಡೆಯುತ್ತ ತಾಯಿ ಹೇಳಿದಳು:

"ಎಷ್ಟೊಂದು ಸೊಗಸಾಗಿತ್ತು! ಕನಸಿನ ಹಾಗೆ. ಸತ್ಯ ತಿಳಿಯೋ ಆಸೆ ನಮ್ಮ ಜನಕ್ಕೆ – ಅದನ್ನು ತಿಳಿದೇ ತೀರ್ಬೇಕು ಅನ್ನೋ ಹಂಬಲ. ದೊಡ್ಡ ಹಬ್ಬದ ದಿನಗಳಲ್ಲಿ ಬೆಳಗಿನ ಪ್ರಾರ್ಥನೆಯ ಹೊತ್ತಿಗೆ ಚರ್ಚಿನಲ್ಲಿ ನಡೆಯೋ ಹಾಗೆ. ಪಾದ್ರಿ ಬಂದಿರೋದಿಲ್ಲ. ಮೈರೋಮ ಮುಳ್ಳಾಗುವ ಹಾಗೆ ಪ್ರತಿಯೊಂದೂ ಕತ್ತಲಾಗಿ ಶಾಂತವಾಗಿರ್ತದೆ. ಜನರು ಆಗಲೇ ಬರತೊಡಗ್ತಾರೆ. ಯಾರೋ ಒಬ್ಬರು ಪ್ರತಿಮೆಯ ಮುಂದೆ ಮೋಂಬತ್ತಿ ಹಚ್ತಾರೆ. ಬೇರೊಂದು ಕಡೆ ಬೇರೊಬ್ಬರು. ಸ್ವಲ್ಪಸ್ವಲ್ಪವಾಗಿಯೇ ದೇವರ ಮನೆಯಲ್ಲಿ ಬೆಳಕಿಗೆ ಜಾಗಮಾಡ್ಕೊಟ್ಟು, ಕತ್ತಲೆ ಓಡಿಹೋಗ್ತದೆ."

ತಾಯಿಯ ಮಾತು ಕೇಳಿ ಸಂತೋಷಪಡುತ್ತಾ ಸೋಫಿಯ ಅಂದಳು:

"ಎಷ್ಟು ನಿಜ! ಇಲ್ಲಿ ಇಡೀ ಜಗತ್ತೇ ದೇವರಮನೆ, ಅಷ್ಟೆ!"

ತಾಯಿ ಆಳವಾಗಿ ಯೋಚಿಸುತ್ತಾ ತಲೆದೂಗುತ್ತಾ ಹೇಳಿದಳು:

"ಇಡೀ ಜಗತ್ತು! ನಂಬಬಹುದೋ ಬಾರದೋ ಎನ್ನುವಷ್ಟು ಸತ್ಯ.... ನೀವು ಅವರೆದುರು ಬಹಳ ಚೆನ್ನಾಗಿ ಮಾತಾಡಿದಿರಿ.... ಅವರು ನಿಮ್ಮನ್ನ ಮೆಚ್ಕೊಳ್ಳೋದಿಲ್ಲಾಂತ ನಾನು ಭಾವಿಸಿದ್ದೆ!"

ಸೋಫಿಯು ಒಂದು ಕ್ಷಣ ಮೌನವಾಗಿದ್ದು ಶಾಂತವಾಗಿ ಗಂಭೀರವಾಗಿ ಹೇಳಿದಳು:

"ಅವರ ಜತೇಲಿರೋದರಿಂದ ನಾವು ಮತ್ತಷ್ಟು ಸರಳರಾಗ್ತೇವೆ."

ರೀಬಿನ್, ಕಾಹಿಲೆ ಮನುಷ್ಯ, ಮತ್ತು ಮೌನವಾಗಿ ಸಂಕೋಚಪಡುತ್ತ ಕಿವಿಗೊಟ್ಟು ಕೇಳಿದ, ಆದರೆ ಸಣ್ಣಪುಟ್ಟ ಸೇವೆಗಳ ಮೂಲಕ ತಮ್ಮ ಕೃತಜ್ಞತೆಯನ್ನು ಅರ್ಥಪೂರ್ಣವಾಗಿ ತೋರಿಸಿದ ಹುಡುಗರು – ಇವರೆಲ್ಲರನ್ನು ಕುರಿತು ಮಾತನಾಡುತ್ತಾ, ತಾಯಿಯೂ ಸೋಫಿಯಳೂ ಹಾದಿನಡೆದರು. ಅವರು ಹೊಲಗಳಿಗೆ ಇಳಿದರು; ಸೂರ್ಯ ಮೇಲೇರಿ ಅವರನ್ನು ಸಂಧಿಸಿದ. ಇನ್ನೂ ಮರೆಯಾಗಿದ್ದಾಗಲೇ ಸೂರ್ಯ ತನ್ನ ಹೊಂಬಣ್ಣದ ಕನ್ನಡಿಯಂತಹ ಕಿರಣಗಳನ್ನು ಆಕಾಶದ ಅಗಲಕ್ಕೂ ಹರಡಿದ. ಹುಲ್ಲಿನ ಮೇಲಿದ್ದ ಹಿಮಕಣಗಳೆಲ್ಲ ವಸಂತ ಸುಖದ ಸಂತೋಷದಿಂದ ವರ್ಣರಂಜಿತವಾಗಿ ಮಿನುಗಿದುವು. ಹಕ್ಕಿಗಳು ಎಚ್ಚರಗೊಂಡು ತಮ್ಮ ಉತ್ಸಾಹದ ಹಾಡಿನಿಂದ ಪ್ರಾತಃಕಾಲಕ್ಕೆ ಜೀವ ತುಂಬಿದುವು. ದಪ್ಪಗಿನ ಕಾಗೆಗಳು ಭಾರವಾದ ರೆಕ್ಕೆಗಳನ್ನು ಬಡಿಯುತ್ತ ಕಾ ಕ್ಕಾ ಎನ್ನುತ್ತ ಹಾರಿಹೋದುವು. ಬೇರೊಂದು ಹಕ್ಕಿಯ ಸಿಳ್ಳಿನ ಧ್ವನಿ ಎಲ್ಲಿಯೋ ದೂರದಿಂದ ಕೇಳಿಸಿತು. ದೂರದ ವಿಸ್ತಾರಗಳು ತೆರೆದುಕೊಂಡು, ಎಲ್ಲ ಬೆಟ್ಟಗಳ ಮೇಲಿಂದಲೂ ಕತ್ತಲೆಯ ನೆರಳುಗಳನ್ನು ಕಿತ್ತು ತೆಗೆಯುತ್ತಾ, ಉದಯಿಸುತ್ತಿದ್ದ ಸೂರ್ಯನಿಗೆ ಸ್ವಾಗತ ಬಯಸಿದುವು.

ಯೋಚನಾಮಗ್ನಳಾಗಿಯೇ ತಾಯಿ ಮಾತನಾಡಿದಳು:

"ಕೆಲವೊಮ್ಮೆ ಮನುಷ್ಯ ಮಾತಾಡ್ತಾನೇ ಇರ್ತಾನೆ. ಅವನು ಏನು ಹೇಳ್ತಿದಾನೇಂತ ಗೊತ್ತೇ ಆಗೋದಿಲ್ಲ. ಆದರೆ ಒಮ್ಮೆ ಅವನು ಹೇಳೋ ಸರಳವಾದ ಯಾವುದಾದರೂ ಪದ ಪ್ರತಿಯೊಂದನ್ನೂ ಸ್ಪಷ್ಟಪಡಿಸುತ್ತೆ. ಕಾಹಿಲೆ ಮನುಷ್ಯನ ವಿಷಯದಲ್ಲಿ ಹಾಗಿತ್ತು. ಕಾರಖಾನೆಯಲ್ಲೂ ಬೇರೆ ಕಡೆಗಳಲ್ಲೂ ಕೆಲಸಗಾರರ್ನ ಯಾವ ರೀತಿ ದುಡಿಸಿಕೊಳ್ತಾರೆ ಅನ್ನೋ ವಿಷಯ ನಾನು ಬಹಳ ಕೇಳಿದ್ದೇನೆ, ಸ್ವತಃ ಬಹಳ ನೋಡಿದ್ದೇನೆ. ಅದು ಅಭ್ಯಾಸವಾಗ್ತದೆ, ಹೃದಯಕ್ಕೇನೂ ನಾಟೋದಿಲ್ಲ. ಆದರೆ ಮಾತಾಡ್ತಾ ಒಮ್ಮೆಲೆ ಆತ ಅಂದದ್ದು ಬಲವಾದ ಪೆಟ್ಟಿನ ಹಾಗಿತ್ತು. ಎಷ್ಟು ನಾಚಿಕೆಗೇಡು! ಓ ದೇವರೇ! ಮಾಲೀಕರು ತುಚ್ಛವಾಗಿ ನಡೆದುಕೊಳ್ಳೋದಕ್ಕೋಸ್ಕರವೇ ಕೆಲಸಗಾರರು ಆ ರೀತಿ ಜೀವ ತೇಯೋದೂ ಅಂದರೆ? ಅದನ್ನು ಸಮರ್ಥಿಸೋದು ಹ್ಯಾಗೆ ಸಾಧ್ಯ?"

ತಾಯಿಯ ಯೋಚನೆಗಳು ಆ ಒಬ್ಬ ಮನುಷ್ಯನ ಬಗೆಗೇ ನೆಟ್ಟಿದ್ದವು. ಎಲ್ಲವನ್ನು ಅಣಕಿಸುವ ಹಾಗಿದ್ದ ಅದೊಂದು ಜೀವದ ಮಂದ ಪ್ರಕಾಶ, ತಾಯಿ ಎಂದೋ ಕೇಳಿ, ಯಾವಾಗಲೋ ಮರೆತಿದ್ದ ಅಂತಹ ಇನ್ನೆಷ್ಟೋ ಜೀವಗಳ ಮೇಲೆ ಬಿದ್ದಿತು ಆಕೆಯ ಯೋಚನೆ.

"ಇವರೆಲ್ಲಾ ಅನುಭವಿಸಿ ಅನುಭವಿಸಿ ಸಾಕಾಗಿ ಹೋದ ಜನರ ಹಾಗಿದಾರೆ.

ಒಬ್ಬ ಅಮಲ್ದಾರ ಏನು ಮಾಡ್ತಿದ್ನಂತೆ ಗೊತ್ತೆ? ಅವನ ಕುದುರೆ ಹಳ್ಳಿಯನ್ನು ಹಾದು ಹೋಗ್ತಿದ್ದಾಗಲೆಲ್ಲಾ ರೈತರು ಆ ಕುದುರೆಗೆ ಬಾಗಿ ವಂದಿಸೋ ಹಾಗೆ ಮಾಡ್ತಿ ದ್ನಂತೆ. ಯಾರಾದರೂ ಬಾಗಿ ವಂದಿಸದೇ ಇದ್ದರೆ ಅವರ ದಸ್ತಗಿರಿಯಾಗ್ತಿತ್ತು.... ಅವನು ಯಾಕಾದರೂ ಹಾಗೆ ಮಾಡ್ಬೇಕಾಗಿತ್ತು?" ಅದರಲ್ಲೇನಾದರೂ ಅರ್ಥ ಏದೇಂತ್ಲೆ ?..."

....ಮುಂಜಾನೆಯಷ್ಟೇ ಚೈತನ್ಯಪೂರ್ಣವಾಗಿದ್ದ ಗೀತೆಯೊಂದನ್ನು ಸೋಫಿಯ ಮೆಲ್ಲನೆ ಹಾಡತೊಡಗಿದಳು.

೭

ವಿಚಿತ್ರವಾದೊಂದು ನೆಮ್ಮದಿಯಿಂದ ತಾಯಿಯ ಜೀವನ ಪ್ರವಾಹ ಹರಿಯಿತು. ಒಮ್ಮೊಮ್ಮೆ ಆ ನೆಮ್ಮದಿಯನ್ನು ಕಂಡು ಆಕೆಗೆ ಆಶ್ಚರ್ಯವಾಗುತ್ತಿತ್ತು. ಆಕೆಯ ಮಗ ಸೆರೆಮನೆಯಲ್ಲಿದ್ದ. ಕಠಿಣ ಶಿಕ್ಷೆ ಆತನಿಗೆ ದೊರೆಯುವುದೆಂಬುದೂ ಅವಳಿಗೆ ತಿಳಿದಿತ್ತು. ಆದರೆ ಆ ವಿಷಯವಾಗಿ ಯೋಚಿಸಿದಾಗಲೆಲ್ಲಾ ಮನಸ್ಸು, ಆಕೆಗೆ ಅರಿಯ ದಂತೆಯೇ, ಅಂದ್ರೇಯ್, ಫ್ಯೋದೊರ್ ಮತ್ತಿತರ ಹಲವರ ನೆನಪುಗಳಿಂದ ತುಂಬು ತ್ತಿತ್ತು. ಆಕೆಯ ದೃಷ್ಟಿಯಲ್ಲಿ, ಮಗನ ಆಕೃತಿ, ಅದೇ ಸ್ಥಿತಿಯಲ್ಲಿದ್ದ ಎಲ್ಲರನ್ನೂ ಅಪ್ಪಿಕೊಳ್ಳುವವರೆಗೂ ಬೆಳೆಯುತ್ತಿತ್ತು. ಆಗ ಆಕೆ ಯೋಚನಾಮಗ್ನಳಾಗುತ್ತಿದ್ದಳು. ಪಾವೆಲ್‌ನನ್ನು ಕುರಿತಾದ ಯೋಚನೆಗಳು ಆಕೆಗೆ ತಿಳಿಯದಂತೆಯೇ ತಾವಾಗಿಯೇ ವಿಸ್ತಾರಗೊಂಡು ಶಾಖೆ ಉಪಶಾಖೆಗಳಾಗಿ ಎಲ್ಲ ದಿಕ್ಕುಗಳಿಗೂ ಹರಡುತ್ತಿದ್ದುವು. ಅವುಗಳ ಸೊಗಸಾದ ತಡವುತ್ತಿದ್ದ ಕಿರಣಗಳು ಎಲ್ಲೆಡೆಗೂ ಸಂಚರಿಸುತ್ತಿದ್ದುವು. ಎಲ್ಲ ಸಂಭವಗಳ ಮೇಲೂ ಬೆಳಕು ಹಾಯಿಸಿ, ಅವುಗಳೆಲ್ಲದರ ಏಕರೂಪತೆಯನ್ನು ತೋರಿ ಸುವುದಕ್ಕೋಸ್ಕರ ಪ್ರತಿಯೊಂದನ್ನೂ ಸಮೀಪಿಸಿ ಮುಟ್ಟುತ್ತಿದ್ದುವು. ಇದರಿಂದಾಗಿ ಯಾವುದಾದರೂ ಒಂದು ವಿಷಯವನ್ನು ಕುರಿತು ಆಕೆ ಯೋಚಿಸುವುದಕ್ಕಾಗಲಿಲ್ಲ; ತನ್ನ ಮಗನ ವಿಷಯವಾಗಿ ಹಂಬಲ ಭೀತಿಗಳ ಚಿಂತೆ ಮಾಡುವುದಕ್ಕಾಗಲಿಲ್ಲ.

ಸೋಫಿಯ ಬೇಗನೆ ಹೊರಟು ಹೋದಳು. ಐದು ದಿನಗಳ ಬಳಿಕ ಉತ್ಸಾ ಹಯಾಗಿ ಸಂತೋಷಚಿತ್ತಳಾಗಿ ವಾಪಸು ಬಂದಳು. ಕೆಲವೇ ಗಂಟೆಗಳೊಳಗೆ ಮತ್ತೆ ಅದೃಶ್ಯಳಾಗಿ ಎರಡು ವಾರಗಳ ನಂತರ ಹಿಂತಿರುಗಿದಳು. ಜೀವನದ ವಿಸ್ತಾರವಾದ ವೃತ್ತಗಳಲ್ಲಿ ಆಕೆ ಸುತ್ತುತ್ತಿದ್ದಂತೆ, ಹಾಗೆ ಸುತ್ತುತ್ತ ಆಗಾಗ್ಗೆ ತನ್ನ ತಮ್ಮನಲ್ಲಿಗೆ ಬಂದು ಆ ಮನೆಯನ್ನು ಧೈರ್ಯದಿಂದಲೂ ಸಂಗೀತದಿಂದಲೂ ತುಂಬುತ್ತಿದ್ದಂತೆ ತಾಯಿಗೆ ತೋರುತ್ತಿತ್ತು.

ತಾಯಿ ಸಂಗೀತವನ್ನು ಪ್ರೀತಿಸತೊಡಗಿದಳು. ಸಂಗೀತಕ್ಕೆ ಕಿವಿಗೊಡುತ್ತಿದ್ದಾಗ, ಬೆಚ್ಚಗಿನ ಅಲೆಗಳು ತನ್ನ ಎದೆಗೆ ಅಪ್ಪಳಿಸಿ, ಹೃದಯವನ್ನು ಶುಚಿಗೊಳಿಸಿ, ಅದು ಹೆಚ್ಚು ಸರಾಗವಾಗಿ ಮಿಡಿಯುವಂತೆ, ಸಂಗೀತದ ಪ್ರಭಾವಕ್ಕೊಳಗಾಗಿ ಯೋಚನೆಯ

ಬಲವಾದ ಕುಡಿಗಳು ಚೆನ್ನಾಗಿ ನೀರು ಹನಿಸಿದ ನೆಲದೊಳಗಿಂದ ಬೀಜಗಳು ಮೊಳ ಕೆಯೊಡೆಯುವ ಹಾಗೆ, ಸುಲಭವಾಗಿಯೂ ಸುಂದರವಾಗಿಯೂ ಮಾತುಗಳಾಗಿ ಅರಳುವಂತೆ, ತಾಯಿಗೆ ತೋರುತ್ತಿತ್ತು.

ಸೋಫಿಯ ಎಂದೂ ಶುಚಿಯಾಗಿರುತ್ತಿರಲಿಲ್ಲ. ಅಂತಹ ಸ್ಥಿತಿಗೆ ಹೊಂದಿ ಕೊಳ್ಳುವುದು ತಾಯಿಗೆ ಬಲು ಕಷ್ಟವಾಗುತ್ತಿತ್ತು. ಸೋಫಿಯ ತನ್ನ ಸಿಗರೇಟುಗಳನ್ನೂ ಬೂದಿಯನ್ನೂ ಸಾಮಾನುಗಳನ್ನೂ ಚೆಲ್ಲಾಪಿಲ್ಲಿಯಾಗಿ ಹರಡುತ್ತಿದ್ದಳು. ನಿಕೊಲಾಯ್ ಯಾವಾಗಲೂ ಶಾಂತ ಆತ್ಮವಿಶ್ವಾಸದಿಂದ ಮೃದು ಗಾಂಭೀರ್ಯದಿಂದ ಮಾತನಾ ಡುತ್ತಿದ್ದ. ಸೋಫಿಯ ತದ್ವಿರುದ್ಧವಾಗಿದ್ದಳು. ಆಕೆಯ ಪಾಲಿಗೆ ಸಂಭಾಷಣೆಯೂ ಭಾವೋದ್ರೇಕದ ಭಾಷಣವಾಗುತ್ತಿತ್ತು. ಅದನ್ನೂ ಸಹಿಸಿಕೊಳ್ಳುವುದು ತಾಯಿಗೆ ಕಷ್ಟವಾಗುತ್ತಿತ್ತು. ಸೋಫಿಯ ತನಗೆ ವಯಸ್ಸಾಗಿದೆ ಎಂದು ಸಾಧಿಸ ಹೊರಟ ಜನ ರನ್ನೆಲ್ಲ ಕುತೂಹಲದ ಗೊಂಬೆಗಳನ್ನಾಗಿ ಕಾಣುವ, ನೆರೆಯದ ಹುಡುಗಿಯ ಹಾಗೆ, ತಾಯಿಗೆ ತೋರುತ್ತಿದ್ದಳು. ಸೋಫಿಯ ಯಾವಾಗಲೂ ಮಡಿಮೆಯ ಪಾವಿತ್ರ್ಯದ ವಿಷಯವಾಗಿ ಮಾತನಾಡುತ್ತಿದ್ದಳು; ಆದರೆ ತನ್ನ ಅಶುಚಿಯಿಂದಾಗಿ ಯಾವಾಗಲೂ ತಾಯಿಯ ದುಡಿಮೆಯನ್ನು ಹೆಚ್ಚಿಸುತ್ತಿದ್ದಳು. ಆಕೆ ಸ್ವಾತಂತ್ರ್ಯದ ವಿಷಯವಾಗಿ ಗಂಭೀರವಾಗಿ ಮಾತನಾಡುತ್ತಿದ್ದಳು; ಆದರೆ ತಾನು ಮಾತ್ರ ಇತರರಿಗೆ ತನ್ನ ಅಸಹ ನೆಯಿಂದಲೂ ಎಡೆಬಿಡದ ಚರ್ಚೆಯಿಂದಲೂ ಹಿಂಸೆಕೊಡುತ್ತಿದ್ದಳು. ಆಕೆಯಲ್ಲಿ ಇಂತಹ ಅಂತರ್ವಿರೋಧಗಳು ಬೇಕಷ್ಟು ಇದ್ದುವು. ಇದನ್ನು ಮನಗಂಡ ತಾಯಿ ಆಕೆಯೊಡನೆ ಬಲು ಎಚ್ಚರದಿಂದ ವರ್ತಿಸಿದಳು. ನಿಕೊಲಾಯ್‌ನ ವಿಷಯದಲ್ಲಿ ತನಗಿದ್ದ ಏಕಪ್ರ ಕಾರವಾದ ಸೌಹಾರ್ದಭಾವದಿಂದಲೇ ಸೋಫಿಯಳನ್ನೂ ಕಾಣುವುದು ತಾಯಿ ಯಿಂದಾಗಲಿಲ್ಲ.

ನಿಕೊಲಾಯ್ ಕ್ರಮಬದ್ಧವಾದ ಬರಡೆನಿಸುವಂತಹ ಜೀವನವನ್ನು ನಡೆಸುತ್ತಾ ಇತರರ ಹಿತಚಿಂತನೆಯಲ್ಲೇ ಇರುತ್ತಿದ್ದ. ಪ್ರತಿದಿನವೂ ಬೆಳಗ್ಗೆ ಎಂಟು ಗಂಟೆಗೆ ಚಹಾ ಕುಡಿಯುತ್ತಿದ್ದ; ಅದನ್ನು ಕುಡಿಯುತ್ತಿದ್ದಂತೆ ಪತ್ರಿಕೆಯನ್ನೋದುತ್ತ ಆತ ತಾಯಿಗೆ ವಾರ್ತೆಗಳನ್ನು ತಿಳಿಸುತ್ತಿದ್ದ. ಆತನ ಮಾತುಗಳನ್ನು ಕೇಳುತ್ತ ತಾಯಿಗೆ, ಜೀವನದ ಬೃಹತ್ ಯಂತ್ರ ಎಷ್ಟೊಂದು ನಿರ್ದಯವಾಗಿ ಜನರನ್ನೆಲ್ಲ ಹಣವಾಗಿ ಮಾರ್ಪ ಡಿಸುತ್ತಿದೆ ಎಂಬುದು, ಆಶ್ಚರ್ಯವೆನಿಸುವಷ್ಟು ಸ್ಪಷ್ಟವಾಗಿ ಅರ್ಥವಾಗುತ್ತಿತ್ತು. ನಿಕೊಲಾಯ್‌ಗೂ ಅಂದ್ರೇಯ್‌ಗೂ ಹಲವು ಸಮಾನ ಗುಣಗಳಿದ್ದುದನ್ನು ತಾಯಿ ಕಂಡಳು. ಹೊಹೋಲನಂತೆ ಈತನೂ ಜನರ ವಿಷಯವಾಗಿ ದ್ವೇಷವಿಲ್ಲದೆ ಮಾತನಾ ಡುತ್ತಿದ್ದ. ನಿಕೊಲಾಯ್‌ನ ದೃಷ್ಟಿಯಲ್ಲಿ ಜೀವನದ ಈ ಅವ್ಯವಸ್ಥೆಗೆ ಎಲ್ಲರೂ ಕಾರ ಣರು. ಆದರೆ ಹೊಸ ಬದುಕಿನ ಬಗೆಗೆ ಆತನಿಗಿದ್ದ ಶ್ರದ್ಧೆ, ಅಂದ್ರೇಯ್‌ನ ಶ್ರದ್ಧೆಯಷ್ಟು ಬಲವಾಗಿರಲಿಲ್ಲ, ಸ್ಪಷ್ಟವಾಗಿರಲಿಲ್ಲ. ನಿಕೊಲಾಯ್ ಯಾವಾಗಲೂ, ಕಟ್ಟುನಿಟ್ಟಾದ ಪ್ರಾಮಾಣಿಕನಾದ ನ್ಯಾಯಾಧೀಶನ ಶಾಂತಸ್ವರದಲ್ಲಿ ಮಾತನಾಡುತ್ತಿದ್ದ. ಅತ್ಯಂತ

ಭೀಕರವಾದ ವಿಷಯಗಳನ್ನು ಪ್ರಸ್ತಾಪಿಸುತ್ತಿದ್ದಾಗಲೂ ವಿಷಾದದ ಮೃದುವಾದ ಮುಗುಳ್ನಗೆಯೊಂದು ಆತನ ತುಟಿಗಳ ಮೇಲಿರುತ್ತಿತ್ತು. ಕಣ್ಣುಗಳು ಕಠಿನವಾಗಿ ಶೀತಲವಾಗಿ ಹೊಳೆಯುತ್ತಿದ್ದುವು. ಈ ಕಣ್ಣುಗಳ ಹೊಳಪನ್ನು ನೋಡಿದಾಗ ತಾಯಿಗೆ, ಈತನು ಯಾರನ್ನೂ ಎಂದಿಗೂ ಕ್ಷಮಿಸುವವನೇ ಅಲ್ಲ – ಕ್ಷಮಿಸುವುದು ಈತನಿಂದ ಸಾಧ್ಯವೇ ಇಲ್ಲ – ಎಂಬುದು ಸ್ಪಷ್ಟವಾಗುತ್ತಿತ್ತು. ಈ ಕಾಠಿನ್ಯ ಕಷ್ಟದ್ದೆಂದು ಆತನೂ ತಿಳಿದಿದ್ದನೆಂಬುದು ತಾಯಿಗೆ ಗೊತ್ತಿತ್ತು. ಹೀಗಾಗಿ ಆಕೆ ಆತನ ವಿಷಯವಾಗಿ ಕನಿಕರ ತೋರಿದಳು. ಅವನ ಮೇಲಿನ ಆಕೆಯ ಪ್ರೀತಿ ದಿನದಿನಕ್ಕೆ ಹೆಚ್ಚಿತು.

ಒಂಭತ್ತು ಘಂಟೆಗೆ ಆತ ಕೆಲಸಕ್ಕೆ ಹೋಗುತ್ತಿದ್ದ. ಆಮೇಲೆ ತಾಯಿ ಮನೆಯನ್ನೆಲ್ಲ ಶುಚಿಗೊಳಿಸಿ, ಅಡುಗೆಮಾಡಿ, ಸ್ನಾನಮಾಡಿ, ಶುಭ್ರವಾದ ಉಡುಪನ್ನು ಧರಿಸಿಕೊಂಡು, ತನ್ನ ಕೊಠಡಿಯಲ್ಲಿ ಪುಸ್ತಕದೊಳಗಿನ ಚಿತ್ರಗಳನ್ನು ನೋಡುತ್ತ ಕುಳಿತುಕೊಳ್ಳುತ್ತಿದ್ದಳು. ಈಗಾಗಲೇ ಆಕೆಗೆ ಓದಲು ಬರುತ್ತಿತ್ತು. ಆದರೆ ಓದುವಿಕೆ ಬಲು ಪ್ರಯಾಸಕರವಾಗಿರುತ್ತಿತ್ತು; ಬೇಗನೆ ಆಯಾಸವಾಗುತ್ತಿತ್ತು. ಒಂದು ಪದಕ್ಕೂ ಇನ್ನೊಂದು ಪದಕ್ಕೂ ಇರುವ ಸಂಬಂಧವನ್ನು ಆಕೆ ಗ್ರಹಿಸಲಾರದೆ ಹೋಗುತ್ತಿದ್ದಳು. ಚಿತ್ರಗಳನ್ನು ನೋಡುತ್ತಿದ್ದಾಗ ಮಾತ್ರ ಮಗುವಿನ ಹಾಗೆ ಖುಷಿಯಾಗುತ್ತಿತ್ತು. ತಾನು ತಿಳಿದುಕೊಂಡಂಥ, ಹೆಚ್ಚುಕಡಮೆ ಸಾಧ್ಯವೆಂದೇ ನಂಬಿದಂಥ, ಹೊಸ ಆಶ್ಚರ್ಯಕರವಾದ ಪ್ರಪಂಚವನ್ನು ಆ ಚಿತ್ರಗಳು ತೋರಿಸಿಕೊಡುತ್ತಿದ್ದುವು. ವಿಶಾಲವಾದ ನಗರಗಳು, ಸುಂದರ ಕಟ್ಟಡಗಳು, ಯಂತ್ರಗಳು, ಹಡಗುಗಳು, ಸ್ಮಾರಕಗಳು, ಮನುಷ್ಯ ತನ್ನ ಕೈಯಿಂದಲೇ ನಿರ್ಮಿಸಿದ ಅಮೂಲ್ಯ ಸಂಪತ್ತು, ಪ್ರಕೃತಿಯ ವಿಧವಿಧದ ಸೃಷ್ಟಿಗಳು – ಇವುಗಳೆಲ್ಲ ತಮ್ಮ ವೈವಿಧ್ಯದಿಂದ ತಾಯಿಯ ಮನಸ್ಸನ್ನು ಮುದಗೊಳಿಸುತ್ತಿದ್ದುವು. ಜೀವನ ಕೊನೆಯಿಲ್ಲದೆ ವಿಸ್ತಾರವಾಗುತ್ತಲೇ ಇತ್ತು. ಹಿರಿದಾದ ಆಶ್ಚರ್ಯಕರವಾದ ಆವರೆಗೂ ನೋಡದೇ ಇದ್ದ ಏನನ್ನಾದರೂ ಹೊಸತನ್ನು ಅದು ತೋರಿಸುತ್ತಲೇ ಇತ್ತು. ತನ್ನ ಅಗಾಧ ಸಂಪತ್ತಿನಿಂದ ಅಪಾರ ಸೌಂದರ್ಯದಿಂದ, ಈ ಎಚ್ಚೆತ್ತ ಹೆಂಗಸಿನ ಹಸಿದ ಹೃದಯವನ್ನು ಮತ್ತಷ್ಟು ಕೆರಳಿಸುತ್ತಲಿತ್ತು. ಪ್ರಾಣಿವಿಜ್ಞಾನದ ಚಿತ್ರ ಪುಸ್ತಕಗಳನ್ನು ಆಕೆ ವಿಶೇಷವಾಗಿ ಪ್ರೀತಿಸುತ್ತಿದ್ದಳು. ಆ ಪುಸ್ತಕಗಳು ಅನ್ಯ ಭಾಷೆಯಲ್ಲಿದ್ದರೂ ತಾಯಿಗೆ ಅವು ಈ ಪ್ರಪಂಚದ ಸಂಪತ್ತು, ಸೌಂದರ್ಯ, ವಿಸ್ತಾರಗಳ ಸುಸ್ಪಷ್ಟ ಕಲ್ಪನೆಯನ್ನು ಮಾಡಿಕೊಡುತ್ತಿದ್ದುವು.

"ಜಗತ್ತು ಎಷ್ಟೊಂದು ವಿಶಾಲವಾಗಿದೆ!" ಎಂದು ಆಕೆ ನಿಕೊಲಾಯ್‌ನ ಎದುರು ಒಂದು ದಿನ ಉದ್ಗಾರವೆತ್ತಿದಳು.

ಚಿಕ್ಕಪುಟ್ಟ ಪ್ರಾಣಿಗಳ, ವಿಶೇಷವಾಗಿ ಬಣ್ಣದ ಚಿಟ್ಟೆಗಳ ಚಿತ್ರಗಳನ್ನು ಕಂಡಾಗ ತಾಯಿಗೆ ಅತ್ಯಂತ ಸಂತೋಷವಾಗುತ್ತಿತ್ತು. ಆ ಚಿತ್ರಗಳನ್ನು ಬೆರಗು ನೋಟದಿಂದ ನೋಡುತ್ತ, ಒಮ್ಮೆ ತಾಯಿ ಹೇಳಿದಳು:

"ಇವು ಸುಂದರವಾಗಿವೆ, ಅಲ್ವೆ ನಿಕೊಲಾಯ್ ಇವಾನೊವಿಚ್? ಈ ಪ್ರಿಯ

ವಾದ ಸೌಂದರ್ಯ ಎಲ್ಲಾ ಕಡೆಯೂ ಎಷ್ಟೊಂದಿದೆ!... ಆದರೆ ನಮ್ಮ ಪಾಲಿಗೆ ಮಾತ್ರ ಅದಿಲ್ಲ. ವೇಗವಾಗಿ ಕಣ್ಣಿಗೆ ಬೀಳದೆಯೇ ಹಾರಿಹೋಗ್ತಿದೆ. ಜನ ಇದೊಂದನ್ನೂ ತಿಳೀದೆ ಅವಸರ ಅವಸರವಾಗಿ ಅತ್ತಿತ್ತ ಹೋಗ್ತಲೇ ಇರ್ತಾರೆ. ತಮ್ಮ ದೃಷ್ಟೀನ ಸಂತೋಷಪಡಿಸುವಂಥಾದ್ದನ್ನು ಅವರು ಕಾಣೋದಿಲ್ಲ. ಅದನ್ನು ತಿಳಿಯೋದಕ್ಕೆ ಅವರಿಗೆ ಪುರಸೊತ್ತೂ ಇಲ್ಲ, ನೋಡ್ಬೇಕೂಂತ ಆಸೆಯೂ ಇಲ್ಲ. ಪ್ರಪಂಚದ ಸಂಪ ತ್ತನ್ನೂ ಅಲ್ಲಿರೋ ಆಶ್ಚರ್ಯಕರವಾದ ಅನೇಕ ಜೀವಿಗಳನ್ನೂ ನಾವು ತಿಳಿದುಕೊಂಡರೆ, ನಮಗೆ ನಾವೇ ಎಷ್ಟೊಂದು ಸುಖ ದೊರಕಿಸ್ಕೋಬಹುದು. ಪ್ರತಿಯೊಂದೂ ಪ್ರತಿ ಯೊಬ್ಬರಿಗಾಗಿ, ಪ್ರತಿಯೊಬ್ಬನೂ ಎಲ್ಲದಕ್ಕಾಗಿ; ಸರಿಯಲ್ವೆ ಅದು?"

"ಹೌದೌದು, ಸರಿ," ಎಂದು ಮುಗುಳ್ನಕ್ಕು ನಿಕೊಲಾಯ್ ತಾಯಿಗೆ ಚಿತ್ರ ಗಳಿದ್ದ ಪುಸ್ತಕಗಳನ್ನು ಇನ್ನೂ ಹೆಚ್ಚಾಗಿ ತಂದುಕೊಡುತ್ತಿದ್ದನು.

ಸಂಜೆಯು ಹೊತ್ತು ನಿಕೊಲಾಯ್‌ನನ್ನು ನೋಡಲು ಜನರು ಬರುತ್ತಿದ್ದರು. ಅಲೆಕ್ಸೇಯ್ ವಸೀಲ್ಯೆವಿಚ್ – ಮ್ಲಾನ ಮುಖದ ಕರಿಯ ಗಡ್ಡವಿದ್ದ ಸ್ಫುರದ್ರೂಪಿ, ಠೀವಿಯ ಮನುಷ್ಯ, ಕಡಮೆ ಮಾತು. ರೊಮಾನ್ ಪೆತ್ರೋವಿಚ್ – ಮುಖದ ತುಂಬ ಗುಳ್ಳೆಗಳಿದ್ದ ಗುಂಡು ತಲೆಯ ವ್ಯಕ್ತಿ, ಏನಾದರೊಂದು ಕಾರಣಕ್ಕಾಗಿ ವಿಷಾದ ಸೂಚಿಸುತ್ತ ನಾಲಿಗೆಯಿಂದ ಸದ್ದು ಮಾಡುತ್ತಲೇ ಇರುತ್ತಿದ್ದ. ಇವಾನ್ ದನೀಲೊ ವಿಚ್ – ಚೂಪಾದ ಗಡ್ಡವಿದ್ದ, ಎತ್ತರದ ಸ್ವರವಿದ್ದ ಕುಳ್ಳನೆಯ ತೆಳ್ಳಗಿನ ಮನುಷ್ಯ, ಶೀಘ್ರವಾದ ಅತಿಯಾದ ಮಾತು, ಬಾಕುವಿನಷ್ಟೇ ಹರಿತ. ಯೆಗೋರ್ – ಯಾವಾ ಗಲೂ ತನ್ನ ವಿಷಯವಾಗಿ, ತನ್ನ ಸಂಗಾತಿಗಳ ವಿಷಯವಾಗಿ, ತನ್ನೊಳಗೆ ಬೆಳೆಯು ತ್ತಿದ್ದ ಕಾಹಿಲೆಯ ವಿಷಯವಾಗಿ ತಮಾಷೆ ಮಾಡುತ್ತಲೇ ಇರುತ್ತಿದ್ದ. ದೂರದ ಶಹರಗಳಿಂದ ಬರುತ್ತಿದ್ದ ಬೇರೆ ಜನರೂ ಇದ್ದರು. ನಿಕೊಲಾಯ್ ಅವರೊಡನೆ ದೀರ್ಘಕಾಲ ಶಾಂತ ಸ್ವರದಲ್ಲಿ ಮಾತನಾಡುತ್ತಿದ್ದ. ವಿಷಯ ಯಾವಾಗಲೂ ಒಂದೇ – ಜಗತ್ತಿನ ಕೂಲಿಕಾರರು. ಅವರು ಚರ್ಚಿಸುತ್ತಿದ್ದರು, ಉದ್ವಿಗ್ನರಾಗುತ್ತಿದ್ದರು, ಕೈಗಳನ್ನು ಬೀಸುತ್ತಿದ್ದರು, ಹೇರಳವಾಗಿ ಚಾ ಕುಡಿಯುತ್ತಿದ್ದರು. ಕೆಲವೊಮ್ಮೆ, ಬಂದವರು ಮಾತನಾಡುತ್ತಿದ್ದಾಗ ನಿಕೊಲಾಯ್ ಘೋಷಣೆಗಳನ್ನು ಬರೆದು ಸಿದ್ಧಗೊಳಿಸಿ ಆಮೇಲೆ ಓದಿ ಹೇಳುತ್ತಿದ್ದ. ನೆರೆದವರು ಆ ಕ್ಷಣವೇ ಅದನ್ನು ಪ್ರತಿಮಾಡುತ್ತಿದ್ದರು. ಹರಿದು ಹಾಕಿದ ಕರಡು ಪ್ರತಿಗಳ ಚೂರುಗಳನ್ನು ತಾಯಿ ಜೋಪಾನವಾಗಿ ಒಟ್ಟುಗೂಡಿಸಿ ಸುಡುತ್ತಿದ್ದಳು.

ಬಂದವರಿಗಾಗಿ ಲೋಟಗಳಿಗೆ ಚಾ ಸುರಿಯುತ್ತಿದ್ದಂತೆ ತಾಯಿ, ದುಡಿಯುವ ಜನರ ಬದುಕು ಸ್ಥಿತಿಗತಿಗಳ ವಿಷಯವಾಗಿ ಅತ್ಯುತ್ಸಾಹದಿಂದ ಅವರು ಆಡುತ್ತಿದ್ದ ಮಾತುಗಳಿಗೆ ಕಿವಿಗೊಡುತ್ತಾ, ಸತ್ಯವನ್ನು ದುಡಿಯುವವರಿಗೆ ತೋರಿಸಿಕೊಡುವ ಮತ್ತು ಅವರ ಶಕ್ತಿಗಳನ್ನು ಒಂದುಗೂಡಿಸುವ ತಮ್ಮ ಯತ್ನಗಳನ್ನು ಹೇಗೆ ಸುಧಾ ರಿಸಬೇಕೆಂಬ ಅವರ ಚರ್ಚೆಯನ್ನು ಕೇಳುತ್ತಾ, ಬೆರಗಾಗುತ್ತಿದ್ದಳು. ಆಗಾಗ್ಗೆ ಅವರು

ರೇಗಾಡುತ್ತಿದ್ದರು. ಬೇರೆ ಬೇರೆ ಅಭಿಪ್ರಾಯಗಳು ಸಮರ್ಥನೆ ಮಾಡುತ್ತ, ಒಬ್ಬರ ಮೇಲೊಬ್ಬರು ಆರೋಪ ಹೊರಿಸುತ್ತ, ಒಬ್ಬರ ಮನಸ್ಸನ್ನು ಇನ್ನೊಬ್ಬರು ನೋಯಿಸುತ್ತ, ಬಿಸಿ ಬಿಸಿಯಾದ ವಾದವಿವಾದಗಳನ್ನು ನಡೆಸುತ್ತಿದ್ದರು.

ಕೂಲಿಕಾರರ ಜೀವನ ಅವರಿಗಿಂತ ಚೆನ್ನಾಗಿ ತನಗೇ ತಿಳಿದಿದ್ದಂತೆ ತಾಯಿಗೆ ಭಾಸವಾಯಿತು. ಅವರು ಕೈಕೊಂಡಿದ್ದ ಕೆಲಸದ ವಿರಾಟ್ ಸ್ವರೂಪವನ್ನು ತಾನೇ ಹೆಚ್ಚು ಸ್ಪಷ್ಟವಾಗಿ ಅರಿತಿದ್ದಂತೆ ಆಕೆಗೆ ತೋರಿತು. ಈ ಕಾರಣದಿಂದ, ಗಂಡ-ಹೆಂಡಿರ ಆಟವನ್ನು, ಆ ಸಂಬಂಧದ ಅರ್ಥವೇನೆಂಬುದನ್ನು ತಿಳಿಯದೆಯೇ ಆಡುವ ಎಳೆಯ ಹುಡುಗರ ಹಾಗೆ ಕಂಡ ಅವರನ್ನೆಲ್ಲ, ಹಿರಿತನದ ಸ್ಥಾನದಿಂದ ನೋಡಲು ತಾಯಿ ಸಮರ್ಥಳಾದಳು. ತನಗರಿಯದಂತೆಯೇ ಆಕೆ ಅವರ ಸಂಭಾಷಣೆಯನ್ನು ತನ್ನ ಮಗನ ಮತ್ತು ಅಂದ್ರೇಯ್‌ನ ಸಂಭಾಷಣೆಗೆ ಹೋಲಿಸಿ ನೋಡಿದಳು. ಮೊದಮೊದಲು ತನಗೆ ಅರ್ಥವಾಗದೇ ಇದ್ದ ವ್ಯತ್ಯಾಸವನ್ನೇನೋ ಆಕೆ ಗುರುತಿಸಿದ ಹಾಗಾಯಿತು. ಕೆಲವೊಮ್ಮೆ, ಕೂಲಿಕಾರರ ಮನೆಗಳಲ್ಲಿ ಚರ್ಚಿಸುತ್ತಿದ್ದುದಕ್ಕಿಂತಲೂ ಹೆಚ್ಚು ಗಟ್ಟಿಯಾಗಿ ಇವರು ಕೂಗಾಡುತ್ತಿದ್ದಂತೆ ತಾಯಿಗೆ ತೋರಿತು. ಆಗ ಅವಳಿಗೆ ತೋರುತ್ತಿದ್ದ ವಿವರಣೆಯೊಂದೇ:

"ಇವರಿಗೆ ಹೆಚ್ಚು ತಿಳಿದಿದೆ. ಅದಕ್ಕೋಸ್ಕರವೇ ಹೆಚ್ಚು ಗಟ್ಟಿಯಾಗಿ ಮಾತಾಡ್ತಾರೆ."

ಆದರೆ ಇವರು ಬೇಕು ಬೇಕೆಂದೇ ಹಾಗೆ ಮಾಡುತ್ತಿದ್ದರೆಂದೂ ಅನೇಕ ಬಾರಿ ತಾಯಿಗೆ ಅನಿಸಿತು. ಉಳಿದ ಸಂಗಾತಿಗಳಿಗಿಂತ ತನ್ನ ನಿಷ್ಠೆಯೇ ಹೆಚ್ಚೆಂಬುದನ್ನೂ, ಸತ್ಯವು ತನಗೆ ಹೆಚ್ಚು ಪ್ರಿಯವೂ ಸಮೀಪವೂ ಆಗಿದೆ ಎಂಬುದನ್ನೂ ತೋರಿಸುವುದು.... ಆಗ ಉಳಿದವರು ನೊಂದು, ಸತ್ಯಕ್ಕೆ ಸಮೀಪವಾಗಿರುವವರು ತಾವೇ ಎಂದು ವಾದಿಸುವುದು; ತೀಕ್ಷ್ಣವಾದ ಕರ್ಕಶವಾದ ಚರ್ಚೆಗಳನ್ನು ನಡೆಸುವುದು. ಪ್ರತಿಯೊಬ್ಬನೂ ಉಳಿದವರಿಗಿಂತ ಹೆಚ್ಚು ಎತ್ತರಕ್ಕೆ ಹಾರಲು ಆತುರನಾಗಿದ್ದಂತೆ ತಾಯಿಗೆ ತೋರಿತು. ಇದರಿಂದ ಆಕೆಗೆ ಹೃದಯವನ್ನು ಕಸಿವಿಸಿಗೊಳಿಸುವಂತಹ ವ್ಯಥೆಯುಂಟಾಯಿತು.

"ಪಾವೆಲ್ ಮತ್ತು ಅವನ ಸಂಗಾತಿಗಳ ವಿಷಯವನ್ನಿವರು ಮರೆತೇಬಿಟ್ಟಿದ್ದಾರೆ...." ಎಂದು ತನ್ನಷ್ಟಕ್ಕೆ ಯೋಚಿಸುತ್ತ, ನಡುಗುತ್ತಿದ್ದ ಹುಬ್ಬುಗಳಿಂದ, ವಿನಂತಿಮಾಡುವ ಕಣ್ಣುಗಳಿಂದ, ಅವರನ್ನು ತಾಯಿ ನೋಡಿದಳು.

ಅವರು ಮಾಡುತ್ತಿದ್ದ ವಾದ ವಿವಾದಗಳೆಲ್ಲ ತಾಯಿಗೆ ಅರ್ಥವಾಗದೆ ಹೋದರೂ ಅತ್ಯಂತ ಆಸಕ್ತಿಯಿಂದ ಆಕೆ ಕಿವಿಗೊಟ್ಟು ಕೇಳಿದಳು. ಪದಗಳ ಹಿಂದಿನ ಭಾವನೆಯನ್ನು ಗ್ರಹಿಸಲು ಆಕೆ ಯತ್ನಿಸಿದಳು. ಒಳ್ಳಿತಿನ ಕಲ್ಪನೆ ಚರ್ಚೆಯಾದಾಗ, ಕೂಲಿಕಾರರ ಮನೆಯಲ್ಲಿ ಅದು ಅಖಂಡವಾಗಿ ಕಂಡುದನ್ನೂ ಇಲ್ಲಿ ತುಂಡು ತುಂಡಾಗಿ ಕ್ಷುಲ್ಲಕವಾಗಿ ತೋರಿದುದನ್ನೂ ತಾಯಿ ತಿಳಿದಳು. ಅಲ್ಲಿ ಭಾವನೆಗಳು ಹೆಚ್ಚು ಆಳವಾಗಿದ್ದುವು, ಬಲವಾಗಿದ್ದುವು. ಇಲ್ಲಿ ತೀಕ್ಷ್ಣವಾದ ವಿಚಾರಶಕ್ತಿ ಪ್ರತಿಯೊಂದನ್ನೂ ಕತ್ತರಿಸಿ

ಹಾಕುತ್ತಿತ್ತು. ಇಲ್ಲಿ ಹೆಚ್ಚಾಗಿ ಹಳೆಯದನ್ನು ನಾಶಗೊಳಿಸುವುದರ ಮಾತೇ ಇರುತ್ತಿತ್ತು. ಅಲ್ಲಿ ಹೆಚ್ಚಾಗಿ ಹೊಸತಿನ ಕನಸನ್ನೇ ಕಾಣುತ್ತಿದ್ದರು.ಈ ಕಾರಣಕ್ಕಾಗಿ ತಾಯಿಗೆ, ತನ್ನ ಮಗನ ಮತ್ತು ಅಂದ್ರೇಯ್‌ನ ಮಾತುಗಳು ಹೆಚ್ಚು ಆತ್ಮೀಯವಾಗಿಯೂ ಅರ್ಥಪೂರ್ಣವಾಗಿಯೂ ತೋರಿದುವು.

ಕೆಲಸಗಾರರಲ್ಲೊಬ್ಬ ಯಾವನಾದರೂ ನೋಡಲು ಬಂದಾಗ, ಹೆಚ್ಚು ಸರಳ ವಾಗಿಯೂ ಸಲಿಗೆಯಿಂದಲೂ ಇರಲು ನಿಕೊಲಾಯ್ ಯತ್ನಿಸುತ್ತಿದ್ದುದನ್ನು ತಾಯಿ ಕಂಡಳು. ಇಲ್ಲದ ಆತ್ಮೀಯತೆ ಅವನ ಮುಖದ ಮೇಲೆ ಮೂಡುತ್ತಿತ್ತು. ತನಗೆ ಅಭ್ಯಾಸವಿಲ್ಲದ ರೀತಿಯಲ್ಲಿ ಹೆಚ್ಚು ಒರಟಾಗಿಯೂ ಹಿಡಿತವಿಲ್ಲದೆಯೂ ಮಾತನಾಡಲು ಆತ ಯತ್ನಿಸುತ್ತಿದ್ದ.

"ಕೂಲಿಕಾರನಿಗೆ ಅರ್ಥವಾಗೋ ಭಾಷೆಯಲ್ಲಿ ಮಾತಾಡೋಕೆ ಯತ್ನಿಸ್ತಿದ್ದಾನೆ," ಎಂದುಕೊಳ್ಳುತ್ತಿದ್ದಳು ತಾಯಿ.

ಆದರೆ ಇದರಿಂದ ಆಕೆಗೇನೂ ಸಂತೋಷವಾಗುತ್ತಿರಲಿಲ್ಲ. ಭೇಟಿಗೆ ಬಂದಿದ್ದ ಕೂಲಿಕಾರನೂ ಒಳಗಿನದನ್ನೆಲ್ಲ ಕಟ್ಟಿಹಾಕಿದ ಹಾಗೆ ಸಂಕೋಚಪಡುತ್ತ ಸಂಕಟ ಅನು ಭವಿಸುತ್ತಿದ್ದುದು ಆಕೆಗೆ ಕಾಣಿಸುತ್ತಿತ್ತು. ಸಾಮಾನ್ಯ ಕೆಲಸಗಾರ್ತಿಯಾದ ತನ್ನೊ ಡನೆ ಮಾತನಾಡುತ್ತಿದ್ದಷ್ಟು ಸಲಿಗೆಯಿಂದಲೂ ಸುಲಭವಾಗಿಯೂ ಆ ಕೆಲಸಗಾರ ನಿಕೊಲಾಯ್‌ನೊಡನೆ ಮಾತನಾಡುತ್ತಿರಲಿಲ್ಲ. ಒಮ್ಮೆ ನಿಕೊಲಾಯ್ ಕೊಠಡಿಯಿಂದ ಹೊರ ಹೋದಾಗ, ಭೇಟಿಗೆ ಬಂದಿದ್ದ ಯುವಕನನ್ನು ತಾಯಿ ಮಾತನಾಡಿಸಿದಳು:

"ಯಾಕೆ ಹೆದರ್‍ತೀಯ? ನೀನೇನು ಉಪಾಧ್ಯಾಯರಿಗೆ ಪಾಠ ಒಪ್ಪಿಸೋಕೆ ಬಂದ ಹುಡುಗ್ನೆ?"

ಅವನು ಅಗಲವಾಗಿ ಬಾಯ್ತೆರೆದು ನಕ್ಕು ಹೇಳಿದ:

"ನೀರಿನಿಂದ ಹೊರಕ್ಕೆ ಎಳೆದರೆ ಏಡಿಗಳೂ ಒಂದು ಥರಾ ಆಗ್ತವೆ.... ಅಲ್ದೆ, ಈತ ನಮ್ಮವನೇ ಅಲ್ವಲ್ಲಾ...."

....ಕೆಲವೊಮ್ಮೆ ಸಾಷ ಬರುತ್ತಿದ್ದಳು. ಬಂದವಳು ಹೆಚ್ಚು ಹೊತ್ತು ಇರುತ್ತಿ ರಲಿಲ್ಲ. ನಗುತ್ತಿರಲಿಲ್ಲ. ಎಷ್ಟು ಬೇಕೋ ಅಷ್ಟು ಮಾತು. ಹೊರಡುತ್ತಿದ್ದಾಗ ಪ್ರತಿ ಸಲವೂ ತಪ್ಪದೆ ಆಕೆ ತಾಯಿಯನ್ನು ಕೇಳುತ್ತಿದ್ದಳು:

"ಪಾವೆಲ್ ಮಿಹೈಲೊವಿಚ್ ಹ್ಯಾಗಿದ್ದಾನೆ?"

"ದೇವರ ದಯದಿಂದ ಚೆನ್ನಾಗಿದ್ದಾನೆ – ಉತ್ಸಾಹದಿಂದಲೇ ಇದಾನೆ."

"ಆತನಿಗೆ ನನ್ನ ವಂದನೆ ತಿಳಿಸಿ," ಎಂದು ಹೇಳಿ ಹುಡುಗಿ ಮಾಯವಾಗು ತ್ತಿದ್ದಳು.

ಒಮ್ಮೆ ತಾಯಿ, ವಿಚಾರಣೆಯೇ ಇಲ್ಲದೆ ಪಾವೆಲ್‌ನನ್ನು ದೀರ್ಘಕಾಲ ಜೈಲಿ ನಲ್ಲಿಟ್ಟಿರುವರೆಂದು, ಸಾಷಳ ಮುಂದೆ ತನ್ನ ದುಗುಡವನ್ನು ತೋಡಿಕೊಂಡಳು. ಸಾಷಳ ಹುಬ್ಬು ಗಂಟಿಕ್ಕಿತು. ಆಕೆ ಏನನ್ನೂ ಹೇಳಲಿಲ್ಲ. ಆದರೆ ಬೆರಳುಗಳು ಮಾತ್ರ ಅಶಾಂತಿಯಿಂದ ಚಲಿಸಿದುವು.

"ನೀನು ಅವನನ್ನ ಪ್ರೀತಿಸ್ತಿದೀಯಾಂತ ನಂಗೆ ಗೊತ್ತು, ಮುದ್ದೂ...." – ಎಂದು ಸಾಷಗೆ ಹೇಳಬೇಕೆಂದು ತಾಯಿಗನ್ನಿಸಿತು.

ಆದರೆ ಹಾಗೆ ಹೇಳುವಷ್ಟು ಸಾಮರ್ಥ್ಯ ಅವಳಿಗಿರಲಿಲ್ಲ. ಹುಡುಗಿಯ ಗಂಭೀರ ಮುಖ, ಬಿಗಿದ ತುಟಿಗಳು, ಪ್ರಶ್ನೆಗೆ ಉತ್ತರವೆನ್ನುವಂತಹ ಒಣಮಾತುಗಳು, ವಾತ್ಸಲ್ಯ ತೋರಬೇಕೆನ್ನುವ ಬಯಕೆಯನ್ನೆಲ್ಲ ದೂರಸರಿಸುತ್ತಿದ್ದುವು. ಸಾಷ ಮುಂದೆ ನೀಡಿದ ಕೈಯನ್ನು ತಾಯಿ ನಿಟ್ಟುಸಿರು ಬಿಟ್ಟು ಮೌನವಾಗಿ ಕುಲುಕಿ ಯೋಚಿಸಿದಳು:

"ಅಯ್ಯೊ, ಎಂಥ ದುಃಖದ ಬಾಳ್ವೆ !...."

ಒಂದು ದಿನ ನತಾಷ ಬಂದಳು. ತಾಯಿಯನ್ನು ಅಲ್ಲಿ ಕಂಡು ಆಕೆಗೆ ಸಂತೋಷ ವಾಯಿತು. ತಾಯಿಯನ್ನು ಮುದ್ದಿಸಿ, ಒಮ್ಮೆಲೆ ಶಾಂತವಾಗಿ ನತಾಷ ಹೇಳಿದಳು:

"ನನ್ನ ತಾಯಿ ತೀರಿಕೊಂಡಳು, ಸತ್ತುಹೋದಳು, ಪಾಪ...."

ಕೂದಲನ್ನು ಹಿಂದಕ್ಕೆ ತಳ್ಳಿ, ಶೀಘ್ರಗತಿಯಿಂದ ಕಣ್ಣುಗಳನ್ನೊರೆಸಿ, ಆಕೆ ಮುಂದುವರಿಸಿದಳು:

"ಅಯ್ಯೋ ಅನಿಸುತ್ತೆ. ಅವಳಿಗೆ ಐವತ್ತು ವರ್ಷವೂ ಆಗಿರ್ಲಿಲ್ಲ. ಇನ್ನೂ ಎಷ್ಟೋ ವರ್ಷ ಬದುಕೋದು ಸಾಧ್ಯವಿತ್ತು. ಆದರೆ ಆಕೆ ನಡೆಸ್ತಿದ್ದ ಜೀವನಕ್ಕಿಂತ ಸಾವೇ ಬಹುಶಃ ಮೇಲಾಗಿತ್ತೇನೋ ಎಂಬ ಯೋಚ್ನೆ ಬರ್ತಾನೇ ಇರ್ತದೆ. ಆಕೆ ಯಾವಾಗಲೂ ಏಕಾಕಿನಿಯಾಗಿಯೇ ಇರ್ತಿದ್ಲು,–ಸಮೀಪದಲ್ಲಿ ಯಾರೂ ಇಲ್ಲ, ಯಾರಿಗೂ ಆಕೆ ಬೇಕಾಗಿರ್ಲಿಲ್ಲ; ತಂದೆ ಅವಳ್ನ ತುಳಿದು ಇಟ್ಬಿಟ್ಟಿದ್ದ. ಅದನ್ನ ಬದುಕು ಅಂತ ಕರೆಯೋಕಾಗುತ್ತೆ? ಬೇರೆ ಜನ, ಸ್ವಲ್ಪ ಒಳ್ಳೆಯದಾದದ್ದು ಮುಂದೆ ದೊರೀ ಬಹುದೂಂತ ಆಸೆಯಿಂದ ಬದುಕ್ತಾರೆ. ಆದರೆ ನನ್ನ ತಾಯಿ, ಹೆಚ್ಚಿನ ಅವಮಾನ ಇಲ್ಲದೆ ಬೇರೇನನ್ನೂ ನಿರೀಕ್ಷಿಸೋ ಹಾಗೆಯೇ ಇರ್ಲಿಲ್ಲ."

ಅದನ್ನೆ ಯೋಚಿಸುತ್ತಾ ತಾಯಿ ಹೇಳಿದಳು:

"ನೀನು ಹೇಳೋದು ನಿಜ ನತಾಷ. ಸ್ವಲ್ಪ ಒಳ್ಳೇದೇನಾದ್ರೂ ಮುಂದೆ ಸಿಗ್ತದೆ ಅನ್ನೋ ಆಶೆಯಿಂದ ಜನರು ಬದುಕ್ತಾರೆ. ಆದರೆ ಮುಂದೆ ಆಸೆ ಇಡ್ಬೇಕಾದ್ದೇ ಏನೂ ಇಲ್ಲಾಂತದ್ರೆ, ನಾವು ಬಾಳೋದು ಎಂಥ ಬದುಕು ಹೇಳು?"

ಹುಡುಗಿಯ ಕೈಯನ್ನು ಮೃದುವಾಗಿ ತಟ್ಟುತ್ತಾ ತಾಯಿ ಮುಂದುವರಿಸಿ ದಳು:

"ಈಗ ನೀನೊಬ್ಬಳೇ ಹಾಗಾದರೆ?"

"ಹೌದು, ಒಬ್ಬಳೇ," ಎಂದಳು ನತಾಷ ಹಗುರವಾಗಿ.

ಸ್ವಲ್ಪ ತಡೆದು ತಾಯಿ ಮುಗುಳ್ನಕ್ಕಳು:

"ಇರಲಿ ಬಿಡು. ಒಳ್ಳೇ ಜನರು ಬಹಳ ಕಾಲ ಒಬ್ಬಂಟಿಗರಾಗಿ ಇರೋದಿಲ್ಲ.... ಯಾವಾಗ್ಲೂ ಅವರಿಗೆ ಅಂಟಿಕೊಂಡು ಬೇರೆಯುವರು ಇದ್ದೇ ಇರ್ತಾರೆ."

ಬಟ್ಟೆ ನೇಯುವ ಒಂದು ಕಾರಖಾನೆಗೆ ಸೇರಿದ ಶಾಲೆಯಲ್ಲಿ ಉಪಾಧ್ಯಾಯಿನಿಯಾಗಿ ನತಾಷ ಕೆಲಸಕ್ಕೆ ಸೇರಿದಳು. ತಾಯಿ ಆಕೆಗೆ, ನಿಷಿದ್ಧ ಕರಪತ್ರ, ಘೋಷಣೆ, ಪತ್ರಿಕೆಗಳನ್ನೊಯ್ದು ಮುಟ್ಟಿಸತೊಡಗಿದಳು.

ಇದು ತಾಯಿಯ ಕೆಲಸವಾಯಿತು. ತಿಂಗಳಲ್ಲಿ ಹಲವೊಮ್ಮೆ ಆಕೆ, ಮಾದ್ರಿಯಾಗಿಯೋ, ಜರಿ ಇಲ್ಲವೆ ಕೈಮುಗ್ಗದ ಬಟ್ಟೆ ಮಾರುವ ಹೆಂಗಸಾಗಿಯೋ, ಶಹರದ ದುಡ್ಡು ಕಾಸು ಇರುವ ಸ್ತ್ರೀಯಾಗಿಯೋ ಅಥವಾ ಸಾಧು ಯಾತ್ರಿಕಳಾಗಿಯೋ, ಹೆಗಲ ಮೇಲೊಂದು ಚೀಲ ಹಾಕಿ ಇಲ್ಲವೆ ಕೈಯಲ್ಲೊಂದು ಪೆಟ್ಟಿಗೆ ಹಿಡಿದುಕೊಂಡು, ಜಿಲ್ಲೆಯಲ್ಲೆಲ್ಲಾ ಸಂಚಾರ ಮಾಡುತ್ತಿದ್ದಳು. ರೈಲು ಗಾಡಿಯಲ್ಲಾಗಲೀ ಹಡಗಿನಲ್ಲಾಗಲೀ ದೊಡ್ಡ ಹೊಟೇಲಿನಲ್ಲಾಗಲೀ ಪ್ರವಾಸಿ ಮಂದಿರದಲ್ಲಾಗಲೀ ಆಕೆ ಯಾವಾಗಲೂ ಎಂದಿನ ಸರಳ ಶಾಂತ ವ್ಯಕ್ತಿಯಾಗಿಯೇ ಇರುತ್ತಿದ್ದಳು. ಅಪರಿಚಿತರೊಡನೆ ಮೊದಲು ಆಕೆಯೇ ಮಾತನಾಡುತ್ತಿದ್ದಳು. ಆಕೆಗೆ ಎಲ್ಲರೊಡನೆ ಬೆರೆತುಕೊಳ್ಳುವ ಒಳ್ಳೆಯ ಗುಣವಿತ್ತು. ಲೋಕಾನುಭವಿಯ ಆತ್ಮವಿಶ್ವಾಸವಿತ್ತು. ಆ ಕಾರಣದಿಂದ, ನಿರ್ಭಯವಾಗಿ ಇತರರ ಗಮನವನ್ನು ಆಕೆ ಸೆಳೆಯುತ್ತಿದ್ದಳು.

ಜನರೊಡನೆ ಮಾತನಾಡುವುದು, ಅವರ ಕಥೆಗಳನ್ನೂ ದೂರುಗಳನ್ನೂ ಕೇಳುವುದು, ಅವರಿಂದ ಬಗೆಹರಿಯದ ಸಮಸ್ಯೆಗಳನ್ನು ತಿಳಿದುಕೊಳ್ಳುವುದು – ಈ ಕೆಲಸ ತಾಯಿಗೆ ಇಷ್ಟವಾಗಿತ್ತು. ತುಂಬ ಅತೃಪ್ತನಾದ ಮನುಷ್ಯನನ್ನು ಕಾಣಲು, ತಾಯಿ ಯಾವಾಗಲೂ ಸಂತೋಷಪಡುತ್ತಿದ್ದಳು. ಆ ಅತೃಪ್ತಿ, ಇದೆಲ್ಲವೂ ವಿಧಿಯ ಆಟವೆಂಬುದನ್ನು ಪ್ರತಿಭಟಿಸುತ್ತ ನಿರ್ದಿಷ್ಟ ಪ್ರಶ್ನೆಗಳಿಗೆ ಒಂದೇ ಸಮನೆ ಉತ್ತರವನ್ನು ಅಪೇಕ್ಷಿಸುತ್ತಿತ್ತು. ತೃಪ್ತಿಗೋಸ್ಕರ ನಡೆಸುವ ಅವಿರಾಮವಾದ ನಿರರ್ಥಕವಾದ ಹೋರಾಟವನ್ನೊಳಗೊಂಡ ಮಾನವ ಜೀವನದ ಚಿತ್ರ, ತಾಯಿಯ ಎದುರು ವಿಸ್ತಾರವಾಗುತ್ತಲೇ ಇತ್ತು. ಜನರನ್ನು ಮೋಸಪಡಿಸುವ ನಿರ್ಲಜ್ಜ ಯತ್ನ, ಅವರ ಸುಲಿಗೆ, ರಕ್ತ ಕುಡಿಯುವುದು, ವೈಯಕ್ತಿಕ ಲಾಭಕ್ಕಾಗಿ ಅವರನ್ನು ಹಿಂಡಿ ಹಿಪ್ಪೆ ಮಾಡುವುದು – ಇವೆಲ್ಲವನ್ನೂ ಎಲ್ಲೆಲ್ಲೂ ತಾಯಿ ಸ್ಪಷ್ಟವಾಗಿ ಕಂಡಳು. ಭೂಮಿಯ ಮೇಲೆ ಯಾವುದಕ್ಕೂ ಕೊರತೆ ಇರಲಿಲ್ಲ; ಎಲ್ಲವೂ ಸಮೃದ್ಧವಾಗಿದ್ದುವು. ಆದರೆ ಆ ಎಲ್ಲ ಸಮೃದ್ಧಿಯ ನಡುವೆ ಹೆಚ್ಚಿನ ಜನರು ಬಡತನದಲ್ಲಿ, ಅರೆ ಉಪವಾಸದಲ್ಲಿ ದಿನ ಕಳೆಯುತ್ತಿದ್ದರು. ಶಹರದ ಚರ್ಚುಗಳಲ್ಲಿ, ದೇವರಿಗೆ ಯಾವ ಉಪಯೋಗಕ್ಕೂ ಬಾರದ ಚಿನ್ನ ಬೆಳ್ಳಿ ಹೇರಳವಾಗಿದ್ದುವು. ಆದರೆ ದೇವಾಲಯದ ಬಾಗಿಲಲ್ಲಿ ಭಿಕ್ಷುಕರು ನಡುಗುತ್ತ, ಪುಡಿಕಾಸಿಗಾಗಿ ಸಹನೆಯಿಂದ ಕೈಯೊಡ್ಡಿ ಕಾಯುತ್ತ ಇರುತ್ತಿದ್ದರು. ಒಂದೆಡೆ ಶ್ರೀಮಂತ ಚರ್ಚುಗಳನ್ನೂ ಚಿನ್ನದ ಜರಿಯ ಪೋಷಾಕು ಧರಿಸಿದ ಧರ್ಮಗುರುಗಳನ್ನೂ ಇನ್ನೊಂದೆಡೆ ಭಿಕ್ಷುಕರ ಹಟ್ಟಿಗಳನ್ನೂ ಅವರು ಉಡುತ್ತಿದ್ದ ಅವಮಾ

ಸಕರ ಚಿಂದಿಗಳನ್ನೂ, ಹಿಂದೆಯೂ, ತಾಯಿ ಕಂಡಿದ್ದಳು. ಆಗ, ಇದೆಲ್ಲ ಸ್ವಾಭಾವಿಕ ವಾಗಿ ಇರುವುದೇ ಹೀಗೆ, ಎಂದುಕೊಂಡಿದ್ದಳು. ಆದರೆ ಈಗ, ಇದು ಆಕೆಗೆ ಅಸಹ ನೀಯುವಾಗಿತ್ತು. ಬಡವರೇ ದೇವಾಲಯಕ್ಕೆ ಹೆಚ್ಚು ಹತ್ತಿರವಿರುವವರು, ಶ್ರೀಮಂತರಿ ಗಿಂತಲೂ ಬಡವರಿಗೇ ದೇವಾಲಯದ ಆವಶ್ಯಕತೆ ಹೆಚ್ಚು, ಹೀಗಿರುತ್ತ, ಈಗಿನ ಸ್ಥಿತಿಗತಿಯೆಲ್ಲ ಬಡವರನ್ನು ಅವಮಾನಿಸಿದ ಹಾಗೆ,— ಎಂದು ತಾಯಿ ಭಾವಿಸಿದಳು.

ಕ್ರಿಸ್ತನ ಚಿತ್ರಗಳನ್ನು ತಾಯಿ ನೋಡಿದ್ದಳು. ಆತನನ್ನು ಕುರಿತಾದ ಕತೆಗಳನ್ನು ಕೇಳಿದ್ದಳು. ಕ್ರಿಸ್ತನ ಉಡುಗೆತೊಡುಗೆ ಬಲು ಸರಳವಾಗಿತ್ತೆಂದೂ ಆತ ಬಡವರ ಸ್ನೇಹಿತನೆಂದೂ ತಾಯಿಗೆ ಗೊತ್ತಿತ್ತು. ಆದರೆ ದೇವಾಲಯಗಳಲ್ಲಿ ಆತನ ಪ್ರತಿಮೆಯನ್ನು ಚಿನ್ನ ಬೆಳ್ಳಿಯಿಂದ ಅಸಹ್ಯವಾಗಿ ಮುಚ್ಚಿದ್ದುದನ್ನು ತಾಯಿ ಕಂಡಿದ್ದಳು. ಆ ಚಿನ್ನ ಬೆಳ್ಳಿಯ ಪೋಷಾಕು, ದೇವರ ರಕ್ಷಣೆಗಾಗಿ ಭಿಕ್ಷುಕರು ತನ್ನೆಡೆಗೆ ಬರುತ್ತಲೆ, 'ನನ್ನನ್ನು ಮುಟ್ಟಬೇಡಿ' ಎಂದು ಮುದುಡಿಕೊಳ್ಳುತ್ತಿತ್ತು. ಆಗ ತನಗರಿಯದಂತೆಯೇ ತಾಯಿಗೆ ರೀಬಿನ್ನನ ಮಾತುಗಳು ನೆನಪಾದುವು:

"ದೇವರ ವಿಷಯದಲ್ಲೂ ಅವರು ನಮ್ಮನ್ನು ಮೋಸಪಡಿಸಿದ್ದಾರೆ !"

ತನಗೆ ಗೊತ್ತಾಗದಂತೆಯೇ ತಾಯಿ ಪ್ರಾರ್ಥನೆಯನ್ನು ಕಡಮೆ ಮಾಡಿದಳು. ಆದರೆ ದೇವರ ವಿಷಯವಾಗಿಯೂ ತನಗೆ ಆತ್ಮೀಯರಾದವರ ವಿಷಯವಾಗಿಯೂ ಆಕೆಯ ಚಿಂತನೆ ಹೆಚ್ಚಿತು. ಆ ಆತ್ಮೀಯ ಜನರು ದೇವರ ಹೆಸರೆತ್ತುತ್ತಿರಲಿಲ್ಲ. ಆತನ ವಿಷಯ ಅವರಿಗೆ ತಿಳಿದಂತೆಯೂ ತೋರಲಿಲ್ಲ. ಆದರೆ ಅವರೆಲ್ಲ ದೇವರ ಅನುಜ್ಞೆ ಗಳಿಗೆ ಅನುಸಾರವಾಗಿಯೇ, ದೇವರಿಗೆ ಮೆಚ್ಚುಗೆಯಾಗುವಂತೆಯೇ, ಭೂಮಿಯನ್ನು ದುದ್ರರ ರಾಜ್ಯವೆಂದು ಪರಿಗಣಿಸಿ ಇಲ್ಲಿರುವ ಐಶ್ವರ್ಯವನ್ನೆಲ್ಲಾ ಸರಿಸಮಾನವಾಗಿ ಎಲ್ಲರೊಳಗೆ ಹಂಚಲು ಬಯಸುತ್ತಿದ್ದಂತೆ, ತಾಯಿಗೆ ಅನಿಸುತ್ತಿತ್ತು. ಆಕೆಯ ಮನಸ್ಸು ಈ ವಿಷಯವಾಗಿಯೇ ಹೆಚ್ಚಾಗಿ ಚಿಂತಿಸಿತು. ಆಕೆಯ ವಿಚಾರಗಳು ಒಳಗೇ ಬೆಳೆದುವು, ಹೆಚ್ಚು ಆಳವಾದುವು, ನೋಡಿದುದೆಲ್ಲವನ್ನೂ ಕೇಳಿದುದೆಲ್ಲವನ್ನೂ ಒಳಗೊಂಡುವು. ಆ ವಿಚಾರಗಳು ಒಂದು ಪ್ರಾರ್ಥನೆಯಷ್ಟು ಪ್ರಕಾಶಮಾನವಾದುವು; ತಮ್ಮ ಒಂದೇ ಸಮನಾದ ಪ್ರಭೆಯಿಂದ, ಕರಿಯ ಪ್ರಪಂಚವೆಲ್ಲವನ್ನೂ ಇಡಿಯ ಬದುಕನ್ನೂ ಎಲ್ಲ ಜನರನ್ನೂ ಬೆಳಗಿದುವು. ಕ್ರಿಸ್ತನನ್ನು ತಾಯಿ ಯಾವಾಗಲೂ ಅಸ್ಪಷ್ಟವಾದ ಮೃದು ಭಾವನೆಯಿಂದ, ಭಯ ಆಸೆಗಳು ಒಂದರೊಡನೊಂದು ಬೆರೆತು ಸಿಕ್ಕುಗಟ್ಟಿದ್ದ ಭಾವ ದಿಂದ, ಪ್ರೀತಿಸಿದ್ದಳು. ಆ ಕ್ರಿಸ್ತನೀಗ ತಾಯಿಗೆ ಹೆಚ್ಚು ಪ್ರಿಯನಾದ. ದೇವರೂ ಬವಲಾಗಿದ್ದ, ಹೆಚ್ಚು ಪರಿಶುದ್ಧನಾಗಿ ಸಮೀಪನಾಗಿ ಪ್ರಕಾಶಮಾನನಾಗಿ ಹರ್ಷಚಿತ್ತ ನಾಗಿ ಮಾರ್ಪಟ್ಟಿದ್ದ. ಮನುಷ್ಯನ ಈ ಮಹಾ ಸ್ನೇಹಿತನ ಹೆಸರನ್ನು ಉಚ್ಚರಿಸದೆಯೇ ಆತನ ಹೆಸರಲ್ಲಿ ಹಲವರು ಹರಿಯಗೊಟ್ಟ ರಕ್ತದಿಂದಲೇ ತೋಯ್ದು ದೇವರು ಪುನರುತ್ಥಾನ ಹೊಂದಿದಾನೇನೋ ಎನ್ನುವ ಹಾಗಿದ್ದ.

ಪ್ರತಿಯೊಂದು ಪ್ರವಾಸ ಮುಗಿದ ಮೇಲೂ ಆಕೆ, ಹಾದಿಯಲ್ಲಿ ತಾನು ನೋಡಿದ

ಕೇಳಿದ ಎಲ್ಲ ವಿಷಯಗಳಿಂದ ಆನಂದಿತಳಾಗಿ, ಉದ್ರಿಕ್ತಳಾಗಿ, ನಿಕೊಲಾಯ್‌ನ ಬಳಿಗೆ ಹಿಂತಿರುಗುತ್ತಿದ್ದಳು. ತನ್ನ ಪಾಲಿನ ಕೆಲಸವನ್ನು ನೆರವೇರಿಸಿ ಬಂದೆನೆಂದು ಆಕೆಗೆ ತೃಪ್ತಿಯಾಗಿರುತ್ತಿತ್ತು.

ಒಂದು ಸಂಜೆ ತಾಯಿ ನಿಕೊಲಾಯ್‌ಗೆ ಹೇಳಿದಳು:

"ಸಂಚಾರಮಾಡಿ ಇಷ್ಟನ್ನೆಲ್ಲಾ ತಿಳಿಯೋದು ಚೆನ್ನಾಗಿರುತ್ತೆ. ಇದರಿಂದ ಜೀವನ ವನ್ನೇ ತಿಳಿದುಕೊಳ್ಳೋದು ಸಾಧ್ಯವಾಗ್ತದೆ. ಜನರು ಬದುಕಿನ ದಂಡೆಯವರೆಗೂ ತಳ್ಳಲ್ಪಟ್ಟು ಆದದ್ದೇನೂಂತ ಗೊತ್ತಾಗದೆ ಹೊರಳಾಡ್ತಾರೆ. ಆದರೂ ತಮಗೆ ಯಾಕೆ ಈ ಶಿಕ್ಷೇಂತ ಅವರು ಆಶ್ಚರ್ಯಪಡದೆ ಇರೋದಿಲ್ಲ. ಅವರನ್ನ ಯಾಕೆ ಹಾಗೆ ಬೇರೆ ಯವರು ತಳ್ಬೇಕು? ಪ್ರತಿಯೊಂದೂ ಬೇಕಾದಷ್ಟು ಇರೋವಾಗ ಅವರು ಯಾಕೆ ಉಪವಾಸವಿರ್ಬೇಕು? ಎಲ್ಲಾ ಕಡೇನೂ ಬೇಕಾದಷ್ಟು ಜ್ಞಾನ ಇರೋವಾಗ ಅವರು ಯಾಕೆ ಕತ್ತಲೇಲಿ ಅಜ್ಞಾನದಲ್ಲಿ ಉಳೀಬೇಕು? ಬಡವರು.ಶ್ರೀಮಂತರು ಎಂಬ ವ್ಯತ್ಯಾ ಸವೇ ಇಲ್ದೆ ಎಲ್ಲರನ್ನೂ ತನ್ನ ಪ್ರೀತಿಯ ಮಕ್ಕಳಾಗಿಯೇ ಕಾಣುವ ದಯಾಮಯ ನಾದ ದೇವರು ಏನು ಮಾಡ್ತಿದ್ದಾನೆ? ತಮ್ಮ ಬದುಕಿನ ವಿಷಯ ಯೋಚಿಸುವಾಗ, ತಾವು ಏನನ್ನಾದರೂ ಮಾಡದೇ ಇದ್ದರೆ ಈ ಅನ್ಯಾಯ ತಮ್ಮನ್ನು ತೊಡೆದುಹಾಕ್ತದೆ ಅಂತ ಭಾವಿಸಿ, ಜನ ಸ್ವಲ್ಪ ಕೆರಳ್ತಾರೆ."

ಇತ್ತೀಚೆಗೆ ಎಷ್ಟೋ ವೇಳೆ, ಜನರಿಗೆ ಆಗಿರುವ ಅನ್ಯಾಯದ ವಿಷಯವಾಗಿ ಅವರೊಡನೆ ತಾನೇ ಮಾತನಾಡಬೇಕೆಂದು ತಾಯಿ ಬಯಸುತ್ತಿದ್ದಳು. ಕೆಲವೊಮ್ಮೆ ಬಲು ಪ್ರಯಾಸ ಪಟ್ಟು ಆ ಬಯಕೆಯನ್ನು ಆಕೆ ಅದುಮಿ ಹಿಡಿಯಬೇಕಾಗುತ್ತಿತ್ತು.

ಪುಸ್ತಕದ ಚಿತ್ರಗಳನ್ನು ನೋಡುತ್ತ ತಾಯಿ ಕುಳಿತಿದ್ದುದನ್ನು ನಿಕೊಲಾಯ್ ಕಂಡಾಗ, ಆತ ಮುಗುಳ್ನಕ್ಕು, ಜಗತ್ತಿನ ಯಾವುದಾದರೊಂದು ಅದ್ಭುತದ ವಿಷಯ ಆಕೆಗೆ ಹೇಳುತ್ತಿದ್ದ. ಮಹಾಸಾಹಸಗಳನ್ನು ಕೈಗೂಡಿಸುವ ಮಾನವ ಯತ್ನವನ್ನು ಕಂಡು ಬೆರಗಾಗಿ, ತಡೆ ತಡೆದು, ತಾಯಿ ಕೇಳುತ್ತಿದ್ದಳು:

"ಅಂಥಾದ್ದು ಸಾಧ್ಯವೆ?"

ತನ್ನ ಭವಿಷ್ಯವಾಣಿಯ ಸತ್ಯತೆಯಲ್ಲಿ ಎಡೆಬಿಡದ ಅಚಲವಾದ ನಂಬುಗೆಯ ನ್ನಿಟ್ಟು ನಿಕೊಲಾಯ್, ಕನ್ನಡಕದೆಡೆಯಿಂದ ದಯಾಪೂರ್ಣವಾಗಿ ತಾಯಿಯನ್ನೆ ನೆಟ್ಟ ದೃಷ್ಟಿಯಿಂದ ನೋಡುತ್ತ ಭವಿಷ್ಯತ್ತಿನ ಚಿತ್ರವನ್ನು ಮಾತುಗಳಲ್ಲಿ ಚಿತ್ರಿಸುತ್ತಿದ್ದ.

"ಮಾನವನ ಆಸೆಗಳಿಗೆ ಮಿತಿಯೇ ಇಲ್ಲ; ಅವನ ಸಾಮರ್ಥ್ಯವೂ ಅಷ್ಟೇ ಅಪಾರ! ಆದರೂ ಮಾನಸಿಕವಾಗಿ ಮಾತ್ರ ಜಗತ್ತು ಬಲು ನಿಧಾನವಾಗಿ ಸಮೃದ್ಧ ವಾಗ್ತಿದೆ. ಯಾಕೆಂದರೆ, ಈಗ ಸ್ವತಂತ್ರನಾಗಬಯಸೋ ಪ್ರತಿಯೊಬ್ಬನೂ ವಿದ್ಯೆಯ ಬದಲು ಹಣವನ್ನು ದಾಸ್ತಾನುಮಾಡ್ಬೇಕು. ಆದರೆ ದುರಾಸೆಯನ್ನೆಲ್ಲ ಜನರು ತೊಡೆದು ಹಾಕಿ, ಒತ್ತಾಯದ ದುಡಿಮೆಯಿಂದ ವಿಮುಕ್ತರಾದಾಗ...."

ಆ ಎಲ್ಲ ಮಾತುಗಳ ಅರ್ಥವನ್ನು ತಾಯಿ ತಿಳಿಯಲು ಶಕ್ತಳಾಗುತ್ತಿರಲಿಲ್ಲ.

ಆದರೆ ಆ ಮಾತುಗಳ ಹಿಂದಿದ್ದ ಆಳವಾದ ನಂಬುಗೆ ಆಕೆಗೆ ಹೆಚ್ಚುಹೆಚ್ಚು ಅರ್ಥ ವಾಗುತ್ತಿತ್ತು.

"ಜಗತ್ತಿನಲ್ಲಿ ಸ್ವತಂತ್ರರಾಗಿರೋ ಜನರು ಕೆಲವರು ಮಾತ್ರ – ಇದು ದುಃಖದ ವಿಷಯ," ಎಂದು ಆತ ಹೇಳಿದ.

ಇದು ತಾಯಿಗೆ ಅರ್ಥವಾಯಿತು. ದುರಾಶೆ ದ್ವೇಷಗಳಿಂದ ವಿಮುಕ್ತರಾಗಿದ್ದ ಜನರ ಪರಿಚಯ ಆಕೆಗಿತ್ತು. ಅಂಥ ಜನರ ಸಂಖ್ಯೆ ಹೆಚ್ಚಿದರೆ, ಬದುಕು ಅಂಧಕಾರ ಮಯವೂ ಭೀಕರವೂ ಆಗುವುದರ ಬದಲು, ಹೆಚ್ಚು ಸರಳವೂ ಶುಭ್ರವೂ ದಿವ್ಯವೂ ಆಗುವುದೆಂಬುದು ಆಕೆಗೆ ಗೊತ್ತಿತ್ತು.

"ತಮಗಿಷ್ಟವಿಲ್ಲದಿದ್ದರೂ ಜನರು ಅನಿವಾರ್ಯವಾಗಿ ಕ್ರೂರಿಗಳಾಗಬೇಕಾಗಿದೆ" ಎಂದು ನಿಕೊಲಾಯ್ ವ್ಯಥೆಯಿಂದ ಹೇಳಿದ.

ಅಂದ್ರೇಯ್‌ನ ಮಾತುಗಳನ್ನು ನೆನಪಿಗೆ ತಂದುಕೊಳ್ಳುತ್ತ ತಾಯಿ ಹೌದೆಂದು ತಲೆದೂಗಿದಳು.

೯

ಯಾವಾಗಲೂ ಹೊತ್ತಿಗೆ ಸರಿಯಾಗಿ ಮನೆಗೆ ಹಿಂತಿರುಗುವ ನಿಕೊಲಾಯ್ ಒಂದು ದಿನ ಎಂದಿಗಿಂತ ಹೆಚ್ಚು ತಡವಾಗಿ ಮನೆಗೆ ಬಂದ. ಅಸ್ಥಿರವಾಗಿ ಕೈಗಳನ್ನು ಹಿಸುಕಿಕೊಳ್ಳುತ್ತ ಉಡುಪು ಬದಲಾಯಿಸದೆಯೇ ಹೇಳಿದ:

"ನಮ್ಮ ಸಂಗಾತಿಗಳಲ್ಲೊಬ್ಬ ಈ ದಿನ ಜೈಲಿನಿಂದ ತಪ್ಪಿಸಿಕೊಂಡ, ನೀಲೊವ್ನ. ಯಾರಾಗಿರಬಹುದು? ಯಾರೂಂತ ಖಚಿತಪಡಿಸೋದು ನನ್ನಿಂದಾಗಲಿಲ್ಲ...."

ತಾಯಿಗೆ ಬವಳಿ ಬಂದಹಾಗಾಯಿತು.

"ಪಾವೆಲ್ ಆಗಿರಬಹುದೆ?" ಎಂದು ಆಕೆ, ಕುಳಿತುಕೊಳ್ಳುತ್ತ ಪಿಸುಗುಟ್ಟಿದಳು.

ನಿಕೊಲಾಯ್ ಭುಜಕುಲುಕಿ ಹೇಳಿದ:

"ಇದ್ದರೂ ಇರಬಹುದು. ಆದರೆ ಅವನ ಅಜ್ಞಾತವಾಸಕ್ಕೆ ನಾವು ಸಹಾಯ ಮಾಡೋದು ಹ್ಯಾಗೆ? ಅವನನ್ನೀಗ ಎಲ್ಲಿ ಹುಡುಕೋದು? ನೋಡೋಕೆ ಸಿಗ್ತಾ ನೇನೋಂತ ಬೀದಿಯಲ್ಲೆಲ್ಲಾ ಅಲೆದೆ. ಅದು ಹುಚ್ಚು ಕೆಲಸವೇ ಅನ್ನಿ. ಆದರೂ ನಾವೇನಾ ದರೂ ಮಾಡಬೇಕು. ನಾನು ತಿರುಗಿ ಹೊರಹೋಗ್ತೀನಿ...."

"ನಾನೂ ಬರ್ತೀನಿ!" ಎಂದು ತಾಯಿ ಕೂಗಿ ನುಡಿದಳು.

"ನೀವು ಯೆಗೋರ್ ಮನೆಗೆ ಹೋಗಿ ಅವನಿಗೇನಾದರೂ ಗೊತ್ತೆ ಅಂತ ವಿಚಾ ರಿಸಿ," ಎಂದು ಅವಸರವಾಗಿ ಹೊರಡುತ್ತ, ನಿಕೊಲಾಯ್ ಸಲಹೆ ಇತ್ತ.

ತಾಯಿ ಕರವಸ್ತ್ರವನ್ನು ತಲೆಗೆ ಸುತ್ತಿಕೊಂಡು, ಯಾವುದೋ ಆಸೆಯಿಂದ, ತಾನೂ ಬೀದಿಗಿಳಿದು ನಡೆದಳು. ಕೆಂಪು ಚುಕ್ಕೆಗಳು ಆಕೆಯ ಕಣ್ಣ ಮುಂದೆ ಕುಣಿಯು ತ್ತಿದ್ದುವು. ಹೃದಯ ಡವಡವನೆ ಹೊಡೆದುಕೊಳ್ಳುತ್ತಿತ್ತು. ತಾಯಿ ಓಡಾಡುತ್ತ

ಮುಂದೆ ಸಾಗುವಂತೆ ಮಾಡುತ್ತಿತ್ತು. ತಲೆ ಬಾಗಿಸಿಕೊಂಡು, ಸುತ್ತಲಿನದೊಂದನ್ನೂ ಗಮನಿಸದೆ, ಪಾವೆಲ್‌ನನ್ನೆ ನೆನೆಸುತ್ತ ತಾಯಿ ನಡೆದಳು.

"ಆತ ಅಲ್ಲಿ ಇದ್ದೇಬಿಟ್ಟರೆ – !" ಎಂಬ ಆಸೆ ಮಿಂಚಿನಂತೆ ಹೊಳೆದು, ತಾಯಿ ಮತ್ತಷ್ಟು ವೇಗವಾಗಿ ನಡೆಯುವಂತೆ ಮಾಡಿತು.

ಆಗ ಉರಿಬಿಸಿಲು. ಆಯಾಸದಿಂದ ಏದುತ್ತ ತಾಯಿ ನಡೆದಳು. ಯೆಗೋರ್‌ನ ಮನೆಗೆ ಹೋಗಬೇಕಾದ ಮಹಡಿಮೆಟ್ಟಲುಗಳ ಸಮೀಪಬಂದಾಗ ಮುಂದೆ ನಡೆಯುವುದಾಗಲಿಲ್ಲ. ಆಕೆ ನಿಂತು, ತಿರುಗಿ ನೋಡಿದಳು. ಒಮ್ಮೆಲೆ ಉದ್ಗಾರದ ಸ್ವರ ಹೊರಡಿಸಿ ಕಣ್ಣು ಮುಚ್ಚಿದಳು. ಮನೆಯ ಹೊರಬಾಗಿಲ ಬಳಿ ಜೇಬುಗಳಲ್ಲಿ ಕೈಗಳನ್ನಿರಿಸಿ ನಿಕೊಲಾಯ್ ವೆಸೊವ್‌ಶ್ಚಿಕೋವ್ ನಿಂತಿದ್ದುದನ್ನು ಕಂಡಂತೆ ತಾಯಿಗೆ ಭಾಸವಾಯಿತು. ಆದರೆ ಪುನಃ ನೋಡಿದಾಗ ಅಲ್ಲಿ ಯಾರೂ ಇರಲಿಲ್ಲ.

"ಏನೋ ಭ್ರಮೆಯಾಗಿರಬೇಕು" ಎಂದುಕೊಳ್ಳುತ್ತ. ತಾಯಿ ಸದ್ದಿಗೆ ಕಿವಿಗೊಡುತ್ತ ಮೆಟ್ಟಲುಗಳನ್ನೇರಿದಳು. ಮೆಟ್ಟಲು ಮುಗಿಯುವಲ್ಲಿ ಮತ್ತೊಮ್ಮೆ ನಿಂತು ಕೆಳಗೆ ನೋಡಿದಳು. ಆಗಲೂ ಸಿಡುಬಿನ ಕಲೆಯ ಮುಖ – ಈ ಸಲ ನಗುತ್ತ – ತನ್ನೆಡೆಗೆ ನೋಡುತ್ತಿದ್ದುದನ್ನು ಕಂಡಳು.

ನಿರಾಸೆಯಿಂದ ಹೃದಯ ಹಿಂಡುತ್ತಿದ್ದರೂ ಆತನನ್ನು ಸಂಧಿಸಲೆಂದು ದಡದಡನೆ ಕೆಳಗಿಳಿಯುತ್ತ ತಾಯಿ ಕೂಗಿದಳು. "ನಿಕೊಲಾಯ್ ! ನಿಕೊಲಾಯ್ !" ಆತ ಕೈಬೀಸಿ ಮೆಲ್ಲನೆ "ವಾಪಸು ಹೋಗು" ಎಂದ.

ಆಕೆ ಬೇಗನೆ ಮೆಟ್ಟಲನ್ನೇರಿ ಯೆಗೋರ್‌ನ ಕೊಠಡಿಗೆ ಬಂದಳು. ಆತ ಮಂಚದ ಮೇಲೆ ಮಲಗಿಕೊಂಡಿದ್ದ.

"ನಿಕೊಲಾಯ್.... ಜೈಲಿನಿಂದ... ಓಡಿಬಂದ," ಎಂದು ತಾಯಿ ಏದುತ್ತ ಹೇಳಿದಳು.

ದಿಂಬಿನಿಂದ ತಲೆಯೆತ್ತಿ ನೋಡುತ್ತಾ ಒರಟು ಸ್ವರದಲ್ಲಿ ಯೆಗೋರ್ ಕೇಳಿದ:

"ಯಾವ ನಿಕೊಲಾಯ್? ಇಬ್ಬರಿದ್ದಾರಲ್ಲ?"

"ವೆಸೊವ್‌ಶ್ಚಿಕೋವ್. ಇಲ್ಲಿಗೆ ಬರ್ತಿದ್ದಾನೆ."

"ಒಳ್ಳೇದಾಯ್ತು !"

ಅಷ್ಟರಲ್ಲಿ ಸ್ವತಃ ನಿಕೊಲಾಯ್‌ನೇ ಕೊಠಡಿಯೊಳಕ್ಕೆ ಬಂದ. ಬಾಗಿಲಿಗೆ ಅಗಣಿ ಹಾಕಿ, ಟೋಪಿ ತೆಗೆದು, ತಲೆಗೂದಲನ್ನು ಹಿಂದಕ್ಕೆ ತಳ್ಳುತ್ತಾ ಮೃದುವಾಗಿ ನಗುತ್ತಾ ನಿಂತ. ಯೆಗೋರ್ ಮೊಣಕೈಗಳನ್ನೂರಿ ಸ್ವಲ್ಪ ಮೇಲಕ್ಕೇಳುತ್ತಾ ತಲೆದೂಗಿ ಹೇಳಿದ:

"ಕೂತುಕೊಳ್ಳಿ...."

ಬಳಿಗೆ ಬರುತ್ತ ನಿಕೊಲಾಯ್ ನಕ್ಕು ತಾಯಿಯ ಕೈ ಕುಲುಕಿದ.

"ನಾನು ನಿನ್ನನ್ನ ನೋಡದೇ ಇದ್ದಿದ್ದರೆ, ಜೈಲಿಗೇ ವಾಪಸು ಹೋಗ್ತಿದ್ದೆ. ಶಹರದಲ್ಲಿ ನನಗೆ ಯಾರ ಪರಿಚಯವೂ ಇಲ್ಲ. ನಮ್ಮ ವಸತಿ ಪ್ರದೇಶಕ್ಕೆ ಹೋದೆ

ುದರೆ ನನ್ನ ಒಂದು ಕ್ಷಣದಲ್ಲೇ ಪುನಃ ಹಿಡೀತಾರೆ. ಹೀಗಾಗಿ, ಅಲ್ಲಿ ಇಲ್ಲಿ ನಡೀತಾ, ಡಿ ಬಂದು ಎಂಥ ಬೆಪ್ಪು ಕೆಲಸಮಾಡಿದೇಂತ ಯೋಚಿಸ್ತಿದ್ದೆ. ಅಷ್ಟರಲ್ಲೇ ನೀಲೊವ್ನ ಾವಿಸ್ಕೊಂಡು ಬರೋದು ಕಂಡಿತು. ನಾನು ಅವಳನ್ನೆ ಹಿಂಬಾಲಿಸ್ದೆ."

"ಹ್ಯಾಗೆ ತಪ್ಪಿಸ್ಕೊಂಡೆಯಪ್ಪ?" ಎಂದು ತಾಯಿ ಕೇಳಿದಳು.

ಮಂಚದ ಮೂಲೆಯಲ್ಲಿ ಸಂಕೋಚಪಡುತ್ತ ಕುಳಿತು, ಭುಜಕುಲುಕಿ, ನಿಕೊ ಾಯ್ ಹೇಳಿದ:

"ಅದೆಲ್ಲಾ ನನಗೂ ತಿಳೀದ ಹಾಗೇನೆ ನಡೆದ್ಹೋಯ್ತು. ನಾನು ಗಾಳಿ ಸೇವನೆ ಾಡ್ತಾ ಜೈಲ್ನಲ್ಲಿ ಸುತ್ತಾಡ್ತಿದ್ದಾಗ, ಕೊಲೆ ಕೈದಿಗಳು ತಮ್ಮ ಗಾರ್ಡನ್ನ ಹಿಡಿದು ೊಡೆಯೋಕೆ ಶುರು ಮಾಡಿದ್ರು. ಆ ಗಾರ್ಡು ಮೊದಲು ಪೋಲೀಸಿನಲ್ಲಿದ್ನಂತೆ. ಲ್ಲಿ ಕಳ್ಳತನ ಮಾಡ್ದ ಅಂತ ಹೊರ ಹಾಕಿದ್ರು. ಇಲ್ಲಿ ಗೂಢಚಾರನ ಹಾಗೆ ಎಲ್ಲರ ಾತನ್ನೂ ಕದ್ದು ಕೇಳಿ, ಕಿರಿಚಾಡ್ತಾ, ಯಾರಿಗೂ ನೆಮ್ಮದೀನೇ ಕೊಡ್ತಿರ್ಲಿಲ್ವಂತೆ. ಗಾಗಿ, ಹಿಡಕೊಂಡು ಹೊಡೆದ್ರು. ಪ್ರತಿಯೊಂದೂ ತಲೆ ಕೆಳಗಾಗಿತ್ತು. ಗಾರ್ಡುಗಳು ್ನ ಊದಿಕೊಂಡು ಓಡಾಡ್ತಿದ್ರು. ಗೇಟುಗಳು ತೆರೆದಿದ್ವು. ಹೊರಗೆ ಶಹರ ಾಸ್ತಿತ್ತು. ನಾನು ಮೆಲ್ಲಗೆ ಸ್ವಪ್ನದಲ್ಲಿದ್ದ ಹಾಗೆ ನಡೆದೆ. ಬೀದಿಯಲ್ಲಿ ಸ್ವಲ್ಪ ದೂರ ಾಗಿದಾಗ ಎಚ್ಚರವಾದ ಹಾಗಾಯ್ತು. ಎಲ್ಲಿಗೆ ಹೋಗಲಿ? ಎಂದುಕೊಂಡೆ. ಹಿಂತಿರುಗಿ ೋಡಿದ್ರೆ, ಆಗ್ಲೇ ಜೈಲು ಬಾಗಿಲುಗಳ್ನ ಮುಚ್ಚಿಬಿಟ್ಟಿದ್ರು...."

"ಹುಂ. ಮಹಾನುಭಾವ ಯಾಕೆ ವಾಪಸು ಹೋಗಲಿಲ್ಲ? ಮೃದುವಾಗಿ ಾಗಿಲು ತಟ್ಟಿ 'ಒಳಕ್ಕೆ ಕರಕೊಳ್ಳೀಂತ,' 'ಕ್ಷಮಿಸಿ ಸದ್ಗೃಹಸ್ಥರೆ, ಅಜಾಗರೂಕತೆ ಿಂದ ತಪ್ಪಾಯ್ತೂಂತ,' ಯಾಕೆ ಹೇಳ್ಲಿಲ್ಲ?" ಎಂದನು ಯೆಗೋರ್.

ನಿಕೊಲಾಯ್ ವೆಸೊವ್‌ಶ್ಚಿಕೋವ್‌ಗೆ ನಗು ಬಂತು.

"ಹಾಗೆ ಮಾಡೋದರಲ್ಲಿ ಅರ್ಥವಿರ್‍ಲಿಲ್ಲ. ಆದರೆ ಯಾರಿಗೂ ಏನೂ ಹೇಳದೆ ಾಗೆ ಹೊರಟು ಬಂದದ್ದು ಸರಿಯಾಗ್ಲಿಲ್ಲ. ನನ್ನ ಸಂಗಾತಿಗಳ ಜತೇಲಿ ನಾನು ಸರಿ ಾಗಿ ವರ್ತಿಸಿದ ಹಾಗಾಗ್ಲಿಲ್ಲ. ಹಾಗೇ ನಡಕೊಂಡು ಹೋದೆ. ಒಂದು ಶವದ ಮೆರ ಣಿಗೆ ಹೋಗ್ತಿತ್ತು – ಮಗುವಿನ ಶವ. ನಾನೂ ಸೇರ್‍ಕೊಂಡು, ಶವದಾನಿಯ ಹಿಂದೆ ಲೆ ತಗ್ಗಿಸ್ಕೊಂಡು, ಯಾರನ್ನೂ ನೋಡದೆ ನಡೆದೆ. ಸ್ಮಶಾನದಲ್ಲೂ ಸ್ವಲ್ಪ ಹೊತ್ತು ್ಯಗೆ ಗಾಳೀಲಿ ಕೂತೆ. ಒಮ್ಮೆಲೆ ನನಗೊಂದು ಯೋಚನೆ ಹೊಳೀತು..."

"ಒಂದೇ ಯೋಚ್ನೇನ?" ಎಂದು ಯೆಗೋರ್ ನಿಟ್ಟುಸಿರುಬಿಟ್ಟ; "ನಿನ್ನ ಲೆ ಒಳಗೆ ಜಾಗ ಇದೆ ತಾನೆ?"

ವೆಸೊವ್‌ಶ್ಚಿಕೋವ್ ಹೃತ್ಪೂರ್ವಕವಾಗಿ ನಕ್ಕು ತಲೆಯಲುಗಿಸಿ ಹೇಳಿದ:

"ಓ! ನನ್ನ ತಲೆ ಬುರುಡೆ ಹಿಂದಿನಷ್ಟು ಖಾಲಿಯಾಗಿಲ್ಲ ಈಗ!... ಹುಃ... ಾನ್ನೂ ವಾಸಿಯಾಗಿಲ್ವ ಯೆಗೋರ್ ಇವಾನೊವಿಚ್?"

ಗುಣಪಡಿಸೋಕೆ ಎಲ್ರೂ ಕೈಲಾದಷ್ಟು ಮಾಡ್ತಾರೆ... ನಿನ್ನ ಕಥೆ ಮುಂದು ವರಿಸು," ಎಂದು ಯೆಗೋರ್ ಒಣ ಕೆಮ್ಮಿನೊಡನೆ ಉತ್ತರವಿತ್ತ.

"ಆ ಮೇಲೆ ಅಲ್ಲಿಂದ ಪ್ರಾದೇಶಿಕ ವಸ್ತು ಸಂಗ್ರಹಾಲಯಕ್ಕೆ ಹೋದೆ. ಅಲ್ಲಿ ರೋದನ್ನೆಲ್ಲಾ ನೋಡ್ತಾ, ಮುಂದೇನು ಮಾಡ್ಲೀಂತ ಯೋಚಿಸ್ತಾ, ಸುತ್ತಾಡಿದೆ. ನನ್ನ ಮೇಲೆ ನನಗೇ ಅಸಾಧ್ಯ ಸಿಟ್ಟು ಬಂತು. ಹಸಿವಾಗಿತ್ತು ಬೇರೆ! ಬೀದಿಗಿಳಿದು, ಪೂರ್ತಿ ಬೇಜಾರಾಗಿ, ನಡೆದೆ. ಪೋಲೀಸರು ಎಲ್ಲರನ್ನೂ ಸೂಕ್ಷ್ಮವಾಗಿ ನೋಡ್ತಿದ್ರು. ನನ್ನಂಥ ಬೆಪ್ಪನನ್ನ ನ್ಯಾಯಾಧೀಶರ ಮುಂದೆ ಎಳೆಯೋಕೆ ಹೆಚ್ಚು ಹೊತ್ತು ಬೇಡ ಅಂದ್ಕೊಂಡೆ. ಅಷ್ಟರಲ್ಲೆ ನೀಲೊವ್ನ ಓಡ್ಕೊಂಡು ಬರ್ತಾ ಇದ್ದಿದ್ದನ್ನ ನೋಡ್ದೆ. ಪಕ್ಕಕ್ಕೆ ತಿರುಗಿ ನಾನು ಆಕೇನ ಹಿಂಬಾಲಿಸ್ದೆ, ಅಷ್ಟೆ."

"ನಾನು ನಿನ್ನನ್ನ ನೋಡಲೇ ಇಲ್ಲ," ಎಂದು ತಾಯಿ ತಪ್ಪು ಮಾಡಿದವಳಂತೆ ಅಂದಳು. ಆಕೆ ವೆಸೊವ್‌ಶ್ಚಿಕೋವ್‌ನನ್ನು ಸೂಕ್ಷ್ಮವಾಗಿ ದಿಟ್ಟಿಸಿದಳು. ಆತ ತುಂಬಾ ಇಳಿದು ಹೋಗಿದ್ದಂತೆ ಕಂಡಿತ್ತು.

"ಸಂಗಾತಿಗಳಿಗೆ ಕಳವಳವಾಗ್ತದೆ," ಎಂದು ವೆಸೊವ್‌ಶ್ಚಿಕೋವ್ ತಲೆ ತುರಿಸಿ ಕೊಳ್ಳುತ್ತ ಹೇಳಿದ.

"ಅಧಿಕಾರಿಗಳ ವಿಷಯವೇನು? ಅವರ ವಿಚಾರದಲ್ಲಿ ನಿನಗೆ ಕನಿಕರ ಇಲ್ವೊ? ಅವರಿಗೂ ಕಳವಳವಾಗ್ತದೆ," ಎಂದ ಯೆಗೋರ್. ಆತ ಬಾಯಿ ತೆರೆದು ಗಾಳಿಯನ್ನು ಜಗಿಯುತ್ತಿರುವನೋ ಎಂಬಂತೆ ನಾಲಿಗೆಯಾಡಿಸಿದ. "ತಮಾಷೆ ಹಾಗಿರಲಿ. ಈಗ ನೀನು ಅಡಗಿಕೊಳ್ಳೋಕೆ ಜಾಗ ಮಾಡಬೇಕು. ಅದು ಸಂತೋಷದ ಕೆಲಸ ನಿಜ, ಆದರೆ ಸುಲಭವಲ್ಲ. ನಾನು ಎದ್ದು ಓಡಾಡೋದು ಸಾಧ್ಯವಾಗಿದ್ದರೆ!" ಆತ ನಿಟ್ಟು ಸಿರು ಬಿಟ್ಟು, ಕೈಗಳನ್ನು ಎದೆಗಳ ಮೇಲಿರಿಸಿ, ಕ್ಷೀಣವಾಗಿ ತೀಡತೊಡಗಿದ.

ತಲೆ ತಗ್ಗಿಸಿ ನಿಕೊಲಾಯ್‌ನೆಂದ:

"ನಿಮಗೆ ತುಂಬಾ ಕಾಹಿಲೆಯಾಗಿದೆ, ಯೆಗೋರ್ ಇವಾನೊವಿಚ್."

ತಾಯಿ ನಿಟ್ಟುಸಿರುಬಿಟ್ಟು, ಜಾಗವೇ ಇಲ್ಲದಂತಿದ್ದ ಆ ಕೊಠಡಿಯನ್ನು ಸುತ್ತಲೂ ಈಕ್ಷಿಸಿದಳು.

"ಕಾಹಿಲೆಯ ವಿಷಯ ನನಗೆ ಸಂಬಂಧಪಟ್ಟದ್ದು," ಎಂದು ಉತ್ತರಿಸಿ ಯೆಗೋರ್ ತಾಯಿಯತ್ತ ತಿರುಗಿದ. "ಪಾವೆಲ್‌ನ ವಿಷಯ ಕೇಳಮ್ಮ. ಈ ಮರ್ಯಾದೆಯ ಮೌನ ಇನ್ನು ಸಾಕು."

ವೆಸೊವ್‌ಶ್ಚಿಕೋವ್ ಹಲ್ಲು ಕಿರಿದ.

"ಪಾವೆಲ್ ಚೆನ್ನಾಗಿದ್ದಾನೆ. ಅವನು ಅಲ್ಲಿ ನಮಗೆಲ್ಲಾ ನಾಯಕ. ಅಧಿಕಾರಿಗಳ ಜತೇಲಿ ಮಾತನಾಡಿ, ನಮ್ಮ ಉಸ್ತುವಾರಿಯನ್ನೆಲ್ಲ ನೋಡೋದು ಅವನೇ. ಎಲ್ಲರೂ ಅವನನ್ನು ಗೌರವಿಸ್ತಾರೆ."

ವೆಸೊವ್‌ಶ್ಚಿಕೋವ್‌ನ ಮಾತುಗಳನ್ನು ತಲೆದೂಗುತ್ತಾ ತಾಯಿ ಕೇಳಿದಳು.

ಕುಡಿಗಣ್ಣಿನಿಂದ, ಯೆಗೋರ್‌ನ ಊದಿಕೊಂಡಿದ್ದ ನೀಲವರ್ಣಕ್ಕೆ ತಿರುಗಿದ್ದ ಮುಖವನ್ನು ನೋಡಿದಳು. ವಿಚಿತ್ರ ರೀತಿಯಲ್ಲಿ ಆ ಮುಖ ಚಪ್ಪಟೆಯಾಗಿದ್ದಂತೆ, ನಿಶ್ಚಲವಾಗಿದ್ದಂತೆ, ಅಲ್ಲಿ ಯಾವ ಭಾವನೆಯೂ ಇಲ್ಲದಂತೆ ತೋರುತ್ತಿತ್ತು. ಕಣ್ಣುಗಳು ಮಾತ್ರ ಸಜೀವವಾಗಿ ಚೈತನ್ಯಪೂರ್ಣವಾಗಿ ಹೊಳೆದುವು.

"ನನಗೇನಾದರೂ ತಿನ್ನೋಕೆ ನೀವು ಕೊಡೋದು ಸಾಧ್ಯವಾದರೆ – ನನಗೆಷ್ಟು ಹಸಿವಾಗಿದೇಂತ ಊಹಿಸೋದು ಕೂಡಾ ನಿಮ್ಮಿಂದಾಗದು !" ಎಂದು ನಿಕೊಲಾಯ್ ಒಮ್ಮೆಲೆ ಉದ್ಗರಿಸಿದ.

ಯೆಗೋರ್‌ನೆಂದ "ಮೇಲೆ ಬೀರುವಿನಲ್ಲಿ ಸ್ವಲ್ಪ ರೊಟ್ಟಿ ಇದೆ, ತಾಯಿ. ಆ ಮೇಲೆ ಹೊರಗೆ ಹೋಗಿ ಎಡಕ್ಕೆ ಎರಡನೆ ಬಾಗಿಲು ತಟ್ಟಿ. ಒಬ್ಬ ಹೆಂಗಸು ಬಾಗಿಲು ತೆರೀತಾಳೆ. ತಿನ್ನೋಕೆ ಏನಿದೆಯೋ ಅದನ್ನೆಲ್ಲಾ ತಗೊಂಡು ಇಲ್ಲಿಗೆ ಬರ್ಬೇಕು ಅಂತ ಆಕೆಗೆ ಹೇಳಿ."

"ಅಷ್ಟೆಲ್ಲಾ ಯಾಕ್ಬೇಕು ?" ಎಂದು ನಿಕೊಲಾಯ್ ಪ್ರತಿಭಟಿಸಿದ.

"ಹೆದರ್ಬ್ಯೋಬೇಡ. ಹೆಚ್ಚೇನೂ ಅಲ್ಲಿ ಇರೋದೇ ಇಲ್ಲ."

ತಾಯಿ ಹೊರಹೋಗಿ ಆ ಬಾಗಿಲು ತಟ್ಟಿದಳು. ಆ ಮೌನದಲ್ಲಿ ಹಾಗೆಯೇ ನಿಂತು ಯೆಗೋರ್‌ನ ವಿಷಯವಾಗಿ ಆಕೆ ಯೋಚಿಸಿದಳು.

"ಆತ ಸಾಯುತ್ತಿದ್ದಾನೆ" ಎಂದು ತಾಯಿಗೆ ಅನಿಸಿತು.

"ಯಾರದು ?" ಎಂದು ಕೊಠಡಿಯೊಳಗಿಂದಲೆ ಯಾರೋ ಕೇಳಿದರು.

"ಯೆಗೋರ್ ಇವಾನೊವಿಚ್ ನನ್ನ ಕಳಿಸಿದ್ದಾನೆ. ನೀವು ಅವನ ಕೊಠಡಿಗೆ ಬರಬೇಕಂತೆ," ಎಂದು ತಾಯಿ ಮೆಲುಧ್ವನಿಯಲ್ಲಿ ಹೇಳಿದಳು.

"ಬಂದೆ," ಎಂದು ಆ ಹೆಂಗಸು ಬಾಗಿಲು ತೆರೆಯದೆಯೇ ಉತ್ತರವಿತ್ತಳು. ತಾಯಿ ಕ್ಷಣ ಹೊತ್ತು ಕಾದಿದ್ದು ಮತ್ತೊಮ್ಮೆ ಬಾಗಿಲು ತಟ್ಟಿದಳು. ತಕ್ಷಣ ಬಾಗಿಲು ತೆರೆದು, ಕನ್ನಡಕ ಧರಿಸಿದ್ದ ಎತ್ತರದ ಹೆಂಗಸೊಬ್ಬಳು ಹೊರ ಬಂದಳು. ಉಡುಗೆಯನ್ನು ಸರಿಪಡಿಸುತ್ತ, ನಿರ್ವಿಕಾರವಾದ ಸ್ವರದಲ್ಲಿ ತಾಯಿಯನ್ನಾಕೆ ಕೇಳಿದಳು.

"ನಿಮಗೇನು ಬೇಕು ?"

"ಯೆಗೋರ್ ಇವಾನೊವಿಚ್ ನನ್ನನ್ನ ಕಳಿಸಿದಾನೆ.

"ನಡೀರಿ, ಬಂದೆ. ಎಲ್ಲಿ ನಿಮ್ಮ ಪರಿಚಯ ಇದ್ದಹಾಗಿದೆಯಲ್ಲಾ ! ಹ್ಯಾಗಿದೀರಾ ?... ಇಲ್ಲಿ ಕತ್ತಲು. ಕಾಣಿಸೋದಿಲ್ಲ."

ತಾಯಿ ಆಕೆಯನ್ನು ದಿಟ್ಟಿಸಿ ನೋಡಿದಳು. ನಿಕೊಲಾಯ್‌ನ ಮನೆಯಲ್ಲಿ ಕೆಲವು ಸಾರಿ ಆಕೆಯನ್ನು ಕಂಡುದು ನೆನಪಿಗೆ ಬಂತು.

"ಇವರೆಲ್ಲಾ ನಮ್ಮವರೇ," ಎಂದುಕೊಂಡಳು ತಾಯಿ.

ಆ ಹೆಂಗಸು ಪೆಲಗೇಯಳನ್ನು ಹಿಂಬಾಲಿಸಿಬಂದಳು.

"ಯೆಗೋರ್‌ಗೆ ಕಾಹಿಲೆ ಜಾಸ್ತಿಯಾಗಿದೆಯೇನು ?"

"ಹೌದು, ಮಲಕ್ಕೊಂಡಿದ್ದಾನೆ. ತಿನ್ನೋದಕ್ಕೇನಾದರೂ ತಗೊಂಡ್ಬರೋದಕ್ಕೆ ನಿಮಗೆ ಹೇಳೂಂತಂದ."

"ಅದೇನೂ ಅಗತ್ಯವಿಲ್ಲ."

ಯೆಗೋರ್‌ನ ಕೊಠಡಿಯನ್ನು ಒಳಹೊಕ್ಕಂತೆ ಆತನ ಕಷ್ಟದ ಉಸಿರಾಟ ಅವರಿಗೆ ಕೇಳಿಸಿತು.

"ನಾನು ನನ್ನ ಹಿರಿಯರನ್ನ ಸೇರೋಕೆ ಹೊರಟಿದ್ದೇನೆ.... ಲುದ್ಮಿಲ ವಸೀಲ್ಯೆವ್ನ ಈ ಮಹಾ ಪುರುಷ ಅಧಿಕಾರಿಗಳ ಸಮ್ಮತಿ ಇಲ್ದೇನೆ, ಜೈಲಿನಿಂದ ಹೊರಗೆಬರೋ ಎದೆಗಾರಿಕೆ ತೋರಿಸಿದ್ದಾನೆ. ಮೊದಲು ಇವನಿಗೇನಾದರೂ ತಿನ್ನೋದಕ್ಕೆ ಕೊಡಿ, ಆಮೇಲೆ ಇವನನ್ನು ಬಚ್ಚಿಡಿ."

ಆ ಹೆಂಗಸು ಹೂಂ ಎಂದು ತಲೆದೂಗಿ, ಕಾಹಿಲೆಯ ಮನುಷ್ಯನನ್ನೇ ನೆಟ್ಟ ದೃಷ್ಟಿಯಿಂದ ನೋಡಿದಳು.

"ಇವರು ಬಂದ ತಕ್ಷಣ ನೀವು ನನಗೆ ಹೇಳಿಕಳಿಸ್ಬೇಕಾಗಿತ್ತು, ಯೆಗೋರ್. ಎರಡು ಸಾರಿಯೂ ನೀವು ಔಷಧಿ ತಗೊಂಡಿಲ್ಲ. ಎಂತ ಉದಾಸೀನ ಬುದ್ಧಿ ನಿಮ್ಗೆ!"

ವೆಸೊವ್‌ಶ್ಚಿಕೋವ್‌ನನ್ನು ನೋಡಿ, "ಬಾ ಸಂಗಾತಿ, ನನ್ನ ಹಿಂದೆ ಬಾ," ಎಂದಳು; "ಇನ್ನೇನು, ಯೆಗೋರನನ್ನು ಆಸ್ಪತ್ರೆಗೆ ಕರಕೊಂಡು ಹೋಗೋಕೆ ಇಷ್ಟ ರಲ್ಲೆ ಬಂದ್ಬಿಡ್ತಾರೆ," ಎಂದು ಧ್ವನಿಗೂಡಿಸಿದಳು.

"ಓ, ಆಸ್ಪತ್ರೆಗೆ ನನ್ನ ಸೇರಿಸ್ಲೇ ಬೇಕೂಂತ ತೀರ್ಮಾನಿಸ್ಬಿಟ್ಟಿದೀಯಾ ಹಾಗಾದರೆ?"

"ಹೌದು. ನಾನು ನಿನ್ನ ಜತೇಲೆ ಇರ್ತೀನಿ."

"ಅಲ್ಲಿ ಕೂಡಾ? ಓ ದೇವರೇ!"

"ಸಾಕು, ತಮಾಷೆ ನಿಲ್ಸು!"

ಮಾತನಾಡುತ್ತಿದ್ದಂತೆಯೆ ಆ ಹೆಂಗಸು, ಯೆಗೋರ್‌ನ ಎದೆಯವರೆಗೂ ಕಂಬಳಿ ಹೊದಿಸಿದಳು. ನಿಕೊಲಾಯ್‌ನನ್ನು ಸೂಕ್ಷ್ಮವಾಗಿ ದಿಟ್ಟಿಸಿದಳು. ಶೀಷೆಯನ್ನೆತ್ತಿ ಔಷಧಿ ಎಷ್ಟು ಮಿಕ್ಕಿದೆ ಎಂದು ನೋಡಿದಳು.

ಆಕೆಯ ಸ್ವರ ಮಧುರವಾಗಿ ಏಕಪ್ರಕಾರವಾಗಿತ್ತು. ನಡಿಗೆಯಲ್ಲಿ ಸೊಬಗಿತ್ತು. ಮುಖ ಬಾಡಿದ್ದು, ಕರಿಯ ಹುಬ್ಬುಗಳು ಮೂಗಿನ ಸೇತುವೆಯ ಬಳಿ ಸಂಧಿಸಿದ್ದುವು. ತಾಯಿಗೆ ಆ ಮುಖ ಮೆಚ್ಚುಗೆಯಾಗಲಿಲ್ಲ. ಅದರಲ್ಲಿ ದರ್ಪವಿದ್ದಂತೆ ತೋರಿತು. ಕಣ್ಣುಗಳು ಮುಗುಳ್ನಗಲಿಲ್ಲ. ಮಿನುಗಲಿಲ್ಲ. ಬಾಯಿಯಿಂದ ಅಧಿಕಾರದ ಮಾತು ಗಳೇ ಬರುತ್ತಿದ್ದುವು.

ಆಕೆಯೆಂದಳು: "ಈಗ ನಾವು ಹೊರಡ್ತೀವಿ. ನಾನು ಬೇಗನೆ ವಾಪಸು ಬರ್ತೀನಿ... ನೀವು ಯೆಗೋರ್‌ಗೆ ಒಂದು ಚಮಚ ಔಷಧಿ ಕೊಡಿ. ಮಾತಾಡೋಕೆ ಬಿಡ್ಬೇಡಿ."

ಹೀಗೆ ಹೇಳಿ, ನಿಕೊಲಾಯ್‌ನೊಡನೆ ಆಕೆ ಹೊರಟಳು.

ಯೆಗೋರ್ ನಿಟ್ಟುಸಿರು ಬಿಟ್ಟು ಹೇಳಿದ:

"ಒಳ್ಳೆಯ ಹೆಂಗಸು. ಬಲು ಸೊಗಸಾದ ಹೆಂಗಸು. ನೀವು ಅವಳ ಜತೇಲಿ ಕೆಲಸ ಮಾಡೋ ಹಾಗೆ ಏರ್ಪಾಟು ಮಾಡ್ಬೇಕು. ಆಕೆ ಒಬ್ಬಳೇ ಸೊರಗಿ ಹೋಗ್ತಿದಾಳೆ."

"ಮಾತಾಡ್ಬೇಡ. ಈ ಔಷಧಿ ತಗೋ," ಎಂದು ತಾಯಿ ಮೃದುವಾಗಿ ಹೇಳಿದಳು.

ಆತ ಔಷಧ ಸೇವಿಸಿ ಒಂದು ಕಣ್ಣನ್ನು ಮುಚ್ಚಿಕೊಂಡ.

"ನಾನು ಬಾಯಿ ಮುಚ್ಚಿದ್ದರೂ ಸಾಯೋದಂತೂ ತಪ್ಪೋದಿಲ್ಲ," ಎಂದ.

ತೆರೆದ ಒಂದು ಕಣ್ಣಿನಿಂದ ಆತ ತಾಯಿಯನ್ನೇ ನೋಡಿದ. ತುಟಿಗಳು ಮೆಲ್ಲನೆ ಮುಗುಳ್ನಗೆಯೊಡನೆ ಬಿರಿದುವು. ತಾಯಿ ತಲೆಯನ್ನು ಬಾಗಿಸಿದಳು. ಕನಿಕರದ ಅಸಹನೀಯ ನೋವಿನಿಂದಾಗಿ, ಆಕೆಯ ಕಣ್ಣುಗಳು ಹನಿಯಾಡಿದುವು.

ಯೆಗೋರ್ ಮಾತು ಮುಂದುವರಿಸಿದ:

"ಇದರಲ್ಲಿ ಬೇಸರಪಡಬೇಕಾದ್ದೇನೂ ಇಲ್ಲ. ಇದು ಸ್ವಾಭಾವಿಕ. ಬದುಕುವ ಸುಖದಲ್ಲಿ ಸಾಯುವ ಆವಶ್ಯಕತೆಯೂ ಅಡಕವಾಗಿದೆ."

ತಾಯಿ ತನ್ನ ಕೈಯನ್ನು ಆತನ ಹುಬ್ಬಿನ ಮೇಲಿರಿಸಿ ಮತ್ತೊಮ್ಮೆ ಮೃದುವಾಗಿ ಹೇಳಿದಳು.

"ಸುಮ್ಮನಿರೋದು ನಿನ್ನಿಂದ ಸಾಧ್ಯವೇ ಇಲ್ಲವೆ?"

ಎದೆಯ ಸದ್ದಿಗೆ ಕಿವಿಗೊಡುವವನ ಹಾಗೆ ಆತ ಕಣ್ಣು ಮುಚ್ಚಿ ಹಟದಿಂದ "ಸುಮ್ಮಗಾಗೋ ಲಾಭವೇನು? ಇನ್ನು ನಾಲ್ಕು ನಿಮಿಷ ಸಾಯ್ತಾ ಬದುಕಿರ್ಬಹುದು. ಆದರೆ ಅದಕ್ಕಾಗಿ, ನಿನ್ನಂತಹ ಸ್ತ್ರೀರತ್ನದ ಜತೇಲಿ ನಾಲ್ಕು ಮಾತು ಆಡೋ ಅವಕಾಶವನ್ನ ನಾನು ಕಳಕೋಬೇಕು. ಆ ಲೋಕದಲ್ಲಿ ಜನರು ಖಂಡಿತವಾಗಿಯೂ ಇಲ್ಲಿ ಯವರಷ್ಟು ಚೆನ್ನಾಗಿರೋದಿಲ್ಲ."

ತಾಯಿ ಕಾತರಳಾಗಿ ನಡುವೆ ಮಾತನಾಡಿದಳು.

"ಆ ಸದ್ಗೃಹಸ್ಥೆ ಬಂದು, ನಿನ್ನ ಮಾತಾಡೋದಕ್ಕೆ ಬಿಟ್ಟೇಂತ ನನಗೆ ಬಯ್ತಾಳೆ."

"ಆಕೆ ಸದ್ಗೃಹಸ್ಥೆಯಲ್ಲ,—ಕ್ರಾಂತಿಕಾರಿಣಿ, ಸಂಗಾತಿ, ಸೊಗಸಾದ ಹೆಂಗಸು. ಆಕೆ ಖಂಡಿತ ನಿನ್ನ ಬೈತಾಳೆ. ಆಕೆ ಪ್ರತಿಯೊಬ್ಬನನ್ನೂ ಬಯ್ತಾಳೆ."

ಪ್ರಯಾಸಪಟ್ಟು ತುಟಿಗಳನ್ನಲುಗಿಸುತ್ತ, ಯೆಗೋರ್, ತಾಯಿಗೆ ಆ ಹೆಂಗಸಿನ ಜೀವನದ ಕಥೆಯನ್ನು ಹೇಳತೊಡಗಿದ. ಅವನ ಕಣ್ಣುಗಳು ಮುಗುಳ್ನಗುತ್ತಿದ್ದುವು. ಆತ ಬೇಕು ಬೇಕೆಂದೇ ಮಾತನಾಡಿ ತನ್ನನ್ನು ಗೋಳುಹೊಯ್ದುಕೊಳ್ಳುತ್ತಿರುವನೆಂದು ತಾಯಿ ಮನಗಂಡಳು. ಆತನ ತೇವಗೊಂಡಿದ್ದ ನೀಲಿ ಮುಖವನ್ನು ನೋಡುತ್ತ ಗಾಬರಿಯಾಗಿ ತಾಯಿ ಯೋಚಿಸಿದಳು.

"ಈತ ಸಾಯ್ತಿದ್ದಾನೆ."

ಲುದ್ಮಿಲ ಒಳಬಂದಳು; ಬಾಗಿಲನ್ನು ಎಚ್ಚರಿಕೆಯಿಂದ ಮುಚ್ಚಿದ ಬಳಿಕ ಆಕೆ ತಾಯಿಯತ್ತ ತಿರುಗಿದಳು.

"ಅವನು ಬೇಗನೆ ಬಟ್ಟೆ ಬದಲಾಯಿಸಿ ಆದಷ್ಟು ಬೇಗ ನನ್ನ ಕೊಠಡಿ ಬಿಟ್ಟು ಹೋಗ್ಬೇಕು. ಆದ್ದರಿಂದ ನೀವು ತಕ್ಷಣ ಹೋಗಿ ಅವನಿಗೆ ಬೇಕಾದ ಬೇರೆ ಉಡುಪು ಕೊಂಡುಕೊಳ್ಳಿ. ಅವನ್ನು ಇಲ್ಲಿಗೆ ತನ್ನಿ.... ಸೋಫಿಯ ಊರಲ್ಲಿ ಇಲ್ದೆ ಎಷ್ಟೊಂದು ತೊಂದರೆ... ಜನರನ್ನು ಬಚ್ಚಿಡೋದರಲ್ಲಿ ಅವಳು ಎತ್ತಿದ ಕೈ...."

"ಆಕೆ ನಾಳೆ ಬರ್ತಾಳೆ," ಎಂದು ತಾಯಿ ಭುಜಗಳ ಮೇಲೆ ಶಾಲನ್ನೇರಿಸುತ್ತಾ ಹೇಳಿದಳು.

ಮಾಡಲು ಏನಾದರೂ ಇಂತಹ ಕೆಲಸ ದೊರೆತಾಗ ಅದನ್ನು ಆದಷ್ಟು ಬೇಗನೆ ಚೆನ್ನಾಗಿ ಮಾಡುವುದರ ಹೊರತು ಬೇರೇನನ್ನು ಯೋಚಿಸುವುದಕ್ಕೂ ತಾಯಿಯಿಂದ ಆಗುತ್ತಿರಲಿಲ್ಲ.

"ಉಡುಪು ಹ್ಯಾಗಿರಬೇಕು?" ಎಂದು ತಾಯಿ ಹುಬ್ಬು ಕೆಳಗಿಳಿಸುತ್ತಾ ವ್ಯವಹಾರದ ಧ್ವನಿಯಲ್ಲಿ ಕೇಳಿದಳು.

"ಹ್ಯಾಗಿದ್ದರೂ ಸರಿಯೆ. ಕತ್ತಲಾದ ಮೇಲೆ ಅವನು ಹೊರಡುವುದು."

"ರಾತ್ರೆ ಹೊತ್ತು ಇನ್ನೂ ಹುಷಾರಾಗಿರ್ಬೇಕು. ಬೀದಿಗಳಲ್ಲಿ ಜನ ಕಡಮೆ. ಪೋಲೀಸರು ಹೆಚ್ಚು ಎಚ್ಚರದಿಂದಿರ್ತಾರೆ. ಅಲ್ಲದೆ ಅವನು ಅಂಥ ಚತುರನೂ ಅಲ್ಲ."

ತಾಯಿಯ ಮಾತು ಕೇಳಿ ಯೆಗೋರ್ ಗಟ್ಟಿಯಾಗಿ ನಕ್ಕ.

"ನಾನು ಆಸ್ಪತ್ರೆಗೆ ಬಂದು ನಿನ್ನನ್ನ ನೋಡ್ಬಹುದೆ?" ಎಂದು ತಾಯಿ ಯೆಗೋರ್‌ನನ್ನು ಕೇಳಿದಳು.

ಆತ ಸಮ್ಮತಿಸೂಚಕವಾಗಿ ತಲೆದೂಗಿ ಕೆಮ್ಮಿದ.

ತನ್ನ ಕರಿಯ ಕಣ್ಣುಗಳಿಂದ ತಾಯಿಯನ್ನು ನೋಡುತ್ತಾ ಲುದ್ಮಿಲ ಕೇಳಿದಳು:

"ಅವನ ಹತ್ತಿರ ನನಗೆ ಬದಲಿಯಾಗಿ ಆಗಾಗ್ಗೆ ಕೂತಿರ್ತೀರಾ? ಸರಿ ತಾನೆ? ಒಳ್ಳೇದು... ಈಗ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಹೊರಡಿ."

ಪ್ರೀತಿಯಿಂದ ಹಾಗೂ ದರ್ಪದಿಂದ ತಾಯಿಯ ತೋಳು ಹಿಡಿದುಕೊಂಡು ಆಕೆ ಬಾಗಿಲವರೆಗೂ ಬಂದಳು. ಬಾಗಿಲಿಂದ ಹೊರಬಿದ್ದೊಡನೆಯೇ ಆಕೆ ಮೃದುವಾಗಿ ಹೇಳಿದಳು:

"ಹೀಗೆ ಓಡಿಸ್ತಿದೀನೀಂತ ನೊಂದ್ಕೋಬೇಡಿ. ಮಾತನಾಡೋದರಿಂದ ಅವನಿಗೆ ಅಪಾಯ ಖಂಡಿತ. ನನಗಿನ್ನೂ ಆಸೆ ಇದೆ...."

ಆಕೆ ನೋಯುವವರೆಗೂ ತಾಯಿಯ ಕೈಗಳನ್ನು ಬಲವಾಗಿ ಅದುಮಿದಳು. ಆಯಾಸದಿಂದ ಕಣ್ಣಿನ ಎವೆಗಳನ್ನು ಮುಚ್ಚಿಕೊಂಡಳು.

ಆಕೆಯ ಮಾತು ಕೇಳಿ ತಾಯಿಯ ಹೃದಯದೊಳಗೆ ಕಸಿವಿಸಿಯುಂಟಾಯಿತು.

"ಓ! ಯಾಕೆ ನೊಂದ್ಕೋಬೇಕು? ನನಗೆ ಅಷ್ಟೂ ತಿಳಿಯೋಲ್ವೆ?" ಎಂದು ತಾಯಿ ತೊದಲುತ್ತ ಅಂದಳು.

"ಗೂಢಚಾರರು ಇದಾರೇನೋಂತ ನೋಡ್ಕೊಂಡು ಹೋಗಿರಮ್ಮ," ಎಂದಳು ಆ ಹೆಂಗಸು, ಮೃದುವಾಗಿ. ಆಕೆ ಕೈಗಳನ್ನು ಮುಖಕ್ಕೇರಿಸಿ ದವಡೆಗಳನ್ನು ತೀಡಿ ಕೊಂಡಳು. ಆ ತುಟಿಗಳು ಕಂಪಿಸಿದುವು; ಮುಖ ಮೃದುವಾಯಿತು.

"ನನಗೆ ಗೊತ್ತು!" ಎಂದಳು ತಾಯಿ. ಆ ಮಾತಿನಲ್ಲಿ ಹೆಮ್ಮೆಯ ಧ್ವನಿ ಇಲ್ಲದೆ ಇರಲಿಲ್ಲ.

ಹೆಬ್ಬಾಗಿಲ ಬಳಿ ಬಂದಂತೆ ಒಂದು ಕ್ಷಣ ನಿಂತು, ಶಾಲನ್ನು ಸರಿಪಡಿಸುತ್ತ ಆಕೆ, ತೀಕ್ಷ್ಣವಾಗಿ ಆದರೂ ಬೇರೆಯವರ ಗಮನಕ್ಕೆ ಬಾರದಂತೆ, ಎರಡೂ ಕಡೆ ನೋಡಿ ದಳು. ಜನರ ಗುಂಪಿನಲ್ಲಿ ಗೂಢಚಾರರನ್ನು ಗುರುತಿಸುವುದರಲ್ಲಿ ಆಕೆ ಎಂದೂ ತಪ್ಪು ತ್ತಿರಲಿಲ್ಲ. ಅವರ ವಿಚಿತ್ರ ರೀತಿಯ ಚಲನವಲನ, ಕೃತಕ ಹಾವಭಾವ, ಬೇಸರದ ಆಯಾಸದ ಮುಖ ಮುದ್ರೆ, ಇವೆಲ್ಲ ಅವರ ತೀಕ್ಷ್ಣ ಕಣ್ಣುಗಳ ಒರಟುತನದ ಅಪ ರಾಧದ ಹೊಳಪನ್ನು ಬಚ್ಚಿಡಲು ಸಮರ್ಥವಾಗುತ್ತಿರಲಿಲ್ಲ.

ಈ ಸಲ ಅಂತಹ ಮುಖವೊಂದೂ ತಾಯಿಗೆ ಕಾಣಿಸಲಿಲ್ಲ. ಆಕೆ ಸರಸರನೆ ಬೀದಿಯಲ್ಲಿ ನಡೆದಳು. ಒಂದು ಜಟಕಾಗಾಡಿಯಲ್ಲಿ ಕುಳಿತು ಮಾರ್ಕೆಟ್ಟಿಗೆ ಹೋದಳು. ನಿಕೊಲಾಯ್‌ಗಾಗಿ ಹೊಸ ಉಡುಗೆಯನ್ನು ಕೊಂಡಾಗ ಹಟಹಿಡಿದು ಚೌಕಾಶಿಮಾಡಿ ದಳು. ಹೆಚ್ಚು ಕಡಮೆ ಪ್ರತಿ ತಿಂಗಳೂ ಹೊಸ ಉಡುಗೆಯನ್ನು ಕೊಳ್ಳುವಂತೆ ಮಾಡು ತ್ತಿದ್ದ ವ್ಯಭಿಚಾರಿಯಾದ ತನ್ನ ಕುಡುಕ ಗಂಡನನ್ನು ಬಯ್ದಳು. ಆಕೆಯ ಈ ನಟನೆ ಯಿಂದ ವ್ಯಾಪಾರಿಗಳ ಮೇಲೇನೂ ಪರಿಣಾಮವಾಗಲಿಲ್ಲ. ಆದರೆ ಸ್ವತಃ ತಾಯಿಗೆ ಬಹಳ ಸಂತೋಷವಾಯಿತು. ಹಾದಿಯಲ್ಲಿ ಬರುತ್ತ ನಿಕೊಲಾಯ್‌ಗೆ ಹೊಸ ಬಟ್ಟೆ ಕೊಂಡುಕೊಳ್ಳುವ ಅವಶ್ಯತೆಯನ್ನು ಪೋಲೀಸರು ಮನಗಾಣಬಹುದೆಂದೂ ಗೂಢಚಾರರನ್ನು ಸಂತೇಪೇಟೆಗೆ ಕಳುಹಿಸಬಹುದೆಂದೂ ತಾಯಿ ಎಣಿಕೆಹಾಕಿದ್ದಳು. ಅದೇ ರೀತಿಯ ಮುಗ್ಧ ಎಚ್ಚರಿಕೆಯನ್ನು ವಹಿಸುತ್ತ ಆಕೆ ಯೆಗೋರನ ಕೊಠಡಿಗೆ ಹಿಂದಿರುಗಿದಳು. ಅಲ್ಲಿಂದ ನಿಕೊಲಾಯ್‌ನನ್ನು ಶಹರದ ಹೊರಗಿನವರೆಗೂ ಕರೆ ದೊಯ್ದಳು. ಅವರಿಬ್ಬರೂ ಬೀದಿಯ ಬೇರೆ ಬೇರೆ ಬದಿಗಳಲ್ಲಿ ನಡೆದರು. ನಿಕೊ ಲಾಯ್ ಭಾರವಾದ ಹೆಜ್ಜೆಗಳನ್ನಿಡುತ್ತಾ ಹೊಸ ಕೋಟಿನೊಳಗೆ ಸಂಕಟಪಡುತ್ತಾ ಮೂಗಿನ ಮೇಲಕ್ಕೆ ಇಳಿಯುತ್ತಲೇ ಇದ್ದ ಹ್ಯಾಟನ್ನು ಆಗಾಗ್ಗೆ ಹಿಂದಕ್ಕೆ ತಳ್ಳುತ್ತ ನಡೆಯುತ್ತಿದ್ದುದನ್ನು ನೋಡುತ್ತಿದ್ದ ತಾಯಿಗೆ ತಮಾಷೆಯೆನಿಸುತ್ತಿತ್ತು, ಸಂತೋಷ ವಾಗುತ್ತಿತ್ತು. ಯಾರೂ ಇಲ್ಲದೆ ಇದ್ದ ಒಂದು ಗಲ್ಲಿಯಲ್ಲಿ ಅವರು ಸಾಷಳನ್ನು ಸಂಧಿಸಿ ದರು. ವೆಸೊವ್‌ಶ್ಚಿಕೋವ್‌ನತ್ತ ತಲೆಯಾಡಿಸಿ ಸನ್ನೆ ಮಾಡಿ ತಾಯಿ ಮನೆಗೆ ಹಿಂತಿ ರುಗಿದಳು.

"ಆದರೆ ಪಾವೆಲ್ ಇನ್ನೂ ಜೈಲಿನಲ್ಲೇ ಇದ್ದಾನೆ – ಆಂದ್ರೇಯ್ ಕೂಡ...." ಎಂದು ವ್ಯಥೆಪಡುತ್ತ ಆಕೆ ಯೋಚಿಸಿದಳು.

ಉದ್ವಿಗ್ನಗೊಂಡಿದ್ದ ಸ್ಥಿತಿಯಲ್ಲಿ ನಿಕೊಲಾಯ್ ಇವಾನೊವಿಚ್ ತಾಯಿಯನ್ನು ಇದಿರ್ಗೊಂಡ.

"ಯೆಗೋರ್‌ನ ಸ್ಥಿತಿ ಚಿಂತಾಜನಕವಾಗಿದೆ – ತುಂಬಾ ಚಿಂತಾಜನಕ! ಅವ ನನ್ನ ಆಸ್ಪತ್ರೆಗೆ ಒಯ್ದಿದ್ದಾರೆ. ಲುದ್ಮೀಲ ಇಲ್ಲಿಗೆ ಬಂದಿದ್ಲು. ನೀವೂ ಅಲ್ಲಿಗೆ ಹೋಗ ಬೇಕಂತೆ...."

"ಆಸ್ಪತ್ರೆಗೆ?"

ಹೌದೆಂದು ಕ್ಷೀಣವಾಗಿ ಸನ್ನೆ ಮಾಡಿ ನಿಕೊಲಾಯ್ ತನ್ನ ಕನ್ನಡಕವನ್ನು ಸರಿಪಡಿಸುತ್ತ, ತಾಯಿ ಕೋಟು ಹಾಕಿಕೊಳ್ಳಲು ನೆರವಾದ.

"ಇಗೋ, ಈ ಪೊಟ್ಟಣ ತಗೊಂಡುಹೋಗಿ," ಎಂದು ನಡುಗುವ ಧ್ವನಿ ಯಲ್ಲಿ ಹೇಳಿ, ಆಕೆಯ ಬೆರಳುಗಳನ್ನು ತನ್ನ ಬೆಚ್ಚಗಿನ ಒಣಗಿದ ಕೈಯಿಂದ ಹಿಸುಕಿದ. "ವೆಸೊವ್‌ಶ್ಚಿಕೋವ್ ಇರೋದಕ್ಕೆ ಏರ್ಪಾಟುಮಾಡಿದಿರಾ?" ಎಂದು ಕೇಳಿದ.

"ಹೌದು."

"ಯೆಗೋರ್‌ನನ್ನು ನೋಡಲು ನಾನೂ ಬರ್ತೀನಿ."

ತಾಯಿ ಆಯಾಸಗೊಂಡು ನಿತ್ರಾಣಳಾಗಿದ್ದಳು. ನಿಕೊಲಾಯ್‌ನ ಮನಸ್ಸಿ ನೊಳಗಿನ ಆತಂಕ, ಆಕೆಗೆ ಬರಲಿದ್ದ ಗಂಡಾಂತರದ ಪೂರ್ವಸೂಚನೆಯನ್ನು ಕೊಟ್ಟಿತು.

"ಆತ ಸಾಯುತ್ತಿದ್ದಾನೆ" ಎಂಬ ಮಬ್ಬು ಯೋಚನೆ ಆಕೆಯ ಮನಸ್ಸಿನಲ್ಲಿ ಪದೇ ಪದೇ ಮಿಡಿಯಿತು.

ಆದರೆ, ಸ್ವಚ್ಛವಾಗಿ ಶುಭ್ರವಾಗಿದ್ದ ಪುಟ್ಟ ಕೊಠಡಿಯನ್ನು ಹೊಕ್ಕು, ಸುತ್ತಲೂ ಇದ್ದ ಬಿಳಿಯ ದಿಂಬುಗಳೆಡೆಯಿಂದ ಗಟ್ಟಿಯಾಗಿ ನಗುತ್ತ ಕುಳಿತ್ತಿದ್ದ ಯೆಗೋರ್ ನನ್ನು ಕಂಡಾಗ, ತಾಯಿ ಸಮಾಧಾನಗೊಂಡಳು. ಬಾಗಿಲಲ್ಲೆ ನಿಂತು, ಡಾಕ್ಟ ರಿಗೆ ಯೆಗೋರ್ ಹೇಳುತ್ತಿದ್ದುದಕ್ಕೆ ಕಿವಿಗೊಟ್ಟಳು.

"ರೋಗಿಯನ್ನು ಗುಣಪಡಿಸುವುದು ಸುಧಾರಣೆ ಇದ್ದಹಾಗೆ...."

"ಹುಚ್ಚು ಮಾತು ಸಾಕು ಮಾಡು, ಯೆಗೋರ್!" ಎಂದು ಡಾಕ್ಟರು ಚಿಂತೆಯ ಧ್ವನಿಯಲ್ಲಿ ಉದ್ಗರಿಸಿದ.

"ಆದರೆ ನಾನು ಕ್ರಾಂತಿಕಾರಿ. ಸುಧಾರಣೆಗಳನ್ನ ಕಂಡರಾಗೋದಿಲ್ಲ ನಂಗೆ...."

ಡಾಕ್ಟರು ಮೃದುವಾಗಿ ಯೆಗೋರ್‌ನ ಕೈಯನ್ನು ಆತನ ಮೊಣಗಾಲಿನ ಬಳಿ ಇರಿಸಿ, ರೋಗಿಯ ಊದಿಕೊಂಡಿದ್ದ ಮುಖವನ್ನು ಮುಟ್ಟಿ ನೋಡಿ, ತನ್ನ ಗಡ್ಡ ವನ್ನು ತಟ್ಟುತ್ತ ಯೋಚನಾಮಗ್ನನಾಗಿ ನಿಂತ.

ತಾಯಿಗೆ ಡಾಕ್ಟರ ಪರಿಚಯವಿತ್ತು. ಆತ ನಿಕೊಲಾಯ್‌ನ ಆಪ್ತ ಮಿತ್ರರಲ್ಲಿ ಒಬ್ಬನಾಗಿದ್ದ. ಅವನ ಹೆಸರು ಇವಾನ್ ದನೀಲೊವಿಚ್. ತಾಯಿ ಒಳಗೆ ಬರುತ್ತಲೆ

ಯೆಗೋರ್, ತನ್ನ ನಾಲಿಗೆಯನ್ನು ಹೊರ ಚಾಚಿ ನಮಸ್ಕರಿಸಿದಾಗ, ಡಾಕ್ಟರು ತಿರುಗಿ ನೋಡಿದ.

"ಆ, ನೀಲೊವ್ನ! ನಮಸ್ಕಾರ, ಬನ್ನಿ, ಅಮ್ಮ! ಅದೇನು ಕೈಲಿ!"

"ಪುಸ್ತಕ ಅಂತ ಕಾಣುತ್ತೆ."

"ಅವನೇನೂ ಓದಕೂಡದು," ಡಾಕ್ಟರನೆಂದ.

"ಏನೂ ಓದದೆ ನಾನು ಮೂರ್ಖನಾಗಿ ಮಾರ್ಪಡಬೇಕೂಂತ ಈ ಡಾಕ್ಟರ ಅಪೇಕ್ಷೆ," ಎಂದು ಯೆಗೋರ್ ದೂರುಕೊಟ್ಟ.

ಉಸಿರಾಟ ಕಷ್ಟವಾಗಿ ಆತನ ಎದೆಯ ಗೂಡಿನಿಂದ ತೀವ್ರವಾದ ಸುಂಯ್ ಸುಂಯ್ ಸದ್ದು ಬಂತು. ಮುಖದ ಮೇಲೆಲ್ಲಾ ಬೆವರಿನ ಹನಿಗಳು ಮೂಡಿದುವು. ಕೈಯೆತ್ತಿ ಹುಬ್ಬನ್ನೊರೆಸಿಕೊಳ್ಳುವುದು ಬಲು ಪ್ರಯಾಸವಾಯಿತು. ಅವನ ಊದಿಕೊಂಡ ಕೆನ್ನೆಗಳ ವಿಚಿತ್ರ ರೀತಿಯ ನಿಶ್ಚಲತೆ, ಅವನ ವಿಶಾಲವಾದ ದಯಾಪೂರ್ಣವಾದ ಮುಖವನ್ನು ವಿಕೃತಗೊಳಿಸಿತು; ಆತನ ರೂಪುರೇಖೆಗಳನ್ನು ನಿರ್ಜೀವ ಮುಖ ಮುದ್ರೆಯಾಗಿ ಮಾಡಿತು. ಊದಿಕೊಂಡಿದ್ದ ಮುಖದಲ್ಲಿ ಆಳಕ್ಕೆ ಇಳಿದಿದ್ದ ಕಣ್ಣುಗಳು ಮಾತ್ರ, ಸ್ಪಷ್ಟವಾದ ಹಿರಿಮೆಯ ಮುಗುಳ್ನಗೆಯಿಂದ ನೋಡಿದುವು.

"ಹೇ ಮಹಾ ವೈದ್ಯ, ನನಗೆ ಆಯಾಸವಾಗಿದೆ, ಮಲಕ್ಕೋಬಹುದೆ?"

"ಇಲ್ಲ, ಕೂಡದು," ಎಂದು ಡಾಕ್ಟರು ಖಚಿತ ಸ್ವರದಲ್ಲಿ ಉತ್ತರವಿತ್ತ.

"ನೀನು ಹೊರಹೋದ ತಕ್ಷಣ ಮಲಕೋತೀನಿ, ನೋಡು!"

"ಮಲಗೋಕೆ ಬಿಡಬೇಡಿ, ನೀಲೊವ್ನ! ಅವನ ದಿಂಬುಗಳನ್ನ ಸರಿಪಡಿಸಿ. ಮಾತಾಡಲು ಬಿಡಬೇಡಿ – ಅದರಿಂದ ತುಂಬಾ ಅಪಾಯವಿದೆ."

ತಾಯಿ ಆಗಲೆಂದು ತಲೆಯಾಡಿಸಿದಳು. ಡಾಕ್ಟರು ತಮ್ಮ ಪುಟ್ಟ ಹೆಜ್ಜೆಗಳನ್ನಿ ಡುತ್ತಾ ಹೊರಹೋದ. ಯೆಗೋರ್ ತಲೆಯನ್ನು ಹಿಂದಕ್ಕೆ ಚಾಚಿ ಕಣ್ಣುಗಳನ್ನು ಮುಚ್ಚಿಕೊಂಡ. ತೆರೆದು ಮಡಚಿಕೊಳ್ಳುತ್ತಿದ್ದ ಬೆರಳುಗಳ ಹೊರತಾಗಿ ಅವನ ದೇಹ ನಿಶ್ಚಲವಾಗಿತ್ತು. ಆ ಪುಟ್ಟ ಕೊಠಡಿಯ ಬಿಳಿಯ ಗೋಡೆಗಳು, ಒಣಗಿದ ಶೀತಲ ಚೈತನ್ಯಹೀನ ಭಾವನೆಯನ್ನು ನೆಲೆಗೊಳಿಸಿದುವು. ವಿಶಾಲವಾದ ಕಿಟಕಿಯ ಎಡೆಯಿಂದ ಮರಗಳ ಆಕೃತಿಗಳು ಕಾಣಿಸುತ್ತಿದ್ದುವು. ಕರಿದಾದ ಧೂಳು ತುಂಬಿದ ಎಲೆಗಳ ನಡುವೆ, ಅರಸಿನ ಬಣ್ಣದ ಹಣ್ಣೆಲೆಗಳು ಹೊಳೆಯುತ್ತಿದ್ದುವು.

ಯೆಗೋರ್ ಚಲಿಸದೆಯೇ ಕಣ್ಣುಗಳನ್ನು ತೆರೆಯದೆಯೇ ಹೇಳಿದ:

"ನಿಧಾನವಾಗಿ ಇಷ್ಟವಿಲ್ಲದೆ ಮೃತ್ಯು ನನ್ನನ್ನ ಕರೀತಿದ್ದಾಳೆ. ನನ್ನ ಮೇಲೆ ಅವಳಿಗೆ ಸ್ವಲ್ಪ ಕರುಣೆ ಇದೇಂತ ತೋರುತ್ತೆ.... ನನ್ನನ್ನ ನಡೆಸ್ಕೊಳ್ಳೋದು ಯಾವತ್ತೂ ಯಾರಿಗೂ ಕಷ್ಟವಾಗಿಲ್ಲ!"

"ಮಾತಾಡೋದು ನಿಲ್ಸು, ಯೆಗೋರ್ ಇವಾನೊವಿಚ್," ಎಂದು ತಾಯಿ ಆತನ ಕೈಯನ್ನು ಮೃದುವಾಗಿ ತಟ್ಟುತ್ತಾ ಬೇಡಿಕೊಂಡಳು.

"ಒಂದು ನಿಮಿಷ ತಾಳು, ನಿಲ್ಲಿಸ್ತೀನಿ...."

ಬಲು ಪ್ರಯಾಸಪಡುತ್ತ, ಉಸಿರಿಗಾಗಿ ಏದುತ್ತ, ಮಾತನಾಡಲು ಸಾಮರ್ಥ್ಯವಿಲ್ಲದೇ ಇದ್ದಾಗ ನಡು ನಡುವೆ ದೀರ್ಘಕಾಲ ತಡೆಯುತ್ತ, ಆತ ಮಾತು ಮುಂದುವರಿಸಿದ:

"ನೀವು ನಮ್ಮ ಜತೇಲಿರೋದು ತುಂಬಾ ಚೆನ್ನು. ನಿಮ್ಮ ಮುಖ ನೋಡೋದು ತುಂಬಾ ಸೊಗಸು. ಒಮ್ಮೊಮ್ಮೆ ನನ್ನನ್ನು ನಾನೇ ಕೇಳ್ತೀನಿ – ಇವಳ ಕೊನೆ ಹ್ಯಾಗಾಗುತ್ತೆ, ಅಂತ. ಎಲ್ಲರ ಹಾಗೆ ನೀವೂ ಜೈಲಿಗೆ ಹೋಗ್ಬೇಕು, ಇತ್ಯಾದಿ, ಇತ್ಯಾದಿ ಅನ್ನೋದನ್ನ ಯೋಚಿಸಿದರೆ ಕನಿಕರವಾಗ್ತದೆ.... ನಿಮಗೆ ಜೈಲಿಗೆ ಹೋಗೋದಕ್ಕೇ ಹೆದರಿಕೆಯಾಗುತ್ಯೆ, ತಾಯಿ?"

"ಇಲ್ಲ" ಎಂದು ಆಕೆ ಸರಳವಾಗಿ ಉತ್ತರವಿತ್ತಳು.

"ಅದು ಸ್ವಾಭಾವಿಕ.... ಆದರೆ, ಹೋಗದೆ ಇರೋದಕ್ಕಾಗೋದಿಲ್ಲ. ಜೈಲು ತುಂಬಾ ಹೊಲಸು. ನನ್ನನ್ನ ಈ ಸ್ಥಿತಿಗೆ ತಂದಿರೋದು ಜೈಲೇ.... ನಿಜ ಹೇಳಬೇಕೆಂದರೆ ನನಗೆ ಸಾಯೋಕ್ಕೆ ಇಷ್ಟವಿಲ್ಲ."

"ಬಹುಶಃ ನೀನೀಗಲೇ ಸಾಯಲಾರೆ," ಎಂದು ತಾಯಿ ಹೇಳುವುದರಲ್ಲಿದ್ದಳು. ಆದರೆ ಅವನ ಮುಖವನ್ನು ನೋಡಿದೊಡನೆಯೇ ತಾಯಿ ತಣ್ಣಗಾದಳು.

"ನಾನಿನ್ನೂ ಕೆಲಸ ಮಾಡಬಲ್ಲೆ.... ಕೆಲಸಮಾಡೋಕೆ ಆಗದೇ ಇದ್ರೆ ಬದುಕಿರೋದರಲ್ಲಿ ಅರ್ಥವಿಲ್ಲ.... ಅದು ಮೂರ್ಖತನವಾದೀತು...."

ತಾಯಿ ನಿಟ್ಟುಸಿರುಬಿಟ್ಟಳು. "ಎಲ್ಲವೂ ಸರಿಯೆ; ಆದರೆ ಅದರಿಂದ ಸಮಾಧಾನವಿಲ್ಲ," ಎಂದು ಅಂದ್ರೇಯ್ ಆಗಾಗ್ಗೆ ಹೇಳುತ್ತಿದ್ದುದು ತಾಯಿಯ ನೆನಪಿಗೆ ಬಂತು. ದಿನದ ಬಳಲಿಕೆಯಿಂದ ಆಕೆ ದಣಿದಿದ್ದಳು; ಹಸಿವಾಗಿತ್ತು. ಕಾಹಿಲೆ ಮನುಷ್ಯನ ತೇವಮಯವಾದ ಏಕ ಪ್ರಕಾರವಾದ ಪಿಸುಮಾತು ಕೊಠಡಿಯಲ್ಲೆಲ್ಲಾ ತುಂಬಿಕೊಂಡು ನುಣುಪಾದ ಗೋಡೆಗಳ ಮೇಲೆ ಅಸಹಾಯವಾಗಿ ಹರಿದಾಡಿತು. ಕಿಟಕಿಯ ಹೊರಗಿದ್ದ ಮರಗಳ ಮೇಲುಭಾಗ, ಬಲು ಕೆಳಗೆ ತೇಲಾಡುತ್ತಿದ್ದ ಮೋಡಗಳ ಹಾಗಿತ್ತು; ಭಯಗೊಳಿಸುವಷ್ಟು ಮಬ್ಬಾಗಿ ಭೀಕರವಾಗಿತ್ತು. ಕತ್ತಲೆಯನ್ನು ಇದಿರು ನೋಡುವ ಮುಚ್ಚಂಜೆಯ ಹಾಗೆ ಪ್ರತಿಯೊಂದೂ ಸ್ತಬ್ಧವಾಗಿತ್ತು.

ಕಣ್ಣುಗಳನ್ನು ಮುಚ್ಚುತ್ತ ಶಾಂತನಾಗುತ್ತ ಯೆಗೋರ್ ಹೇಳಿದ:

"ಎಷ್ಟೊಂದು ಯಾತನೆ!"

"ನಿದ್ದೆ ಹೋಗು. ಸ್ವಲ್ಪ ಮೇಲೆನಿಸೀತು," ಎಂದು ತಾಯಿ ಸಲಹೆ ಇತ್ತಳು.

ತಾಯಿ ಆತನ ಉಸಿರಾಟವನ್ನು ಪರೀಕ್ಷಿಸಿ, ಸುತ್ತಲೂ ನೋಡಿ, ಭೀತಿಯ ಶೀತಲ ಬಿಗಿಹಿಡಿತವಲ್ಲಿ ಸ್ವಲ್ಪ ಹೊತ್ತು ಚಲಿಸದೆಯೇ ಕುಳಿತಳು. ಆಮೇಲೆ ಕುಳಿತಿದ್ದಲ್ಲಿಯೇ ಆಕೆಗೆ ನಿದ್ದೆ ಬಂತು....

....ಬಾಗಿಲ ಬಳಿ ಬಲು ಎಚ್ಚರಿಕೆಯ ಸದ್ದು ಕೇಳಿ ತಾಯಿ ಎಚ್ಚೆತ್ತಳು. ಆಕೆ

ತಬಡಿಸಿ ಎದ್ದು, ಯೆಗೋರ್‌ನ ಕಣ್ಣುಗಳು ತೆರೆದಿದ್ದುದನ್ನು ಕಂಡಳು.

"ನಾನು ನಿದ್ದೆ ಹೋಗಿರ್ಬೇಕು, ಕ್ಷಮಿಸು," ಎಂದು ತಾಯಿ ಮೃದುವಾಗಿ ಹೇಳಿ ತು.

"ಕ್ಷಮಿಸಬೇಕಾದ್ದು ನನ್ನನ್ನು," ಎಂದು ಆತ ಅಷ್ಟೇ ಮೃದುವಾಗಿ ಹೇಳಿದ.

ಸಂಜೆಗತ್ತಲು ಕಿಟಕಿಯ ಮೂಲಕ ಇಣಿಕಿ ನೋಡಿತು. ಕೊಠಡಿಯಲ್ಲಿ ಚಳಿ ತ್ತು. ವಿಚಿತ್ರ ರೀತಿಯಲ್ಲಿ ಪ್ರತಿಯೊಂದಕ್ಕೂ ನೆರಳು ಬಿದ್ದಿತ್ತು. ಕಾಹಿಲೆ ಮನುಷ್ಯನ ುಖ ಕಪ್ಪಗಾಗಿತ್ತು.

ಹೊರಗೆ ಸಪ್ಪಳವಾಗಿ ಲುದ್ಮೀಲಳ ಸ್ವರ ಕೇಳಿಸಿತು:

"ಕತ್ತಲೇಲಿ ಕೂತು ಪಿಸುಮಾತಾಡ್ತಿದ್ದೀರಾ?... ವಿದ್ಯುತ್ ಗುಂಡಿ ಎಲ್ಲಿದೆ?"

ಒಮ್ಮೆಲೆ ಕೊಠಡಿ ಕಠೋರವಾದ ಬಿಳಿಯ ಬೆಳಕಿನಿಂದ ತುಂಬಿ ಹರಿಯಿತು. ೊಠಡಿಯ ನಡುವೆ ಲುದ್ಮೀಲಳ ಎತ್ತರದ ನೇರವಾದ ಕರಿಯ ಆಕೃತಿ ನಿಂತಿತು.

ಯೆಗೋರ್‌ನ ದೇಹದಾದ್ಯಂತ ಕಂಪನವಾಯಿತು. ಕೈಯನ್ನಾತ ಎದೆಯ ಮೇಲಿ ಿದ.

"ಏನಾಯ್ತು?" ಎಂದು ಲುದ್ಮೀಲ ಆತನ ಬಳಿಗೆ ಓಡುತ್ತಾ ಕೇಳಿದಳು.

ನಿಶ್ಚಲ ಕಣ್ಣುಗಳಿಂದ ಆತ ತಾಯಿಯನ್ನು ನೋಡಿದ. ಈಗ ಆ ಕಣ್ಣುಗಳು ತ್ತು ವಿಶಾಲವಾಗಿದ್ದಂತೆ, ಆ ಕಣ್ಣುಗಳಲ್ಲಿ ವಿಚಿತ್ರವಾದ ಬೆಳಕಿದ್ದಂತೆ, ತೋರಿತು.

ಬಾಯನ್ನು ಅಗಲವಾಗಿ ತೆರೆದು ಆತ ತಲೆಯೆತ್ತಿದ; ಕೈಯನ್ನು ಮುಂದಕ್ಕೆ ಾಚಿದ. ತಾಯಿ ಆ ಕೈಯನ್ನೆತ್ತಿಕೊಂಡು, ತಾನು ಉಸಿರಾಡುವುದಕ್ಕೂ ಧೈರ್ಯ ಡದೆ, ಆ ಮುಖವನ್ನೆ ನೋಡಿದಳು. ಕೊರಳನ್ನು ಬಲವಾಗಿ ಅತಿ ಕ್ರೂರವಾಗಿ ುಚಿಕೊಂಡು, ತಲೆಯನ್ನು ಹಿಂದಕ್ಕೆ ತಳ್ಳಿ ಆತ ಗಟ್ಟಿಯಾದ ಸ್ವರದಲ್ಲಿ ಹೇಳಿದ:

"ನನ್ನಿಂದಾಗೋದಿಲ್ಲ ಇನ್ನು! ಎಲ್ಲ ಮುಗಿದ್ಹೋಯ್ತು!" ಆತನ ದೇಹ ರೆಕ್ಷಣ ನಡುಗಿತು. ತಲೆ ಅಸಹಾಯವಾಗಿ ಭುಜದ ಮೇಲೆ ಬಿತ್ತು. ಹಾಸಿಗೆಯ ೕಲೆ ತೂಗಾಡುತ್ತಿದ್ದ ದೀಪದ ಶೀತಲವಾದ ಬೆಳಕು ಆತನ ತೆರೆದ ಕಣ್ಣುಗಳಲ್ಲಿ ರ್ಜೀವವಾಗಿ ಪ್ರತಿಬಿಂಬಿತವಾಯಿತು.

"ಓ, ನಮ್ಮಪ್ಪ!" ಎಂದು ತಾಯಿ ಪಿಸುಗುಟ್ಟಿದಳು.

ಲುದ್ಮೀಲ ನಿಧಾನವಾಗಿ ಹಾಸಿಗೆಯಿಂದ ದೂರ ಸರಿದು ಕಿಟಕಿಯತ್ತ ಹೋದಳು. ಲ್ಲಿ, ಹೊರಕ್ಕೆ ನೋಡುತ್ತಾ ನಿಂತಳು.

"ಅವನು ತೀರ್ಕೊಂಡ!" ಎಂದಾಕೆ ಒಮ್ಮೆಲೆ ಬಲುಗಟ್ಟಿಯಾದ ಸ್ವರದಲ್ಲಿ ಂದಳು.

ಮೊಣಕೈಗಳನ್ನು ಕಿಟಕಿಯ ದಂಡೆಯ ಮೇಲಿಟ್ಟು ಆಕೆ ಒರಗಿ ನಿಂತಳು. ಳಿಕ, ಅನಿರೀಕ್ಷಿತವಾಗಿ ತಲೆಗೆ ಹೊಡೆತ ಬಿದ್ದಂತೆ, ಮೊಣಕಾಲುಗಳ ಮೇಲೆ ಕುಸಿ ಳಿತು, ರೋದಿಸುತ್ತ ಕೈಗಳಿಂದ ಮುಖವನ್ನು ಮುಚ್ಚಿಕೊಂಡಳು.

ತಾಯಿ ಯೆಗೋರ್‌ನ ಭಾರವಾದ ಕೈಗಳನ್ನು ಒಂದಕ್ಕೊಂದು ಅಡ್ಡವಾಗಿ ಎದೆಯ ಮೇಲಿರಿಸಿದಳು. ತಲೆಯನ್ನು ಸರಿಯಾಗಿ ದಿಂಬಿನ ಮೇಲಿಟ್ಟಳು. ಬಳಿಕ, ತನ್ನ ಕಂಬನಿಯನ್ನೊರೆಸಿಕೊಂಡು ಲುದ್ಮಿಲಳ ಬಳಿಗೆ ಹೋಗಿ, ಬಾಗಿ, ಆ ಹೆಂಗಸಿನ ದಟ್ಟನೆಯ ಕೂದಲನ್ನು ನೇವರಿಸಿದಳು. ಲುದ್ಮಿಲ ಮೆಲ್ಲನೆ ಮಂದವಾದ ಹನಿ ಗೂಡಿದ ದೃಷ್ಟಿಯಿಂದ ತಾಯಿಯನ್ನು ನೋಡಿ, ಎದ್ದು ನಿಲ್ಲಲು ಯತ್ನಿಸಿದಳು.

ನಡುಗುತ್ತಿದ್ದ ತುಟಿಗಳಿಂದ ಲುದ್ಮಿಲ ಪಿಸುಗುಟ್ಟಿದಳು:

"ಗಡೀಪಾರಾದಾಗ ನಾವು ಜತೆಯಲ್ಲೆ ಇದ್ದೆವು. ಜತೆಯಾಗಿಯೇ ಅಲ್ಲಿಗೆ ಹೋದೆವು ಜತೆಯಾಗಿ ಜೈಲುವಾಸ ಅನುಭವಿಸಿದೆವು. ಕೆಲವೊಮ್ಮೆ ಆ ನರಕ ಜೀವನದಿಂದ ಹೇಸಿಕೆ ಎನಿಸುತ್ತಿತ್ತು. ಆ ಬಾಳು ಅಸಹನೀಯವಾಗಿತ್ತು... ಎಷ್ಟೋ ಜನ ಧೃತಿಗೆಡುತ್ತಿದ್ದರು..."

ಗಟ್ಟಿಯಾಗಿ ಬಿಕ್ಕಿಬಿಕ್ಕಿ ಬಂದ ಅಳು ಆಕೆಯನ್ನು ಗೋಳಾಡಿಸಿತು. ಪ್ರಯತ್ನ ಪೂರ್ವಕವಾಗಿ ಅದನ್ನಾಕೆ ಹತ್ತಿಕ್ಕಿದಳು. ತನ್ನ ಮುಖವನ್ನು ತಾಯಿಯ ಮುಖದ ಬಳಿಗೆ ಆಕೆ ತಂದಳು. ಶೋಕಪೂರ್ಣವಾದ ಮೃದುತನದಿಂದ ಆಕೆಯ ಮುಖವೂ ಮೃದುವಾಗಿ, ವಯಸ್ಸಿನಲ್ಲಿ ಆಕೆ ಚಿಕ್ಕವಳಾಗಿ ತೋರಿದಳು.

ಕಂಬನಿ ಇಲ್ಲದೆಯೇ ಬಿಕ್ಕಳಿಸುತ್ತ, ಬೇಗ ಬೇಗನೆ ಪಿಸುಗುಟ್ಟುತ್ತ, ಆಕೆ ಮುಂದುವರಿಸಿದಳು:

"ಆದರೆ ಆತನ ಚೈತನ್ಯ ಅಕ್ಷಯವಾಗಿತ್ತು. ತನ್ನ ಸಂಕಟವನ್ನು ಬಚ್ಚಿಟ್ಟು, ಆತ ಯಾವಾಗಲೂ ನಗುತ್ತಿದ್ದ; ತಮಾಷೆಯ ಮಾತುಗಳನ್ನಾಡುತ್ತಿದ್ದ. ದುರ್ಬಲರಲ್ಲಿ ಧೈರ್ಯ ತುಂಬುತ್ತಿದ್ದ ಆತ ಯಾವಾಗಲೂ ಒಳ್ಳೆಯವನಾಗಿ ದಯಾಮಯನಾಗಿ ಜಾಣನಾಗಿದ್ದ. ಅಲ್ಲಿ ಸೈಬೀರಿಯಾದಲ್ಲಿ ಆಲಸ್ಯದಿಂದ ಜನ ಕೆಡ್ತಾರೆ. ದೌರ್ಬಲ್ಯಗಳ ದಾಸರಾಗ್ತಾರೆ. ಅದನ್ನೆಲ್ಲ ಇದಿರಿಸೋದು ಅವನಿಗೆ ಎಷ್ಟೊಂದು ಚೆನ್ನಾಗಿ ಗೊತ್ತಿತ್ತು! ಆತ ಎಂಥ ದಿವ್ಯ ಸಂಗಾತಿ ಅನ್ನೋದು ನಿಮಗೆ ಗೊತ್ತಿದ್ದರೆ! ಆತನ ವೈಯಕ್ತಿಕ ಜೀವನದುದ್ದಕ್ಕೂ ನಿರಾಸೆ-ದುಃಖ. ಆದರೆ ಒಮ್ಮೆಯಾದರೂ ಯಾರಾದರೂ ಆ ವಿಚಾರವಾಗಿ ಅವನ ಬಾಯಿಯಿಂದ ಒಂದು ಚಕಾರ ಕೇಳಿದ್ದರೆ! ಎಂದೂ ಇಲ್ಲ! ನಾನು ಅವನಿಗೆ ಸಮೀಪದ ಸ್ನೇಹಿತೆಯಾಗಿದ್ದೆ. ನಾನು ಅವನ ದಯೆಗಾಗಿ ಎಷ್ಟೋ ಋಣಿ. ತನ್ನ ಶ್ರೀಮಂತ ಬುದ್ಧಿಶಕ್ತಿಯ ಭಂಡಾರದಿಂದ ಏನೇನು ಸಾಧ್ಯವೋ ಅದನ್ನೆಲ್ಲಾ ಆತ ನನಗೆ ಕೊಟ್ಟ. ಹೀಗಿದ್ದರೂ, ಏಕಾಂಗಿಯಾಗಿ ಬಳಲಿಕೊಂಡು ಅವನಿದ್ದರೂ, ತಾನು ಕೊಟ್ಟುದಕ್ಕೆ ಬದಲು ಒಂದಿಷ್ಟು ಪ್ರೀತಿಯನ್ನಾಗಲೀ ವೈಯಕ್ತಿಕ ಗಮನವನ್ನಾಗಲೀ ಅವನು ಬಯಸಲಿಲ್ಲ...."

ಆಕೆ ಯೆಗೋರ್‌ನ ಬಳಿಗೆ ಹೋಗಿ ಬಾಗಿ ಆತನ ಕೈಯನ್ನು ಮುದ್ದಿಸಿದಳು.

ಆಕೆ ಮೃದುವಾಗಿ ಹೇಳಿದಳು:

"ಸಂಗಾತಿ, ನನ್ನ ಪ್ರೀತಿಯ ಒಳ್ಳೆಯ ಸಂಗಾತಿ, ವಂದನೆ ನಿನಗೆ ಹೃತ್ಪೂ

ರ್ವಕ ವಂದನೆ. ಶುಭಮಸ್ತು ನಿನಗೆ. ನೀನು ಹ್ಯಾಗೆ ಅವಿರಾಮವಾಗಿ, ಅಚಲ ಶ್ರದ್ಧೆಯಿಂದ, ಜೀವನಪರ್ಯಂತ ದುಡಿದೆಯೋ ಹಾಗೆಯೇ ನಾನೂ ದುಡಿಯುತ್ತ ಹೋಗ್ತೇನೆ. ಶುಭಮಸ್ತು !"

ಬಿಕ್ಕಳಿಕೆಯಿಂದ ಆಕೆಯ ಶರೀರ ಒಂದೇ ಸಮನೆ ಕಂಪಿಸಿತು. ತಲೆಯನ್ನು ಯೆಗೋರ್‌ನ ಪಾದಗಳ ಬಳಿ ಇಟ್ಟು ಆಕೆ ಕುಸಿಬಿದ್ದಳು. ತಾಯಿ ಮೌನವಾಗಿ ಧಾರಾಕಾರವಾಗಿ ಕಣ್ಣೀರನ್ನು ಹರಿಯಗೊಟ್ಟಳು.... ಯಾವುದೋ ಕಾರಣಕ್ಕಾಗಿ ಆಕೆ ಕಣ್ಣೀರನ್ನು ಹತ್ತಿಕ್ಕಲು ಯತ್ನಿಸಿದಳು. ಲುದ್ಮೀಳನ್ನು ಬಲವಾದ ಆಸರೆಯೊದಗಿಸಿ ಸಂತೈಸಬೇಕೆಂದು ಆಕೆ ಇಚ್ಛಿಸಿದಳು. ಯೆಗೋರ್‌ನನ್ನು ಕುರಿತು ಪ್ರೀತಿಯ-ದುಃಖದ ಒಳ್ಳೆಯ ಮಾತುಗಳನ್ನಾಡಲು ಆಕೆ ಅಪೇಕ್ಷೆಪಟ್ಟಳು. ಆತನ ಬತ್ತಿದ ಮುಖವನ್ನು, ಬರೇ ನಿದ್ದೆ ಹೋಗಿದ್ದನೇನೋ ಎನ್ನುವ ಹಾಗೆ ಎವೆಗಳು ಅರೆ ಮುಚ್ಚಿದ್ದ ಕಣ್ಣುಗಳನ್ನು, ಹಗುರವಾದೊಂದು ಮುಗುಳುನಗು ಆಟವಾಡುತ್ತಿದ್ದ ಕರಿಯ ತುಟಿಗಳನ್ನು, ತನ್ನ ಕಂಬನಿಗಳೆಡೆಯಿಂದ ತಾಯಿ ನೋಡಿದಳು. ಪ್ರತಿಯೊಂದೂ ಶಾಂತವಾಗಿತ್ತು, ಹೃದಯಕ್ಕೆ ನೋವಾಗುವಂತೆ ಶುಭ್ರವಾಗಿತ್ತು....

ಇವಾನ್ ದನೀಲೊವಿಚ್ ಎಂದಿನಂತೆ ವೇಗವಾಗಿ ಪುಟ್ಟ ಹೆಜ್ಜೆಗಳನ್ನಿಡುತ್ತ ಬಂದು, ಒಮ್ಮೆಲೆ ಕೊಠಡಿಯ ಮಧ್ಯದಲ್ಲಿ ನಿಂತ. ಕೈಗಳನ್ನು ಸರಕ್ಕನೆ ಜೇಬುಗಳೊಳಕ್ಕೆ ತುರುಕಿಸಿ, ನಡುಗುತ್ತಿದ್ದ ಗಟ್ಟಿಯಾದ ಸ್ವರದಲ್ಲಿ ಕೇಳಿದ:

"ಎಷ್ಟು ಹೊತ್ತಿಗಾಯ್ತು ?"

ಯಾರೂ ಉತ್ತರಕೊಡಲಿಲ್ಲ. ಆತ ಹುಬ್ಬನ್ನೊರೆಸಿಕೊಂಡು, ಭದ್ರವಾಗಿ ನಿಲ್ಲಲಾರದೆ ಸ್ವಲ್ಪ ವಾಲುತ್ತ ಯೆಗೋರ್‌ನ ಬಳಿಗೆ ಹೋದ. ಆತನ ಕೈಯನ್ನು ಕುಲುಮಿದ ಬಳಿಕ ಕೊಠಡಿಯ ಒಂದು ಮೂಲೆಗೆ ನಡೆದ.

"ಅದರಲ್ಲಿ ಅನಿರೀಕ್ಷಿತವೇನೂ ಇಲ್ಲ. ಇವನಂಥ ಹೃದಯಬೇನೆ ಇಟ್ಟುಕೊಂಡವನಿಗೆ ಆರು ತಿಂಗಳ ಹಿಂದೆಯೇ ಆಯುಸ್ಸು ಮುಗಿದು ಹೋಗ್ಬೇಕಿತ್ತು... ಈತನಾದ್ದರಿಂದ...."

ಒಮ್ಮೆಲೆ ಆತನ ಅಸಮಂಜಸವೆನಿಸುತ್ತಿದ್ದ ಏರು ಗಂಟಲಿನ ಶಾಂತ ಸ್ವರ ಕುಸಿದುಬಿತ್ತು. ಆತ ಗೋಡೆಗೊರಗಿ, ಹಾಸಿಗೆಯ ಬಳಿಯಲ್ಲಿದ್ದವರನ್ನು ನೋಡುತ್ತ ತಪ್ಪನಾಗಿ ಗಡ್ಡವನ್ನು ತಿರುವತೊಡಗಿದ.

"ಮತ್ತೊಬ್ಬ ಅಸುನೀಗಿದ," ಎಂದ ಆತ ಮೆಲ್ಲನೆ.

ಲುದ್ಮೀಲ ಎದ್ದು ಕಿಟಕಿಯನ್ನು ತೆರೆದಳು. ಎಲ್ಲರೂ ಒಟ್ಟಾಗಿಯೇ ರಾತ್ರಿಯ ಕಪ್ಪು ಮುಖವನ್ನು ದಿಟ್ಟಿಸುತ್ತಾ ನಿಂತರು. ಕರಿಯ ಮರಗಳ ಮೇಲೆ ಎತ್ತರದಲ್ಲಿ ನಕ್ಷತ್ರಗಳು ಮಿನುಗಿ, ಆಕಾಶದ ಅನಂತ ಆಳವನ್ನು ಮತ್ತಷ್ಟು ಅಗಾಧಗೊಳಿಸಿದುವು.

ಲುದ್ಮೀಲ ತಾಯಿಯ ತೋಳನ್ನು ಹಿಡಿದುಕೊಂಡು, ಮೌನವಾಗಿ ಆಕೆಯ ಭುಜದ ಮೇಲೊರಗಿದಳು. ಡಾಕ್ಟರು ತಲೆ ಬಾಗಿಸಿ, ತನ್ನ ಕನ್ನಡಕವನ್ನುಜ್ಜುತ್ತ

ನಿಂತ. ಕಿಟಕಿಯ ಹೊರಗಿನ ಕತ್ತಲೆಯಿಂದ, ಶಹರದ ರಾತ್ರಿಯ ಬೇಸರದ ಸದ್ದುಗಳು ಬರುತ್ತಿದ್ದುವು. ಚಳಿ ಅವರ ಮುಖಗಳನ್ನು ತಡವಿ ಕೂದಲನ್ನು ಕೆರಳಿಸಿತು. ಕಂಬನಿ ಯೊಂದು ಕೆನ್ನೆಯ ಮೇಲಿಂದ ಕೆಳಕ್ಕಿಳಿದಂತೆ ಲುದ್ಮೀಲ ನಡುಗಿದಳು. ಹೊರಗೆ ಜಗಲಿಯ ಮೂಲೆಯಲ್ಲಿ ಹತ್ತಿಕ್ಕಿದ ಗುಸುಗುಸು ಮಾತು, ಭೀತಿಯ ಸ್ವರಗಳು, ಅವಸರದ ನಡಿಗೆ, ನರಳಾಟ, ಪಿಸುಮಾತುಗಳು ಕೇಳಿಸಿದುವು. ಆದರೆ ಆ ಮೂವರೂ ಮೌನವಾಗಿ ನಿಶ್ಚಲರಾಗಿ ಕತ್ತಲೆಯನ್ನೆ ದಿಟ್ಟಿಸುತ್ತ ನಿಂತರು.

ಇಲ್ಲಿ, ತಾನಿದ್ದು ಇನ್ನು ಆಗಬೇಕಾದ ಕೆಲಸವೇನೂ ಇಲ್ಲವೆಂದು ಭಾವಿಸಿ ತಾಯಿ ಮೆಲ್ಲನೆ ತನ್ನ ತೋಳನ್ನು ಬಿಡಿಸಿಕೊಂಡು, ಬಾಗಿಲ ಬಳಿಗೆ ಹೋಗಿ, ಅಲ್ಲಿಂದಲೆ ಯೆಗೋರ್‌ನನ್ನು ನೋಡುತ್ತ ಬಾಗಿ ವಂದಿಸಿದಳು.

ಡಾಕ್ಟರು ತಿರುಗಿ ನೋಡದೆಯೇ ಮೃದುವಾಗಿ ಕೇಳಿದ:

"ನೀವು ಹೋಗ್ತೀರಾ?"

"ಹೌದು...."

ಒಮ್ಮೆ ಬೀದಿಗಿಳಿದ ಮೇಲೆ ತಾಯಿ, ಲುದ್ಮೀಲಳನ್ನೂ ಅವಳ ಹತ್ತಿಕ್ಕಿದ ರೋದ ನವನ್ನೂ ಕುರಿತು ಯೋಚಿಸಿದಳು.

"ಹ್ಯಾಗೆ ಅಳಬೇಕು ಅನ್ನೋದು ಕೂಡಾ ಆಕೆಗೆ ಗೊತ್ತಿಲ್ಲ..."

ಸತ್ತುದಕ್ಕೆ ಮುಂಚೆ ಯೆಗೋರ್ ಆಡಿದ ಮಾತುಗಳ ನೆನಪಾಗಿ ತಾಯಿ ನಿಟ್ಟುಸಿರು ಬಿಟ್ಟಳು. ಮೆಲ್ಲನೆ ಬೀದಿಯಲ್ಲಿ ನಡೆಯುತ್ತ ತಾಯಿ, ಆತನ ಜೀವಂತ ಕಣ್ಣುಗಳನ್ನು, ಆತನ ಉತ್ಸಾಹವನ್ನು, ಜೀವನದ ವಿಷಯವಾಗಿ ಆತ ಹೇಳುತ್ತಿದ್ದ ಕತೆಗಳನ್ನು ಸ್ಮರಿಸಿಕೊಂಡಳು....

"ಒಳ್ಳೆಯ ಮನುಷ್ಯನಿಗೆ ಬದುಕೋದು ಕಷ್ಟ, ಸಾಯೋದು ಸುಲಭ. ನಾನು ಹೇಗೆ ಸಾಯ್ತೇನೊ?" ಎಂದು ತಾಯಿ ಯೋಚಿಸಿದಳು.

ಒಳದೃಷ್ಟಿಯಿಂದ ತಾಯಿ, ಬಿಳಿಯ ಅತಿ ಶುಭ್ರವಾದ ಕೊಠಡಿಯ ಬಳಿ ಲುದ್ಮೀಲ ಮತ್ತು ಡಾಕ್ಟರು ನಿಂತಿದ್ದುದನ್ನೂ ಯೆಗೋರ್‌ನ ಸತ್ತ ಕಣ್ಣುಗಳು ಅವರ ಹಿಂದಿದ್ದುದನ್ನೂ ಕಂಡಳು. ಒಮ್ಮೆಲೆ, ಮಾನವಕೋಟಿಗೋಸ್ಕರವಾದ ಮಹಾ ಕನಿಕರದಿಂದ ಆಕೆಯ ಹೃದಯ ಬಿರಿಯಿತು. ಯಾತನಾಪೂರ್ಣವಾದ ನಿಟ್ಟು ಸಿರು ಬಿಟ್ಟು, ಅಸ್ಪಷ್ಟವಾದ ಯಾವುದೋ ಒತ್ತಡಕ್ಕೆ ಸಿಲುಕಿ, ಬೇಗ ಬೇಗನೆ ಆಕೆ ಹೆಜ್ಜೆ ಇಟ್ಟಳು.

ತನ್ನೊಳಗಿಂದ ತನ್ನನ್ನು ಮುಂದಕ್ಕೆ ತಳ್ಳುತ್ತಿದ್ದ ದುಃಖದ ಆದರೂ ಧೈರ್ಯ ಶಾಲಿಯಾದ ಶಕ್ತಿಗೆ ತಲೆ ಬಾಗಿ, ತಾಯಿ, "ನಾನು ಬೇಗ್ನೆ ಹೋಗ್ಬೇಕು!" ಎಂದು ಕೊಂಡಳು.



ಮಾರನೆಯ ದಿನವನ್ನೆಲ್ಲ ತಾಯಿ, ನಾಳೆಯ ಶವಸಂಸ್ಕಾರ ಏರ್ಪಾಡು ಮಾಡು ವುದರಲ್ಲಿ ಕಳೆದಳು. ಸಂಜೆ, ತಾಯಿ ಸೋಫಿಯ ಮತ್ತು ನಿಕೊಲಾಯ್ ಚಾ ಕುಡಿ ಯುತ್ತಿದ್ದಾಗ ಸಾಷ ಬಂದಳು. ಆಕೆ ಆ ಹೊತ್ತು, ಸೋಜಿಗವೆನಿಸುವ ರೀತಿಯಲ್ಲಿ ಉತ್ಸಾಹಿಯಾಗಿಯೂ ವಾಚಾಳಿಯಾಗಿಯೂ ಇದ್ದಳು. ಆಕೆಯ ಕೆನ್ನೆಗಳು ಕೆಂಪೇರಿ ದ್ದುವು. ಕಣ್ಣುಗಳು ಸಂತೋಷದಿಂದ ಮಿನುಗುತ್ತಿದ್ದುವು. ಆಕೆ ಯಾವುದೋ ಆನಂದ ದಾಯಕವಾದ ಭರವಸೆಯಿಂದ ಕೂಡಿದ್ದಂತೆ ತಾಯಿಗೆ ತೋರಿತು. ಯೆಗೋರ್‌ನ ಜೀವನದ ಘಟನೆಗಳನ್ನು ಸ್ಮರಿಸುತ್ತಲಿದ್ದ ಆ ವಾತಾವರಣಕ್ಕೆ ಆಕೆಯ ಮನೋವೃತ್ತಿ ಅತ್ಯಂತ ವ್ಯತಿರಿಕ್ತವಾಗಿತ್ತು. ಆದ್ದರಿಂದ ಅಲ್ಲಿದ್ದವರಿಗೆ ಕಸಿವಿಸಿಯಾಯಿತು. ಕತ್ತಲೆಯಲ್ಲಿ ಒಮ್ಮೆಲೆ ಪ್ರಜ್ವಲಿಸುವ ಬೆಂಕಿಯ ಹಾಗೆ ಅದು ಅವರನ್ನು ಕುರುಡರನ್ನಾಗಿ ಮಾಡಿತು.

ನಿಕೊಲಾಯ್ ಯೋಚನಾಮಗ್ನನಾಗಿ ಬೆರಳುಗಳಿಂದ ಮೇಜನ್ನು ತಟ್ಟುತ್ತ ಹೇಳಿದ:

"ಯಾಕೆ, ಈ ದಿನ ಏನೋ ಬೇರೆ ಥರಾ ಇದೀಯಲ್ಲ, ಸಾಷ...."

"ನಿಜವಾಗಿಯೂ?... ಇದ್ದರೂ ಇರಬಹುದು," ಎಂದು ನಗುತ್ತಾ ಸಾಷ ಉತ್ತರವಿತ್ತಳು.

ಮೌನವಾಗಿ ಛೀಮಾರಿ ಹಾಕುವ ನೋಟದಲ್ಲಿ ತಾಯಿ ಆಕೆಯನ್ನು ನೋಡಿ ದಳು. ಸೋಫಿಯ ಆಕೆಗೆ ನೆನಪು ಹುಟ್ಟಿಸುವುದಕ್ಕೋಸ್ಕರ ಅಂದಳು:

"ನಾವು ಯೆಗೋರ್ ಇವಾನೊವಿಚ್‌ನ ವಿಷಯ ಇದೇ ಮಾತಾಡ್ತಾ ಇದ್ವಿ."

"ಅವನೆಂಥ ಆಶ್ಚರ್ಯಕರ ಮನುಷ್ಯನಾಗಿದ್ದ!" ಎಂದು ಸಾಷ ಉದ್ಗ ರಿಸಿತ್ತಿವಳು. "ಮುಖದ ಮೇಲೊಂದು ಮುಗುಳ್ನಗೆಯಾಗಲೀ ನಾಲಿಗೆಯ ಮೇಲೊಂದು ನಗೆಮಾತಾಗಲೀ ಇಲ್ಲದೆ ಆತನನ್ನು ನಾನು ಕಂಡದ್ದೇ ಇಲ್ಲ. ಹ್ಯಾಗೆ ಕೆಲಸ ಮಾಡ್ತಿದ್ದ ಆತ! ಅವನು, ಕ್ರಾಂತಿಯ ಕಲಾವಿದನಾಗಿದ್ದ, ಕ್ರಾಂತಿಕಾರಿ ಚಿಂತನೆಯ ಮಹಾ ಪ್ರಭೃತಿಯಾಗಿದ್ದ. ಹಿಂಸೆಯ ಕಪಟದ ಅನ್ಯಾಯದ ಚಿತ್ರಗಳನ್ನು ಎಷ್ಟೊಂದು ಪರಿಣಾಮಕಾರಿಯಾಗಿ ಸರಳವಾಗಿ ಆತ ಚಿತ್ರಿಸ್ತಿದ್ದ!"

ಆಕೆ ಮೆಲುದನಿಯಲ್ಲೇ ಮಾತನಾಡಿದಳು. ಕಣ್ಣುಗಳಲ್ಲಿ ಧ್ಯಾನಮಗ್ನವಾದೊಂದು ಮುಗುಳ್ನಗೆಯಿತ್ತು. ಆದರೆ ಆ ಮುಗುಳ್ನಗು, ಎಲ್ಲರಿಗೂ ಕಾಣಿಸುತ್ತಿದ್ದ, ಆದರೆ ಯಾರಿಗೂ ಅರ್ಥವಾಗದೆ ಇದ್ದ, ಆಕೆಯ ಅಮಿತೋತ್ಸಾಹದ ಬೆಂಕಿಯನ್ನು ಆರಿಸಲು ಸಮರ್ಥವಾಗಲಿಲ್ಲ.

ತಮ್ಮ ಸಂಗಾತಿಯ ಮರಣದಿಂದುಂಟಾದ ದುಃಖದ ಬದಲು, ಸಾಷ ಒಯ್ದು ತಂದ ಸಂತೋಷದ ಪ್ರವೃತ್ತಿಯನ್ನು ಸ್ವೀಕರಿಸಲು ಅವರು ಇಷ್ಟಪಡಲಿಲ್ಲ. ಆ ಹುಡುಗಿಯನ್ನೂ ತಮ್ಮ ಸ್ಥಿತಿಗೇ ಪರಿವರ್ತಿಸಲು ಯತ್ನಿಸುತ್ತ ಅವರು, ತಮ ಗರಿಯದಂತೆಯೇ ಸಂತಾಪ ಸೂಚಿಸುವ ತಮ್ಮ ಹಕ್ಕನ್ನು ಸಮರ್ಥಿಸಿಕೊಂಡರು.

"ಈಗ ಆತ ತೀರಿ ಹೋಗಿದ್ದಾನೆ," ಎಂದು ಸಾಷಳ ಮುಖವನ್ನೆ ನಿರೀಕ್ಷಿಸುತ್ತ, ಬೇಕೆಂದೇ, ಸೋಫಿಯು ಹೇಳಿದಳು.

ಸಾಷ ಎಲ್ಲರ ಮೇಲೂ ಕ್ಷಿಪ್ರ ನೋಟವನ್ನು ಬೀರಿ ಹುಬ್ಬುಗಂಟಿಕ್ಕಿದಳು. ತಲೆ ಬಾಗಿಸಿ ಮೌನವಾದಳು. ನಿಧಾನವಾಗಿ ತನ್ನ ತಲೆಗೂದಲನ್ನು ಸರಿಪಡಿಸಿದಳು. ಕಸಿವಿಸಿಯುಂಟುಮಾಡಿದ ಬಳಿಕ ಒಮ್ಮೆಲೆ ತಲೆಯೆತ್ತಿ ನೋಡಿ ಸ್ವಲ್ಪ ಕೆರಳಿದ ಧ್ವನಿಯಲ್ಲಿ ಆಕೆ ಅಂದಳು:

"ಆತ ತೀರಿ ಹೋದ, ಸತ್ತ! ತೀರಿ ಹೋದ ಅಂದರೆ–ಅದರರ್ಥವೇನು? ಸತ್ತದ್ದು ಯಾವುದು? ಯೆಗೋರ್ ವಿಷಯದಲ್ಲಿ ನನಗಿದ್ದ ಗೌರವ ತೀರಿ ಹೋಗಿದೆಯೆ? ಸಂಗಾತಿಯಾದ ಆತನ ಬಗೆಗೆ ನನಗಿದ್ದ ಪ್ರೇಮ ತೀರಿ ಹೋಗಿದೆಯೆ? ಅಥವಾ ಅವನ ವಿಚಾರಗಳ ಕೃತಿಗಳ ವಿಷಯವಾಗಿ ನನ್ನ ನೆನಪು ತೀರಿ ಹೋಗಿದೆಯೆ? ನನ್ನ ಹೃದಯದಲ್ಲಿ ಆತ ಉಂಟುಮಾಡಿದ ಭಾವನೆ ಮಾಯವಾಯ್ತೆ? ಅಥವಾ, ಪ್ರಾಮಾಣಿಕನಾದ ಧೈರ್ಯಶಾಲಿಯಾದ ವ್ಯಕ್ತಿಯಾಗಿದ್ದ ಆತನನ್ನು ಕುರಿತಾದ ನನ್ನ ಜ್ಞಾನ ನಷ್ಟವಾಯ್ತೆ? ಅದೆಲ್ಲಾ ಸತ್ತು ಹೋಯಿತೆ? ನನ್ನ ಪಾಲಿಗೆ ಅದೊಂದೂ ಸತ್ತಿಲ್ಲವೆಂದು ನಾನು ಬಲ್ಲೆ. ಒಬ್ಬ ವ್ಯಕ್ತಿ ತೀರಿಹೋದ ಅಂತ ಹೇಳೋ ವಿಷಯದಲ್ಲಿ ನಾವು ಅವಸರ ಮಾಡ್ತೀವೇನೋ ಅಂತ ನನಗೆ ಅನಿಸುತ್ತೆ. ಆತನ ತುಟಿಗಳು ಸತ್ತಿವೆ, ಆದರೆ ಆತನ ಮಾತುಗಳು ಬದುಕಿರುವವರ ಹೃದಯಗಳಲ್ಲಿ ಬಾಳುತ್ತವೆ!"

ಉದ್ವಿಗ್ನಗೊಂಡ ಸಾಷ ಮೇಜಿನ ಬಳಿ ಕುಳಿತು, ಅದರ ಮೇಲೆ ಮೊಣಕೈಗಳನ್ನೂರಿ, ಮಂಜುಕವಿದ ಕಣ್ಣುಗಳಿಂದ ತನ್ನ ಸಂಗಾತಿಗಳತ್ತ ನೋಡಿ ಮುಗುಳ್ನಗುತ್ತ, ಹೆಚ್ಚು ಶಾಂತವಾಗಿ ಯೋಚನಾಮಗ್ನಳಾಗಿ ಮುಂದುವರಿಸಿದಳು.

"ಸಂಗಾತಿಗಳೆ, ಪ್ರಾಯಶಃ ನಾನು ಹೇಳೋದೆಲ್ಲಾ ಅರ್ಥಹೀನವಾಗಿ ತೋರಬಹುದು. ನನಗೆ ಈಗ ದೊರೆತಿರೋ ಬದುಕು, ಸೂಕ್ಷ್ಮಚತುರತೆಯಿಂದ ಕ್ಲಿಷ್ಟತೆಯಿಂದ ಅದ್ಭುತಗಳಿಂದ ನನ್ನ ಹೃದಯದಷ್ಟೇ ನನಗೆ ಪ್ರಿಯವಾದ ವಿಚಾರಗಳ ಬೆಳವಣಿಗೆಯಿಂದ, ಆಶ್ಚರ್ಯಕರವಾಗಿದೆ. ಅಂಥ ಬದುಕು ನನಗೆ ದೊರೆಯೋದನ್ನ ಸಾಧ್ಯಗೊಳಿಸಿದವರ ಅನಶ್ವರತೆಯಲ್ಲಿ, ಪ್ರಾಮಾಣಿಕ ಜನರ ಅನಶ್ವರತೆಯಲ್ಲಿ, ನನಗೆ ವಿಶ್ವಾಸವಿದೆ. ಬಹುಶಃ ನಾವು ಭಾವನೆಗಳ ವಿಷಯದಲ್ಲಿ ಬಹಳ ಜಿಪುಣರಾಗಿದ್ದೇವೇನೋ. ನಮ್ಮ ಜೀವನ ವಿಚಾರಗಳಿಂದ ತುಂಬಿಹೋಗಿದೆ. ಅದು ನಮ್ಮನ್ನು ವಿಕೃತಗೊಳಿಸುವ ಸಂಭವವೂ ಇದೆ. ನಾವು ಯಾವುದನ್ನೇ ಆದರೂ ಅನುಭವಿಸುವ ಬದಲು ತೂಗಿ ನೋಡ್ತೇವೆ...."

"ನಿನ್ನ ವಿಷಯದಲ್ಲಿ ಸಂತೋಷದ್ದೇನಾದರೂ ಸಂಭವಿಸಿದೆಯೇನು?" ಎಂದು ಸೋಫಿಯು ಮುಗುಳ್ನಗುತ್ತ ಕೇಳಿದಳು.

"ಹೌದು," ಎಂದಳು ಸಾಷ. "ಏನೋ ಬಹಳ ಸಂತೋಷದ್ದೂಂತ ನನಗೆ ತೋರ್‍ತಿದೆ. ರಾತ್ರೆಯನ್ನೆಲ್ಲಾ ವೆಸೊವ್‌ಶ್ಚಿಕೋವ್ ಜತೆಯಲ್ಲಿ ಮಾತನಾಡ್ತಾ ಕಳೆದೆ.

..ುವೆ ಅವನನ್ನ ಕಂಡರೆ ನನಗೆ ಆಗ್ತಿರಲಿಲ್ಲ – ಒರಟನಾಗಿ ಮೂರ್ಖನಾಗಿ ತೋರ್ತಿದ್ದ. ತೋರೋದೇನು – ಅವನು ಇದ್ದದ್ದೂ ಹಾಗೆಯೇ. ಪ್ರತಿಯೊಬ್ಬರ ಜತೇಲೂ ಆತ ..ುದಾವ ಕೆಟ್ಟ ಮುಂಗೋಪದಿಂದ ವರ್ತಿಸ್ತಿದ್ದ. ಹ್ಯಾಗೋ ಆತ ಯಾವಾಗಲೂ ಪ್ರತಿ ..ಬ್ಬರ ನಡುವಿನಲ್ಲಿ ಒಂದು ಭಾರದ ಹಾಗೆ ಇದ್ದು, ಒರಟಾಗಿ, ಅಸೂಯೆಯಿಂದ, ನಾನು-ನಾನು-ನಾನು ಅಂತ ಹೇಳ್ತಾನೇ ಇದ್ದ! ಅವನಲ್ಲಿ ಅದೇನೋ ಭೀಕರ ..ಸ್ಸುವಂಥ ಸಂಕುಚಿತ ಮನಸ್ಸಿತ್ತು."

ಆಕೆ ಮುಗುಳ್ನಕ್ಕು ಮತ್ತೊಮ್ಮೆ ಅವರನ್ನು ಹೊಳೆಯುವ ಕಣ್ಣುಗಳಿಂದ ನೋಡಿದಳು.

"ಆದರೆ ಈಗ ಆತ 'ಸಂಗಾತಿಗಳೆ!' ಅನ್ತಾನೆ. ಆ ಪದವನ್ನು ಆತ ಹ್ಯಾಗೆ ಉಚ್ಚರಿಸ್ತಾನೇಂತ ಸ್ವತಃ ನೀವು ಕೇಳ್ಬೇಕು! ಆ ಸ್ವರದಲ್ಲಿ ಒಂದು ರೀತಿಯ ಲಜ್ಜಾ ಪೂರಿತ ನಯವಾದ ಪ್ರೀತಿ ಇದೆ. ಅದೇನೂಂತ ಮಾತಿನಿಂದ ವಿವರಿಸೋಕೆ ಆಗೋ ದಿಲ್ಲ. ಆತ ಈಗ, ಸೋಜಿಗ ಎನಿಸುವಷ್ಟು ಸರಳನಾಗಿದ್ದಾನೆ, ಪ್ರಾಮಾಣಿಕನಾಗಿದ್ದಾನೆ. ..ುಡಿಯಬೇಕೆಂಬ ಬಯಕೆ ಅವನಲ್ಲಿ ತುಂಬಿಕೊಂಡಿದೆ. ತನ್ನ ನೆಲೆ ಏನು ಅನ್ನೋ ..ನ್ನ ಅವನೀಗ ಕಂಡುಕೊಂಡಿದ್ದಾನೆ. ತನ್ನ ಸಾಮರ್ಥ್ಯವೇನು, ಕೊರತೆಗಳೇನು, ಅನ್ನೋ ..ಷ್ಟೆಲ್ಲ ಪೂರ್ಣವಾಗಿ ತಿಳಿದಿದ್ದಾನೆ. ಅತಿ ಮುಖ್ಯವಾದದ್ದೆಂದರೆ, ಅವನಲ್ಲಿ ಬಂಧು ಪ್ರೇಮದ ನಿಜವಾದ ಭಾವನೆ ಚಿಗುರಿದೆ."

ಕಟ್ಟುನಿಟ್ಟಿನ ವ್ಯಕ್ತಿಯಾಗಿದ್ದ ಸಾಷ ಎಷ್ಟೊಂದು ಮೃದುವಾಗಿ ಹರ್ಷಚಿತ್ತಳಾ ಗಿದ್ದಳು! ಆಕೆಯ ಮಾತಿಗೆ ಕಿವಿಗೊಡುತ್ತ ಅದನ್ನು ಗಮನಿಸಿದ ತಾಯಿಗೆ ಸಂತೋಷವಾಯಿತು. ಆದರೆ ಅದೇ ಹೊತ್ತಿಗೆ, ಹೃದಯದ ಆಳದಲ್ಲೆಲ್ಲೋ ಒಂದೆಡೆ, ಅಸೂಯೆಪಡುತ್ತ ತಾಯಿ ಯೋಚಿಸಿದಳು:

"ಪಾವೆಲ್‌ನ ಗತಿಯೇನು ಹಾಗಾದರೆ?"

ಸಾಷ ಮುಂದುವರಿಸಿದಳು:

"ಅವನೀಗ ತನ್ನ ಸಂಗಾತಿಗಳ ವಿಷಯವಾಗಿಯೇ ಯೋಚಿಸ್ತಿದ್ದಾನೆ. ನನಗೆ ..ನನ್ನ ಮನಗಾಣಿಸಿಕೊಡೋಕೆ ಆತ ಪ್ರಯತ್ನಪಟ್ಟ ಗೊತ್ತೆ? ತನ್ನ ಸಂಗಾತಿ ಗಳು ತಪ್ಪಿಸಿಕೊಳ್ಳೋಕೆ ಏರ್ಪಾಟು ಮಾಡಬೇಕಾದ ಆವಶ್ಯಕತೇನ. ಅದು ಬಹಳ ಸರಳ ಸುಲಭ ಅಂತ ಅವನ ಅಭಿಪ್ರಾಯ."

ಸೋಫಿಯ ತಲೆಯೆತ್ತಿ ಆತುರದಿಂದ ಅಂದಳು:

"ಅದೊಳ್ಳೇ ವಿಚಾರ, ಸಾಷ! ಏನಂತೀಯಾ?"

ತಾಯಿಯ ಕೈಗಳಲ್ಲಿದ್ದ ಚಾ ತುಂಬಿದ ಲೋಟ ನಡುಗಿತು. ಸಾಷ ತನ್ನ ಹುಬ್ಬು ಗಳನ್ನು ಒಂದಕ್ಕೊಂದು ಜೋಡಿಸುತ್ತಾ ಮನಸ್ಸಿನ ಉದ್ವೇಗವನ್ನು ಹತ್ತಿಕ್ಕಲು ಯತ್ನಿಸಿದಳು. ಕ್ಷಣಕಾಲ ಮೌನವಾಗಿದ್ದು ಗಂಭೀರ ಧ್ವನಿಯಲ್ಲಿ – ಆದರೆ ಸಂತೋಷದ ಮುಗುಳ್ನಗೆಯೊಡನೆ – ಆಕೆ ಹೇಳಿದಳು:

"ಅವನು ಹೇಳೋದು ನಿಜವಾದರೆ ನಾವು ಪ್ರಯತ್ನ ಮಾಡಲೇಬೇಕು. ಪ್ರಯತ್ನ ಮಾಡೋದು ನಮ್ಮ ಕರ್ತವ್ಯ!"

ಒಮ್ಮೆಲೆ ಮುಖ ಕೆಂಪೇರಿ, ಮಾತು ನಿಲ್ಲಿಸಿ, ಆಕೆ ಕುರ್ಚಿಯಲ್ಲಿ ಕುಸಿಕುಳಿತಳು.

"ನನ್ನ ಮುದ್ದು ಚಿನ್ನ !" ಎಂದು ತಾಯಿ ಮುಗುಳ್ನಕ್ಕು ಯೋಚಿಸಿದಳು. ಸೋಫಿಯಾಳ ಮುಖದಲ್ಲೂ ಮುಗುಳ್ನಗೆ ಮೂಡಿತು. ನಿಕೊಲಾಯ್ ಸಾಷಳತ್ತ ನೋಡಿ ಮೆಲ್ಲನೆ ನಕ್ಕ. ಹುಡುಗಿ ತಲೆ ಎತ್ತಿ ನೋಡಿದಳು. ಮುಖ ಮ್ಲಾನವಾಗಿತ್ತು. ಕಣ್ಣುಗಳು ಮಿನುಗಿದುವು. ಗಂಟಲೊಣಗಿತ್ತು. ನೋವಿನ ಧ್ವನಿಯಿಂದ ಮಾತುಗಳು ಹೊರಟುವು:

"ನೀವು ಯಾಕೆ ನಗ್ತಿದೀರಿ ಅನ್ನೋದು ನನಗೆ ಗೊತ್ತಿದೆ. ಹೀಗೆ ಪ್ರಯತ್ನಿಸ್ಬೇಕು ಅನ್ನೋದರಲ್ಲಿ ನನ್ನದೇನೋ ವೈಯಕ್ತಿಕ ಕಾರಣ ಇದೇಂತ ನೀವು ಭಾವಿಸಿದ್ದೀರಿ," ಎಂದಳು ಸಾಷ.

"ಯಾಕೆ, ಸಾಷ?" ಎಂದು ತುಂಟತನದ ಧ್ವನಿಯಲ್ಲಿ ಕೇಳುತ್ತ ಸೋಫಿಯ ಕುಳಿತಲ್ಲಿಂದ ಎದ್ದು ಹುಡುಗಿಯ ಬಳಿಗೆ ಹೋದಳು. ಇದರಿಂದ ಸಾಷಗೆ ನೋವಾಯಿತೆಂದು ತಾಯಿಗೆ ತೋರಿತು. ಸೋಫಿಯಾ ಹಾಗೆ ಹೇಳಬಾರದಿತ್ತು ಎನಿಸಿತು. ಆಕೆ ನಿಟ್ಟುಸಿರು ಬಿಟ್ಟು, ನೀನು ತಪ್ಪು ಮಾಡಿದೆ ಎನ್ನುವ ನೋಟದಿಂದ, ಸೋಫಿಯಾಳನ್ನು ನೋಡಿದಳು.

"ಹಾಗಾದರೆ ಅದಕ್ಕೂ ನನಗೂ ಯಾವ ಸಂಬಂಧವೂ ಇಲ್ಲ !" ಎಂದು ಸಾಷ ಉದ್ಗರಿಸಿದಳು. "ಇದೆಲ್ಲಾ.... ಈ ರೀತೀಂತ ನೀವು ನೋಡೋದಾದ್ರೆ ಈ ಪ್ರಶ್ನೆಯ ತೀರ್ಮಾನದಲ್ಲಿ ನಾನು ಭಾಗಿಯಾಗೋದಿಲ್ಲ."

"ಸಾಕು, ಸಾಷ," ಎಂದು ಶಾಂತನಾಗಿಯೇ ನಿಕೊಲಾಯ್ ಹೇಳಿದ.

ತಾಯಿಯೂ ಎದ್ದು ಸಾಷಳ ಬಳಿಗೆ ಹೋಗಿ ಆಕೆಯ ತಲೆಗೂದಲನ್ನು ನೇವರಿಸಿದಳು. ಹುಡುಗಿ ತಾಯಿಯ ಕೈ ಹಿಡಿದುಕೊಂಡು, ಆ ಕ್ಷಣವೆ ಲಜ್ಜೆಯಿಂದ ಕೆಂಪೇರಿದ ಮುಖವನ್ನು ಮೇಲೆತ್ತಿ, ತಾಯಿಯನ್ನು ನೋಡಿದಳು. ತಾಯಿ ಮುಗುಳ್ನಕ್ಕು, ಏನು ಹೇಳಬೇಕೆಂಬುದೇ ತಿಳಿಯದೆ, ನಿಟ್ಟುಸಿರುಬಿಟ್ಟಳು. ಸಾಷಳ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕುಳಿತು ಸೋಫಿಯ, ತನ್ನ ತೋಳಿನಿಂದ ಆಕೆಯ ಭುಜವನ್ನು ಸುತ್ತುವರಿದಳು.

"ನೀನೊಳ್ಳೇ ತಮಾಷೆಯ ಹುಡುಗಿ," ಎಂದು ಆಕೆ, ಕುತೂಹಲದ ಮುಗುಳ್ನಗೆಯೊಡನೆ ತಾಯಿಯ ಕಣ್ಣುಗಳನ್ನೆ ನೋಡಿದಳು.

"ಬಹುಶಃ ನಾನು ಹಾಗಂದದ್ದು ಮೂರ್ಖತನವಾಯ್ತು...."

"ಯಾಕೆ ಹಾಗೆಲ್ಲಾ ಯೋಚಿಸ್ತೀಯಾ?" ಎಂದು ಸೋಫಿಯ ಕೇಳಿದ್ದಳು.

ನಿಕೊಲಾಯ್ ನಡುವೆ ಬಾಯಿ ಹಾಕಿ ವ್ಯಾವಹಾರಿಕ ಸ್ವರದಲ್ಲಿ ಅಂದ:

"ತಪ್ಪಿಸಿಕೊಳ್ಳೋದು ಸಾಧ್ಯವಿದ್ದರೆ ನಾವು ಪ್ರಯತ್ನ ಮಾಡಲೇಬೇಕು. ಅದರಲ್ಲಿ ಸಂದೇಹವೇ ಇಲ್ಲ. ಆದರೆ ಮೊದಲು ಜೈಲಿನೊಳಗಿರೋ ಸಂಗಾತಿಗಳು ಇದನ್ನ ಇಷ್ಟಪಡ್ತಾರೋ ಇಲ್ವೋ ಅನ್ನೋದನ್ನ ನಾವು ತಿಳೀಬೇಕು."

ಸಾಷ ತಲೆ ತಗ್ಗಿಸಿ ಕುಳಿತಳು.

ಸೋಫಿಯು ಒಂದು ಸಿಗರೇಟು ಹಚ್ಚಿ, ತಮ್ಮನತ್ತ ನೋಡಿ, ಕಡ್ಡಿಯನ್ನು ಕೊಠಡಿಯ ಮೂಲೆಗೆ ಎಸೆದಳು.

"ಅವರು ಯಾಕೆ ಇಷ್ಟಪಡೋದಿಲ್ಲ?... ಆದರೆ ಅದು ಸಾಧ್ಯ ಅಂತ ನಂಬೋಕೆ ಮಾತ್ರ ನನ್ನಿಂದಾಗ್ತಾ ಇಲ್ಲ," ಎಂದು ತಾಯಿ ನಿಟ್ಟುಸಿರು ಬಿಟ್ಟಳು.

ಅದು ಸಾಧ್ಯ ಎಂದು ಅವರು ದೃಢವಾಗಿ ಹೇಳುವುದನ್ನ ಕೇಳಲು ತಾಯಿ ಆತುರಗೊಂಡಳು. ಆದರೆ ಅವರು ಮೌನವಾಗಿದ್ದರು.

"ನಾನು ವೆಸೊವ್‌ಶ್ಚಿಕೋವನ್ನು ನೋಡಬೇಕು," ಎಂದಳು ಸೋಫಿಯು.

"ಭೇಟಿ ಎಲ್ಲಿ ಯಾವಾಗ ಸಾಧ್ಯ ಅಂತ ನಾಳೆ ಹೇಳ್ತೀನಿ," ಎಂದು ಸಾಷ ಉತ್ತರವಿತ್ತಳು.

"ಆತ ಮುಂದೇನು ಮಾಡ್ತಾನೆ?" ಎಂದು, ಕೊಠಡಿಯಲ್ಲಿ ಅತ್ತಿಂದಿತ್ತ ನಡೆಯುತ್ತ, ಸೋಫಿಯು ಕೇಳಿದಳು.

"ಹೊಸ ಮುದ್ರಣಾಲಯದಲ್ಲಿ ಆತನನ್ನ ಮೊಳೆ ಜೋಡಿಸೋ ಕೆಲಸಕ್ಕೆ ನಿಯೋಜಿಸ್ಬೇಕೂಂತಿದಾರೆ. ಆ ವರೆಗೆ ಆತ, ಆ ಅರಣ್ಯ ಇಲಾಖೆ ಅಧಿಕಾರಿಯ ಜತೇಲಿ ಇರ್ತಾನೆ."

ಸಾಷಳ ಹುಬ್ಬು ಮೇಲಕ್ಕೇರಿತು; ಎಂದಿನಂತೆ ಕಟ್ಟುನಿಟ್ಟಾದ ಮುಖಮುದ್ರೆ ಕಾಣಿಸಿತು. ಮಾತು, ಪ್ರಶ್ನೆಗೆ ತಕ್ಕ ಉತ್ತರ ಎನ್ನುವಂತಾಯಿತು.

ತಾಯಿ ಲೋಟಗಳನ್ನು ತೊಳೆಯತೊಡಗಿದಳು; ನಿಕೊಲಾಯ್ ಅವಳತ್ತ ಹೋಗಿ ಹೇಳಿದ:

"ನಾಡಿದ್ದು ಪಾವೆಲ್‌ನ ನೋಡೋಕೆ ಹೋದಾಗ ನೀವು ಅವನಿಗೊಂದು ಚೀಟಿ ಕೊಡ್ಬೇಕು. ಅರ್ಥವಾಯ್ತು? ಅವರು ಇಷ್ಟಪಡ್ತಾರೋ ಇಲ್ವೋ ಅಂತ –"

"ಅರ್ಥವಾಯ್ತು, ಅರ್ಥವಾಯ್ತು," ಎಂದು ತಾಯಿ ಅವಸರ ಅವಸರವಾಗಿ ಭರವಸೆಯನ್ನಿತ್ತಳು. "ಚೀಟೀನ ಹ್ಯಾಗಾದರೂ ಮಾಡಿ ತಲಪಿಸ್ತೀನಿ."

"ಇನ್ನು ನಾನು ಹೊರಡ್ತೀನಿ," ಎಂದಳು ಸಾಷ. ಬೇಗನೆ ಮೌನವಾಗಿ ಪ್ರತಿಯೊಬ್ಬರ ಕೈ ಕುಲುಕಿ, ಬಲು ನೆಟ್ಟಗೆ ನಿಂತು, ವಿಶಿಷ್ಟವೆಂದು ತೋರುವ ದೃಢ ನಡಿಗೆಯೊಂದಿಗೆ, ಆಕೆ ಹೊರಹೋದಳು.

ಸಾಷ ದೃಷ್ಟಿಯಿಂದ ಮರೆಯಾದ ಬಳಿಕ ತಾಯಿ ಕುರ್ಚಿಯ ಮೇಲೆ ಕುಳಿತಳು. ಸೋಫಿಯು ತನ್ನ ಕೈಗಳನ್ನು ತಾಯಿಯ ಭುಜದ ಮೇಲಿಟ್ಟು ಆಕೆಯನ್ನು ಹಿಂದಕ್ಕೂ ಮುಂದಕ್ಕೂ ತೂಗಿದಳು.

"ಇಂಥ ಮಗಳ್ನ ಪ್ರೀತಿಸ್ತೀರಾ, ನೀಲೊವ್ನ?" ಎಂದು ಕೇಳಿದಳು ಸೋಫಿಯು.

"ಆಹಾ! ಒಂದು ದಿನದ ಮಟ್ಟಿಗಾದರೂ ಅವರಿಬ್ಬರನ್ನೂ ಜತೇಲಿ ನಾನು ನೋಡೋದು ಸಾಧ್ಯವಾದರೆ!" ಎಂದು ತಾಯಿ, ಅಳಲು ಸಿದ್ಧಳಾಗುತ್ತ ಅಂದಳು.

ಮೆಲುದನಿಯಲ್ಲಿ ನಿಕೊಲಾಯ್ ಎಂದ:

"ಹೌದು, ಒಂದಿಷ್ಟು ಸುಖ ಸಂತೋಷ ಯಾರಿಗೂ ಹಾನಿ ಮಾಡೋದಿಲ್ಲ. ಆದರೆ ಸ್ವಲ್ಪ ಮಾತ್ರದಿಂದಲೇ ಯಾರೂ ತೃಪ್ತರಾಗೋದಿಲ್ಲ. ಸುಖ ಸಂತೋಷ ಹೇರಳವಾದಾಗ ಅದು ಅಗ್ಗವಾಗ್ತದೆ."

ಸೋಫಿಯ ಪಿಯಾನೋದ ಬಳಿಗೆ ಹೋಗಿ ದುಃಖಗೀತೆಯೊಂದನ್ನು ನುಡಿಸ ತೊಡಗಿದಳು.

## ೧೨

ಮರುದಿನ ಮುಂಜಾನೆ ಸುಮಾರು ಮೂವತ್ತು-ನಾಲ್ವತ್ತು ಜನ, ತಮ್ಮ ಸಂಗಾತಿಯ ಶವದಾನಿಯನ್ನು ಹೊರಕ್ಕೆ ತರುವುದನ್ನೇ ನಿರೀಕ್ಷಿಸುತ್ತಾ, ಆಸ್ಪತ್ರೆಯ ಹೆಬ್ಬಾಗಿಲ ಬಳಿ ನಿಂತರು. ಆ ಜನರ ನಡುವೆ, ಅವರ ಉದ್ಗಾರಗಳಿಗೆ ಕಿವಿಗೊಡುತ್ತ, ಅವರ ಮುಖಗಳನ್ನೂ ಹಾವಭಾವಗಳನ್ನೂ ಮಾತುಗಳನ್ನೂ ಮನಸ್ಸಿನಲ್ಲೇ ಗುರುತಿಸಿಕೊಳ್ಳುತ್ತಿದ್ದ ಗೂಢಚಾರರಿದ್ದರು. ಬೀದಿಯ ಆಚೆ, ಸೊಂಟಗಳ ಮೇಲೆ ಕೈಬಂದೂಕುಗಳಿದ್ದ ಪೋಲೀಸರ ಒಂದು ಗುಂಪು ನಿಂತಿತ್ತು. ಗೂಢಚಾರರ ನಿರ್ಲಜ್ಜತೆಯನ್ನೂ, ಯಾವ ಕ್ಷಣ ಬೇಕಾದರೂ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಲು ಸಿದ್ಧರಿದ್ದು ವ್ಯಂಗ್ಯವಾಗಿ ಮುಗುಳ್ನಗುತ್ತಿದ್ದ ಪೋಲೀಸರನ್ನೂ ಕಂಡು, ಜನ ಕೆರಳಿದರು. ಕೆಲವರು, ತಮಾಷೆಯ ಮಾತುಗಳನ್ನಾಡುತ್ತಾ, ಮನಸ್ಸಿನ ಉದ್ವೇಗವನ್ನು ಮರೆಸಲೆತ್ನಿಸಿದರು. ಬೇರೆ ಕೆಲವರು, ಅವಮಾನಗಳನ್ನು ಗಮನಿಸದೇ ಇರುವುದಕ್ಕೋಸ್ಕರ, ಕೋಪದಿಂದ ನೆಲವನ್ನೆ ನೋಡುತ್ತ ನಿಂತರು. ಉಳಿದವರು, ತಮ್ಮ ಭಾವನೆಗಳನ್ನು ಬಚ್ಚಿಡಲಾರದೆ, ಶಸ್ತ್ರಾಸ್ತ್ರಗಳೊಂದೂ ಇಲ್ಲದ ಜನರ ಬರಿಯ ಬಾಯಿಮಾತಿಗೇ ಹೆದರುವ ಅಧಿಕಾರಿಗಳ ವಿಷಯವಾಗಿ ಕಟೂಕ್ತಿಗಳನ್ನಾಡಿದರು. ನಿಸ್ತೇಜವಾದ ನೀಲಿ ಆಕಾಶ, ರಸ್ತೆಯ ಮೇಲೆ ಹರಡಿದ್ದ ಬೂದು ಹರಳುಗಲ್ಲುಗಳ ಮೇಲೆ ಶುಭ್ರವಾಗಿ ಹೊಳೆಯಿತು. ಸುತ್ತಲೂ ಬಿದ್ದಿದ್ದ ಹಣ್ಣೆಲೆಗಳು ಗಾಳಿ ಬೀಸಿದಂತೆ ಜನರ ಕಾಲುಗಳತ್ತ ಹಾರಾಡಿದುವು.

ಜನರ ಗುಂಪಿನಲ್ಲಿ ನಿಂತು, ತನಗೆ ಪರಿಚಯವಿದ್ದ ಮುಖಗಳನ್ನೆಲ್ಲ ನೋಡುತ್ತ, ತಾಯಿ ವ್ಯಥೆಪಡುತ್ತ ಯೋಚಿಸಿದಳು:

"ನೀವು ಬಹಳ ಜನರಿಲ್ಲ – ಬಹಳ ಜನರಿಲ್ಲ! ಕೂಲಿಕಾರರಂತೂ ಇಲ್ಲವೇ ಇಲ್ಲ...."

ಬಾಗಿಲು ತೆರೆಯಿತು. ಶವದಾನಿಯನ್ನು ಹೊತ್ತು ತಂದರು. ಶವದಾನಿಯ ಹೊದಿಕೆಯ ಮೇಲೆ ಕೆಂಪು ರಿಬ್ಬನುಗಳಿಂದ ಬಿಗಿದ ಹೂವಿನ ಹಾರಗಳಿದ್ದುವು.

ಕಿಂದಿದ್ದ ಜನರು ಒಡನೆಯೇ ಗೌರವಾರ್ಥವಾಗಿ ತಮ್ಮ ಟೋಪಿಗಳನ್ನೆತ್ತಿದರು. ಕರಿಯ ಹಕ್ಕಿಗಳ ತಂಡವೊಂದು ಒಮ್ಮೆಲೆ ರೆಕ್ಕೆ ಬಿಚ್ಚಿದ ಹಾಗಾಯಿತು. ತನ್ನ ಕೆಂಪು ಮುಖದಲ್ಲಿ ದಪ್ಪನೆಯ ಕರಿಯ ಮೀಸೆಯಿದ್ದ ಎತ್ತರದ ಪೋಲೀಸ್ ಅಧಿಕಾರಿಯೊಬ್ಬ ವೇಗವಾಗಿ ಜನರ ಗುಂಪಿನೆಡೆಗೆ ನಡೆದ. ಅವನ ಹಿಂದೆಯೇ ಸೈನಿಕರು, ಜನರನ್ನು ಅಡ್ಡಾದಿಡ್ಡಿಯಾಗಿ ನೂಕುತ್ತಾ, ಭಾರವಾದ ಬೂಟುಗಾಲುಗಳಿಂದ ಸಪ್ಪಳ ಮಾಡುತ್ತಾ ಬಂದರು.

"ರಿಬ್ಬನುಗಳನ್ನು ತೆಗೆಯಿರಿ!" ಎಂದು ಕರ್ಕಶಧ್ವನಿಯಲ್ಲಿ ಅಧಿಕಾರಿ ಆಜ್ಞಾಪಿಸಿದ.

ಗಂಡಸರೂ ಹೆಂಗಸರೂ ಉದ್ವಿಗ್ನರಾಗಿ ಮಾತನಾಡುತ್ತ, ಕೈಗಳನ್ನು ಬೀಸುತ್ತ, ಒಬ್ಬರನ್ನೊಬ್ಬರು ತಳ್ಳುತ್ತ, ಅವನ ಸುತ್ತಲೂ ನೆರೆದರು. ನಡುಗುವ ತುಟಿಗಳಿದ್ದ ಬಾಡಿದ ಕ್ಷೋಭೆಗೊಂಡ ಮುಖಗಳು ತಾಯಿಯ ಕಣ್ಣೆದುರು ಸುಳಿದುವು. ಒಬ್ಬ ಹೆಂಗಸಿನ ಕೆನ್ನೆಗಳ ಮೇಲಿಂದ ಕ್ರೋಧದ ಕಂಬನಿಗಳು ಉರುಳಿದುವು.

"ಹಿಂಸೆಗೆ ಧಿಕ್ಕಾರ!" ಎಂದು ಎಳೆಯ ಸ್ವರವೊಂದು ಕೂಗಿತು. ಒಡನೆಯೇ ಚರ್ಚೆಯ ಸ್ವರಗಳೆಳೆಯಲ್ಲಿ ಆ ಕೂಗು ಮುಳುಗಿ ಹೋಯಿತು.

ತಾಯಿಯ ಹೃದಯವನ್ನೂ ಕುಟುಕಿದ ಹಾಗಾಯಿತು. ತನ್ನ ಪಕ್ಕದಲ್ಲೇ ನಿಂತಿದ್ದ ಬಡ ಉಡುಪಿನ ಯುವಕನೊಬ್ಬನೊಡನೆ ತಾಯಿ ಉದ್ವಿಗ್ನಗೊಂಡ ಧ್ವನಿಯಲ್ಲಿ ಅಂದಳು:

"ಜನರು ಇಚ್ಛಿಸೋ ರೀತಿ ಶವಸಂಸ್ಕಾರ ಮಾಡೋದಕ್ಕೂ ಅವರು ಬಿಡೋದಿಲ್ಲ. ಎಷ್ಟು ನಾಚಿಕೆಗೇಡು!"

ದ್ವೇಷದ ಭಾವನೆ ಬೆಳೆಯಿತು. ಜನರ ತಲೆಗಳ ಮೇಲಿಂದ ಶವದಾನಿ ತೂಗಾಡಿತು. ರಿಬ್ಬನುಗಳು, ರೇಷ್ಮೆಯ ಸಂಕೋಚದ ಸರಸರ ಸದ್ದಿನೊಡನೆ ಗಾಳಿಯಲ್ಲಿ ಹಾರಾಡುತ್ತಾ, ಕೆಳಗಿದ್ದ ಜನರ ತಲೆಗಳನ್ನೂ ಮುಖಗಳನ್ನೂ ಮುಟ್ಟಿದುವು.

ಘರ್ಷಣೆಯಾಗುವುದೆಂದು ತಾಯಿ ಹೆದರಿದಳು. ಎಡಕ್ಕೂ ಬಲಕ್ಕೂ ಅವಸರ ಅವಸರವಾಗಿ ಆಕೆ ಗೊಣಗಿದಳು.

"ಹಾಳಾಗಿ ಹೋಗಲಿ! ಕೂಡದೇ ಕೂಡದೆಂದಾದರೆ ರಿಬ್ಬನು ಅವರಿಗೇ ಇರಲಿ. ಬಿಚ್ಚಿಬಿಟ್ಟರಾಯ್ತು."

ಎಲ್ಲ ಸದ್ದನ್ನೂ ಮೀರಿಸಿ, ಯಾರದೋ ಎತ್ತರದ ತೀಕ್ಷ್ಣಧ್ವನಿ ಕೇಳಿಸಿತು:

"ಅಂತಿಮ ಯಾತ್ರೆಗೋಗ್ತಿರೊ ಒಬ್ಬ ಸಂಗಾತಿಯ – ನೀವು ಹಿಂಸಿಸಿ ಕೊಲೆ ಮಾಡಿರೋ ಒಬ್ಬ ಸಂಗಾತಿಯ – ಅಂತ್ಯಕ್ರಿಯೆಗೆ ಅಡ್ಡಿಮಾಡಬಾರದೆಂದು ನಾವು ಕೇಳ್ತಿದ್ದೇವೆ."

ಏರು ಧ್ವನಿಯೊಂದು ಹಾಡತೊಡಗಿತು:

"ನೀನುರುಳಿದೇ, ಮಹಾ ತ್ಯಾಗದೀ...."

"ತೆಗೀರಿ ಆ ರಿಬ್ಬನ್ ! ಕಡಿದು ಹಾಕು, ಯಾಕೊವ್‌ಲೆವ್ !"

ಖಡ್ಗ ಸುಯ್ಯೆಂದಿತು. ಘರ್ಷಣೆಯ ಚೀತ್ಕಾರವನ್ನು ನಿರೀಕ್ಷಿಸುತ್ತ ತಾಯಿ ಕಣ್ಣು ಮುಚ್ಚಿಕೊಂಡಳು. ಆದರೆ ಜನರು ಗೊಣಗಿ, ರೇಗಿದ ತೋಳಗಳ ಹಾಗೆ ಗುರು ಗುಟ್ಟಿದರು ಮಾತ್ರ. ಆ ಬಳಿಕ ಮೌನವಾಗಿ, ತಲೆಬಾಗಿ, ಕಾಲಿನ ತುಳಿತದಿಂದ ಬೀದಿ ಯನ್ನು ತುಂಬುತ್ತ ಮುಂದಕ್ಕೆ ನಡೆದರು. ಹಿಸುಕಿದ್ದ ಹೂಗಳನ್ನು ಹೊತ್ತಿದ್ದ ಅಪ ವಿತ್ರಗೊಂಡ ಶವದಾನಿಯ ಮುಚ್ಚಳ, ಜನರ ತಲೆಗಳ ಮೇಲೆ ಓಲಾಡಿತು. ಅವರ ಎರಡೂ ಬದಿಗಳಲ್ಲಿ ಕುದುರೆಗಳ ಮೇಲೆ ಪೋಲೀಸರು ತೂಗಾಡಿದರು. ತಾಯಿ ಬೀದಿಯ ಅಂಚಿನ ಮೇಲೆ ನಡೆದಳು. ಶವದಾನಿ ಅವಳಿಗೀಗ ಕಾಣಿಸುತ್ತಿರಲಿಲ್ಲ. ಯಾರಿಗೂ ತಿಳಿಯದಂತೆಯೇ ಜನರ ಗುಂಪು ಬೆಳೆದು ಶವದಾನಿಯನ್ನು ಸುತ್ತುವರಿ ಯಿತು. ಕುದುರೆ ಸವಾರ ಪೋಲೀಸರು ಮೆರವಣಿಗೆಯ ಹಿಂಭಾಗದಲ್ಲೂ ಇದ್ದರು. ಎರಡೂ ಬದಿಗಳಲ್ಲಿ ಖಡ್ಗದ ಹಿಡಿಗಳ ಮೇಲೆ ಕೈಯಿಟ್ಟಿದ್ದ ಕಾಲ್ನಡಿಗೆಯ ಪೋಲೀಸರೂ ಚಲಿಸುತ್ತಿದ್ದರು. ಜನರ ಮುಖಗಳನ್ನು ಆಸಕ್ತಿಯಿಂದ ಪರೀಕ್ಷಿಸುತ್ತಿದ್ದ ಗೂಢಚಾರರ ಪರಿಚಿತವಾದ ತೀಕ್ಷ್ಣದೃಷ್ಟಿಗಳನ್ನು, ಎಲ್ಲೆಲ್ಲೂ ತಾಯಿ ಗುರುತಿಸಿದಳು.

"ವಿದಾಯ, ಸಂಗಾತಿಯೆ, ವಿದಾಯ...."

– ಎಂದು ಶೋಕದ ಧ್ವನಿಗಳೆರಡು ಹಾಡಿದುವು,

"ಹಾಡು ಬೇಕಾಗಿಲ್ಲ. ಮೌನವಾಗಿ ನಡೆಯೋಣ, ಮಹಾಶಯರೆ," ಎಂದು ಒಂದು ಸ್ವರ ಕೇಳಿಸಿತು.

ಆ ಸ್ವರ ದೃಢವಾಗಿತ್ತು, ಅದರಲ್ಲಿ ಹಿರಿತನವಿತ್ತು. ಶೋಕದ ಹಾಡು ಅಲ್ಲಿಗೇ ಕಡಿದು ಹೋಯಿತು. ಮಾತುಕತೆಯ ಸದ್ದು ನಿಂತಿತು. ಹರಳು ಕಲ್ಲುಗಳ ಮೇಲೆ ಪಾದಗಳ ಏಕರೀತಿಯ ತುಳಿತದ ಸಾಧಾರಣ ಸದ್ದು ಮಾತ್ರ ಕೇಳಿಸಿತು. ಈ ಸದ್ದು ಜನರ ತಲೆಗಳ ಮೇಲಿಂದ ಏರಿ, ಬಲು ದೂರವಿದ್ದ ಬಿರುಗಾಳಿಯ ಮೊದಲ ಗುಡು ಗಿನ ಹಾಗೆ ಗಾಳಿಯನ್ನು ನಡುಗಿಸುತ್ತ, ಎಲ್ಲವೂ ಕಾಣಿಸುತ್ತಿದ್ದ ಸ್ವಚ್ಛವಾದ ಆಕಾಶದತ್ತ ತೇಲಿ ಹೋಯಿತು. ಬಲಗೊಳ್ಳುತ್ತಲಿದ್ದ ಶೀತಲ ಗಾಳಿ ದ್ವೇಷದಿಂದ, ಶಹರದ ಬೀದಿಗಳಲ್ಲಿದ್ದ ಧೂಳನ್ನೂ ಕೊಳೆಯನ್ನೂ ಜನರತ್ತ ಎಸೆಯಿತು. ಅವರ ಕೂದಲನ್ನೂ ಬಟ್ಟೆಗಳನ್ನೂ ಎಳೆಯಿತು. ಕಣ್ಣುಗಳನ್ನು ಕುರುಡುಗೊಳಿಸಿತು. ಎದೆಗೆ ಬಡಿದು, ಪಾದಗಳ ಬಳಿ ಹೊರಳಾಡಿತು....

ಧರ್ಮಗುರುಗಳಿಲ್ಲದ, ಹೃದಯ ಬಿರಿಯುವ ಅವರ ಹಾಡುಗಳಿಲ್ಲದ, ಈ ನೀರವ ಸ್ಮಶಾನ ಯಾತ್ರೆಯೂ ವಿಚಾರಪೂರ್ಣ ಮುಖಗಳೂ ಗಂಟಿಕ್ಕಿದ ಹುಬ್ಬು ಗಳೂ ತಾಯಿಯನ್ನು ಭೀತಿಯಿಂದ ತುಂಬಿದುವು. ಯೋಚನೆಗಳು ನಿಧಾನವಾಗಿ ಆಕೆಯ ಮನಸ್ಸನ್ನು ಸುತ್ತಿದವು. ಆ ಯೋಚನೆಗಳನ್ನಾಕೆ ದುಃಖದ ಪದಗಳಿಂದ ಹೊದಿಸಿದಳು:

"ನ್ಯಾಯಕ್ಕೋಸ್ಕರ ಹೋರಾಡುವ ನೀವು ಬಹಳ ಜನರಿಲ್ಲ...."

ತಲೆ ಬಾಗಿಸಿ ಆಕೆ ನಡೆದಳು. ದಫನ ಮಾಡುವುದು ಯೆಗೋರ್‌ನನ್ನಲ್ಲ, ಬೇರೆ ಯಾವುದನ್ನೋ – ತನಗೆ ಸಮೀಪವಾದ ಪ್ರಿಯವಾದ ಅತ್ಯಗತ್ಯವಾದ ಯಾವು ದನ್ನೋ – ಎಂದು ತಾಯಿಗೆ ಅನಿಸಿತು. ತಾಯಿಗೆ ಅತೀವ ಸಂಕಟವಾಯಿತು. ಇದು ಹಾಗಿರಬೇಕಾದ ಜಾಗವಲ್ಲ ಎಂದು ತೋರಿತು. ಯೆಗೋರ್‌ನನ್ನು ಮಣ್ಣುಮಾಡಲು ಹೊರಟಿದ್ದ ಆ ಜನರೊಡನೆ ಕಡಿದು ಕಡಿದಾದ ಭಯಗೊಳಿಸುವ ಭಿನ್ನಾಭಿಪ್ರಾಯ ವೊಂದು ತನಗೆ ಇದ್ದಂತೆ ಕಂಡು, ಆ ಭಾವನೆ ಆಕೆಯ ಹೃದಯವನ್ನು ಆವರಿಸಿತು.

"ಹೌದು. ಯೆಗೋರ್‌ಗೆ ದೇವರಲ್ಲಿ ನಂಬಿಕೆ ಇರಲಿಲ್ಲ.... ಈ ಜನರಿಗೂ ಅಷ್ಟೆ..." ಎಂದು ಆಕೆ ಯೋಚಿಸಿದಳು.

ಅದೇ ಯೋಚನೆಯನ್ನು ಮುಂದುವರಿಸಲು ತಾಯಿ ಇಷ್ಟಪಡಲಿಲ್ಲ. ನಿಟ್ಟುಸಿರು ಬಿಟ್ಟು, ತನ್ನ ಹೃದಯದ ದೊಡ್ಡ ಭಾರವೊಂದನ್ನು ಇಳಿಸಿಬಿಡಲು ಆಕೆ ಯತ್ನಿ ಸಿದಳು.

"ಓ ದೇವರೇ! ಓ ಪ್ರೀತಿಯ ಯೇಸು! ಇದು ಸಾಧ್ಯವೆ – ನನ್ನನ್ನೂ ಇವರ ಹಾಗೆಯೋ...."

ಅವರು ಸ್ಮಶಾನವನ್ನು ತಲಪಿದರು. ಬಲು ಹೊತ್ತು ಗೋರಿಗಳ ನಡುವೆ ಇಗಲ ಕಿರಿದಾದ ಹಾದಿಯಲ್ಲಿ ಅಂಕುಡೊಂಕಾಗಿ ಸಾಗುತ್ತ, ಸಣ್ಣ ಬಿಳಿಯ ಶಿಲುಬೆ ಗಳಿದ್ದ ವಿಶಾಲವಾದ ಸ್ಥಳವನ್ನು ಸೇರಿದರು. ತೋಡಿದ್ದ ಹೊಂಡದ ಸುತ್ತಲೂ ಅವರು ಮೌನವಾಗಿ ನೆರೆದರು. ಗೋರಿಗಳ ನಡುವೆ ನಿಂತಿದ್ದ ಬದುಕಿದ್ದವರ ಗಾಢ ನೀರವತೆ, ಯಾವುದೋ ಅಪಾಯದ ಪೂರ್ವಸಂಕೇತದ ಹಾಗಿತ್ತು. ಇದರಿಂದ ತಾಯಿಗೆ, ಹೃದಯ ಕಂಪಿಸಿ ಸಾಯುವ ಹಾಗಾಯಿತು. ಗಾಳಿ ಶಿಲುಬೆಗಳ ನಡುವೆ ಭೋರ್ಗರೆ ಯಿತು, ಸಿಳ್ಳು ಹೊಡೆಯಿತು. ಶವದಾನಿಯ ಮುಚ್ಚಳದ ಮೇಲೆ ಹಿಸುಕಿ ಬಿದ್ದಿದ್ದ ಹೂಗಳನ್ನು ಅಲುಗಾಡಿಸಿತು.

ಪೋಲೀಸರು ತಮ್ಮ ಮುಖ್ಯಸ್ಥನತ್ತ ನೋಡುತ್ತ ಸಿದ್ಧರಾಗಿ ನಿಂತರು. ಎತ್ತ ರದ ನಿಸ್ತೇಜ ಮುಖದ ಕರಿಯ ಹುಬ್ಬುಗಳ ಉದ್ದನೆಯ ಕೂದಲಿನ ಯುವಕನೊಬ್ಬ ಗೋರಿಯ ತಲೆಯ ಭಾಗದಲ್ಲಿ ನಿಂತ. ಆ ಕ್ಷಣದಲ್ಲೆ ಪೋಲೀಸ್ ಅಧಿಕಾರಿಯ ಕರ್ಕಶ ಸ್ವರ ಬೊಬ್ಬಿಟ್ಟಿತು:

"ಮಹಾಶಯರೆ...."

"ಸಂಗಾತಿಗಳೇ!" ಎಂದು, ಕರಿಯ ಹುಬ್ಬಿನ ಯುವಕ ಗಟ್ಟಿಯಾದ ಸ್ಪಷ್ಟ ಸ್ವರದಲ್ಲಿ ಆರಂಭಿಸಿದ.

"ಒಂದ್ನಿಮಿಷ! ಯಾವ ಭಾಷಣಕ್ಕೂ ನಾನು ಅವಕಾಶ ಕೊಡೋದಿಲ್ಲಾಂತ ಎಚ್ಚರಿಸ್ತಿದ್ದೀನಿ!" ಎಂದು ಅಧಿಕಾರಿ ಗರ್ಜಿಸಿದ.

ಯುವಕ ಶಾಂತ ಸ್ವರದಲ್ಲಿ ಉತ್ತರವಿತ್ತ:

"ನಾನು ಕೆಲವೇ ಮಾತುಗಳನ್ನ ಆಡ್ತೀನಿ. ಸಂಗಾತಿಗಳೆ! ನಮ್ಮ ಸ್ನೇಹಿತನ ಹಾಗೂ ಗುರುವಿನ ಗೋರಿಯ ಬಳಿ ನಿಂತು ಆತನ ಬೋಧನೆಗಳನ್ನು ಎಂದಿಗೂ ಮರೆಯೋದಿಲ್ಲಾಂತ ಪ್ರತಿಜ್ಞೆ ಮಾಡೋಣ. ನಮ್ಮ ಜೀವಮಾನದ ಪ್ರತಿನಿಮಿಷವೂ ಪ್ರತಿಯೊಬ್ಬರೂ ಈ ನಮ್ಮ ಹುಟ್ಟುನಾಡಿನ ಎಲ್ಲ ಸಂಕಟಗಳಿಗೂ ಮೂಲಕಾರಣ ವಾದ ಆ ಶಕ್ತಿಯ —ಕ್ರೂರ ಮರ್ದಕ ಶಕ್ತಿಯ— ಆ ಅರಸೊತ್ತಿಗೆಯ ಗೋರಿಯನ್ನ ಎಡೆಬಿಡದೆ ತೋಡುತ್ತೇವೆ ಅಂತ ಪ್ರತಿಜ್ಞೆ ಮಾಡೋಣ!"

"ಅವನನ್ನ ಬಂಧಿಸಿ!" ಎಂದು ಅಧಿಕಾರಿ ಆಜ್ಞಾಪಿಸಿದ.

ಆದರೆ ಆತನ ಧ್ವನಿ "ಅರಸೊತ್ತಿಗೆ ನಾಶವಾಗಲಿ!" ಎಂಬ ವಿವಿಧ ಸ್ವರಗಳೆಡೆ ಯಲ್ಲಿ ಮುಳುಗಿ ಹೋಯಿತು.

ಗುಂಪಿನೆಡೆಯಿಂದ ಹಾದು ಪೋಲೀಸರು ಭಾಷಣ ಮಾಡುತ್ತಿದ್ದವನತ್ತ ಬಂದರು. ಆದರೆ ಆತ, ಸ್ನೇಹಿತರು ರಕ್ಷಣೆಯ ಕೋಟೆ ರಚಿಸಿದ್ದ ಜಾಗದಿಂದ ಘೋಷಿಸಿದ್ದ:

"ಸ್ವಾತಂತ್ರ್ಯ ಚಿರಾಯುವಾಗಲಿ!"

ತಾಯಿಯನ್ನು ಯಾರೋ ಒಂದೆಡೆಗೆ ತಳ್ಳಿದರು. ಭಯದಿಂದ ಆಕೆ ಒಂದು ಶಿಲುಬೆಗೊರಗಿ, ಹೊಡೆತವನ್ನು ನಿರೀಕ್ಷಿಸುತ್ತ ಕಣ್ಣು ಮುಚ್ಚಿಕೊಂಡಳು. ಬಗೆ ಬಗೆಯ ಸ್ವರಗಳ ಗರ್ಜನೆಯಿಂದ ಆಕೆಯ ಕಿವಿ ಕಿವುಡಾಯಿತು. ಕಾಲುಗಳಡಿಯಿಂದ ಭೂಮಿ ಕುಸಿದಂತೆ ತೋರಿತು. ಬೀಸುತ್ತಿದ್ದ ಗಾಳಿಯಿಂದಾಗಿಯೂ ಭಯದಿಂದಲೂ ಸರಿ ಯಾಗಿ ಉಸಿರಾಡುವುದೇ ಸಾಧ್ಯವಾಗಲಿಲ್ಲ. ಪೋಲೀಸರ ಅಪಾಯಸೂಚಕ ಸಿಳ್ಳು ಗಳು ಕೇಳಿಸಿದುವು. ಒರಟು ಸ್ವರಗಳು ಆಜ್ಞೆಗಳನ್ನಿತ್ತುವು. ಸ್ತ್ರೀಯರು ಚೀತ್ಕಾರ ಮಾಡಿದರು. ಮರದ ಬೇಲಿಗಳು ಮುರಿಯಲ್ಪಟ್ಟವು. ಒಣ ಭೂಮಿಯ ಮೇಲೆ ಭಾರವಾದ ಬೂಟುಗಳು ತುಳಿದಾಡಿದುವು. ಇದು ದೀರ್ಘಕಾಲ ನಡೆಯಿತು; ಹಾಗೆ ಕಣ್ಣು ಮುಚ್ಚಿ ನಿಂತುಕೊಂಡು ಅದನ್ನೆಲ್ಲ ಸಹಿಸುವುದು ತಾಯಿಯಿಂದಾಗದೇ ಹೋಯಿತು.

ಆಕೆ ಕಣ್ಣು ತೆರೆದು ನೋಡಿ, ಕೈಗಳನ್ನು ಚಾಚಿ ಚೀತ್ಕರಿಸುತ್ತಾ ಮುಂದಕ್ಕೆ ಧಾವಿಸಿದಳು. ಅನತಿದೂರದಲ್ಲೆ, ಗೋರಿಗಳ ನಡುವೆ ಅಗಲ ಕಿರಿದಾದ ಹಾದಿಯಲ್ಲಿ ಪೋಲೀಸರು, ಉದ್ದನೆಯ ಕೂದಲಿನ ಆ ಯುವಕನನ್ನು ಸುತ್ತುವರಿದು, ಆತನ ರಕ್ಷಣೆಗಾಗಿ ಎಲ್ಲಾ ಕಡೆಗಳಿಂದಲೂ ಮುನ್ನುಗ್ಗಿ ಬರುತ್ತಿದ್ದ ಜನರನ್ನು ಹೊಡೆದು ಹಿಂದಕ್ಕೆ ತಳ್ಳುತ್ತಿದ್ದರು. ಒರೆ ಹಿರಿದ ಖಡ್ಗಗಳು ಶೀತಲವಾಗಿ ಬಿಳಿಯಾಗಿ, ತಲೆಗಳ ಮೇಲೆ ಕಿಡಿಕಾರುತ್ತಾ, ನಡು ನಡುವೆ ಕೆಳಕ್ಕಿಳಿಯುತ್ತಾ, ಮಿಂಚಿದುವು. ಬೆತ್ತಗಳೂ ಬೇಲಿಯ ಮುರಿದ ಕಂಬಿಗಳೂ ಆಯುಧಗಳಾಗಿ ಮೆರೆದುವು. ಕೂಗಾಡುತ್ತಿದ್ದ ಆ ಜನರು ಯುವಕನ ಮ್ಲಾನ ಮುಖವನ್ನೆ ನೋಡುತ್ತ ಹುಚ್ಚೆದ್ದು ಕುಣಿದರು. ಈ ಭಾವವಿಕಾರಗಳ ಬಿರುಗಾಳಿಯ ನಡುವಿನಿಂದ ಆತನ ಬಲವಾದ ಸ್ವರ ಕೇಳಿಸಿತು:

"ಸಂಗಾತಿಗಳೇ! ಯಾಕೆ ವೃಥಾ ಶಕ್ತಿ ಕಳಕೋತಾ ಇದ್ದೀರಿ?"

ಆ ಮಾತುಗಳಲ್ಲಿ ಅರ್ಥವಿತ್ತು. ಜನರು ಅದರ ಸತ್ಯತೆಯನ್ನು ಮನಗಂಡರು. ಅವರು ತಮ್ಮ ಕೈಲಿದ್ದುದನ್ನು ಎಸೆಯುತ್ತ ಒಬ್ಬೊಬ್ಬರಾಗಿ ಓಡಿ ಹೋದರು. ಆದರೆ ತಾಯಿ ಮಾತ್ರ ಮುನ್ನಡೆದಳು. ತಡೆಯಲಾಗದ ಶಕ್ತಿಯೊಂದು ಆಕೆಯನ್ನು ಮುಂದಕ್ಕೆ ತಳ್ಳಿತು. ಹ್ಯಾಟನ್ನು ತಲೆಯ ಹಿಂಭಾಗಕ್ಕೆ ನೂಕಿ, ಹುಚ್ಚರಾಗಿದ್ದ ಜನರನ್ನು ಹಿಂದಕ್ಕೆ ಸರಿಸುತ್ತಲಿದ್ದ ನಿಕೊಲಾಯ್‌ನನ್ನು ತಾಯಿ ನೋಡಿದಳು.

ಆತ ಕೂಗಾಡುತ್ತಿದ್ದ:

"ಹುಚ್ಚು ಹಿಡಿಯಿತೆ ನಿಮಗೆ? ಶಾಂತರಾಗಿ!"

ಅವನ ಒಂದು ಕೈ ಕೆಂಪಾಗಿದ್ದಂತೆ ತಾಯಿಗೆ ತೋರಿತು.

ಅವನತ್ತ ಧಾವಿಸುತ್ತ ತಾಯಿ ಕೂಗಿಕೊಂಡಳು:

"ನಿಕೊಲಾಯ್ ಇವಾನೊವಿಚ್! ಇಲ್ಲಿಂದ ಹೊರಟು ಹೋಗಿ!"

"ನೀವೆಲ್ಲಿಗೆ? ನಿಮಗೆ ಏಟು ಬೀಳುತ್ತೆ!"

ಒಂದು ಕೈ ತನ್ನ ಭುಜವನ್ನು ಮುಟ್ಟಿದಂತಾಗಿ ತಾಯಿ ತಿರುಗಿ ನೋಡಿದಳು. ಹ್ಯಾಟಿಲ್ಲದೆ, ತಲೆಗೂದಲು ಕೆದರಿ, ಎಳೆಯ ಒಬ್ಬ ಹುಡುಗನನ್ನು ಕೈಲಿ ಹಿಡಿದುಕೊಂಡು ತನ್ನ ಪಕ್ಕದಲ್ಲೆ ಬಂದು ನಿಂತ ಸೋಫಿಯಳನ್ನು ತಾಯಿ ಕಂಡಳು. ಇನ್ನೂ ಬಲು ಎಳೆಯ ನಾಗಿದ್ದ ಆ ಹುಡುಗ, ಮುಖದ ಮೇಲಿನ ರಕ್ತವನ್ನೊರೆಸುತ್ತಾ ನಡುಗುತ್ತಿದ್ದ ತುಟಿ ಗಳಿಂದ ಗೊಣಗಿದ:

"ಬಿಡಿ ನನ್ನ.... ಇದೇನೂ ದೊಡ್ಡದಲ್ಲ...."

"ಇವನನ್ನ ನೋಡ್ಕೋ. ನಮ್ಮ ಮನೆಗೆ ಕರಕೊಂಡು ಹೋಗು. ಅವನ ಮುಖಕ್ಕೆ ಕಟ್ಕೋದಕ್ಕೆ ಇಗೋ ಕರವಸ್ತ್ರ."

ಸೋಫಿಯ ಬೇಗನೆ ಇಷ್ಟು ಹೇಳಿ, ಹುಡುಗನ ಕೈಯನ್ನು ತಾಯಿಯ ಕೈಯ ಲ್ಲಿಟ್ಟು, ಓಡಿಹೋದಳು. ಓಡುತ್ತ ಅವಳೆಂದಳು:

"ಬೇಗ್ನೆ ಹೋಗಿ! ದಸ್ತಗಿರಿಮಾಡ್ತಿದಾರೆ!"

ಜನರು ಸ್ಮಶಾನದ ಎಲ್ಲಾ ಕಡೆಗಳಿಂದಲೂ ಚೆದರಿ ಹೋದರು. ಪೋಲೀಸರು ಗೋರಿಗಳ ನಡುವೆ ಭಾರವಾದ ಹೆಜ್ಜೆಗಳನ್ನಿಡುತ್ತ, ಅಲ್ಲಲ್ಲೆ ಎಡವಿ ಎಡವಿ ನಡೆಯುತ್ತ, ಶಪಿಸುತ್ತ, ಖಡ್ಗಗಳನ್ನು ಝಳಪಿಸುತ್ತಲಿದ್ದರು. ಹುಡುಗ ಅವರನ್ನು ಹಸಿದ ತೋಳ ನಂತೆ ನೋಡಿದ.

"ಹೂಂ, ನಡಿ ಬೇಗ್ನೆ," ಎಂದು ತಾಯಿ, ಕರವಸ್ತ್ರದಿಂದ ಹುಡುಗನ ಮುಖ ವನ್ನೊರೆಸುತ್ತ ಹೇಳಿದಳು.

"ನನ್ನ ವಿಷಯ ಚಿಂತಿಸ್ಬೇಡಿ–ಏನೂ ನೋವಿಲ್ಲ," ಎಂದು ಆತ ರಕ್ತವನ್ನು ಗುಳುತ್ತಾ ಗೊಣಗಿದ. "ನನಗೆ ಆತ ಖಡ್ಗದ ಹಿಡಿಯಿಂದ ಹೊಡೆದ. ನಾನೂ ಸರಿ ಯಾಗಿ ಕೊಟ್ಟೆ! ಒಂದು ಕೋಲಿನಿಂದ ಹ್ಯಾಗೆ ಬಿಟ್ಟೇಂತ! ನೋವು ತಡೀದೆ ಕುಯ್ಯೋ ಅಂದ.... ಸ್ವಲ್ಪ ತಡೀರಿ ಇನ್ನೂ!" ಹುಡುಗ ರಕ್ತಮಯವಾಗಿದ್ದ ಮುಷ್ಟಿಯನ್ನ

ಉಗಿಸುತ್ತ ಕಿರಿಚಿದ: “ಇನ್ನು ಬರೋದರ ಎದುರಲ್ಲಿ ಈಗ ಕೊಟ್ಟಿರೋದು ಏನೂ ಇಲ್ಲ! ಒಮ್ಮೆ ನಾವು ಎಲ್ಲ ಕೂಲಿಕಾರರೂ ಎದ್ದೆವು ಅಂದ್ರೆ, ಹೋರಾಟವಿಲ್ದೇನೇ ನಿಮ್ಮನ್ನ ತೊಡೆದು ಹಾಕ್ತೀವಿ!”

ಬೇಲಿಯ ಬಳಿ ಇದ್ದ ಪುಟ್ಟ ಬಾಗಿಲಿನತ್ತ ಸಾಗುತ್ತ ತಾಯಿ “ಬೇಗ್ನೆ!” ಅಂದಳು. ಬೇಲಿಯಾಚೆ ಬಯಲಲ್ಲಿ ಪೋಲೀಸರು ಅಡಗಿ ಕುಳಿತು ತಮಗಾಗಿ ಕಾಯುತ್ತಿದ್ದಂತೆ ತಾಯಿಗೆ ತೋರಿತು; ತಾವು ಹೊರಬಿದ್ದೊಡನೆಯೇ ಅವರು ತಮ್ಮೆಡೆಗೆ ಧಾವಿಸಿ ಬಂದು ಹೊಡೆಯುವರೆಂದು ತಾಯಿ ಭಾವಿಸಿದಳು. ಬೇಲಿಯನ್ನು ಸಮೀಪಿಸಿದೊಡನೆ ತಾಯಿ ಮೆಲ್ಲನೆ ಹೊರಗಿಣಿಕಿ ನೋಡಿದಳು. ಮುಸ್ಸಂಜೆಯ ಬೂದು ಹೊದಿಕೆಯನ್ನು ಧರಿಸಿದ್ದ ಬಯಲು ನೀರವವಾಗಿತ್ತು, ಬರಿದಾಗಿತ್ತು. ಅದನ್ನು ಕಂಡು ತಾಯಿಗೆ ಸಮಾಧಾನವೆನಿಸಿತು....

“ಎಲ್ಲಿ, ನಿನ್ನ ಮುಖಕ್ಕೆ ಪಟ್ಟಿಕಟ್ತೀನಿ,” ಎಂದಳು ತಾಯಿ.

“ಏನೂ ಬೇಡ. ನನಗೇನೂ ಅವಮಾನವಿಲ್ಲ. ಅದು ಪ್ರಾಮಾಣಿಕವಾದ ಹೋರಾಟ. ಅವನೂ ನನಗೊಂದು ಕೊಟ್ಟ, ನಾನು ಅವನಿಗೊಂದು ಕೊಟ್ಟೆ.”

ಆದರೆ ತಾಯಿ, ಬೇಗನೆ ಆ ಗಾಯಕ್ಕೆ ಕರವಸ್ತ್ರವನ್ನು ಕಟ್ಟಿದಳು. ಆ ರಕ್ತವನ್ನು ನೋಡಿದಾಗ ತಾಯಿಗೆ ಕರುಣೆಯುಕ್ಕಿ ಬಂತು. ಬಿಸಿಯಾದ ಜಿಗುಟಾದ ರಕ್ತ ಬೆರಳಿಗೆ ಸೋಂಕಿ, ಶೀತಲ ನಡುಕ ಆಕೆಯ ಶರೀರವನ್ನು ಆವರಿಸಿತು. ಬೇಗನೆ, ಮಾತನಾಡದೆಯೇ, ಹುಡುಗನನ್ನೂ ಎಳೆದುಕೊಂಡು ಆಕೆ ಬಯಲನ್ನು ದಾಟಿದಳು.

“ಸಂಗಾತಿ, ನನ್ನನ್ನ ಎಲ್ಲಿಗೆ ಕರಕೊಂಡು ಹೋಗ್ತೀರಿ?” ಎಂದು, ವಸ್ತ್ರದ ಕಟ್ಟಿನಿಂದ ಬಾಯಿಯನ್ನು ಸಡಿಲಿಸಿಕೊಂಡು ಹುಡುಗ ವ್ಯಂಗ್ಯವಾಗಿ ಹೇಳಿದ. “ನಿಮ್ಮ ಸಹಾಯವಿಲ್ದೇನೇ ನಾನು ಹೋಗಬಲ್ಲೆ.”

ಆದರೆ ಆತನ ಕೈಗಳು ನಡುಗುತ್ತಿದ್ದುದನ್ನೂ ಕಾಲುಗಳ ಮೇಲೆ ಆತನ ದೇಹ ತೂರಾಡುತ್ತಿದ್ದುದನ್ನೂ ತಾಯಿ ಕಂಡಳು. ಕ್ಷೀಣಸ್ವರದಲ್ಲಿ ಆತ ಮಾತನಾಡುತ್ತಲೂ ಪ್ರಶ್ನೆಗಳನ್ನು ಕೇಳುತ್ತಲೂ ಉತ್ತರಗಳ ಹಾದಿ ನೋಡದೆ ಮುಂದುವರಿಯುತ್ತಲೂ ಬಂದ.

“ನೀವು ಯಾರು?... ನಾನೊಬ್ಬ ಕಮ್ಮಾರ. ನನ್ನ ಹೆಸರು ಇವಾನ್. ಯೆಗೋರ್ ಇವಾನೊವಿಚ್‌ನ ಅಭ್ಯಾಸಕೂಟದಲ್ಲಿ ನಾವು ಮೂವರಿದ್ದೆವು – ಮೂವರು ಕಮ್ಮಾರರು. ಒಟ್ಟು ಹನ್ನೊಂದು ಜನ ಇದ್ದೆವು. ನಾವು ಅವನನ್ನ ಎಷ್ಟೊಂದು ಪ್ರೀತಿಸ್ತಿದ್ದೆವೊಂತ! ಅವನ ಆತ್ಮಕ್ಕೆ ಶಾಂತಿ ದೊರೀಲಿ. ನಾನು ದೇವರಲ್ಲಿ ವಿಶ್ವಾಸ ಇಡದೇ ಇದ್ದರೂ – ”

ಬೀದಿ ಸೇರಿ ಸ್ವಲ್ಪ ದೂರ ಹೋದ ಮೇಲೆ ತಾಯಿ ಒಂದು ಜಟಕಾಗಾಡಿಯನ್ನು ಕರೆದಳು. ಇವಾನನ್ನು ಕುಳ್ಳಿರಿಸಿ, ಬಳಿಯಲ್ಲೆ ತಾನೂ ಕುಳಿತಳು. “ಈಗ ಮಾತಡ್ಬೇಡ,” ಎಂದು ತಾಯಿ ಪಿಸುಗುಟ್ಟಿ, ಕರವಸ್ತ್ರದಿಂದ ಆತನ ಬಾಯನ್ನು ಸೂಕ್ಷ್ಮವಾಗಿ ಬಿಗಿದಳು.

ಆತ ಕೈಯನ್ನು ಮುಖದ ಬಳಿ ತಂದ. ಆದರೆ ಕೈ ಅಸಹಾಯವಾಗಿ ಮಡಲಿನ ಮೇಲೆ ಬಿದ್ದುಕೊಂಡಿತು. ಮುಖದ ಮೇಲಿನ ಪಟ್ಟಿಯನ್ನು ಬಿಚ್ಚಲೆತ್ನಿಸುವಷ್ಟು ಶಕ್ತಿ ಕೈಗಿರಲಿಲ್ಲ. ಆದರೂ ಆತ ಕರವಸ್ತ್ರದೆಡೆಯಿಂದ ಗೊಣಗುತ್ತಲೇ ಇದ್ದ:

"ಇವನ್ನೆಲ್ಲಾ ಮರೀತೀನೀಂತ ತಿಳಕೋಬೇಡಿ, ಮಹನೀಯರೇ.... ಆತ ಬರೋ ಕ್ರ್ಯಾಂಚೆ ತಿತೋವಿಚ್ ಅಂತ ಒಬ್ಬ ವಿದ್ಯಾರ್ಥಿಯಿದ್ದ – ಅವನು ನಮಗೆ ಪಾಠ ಹೇಳ್ಕೊಡ್ತಿದ್ದ – ರಾಜಕೀಯ ಅರ್ಥಶಾಸ್ತ್ರ....ಆತನನ್ನು ದಸ್ತಗಿರಿ ಮಾಡಿದ್ರು...."

ತಾಯಿ, ತನ್ನ ಕೈಯಿಂದ ಇವಾನನ್ನು ಸುತ್ತುವರಿದು, ಆತನ ತಲೆಯನ್ನು ತನ್ನ ಎದೆಗವಚಿಕೊಂಡಳು. ಆತ ಒಮ್ಮೆಲೆ ಆ ಮಡಿಲಲ್ಲಿ ಮುದುಡಿಕೊಂಡು ಮೌನ ತಾಳಿದ. ಭಯದಿಂದ ನಿಶ್ಚೇಷ್ಟಿತಳಾಗಿ ತಾಯಿ ಕಳ್ಳನೋಟದಿಂದ ಅತ್ತಿತ್ತ ನೋಡುತ್ತಲೇ ಇದ್ದಳು. ಹಿಂದಿನಿಂದ ಎಲ್ಲಾದರೂ ಒಂದು ಮೂಲೆಯಿಂದ ಪೋಲೀಸರು ಓಡಿಬರಬಹುದೆಂದೂ ಇವಾನ್‌ನ ಗಾಯಗೊಂಡ ತಲೆಯನ್ನು ಕಂಡು ಆತನನ್ನು ಒಡಿದೆಳೆದು ಸಾಯಿಸಬಹುದೆಂದೂ ಆಕೆಗೆ ಅನಿಸುತ್ತಿತ್ತು.

ಗಾಡಿಯವನು ಕುಳಿತಿದ್ದಲ್ಲಿಂದಲೆ ತಿರುಗಿ ನೋಡಿ, ಒಳ್ಳೆಯ ರೀತಿಯಲ್ಲಿ ಮುಗುಳ್ನಕ್ಕು, "ಅಮಲೇರಿದ್ಯೇನು?" ಎಂದು ಕೇಳಿದ.

"ಹೂಂ. ನಾಲಿಗೆ ಸುಟ್ಟು ಹೋಗುವಷ್ಟು ಕುಡಿದ!" ಎಂದು ಹೇಳಿ ತಾಯಿ ನಿಟ್ಟುಸಿರು ಬಿಟ್ಟಳು.

"ನಿನ್ನ ಮಗನೇನು?"

"ಹೌದು. ಮೋಚಿ. ನಾನು ಅಡುಗೆ ಕೆಲಸ ಮಾಡ್ತೀನಿ."

"ನಿನ್ನದು ಕಷ್ಟದ ಜೀವನ. ಹುಂ...."

ಬಾರುಕೋಲನ್ನೊಮ್ಮೆ ಬಾರಿಸಿ, ತಾಯಿಯತ್ತ ಅರೆತಿರುಗಿ, ಗಾಡಿಯವನು ಮೆಲುದನಿಯಲ್ಲಿ ಮುಂದುವರಿಸಿದ:

"ಸ್ಮಶಾನದಲ್ಲಿ ಇದೇ ಈಗ ಕಾದಾಟ ಆಯ್ತಂತೆ – ಕೇಳಿದ್ಯೇನು? ಕ್ರಾಂತಿಕಾರಿ ವ್ಯಕ್ತಿಗಳಿದ್ದಾರೆ ನೋಡು – ಮೇಲಿನವರ ವಿರುದ್ಧ ಎದ್ದು ನಿಲ್ಲೋರು – ಅದು ಯಾವುದೋ ಕಾರಣಕ್ಕೆ ಅವರ್ಜತೇಲಿ ಜಗಳಾಡೋರು?... ಅಂಥವರಲ್ಲಿ ಒಬ್ಬನನ್ನ ಇವತ್ತು ಮಣ್ಣುಮಾಡಿದ್ರಂತೆ. ಮಣ್ಣುಮಾಡೋಕೆ ಬಂದವರೂ ಅವನಂಥವರೇ ಅಂತೆ, ಸ್ನೇಹಿತರೂಂತಿಟ್ಕೊ. ಮನುಷ್ಯರ್ನ ಬಡವರಾಗಿ ಮಾಡೋ ಮೇಲ್ನೋರು ನಾಶವಾಗ್಩ೀಂತ ಕೂಗೋಕೆ ಶುರು! ಬಂದೇಬಿಟ್ರು ಪೋಲೀಸ್ರು. ಬಂದು ಹೊಡೆದಿದ್ದೇ ಹೊಡೆದಿದ್ದು. ಕೆಲವರು ಪೆಟ್ಟು ತಿಂದು ಸತ್ತೇ ಹೋದರೂಂತ ಹೇಳ್ತಾರೆ. ಪೋಲೀಸರಿಗೂ ಚೆನ್ನಾಗಿ ಬಿತ್ತಂತೆ!"

ಒಂದು ಕ್ಷಣ ಆತ ಸುಮ್ಮನಿದ್ದು, ಆ ಬಳಿಕ, ವಿಚಿತ್ರವಾದ ಸ್ವರದಲ್ಲಿ, ನಂಬಲಸಾಧ್ಯವಾದ ರೀತಿಯಲ್ಲಿ ತಲೆಯಲುಗಿಸುತ್ತ ಹೇಳಿದ:

"ಸತ್ತವರ್ನ ಆ ರೀತಿ ಎಬ್ಬಿಸೋದು! ಸತ್ತೋರಿಗೆ ಶಾಂತಿ ಇಲ್ದಹಾಗೆ ಮಾಡೋದು!"

ಗಾಡಿಯು ಕಲ್ಲುಗಳ ಮೇಲೆ ಕುಪ್ಪಳಿಸಿ ಉರುಳಿದಂತೆ, ಇವಾನ್‌ನ ತಲೆ ಮೃದುವಾಗಿ ತಾಯಿಯ ಎದೆಗೆ ಬಡಿಯಿತು. ಗಾಡಿಯವನು ಪೆಟ್ಟಿಗೆಯ ಮೇಲೆ ಅರೆ ತಿರುಗಿ ಕುಳಿತು, ಯೋಚನಾಮಗ್ನನಾಗಿ ಗೊಣಗಿದ:

"ಜನರು ಅಶಾಂತರಾಗಿದ್ದಾರೆ.... ಅವ್ಯವಸ್ಥೆ ಭೂಮಿಯಿಂದ ಎದ್ದು ಬರ್‍ತಿದೆ. ಕಳೆದ ರಾತ್ರಿ ಪೋಲೀಸರು ನಮ್ಮ ನೆರೆಮನೆಗೆ ಬಂದಿದ್ರು. ಬೆಳಗಾಗೋ ವರೆಗೂ ಇದ್ದದ್ದನ್ನೆಲ್ಲಾ ತಲೆಕೆಳಗು ಮಾಡಿ ಹುಡುಕ್ತಾನೇ ಇದ್ರು. ಆ ಮೇಲೆ ಆ ಕಮ್ಮಾರರಲ್ಲಿ ಒಬ್ಬನನ್ನ ಎಳಕೊಂಡು ಹೋದ್ರು. ನಡುರಾತ್ರಿಗೆ ಅವನನ್ನ ನದಿಗೆ ಕರಕೊಂಡು ಹೋಗಿ ಮುಳುಗಿಸ್ತಾರೇಂತ ಜನ ಹೇಳ್ತಾರೆ. ಅವನು ಒಳ್ಳೇ ಮನುಷ್ಯ...."

"ಅವನ ಹೆಸರೇನು?" ಎಂದು ತಾಯಿ ಕೇಳಿದಳು.

"ಯಾರದು, ಆ ಕಮ್ಮಾರನ ಹೆಸರೆ? ಸವ್ಯೇಲ್ ಅಂತ. ಸವ್ಯೇಲ್ ಯೇವ್‌ಚೆಂಕೊ. ಚಿಕ್ಕವಯಸ್ಸು. ಆದರೆ ತುಂಬಾ ಬುದ್ಧಿವಂತ. ಹೀಗೇ ನಮ್ಹತ್ರ ಬಂದು – ಗಾಡಿ ಹೊಡೆಯೋರು ನೀವು ಎಂಥಾ ಬಾಳ್ವೆ ನಡೆಸ್ತಿದೀರಿ? ಅಂತ ಕೇಳ್ತಿದ್ದ. ನಾಯಿ ಬಾಳಿಗಿಂತಲೂ ಕೀಳು – ಇದೇ ಸತ್ಯಾಂಶ – ಅಂತ ನಾವು ಅಂತಿದ್ವಿ."

ಮನೆ ಸಮೀಪಿಸಿತು.

"ಗಾಡಿ ನಿಲ್ಸು," ಎಂದಳು ತಾಯಿ.

ಗಾಡಿ ನಿಂತ ಅಲುಗಾಟಕ್ಕೆ ಇವಾನ್‌ನಿಗೆ ಎಚ್ಚರವಾಗಿ ಆತ ಕ್ಷೀಣ ಸ್ವರದಲ್ಲಿ ನರಳಿದ.

ಗಾಡಿಯವನೆಂದ:

"ಹುಡುಗನಿಗೆ ಏರಿದೆ! ನೋಡು ವೋಡ್ಕ ಮಹಾತ್ಮೆ! ವೋಡ್ಕ.... ವೋಡ್ಕ...."

"ನಾನು ಸರಿಯಾಗಿದ್ದೀನಿ... ನಾನೇ ನಡೀತೀನಿ...." ಎಂದು ಉದ್ದಕ್ಕೂ ಪ್ರತಿಭಟಿಸುತ್ತ ಇವಾನ್, ಬಲು ಪ್ರಯಾಸಪಡುತ್ತ, ತೂರಾಡುತ್ತಾ, ಅಂಗಳಕ್ಕಿಳಿದ.

೧೩

ಸೋಫಿಯ ಆಗಲೆ ಮನೆಗೆ ಬಂದಿದ್ದಳು. ಆಕೆ ಕ್ಷೋಭೆಗೊಂಡು ಉದ್ವಿಗ್ನಳಾಗಿ ಸಿಗರೇಟು ಸೇದುತ್ತ ಕುಳಿತಿದ್ದಳು.

ಗಾಯಗೊಂಡ ಹುಡುಗನನ್ನು ಮಂಚದ ಮೇಲೆ ಮಲಗಿಸಿದ ಬಳಿಕ ಆಕೆ, ಸಿಗರೇಟಿನ ಹೊಗೆ ಸೇರಿಕೊಳ್ಳದಂತೆ ಕಣ್ಣುಗಳನ್ನು ಕಿರಿದುಗೊಳಿಸುತ್ತ, ಗಾಯಕ್ಕೆ ಕಟ್ಟಿದ್ದ ಪಟ್ಟಿಯನ್ನು ಬಲು ಜಾಣ್ಮೆಯಿಂದ ಬಿಚ್ಚಿ, ನಿರ್ದೇಶಗಳನ್ನು ಕೊಡತೊಡಗಿದಳು.

"ಅವನನ್ನ ಕರಕೊಂಡು ಬಂದಿದ್ದಾಯ್ತು ಇವಾನ್ ದನೀಲೊವಿಚ್! ಆಯಾಸವಾಯ್ತೆ, ನೀಲೊವ್ನ? ಹೆದಕ್ಕೊಂಡ್ರೇನು? ಸರಿ. ನೀವು ವಿಶ್ರಾಂತಿ ತಗೊಳ್ಳಿ. ನೀಲೊವ್ನಗೊಂದು ಗ್ಲಾಸ್ ವೈನ್ ಕೊಡು ನಿಕೊಲಾಯ್."

ಆದೇ ಆಗ ಆಗಿದ್ದ ಎಲ್ಲ ಅನುಭವದಿಂದ ತಾಯಿಗೆ ದಂಗುಬಡಿದಂತಾಗಿತ್ತು. ಸಂಕಟದಿಂದ ಉಸಿರಾಡುವುದೂ ಕಷ್ಟವಾಯಿತು. ಎದೆಯಲ್ಲಿ ತೀಕ್ಷ್ಣವಾದ ನೋವಿತ್ತು.

"ನನ್ನ ವಿಷಯ ಚಿಂತಿಸ್ಬೇಡ," ಎಂದು ಆಕೆ ಇಳಿದನಿಯಲ್ಲಿ ಅಂದಳು.

ಆದರೆ ಆಕೆಯ ಜೀವವೆಲ್ಲಾ ಇತರರ ಗಮನವನ್ನು, ಸಹಾನುಕಂಪದ ಪ್ರೀತಿಯ ...ಯವನ್ನು ಬಯಸುತ್ತಿತ್ತು.

ಪಕ್ಕದ ಕೊಠಡಿಯಿಂದ ನಿಕೊಲಾಯ್ ಬಂದ. ಆತನ ಕೈಗೆ ಪಟ್ಟಿ ಸುತ್ತ ...ಗಿತ್ತು. ಅವನ ಹಿಂದಿನಿಂದಲೇ ಡಾಕ್ಟರ್ ಇವಾನ್ ದನೀಲೊವಿಚ್ ಬಂದ ತಲೆ ...ದಲು ಕೆದರಿಕೊಂಡು ಆತ ಮುಳ್ಳುಹಂದಿಯಂತಿದ್ದ.

ಡಾಕ್ಟರು ವೇಗವಾಗಿ ಗಾಯಗೊಂಡಿದ್ದ ಇವಾನ್‌ನ ಬಳಿ ಹೋಗಿ ಬಾಗಿ ಹೇಳಿದ:

"ನೀರು, ಹೆಚ್ಚು ನೀರು. ಸ್ವಲ್ಪ ಹತ್ತಿ ಮತ್ತು ಸ್ವಚ್ಛವಾದ ಬಟ್ಟೆ."

ಅವನ್ನೇ ತರಲೆಂದು ತಾಯಿ ಅಡುಗೆಮನೆಯತ್ತ ಹೊರಟಳು. ನಿಕೊಲಾಯ್ ಕೆಯ ಕೈ ಹಿಡಿದು ಊಟದ ಕೊಠಡಿಗೆ ಕರೆದೊಯ್ದ.

ಅಲ್ಲಿ ಆತ ಮೃದುವಾಗಿ ಹೇಳಿದ:

"ಡಾಕ್ಟರು ಅಂದದ್ದು ಸೋಫಿಯಗೆ – ನಿಮಗಲ್ಲ.... ನಿಮಗೆ ತುಂಬಾ ಗಾಬರಿ ...ಾಗಿರ್ಬೇಕು, ಅಲ್ವೆ, ಅಮ್ಮ?"

ಆತನ ಸಹಾನುಭೂತಿಯ ದೃಷ್ಟಿಯನ್ನು ಸಂಧಿಸಿದೊಡನೆ ತಾಯಿಗೆ ಅಳು ...ಸಲಾಗದೆ ಹೋಯಿತು.

"ಓ, ಏನೇನಾಯ್ತು! ಅವರು ಜನರನ್ನ ಹೊಡೆದ್ರು – ಹೋಳು ಮಾಡಿದ್ರು...."

ನಿಕೊಲಾಯ್ ಹೌದೆಂದು ತಲೆಯಾಡಿಸಿ ಆಕೆಗೊಂದು ಗ್ಲಾಸ್ ವೈನ್ ಕೊಡುತ್ತ ...ಳಿದ:

"ನಾನು ನೋಡ್ದೆ.... ಎರಡು ಕಡೆಯವರಿಗೂ ತಲೆ ಸ್ವಲ್ಪ ಹೆಚ್ಚಾಗಿ ರೇಗಿದ್ವು. ...ದರೆ ಅದನ್ನೆಲ್ಲಾ ನೀವು ಮನಸ್ಸಿಗೆ ಹಚ್ಕೋಬಾರ್ದು. ಅವರು ಖಡ್ಗಗಳ ಹಿಂಬದಿ ...ಂದ ಹೊಡೆದ್ರು. ಜಾಸ್ತಿ ಗಾಯವಾಗಿರೋದು ಒಬ್ಬನಿಗೆ ಮಾತ್ರವೇ ಅಂತೆ. ...ವನಿಗೆ ಪೆಟ್ಟು ಬಿದ್ದದ್ದನ್ನಂತೂ ಸ್ವತಃ ನನ್ನ ಕಣ್ಣಾರೆ ಕಂಡೆ. ಹ್ಯಾಗೋ ಮಾಡಿ ...ವನನ್ನ ಆ ಗುಂಪಿನಿಂದ ಹೊರಕ್ಕೆ ತಂದೆ."

ನಿಕೊಲಾಯ್‌ನ ಸ್ವರವೂ, ಶುಭ್ರವಾದ ಬೆಚ್ಚಗಿನ ಕೊಠಡಿಯೂ, ತಾಯಿಗೆ ...ತವನ್ನುಂಟುಮಾಡಿದುವು. ಕೃತಜ್ಞತೆಯಿಂದ ಆತನನ್ನು ನೋಡುತ್ತ, ತಾಯಿ ಕೇಳಿ ...ದ:

"ನಿಮಗೂ ಹೊಡೆದ್ರೆ?"

"ಈ ಗಾಯವನ್ನ ನಾನೇ ಎಲ್ಲೋ ಮಾಡ್ಕೊಂಡಿರ್ಬೇಕು. ಅಜಾಗರೂಕತೆ ...ವ ಯಾವುದಕ್ಕೋ ನನ್ನ ಕೈ ತಗಲಿ ಈ ಚರ್ಮ ಹರಿದಿರ್ಬೇಕು.... ತಗೋಳಿ, ... ಟೀ ಕೊಡ್ತೀನಿ. ಹೊರಗಂತೂ ಚಳಿ. ನೀವು ಬೆಚ್ಚಗಿನ ಬಟ್ಟೇನೂ ಹಾಕ್ಕೊಳ್ದೆ ...ಗಿದ್ರಿ."

ನಿಕೊಲಾಯ್ ಇರಿಸಿದ ಚಾ ತುಂಬಿದ ಲೋಟಕ್ಕಾಗಿ ಕೈಚಾಚಿದಾಗ, ತನ್ನ ಬೆರಳುಗಳಿಗೆ ಒಣ ರಕ್ತ ಅಂಟಿಕೊಂಡಿದ್ದುದನ್ನು ತಾಯಿ ಕಂಡಳು. ತನಗರಿಯದಂತೆಯೇ ಕೈ ಓಂದಕ್ಕೆ ಬಂತು. ಮಡಿಲನ್ನು ಮುಟ್ಟಿದಾಗ ಲಂಗವೂ ಒದ್ದೆಯಾಗಿದ್ದಂತೆ ಕಂಡಿತು. ಹುಬ್ಬುಗಳನ್ನೇರಿಸಿ, ಕಣ್ಣುಗಳನ್ನು ಅಗಲವಾಗಿ ತೆರೆದು, ಆಕೆ ಕೈ ನೋಡಿಕೊಂಡಳು. ಹೃದಯ ಡವಡವನೆ ಹೊಡೆದುಕೊಂಡಿತು. ತಲೆ ತಿರುಗುವಂತಾಯಿತು.

"ಪಾವೆಲ್‌ಗೂ ಕೂಡಾ, ಅವನಿಗೂ ಅವರು ಹೀಗೇ ಮಾಡಬಹುದು."

ಕೋಟಿಲ್ಲದೆಯೆ, ಷರಟಿನ ಕೈಗಳನ್ನು ಮೇಲಕ್ಕೆ ಸುತ್ತಿ, ಇವಾನ್ ದನೀಲೊವಿಚ್ ಕೊಠಡಿಯೊಳಗೆ ಬಂದ. ನಿಕೊಲಾಯ್‌ನ ಮೌನದ ಪ್ರಶ್ನೆಗೆ ಉತ್ತರವಾಗಿ ಏರು ಸ್ವರದಲ್ಲಿ ಅವನೆಂದ:

"ಮುಖದ ಮೇಲಿನ ಗಾಯ ಅಷ್ಟೇನೂ ದೊಡ್ಡದಲ್ಲ. ಆದರೆ ತಲೆಬುರುಡೆಗೆ ಹೊಡೆತ ಬಿದ್ದಿದೆ; ಅದೂ ಅಷ್ಟೊಂದು ಅಪಾಯದ್ದಲ್ಲ. ಹುಡುಗ ಗಟ್ಟಿಮುಟ್ಟಾಗಿದ್ದಾನೆ. ಆದರೂ ತುಂಬಾ ರಕ್ತ ನಷ್ಟವಾಗಿದೆ. ಅವನನ್ನ ಆಸ್ಪತ್ರೆಗೆ ಕಳಿಸೋಣ್ವೆ?"

"ಯಾಕೆ? ಆತ ಇಲ್ಲೇ ಇರ್ಲಿ," ಎಂದ ನಿಕೊಲಾಯ್.

"ಇವತ್ತು, ಪ್ರಾಯಶಃ ನಾಳೆ ಕೂಡಾ, ಪರವಾಗಿಲ್ಲ. ಆಮೇಲೆ ಆತ ಆಸ್ಪತ್ರೇಲಿದ್ದರೇ ನನಗೆ ಹೆಚ್ಚು ಅನುಕೂಲ. ಇಲ್ಲಿಗೆ ಬಂದು ಹೋಗೋಕೆ ನನಗೆ ಪುರಸೊತ್ತಿಲ್ಲ.... ಸ್ಮಶಾನದ ಪ್ರಕರಣದ ವಿಷಯವಾಗಿ ಒಂದು ಕರಪತ್ರ ಬರೀತಿಯಾ?"

"ಖಂಡಿತವಾಗಿ."

ತಾಯಿ ಮೆಲ್ಲನೆದ್ದು ಅಡುಗೆಮನೆಯತ್ತ ಹೊರಟಳು.

ನಿಕೊಲಾಯ್ ಮೃದುವಾಗಿ ಆಕೆಯನ್ನು ತಡೆಯುತ್ತ ಹೇಳಿದ:

"ಎಲ್ಲಿಗೆ ಹೊರಟೆ ನೀಲೊವ್ನ? ಸೋಫಿಯ ಒಬ್ಬಳೇ ಎಲ್ಲಾ ನೋಡ್ಕೊತಾಳೆ."

ತಾಯಿ ಆತನನ್ನು ದಿಟ್ಟಿಸಿದಳು. ಶರೀರ ಸ್ವಲ್ಪ ಕಂಪಿಸಿತು.

"ನಾನು ರಕ್ತದಿಂದ ತೋಯ್ದು ಹೋಗಿದ್ದೀನಿ," ಎಂದು ತಾಯಿ ವಿಚಿತ್ರವಾಗಿ ನಕ್ಕು ಹೇಳಿದಳು.

ತನ್ನ ಕೊಠಡಿಗೆ ಹೋಗಿ ಉಡುಗೆ ಬದಲಾಯಿಸುತ್ತ ತಾಯಿ, ಈ ಜನರ ಮನಸ್ಸಿನ ನೆಮ್ಮದಿಯನ್ನೂ ಭೀಕರ ವಿಷಯಗಳನ್ನೆಲ್ಲ ಅಷ್ಟು ಸುಲಭವಾಗಿ ಮನಸ್ಸಿನ ಮೂಲೆಗೆ ತಳ್ಳಲು ಅವರಿಗಿದ್ದ ಸಾಮರ್ಥ್ಯವನ್ನೂ ಯೋಚಿಸುತ್ತ ಆಶ್ಚರ್ಯಪಟ್ಟಳು. ಈ ಯೋಚನೆಗಳಿಂದ ಆಕೆಗೂ ಸಮಾಧಾನವೆನಿಸಿತು. ಭೀತಿಯು ಮನದಿಂದ ಓಡಿಹೋಯಿತು. ಗಾಯಗೊಂಡ ಹುಡುಗ ಮಲಗಿದ್ದ ಕೊಠಡಿಯನ್ನು ಆಕೆ ಪ್ರವೇಶಿಸಿದಾಗ ಸೋಫಿಯ, ಹುಡುಗನನ್ನು ಬಾಗಿ ನೋಡುತ್ತ ಹೇಳುತ್ತಿದ್ದಳು:

"ಹುಡುಗಾಟ, ಸಂಗಾತಿ!"

"ನನ್ನಿಂದ ನಿಮಗೆ ತೊಂದರೆಯಾಗ್ತದೆ," ಎಂದು ಆತ ಕ್ಷೀಣನಾಗಿ ಪ್ರತಿಭಟಿಸಿದ.

"ಮಾತು ನಿಲ್ಸಿ, ಅದರಿಂದ ನಿಮಗೆ ಹೆಚ್ಚು ಪ್ರಯೋಜನವಿದೆ."

ಸೋಫಿಯಳ ಭುಜದಮೇಲೆ ತಾಯಿ ತನ್ನ ಕೈಯನ್ನಿಟ್ಟು ಆಕೆಯ ಹಿಂಬದಿಯಲ್ಲಿ ನಿಂತು ಹುಡುಗನನ್ನು ನೋಡಿದಳು. ಗಾಡಿಯಲ್ಲಿ ಬರುತ್ತ ಅಪಾಯಕರವಾದ್ದನ್ನೆಲ್ಲ ಆತ ಗೊಣಗಿ ತನಗೆ ಹೇಗೆ ಹೆದರಿಕೆಯಾಯಿತೆಂದು ತಾಯಿ ವಿವರಿಸುತ್ತ, ಮುಗುಳ್ನಗುತ್ತ ಹುಡುಗನ ನಿಸ್ತೇಜ ಮುಖವನ್ನು ದಿಟ್ಟಿಸಿದಳು. ಇವಾನ್‌ನ ಕಣ್ಣುಗಳು ತಪ್ಪವಾಗಿ ಉರಿಯುತ್ತಿದ್ದುವು. ಆತ ನಾಲಿಗೆ ಚಪ್ಪರಿಸಿ ಲಜ್ಜೆಗೊಂಡು ಹೇಳಿದ.

"ಎಂಥಾ ಮೂರ್ಖ ನಾನು !"

ಸೋಫಿಯ ಆತನ ಹೊದಿಕೆಯನ್ನು ಸರಿಪಡಿಸಿದಳು.

"ಇನ್ನು ನಾವು ಹೋಗ್ತೀವಿ, ನಿದ್ದೆ ಮಾಡಿ," ಎಂದಳು.

ಅವರು ಊಟದ ಮನೆಗೆ ಹೋದರು. ಅಲ್ಲಿ ಆ ದಿನದ ಘಟನೆಗಳನ್ನು ಕುರಿತು ದೀರ್ಘ ಚರ್ಚೆ ನಡೆಯಿತು. ಈ ಸಂಭವವನ್ನು ಆಗಲೇ ಗತಕಾಲದ ಪ್ರಕರಣವೆಂಬಂತೆ ಪರಿಗಣಿಸಿ, ಭವಿಷ್ಯಕಾಲದತ್ತ ಕತ್ತು ಹೊರಳಿಸಿ, ನಾಳೆಯ ಕೆಲಸವನ್ನು ಕುರಿತು ಯೋಚಿಸಿದರು. ಅವರ ಮುಖಗಳು ಬಳಲಿದ್ದವು. ಆದರೆ ವಿಚಾರಗಳಲ್ಲಿ ಬಲವಿತ್ತು. ತಮ್ಮ ಕೆಲಸದ ವಿಷಯ ಬಂದಾಗ ಅದನ್ನು ಕುರಿತಾದ ಅತೃಪ್ತಿಯನ್ನು ಅವರು ಬಚ್ಚಿಡಲಿಲ್ಲ. ಡಾಕ್ಟರು ಕುರ್ಚಿಯಮೇಲೆ, ಕುಳಿತಲ್ಲೇ ಕೂತಿರಲಾರದೆ ಚಲಿಸುತ್ತ, ತನ್ನ ಎತ್ತರದ ತೀಕ್ಷ್ಣ ಧ್ವನಿಯನ್ನು ಮೃದುಗೊಳಿಸಲೆತ್ನಿಸುತ್ತಾ ಆತ ಹೇಳಿದ:

"ಪ್ರಚಾರ, ಪ್ರಚಾರ. ಕೇವಲ ಪ್ರಚಾರ ಸಾಲದು. ಯುವಕೂಲಿಕಾರರು ಹೇಳ್ತಿರೋದು ಸರಿ. ನಮ್ಮ ಚಟುವಟಿಕೆಗಳನ್ನ ನಾವು ವಿಸ್ತಾರಗೊಳಿಸ್ಬೇಕು. ನಾನ್ಹೇಳ್ತೀನಿ ಕೇಳಿ. ಕೆಲಸಗಾರರು ಅನ್ನಿರೋದು ಸರಿ !"

ನಿಕೊಲಾಯ್ ಹುಬ್ಬು ಗಂಟಿಕ್ಕಿ ಡಾಕ್ಟರನ ಧ್ವನಿಯಲ್ಲೇ ತಾನೂ ಮಾತನಾಡಿದ:

"ಸಾಹಿತ್ಯ ಸಾಕಷ್ಟು ಇಲ್ಲಾಂತ ನಾವು ಪ್ರತಿಯೊಬ್ಬರಿಂದಲೂ ದೂರು ಕೇಳ್ತೀವಿ. ಯೋಗ್ಯವಾದ ಒಂದು ಮುದ್ರಣಾಲಯ ಆರಂಭಿಸೋದು ನಮ್ಮಿಂದ ಇನ್ನೂ ಆಗಿಲ್ಲ. ಲುದ್ಮಿಲ ದುಡಿದೂ ದುಡಿದೂ ಸುಸ್ತಾಗ್ತಿದ್ದಾಳೆ. ಸಹಾಯಕ್ಕೆ ಯಾರನ್ನಾದರೂ ಕೊಡದೇಹೋದರೆ ಅವಳು ಕಾಹಿಲೆ ಬೀಳೋದು ಖಂಡಿತ."

"ವೆಸೊವ್‌ಶ್ಚಿಕೋವ್‌ನ್ನು ಸಹಾಯಕ್ಕೆ ಕೊಟ್ಟರಾಗ್ದೆ ?" ಎಂದು ಸೋಫಿಯ ಕೇಳಿದಳು.

"ಅವನು ಶಹರದಲ್ಲಿ ವಾಸಮಾಡೋ ಹಾಗಿಲ್ಲ. ಹೊಸ ಮುದ್ರಣಾಲಯ ಸಿದ್ಧವಾದಾಗ ಮಾತ್ರ ಅವನು ಕೆಲಸ ಶುರುಮಾಡ್ಬಹುದು. ಆದರೆ ಅದಕ್ಕೆ ಅವನಲ್ಲದೆ ನಮಗಿನ್ನೊಬ್ಬ ಹೊಸಬ ಬೇಕೇಬೇಕು."

"ನಾನು ಸಾಲ್ದೆ ?" ಎಂದು ತಾಯಿ ಮೆಲ್ಲನೆ ಕೇಳಿದಳು.

ಆ ಮೂವರೂ ಮಾತನಾಡದೆ ಕ್ಷಣಕಾಲ ತಾಯಿಯತ್ತ ನೋಡಿದರು.

"ಅದೊಳ್ಳೆಯ ವಿಚಾರ !" ಎಂದು ಸೋಫಿಯ ಉದ್ಗರಿಸಿದಳು.

ನಿಕೊಲಾಯ್ ಒಣಸ್ವರದಲ್ಲಿ ಹೇಳಿದ:

"ಅದು ನಿಮ್ಮಿಂದಾಗದಷ್ಟು ಕಷ್ಟದ ಕೆಲಸ, ನೀಲೊವ್ನ. ನೀವು ಶಹರದ ಹೊರಗೆ ವಾಸಮಾಡ್ಬೇಕಾಗುತ್ತೆ. ಇದರಿಂದ ನೀವು ಪಾವೆಲ್‌ನ ನೋಡೋಕಾಗೋದಿಲ್ಲ. ಅಲ್ಲದೆ...."

ನಿಟ್ಟುಸಿರು ಬಿಡುತ್ತ ತಾಯಿಯೆಂದಳು:

"ನಾನು ದೂರ ಹೋಗೋದ್ರಿಂದ ಪಾವೆಲ್‌ಗೇನೂ ಕಷ್ಟವಾಗದು. ಅಲ್ದೆ, ನಿಜ ಹೇಳೋದಾದ್ರೆ, ಈ ಭೇಟಿಗಳಿಂದ ನನಗೂ ಏನೂ ಸುಖವಿಲ್ಲ. ಸುಮ್ನೆ ಹೃದಯ ಬಿರೀತದೆ. ಏನು ಹೇಳೋದಕ್ಕೂ ಅಲ್ಲಿ ಬಿಡೋದಿಲ್ಲ. ಬೆಪ್ಪಳ ಹಾಗೆ ನಾನು ಮಗನನ್ನೆ ನೋಡ್ತಾ ನಿಂತಿದ್ರೆ, ಹೇಳಬಾರದ್ದೇನನ್ನೂ ನಾನು ಹೇಳದ ಹಾಗೆ ನನ್ನ ಬಾಯನ್ನೇ ನೋಡ್ತಾ ಅವರು ನಿಂತಿರ್ತಾರೆ."

ಕಳೆದ ಕೆಲವು ದಿನಗಳ ಘಟನೆಗಳಿಂದ ತಾಯಿಗೆ ತುಂಬಾ ಆಯಾಸವಾಗಿತ್ತು. ಈಗ, ಶಹರದ ಜೀವನದಿಂದ ದೂರವಾಗಿ ವಾಸಿಸುವ ಅವಕಾಶ ದೊರೆತಾಗ, ಆಕೆ ಅತ್ಯಾಶೆಯಿಂದ, ಅದನ್ನು ಬಿಟ್ಟುಬಿಡಬಾರದೆಂದು ಕೈ ಚಾಚಿದಳು.

ಆದರೆ ನಿಕೊಲಾಯ್ ಮಾತುಕತೆಯ ವಿಷಯವನ್ನೇ ಬದಲಾಯಿಸಿದ.

"ನೀನೇನು ಯೋಚಿಸ್ತಾ ಇದ್ದೀಯ?" ಎಂದು ಆತ ಡಾಕ್ಟರತ್ತ ತಿರುಗಿ ಕೇಳಿದ.

ಡಾಕ್ಟರು, ಬಾಗಿದ್ದ ತಲೆಯನ್ನೆತ್ತಿ ಉತ್ಸಾಹಹೀನ ಧ್ವನಿಯಲ್ಲಿ ಉತ್ತರಿಸಿದ:

"ನಾವು ಎಷ್ಟೊಂದು ಕಡಮೆ ಜನ ಇದೀವೀಂತ ಯೋಚಿಸ್ತಿದ್ದೀನಿ! ನಾವು ಹೆಚ್ಚು ಉತ್ಸಾಹದಿಂದ ಕೆಲಸ ಮಾಡ್ಬೇಕು. ತಪ್ಪಿಸ್ಕೊಳ್ಳೋದು ಅಗತ್ಯ ಅಂತ ಪಾವೆಲ್ ಮತ್ತು ಅಂದ್ರೇಯ್‌ನಿಗೆ ನಾವು ಮನಗಾಣಿಸಿಕೊಡ್ಬೇಕು. ಅವರು ಅಮೂಲ್ಯರಾಗಿದ್ದಾರೆ. ಸುಮ್ನೆ ಏನೂ ಮಾಡ್ದೆ ಅಲ್ಲಿ ಕೂತಿರೋದು ಸರಿಯಲ್ಲ."

ನಿಕೊಲಾಯ್ ಹುಬ್ಬೇರಿಸಿ ತಾಯಿಯತ್ತ ನೋಡುತ್ತ ತಲೆಯಾಡಿಸಿದ. ತನ್ನ ಎದುರಲ್ಲಿ ತನ್ನ ಮಗನ ವಿಷಯವಾಗಿ ಮಾತನಾಡುವುದು ಅವರಿಗೆ ಕಷ್ಟವಾಗುತ್ತಿದೆಯೆಂದು ತಾಯಿ ಮನಗಂಡಳು. ಶಹರದ ಹೊರಗೆ ದುಡಿಯುವ ತನ್ನ ಬಯಕೆಯನ್ನು ಈ ಜನರು ಕಡೆಗಣಿಸಿದರಲ್ಲಾ ಎಂಬ ನೋವನ್ನು ಹೊತ್ತು, ತಾಯಿ ಆ ಕೊಠಡಿಯಿಂದೆದ್ದು ಹೊರಹೋದಳು. ಆಕೆ ಹಾಸಿಗೆಯ ಮೇಲೆ ಮಲಗಿ, ಕಣ್ಣು ತೆರೆದು, ಮೃದುವಾದ ಅಸ್ಪಷ್ಟವಾದ ಸ್ವರಗಳಿಗೆ ಕಿವಿಗೊಡುತ್ತ, ಮತ್ತೊಮ್ಮೆ ಭೀತಿಯ ಭಾವನೆಗೆ ಬಲಿಯಾದಳು.

ಆ ದಿನವೆಲ್ಲ ಮಬ್ಬಾಗಿ ಅರ್ಥವಾಗದೆ ಉಳಿದಿತ್ತು. ಮುಂದೊದಗುವ ಗಂಡಾಂತರದಿಂದ ತುಂಬಿತ್ತು. ಆದರೆ ಅದನ್ನು ಕುರಿತು ಯೋಚಿಸಲು ಆಕೆ ಅಪೇಕ್ಷಿಸಲಿಲ್ಲ. ತನ್ನನ್ನು ಗೊಂದಲಕ್ಕೀಡುಮಾಡಿದ ವಿಚಾರಗಳನ್ನು ಮನಸ್ಸಿನಿಂದ ಹೊರತಳ್ಳುತ್ತ ಆಕೆ, ತನ್ನ ಗಮನವನ್ನು ಪಾವೆಲ್‌ನ ಮೇಲೆಯೇ ನೆಟ್ಟಳು. ಆತ ಸೆರೆಮನೆಯಿಂದ ಹೊರಬರುವುದನ್ನು ನೋಡುವ ಆತುರ ತಾಯಿಗಿತ್ತು. ಆದರೆ ಜೊತೆಯಲ್ಲೇ ಭಯವೂ ಇತ್ತು. ತನ್ನ ಸುತ್ತಮುತ್ತಲಿನ ಘಟನೆಗಳೆಲ್ಲ, ಯಾವುದೋ ತೀಕ್ಷ್ಣ ಘರ್ಷಣೆಯತ್ತ ಮುಂದು ಮುಂದಕ್ಕೆ ಧಾವಿಸಿದಂತೆ ತಾಯಿಗೆ ತೋರಿತು. ಜನರ ಮೌನದ ಸಹನೆ

ಕಳೆದು ಕಾತರಗೊಂಡು ಕಾಯುವ ಸ್ಥಿತಿ ಬಂದಿತ್ತು. ಅವರ ಕ್ಷೋಭೆ ಹೆಚ್ಚಿರುವುದು ಸ್ಪಷ್ಟವಾಗಿತ್ತು. ಪ್ರತಿಯೊಬ್ಬರೂ ತೀಕ್ಷ್ಣವಾಗಿಯೇ ಮಾತನಾಡುತ್ತಿದ್ದರು. ಎಲ್ಲೆಲ್ಲೂ ಅಶಾಂತಿಯ ಉಸಿರಾಟವಿತ್ತು. ಪ್ರತಿಯೊಂದು ಕರಪತ್ರವೂ ಪೇಟೆಯಲ್ಲಿ, ಅಂಗಡಿಗಳಲ್ಲಿ, ಸೇವಕರ ನಡುವೆ, ಕುಶಲ ಕೆಲಸಗಾರರ ನಡುವೆ, ಗಾಢವಾದ ಚರ್ಚೆಯನ್ನುಂಟುಮಾಡು ತ್ತಿತ್ತು. ಪ್ರತಿಯೊಂದು ದಸ್ತಗಿರಿಯಾದಾಗಲೆಲ್ಲ ಅದರ ಹಿಂದೆ, ಅದಕ್ಕೆ ಕಾರಣವೇನೆಂದು ಭಯಗೊಂಡ ಗೊಂದಲಕ್ಕೀಡಾದ ಕೆಲವೊಮ್ಮೆ ಉದ್ವೇಗದ ಮಾತುಗಳು ಕೇಳಿಬರು ತ್ತಿದ್ದವು. ಬಂಡಾಯ, ಸಮಾಜವಾದಿಗಳು, ರಾಜಕೀಯ – ಈ ಪದಗಳೆಲ್ಲ ಹಿಂದೆ ತಾಯಿಯನ್ನು ಎಷ್ಟೋ ಭೀತಿಗೆ ಈಡುಮಾಡಿದ್ದವು. ಆದರೆ ಈಗ ಜನಸಾಮಾನ್ಯರು ಹೆಚ್ಚುಹೆಚ್ಚಾಗಿ ಆ ಪದಗಳನ್ನು ಉಪಯೋಗಿಸುತ್ತಿದ್ದುದನ್ನು ತಾಯಿ ಕಂಡಳು. ಯಾರಾದರೂ ವ್ಯಂಗ್ಯವಾಗಿ ಆ ಪದಗಳನ್ನು ಉಚ್ಚರಿಸಿದರೆ, ಆ ವ್ಯಂಗ್ಯದ ಹಿಂದೆ ಸ್ಪಷ್ಟವಾದ ಕುತೂಹಲವಿತ್ತು. ದ್ವೇಷದಿಂದ ಉಚ್ಚರಿಸಿದರೆ, ಆ ದ್ವೇಷದ ಹಿಂದೆ ಭೀತಿ ಕಾಣಿಸುತ್ತಿತ್ತು. ವಿಚಾರಮಗ್ನರಾಗಿ ಯಾರಾದರೂ ಉಚ್ಚರಿಸಿದರೆ, ಆ ವಿಚಾರ ಆಸೆಯನ್ನಾಗಲೀ ಬೆದರಿಕೆಯನ್ನಾಗಲೀ ಸೂಚಿಸುತ್ತಿತ್ತು. ಚಲಿಸದೆ ನಿಂತಿದ್ದ ಕಗ್ಗತ್ತಲ ಜೀವನನೀರಿನ ಮೇಲೆ ಅತೃಪ್ತಿಯ ವಿಶಾಲ ವೃತ್ತಗಳು ಮೆಲ್ಲನೆ ಹೆಚ್ಚು ವಿಸ್ತಾರ ವಾದುವು. ತೂಕಡಿಸುತ್ತಿದ್ದ ಯೋಚನೆಗಳು ಎಚ್ಚರಗೊಳ್ಳತೊಡಗಿದುವು. ಯಾವಾಗಲೂ ದಿನದ ಘಟನೆಗಳನ್ನೆಲ್ಲ ಸಾಮಾನ್ಯವಾಗಿ ಶಾಂತವಾಗಿ ಸ್ವೀಕರಿಸುವ ಪ್ರವೃತ್ತಿ ಹೊಯ್ದಾ ಡಿತು. ಇದನ್ನು ಬೇರೆ ಜನರಿಗಿಂತಲೂ ಹೆಚ್ಚು ಸ್ಪಷ್ಟವಾಗಿ ನೋಡಲು ಆಕೆ ಸಮರ್ಥ ಳಾಗಿದ್ದಳು. ಯಾಕೆಂದರೆ, ಬದುಕಿನ ಗಂಭೀರ ಮುಖಚರ್ಯೆಯ ಜ್ಞಾನ ಅವರಿಗಿಂತ ಹೆಚ್ಚಾಗಿ ಆಕೆಗಿತ್ತು. ಈಗ ಯೋಚನೆಯ ಕ್ಷೋಭೆಯ ಗೆರೆಗಳು ಕಾಣಿಸಿದಾಗ ಆಕೆಗೆ ಸಂತೋಷ, ಭಯ ಎರಡೂ ಆದುವು. ಇದರಲ್ಲಿ ತನ್ನ ಮಗನ ಕೈವಾಡವೂ ಇದ್ದು ದರಿಂದ ಆಕೆಗೆ ಸಂತೋಷವಾಯಿತು. ಆತ ಸೆರೆಮನೆಯಿಂದ ತಪ್ಪಿಸಿಕೊಂಡರೆ ಎಲ್ಲರಿ ಗಿಂತ ಮುಂದಾಗಿ ಅತ್ಯಂತ ಅಪಾಯದ ಸ್ಥಿತಿಯಲ್ಲಿ ಕಾಲಿರಿಸುವನೆಂಬುದು ಗೊತ್ತಿ ದ್ದುದರಿಂದ ಆಕೆಗೆ ಭಯವಾಯಿತು. ಹಾಗೆ ಅತ ನಾಶವಾಗುವನೆಂಬುದು ಸ್ಪಷ್ಟ ವಾಗಿತ್ತು.

೧೪

ಒಂದು ಮಧ್ಯಾಹ್ನ, ಸೆರೆಮನೆಯ ಕಛೇರಿಯಲ್ಲಿ ಪಾವೆಲ್‌ಗೆದುರು, ತೇವ ಮಯವಾದ ಕಣ್ಣುಗಳಿಂದ ಆತನ ಗಡ್ಡ ತುಂಬಿದ ಮುಖವನ್ನೆ ನೋಡುತ್ತ, ತಾಯಿ ಕುಳಿತಳು. ಆಕೆಯ ಬೆರಳುಗಳ ನಡುವೆ ಮುದುಡಿಕೊಂಡಿದ್ದ ಚೀಟಿಯಿತ್ತು. ಅದನ್ನು ಮಗನಿಗೆ ಕೊಡುವ ಅವಕಾಶವನ್ನು ತಾಯಿ ಕಾಯುತ್ತಿದ್ದಳು.

"ನಾನು ಚೆನ್ನಾಗಿದ್ದೀನಿ. ಎಲ್ರೂ ಚೆನ್ನಾಗಿದ್ದಾರೆ. ನೀನು ಹ್ಯಾಗಿದೀಯಾ?" ಎಂದು ಆತ ಮೃದುವಾಗಿ ಕೇಳಿದ.

"ಚೆನ್ನಾಗಿದೀನಿ. ಯೆಗೋರ್ ಇವಾನೊವಿಚ್ ತೀರ್ಕೊಂಡ" ಎಂದು ತಾಯಿ ಯಾಂತ್ರಿಕವಾಗಿ ಉತ್ತರಿಸಿದಳು.

"ಹೌದೆ?" ಎಂದು ಪಾವೆಲ್ ಉದ್ಗರಿಸಿದ. ನಿಧಾನವಾಗಿ ಆತನ ತಲೆ ಕೆಳಕ್ಕೆ ಬಾಗಿತು.

"ಶವಸಂಸ್ಕಾರದ ಸಮಯದಲ್ಲಿ ಪೋಲೀಸರು ಜಗಳಕಾದರು. ಒಬ್ಬನನ್ನ ದಸ್ತಗಿರಿ ಮಾಡಿದ್ರು" ಎಂದು ತಾಯಿ ಸ್ವರ ಬದಲಾಯಿಸದೆಯೆ ಮುಂದುವರಿದಳು. ಸೆರೆಮನೆಯ ಉಪ ಮುಖ್ಯಾಧಿಕಾರಿ, ನಾಲಿಗೆ ಚಪ್ಪರಿಸಿ ಕೋಪಾವಿಷ್ಟನಾಗಿ ಹೌಹಾರಿ ಎದ್ದ.

"ಅಂಥಾದ್ದನ್ನು ಹೇಳೋದು ನಿಷಿದ್ಧ ಅಂತ ನಿನಗೆ ಗೊತ್ತಿಲ್ವೆ? ಇಲ್ಲಿ ರಾಜ ಕೀಯ ಮಾತಾಡ್ಕೂಡ್ದು !"

ತಾಯಿ ತಾನೂ ಎದ್ದು, ಮುಗ್ಧೆಯಂತೆ, ಸ್ವರದಲ್ಲಿ ಅಪರಾಧದ ಛಾಯೆಯನ್ನು ತೋರಿಸುತ್ತ, ಅಂದಳು:

"ನಾನು ಮಾತಾಡಿದ್ದು ರಾಜಕೀಯವಲ್ಲ – ಕಾದಾಟದ ವಿಷಯ. ಅವರು ಜಗಳವಾಡಿದ್ದು ನಿಜ ತಾನೆ. ಅವರು ಒಬ್ಬನ ತಲೆಕೂಡಾ ಜಜ್ಜಿದ್ರು."

"ಎಲ್ಲಾ ಒಂದೇ. ನೀನು ಸುಮ್ನಿರ್ಬೇಕು. ಅಂದರೆ, ವೈಯಕ್ತಿಕವಾಗಿ ನಿನಗೆ ಸಂಬಂಧಿಸದ ವಿಷಯ ಮಾತಾಡ್ಬಾರದು. ವೈಯಕ್ತಿಕ ಅಂದರೆ, ಸಾಮಾನ್ಯವಾಗಿ ನಿನ್ನ ಕುಟುಂಬ, ಮನೆ, ಅಷ್ಟೆ."

ತಾನು ಮಾತಿನಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಿದ್ದುದನ್ನು ಮನಗಂಡು ಆತ, ಮತ್ತೊಮ್ಮೆ ಮೇಜಿನ ಬಳಿ ಕುಳಿತು, ಯಾವುದೋ ಹಾಳೆಗಳನ್ನು ಮಗುಚತೊಡಗಿದ.

"ಇಂಥಾದ್ದಕ್ಕೆಲ್ಲಾ ಜವಾಬ್ದಾರನಾಗೋದು ನಾನು," ಎಂದು ಆತ ಆಯಾಸ ದಿಂದ, ಮಾತು ಸೇರಿಸಿದ.

ಆತನ ಮೇಲಿನ ದೃಷ್ಟಿಯನ್ನು ತೆಗೆಯದೆಯೇ ತಾಯಿ ಚೀಟಿಯನ್ನು ಪಾವೆಲ್‌ನ ಕೈಗೆ ತುರುಕಿದಳು. ಆಮೇಲೆ ಆಕೆ ಸಮಾಧಾನದ ನಿಟ್ಟುಸಿರುಬಿಟ್ಟಳು.

"ಯಾವ ವಿಷಯ ಮಾತಾಡ್ಬಹುದು ಅನ್ನೋದೇ ನನಗೆ ಅರ್ಥವಾಗೋದಿಲ್ಲ," ಎಂದಳು ತಾಯಿ.

ಪಾವೆಲ್ ನಗುತ್ತ, "ನನಗೂ ಅರ್ಥವಾಗೋದಿಲ್ಲ" ಎಂದ.

ಅಧಿಕಾರಿ ಕೋಪಗೊಂಡು ಹೇಳಿದ:

"ಹಾಗಾದರೆ ಇಲ್ಲಿಗೆ ಬರೋದರಲ್ಲೇ ಅರ್ಥವಿಲ್ಲ. ಏನು ಮಾತಾಡ್ಬೇಕೂಂತ ತಿಳೀದೇ ಇದ್ರೂ ಇಲ್ಲಿಗೆ ಬರೋದು, ಬಂದು ಜನರಿಗೆ ತೊಂದರೆ ಕೊಡೋದು...."

"ವಿಚಾರಣೆ ಬೇಗನೆ ಶುರುವಾಗುತ್ತೇನು?" ಎಂದು ತಾಯಿ ಕೇಳಿದಳು.

"ಪ್ರಾಸಿಕ್ಯೂಟರು ಕೆಲವು ದಿವಸಗಳ ಕೆಳಗೆ ಬಂದಿದ್ರು. ಬೇಗ್ನೆ ಶುರುವಾಗ್ಬ ಹುದೂಂತಂದ್ರು...."

ಹೀಗೆ ಕ್ಷುಲ್ಲಕ ಅರ್ಥವಿಲ್ಲದ ಮಾತುಗಳ ವಿನಿಮಯವನ್ನು ಅವರು ನಡೆಸಿದರು. ಪಾವೆಲ್ ಮೃದುವಾದ ಪ್ರೀತಿಯ ದೃಷ್ಟಿಯಿಂದ ತನ್ನನ್ನು ನೋಡುತ್ತಿದ್ದುದನ್ನು ತಾಯಿ ಕಂಡಳು. ಆತ ಎಂದಿನಂತೆಯೆ ಶಾಂತನಾಗಿದ್ದ. ಕೈಗಳು ಬೆಳ್ಳಗಾಗಿದ್ದುವೇ ಹೊರತು, ಹೆಚ್ಚು ವಯಸ್ಸಾದವನಂತೆ ಕಾಣಿಸುತ್ತಿದ್ದ ಗಡ್ಡವಿತ್ತೇ ಹೊರತು, ಆತ ಬದಲಾಗಿರಲಿಲ್ಲ. ಆತನಿಗೆ ಸಂತೋಷವಾಗುವಂತಾದ್ದೇನಾದರೂ ಹೇಳಬೇಕೆಂದು ತಾಯಿಗೆ ಅಪೇಕ್ಷೆಯಾಯಿತು. ನಿಕೊಲಾಯ್ ವೆಸೊವ್‌ಶ್ಚಿಕೋವ್‌ನ ವಿಷಯ ಆತನಿಗೆ ತಿಳಿದಿರಲಿಲ್ಲ. ಆದುದರಿಂದ ಆಕೆ, ಸಾಮಾನ್ಯ ವಿಷಯಗಳನ್ನು ಕುರಿತು ಮಾತನಾಡುತ್ತಿದ್ದ ಸ್ವರವನ್ನು ಬದಲಿಸದೆಯೇ, ಮುಂದುವರಿಸಿದಳು:

"ಮೊನ್ನೆ ದಿವಸ ನಿನ್ನ ಅಳಿಯನ್ನ ನೋಡ್ದೆ...."

ಪಾವೆಲ್ ಮೌನವಾಗಿ, ವಿಚಾರಿಸುವ ದೃಷ್ಟಿಯಿಂದ, ಆಕೆಯ ಕಣ್ಣುಗಳನ್ನು ಶೋಧಿಸಿದ. ತಾಯಿ, ವೆಸೊವ್‌ಶ್ಚಿಕೋವ್‌ನ ಮುಖದ ಮೇಲಿನ ಸಿಡುಬಿನ ಕಲೆಗಳು ಮಗನಿಗೆ ನೆನಪಾಗುವಂತೆ, ತನ್ನ ಕೆನ್ನೆಯ ಮೇಲೆ ಬೆರಳಿಟ್ಟು ತಟ್ಟಿದಳು.

"ಹುಡುಗ ಚೆನ್ನಾಗಿಯೇ ಇದ್ದಾನೆ. ಬೇಗ್ನೆ ಕೆಲ್ಸ ಸಿಗತ್ತೆ."

ಮಗನಿಗೆ ಅರ್ಥವಾಯಿತು. ಆತ ನಗುವ ಕಣ್ಣುಗಳಿಂದ ತಾಯಿಯನ್ನು ನೋಡುತ್ತ ತಲೆದೂಗಿದ.

"ಭೇಷ್."

"ಹುಂ. ಇಷ್ಟೇ ಅಂತ ಕಾಣುತ್ತೆ," ಎಂದು ತಾಯಿ, ತನ್ನ ಬಗೆಗೆ ತಾನೇ ತೃಪ್ತಿಪಡುತ್ತಾ, ಮಗನಿಗಾದ ಸಂತೋಷದಿಂದ ಪುಲಕಿತಳಾಗುತ್ತಾ, ಮಾತು ಮುಗಿಸಿದಳು.

ತಾಯಿ ಹೊರಟು ನಿಂತಾಗ ಪಾವೆಲ್, ಆಕೆಯ ಕೈಯನ್ನು ಬಿಗಿಯಾಗಿ ಅದುಮಿದ.

"ಉಪಕಾರವಾಯ್ತು, ಅಮ್ಮಾ."

ತಮ್ಮ ಹೃದಯಗಳು ಅಷ್ಟೊಂದು ಸಮೀಪವಾಗಿದ್ದುದನ್ನು ಕಂಡ ತಾಯಿಗೆ ಸಂತೋಷದಿಂದ ಮತ್ತೇರಿತು. ಮಗನಿಗೆ ಉತ್ತರಕೊಡಲು ಪದಗಳೇ ದೊರೆಯದೆ ತಾಯಿ, ಮೌನವಾಗಿ ಆತನ ಕೈಯನ್ನು ಬಿಗಿಯಾಗಿ ಹಿಡಿದಳು.

ತಾಯಿ ಮನೆಗೆ ಮರಳಿದಾಗ, ಸಾಷ ತನಗಾಗಿ ಕಾದಿದ್ದುದನ್ನು ಕಂಡಳು. ಆ ಹುಡುಗಿ ಸಾಮಾನ್ಯವಾಗಿ, ತಾಯಿ ಪಾವೆಲ್‌ನನ್ನು ನೋಡುವ ದಿನಗಳಲ್ಲೆಲ್ಲಾ ಮನೆಗೆ ಬರುತ್ತಿದ್ದಳು. ಹಾಗೆ ಬಂದಾಗಲೂ, ಆಕೆ ಎಂದೂ ಪಾವೆಲ್‌ನ ವಿಷಯ ಪ್ರಸ್ತಾಪಿಸುತ್ತಿರಲಿಲ್ಲ. ಆದರೆ ತಾಯಿಯೇ ಆತನ ವಿಷಯ ಏನನ್ನೂ ಹೇಳದೆ ಇದ್ದರೆ, ದೀರ್ಘ ಕಾಲ ತಾಯಿಯ ಕಣ್ಣುಗಳನ್ನೇ ನೋಡಿ ಸಾಷ ತನ್ನ ಕುತೂಹಲವನ್ನು ಪರಿಹರಿಸಿಕೊಳ್ಳುತ್ತಿದ್ದಳು. ಆದರೆ ಈ ದಿನ, ಕಾತರದ ಪ್ರಶ್ನೆಯೊಡನೆಯೇ ತಾಯಿಯನ್ನಾಕೆ ಇದಿರ್ಗೊಂಡಳು:

"ಆತ ಹ್ಯಾಗಿದ್ದಾನೆ?"

"ಚೆನ್ನಾಗಿದ್ದಾನೆ."

"ಅವನಿಗೆ ಚೀಟಿ ಕೊಟ್ಟಿರಾ?"

"ಓಹೋ. ಉಪಾಯವಾಗಿ ಕೊಟ್ಬಿಟ್ಟೆ...."

"ಓದಿದ್ನೆ?"

"ಅಲ್ಲೆ? ಹ್ಯಾಗೆ ಓದೋಕಾಗುತ್ತೆ?"

"ಹೌದು. ಮರೆತೆ," ಎಂದು ಹುಡುಗಿ ಮೆಲ್ಲನೆ ಹೇಳಿದಳು. "ನಾವು ಇನ್ನೊಂದು ವಾರ ಕಾಯ್ಬೇಕು – ಇಡೀ ಒಂದು ವಾರ! ಆತ ಒಪ್ತಾನೆ ಅಂತೀರಾ?"

ಸಾಷ ಹುಬ್ಬೇರಿಸಿ ತಾಯಿಯನ್ನೆ ನೆಟ್ಟ ದೃಷ್ಟಿಯಿಂದ ನೋಡಿದಳು:

"ನಾನು ಹ್ಯಾಗೆ ಹೇಳ್ಲಿ?" ಎನ್ನುತ್ತ ತಾಯಿ ಯೋಚಿಸಿ, ಅಂದಳು: "ಅಪಾಯವೇನೂ ಇಲ್ಲವಾದರೆ ಯಾಕೆ ಒಪ್ಬಾರ್ದು?"

ಸಾಷ ತಲೆ ಕುಣಿಸಿ ಕೂದಲನ್ನು ಸರಿಪಡಿಸಿದಳು.

"ಕಾಹಿಲೆಯವನಿಗೆ ಏನು ಕೊಡ್ಬಹುದೂಂತ ನಿಮಗೆ ಗೊತ್ತೆ? ಅವನಿಗೆ ಹಸಿವೆಯಾಗಿದೆ," ಎಂದಳು ಸಾಷ.

"ಏನು ಬೇಕಾದರೂ ತಿನ್ಬಹುದು. ಒಂದ್ನಿಮಿಷ ತಡಿ.... ತರ್ತೀನಿ...."

ತಾಯಿ ಅಡುಗೆ ಮನೆಯೊಳಕ್ಕೆ ಹೋದಾಗ, ಸಾಷ ಕೂಡಾ ಆಕೆಯನ್ನೇ ಮೆಲ್ಲನೆ ಹಿಂಬಾಲಿಸಿದಳು.

"ನಾನು ಸಹಾಯ ಮಾಡ್ಲೆ?"

"ಓ ಬೇಡ!"

ತಾಯಿ ಒಲೆಯ ಮೇಲ್ಗಡೆಯಿದ್ದ ಒಂದು ಪಾತ್ರೆಯನ್ನೆತ್ತಿಕೊಂಡಳು.

"ತಾಳಿ...." ಎಂದಳು ಸಾಷ ಮೆಲುಧ್ವನಿಯಲ್ಲಿ.

ಆಕೆಯ ಮುಖ ವಿವರ್ಣವಾಯಿತು. ಕಣ್ಣುಗಳು ನೋವಿನಿಂದ ಹನಿಯಾಡಿದುವು. ನಡುಗುತ್ತಿದ್ದ ತುಟಿಗಳೆಡೆಯಿಂದ ಆಕೆ ಅವಸರವಾಗಿ ಪಿಸುಮಾತನಾಡಿದಳು:

"ನಿಮ್ಮನ್ನ ಕೇಳ್ಬೇಕೂಂತ ಬಂದೆ. ಅವನು ಒಪ್ಪೋದಿಲ್ಲ, ನನಗೆ ಗೊತ್ತು. ನೀವು ಹ್ಯಾಗಾದರೂ ಮಾಡಿ ಒಪ್ಪಿಸ್ಬೇಕೂಂತ ಬೇಡ್ಕೋತೀನಿ! ಆತ ಅಗತ್ಯವಾಗಿ ಇಲ್ಲಿ ಬೇಕಾಗಿದ್ದಾನೆ. ಇದು ನಮ್ಮ ಮಹಾಧ್ಯೇಯಕ್ಕೋಸ್ಕರ ಅಂತ ಹೇಳಿ. ಅವನ ಆರೋಗ್ಯದ ವಿಷಯವಾಗಿ ನನಗೆ ಚಿಂತೆಯಾಗಿದೇಂತ ಹೇಳಿ. ನಿಮಗೇ ಕಾಣ್ತಿದೆಯಲ್ಲ – ಇನ್ನೂ ವಿಚಾರಣೆಯ ದಿನ ಕೂಡಾ ಗೊತ್ತುಮಾಡಿಲ್ಲ...."

ಆಕೆ ಪ್ರಯಾಸಪಡುತ್ತ ಮಾತನಾಡುತ್ತಿದ್ದುದು ಸ್ಪಷ್ಟವಾಗಿತ್ತು. ನೇರವಾಗಿ ನಿಂತುಕೊಂಡು, ಮೂಲೆಯನ್ನೆ ದಿಟ್ಟಿಸುತ್ತ, ಚಂಚಲ ಧ್ವನಿಯಲ್ಲಿ ಆಕೆ ಮಾತನಾಡಿದಳು. ಆಯಾಸದಿಂದ ಕಣ್ಣುಗಳ ಎವೆಗಳನ್ನು ಕೆಳಗಿಳಿಸಿ, ತುಟಿಯನ್ನು ಕಚ್ಚಿದಳು. ಆಕೆಯ ಬಿಗಿದ ಮುಷ್ಟಿಗಳು ಮಾಡುತ್ತಿದ್ದ ಸದ್ದು ತಾಯಿಗೆ ಕೇಳಿಸುತ್ತಿತ್ತು.

ಸಾಷಳ ಭಾವೋದ್ರೇಕದಿಂದ ತಾಯಿಗೆ ಕಸಿವಿಸಿಯಾಯಿತು. ಸಾಷಳನ್ನು ಅರ್ಥ ಮಾಡಿಕೊಂಡ ತಾಯಿ, ದುಃಖದಿಂದ ಆಕೆಯನ್ನು ತಬ್ಬಿಕೊಂಡಳು.

"ಓ ಮುದ್ದು.... ತನ್ನ ಸ್ವಂತದ ಹೊರತಾಗಿ ಬೇರೆ ಯಾರ ಮಾತೂ ಅವನು ಕೇಳೋದಿಲ್ಲ!" ಎಂದು ತಾಯಿ ಮೃದುವಾಗಿ ಉತ್ತರವಿತ್ತಳು.

ಒಬ್ಬರನ್ನೊಬ್ಬರು ಅಪ್ಪಿಕೊಂಡು ಇಬ್ಬರೂ ಮೌನವಾಗಿದ್ದರು. ಸಾಷ ಮೆಲ್ಲನೆ ಭುಜಗಳ ಮೇಲಿಂದ ತಾಯಿಯ ತೋಳುಗಳನ್ನು ತೆಗೆದು, ಮೈನಡುಗಿಸಿ ಹೇಳಿದಳು:

"ಹೌದು. ನೀವು ಹೇಳೋದು ಸರಿ. ಇದೆಲ್ಲಾ ಮೂರ್ಖತನ.... ಭಾವವಿಕಾರ...."

ಒಮ್ಮೆಲೆ ಆಕೆ ಸರಳವಾಗಿ ಶಾಂತವಾಗಿ ಅಂದಳು:

"ಆಗಲಿ. ರೋಗಿಗೆ ಆಹಾರ ಕೊಡೋಣ."

ಇವಾನ್‌ನ ಹಾಸಿಗೆಯ ಬಳಿ ಕುಳಿತಾಗ "ತಲೆ ನೋಯುತ್ತಿದೆಯೆ?" ಎಂದು ಆಕೆ ಪ್ರೀತಿಯಿಂದ ಕೇಳಿದಳು.

"ಹೆಚ್ಚಿಲ್ಲ. ಪ್ರತಿಯೊಂದೂ ಮಸುಕಾಗಿದೆ, ಅಷ್ಟೆ. ನಿಶ್ಶಕ್ತಿ," ಎಂದು ಇವಾನ್, ಸಂಕೋಚದಿಂದ ಹೊದಿಕೆಯನ್ನು ಗಲ್ಲದವರೆಗೂ ಎಳೆಯುತ್ತ, ಬೆಳಕು ಅತಿಯಾಯಿತೇನೊ ಎಂಬಂತೆ ಕಣ್ಣುಗಳನ್ನು ಕಿರಿದುಗೊಳಿಸುತ್ತ, ಉತ್ತರವಿತ್ತ. ತನ್ನ ಎದುರಲ್ಲಿ ತಿಂಡಿತಿನ್ನಲು ಆತ ಹಿಂತೆಗೆಯುತ್ತಿದ್ದಾನೆಂದು ತಿಳಿದು, ಸಾಷ ಎದ್ದು ಹೊರ ಹೋದಳು. ಇವಾನ್ ಎದ್ದು ಕುಳಿತ. ಆತನ ದೃಷ್ಟಿ ಆಕೆಯನ್ನೇ ಹಿಂಬಾಲಿಸಿತು.

"ಎಂಥ ಸುಂದರಿ!" ಎಂದು ಆತ ಪಿಸುಮಾತಿನಲ್ಲಿ ಹೇಳಿದ.

ಆತನಿಗೆ, ನಗುತ್ತಿದ್ದ ನೀಲಿ ಕಣ್ಣುಗಳಿದ್ದುವು; ದಟ್ಟವಾಗಿದ್ದ ಪುಟ್ಟ ಹಲ್ಲುಗಳಿದ್ದುವು; ಇನ್ನೂ ಬದಲಾಗುತ್ತಲೇ ಇದ್ದ ಸ್ವರವಿತ್ತು.

"ನಿನಗೆಷ್ಟು ವಯಸ್ಸು!" ಎಂದು ತಾಯಿ ಯೋಚಿಸುತ್ತಾ ಕೇಳಿದಳು.

"ಹದಿನೇಳು."

"ನಿನ್ನ ತಾಯ್ತಂದೆ ಎಲ್ಲಿದ್ದಾರೆ?"

"ಹಳ್ಳೀಲಿ. ನಾನು ಹತ್ತು ವರ್ಷದವನಾಗಿದ್ದಾಗಿಂದಲೂ ಇಲ್ಲೇ ಇದ್ದೀನಿ. ಶಾಲೆ ಮುಗಿದ ತಕ್ಷಣ ಶಹರಕ್ಕೆ ಓಡಿ ಬಂದೆ.... ನಿಮ್ಮ ಹೆಸರೇನು, ಸಂಗಾತಿ?"

ಯಾರಾದರೂ ಈ ರೀತಿ ಸಂಬೋಧಿಸಿದಾಗಲೆಲ್ಲಾ ತಾಯಿಗೆ ತಮಾಷೆಯೆನಿಸುತ್ತಿತ್ತು, ಆಕೆಯ ಹೃದಯ ಸ್ಪಂದಿಸುತ್ತಿತ್ತು.

"ಯಾತಕ್ಕೆ ನನ್ನ ಹೆಸರು?" ಎಂದು ತಾಯಿ ಮುಗುಳ್ನಗುತ್ತ ಕೇಳಿದಳು.

ಏನು ಹೇಳಬೇಕೆಂದು ತೋಚದೆ ಹುಡುಗ ಮೌನವಾಗಿದ್ದು ಆ ಬಳಿಕ ವಿವರಿಸಿದ:

"ನಮ್ಮ ಅಭ್ಯಾಸಕೂಟದ ಒಬ್ಬ ವಿದ್ಯಾರ್ಥಿ – ಅಂದರೆ ನಮಗೆ ಪಾಠ ಓದಿ ಹೇಳ್ತಿದ್ದೋರಲ್ಲಿ ಒಬ್ಬ – ಕೆಲಸಗಾರ ಪಾವೆಲ್ ವ್ಲಾಸೊವ್‌ನ ತಾಯಿಯ ವಿಷಯ ನಮಗೆ ಹೇಳಿದ್ದ. ಮೇ ದಿನದ ಪ್ರದರ್ಶನ ನಿಮಗೆ ನೆನಪಿದೆಯೆ?"

ತಾಯಿ ತಲೆದೂಗಿ ಕಿವಿ ನಿಮಿರಿಸಿದಳು.

"ಬಹಿರಂಗವಾಗಿ ನಮ್ಮ ಪಾರ್ಟಿಯ ಬಾವುಟವನ್ನ ಮೊದಲು ಎತ್ತಿ ಹಿಡಿದೋನು ಅವನೇ," ಎಂದು ಹುಡುಗ ಹೆಮ್ಮೆಪಡುತ್ತ ಹೇಳಿದ. ಆ ಹೆಮ್ಮೆ ತಾಯಿಯ ಹೃದಯದಲ್ಲಿ ಪ್ರತಿಧ್ವನಿಸಿತು.

"ನಾನು ಆಗ ಅಲ್ಲಿ ಇರ್ಲಿಲ್ಲ. ನಾವೂ ಒಂದು ಪ್ರದರ್ಶನ ಮಾಡ್ಬೇಕೊಂತಿದ್ವಿ. ಆದರೆ ಅದು ಸಾಧ್ಯವಾಗ್ಲಿಲ್ಲ. ನಾವಿದ್ದದ್ದು ಬಹಳ ಕಡಮೆ ಜನ. ಆದರೆ ಮುಂದಿನ ವರ್ಷ ಮಾಡ್ತೀವಿ ನೋಡಿ!"

ಮುಂದಿನ ಚಿತ್ರವನ್ನು ಕಲ್ಪಿಸಿಕೊಳ್ಳುವ ಉದ್ವೇಗದಲ್ಲಿ ಸರಿಯಾಗಿ ಉಸಿರಾಡುವುದಕ್ಕೂ ಅವನಿಂದ ಆಗಲಿಲ್ಲ.

ಚಮಚವನ್ನು ಬೀಸುತ್ತ ಆತ ಮುಂದುವರಿಸಿದ:

"ಆ ವ್ಲಾಸೊವ್‌ನ ತಾಯಿ ವಿಷಯ ನಾನು ಮಾತಾಡಿದ್ದು. ಅದಾದ ಮೇಲೆ ಆಕೇನೂ ಪಾರ್ಟಿ ಸೇರಿದ್ಲು. ಆಕೆ ಅದ್ಭುತ ವ್ಯಕ್ತೀಂತ ಹೇಳ್ತಾರೆ!"

ತಾಯಿ ಅಗಲವಾಗಿ ಮುಗುಳ್ನಕ್ಕಳು. ಆ ಹುಡುಗನ ಹೊಗಳಿಕೆ ಹಿತಕರವಾಗಿತ್ತು. ಆಕೆಗೆ ಹಿತವೂ ಎನಿಸಿತು, ಸಂಕೋಚವೂ ಆಯಿತು. 'ನಾನೇ ಆ ವ್ಲಾಸೊವ್‌ನ ತಾಯಿ!'... ಎಂದು ಹೇಳಬೇಕೆಂದು ಆಕೆಗೆ ಅಪೇಕ್ಷೆಯಾಯಿತು. ಆದರೆ ಆ ಮಾತುಗಳನ್ನು ತಡೆಹಿಡಿದು, ತನ್ನನ್ನೇ ಮೆಲ್ಲನೆ ಅಣಕಿಸುತ್ತ ತಾಯಿಯೆಂದುಕೊಂಡಳು :

"ಎಂಥ ಹುಚ್ಚು ಮೂರ್ಖಳು ನೀನು!"

ಒಮ್ಮೆಲೆ ಆಕೆ ಹುಡುಗನತ್ತ ಬಾಗಿ ಉದ್ವೇಗಗೊಂಡು ಹೇಳಿದಳು:

"ಇನ್ನೂ ಸ್ವಲ್ಪ ತಿನ್ನು! ನಮ್ಮ ಹೋರಾಟದ ಧ್ಯೇಯಕ್ಕೋಸ್ಕರ ನೀನು ಬೇಗನೆ ಹುಷಾರಾಗ್ಬೇಕು!"

ಹೊರಬಾಗಿಲು ತೆರೆಯಿತು. ತೇವತುಂಬಿದ ಶೀತಲಗಾಳಿ ಒಳಕ್ಕೆ ಬೀಸಿತು. ಮುಖ ಕೆಂಪೇರಿ ಮುಗುಳ್ನಗುತ್ತ ಸೋಫಿಯ ಅಲ್ಲಿ ನಿಂತಿದ್ದುದನ್ನು ತಾಯಿ ಕಂಡಳು.

"ಅಬ್ಬ! ಈ ಗೂಢಚಾರರು ನನ್ನ ಹಿಂದೆಯೇ ಬಂದು ಕಾಡಿಸೋದು ನೋಡಿದ್ರೆ, ನಾನು ಮದುವೆಗೆ ಸಿದ್ಧವಾಗಿರೋ ಆಗರ್ಭ ಶ್ರೀಮಂತಳೂಂತ ಭಾವಿಸ್ಬೇಕು ಯಾರಾದ್ರೂ. ನಾನು ಬೇಗ್ನೆ ಈ ಊರು ಬಿಡ್ಬೇಕು.... ಹುಂ, ಹ್ಯಾಗಿದ್ದೀಯಾ, ಇವಾನ್? ವಾಸಿ ಅನಿಸುತ್ತೊ? ಪಾವೆಲ್‌ನಿಂದ ಏನು ಸುದ್ದಿ, ನೀಲೊವ್ನ? ಸಾಷ ಇಲ್ಲಿದಾಳಾ?"

ತನ್ನ ಬೂದುಗಣ್ಣುಗಳಿಂದ ತಾಯಿಯನ್ನೂ ಹುಡುಗನನ್ನೂ ಮುದ್ದಿಸುತ್ತ ಸಿಗರೇಟು ಹಚ್ಚಿ, ಉತ್ತರ ನಿರೀಕ್ಷಿಸದೇ ಬರೀ ಪ್ರಶ್ನೆಗಳನ್ನು ಸೋಫಿಯ ಕೇಳುತ್ತಿದ್ದಳು.

ಆಕೆಯನ್ನು ನೋಡುತ್ತಿದ್ದಂತೆ ತಾಯಿ ತನ್ನೊಳಗೇ ಮುಗುಳ್ನಕ್ಕು "ಈ ಒಳ್ಳೇ ಜನರಲ್ಲಿ ಒಬ್ಬಳಾಗ್ಹೋಗ್ಬಿಟ್ಟೆ ನಾನು!" ಎಂದುಕೊಂಡಳು.

ಮತ್ತೊಮ್ಮೆ ಇವಾನ್‌ನತ್ತ ಬಾಗಿ ಆಕೆಯೆಂದಳು:

"ಬೇಗ್ನೆ ಹುಷಾರಾಗು, ಮಗೂ!"

....ತಾಯಿ ಅಡುಗೆ ಮನೆಗೆ ಹೊಕ್ಕಾಗ, ಸೋಫಿಯ ಸಾಷಳೊಡನೆ ಮಾತ ನಾಡುತ್ತಿದ್ದುದನ್ನು ಕಂಡಳು.

"ಆಕೆ ಈಗಾಗ್ಲೆ ಮುನ್ನೂರು ಪ್ರತಿ ತಯಾರಿಸಿದ್ದಾಳೆ. ಇದೇ ರೀತಿ ಕೆಲಸ ಮಾಡಿದ್ರೆ ಆಕೆ ಸತ್ತು ಹೋಗೋದೇ ಖಂಡಿತ. ಮಿತಿ ಇಲ್ಲದ ಸಾಹಸ! ಸಾಷ, ಇಂಥ ಜನರ ನಡುವೆ ಇರೋದು, ಅವರ ಸಂಗಾತಿಯಾಗಿ ಅವರ ಜತೇಲಿ ಕೆಲಸ ಮಾಡೋದು, ಎಂಥ ಭಾಗ್ಯ!"

"ಹೌದು," ಎಂದು ಆ ಹುಡುಗಿ ಮೃದುವಾಗಿ ಉತ್ತರವಿತ್ತಳು.

....ಆ ಸಂಜೆ ಚಾ ಕುಡಿಯುತ್ತಿದ್ದಾಗ ಸೋಫಿಯ ತಾಯಿಗೆ ಹೇಳಿದಳು:

"ನೀವು ಹಳ್ಳಿಗೆ ಇನ್ನೊಂದ್ಸಲ ಹೋಗಿ ಬರ್ಬೇಕಾಗುತ್ತೆ, ನೀಲೊವ್ನ."

"ಆಗಲಿ, ಯಾವತ್ತು?"

"ಇನ್ನು ಮೂರು ದಿವಸದೊಳಗೆ ಹೊರಡೋದಕ್ಕಾಗುತ್ತೊ?"

"ಓಹೋ."

"ಈ ಸಲ ನೀವು ಕೋಚ್‌ಗಾಡಿ ತಗೊಂಡು ಬೇರೆ ಹಾದಿ ಹಿಡಿಯುವುದು ವಾಸಿ. ನಿಕೋಲ್‌ಸ್ಕೊಯೆಯ ಮೂಲಕ," ಎಂದು ನಿಕೊಲಾಯ್ ಸಲಹೆ ಮಾಡಿದ. ಆತನ ಹುಬ್ಬುಗಳು ಗಂಟಿಕ್ಕಿ ಮುಖ ಅಪ್ರಸನ್ನವಾಗಿತ್ತು. ಅದರಿಂದ, ಎಂದಿನ ಶಾಂತ ಮುಖಮುದ್ರೆಗೆ ಭಂಗ ಬಂದಿತ್ತು.

"ನಿಕೋಲ್‌ಸ್ಕೊಯೆಯ ಮೂಲಕ ಹೋದರೆ ದೂರವಾಗುತ್ತೆ.... ಅಷ್ಟು ದೂರ ಕೋಚ್‌ಗಾಡಿ ತಗೊಂಡು ಹೋಗೋದೂಂದ್ರೆ...." ಎಂದು ತಾಯಿ ಹೇಳ ತೊಡಗಿದಳು.

ನಿಕೊಲಾಯ್ ನಡುವೆ ಮಾತನಾಡಿದ:

"ನಿಜ ಹೇಳೋದಾದ್ರೆ, ನಾನು ಈ ಪ್ರವಾಸಕ್ಕೆ ವಿರುದ್ಧ. ಅಲ್ಲಿ ಪರಿಸ್ಥಿತಿ ಶಾಂತವಾಗಿಲ್ಲ. ಬಂಧನಗಳಾಗಿವೆ. ಯಾವನೋ ಉಪಾಧ್ಯಾಯನನ್ನ ದಸ್ತಗಿರಿ ಮಾಡಿದಾರಂತೆ. ನಾವು ಹುಷಾರಾಗಿರ್ಬೇಕು. ಸಮಯ ಕಾಯೋದು ಮೇಲು...."

"ನಾವು ಒಂದೇ ಸಮನೆ ಅವರಿಗೆ ಸಾಹಿತ್ಯ ಸರಬರಾಜು ಮಾಡ್ತಿರ್ಬೇಕು," ಎಂದು ಸೋಫಿಯ ಬೆರಳುಗಳಿಂದ ಮೇಜನ್ನು ತಟ್ಟಿ ಹೇಳಿದಳು. ತಾಯಿಯತ್ತ ತಿರುಗಿ, "ಹೋಗೋಕೆ ನಿಮಗೆ ಭಯವೆ, ನೀಲೊವ್ನ?" ಎಂದು ಒಮ್ಮೆಲೆ ಕೇಳಿದಳು.

ತಾಯಿಗೆ ನೋವಾಯಿತು.

"ನನಗೆ ಯಾವತ್ತಾದರೂ ಭಯವಾದ್ದುಂಟೆ? ಮೊದಲ್ನೇ ಸಲ ಹೋದಾಗ್ಲೆ ನನಗೆ ಹೆದರಿಕೆಯಾಗ್ಲಿಲ್ಲ. ಈಗ.... ಒಮ್ಮೆಲೆ...."

ವಾಕ್ಯವನ್ನು ಪೂರ್ತಿಗೊಳಿಸದೆಯೇ ತಾಯಿ ತಲೆ ತಗ್ಗಿಸಿದಳು. ಭಯವಾಗು

ತ್ತದೆಯೆ? ಅನುಕೂಲವಾದೀತೆ? ಇಂಥಿಂಥ ಕೆಲಸ ಮಾಡಲು ಸಾಧ್ಯವಾದೀತೆ? ಎಂದೆಲ್ಲ ಅವರು ತನ್ನನ್ನು ಪ್ರಶ್ನಿಸಿದಾಗ, ಅಪರಿಚಿತನೊಬ್ಬನೊಡನೆ ನೆರವು ಕೇಳಿದ ಹಾಗೆ ತಾಯಿಗೆ ಭಾಸವಾಗುತ್ತಿತ್ತು. ತನ್ನನ್ನು ಬೇರೆಯೇ ಇರಿಸಿ, ತಮ್ಮೊಳಗೆ ಪರಸ್ಪರ ವರ್ತಿಸುವುದಕ್ಕಿಂತ ಭಿನ್ನವಾಗಿ ತನ್ನೊಡನೆ ಅವರು ನಡೆದುಕೊಳ್ಳುತ್ತಿರುವಂತೆ ತಾಯಿಗೆ ತೋರುತ್ತಿತ್ತು.

"ನನಗೆ ಭಯವಾಗುತ್ತಾ ಇಲ್ವಾ ಎಂತ ನೀವು ಯಾಕೆ ಕೇಳ್ಬೇಕು? ನಿಮ್ಮಲ್ಲಿ ಒಬ್ಬರಿಗೊಬ್ಬರು ಹಾಗೆ ಕೇಳೋದಿಲ್ವಲ್ಲ...." ಎಂದು ತಾಯಿ ಕುಗ್ಗಿದ ಧ್ವನಿಯಲ್ಲಿ ಅಂದಳು.

ನಿಕೊಲಾಯ್ ತನ್ನ ಬಗೆಗೇ ಅಸಮಾಧಾನಗೊಳ್ಳುತ್ತ, ಅಕ್ಕನನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತ, ಕನ್ನಡಕವನ್ನು ತೆಗೆದು ಮತ್ತೊಮ್ಮೆ ಹಾಕಿಕೊಂಡ. ಮನಸ್ಸನ್ನು ಕದಡಿದ ಮೌನ ನೆಲೆಸಿದ್ದನ್ನು ಕಂಡು ತಾಯಿಗೆ ಕಸಿವಿಸಿಯಾಯಿತು. ಆಕೆ, ಅಪರಾಧಿನಿಯಂತೆ, ಏನನ್ನೊ ಹೇಳ ಬಯಸುತ್ತ ಮೇಜಿನ ಬಳಿಯಿಂದ ಎದ್ದಳು. ಆದರೆ ಸೋಫಿಯ ಮೃದುವಾಗಿ ಆಕೆಯ ಕೈಯನ್ನೆತ್ತಿಕೊಂಡು ಮೆಲ್ಲನೆ ಹೇಳಿದಳು:

"ನನ್ನನ್ನ ಕ್ಷಮಿಸು. ಇನ್ನು ಯಾವತ್ತೂ ಹಾಗೆ ಕೇಳೊಲ್ಲ."

ಇದನ್ನು ಕೇಳಿ ತಾಯಿಯ ಮುಖದ ಮೇಲೆ ಮುಗುಳ್ನಗೆ ಮೂಡಿತು. ಕೆಲ ನಿಮಿಷಗಳಲ್ಲೇ ಮೂವರೂ, ಕೈಕೊಳ್ಳಬೇಕಾದ ಪ್ರವಾಸವನ್ನು ಕುರಿತಾದ ಆಳವಾದ ಚರ್ಚೆಯಲ್ಲಿ ನಿರತರಾದರು.

೧೫

ಬೆಳಗಿನ ಜಾವದಲ್ಲೇ ತಾಯಿ ಕೋಚ್‌ಗಾಡಿಯಲ್ಲಿ ಕುಳಿತು, ಶರತ್ಕಾಲದ ಮಳೆಯಿಂದ ತೊಯ್ದಿದ್ದ ಹಾದಿಯಮೇಲೆ ಹೊರಟಳು. ತೇವಮಯ ಗಾಳಿ ಬೀಸುತ್ತಿತ್ತು. ಗಾಲಿಗಳಿಗೆ ಸಿಲುಕಿ ಕೆಸರು ಹಾರುತ್ತಿತ್ತು. ಕೋಚ್‌ಗಾಡಿಯವನು ಕುಳಿತಲ್ಲಿಂದಲೇ ತಿರುಗಿ ನೋಡುತ್ತ, ಮೂಗಿನ ಮೂಲಕವೆ ಮಾತನಾಡುವ ಹಾಗೆ ಸ್ವರ ಹೊರಡಿಸುತ್ತ, ತನ್ನ ಕಥೆ ಹೇಳಿದ:

"ನಾನು ಅವನಿಗೆ–ನನ್ನ ಸೋದರನಿಗೆ–ಹೇಳ್ದೆ, ಹಂಚ್ಕೊಂಡು ಬಿಡೋಣಾಂತ! ಪಾಲಾಗೋದು ಶುರುವಾಯ್ತು...."

ಒಮ್ಮೆಲೆ ಆತ ಬಾರುಕೋಲನ್ನೆತ್ತಿ ಎಡಬದಿಯ ಕುದುರೆಗೆ ಹೊಡೆದು ಕೂಗಾಡಿದ:

"ಹೆ ಭರ್ರ್.... ರಾಕ್ಷಸಿಗೆ ಹುಟ್ಟೋನೆ...!"

ಬರಿದಾದ ಹಾದಿಯಮೇಲೆ ದಪ್ಪನೆಯ ಕಾಗೆಗಳು ಆತುರದಿಂದ ನಿಂತಿದ್ದುವು. ಶೀತಲ ಗಾಳಿ ಸುತ್ತಮುತ್ತಲೆಲ್ಲ ಸುಂಯ್‌ಗುಟ್ಟಿತು. ಗಾಳಿಯ ಧಾಳಿಯನ್ನೆದುರಿಸಲು ಕಾಗೆಗಳು ಸಿದ್ಧವಾದುವು. ಆದರೆ ಗಾಳಿ ಅವುಗಳ ಪುಕ್ಕಗಳನ್ನು ಕೆದರಿ ಕಾಲು ತಪ್ಪಿಸಿ

ಮುಂದಕ್ಕೆ ತಳ್ಳಿತು. ಮನಸ್ಸಿಲ್ಲದಿದ್ದರೂ ಕಾಗೆಗಳು ರೆಕ್ಕೆ ಬಡಿಯುತ್ತ ಮತ್ತೊಂದು ಜಾಗಕ್ಕೆ ಹಾರಿಹೋಗಬೇಕಾಯಿತು.

ಕೋಚಿನವನು ತನ್ನ ಕತೆ ಮುಂದುವರಿಸಿದ:

"ಅವನೊ – ನನ್ನ ಪಾಲನ್ನೂ ಕಸಕೊಂಡು ನನ್ನನ್ನ ಬರಿ ಬೆತ್ತಲೆ ಮಾಡ್ದ.... ನೋಡ್ತೀನಿ, ನನ್ನದೂಂತ ಹೇಳೋಕೆ ಒಂದು ಕವಡೆ ಕೂಡಾ ಇಲ್ಲ...."

ಸ್ವಪ್ನದಲ್ಲಿದ್ದ ಹಾಗೆ ತಾಯಿ ಆತನ ಮಾತುಗಳಿಗೆ ಕಿವಿಗೊಟ್ಟಳು. ಕಳೆದ ಕೆಲ ದಿನಗಳ ಘಟನೆಗಳು ಆಕೆಯ ಮನಸ್ಸಿನಲ್ಲಿ ಸಾಲುಗಟ್ಟಿ ಹರಿದುವು. ತಾನೂ ಪ್ರತ್ಯಕ್ಷ ವಾಗಿ ಆ ಎಲ್ಲ ಘಟನೆಗಳಲ್ಲಿ ಭಾಗಿಯಾದುದನ್ನು ತಾಯಿ ಕಂಡಳು. ಮೊದಲಾದರೆ, ಬದುಕು ಎಲ್ಲಿಯೋ ದೂರ ಸೃಷ್ಟಿಯಾಗುತ್ತಿತ್ತು. ಯಾರಿಂದ, ಯಾವುದಕ್ಕೋಸ್ಕರ, ಎಂಬುದು ಒಬ್ಬರಿಗೂ ಗೊತ್ತಿರಲಿಲ್ಲ. ಈಗ ಆ ಬದುಕಿನಲ್ಲೆಷ್ಟೋ ಭಾಗ ಆಕೆಯ ಕಣ್ಣೆದುರಲ್ಲೇ ಸೃಷ್ಟಿಯಾಗುತ್ತಿದೆ. ಆ ಸೃಷ್ಟಿಯ ಕಾರ್ಯದಲ್ಲಿ ಆಕೆಯೂ ಭಾಗಿ ಯಾಗುತ್ತಿದ್ದಳು. ತೃಪ್ತಿಯ ಹಾಗೂ ತನ್ನ ಬಗೆಗೇ ಅವಿಶ್ವಾಸದ, ಗೊಂದಲದ ಹಾಗೂ ಶಾಂತವಾದ ದುಃಖದ ಮಿಶ್ರ ಭಾವನೆಗಳನ್ನು ಇದು, ಆಕೆಯಲ್ಲಿ ಉಂಟುಮಾಡಿತು....

ಸುತ್ತಮುತ್ತಲಿದ್ದುದೆಲ್ಲವೂ ನಿಧಾನವಾಗಿ ಹಿಂದಕ್ಕೆ ಸರಿದುವು. ಬೂದು ಮೋಡ ಗಳು ಒಂದು ಇನ್ನೊಂದನ್ನು ಬೆನ್ನಟ್ಟುತ್ತ ಭಾರವಾಗಿ ಆಕಾಶದಲ್ಲಿ ಓಡಿದುವು. ದಾರಿಯ ಎರಡೂ ಬದಿಗಳಲ್ಲಿದ್ದ ತೊಯ್ದು ಮರಗಳು ತಮ್ಮ ಬರಿದಾದ ಕೊಂಬೆ ಗಳನ್ನು ಬೀಸಿದುವು. ಹೊಲಗಳು ಕಳೆದು ಸಣ್ಣ ಗುಡ್ಡಗಳು ಬಂದುವು. ಕ್ರಮೇಣ ಆ ಗುಡ್ಡಗಳೂ ಅದೃಶ್ಯವಾದುವು.

ಗಾಡಿಯುವನ ಮೂಗುಸ್ವರ, ಗಂಟೆಗಳ ಟಿಂಟಿಣಿ ನಾದ, ತೇವಗೊಂಡ ಗಾಳಿಯ ಸುಂಯ್ ಸುಯ್ಲಾಟ, ಎಲ್ಲವೂ ಬೆರೆತು ಶಕ್ತಿಪೂರ್ಣ ಪ್ರವಾಹವಾಗಿ ಹೊಲಗಳ ಮೇಲಿಂದ ನಿರಂತರವಾಗಿ ಹರಿಯಿತು.

ತನ್ನ ಪೀಠದ ಮೇಲೆ ತೂಗಾಡುತ್ತ ಗಾಡಿಯುವನು ಹೇಳಿದ:

"ಶ್ರೀಮಂತನಿಗೆ ಸ್ವರ್ಗವೂ ಸಾಲದು.... ಹೀಗಾಗಿ ಆತ ನನ್ನನ್ನೂ ಹಿಂಡಿ ಹೊರಹಾಕ್ತಾನೆ.... ಅಧಿಕಾರಿಗಳೆಲ್ಲಾ ಅವನ ಸ್ನೇಹಿತರು...."

ನಿಲ್ದಾಣವನ್ನು ತಲುಪಿದಾಗ ಆತ ಕುದುರೆಗಳನ್ನು ಬಿಚ್ಚಿ, ವಿನಂತಿ ಮಾಡುವ ಧ್ವನಿಯಲ್ಲಿ ತಾಯಿಗೆ ಹೇಳಿದ.

"ಐದು ಕೊಪೆಕ್ ಕೊಡು. ಒಂದಿಷ್ಟು ಕುಡಿದು ಬರ್ತೀನಿ...."

ತಾಯಿ ನಾಣ್ಯವನ್ನು ಕೊಟ್ಟಾಗ ಆತ ಅದನ್ನು ಅಂಗೈಯಲ್ಲಿ ಕುಣಿಸುತ್ತಾ ಅದೇ ಸ್ವರದಲ್ಲಿ ಹೇಳಿದ:

"ಮೂರು ಕೊಪೆಕ್‌ಗೆ ವೋಡ್ಕ ಕುಡೀತೀನಿ; ಇನ್ನೆರಡು ಕೊಪೆಕ್ ಬ್ರೆಡ್ ತಿಂತೀನಿ."

ಮಧ್ಯಾಹ್ನದ ಹೊತ್ತಿಗೆ ತಾಯಿ, ಚಳಿಯಿಂದ ನಡುಗುತ್ತ, ಆಯಾಸಗೊಂಡು, ದೊಡ್ಡ ಗ್ರಾಮವಾದ ನಿಕೋಲ್‌ಸ್ಕೊಯೆ ತಲುಪಿದಳು. ಚಾ ಕುಡಿಯಲೆಂದು ತಾಯಿ

ನಿಲ್ದಾಣದ ಅಂಗಡಿಗೆ ಹೋಗಿ, ತನ್ನ ಭಾರವಾದ ಪೆಟ್ಟಿಗೆಯನ್ನು ಬೆಂಚಿನ ಕೆಳಗೆ ತಳ್ಳಿ, ತಾನು ಕಿಟಕಿಯ ಬಳಿ ಕುಳಿತಳು. ಕಾಲ್ಸುಳಿತಕ್ಕೆ ಸಿಕ್ಕಿದ ಹಳದಿ ಹುಲ್ಲು ತುಂಬಿದ ಸಣ್ಣ ಚೌಕವೂ ಎತ್ತರದ ಇಳಿಜಾರಾದ ಛಾವಣಿಯಿದ್ದ ಕರಿಯ ಬೂದು ಬಣ್ಣದ ಕಟ್ಟಡವೂ ಆಕೆಯ ಕಣ್ಣಿಗೆ ಬಿದ್ದುವು. ಅದು ಆ ತಾಲ್ಲೂಕಿನ ಆಡಳಿತ ಕಛೇರಿ ಕಟ್ಟಡ. ಕೋಟು ಇಲ್ಲದ, ಬಕ್ಕತಲೆಯ, ಗಡ್ಡವಿದ್ದ ರೈತನೊಬ್ಬ ತಂಬಾಕು ಸೇದುತ್ತಾ ಮೆಟ್ಟಿ ಗಲ್ಲಿನ ಮೇಲೆ ಕುಳಿತಿದ್ದ. ಹೊರಗೆ ಹಂದಿಯೊಂದು ಹುಲ್ಲು ಮೇಯುತ್ತಿತ್ತು. ದುಗುಡ ದಿಂದ ಕಿವಿನಿಗುರಿಸುತ್ತ, ಮಣ್ಣಿನೊಳಕ್ಕೆ ಮೂತಿಯನ್ನದ್ದಿ, ಅದು ತಲೆಯಾಡಿ ಸುತ್ತಿತ್ತು.

ಹಿರಿದಾದ ಕರಿಯ ರಾಶಿಗಳಾಗಿ ಮೋಡಗಳು ಒಂದರಮೇಲೊಂದು ಏರಿದುವು. ಬದುಕು ಎಲ್ಲೋ ಅಡಗಿ ಕುಳಿತಿದ್ದಂತೆ, ಪ್ರತಿಯೊಂದೂ ಶಾಂತವಾಗಿ ನೀರಸವಾಗಿತ್ತು.

ಒಮ್ಮೆಲೇ ಪೋಲೀಸ್ ಅಧಿಕಾರಿಯೊಬ್ಬ ಕುದುರೆಯೋಡಿಸುತ್ತ ಚೌಕಕ್ಕೆ ಬಂದು, ಕಟ್ಟಡದ ಮುಂದುಗಡೆ ಕುದುರೆಯನ್ನು ನಿಲ್ಲಿಸಿದ. ಚಾಟಿಯನ್ನು ಗಾಳಿಯಲ್ಲಿ ಬೀಸಿ ಆತ ರೈತನನ್ನು ಕೂಗಿ ಕರೆದ. ಆವನ ಕೂಗು ಕಿಟಕಿಗೆ ಅಪ್ಪಳಿಸಿತು. ಮಾತುಗಳು ಸ್ಪಷ್ಟ ವಾಗಿರಲಿಲ್ಲ. ರೈತ ಎದ್ದು ನಿಂತು ಕಟ್ಟಡದತ್ತ ಬೊಟ್ಟುಮಾಡಿದ. ಅಧಿಕಾರಿ ಕುದುರೆ ಯಿಂದಿಳಿದು ಕಡಿವಾಣವನ್ನು ರೈತನ ಕೈಗೆಸೆದು, ಪ್ರಯಾಸಪಟ್ಟು ಎಡವುತ್ತ ಮೆಟ್ಟಲು ಗಳತ್ತ ಹೋಗುತ್ತ, ಕಂಬಿಯನ್ನು ಹಿಡಿದು ಉಬ್ಬಸಪಡುತ್ತ, ಸುಧಾರಿಸಿಕೊಂಡು, ಬಾಗಿಲಿನಲ್ಲಿ ಅದೃಶ್ಯನಾದ.

ಮತ್ತೊಮ್ಮೆ ಪ್ರತಿಯೊಂದೂ ನೀರಸವಾಯಿತು. ಎರಡು ಸಾರಿ ಕುದುರೆ ಮೆತ್ತಗಿನ ನೆಲದೊಳಕ್ಕೆ ಕಾಲು ಕೆರೆಯಿತು. ಚಿಕ್ಕವಯಸ್ಸಿನ ಹುಡುಗಿಯೊಬ್ಬಳು ತಾಯಿ ಕುಳಿತಿದ್ದಲ್ಲಿಗೆ ಬಂದಳು. ಆಕೆಗೆ ಬಿಗಿದು ಕಟ್ಟಿದ ಹಳದಿ ಕೂದಲಿತ್ತು. ದುಂಡಗಿನ ಮುಖ ದಲ್ಲಿ ಮೃದುವಾದ ಕಣ್ಣುಗಳಿದ್ದುವು. ಪಾತ್ರೆಗಳಿಂದ ತುಂಬಿದ್ದ ನಜ್ಜುಗುಜ್ಜಾದ ತಟ್ಟೆಯೊಂದನ್ನು ಎತ್ತಿಕೊಂಡು, ತನ್ನ ತುಟಿಗಳನ್ನು ಕಚ್ಚುತ್ತಾ ತಲೆಯಾಡಿಸುತ್ತಾ ಆಕೆ ತಾಯಿ ಕುಳಿತಿದ್ದ ಕೊಠಡಿಗೆ ಬಂದಳು.

"ನಮಸ್ಕಾರ," ಎಂದಳು ತಾಯಿ.

"ನಮಸ್ಕಾರ."

ತಟ್ಟೆಗಳನ್ನೂ, ಟೀ ಕಪ್ಪುಗಳನ್ನೂ ಮೇಜಿನ ಮೇಲೆ ಇಟ್ಟ ಬಳಿಕ ಹುಡುಗಿ, ಒಮ್ಮೆಲೆ ಉದ್ವಿಗ್ನಗೊಂಡ ಸ್ವರದಲ್ಲಿ ಹೇಳಿದಳು:

"ಇದೇ ಈಗ ಒಬ್ಬ ದರೋಡೆಗಾರನನ್ನ ಹಿಡಿದ್ರಂತೆ. ಇಲ್ಲಿಗೆ ತರ್‍ತಿದ್ದಾರೆ!"

"ಯಾರು ಆತ?"

"ನಂಗೊತ್ತಿಲ್ಲ...."

"ಯಾರನ್ನು ದರೋಡೆ ಮಾಡ್ದ?"

"ನಂಗೊತ್ತಿಲ್ಲ," ಎಂದು ಮತ್ತೊಮ್ಮೆ ಹುಡುಗಿಯೆಂದಳು. "ಅವನನ್ನ ಹಿಡಿ

ಮ್ರೂಂತ ಅಷ್ಟೆ ಕೇಳ್ದೆ. ಪೋಲೀಸ್ ಮುಖ್ಯಸ್ಥನ್ನ ಕರೆಯೋಕೆ ಹೋಗಿದ್ದಾರೆ."

ತಾಯಿ ಕಿಟಕಿಯ ಮೂಲಕ ಹೊರ ನೋಡಿದಳು. ಚೌಕದಲ್ಲೆಲ್ಲಾ ರೈತರು ಸೇರತೊಡಗಿದ್ದರು. ಕೆಲವರು ಗಂಭೀರವಾಗಿ ನಿಧಾನವಾಗಿ ಬಂದರು. ಬೇರೆ ಕೆಲವರು ತಮ್ಮ ಉಣ್ಣೆ ಕೋಟಿನ ಗುಂಡಿಗಳನ್ನು ಹಾಕಿಕೊಳ್ಳುತ್ತಾ ಓಡಿಯೋಡಿ ಬಂದರು. ಅವರೆಲ್ಲ ಕಟ್ಟಡದೆದುರು ನೆರೆದು, ಎಲ್ಲೋ ಎಡ ದಿಕ್ಕಿನತ್ತ ನೋಡಿದರು.

ಹುಡುಗಿ ಕಿಟಕಿಯಿಂದ ನೋಡಿ, ಬಾಗಿಲನ್ನೆಳೆದುಕೊಂಡು ಸದ್ದುಮಾಡುತ್ತಾ, ಹೊರಕ್ಕೋಡಿದಳು. ತಾಯಿ ಗಾಬರಿಯಾಗಿ ತನ್ನ ಪೆಟ್ಟಿಗೆಯನ್ನು ಬೆಂಚಿನ ಕೆಳಕ್ಕೆ ಮತ್ತಷ್ಟು ಹಿಂದಕ್ಕೆ ತಳ್ಳಿದಳು. ಆಕೆ ಶಾಲಿನಿಂದ ತಲೆಯನ್ನು ಹೊದೆದುಕೊಂಡು, ಓಡಬೇಕೆಂಬ ನಿಷ್ಕಾರಣವಾದ ಬಯಕೆಯನ್ನು ಹತ್ತಿಕ್ಕುತ್ತ, ಬಾಗಿಲ ಬಳಿಗೆ ಬಂದಳು.

ತಾಯಿ ಆ ಕಟ್ಟಡದ ಬಳಿ ಬಂದಾಗ ಚಳಿ, ಕಣ್ಣನ್ನೂ ಎದೆಯನ್ನೂ ಕುಕ್ಕಿತು; ಉಸಿರಾಡುವುದು ಕಷ್ಟವಾಯಿತು; ಕಾಲುಗಳು ಕಲ್ಲಾದುವು. ಚೌಕದ ಮಧ್ಯದಲ್ಲಿ ರೀಬಿನ್ ನಡೆಯುತ್ತಿದ್ದ. ಹಿಂಬದಿಯಿಂದ ಆತನ ಕೈಗಳನ್ನು ಕಟ್ಟಿದ್ದರು. ಎರಡು ಪಕ್ಕಗಳಲ್ಲೂ ಒಬ್ಬೊಬ್ಬ ಪೋಲೀಸರು, ನಡೆದಂತೆ ತಮ್ಮ ಬಡಿಗೆಗಳಿಂದ ನೆಲವನ್ನು ಕುಟ್ಟಿ ಸದ್ದು ಮಾಡುತ್ತಾ ಬರುತ್ತಿದ್ದರು. ಜನರ ಗುಂಪು ಮೌನವಾಗಿ ಕಟ್ಟಡದ ಬಳಿ ನಿಂತಿತು.

ದಂಗುಬಡಿದಂತಾಗಿ ತಾಯಿ ಆ ದೃಶ್ಯದಿಂದ ದೃಷ್ಟಿಯನ್ನು ಕದಲಿಸಲಾರದೇ ಹೋದಳು. ರೀಬಿನ್ ಏನನ್ನೋ ಹೇಳುತ್ತಿದ್ದ. ಆತನ ಸ್ವರ ತಾಯಿಗೆ ಕೇಳಿಸಲಿಲ್ಲ. ಆಕೆಯ ಹೃದಯದ ಕರಿಯ ಶೂನ್ಯದಲ್ಲಿ ಅವನ ಮಾತುಗಳು ಪ್ರತಿಧ್ವನಿಸಲಿಲ್ಲ.

ಆಳವಾಗಿ ಉಸಿರು ಬಿಟ್ಟು ಆಕೆ ಸುಧಾರಿಸಿಕೊಂಡಳು. ಕಟ್ಟಡದ ಮುಂಭಾಗ ವಲ್ಲಿ, ನೀಲಿ ಕಣ್ಣುಗಳಿದ್ದ ಅಗಲವಾದ ಸೊಗಸಾದ ಗಡ್ಡವಿದ್ದ ರೈತನೊಬ್ಬ ಆಕೆಯನ್ನೆ ನೆಟ್ಟದೃಷ್ಟಿಯಿಂದ ನೋಡುತ್ತಿದ್ದ. ತಾಯಿ ಕೆಮ್ಮಿದಳು. ಭಯದಿಂದ ನಡುಗುತ್ತಿದ್ದ ಕೈಗಳಿಂದ ಗಂಟಲನ್ನು ಉಜ್ಜಿಕೊಂಡಳು.

ಅವನನ್ನು ಉದ್ದೇಶಿಸಿ ತಾಯಿ, "ಇದೇನು ನಡೆದಿರೋದು ?" ಎಂದು ಪ್ರಯತ್ನ ಪೂರ್ವಕವಾಗಿ ಕೇಳಿದಳು.

"ನೀವೇ ನೋಡಿ," ಎಂದು ಉತ್ತರವಿತ್ತು ಆತ ಮುಖ ತಿರುಗಿಸಿದ. ಇನ್ನೊಬ್ಬ ರೈತ ಆಕೆಯ ಬಳಿಗೆ ಬಂದು ನಿಂತ.

ರೀಬಿನ್ನನ್ನು ಕರೆದು ತಂದ ಪೋಲೀಸರು ಜನರ ಗುಂಪಿನೆದುರು ನಿಂತರು. ಗುಂಪು ದೊಡ್ಡದಾಗುತ್ತಲೇ ಇತ್ತು. ಜನರೇನೋ ಮೌನವಾಗಿದ್ದರು. ಒಮ್ಮೆಲೆ ರೀಬಿನ್‌ನ ಸ್ವರ ಬಲು ಎತ್ತರದಿಂದ ಬಂದಂತೆ ಕೇಳಿಸಿತು.

"ದೈವಭಕ್ತ ಜನರೇ ! ರೈತರ ಜೀವನದ ಎಲ್ಲ ಸತ್ಯವನ್ನೂ ತೋರಿಸಿಕೊಡೋ ಬರೆವಣಿಗೆ ವಿಷಯ ಕೇಳಿದ್ದೀರಾ? ಅಂಥ ಬರೆವಣಿಗೆಗಾಗಿ ನಾನು ಈ ಬೆಲೆ ತೆರುತ್ತಿದ್ದೀನಿ. ಆ ಬರೆವಣಿಗೆಯನ್ನ ಜನರಿಗೆ ಕೊಟ್ಟೋನು ನಾನು !"

ಗುಂಪು ರೀಬಿನ್‌ಗೆ ಮತ್ತಷ್ಟು ಸಮೀಪವಾಯಿತು. ಆತನ ಸ್ವರ ಶಾಂತವಾಗಿತ್ತು. ಅದರಲ್ಲಿ ಅವಸರವಿರಲಿಲ್ಲ. ತಾಯಿ ಅದನ್ನು ಕಂಡು ಧೈರ್ಯಗೊಂಡಳು.

ನೀಲಿ ಕಣ್ಣುಗಳಿದ್ದ ರೈತನನ್ನು ಮತ್ತೊಬ್ಬ ಮೆಲ್ಲನೆ ತಿವಿದು, "ಅದನ್ನ ಕೇಳಿದಿಯಾ ?" ಎಂದ ಮೆಲ್ಲನೆ. ಆ ರೈತ ತಲೆಯೆತ್ತಿ, ಉತ್ತರವೀಯದೆ, ತಾಯಿಯನ್ನು ಮತ್ತೊಮ್ಮೆ ನೋಡಿದ. ಇನ್ನೊಬ್ಬ ರೈತನೂ ತಾಯಿಯನ್ನು ನೋಡಿದ. ಈತ ಮೊದಲಿನವನಿಗಿಂತ ಚಿಕ್ಕವನಾಗಿದ್ದ. ಅಲ್ಲಲ್ಲಿ ಪಿಟಕಗಳಿದ್ದ ಆತನ ಮುಖದ ತುಂಬ ಬಿರುಸಾದ ಕರಿಯ ಗಡ್ಡವಿತ್ತು.... ತಾಯಿಯನ್ನು ನೋಡಿದಮೇಲೆ ಅವರಿಬ್ಬರೂ ಅಲ್ಲಿಂದ ದೂರ ಹೋದರು.

"ಅವರಿಗೆ ಹೆದರಿಕೆಯಾಗಿದೆ," ಎಂದು ತಾಯಿ ಯೋಚಿಸಿದಳು.

ಆಕೆ ಹೆಚ್ಚು ಗಮನ ಕೊಟ್ಟು ನೋಡಿದಳು. ಆಕೆ ನಿಂತಲ್ಲಿಂದ ಮಿಹಯೀಲ್ ಇವಾನೊವಿಚ್ [ರೀಬಿನ್]ನ ಕರಿಯ ಗಾಯಗೊಂಡ ಮುಖವೂ ಕಣ್ಣುಗಳ ಭಾವ ಪೂರ್ಣವಾದ ಹೊಳಪೂ ಕಾಣಿಸುತ್ತಿದ್ದುವು. ಆತನ ದೃಷ್ಟಿಗೆ ತಾನು ಬೀಳಬೇಕೆಂದು ತಾಯಿ ಬಯಸಿ, ತುದಿಗಾಲಿನ ಮೇಲೆ ನಿಂತು, ಕೊರಳನ್ನು ನೀಳವಾಗಿ ಚಾಚಿದಳು.

ಜನರು ಗಂಟು ಮುಖ ಮಾಡಿಕೊಂಡು ಅಪನಂಬಿಕೆಯಿಂದ ಆತನನ್ನು ನೋಡಿದರು; ಯಾರೂ ಮಾತನಾಡಲಿಲ್ಲ. ಗುಂಪಿನ ಹಿಂಭಾಗದಲ್ಲಿ ಮಾತ್ರ ಪಿಸುಸ್ವರದ ಸಂಭಾಷಣೆಗಳು ಕೇಳಿಸಿದುವು.

ಆದರೂ ಗಟ್ಟಿಯಾದ ಸ್ವರದಲ್ಲಿ ರೀಬಿನ್ ಹೇಳಿದ:

"ರೈತರೇ ! ಆ ಪತ್ರಿಕೆಗಳಲ್ಲಿ ಬರೆದಿರೋದನ್ನ ನಂಬಿ. ಅದಕ್ಕೆ ಪ್ರತಿಫಲವಾಗಿ ನಾನು ಪ್ರಾಣವನ್ನೇ ತೆರಬೇಕಾದೀತು. ಅವು ನನಗೆ ಎಲ್ಲಿ ದೊರೆತವೂಂತ ತಿಳಿಯೋದಕ್ಕಾಗಿ ಅವರು ನನಗೆ ಹೊಡೆದ್ರು, ಹಿಂಸೆಕೊಟ್ರು. ಪುನಃ ಹೊಡೀತಾರೆ. ಆದರೆ ನಾನು ಏನು ಬೇಕಾದರೂ ಅನುಭವಿಸೋಕೆ ಸಿದ್ಧವಾಗಿದ್ದೀನಿ. ಯಾಕೆಂದರೆ ಆ ಪತ್ರಿಕೆಗಳಲ್ಲಿರೋದು ಸತ್ಯ. ದಿನದ ರೊಟ್ಟಿಗಿಂತಲೂ ಸತ್ಯವೇ ನಮಗೆ ಹೆಚ್ಚು ಪ್ರಿಯವಾಗ್ಬೇಕು. ಇದೀಗ ವಿಷಯ !"

"ಅವನು ಯಾಕೆ ಹಾಗೆ ಹೇಳ್ತಿದಾನೆ ?" ಕಟ್ಟಡದ ಮುಂಭಾಗದಲ್ಲಿ ನಿಂತಿದ್ದ ರೈತರಲ್ಲೊಬ್ಬ ಉದ್ಗಾರವೆತ್ತಿದ.

"ಇನ್ನೂ ಅವನು ಏನು ಹೇಳಿದರೂ ಸರಿಯೆ. ಒಬ್ಬ ಮನುಷ್ಯ ಒಂದೇ ಸಲ ಸಾಯೋದು ಸಾಧ್ಯ," ಎಂದು ನೀಲಿಗಣ್ಣಿನವನು ಉತ್ತರಿಸಿದ.

ಮಾತಿಲ್ಲದೆ, ಹುಬ್ಬುಗಳಡಿಯಿಂದ ನೋಡುತ್ತ, ಜನರು ಅಲ್ಲೇ ನಿಂತರು. ಅಗೋಚರವಾದೊಂದು ಭಾರ ಅವರನ್ನೆಲ್ಲ ಕೆಳಕ್ಕೆ ಅದುಮುತ್ತಿದ್ದಂತೆ ತೋರಿತು.

ಪೋಲೀಸ್ ಅಧಿಕಾರಿ ಎಡಕ್ಕೂ ಬಲಕ್ಕೂ ತೂಗಾಡುತ್ತಾ ಕಟ್ಟಡದ ಮುಂಭಾಗಕ್ಕೆ ಬಂದ.

"ಯಾರಲ್ಲಿ ಮಾತಾಡ್ತಿರೋದು?" ಎಂದು ಆತ ಕುಡಿದವನ ಹಾಗೆ ಕಿರಿಚಿಕೊಂಡ.

ತಕ್ಷಣ ದಡದಡನೆ ಮೆಟ್ಟಲಿಳಿದು, ಆತ ರೀಬಿನ್ನನ ಕೂದಲು ಹಿಡಿದು ಆ ತಲೆಯನ್ನು ಹಿಂದಕ್ಕೂ ಮುಂದಕ್ಕೂ ಆಡಿಸಿದ.

"ನೀನೇನೊ, ಬೇವಾರ್ಸಿ ಮಗನೆ!" ಎಂದು ಅರಚಿದ.

ಗುಂಪು ಸಜೀವವಾಯಿತು. ಗೊಣಗಾಟದ ಸದ್ದುಗಳು ಹೊರಟುವು. ತಾಯಿ ಅಸಹಾಯಳಾಗಿ ಸಂಕಟ ಅನುಭವಿಸುತ್ತ ತಲೆ ತಗ್ಗಿಸಿದಳು. ಮತ್ತೊಮ್ಮೆ ರೀಬಿನ್ನನ ಸ್ವರ ಕೇಳಿಸಿತು:

"ನೋಡಿ! ಒಳ್ಳೆಯ ಜನರೇ, ನೋಡಿ!...."

"ಮುಚ್ಚು ಬಾಯಿ!"

ಆ ಅಧಿಕಾರಿ ಮತ್ತೊಮ್ಮೆ ರೀಬಿನ್ನನ ಕಿವಿಯ ಮೇಲ್ಗಡೆ ಹೊಡೆದ. ರೀಬಿನ್ ತೂರಾಡಿ ಭುಜಗಳನ್ನು ಕುಗ್ಗಿಸಿಕೊಂಡ.

ಯಾರದೋ ಸ್ವರ ಕೇಳಿಸಿತು:

"ಮೊದಲು ಕೈ ಕಟ್ಟಿಟ್ಟು, ಆಮೇಲೆ ಬೇಕಾದ್ದು ಮಾಡ್ತಾರೆ...."

"ಪೋಲೀಸರೇ, ಅವನನ್ನು ಕರಕೊಂಡ್ಹೋಗಿ! ನೀವು – ನೀವೆಲ್ಲಾ – ಹೊರಟ್ಹೋಗಿ!"

ಮಾಂಸದ ತುಣುಕಿನ ಮುಂದೆ ಕುಣಿದಾಡುವ ನಾಯಿಯ ಹಾಗೆ ಆ ಅಧಿಕಾರಿ ರೀಬಿನ್ನನ ಮುಂದೆ ಹಾರಾಡುತ್ತ, ತನ್ನ ಮುಷ್ಟಿಯಿಂದ ಆತನ ಮುಖಕ್ಕೂ ಎದೆಗೂ ಹೊಟ್ಟೆಗೂ ಹೊಡೆದ.

"ಹೊಡೀಬೇಡಿ!" ಎಂದು ಯಾರೋ ಗುಂಪಿನಿಂದ ಕೂಗಿದರು.

"ಯಾಕೆ ಹೊಡೀಬೇಕು?" ಎಂದು ಬೆಂಬಲದ ಮತ್ತೊಂದು ಸ್ವರ ಕೇಳಿಸಿತು.

"ನಾವು ಹೊರಟ್ಹೋಗೋಣ," ಎಂದು ನೀಲಿಗಣ್ಣಿನ ರೈತ ತನ್ನ ಸಂಗಡಿಗನತ್ತ ನೋಡಿ ಹೇಳಿದ. ಅವರಿಬ್ಬರೂ ಕಟ್ಟಡದತ್ತ ನಿಧಾನವಾಗಿ ನಡೆದು ಹೋದರು. ತಾಯಿ ದಯೆತುಂಬಿದ ದೃಷ್ಟಿಯಿಂದ ಅವರನ್ನು ನೋಡಿದಳು. ಪೋಲೀಸ್ ಅಧಿಕಾರಿ ಕಟ್ಟಡಕ್ಕೆ ಹಿಂತಿರುಗಿದುದನ್ನು ಕಂಡು ತಾಯಿ ಸಮಾಧಾನದ ನಿಟ್ಟುಸಿರು ಬಿಟ್ಟಳು. ಕಟ್ಟಡದ ಬಾಗಿಲ ಬಳಿ ನಿಂತು ಆ ಅಧಿಕಾರಿ ಕೂಗಿದ:

"ಅವನನ್ನ ಇಲ್ಲಿಗೆ ಕರಕೊಂಡ್ಬನ್ನಿ! ಏಯ್...."

"ಕರಕೊಂಡು ಹೋಗ್ಬೇಡಿ!" ಎಂದೊಂದು ಬಲವಾದ ಸ್ವರ ಕೇಳಿಸಿತು. ಅದು ನೀಲಿಗಣ್ಣಿನ ರೈತನದೆಂದು ತಾಯಿ ಮನಗಂಡಳು. "ಬಿಡಬೇಡಿ, ಜನರೇ! ಒಳಗೆ ಕರಕೊಂಡು ಹೋದ್ರೆ ಅಲ್ಲಿ ಅವನನ್ನ ಹೊಡೆದು ಸಾಯಿಸ್ತಾರೆ! ಆಮೇಲೆ ಕೊಲೆಯ ಆರೋಪ ನಮ್ಮ ಮೇಲೆ ಹೊರಿಸ್ತಾರೆ. ಬಿಡಬೇಡಿ!"

ರೀಬಿನ್ ಗಟ್ಟಿಯಾಗಿ ಮಾತನಾಡಿದ:

"ರೈತರೇ! ನಿಮ್ಮ ಬಾಳ್ವೆ ಹ್ಯಾಗಿದೇಂತ ನಿಮಗೆ ಕಾಣಿಸೋದಿಲ್ವೆ? ಅವರು ಹ್ಯಾಗೆ ನಿಮ್ಮನ್ನ ದೋಚಿ, ನಿಮಗೆ ಮೋಸಮಾಡಿ, ನಿಮ್ಮ ರಕ್ತ ಹೀರ್ತಾರೆ ಅನ್ನೋದು ಅರ್ಥವಾಗೋದಿಲ್ವೆ? ಪ್ರತಿಯೊಂದಕ್ಕೂ ನೀವೇ ಮೂಲ – ಈ ಜಗತ್ತಿನಲ್ಲಿ ನೀವೇ ಅತ್ಯಂತ ಮಹಾಶಕ್ತಿ. ಹೀಗಿದ್ದರೂ ನಿಮಗೇನು ಹಕ್ಕುಗಳಿವೆ? ಉಪವಾಸ ಬಿದ್ದು ಸಾಯೋ ಹಕ್ಕು ಮಾತ್ರ!"

ರೈತರು ಒಮ್ಮೆಲೆ, ಒಬ್ಬರ ಮಾತನ್ನೊಬ್ಬರು ತಡೆಯುತ್ತ ಗಟ್ಟಿಯಾಗಿ ಚರ್ಚಿಸ ತೊಡಗಿದರು.

"ಆತ ನಿಜ ಹೇಳ್ತಿದ್ದಾನೆ!"

"ಪೋಲೀಸ್ ಮುಖ್ಯಸ್ಥನನ್ನ ಕರೀರಿ! ಎಲ್ಲಿದಾನೆ ಪೋಲೀಸ್ ಮುಖ್ಯಸ್ಥ?"

"ಪೋಲೀಸ್ ಅಧಿಕಾರಿ ಅವನನ್ನ ಕರೆತರೋಕೆ ಹೋಗಿದಾನೆ."

"ಯಾರು, ಆ ಕುಡುಕನೆ?"

"ಅಧಿಕಾರಿಗಳನ್ನ ಕರೆಯೋದು ನಮ್ಮ ಕೆಲಸವಲ್ಲ."

ಸದ್ದು ಒಂದೇ ಸಮನೆ ಹೆಚ್ಚಿತು.

"ಹೂಂ ಮಾತಾಡು! ನಾವಿದ್ದೀವಿ, ಹೊಡೆಯೋದಕ್ಕೆ ಬಿಡೋದಿಲ್ಲ!"

"ಅವನ ಕೈಗಳನ್ನು ಬಿಚ್ಚಿ!"

"ಅವನ ಕೈಗಳನ್ನು ಬಿಚ್ಚಿ!"

"ಹುಷಾರಾಗಿರಿ, ನಿಮ್ಮನ್ನೂ ಹಿಡೀತಾರೆ!"

"ಈ ಹಗ್ಗದಿಂದ ಕೈಗೆ ನೋವಾಗ್ತಿದೆ!" ಎಂದ ರೀಬಿನ್. ಆ ಸ್ವರ ಶಾಂತ ವಾಗಿದ್ದರೂ ಎಲ್ಲರಿಗೂ ಕೇಳಿಸುವಷ್ಟು ಗಟ್ಟಿಯಾಗಿತ್ತು. "ನಾನು ಓಡಿ ಹೋಗೋದಿಲ್ಲ, ರೈತರೇ! ಸತ್ಯದಿಂದ ಬೇರೆಯಾಗಿ ಅಡಗಿರೋದು ನನ್ನಿಂದ ಸಾಧ್ಯವಿಲ್ಲ. ಅದು ನನ್ನೊಳಗೇ ಇದೆ! ಅದೀಗ ವಿಷಯ!"

ಗುಂಪಿನಿಂದ ಕೆಲವರು ಬೇರೆಯಾಗಿ, ಏನೋ ಮಾತನಾಡುತ್ತ, ತಲೆಯಾಡಿಸುತ್ತ ಬದಿಗೆ ನಿಂತರು. ಆದರೆ ಚಿಂದಿ ಬಟ್ಟೆಯುಟ್ಟ ಜನರು ಹೆಚ್ಚು ಹೆಚ್ಚಾಗಿ ಅತಿ ಉದ್ವೇಗ ದಿಂದ ಓಡುತ್ತ ಬಂದರು. ಅವರು ರೀಬಿನ್ನನ ಸುತ್ತಲೂ ಬುಸುಗುಟ್ಟುತ್ತ ನೆರೆ ದರು. ಆತ ಅವರ ನಡುವೆ, ಅಡವಿಯ ದೇಗುಲದ ಹಾಗೆ ನಿಂತ. ತಲೆಯ ಮೇಲ್ಗಡೆ ಕೈಗಳನ್ನು ಬೀಸುತ್ತ ಮಾತನಾಡಿದ:

"ಧನ್ಯವಾದ ನಿಮಗೆ, ಒಳ್ಳೆಯ ಜನರೇ, ನಿಮಗೆ ಧನ್ಯವಾದ! ನಾವು ಒಬ್ಬರ ಕೈಯನ್ನ ಇನ್ನೊಬ್ಬರು ಬಿಚ್ಚದೇ ಇದ್ದರೆ, ಬೇರೆ ಯಾರು ಆ ಕೆಲಸ ಮಾಡ್ತಾರೆ?"

ಆತ ತನ್ನ ಗಡ್ಡವನ್ನೊರೆಸಿಕೊಂಡು, ರಕ್ತಮಯವಾಗಿದ್ದ ಕೈಯನ್ನು ಮತ್ತೊಮ್ಮೆ ಎತ್ತಿದ.

"ಇದು ನನ್ನ ರಕ್ತ – ಸತ್ಯಕ್ಕೋಸ್ಕರ ಸುರಿದ ರಕ್ತ!"

ತಾಯಿ ನಿಂತಲ್ಲಿಂದ ಇಳಿದು ಬಂದಳು. ಆದರೆ ಆ ಗುಂಪಿನ ಎಡೆಯಲ್ಲಿ ರೀಬಿನ್

ಕಾಣಿಸದೇ ಇದ್ದುದರಿಂದ, ಮತ್ರ್ಯೊಮ್ಮೆ ಮೆಟ್ಟಲನ್ನೇರಿದಳು. ಅಸ್ಪಷ್ಟವಾದೊಂದು ಸಂತೋಷ ಆಕೆಯ ಹೃದಯದಲ್ಲಿ ಕುಪ್ಪಳಿಸಿತು.

"ರೈತರೇ ! ಆ ಪತ್ರಿಕೆಗಳಿಗಾಗಿ ಕಣ್ಣು ತೆರೆದು ಕಾಯ್ತಾ ಇರಿ, ಅವುಗಳನ್ನ ತಪ್ಪದೆ ಓದಿ ! ಸತ್ಯದ ಪ್ರಸಾರಕರೆಲ್ಲ ದೈವದ್ರೋಹಿಗಳು ಬಂಡಾಯಗಾರರೂಂತ ಧರ್ಮ ಗುರುಗಳೂ ಅಧಿಕಾರಿಗಳೂ ಹೇಳಿದಾಗ, ನೀವದನ್ನು ನಂಬಬೇಡಿ. ಸತ್ಯ, ಗುಪ್ತವಾಗಿ ಜನರೆಡೆಯಲ್ಲಿ ತನಗೊಂದು ಗೂಡು ಹುಡುಕ್ತಾ, ಭೂಮಿಯ ಮೇಲೆಲ್ಲಾ ಸಂಚಾರ ಮಾಡ್ತಿದೆ. ಅಧಿಕಾರಿಗಳ ಪಾಲಿಗೆ ಅದು ಬೆಂಕಿಯಿದ್ದ ಹಾಗೆ, ಖಡ್ಗವಿದ್ದ ಹಾಗೆ. ಅವರು ಅದನ್ನ ಒಪ್ಕೊಳ್ಳೋಹಾಗಿಲ್ಲ – ಯಾಕೆಂದರೆ ಅದು ಅವರ್ನ ಕತ್ತರಿಸುತ್ತೆ, ಸುಡುತ್ತೆ ! ನಿಮಗೆ, ಸತ್ಯ ಒಳ್ಳೇ ಮಿತ್ರ. ಅವರಿಗೆ, ಅದು ಕಡುವೈರಿ. ಆದ್ದರಿಂದಲೇ ಅದು ಗುಪ್ತವಾಗಿ ಭೂಮಿಯ ಮೇಲೆ ಸಂಚಾರ ಮಾಡ್ತಿದೆ."

ಮತ್ರ್ಯೊಮ್ಮೆ, ಜನರೆಡೆಯಿಂದ ಉದ್ಗಾರಗಳು ಹೊರಟುವು.

"ಕೇಳಿ, ನಿಜವಾದ ದೈವಭಕ್ತರೇ !"

"ನಿನ್ನನ್ನ ಅವರು ಸುಮ್ನೆ ಬಿಡೋದಿಲ್ಲ, ಸೋದರ !"

"ನಿನ್ನ ಮೇಲೆ ದೂರು ಹೇಳ್ದೋರು ಯಾರು ?"

"ಧರ್ಮಗುರು !" ಎಂದು ಒಬ್ಬ ಪೋಲೀಸರವನು ಉತ್ತರವಿತ್ತ.

ಇಬ್ಬರು ರೈತರು ಮಹಾ ಶಾಪವನ್ನು ಉದ್ಗರಿಸಿದರು.

"ಜನರೇ, ಹುಷಾರಾಗಿರಿ !" ಎಂದು ಯಾರದೋ ಎಚ್ಚರಿಕೆಯ ಸ್ವರ ಕೇಳಿಸಿತು.

## ೧೬

ಪೋಲೀಸರ ಮುಖ್ಯಸ್ಥ ಅವರ ಬಳಿಗೆ ಬರುತ್ತಿದ್ದ. ದುಂಡಗಿನ ಮುಖದ ಎತ್ತರದ ದಪ್ಪನೆಯ ಮನುಷ್ಯ. ಆತ ಟೋಪಿಯನ್ನು ಒಂದು ಕಿವಿಯತ್ತ ವಾಲಿಸಿ ಧರಿಸಿದ್ದ. ಮೀಸೆಯ ಒಂದು ಭಾಗವನ್ನು ಮೇಲಕ್ಕೆ ತಿರುವಿದ್ದ, ಇನ್ನೊಂದು ಕೆಳಕ್ಕಿತ್ತು. ಪರಿಣಾಮವಾಗಿ, ಮಂದವಾದ ನಿರ್ಜೀವ ಮುಗುಳ್ನಗೆಯಿದ್ದ ಆ ಮುಖ, ದುಷ್ಟ ವಾಗಿ ವಿಕೃತವಾಗಿದ್ದಂತೆ ತೋರುತ್ತಿತ್ತು. ಎಡಗೈಯಲ್ಲಿ ಖಡ್ಗ ಹಿಡಿದಿದ್ದ. ಬಲಗೈಯನ್ನು ಜೋರಾಗಿ ಬೀಸುತ್ತ ಹಾವಭಾವಗಳನ್ನು ತೋರುತ್ತಿದ್ದ. ಆತನ ದೃಢವಾದ ಭಾರವಾದ ನಡಿಗೆ ಹತ್ತಿರ ಬರುತ್ತಿದ್ದುದು, ಎಲ್ಲರಿಗೂ ಕೇಳಿಸುತ್ತಿತ್ತು. ಆತ ಬರಲೆಂದು ಗುಂಪು ಇಬ್ಭಾಗವಾಗಿ ಜಾಗಮಾಡಿಕೊಟ್ಟಿತು. ಆ ಮುಖಗಳೆಲ್ಲಾ ದ್ವೇಷದಿಂದ ಜಡವಾದುವು. ಸದ್ದೆಲ್ಲ ಭೂಮಿಯೊಳಕ್ಕೆ ಇಂಗುವ ರೀತಿ ಅಡಗಿಹೋಯಿತು. ತನ್ನ ಕಣ್ಣುಗಳು ಉರಿಯುತ್ತಿದ್ದಂತೆ, ಹಣೆಯ ನರಗಳು ಮಿಡಿಯುತ್ತಿದ್ದಂತೆ, ತಾಯಿಗೆ ತೋರಿತು. ಆ ಗುಂಪನ್ನು ಸೇರಿಕೊಳ್ಳುವ ಬಯಕೆ ಮತ್ರ್ಯೊಮ್ಮೆ ಆಕೆಗೆ ಉಂಟಾಯಿತು. ಮುಂದು ವರಿಯಲು ದೇಹ ಬಾಗಿದರೂ ಆಕೆ ಹೃದಯವನ್ನು ಬಿಗಿಹಿಡಿದು ಚಲಿಸದೆ ನಿಂತಳು.

ಪೋಲೀಸರ ಮುಖ್ಯಸ್ಥ ರೀಬಿನ್ನನೆದುರು ನಿಂತು, ತನ್ನ ಕಣ್ಣುಗಳಿಂದ ಆತನನ್ನು ಅಳೆಯುತ್ತ, ಕೇಳಿದ:

"ಇದೇನು? ಅವನ ಕೈಗಳನ್ನ ಯಾಕೆ ಕಟ್ಟಿಲ್ಲ? ಪೋಲೀಸರೆ, ಕಟ್ಟಿ ಅವನನ್ನ!"

ಆತನ ಸ್ವರ ಗಟ್ಟಿಯಾಗಿ ಪ್ರತಿಧ್ವನಿಸುವಂತಿದ್ದರೂ ಶುಷ್ಕವಾಗಿತ್ತು.

"ಕಟ್ಟಿತ್ತು. ಆದರೆ ಜನ ಅದನ್ನ ಬಿಚ್ಚಿದ್ರು," ಎಂದು ಒಬ್ಬ ಪೋಲೀಸ್ ಉತ್ತರಿಸಿದ.

"ಏನಂದೆ? ಜನರು? ಯಾವ ಜನರು?"

ತನ್ನೆದುರು ಅರ್ಧವೃತ್ತವಾಗಿ ನಿಂತಿದ್ದ ಜನರ ಗುಂಪಿನತ್ತ ಪೋಲೀಸರ ಮುಖ್ಯಸ್ಥ ದೃಷ್ಟಿ ಹೊರಳಿಸಿದ:

"ಯಾರು ಆ ಜನ?" ಎಂದು ತನ್ನ ಏಕಪ್ರಕಾರವಾದ ಸ್ವರವನ್ನು ಏರಿಸದೆಯೂ ಕುಗ್ಗಿಸದೆಯೂ ಆತ ಕೇಳಿದ. ನೀಲಿಗಣ್ಣಿನ ರೈತನನ್ನು ಖಡ್ಗದ ಹಿಡಿಯ ಹಿಂಭಾಗದಿಂದ ಆತ ಮುಟ್ಟಿದ.

"ಜನರು ಅಂದರೆ ನೀನೇ ಇರ್ಬೇಕು, ಅಲ್ವೆ, ಚುಮಕೋವ್? ಹುಂ. ಇನ್ನೂ ಬೇರೆ ಯಾರು? ನೀನು, ಮೀಶಿನ್?"

ತನ್ನ ಬಲಗೈಯಿಂದ ಆ ರೈತರಲ್ಲೊಬ್ಬನ ಗಡ್ಡವನ್ನು ಆತ ಹಿಡಿದೆಳೆದ.

"ಸೂಳೆಮಕ್ಕಳೆ! ಹೊರಡಿ ಇಲ್ಲಿಂದ. ಇಲ್ದೇ ಇದ್ರೆ ಕೊಡ್ತೀನಿ ಈಗ, ತೋರಿಸ್ತೀನಿ ನಿಮಗೆ!"

ಆತನ ಮುಖದ ಮೇಲೆ ಕ್ರೋಧದ ಇಲ್ಲವೆ ಬೆದರಿಕೆಯ ಛಾಯೆ ಇರಲಿಲ್ಲ. ಆತ ಶಾಂತವಾಗಿ, ತನ್ನ ಉದ್ದನೆಯ ಕೈಗಳನ್ನು ಅಭ್ಯಾಸ ಬಲದಿಂದ ಜನರತ್ತ ಬೀಸಿದ. ಜನರು ತಲೆ ಬಾಗಿಸಿಕೊಂಡು, ಮುಖ ಮರೆಸಿಕೊಂಡು, ಅವನಿಂದ ಹಿಂದಕ್ಕೆ ಸರಿದರು.

ಮುಖ್ಯಸ್ಥ ಪೋಲೀಸರನ್ನು ಗದರಿಸಿದ:

"ಹುಂ. ಇಲ್ಲಿ ನೀವಿರೋದು ಯಾತಕ್ಕೆ? ಕಟ್ಟಿ ಅವನನ್ನ!"

ಆತ ಒಂದೇ ಸಮನೆ ಶಪಿಸುತ್ತ ಮತ್ತೊಮ್ಮೆ ರೀಬಿನ್ನನ್ನು ನೋಡಿದ.

"ಕೈಗಳನ್ನ ಬೆನ್ನ ಹಿಂದಿಡು!" ಎಂದು ಆತ ಗಟ್ಟಿಯಾಗಿ ಹೇಳಿದ.

"ಅವರು ನನ್ನ ಕೈಗಳನ್ನ ಕಟ್ಟಬಾರದೆಂದು ಬಯಸುತ್ತೇನೆ. ನಾನೇನೂ ಓಡಿ ಹೋಗೋ ಯೋಚ್ನೆ ಮಾಡ್ತಾ ಇಲ್ಲ. ಜಗಳಾಡೋದೂ ಇಲ್ಲ. ಅಂದ್ಮೇಲೆ ಯಾಕೆ ನನ್ನ ಕೈ ಕಟ್ತೀರ?"

"ಏನಂದೆ?"

ರೀಬಿನ್ ಸ್ವರವೇರಿಸಿ ನುಡಿದ:

"ಜನರನ್ನ ಚಿತ್ರಹಿಂಸೆ ಮಾಡಿದ್ದು ಸಾಕು, ಪಶುಗಳೆ! ನಿಮ್ಮ ಕೊನೇ ಘಳಿಗೆಗೆ ಹೆಚ್ಚು ಹೊತ್ತಿಲ್ಲ ಇನ್ನು!"

ಪೋಲೀಸರ ಮುಖ್ಯಸ್ಥ ರೀಬಿನ್ನನ ಮುಖವನ್ನೆ ನೋಡುತ್ತ ನಿಂತ. ಆತನ

ಮೀಸೆಗಳು ನಡುಗಿದುವು. ಒಂದು ಹೆಜ್ಜೆ ಹಿಮ್ಮೆಟ್ಟಿ ಆತ ಶಿಳ್ಳು ಸ್ವರದಲ್ಲಿ ಕೂಗಾಡಿದ:

"ಬಡ್ಡೀ ಮಗನೆ! ಏನಂದೆ ನೀನು?"

ಒಮ್ಮೆಲೆ ಆತ, ಕಣ್ಣು ಕತ್ತಲು ಬರಿಸುವ ಹಾಗೆ ರೀಬಿನ್ನನ ಮುಖಕ್ಕೆ ಹೊಡೆದ.

ರೀಬಿನ್ ಮುಖ್ಯಸ್ಥನೆಡೆಗೆ ಬರುತ್ತಾ ಗಟ್ಟಿಯಾಗಿ ಅಂದ:

"ನಿನ್ನ ಮುಷ್ಟಿಗಳಿಂದ ನೀನು ಸತ್ಯವನ್ನ ಕೊಲ್ಲಲಾರೆ.... ಹೊಲಸು ನಾಯಿ! ನಿನಗೆ ನನ್ನನ್ನ ಹೊಡೆಯೋಕೆ ಹಕ್ಕಿಲ್ಲ!"

"ನನಗೆ ಹಕ್ಕಿಲ್ಲ? ನನಗೆ?" ಎಂದು ಪೋಲೀಸರ ಮುಖ್ಯಸ್ಥ ಬೊಬ್ಬಿಟ್ಟ.

ಮತ್ತೊಮ್ಮೆ ಕೈ ಎತ್ತಿ ರೀಬಿನ್ನನ ತಲೆಯತ್ತ ಆತ ಗುರಿ ಇಟ್ಟ. ರೀಬಿನ್ ಆ ಕ್ಷಣ ಬಾಗಿದುದರಿಂದ ಹೊಡೆತ ತಪ್ಪಿಹೋಯಿತು. ಪೋಲೀಸರ ಮುಖ್ಯಸ್ಥ ಅಡಿತಪ್ಪಿ ಬೀಳುವನೇನೋ ಎನ್ನುವ ಹಾಗಾಯಿತು. ಗುಂಪಿನಲ್ಲಿ ಯಾರೋ ಒಬ್ಬರು ಗುಟುರು ಹಾಕಿದರು. ಮತ್ತೊಮ್ಮೆ ರೀಬಿನ್ನನ ಕ್ರೋಧದ ಸ್ವರ ಕೇಳಿಸಿತು:

"ಇನ್ನೊಮ್ಮೆ ಹೊಡೆದೆ ಅಂದರೆ ಜೋಕೆ, ರಾಕ್ಷಸ!"

ಸುತ್ತಲೂ ನೋಡಿದ ಪೋಲೀಸರ ಮುಖ್ಯಸ್ಥ, ಕರಿದಾದ ಕಿರಿದಾದ ವೃತ್ತವಾಗಿ ಜನರು ಒಂದಾಗುತ್ತಿದ್ದುದನ್ನು ಕಂಡ.

ಮುಖ್ಯಸ್ಥ ಕೂಗಿ ಕರೆದ:

"ನಿಕೀತ! ಏ ನಿಕೀತ!"

ಉಣ್ಣೆಯ ಕೋಟು ಧರಿಸಿದ್ದ ಕುಳ್ಳನೆಯ ದಪ್ಪನೆಯ ರೈತನೊಬ್ಬ ಗುಂಪಿನಿಂದ ಹೊರಬಂದ. ಅಸ್ತವ್ಯಸ್ತವಾದ ಕೂದಲಿನ ದೊಡ್ಡದಾದ ಆತನ ತಲೆ ಬಾಗಿತ್ತು.

ಪೋಲೀಸರ ಮುಖ್ಯಸ್ಥ ಶಾಂತವಾಗಿ ತನ್ನ ಮೀಸೆಯನ್ನು ತಿರುವುತ್ತ ಹೇಳಿದ:

"ನಿಕೀತ! ಬಾರಿಸು ಅವನಿಗೊಂದು, ಚೆನ್ನಾಗಿ!"

ಆ ರೈತ ಮುಂದಕ್ಕೆ ಹೆಜ್ಜೆ ಇಟ್ಟು ರೀಬಿನ್ನನೆದುರು ನಿಂತು ತಲೆ ಎತ್ತಿದ. ರೀಬಿನ್ನನ ನಿರ್ಧಾರದ ಭಾರವಾದ ಮಾತುಗಳು ಆತನ ಮುಖಕ್ಕೆ ಅಪ್ಪಳಿಸಿದುವು:

"ನೋಡಿ, ಜನರೆ, ಆ ಪಶುಗಳು ಯಾವ ರೀತಿ ನಮ್ಮ ಕೈಯಿಂದಲೇ ನಮ್ಮನ್ನ ಹೊಡಿಸ್ತಾರೆ ನೋಡಿ! ಯೋಚನೆಮಾಡಿ!"

ಮೆಲ್ಲನೆ ಆ ರೈತ ಕೈಯೆತ್ತಿ ಮೃದುವಾಗಿ ರೀಬಿನ್ನನ ತಲೆಯಮೇಲೆ ಹೊಡೆದ.

"ಹಾಗೇನೊ ಹೊಡ್ಯೋದು, ಬಡ್ಡೀ ಮಗನೆ?" ಎಂದು ಮುಖ್ಯಸ್ಥ ಕೂಗಾಡಿದ.

ಗುಂಪಿನಿಂದೊಂದು ಸ್ವರಬಂತು:

"ಏ ನಿಕೀತ! ದೇವರ್ನ ಮರೀಬೇಡ!"

"ನಾನ್ಹೇಳ್ತೀನಿ, ಹೊಡೀ ಅವ್ನಿಗೆ!" ಎಂದು ಆತನ ಕಾಲರನ್ನು ಹಿಡಿದೆಳೆಯುತ್ತ ಪೋಲೀಸರ ಮುಖ್ಯಸ್ಥ ಗರ್ಜಿಸಿದ.

ಆದರೆ ಆ ರೈತ ತಲೆ ಬಾಗಿ, ಇನ್ನೊಂದು ಕಡೆಗೆ ಸರಿಯುತ್ತಾ, "ನಾನಿನ್ನು ಹೊಡೆಯೋದಿಲ್ಲ" ಎಂದ.

"ಏನಂದೆ?"

ಪೋಲೀಸರ ಮುಖ್ಯಸ್ಥನ ಮುಖದ ನರಗಳು ಬಿಗಿದುವು. ಆತ ನೆಲವನ್ನು ಗಟ್ಟಿಯಾಗಿ ತುಳಿದು, ಶಪಿಸುತ್ತ, ರೀಬಿನ್ನನೆಡೆಗೆ ನುಗ್ಗಿದ. ಆ ಬಳಿಕ ಹೊಡೆತದ ಸದ್ದು ಕೇಳಿಸಿತು. ರೀಬಿನ್‌ಗೆ ಬವಳಿ ಬಂದಂತಾಯಿತು. ಇನ್ನೊಂದು ಹೊಡೆತ ಬಿದ್ದೊಡನೆ ಆತ ಕೆಳಕ್ಕುರುಳಿದ. ಮುಖ್ಯಸ್ಥ ಆತನ ಎದೆಗೂ ಪಕ್ಕೆಗಳಿಗೂ ತಲೆಗೂ ಕಾಲಿನಿಂದ ತುಳಿದ.

ಕ್ರೋಧದ ಅಸ್ಪಷ್ಟ ಧ್ವನಿಯೊಂದು ಜನರ ಗುಂಪಿನೆಡೆಯಿಂದ ಎದ್ದಿತು. ಜನರು ಮುಖ್ಯಸ್ಥನತ್ತ ಸರಿಯತೊಡಗಿದರು. ಆದರೆ ಮುಖ್ಯಸ್ಥ ಅದನ್ನು ನೋಡಿ, ಹಿಂದಕ್ಕೆ ಹಾರಿ, ಖಡ್ಗವನ್ನು ಒರೆಯಿಂದ ಹೊರಕ್ಕೆಳೆದ.

"ಏನಿದು? ಬಂಡಾಯವೊ? ಆಹ್ಹಾ! ಹೀಗೋ!"

ಆತನ ಸ್ವರ ನಡುಗಿ ಕಡಿದು ಹೋಯಿತು. ಆತ ನಿರರ್ಥಕವಾಗಿ ಸಣ್ಣಪುಟ್ಟ ಹೂಂಕಾರಗಳನ್ನಷ್ಟೆ ಹೊರಡಿಸಿದ. ಒಮ್ಮೆಲೆ ತನ್ನ ಸ್ವರದೊಡನೆ ಎಲ್ಲ ಶಕ್ತಿಯೂ ಉಡುಗಿ ಹೋಯಿತು. ಆತ ಕುಸಿದು ಭುಜಗಳೆಡೆಯಲ್ಲಿ ತಲೆಯನ್ನು ಹುದುಗುತ್ತ, ಮೆಲ್ಲಮೆಲ್ಲನೆ ಪಾದಗಳಿಂದ ನೆಲ ಮುಟ್ಟಿಕೊಂಡು ಹಿಂದಕ್ಕೆ ಸರಿಯುತ್ತ, ಸುತ್ತಲೂ ನೋಡಿದ.

ಕರ್ಕಶವಾಗಿ ಆತ ಕೂಗಾಡಿದ:

"ಸರಿ, ಹಾಗಾದರೆ ಅವನನ್ನ ಕರಕೊಂಡು ಹೋಗಿ. ನಾನು ಹೊರಡ್ತೀನಿ.... ಹುಂ.... ಥೂ ಹಾದರಕ್ಕೆ ಹುಟ್ಟೋರೇ! ಆತ ರಾಜಕೀಯ ಪಾತಕಿ ಅನ್ನೋದು ಗೊತ್ತಿಲ್ಲ ನಿಮಗೆ? ಚಕ್ರವರ್ತಿಗಿದಿರಾಗಿ ಆತ ಜನರನ್ನ ಎತ್ತಿಕಟ್ತಿದಾನೇಂತ ನಿಮಗೆ ಗೊತ್ತಿಲ್ಲ? ಅವನ ರಕ್ಷಣೆಗೆ ಹೋಗ್ತೀರಿ ನೀವು! ನೀವೂ ಕೂಡಾ ಬಂಡಾಯಗಾರ ರೇನು? ಹಾಗೋ!"

ತಾಯಿ ಮಿಸುಕದೆ, ಕಣ್ಣೆವೆಯನ್ನೂ ಕೂಡಾ ಮುಚ್ಚದೆ, ವಿಚಾರಮಾಡುವ ಶಕ್ತಿ ಸಾಮರ್ಥ್ಯವನೆಲ್ಲ ಕಳೆದುಕೊಂಡು, ಇದೆಲ್ಲಾ ಕನಸಿನಲ್ಲೆಂಬಂತೆ ಭಯದಿಂದಲೂ ಕನಿಕರದಿಂದಲೂ ಆವೃತಳಾಗಿ, ನಿಂತಳು. ಆಕೆಯ ಕಿವಿಯಲ್ಲಿ, ಜನರ ದ್ವೇಷದ ತಿರಸ್ಕಾರದ ಕ್ರೋಧದ ಸ್ವರಗಳೂ ಪೋಲೀಸರ ಮುಖ್ಯಸ್ಥನ ಕರ್ಕಶ ಧ್ವನಿಯೂ ಯಾರದೋ ಪಿಸುಮಾತೂ ಬೆರೆತು, ಕೆರಳಿದ ಜುಚ್ಚುನೊಣಗಳ ಗುಂಯಾರವವಾದಂತಾಯಿತು.

"ಆತ ತಪ್ಪು ಮಾಡಿದ್ದರೆ ನ್ಯಾಯಾಸ್ಥಾನಕ್ಕೆ ಕರಕೊಂಡು ಹೋಗಿ...."

"ಅವನ ಮೇಲೆ ಕನಿಕರವಿಡಿ, ಮಹಾಪ್ರಭೂ...."

"ಈ ರೀತಿ ಹೊಡೆಯೋದು ಖಂಡಿತವಾಗಿಯೂ ಕಾನೂನಿಗೆ ವಿರುದ್ಧ...."

"ಹೌದು! ಅದು ಕಾನೂನಿಗೆ ವಿರುದ್ಧವಲ್ಲದೇ ಹೋದರೆ ಎಲ್ಲರೂ ಹೀಗೆಯೇ ಹೊಡೀಬಹುದು. ಚೆನ್ನಾಗಿರ್ತದೆ ಆಗ!...."

ಜನರು ಎರಡು ಗುಂಪುಗಳಾದರು. ಒಂದು ಗುಂಪು ಕೂಗಾಡುತ್ತಾ ವಿನಂತಿ

ಮಾಡುತ್ತಾ ಪೋಲೀಸರ ಮುಖ್ಯಸ್ಥನನ್ನು ಸುತ್ತುವರಿಯಿತು. ಇನ್ನೊಂದು, ಸಣ್ಣ ಗುಂಪು, ನೆಲದಮೇಲೊರಗಿದ್ದ ರೀಬಿನ್‌ನ ಬಳಿ ನಿಂತಿತು. ಅದು ಹೆದರಿಕೆ ಹುಟ್ಟಿಸುವ ಮಾತುಗಳಲ್ಲಿ ಗೊಣಗಿತು. ಅವರಲ್ಲಿ ಕೆಲವರು ರೀಬಿನ್ನನನ್ನು ನೆಲದಿಂದ ಮೇಲಕ್ಕೆತ್ತಿದರು. ಪೋಲೀಸರು ಅವನ ಕೈಗಳನ್ನು ಮತ್ತೆ ಕಟ್ಟಲೆತ್ನಿಸಿದಾಗ ಜನರು ಕೂಗಿದರು:

"ಯಾಕಷ್ಟು ಅವಸರ, ರಾಕ್ಷಸರೆ !"

ರೀಬಿನ್, ತನ್ನ ಮುಖದಿಂದ ಮತ್ತು ಗಡ್ಡದಿಂದ, ಕೊಳೆಯನ್ನೂ ರಕ್ತವನ್ನೂ ಒರೆಸಿ ತನ್ನ ಸುತ್ತಲೂ ಮೌನವಾಗಿ ನೋಡಿದ. ಅವನ ದೃಷ್ಟಿ ತಾಯಿಯ ಮೇಲೆ ಬಿತ್ತು. ಆಕೆ ಮೈಯಾಡಿಸಿ, ತನಗರಿಯದಂತೆಯೇ ಕೈಬೀಸಿ, ಅವನತ್ತ ಬಾಗಿದಳು. ಆದರೆ ಆತ ಮುಖ ತಿರುಗಿಸಿಕೊಂಡ. ಕೆಲ ನಿಮಿಷಗಳ ಬಳಿಕ ಆತನ ಕಣ್ಣುಗಳು ಮತ್ತೊಮ್ಮೆ ಆಕೆಯನ್ನು ಹುಡುಕಿದುವು. ಆತ ನೆಟ್ಟಗೆ ನಿಂತು ತಲೆಯೆತ್ತಿದಾಗ, ಆತನ ರಕ್ತಮಯವಾದ ಕೆನ್ನೆಗಳು ನಡುಗಿದಂತೆ ತಾಯಿಗೆ ತೋರಿತು.

"ಆತ ನನ್ನ ಗುರುತು ಹಿಡಿದ ಅಲ್ಲವೆ? ಆತ ನಿಜವಾಗಿಯೂ ನನ್ನ ಗುರುತು ಹಿಡಿದಿರಬಹುದು."

ತಡೆಯಲಾಗದ ಬಯಕೆಯಿಂದ ಆತನನ್ನು ನೋಡುತ್ತ ತಾಯಿ ತಲೆಯಾಡಿಸಿದಳು. ಮರುಕ್ಷಣವೆ ನೀಲಿಗಣ್ಣಿನ ರೈತನೂ ರೀಬಿನ್ನನ ಬಳಿ ನಿಂತು ತನ್ನನ್ನೆ ನೋಡುತ್ತಿದ್ದುದನ್ನು ತಾಯಿ ಕಂಡಳು. ಅರೆಕ್ಷಣ ಆತನ ನೋಟ, ಅಪಾಯದ ಭಾವನೆಯನ್ನು ತಾಯಿಯ ಮನಸ್ಸಿನಲ್ಲಿ ಉಂಟುಮಾಡಿತು.

"ನಾನೆಂಥ ಕೆಲ್ಸ ಮಾಡ್ತಿರೋದು? ಹೀಗಾದ್ರೆ ಅವರು ನನ್ನನ್ನೂ ಹಿಡೀತಾರೆ !"

ಆ ರೈತ ರೀಬಿನ್ನನಿಗೇನನ್ನೊ ಹೇಳಿದ. ಉತ್ತರವಾಗಿ ರೀಬಿನ್ ತಲೆಯಲುಗಿಸಿದಂತೆ ತೋರಿತು. ದೇಹ ನಡುಗುತ್ತಿದ್ದರೂ ಸ್ಪಷ್ಟವಾಗಿಯೂ ಧೈರ್ಯಶಾಲಿಯಾಗಿಯೂ ಇದ್ದ ಸ್ವರದಲ್ಲಿ ಆತ ಹೇಳಿದ:

"ಈ ಭೂಮಿ ಮೇಲೆ ನಾನು ಒಬ್ಬಂಟಿಗನಲ್ಲ! ಎಲ್ಲಾ ಸತ್ಯವಾದಿಗಳನ್ನು ದಸ್ತಗಿರಿ ಮಾಡೋದು ಅವರಿಂದ ಎಂದೂ ಸಾಧ್ಯವಿಲ್ಲ. ನಾನು ಹೋಗಿರೋ ಜಾಗದಲ್ಲೆಲ್ಲಾ ನನ್ನ ನೆನಪು ಉಳೀತದೆ. ಅವರು ಗೂಡನ್ನ ಕಿತ್ತು ಹಾಕಿದ್ರೂ ಕೂಡಾ, ಎಲ್ಲಾ ಸಂಗಾತಿಗಳನ್ನ ಬಂಧಿಸಿದ್ರೂ ಕೂಡಾ...."

"ನನಗೋಸ್ಕರ ಅದನ್ನಾತ ಹೇಳ್ತಿದಾನೆ" ಎಂದು ತಾಯಿ ಊಹಿಸಿಕೊಂಡಳು.

"ಗರುಡ ಪಕ್ಷಿಗಳು ಸ್ವತಂತ್ರವಾಗಿ ಹಾರೋ ದಿನ ಬಂದೇ ಬರ್‍ತದೆ. ಜನರು ತಮ್ಮ ಸಂಕೋಲೆಗಳನ್ನ ಮುರೀತಾರೆ !"

ಹೆಂಗಸೊಬ್ಬಳು, ಒಂದು ಪಾತ್ರೆಯಲ್ಲಿ ನೀರು ತಂದು, ಊ-ಆ-ಎನ್ನುತ್ತಾ ರೀಬಿನ್ನನ ಮುಖವನ್ನು ತೊಳೆಯತೊಡಗಿದಳು. ಆಕೆಯ ಗಟ್ಟಿಯಾದ, ಕನಿಕರದಿಂದ ನಡುಗುತ್ತಿದ್ದ ಸ್ವರವೂ ರೀಬಿನ್ ಹೇಳುತ್ತಿದ್ದ ಮಾತುಗಳೂ ಬೆರೆತು, ತಾಯಿಗೆ ಯಾವುದೂ ಸ್ಪಷ್ಟವಾಗಿ ಕೇಳಿಸಲಿಲ್ಲ. ರೈತರದೊಂದು ಗುಂಪು ಪೋಲೀಸರ ಮುಖ್ಯಸ್ಥನೊಡನೆ ಅತ್ತ ಬಂದಿತು. ಯಾರೋ ಒಬ್ಬ ಏರು ಸ್ವರದಲ್ಲಿ ಹೇಳಿದ:

"ಕೈದೀನ ಕರೆದುಕೊಂಡು ಹೋಗೋಕೆ ಗಾಡಿ ತನ್ನಿ! ಯಾರ ಸರದಿ ಈ ಸಲ?"

ಬಳಿಕ ಪೋಲೀಸರ ಮುಖ್ಯಸ್ಥನ ಧ್ವನಿ ಕೇಳಿಸಿತು. ಆ ಧ್ವನಿ ಹೊಸತಾಗಿತ್ತು. ಬೇಸರದ ಛಾಯೆಯಿತ್ತು ಅದರಲ್ಲಿ.

"ನಾನು ನಿನಗೆ ಹೊಡೀಬಹುದು. ನೀನು ನನಗೆ ಹೊಡೀಕೂಡ್ದು. ತಿಳೀತೇನೊ, ಮೂರ್ಖ?"

"ಹಾಗೇನು? ಯಾರು ನೀನು ಹಾಗಾದರೆ—ದೇವರೆ?" ಎಂದು ರೀಬಿನ್ ರೇಗುತ್ತ ಹೇಳಿದ.

ಹತ್ತಿಕ್ಕಿದ ಹಲವು ಉದ್ಗಾರಗಳು ಹೊರಚಿಮ್ಮಿ ಆತನ ಸ್ವರ ಕೇಳಿಸದೆ ಹೋಯಿತು.

"ಅವರೊಡನೆ ವಾದಿಸ್ಬೇಡ, ಅಣ್ಣ! ಆತ ಇಲ್ಲಿ ಮುಖ್ಯಾಧಿಕಾರಿ, ಗೊತ್ತಿಲ್ವೆ?"

"ಅವನ್ಮೇಲೆ ಕೋಪಿಸ್ಕೋಕೂಡದು, ಮಹಾಪ್ರಭು. ಆತ ಮೈಮರೆತಿದ್ದಾನೆ!"

"ಸುಮ್ನಿರು, ಬೆಪ್ಪ!"

"ಇನ್ನು ನಿನ್ನನ್ನ ಶಹರಕ್ಕೆ ಕರಕೊಂಡು ಹೋಗ್ತಾರೆ."

"ಶಹರದಲ್ಲಿ ಹೆಚ್ಚು ನ್ಯಾಯ ಇದೆ!"

ಜನರ ಮಾತುಗಳಲ್ಲಿ ವಿನಂತಿಯ ಧ್ವನಿಯಿತ್ತು. ಇದಿರಾಡುವುದು ಅಸಾಧ್ಯ ಎಂಬ ಭಾವನೆಯಿತ್ತು. ಆ ಸ್ವರಗಳೆಲ್ಲ ಒಂದರಲ್ಲೊಂದು ಬೆರೆತು ಅಸ್ಪಷ್ಟವಾದ ಗುಂಯಾರವವಾದುವು. ಅದರಲ್ಲಿ ಯಾವ ಆಸೆಯೂ ಇರಲಿಲ್ಲ. ಪೋಲೀಸರು ರೀಬಿನ್ನನ ತೋಳನ್ನು ಹಿಡಿದುಕೊಂಡು ನಡೆಸುತ್ತಾ ಕಟ್ಟಡದೊಳಕ್ಕೆ ಮರೆಯಾದರು. ಮೆಲ್ಲನೆ ರೈತರು ಚೆದರಿದರು. ಆದರೆ ನೀಲಿಗಣ್ಣಿನ ರೈತ, ಹುಬ್ಬುಗಳಡಿಯಿಂದ ತನ್ನನ್ನೆ ನೋಡುತ್ತ ತನ್ನೆಡೆಗೆ ಬರುತ್ತಿದ್ದುದನ್ನು ತಾಯಿ ಕಂಡಳು. ಆಕೆಯ ಮೊಣಕಾಲುಗಳು ಕಂಪಿಸಿದುವು. ನಿರಾಶೆ ಆಕೆಯ ಹೃದಯವನ್ನು ಹಿಂಡಿತು. ಬವಳಿ ಬಂದ ಹಾಗಾಯಿತು.

"ನಾನೀಗ ಹೋಗಕೂಡದು, ಹೋಗಕೂಡದು," ಎಂದು ಆಕೆ ಯೋಚಿಸಿದಳು.

ಕಂಬಿಯನ್ನು ಗಟ್ಟಿಯಾಗಿ ಹಿಡಿದುಕೊಂಡು ಆಕೆ ಕಾದು ನಿಂತಳು.

ಪೋಲೀಸರ ಮುಖ್ಯಸ್ಥ ಕಟ್ಟಡದ ಮುಂಭಾಗದಲ್ಲಿ ನಿಂತು ತೋಳುಗಳನ್ನು ಬೀಸುತ್ತಾ, ಶುಷ್ಕವಾದ ಬೈಯುವ ಧ್ವನಿಯಲ್ಲಿ, ಹೇಳಿದ:

"ನೀವು ಮೂರ್ಖರು, ಬಡ್ಡಿಮಕ್ಕಳೆ! ನಿಮಗೆ ಗೊತ್ತಿಲ್ದೆ ಇರೋ ವಿಷಯಕ್ಕೆಲ್ಲಾ ಕೈಹಾಕ್ತೀರಾ.... ಇದು ರಾಜ್ಯಕ್ಕೆ ಸಂಬಂಧಿಸಿದ್ದು, ಪಶುಗಳೆ! ನೀವು ನನಗೆ ಧನ್ಯವಾದ ಅರ್ಪಿಸ್ಬೇಕು. ಮೊಣಕಾಲಮೇಲೆ ಊರಿ, ನಾನು ಇಷ್ಟು ಒಳ್ಳೆಯವನಾಗಿರೋದಕ್ಕೆ ಕೃತಜ್ಞತೆ ಸೂಚಿಸ್ಬೇಕು! ಬೇಕೂಂತಿದ್ರೆ ನಿಮಗೆಲ್ಲ ಸಶ್ರಮಶಿಕ್ಷೆ ಕೊಡಿಸ್ಬಲ್ಲೆ."

ಹತ್ತಾರು ರೈತರು ಟೋಪಿ ತೆಗೆದು ಕೈಲಿ ಹಿಡಿದುಕೊಂಡು ಆತನ ಮಾತಿಗೆ ಕಿವಿಗೊಡುತ್ತ ನಿಂತರು. ಮೋಡಗಳು ಕೆಳಕ್ಕಿಳಿದಂತೆ ಹೆಚ್ಚು ಕತ್ತಲಾಯಿತು. ನೀಲಿಗಣ್ಣಿನ ರೈತ ತಾಯಿ ನಿಂತಿದ್ದಲ್ಲಿಗೆ ಬಂದ.

“ಏನಾಗ್ತಿದೆ ನೋಡಿದಿಯಾ?”

“ಹೌದು” ಎಂದು ತಾಯಿ ಮೆಲ್ಲನೆ ಉತ್ತರವಿತ್ತಳು.

“ನಿಮಗೆ ಇಲ್ಲೇನು ಕೆಲಸ?” ಎಂದು ಆತ ಆಕೆಯನ್ನು ನೇರವಾಗಿ ನೋಡುತ್ತ ಕೇಳಿದ.

“ನಾನು ರೈತ ಹೆಂಗಸರಿಂದ ಲೇಸು ಕೊಂಡ್ಕೋತೀನಿ, ಬಟ್ಟೆ ಕೂಡಾ.”

ರೈತ ನಿಧಾನವಾಗಿ ತನ್ನ ಗಡ್ಡವನ್ನು ತೀಡಿಕೊಂಡ. ಆತನೊಮ್ಮೆ ಕಟ್ಟಡದತ್ತ ನೋಡಿ, ಮಂದವಾದ ಸ್ವರದಲ್ಲಿ ಹೇಳಿದ:

“ನಮ್ಮ ಹೆಂಗಸರು ಇದನ್ನೆಲ್ಲಾ ತಯಾರಿಸೋದಿಲ್ಲ.”

ತಾಯಿ ಆ ರೈತನ ಮೇಲೆ ದೃಷ್ಟಿ ಹಾಯಿಸುತ್ತ ಅಲ್ಲಿಂದ ಹೊರಡುವ ಯೋಚನೆ ಮಾಡಿದಳು. ಆತನ ಮುಖ ಸುಂದರವಾಗಿತ್ತು; ಯೋಚನಾಮಗ್ನವಾಗಿತ್ತು; ಆತ ಎತ್ತರವಾಗಿದ್ದ. ಅವನಿಗೆ ಅತೃಪ್ತಿ ತುಂಬಿದ ಕಣ್ಣುಗಳಿದ್ದುವು. ವಿಶಾಲವಾದ ಭುಜಗಳಿದ್ದುವು. ಅಲ್ಲಿ ಇಲ್ಲಿ ಹರಿದಿದ್ದರೂ ಶುಭ್ರವಾದ ಉಡುಗೆ ತೊಟ್ಟಿದ್ದ.

ಯಾವ ಕಾರಣಕ್ಕಾಗಿಯೋ ತಾಯಿ ಸಮಾಧಾನದ ನಿಟ್ಟುಸಿರು ಬಿಟ್ಟಳು. ತಡವುತ್ತಲಿದ್ದ ವಿಚಾರಗಳಿಗಿಂತಲೂ ವೇಗವಾದ ಹೃದಯದ ಕರೆಗೆ ಒಳಗಾಗುತ್ತ ತನಗೇ ಅನಿರೀಕ್ಷಿತವಾಗಿ ಒಮ್ಮೆಲೆ ತಾಯಿಯೆಂದಳು:

“ರಾತ್ರೆ ಹೊತ್ತು ಮಲಗೋಕೆ ಜಾಗ ಕೊಡ್ತೀಯಾ?”

ಆ ಪ್ರಶ್ನೆಯನ್ನು ತಾನು ಕೇಳಿದೊಡನೆಯೇ ಆಕೆಯ ಹೃದಯ ತಪ್ತವಾಯಿತು. ನೆಟ್ಟಗೆ ನಿಂತು ಅಚಲ ದೃಷ್ಟಿಯಿಂದ ಆತನನ್ನು ನೋಡಿದಳು. ಆದರೂ ಮುಳ್ಳಿ ನಂತಹ ಯೋಚನೆಗಳು ಆಕೆಯ ಮನಸ್ಸನ್ನು ಚುಚ್ಚುತ್ತಲಿದ್ದುವು:

“ನನ್ನಿಂದ ನಿಕೊಲಾಯ್ ಇವಾನೊವಿಚ್ ಹಾಳಾಗ್ತಾನೆ. ಇನ್ನು ಎಷ್ಟೋ ಎಷ್ಟೋ ಕಾಲ ನಾನು ಪಾವೆಲ್ನ ನೋಡೋಕಾಗೋದಿಲ್ಲ. ನನ್ನ ಚಚ್ಚಿ ಹಾಕ್ತಾರೆ!”

ಆ ರೈತ ಅವಸರವಿಲ್ಲದೆ ನೆಲವನ್ನೆ ದಿಟ್ಟಿಸುತ್ತ ಹೇಳಿದ:

“ರಾತ್ರೆ ಮಲಗೋಕೆ ಜಾಗವೆ? ಯಾಕಾಗ್ಬಾರದು? ಆದರೆ ನನ್ನದು ಬಡ ಗುಡಿಸಲು.”

“ದೊಡ್ಡ ಮನೇಲಿ ಮಲಗಿ ನನಗೂ ಅಭ್ಯಾಸವಿಲ್ಲ.”

“ಸರಿ” ಎಂದು ಆ ರೈತ, ತಲೆಯೆತ್ತಿ ತನ್ನ ಕಣ್ಣುಗಳಿಂದ ಆಕೆಯನ್ನು ಅಳೆಯುತ್ತ ಹೇಳಿದ. ಆಗ ಹೆಚ್ಚು ಕತ್ತಲಾಗಿತ್ತು. ಮುಚ್ಚಂಜೆಯ ಬೆಳಕಿನಲ್ಲಿ ಆತನ ಕಣ್ಣುಗಳು ಶೀತಲವಾಗಿ ಹೊಳೆದುವು; ಮುಖ ಮ್ಲಾನವಾಗಿತ್ತು.

ತಾನು ಕೆಳ ಕೆಳಕ್ಕೆ ಉರುಳುತ್ತಿದ್ದೇನೆಂಬ ಭಾವನೆಯಿಂದಲೇ ತಾಯಿ ಮೃದು ವಾಗಿ ಅಂದಳು:

“ಹಾಗಾದರೆ ಬರ್ತೀನಿ. ನನ್ನ ಪೆಟ್ಟಿಗೆ ಎತ್ಕೋತೀಯಾ?”

“ಹೂಂ.”

ಆತ ಭುಜ ಕುಲುಕಿ ಎದೆಯ ಮೇಲಿನ ಜಾಕೀಟನ್ನು ಸರಿಪಡಿಸಿದ.

"ಗಾಡಿ ಬಂತು," ಎಂದನಾತ.

ರೀಬಿನ್ ಕಟ್ಟಡದ ಮುಂಭಾಗದಲ್ಲಿ ಕಾಣಿಸಿಕೊಂಡ. ಆತನ ತಲೆಯನ್ನೂ ಮುಖವನ್ನೂ ಬೂದುಬಣ್ಣದ ಯಾವುದರಿಂದಲೋ ಮುಚ್ಚಿದ್ದರು. ಮತ್ತೊಮ್ಮೆ ಅವನ ಕೈಗಳನ್ನು ಕಟ್ಟಿದ್ದರು.

ಶೀತಲವಾದ ಸಂಜೆಗತ್ತಲನ್ನಿರಿಯುತ್ತ ಆತನ ಸ್ವರ ಕೇಳಿಸಿತು:

"ಹೋಗ್ತೀನಿ, ನಮಸ್ಕಾರ, ಒಳ್ಳೆಯ ಜನರೇ! ಸತ್ಯವನ್ನು ಹುಡುಕಿ; ಅದನ್ನ ಸಂಪತ್ತಿನ ಹಾಗೆ ಕಾಯ್ದಿಟ್ಟುಕೊಳ್ಳಿ! ಪರಿಶುದ್ಧವಾದ ಮಾತನ್ನ ನಿಮ್ಮಲ್ಲಿಗೆ ತರೋ ಮನುಷ್ಯನನ್ನ ನಂಬಿ. ಸತ್ಯದ ರಕ್ಷಣೆಗಾಗಿ ಯಾವ ತ್ಯಾಗಮಾಡೋದಕ್ಕೂ ಹಿಂಜರೀಬೇಡಿ!"

ಪೋಲೀಸರ ಮುಖ್ಯಸ್ಥ ಗರ್ಜಿಸಿದ:

"ಮುಚ್ಚು ಬಾಯಿ! ಏ ಮೂರ್ಖ ಪೋಲೀಸ್ನೋನೆ, ಹೊಡಿಯೋ ಗಾಡಿ!"

"ನೀವು ಕಳಕೊಳ್ಳುವಂಥಾದ್ದು ಏನಿದೆ? ನಿಮ್ಮ ಬದುಕಿನತ್ತ ನೋಡಿ!"

ಗಾಡಿ ಹೊರಟಿತು, ಅದರಲ್ಲಿ ಇಬ್ಬರು ಪೋಲೀಸರ ನಡುವೆ ಕುಳಿತುಕೊಳ್ಳುತ್ತ ರೀಬಿನ್ ಕೂಗಿ ಹೇಳಿದ:

"ನೀವು ಯಾಕೆ ಉಪವಾಸಬಿದ್ದು ಸಾಯ್ಬೇಕು? ನೀವೊಮ್ಮೆ ಸ್ವತಂತ್ರರಾದರೆ, ನಿಮಗೆ ರೊಟ್ಟಿ ಸಿಗ್ತದೆ, ನ್ಯಾಯ ಸಿಗ್ತದೆ! ಇದೀಗ ವಿಷಯ! ಹೋಗ್ತೇನೆ, ನಮಸ್ಕಾರ, ಒಳ್ಳೆಯ ಜನರೇ!"

ಗಾಡಿಯ ಚಕ್ರಗಳ ಗಡಗಡ ಸದ್ದಿನಲ್ಲಿ, ಕುದುರೆಗಳ ಖುರಪುಟ ಧ್ವನಿಯಲ್ಲಿ, ಪೋಲೀಸರ ಮುಖ್ಯಸ್ಥನ ಕೂಗಾಟದಲ್ಲಿ, ಆತನ ಸ್ವರ ಅಡಗಿ ಹೋಯಿತು.

"ಎಲ್ಲಾ ಮುಗಿಯಿತು," ಎಂದು ಆ ರೈತ ತಲೆಯಲುಗಿಸುತ್ತ ನುಡಿದು, ತಾಯಿಯತ್ತ ತಿರುಗಿ, ಇಳಿಸ್ವರದಲ್ಲಿ ಮುಂದುವರಿಸಿದ: "ನಿಲ್ದಾಣದ ಚಾದಂಗಡಿಯಲ್ಲಿ ಕಾದಿರಿ. ಬೇಗ್ನೆ ಬರ್ತೀನಿ."

ತಾಯಿ ಅಂಗಡಿಯ ಕೊಠಡಿಯೊಳಕ್ಕೆ ಹೋಗಿ, ಮೇಜಿನ ಬಳಿ ಸಮೊವಾರಿನ ಎದುರು ಕುಳಿತಳು. ಒಂದು ಚೂರು ಬ್ರೆಡ್ಡನ್ನೆತ್ತಿ ನೋಡಿ, ಪುನಃ ಅದನ್ನು ಮೆಲ್ಲನೆ ತಟ್ಟೆಯ ಮೇಲಿಟ್ಟಳು. ಮತ್ತೊಮ್ಮೆ ಬವಳಿ ಬಂದಂತಾಗಿ, ತಿನ್ನುವುದಾಗಲೇ ಇಲ್ಲ. ಮೈ ಉರಿಯಿತು. ಅಸ್ವಾಸ್ಥ್ಯದಿಂದ ಎದೆಗುಂಡಿಗೆಯ ಬಡಿತ ತೀವ್ರವಾಯಿತು. ತಲೆ ತಿರುಗಿತು. ಆಕೆಯ ಎದುರು ನೀಲಿಗಣ್ಣಿನ ರೈತನ ಮುಖ ಕಾಣಿಸುತ್ತಿತ್ತು – ವಿಚಿತ್ರವಾದ ರೀತಿಯಲ್ಲಿ ಅಪೂರ್ಣವಾಗಿದ್ದ, ಅಪನಂಬಿಕೆ ಹುಟ್ಟಿಸುತ್ತಿದ್ದ ಮುಖ. ಆತ ತನಗೆ ಮೋಸಮಾಡುವನೆಂದು ಯೋಚಿಸಲು ಯಾವ ಕಾರಣಕ್ಕಾಗಿಯೋ ತಾಯಿ ಇಷ್ಟಪಡಲಿಲ್ಲ. ಆದರೆ ಆ ವಿಚಾರ ಆಗಲೆ ಆಕೆಯ ಮನಸನ್ನು ಹೊಕ್ಕು, ಹೃದಯದ ಮೇಲೆ ಮಂದವಾಗಿ, ಚಲಿಸದೆ ಒರಗಿಕೊಂಡಿತು.

ಆಕೆ ಕ್ಷೀಣವಾಗಿ ಯೋಚಿಸಿದಳು:

"ನನ್ನನ್ನಾತ ಗುರುತಿಸಿದ; ಗುರುತಿಸಿ ಊಹಿಸ್ಕೊಂಡ."

ಆ ವಿಚಾರ ಮುಂದಕ್ಕೆ ಬೆಳೆಯಲಿಲ್ಲ. ನಿರಾಶೆಯಲ್ಲೂ ಉಸಿರು ಕಟ್ಟಿಸುವ ಅಸ್ವಾಸ್ಥ್ಯದಲ್ಲೂ ಅದು ಮುಳುಗಿ ಹೋಯಿತು.

ಕಿಟಕಿಯಾಚೆ, ಸದ್ದಿನ ಬದಲು ಯೋಚನಾಮಗ್ನವಾದ ಮೌನ ನೆಲೆಸಿತು. ಅದು, ವಾತಾವರಣದಲ್ಲಿ ಹೆಡೆಯಾಡಿಸುತ್ತಿದ್ದ ಭೀತಿಯ ವ್ಯಥೆಯ ಭಾವನೆಯನ್ನು ತೋರಿಸಿಕೊಟ್ಟಿತು. ತಾನು ಒಬ್ಬಂಟಿಗಳೆಂಬ ತಾಯಿಯ ಭಾವನೆಯನ್ನು ತೀಕ್ಷ್ಣ ಗೊಳಿಸಿ, ಬೂದಿಯಷ್ಟೇ ಮೃದುವಾದ ಬೂದು ಬಣ್ಣದ ನಸುಬೆಳಕಿನಿಂದ ಹೃದಯ ವನ್ನು ಅದು ತುಂಬಿತು.

ಅಂಗಡಿಯ ಹುಡುಗಿ ಬಾಗಿಲ ಬಳಿ ಕಾಣಿಸಿಕೊಂಡಳು.

"ಕರಿದ ಮೊಟ್ಟೆ ತರಲೆ!" ಎಂದು ಆಕೆ ಕೇಳಿದಳು.

"ಏನೂ ಬೇಡ. ನನಗೆ ಹಸಿವಿಲ್ಲ. ಆ ಕೂಗು ಗಲಾಟೇಲಿ ಹೆದರ್ಕೊಂಡೆ."

ಹುಡುಗಿ ಮೇಜಿನ ಬಳಿ ಬಂದು, ಉದ್ವೇಗದಲ್ಲಿ ಇಳಿಸ್ವರದಲ್ಲಿ ಹೇಳಿದಳು:

"ಪೋಲೀಸರ ಮುಖ್ಯಸ್ಥ ಅವನಿಗೆ ಹ್ಯಾಗೆ ಹೊಡೆದಾಂತ ನೀವು ನೋಡ್ಬೇಕಿತ್ತು! ನಾನು ಪತ್ತಿರ್ದಲ್ಲೇ ನಿಂತಿದ್ದೆ. ಹೊಡೆದಾಗ ಹಲ್ಲು ಮುರೀತು. ಅವನು ಉಗುಳೋದನ್ನ ನೋಡ್ದೆ. ದಪ್ಪಗೆ ಕಪ್ಪಾಗಿ ಕೆಂಪಗೆ ಇತ್ತು ರಕ್ತ.... ಅವನ ಕಣ್ಣುಗಳು ಹ್ಯಾಗೆ ಊದ್ಕೊಂಡುವೂಂತ! ಆತ ಟಾರು ಕೆಲಸದವನಂತೆ. ಪೋಲೀಸ್ ಅಧಿಕಾರಿ ಮೇಲ್ಗಡೆ ಮಲಗಿದ್ದಾನೆ. ಅಮಲೇರಿದೆ. ಆದ್ರೂ ಇನ್ನೂ ಕುಡ್ಯೋಕೆ ಬೇಕಂತೆ. ಅವರದೊಂದು ದೊಡ್ಡ ಗುಂಪೇ ಇದೇಂತ ಅಧಿಕಾರಿ ಹೇಳ್ತಾನೆ. ಈ ಗಡ್ಡದವನು ಅವರ ನಾಯಕನಂತೆ. ಮೂವರ್ನ ಹಿಡಿದ್ರಂತೆ. ಒಬ್ಬ ಸಿಗಲಿಲ್ಲ. ಇದೇ ಗುಂಪಿಗೆ ಸೇರಿದ ಒಬ್ಬ ಉಪಾಧ್ಯಾಯನನ್ನೂ ಹಿಡಿದ್ರಂತೆ. ಅವರು ದೇವರನ್ನ ನಂಬೋದಿಲ್ಲ. ಬೇರೆಯವರೂ ನಂಬ ಕೂಡ್ದೂಂತ ಪ್ರಚಾರ ಮಾಡ್ತಾರೆ. ಹೀಗೆ ಮಾಡಿ ಚರ್ಚ್‌ಗಳನ್ನ ದೋಚ್ಬೇಕೂಂತ ಅವರ ಯೋಚ್ನೆ. ಅಂಥ ಜನ ಅವರು! ನಮ್ಮ ರೈತರಲ್ಲಿ ಕೆಲವರು ಅವನ ಬಗೆಗೆ ಕನಿಕರ ತೋರಿಸಿದ್ರು. ಬೇರೆ ಕೆಲವರು ಅವನನ್ನ ಮುಗಿಸ್ಬಿಡ್ಬೇಕು – ಅಂದ್ರು. ಓ, ಅಂಥ ನೀಚ ರೈತರು ನಮ್ಮಲ್ಲಿ ಬೇಕಾದಷ್ಟು ಜನ ಇದ್ದಾರೆ!"

ತನ್ನ ಭೀತಿಯನ್ನೂ ಅಪಾಯದ ನಿರೀಕ್ಷೆಯನ್ನೂ ಮರೆಯಲು ತಾಯಿ, ವೇಗವಾಗಿ ಆ ಹುಡುಗಿ ಆಡುತ್ತಿದ್ದ ಪೊಂದಿಕೆಯಿಲ್ಲದ ಮಾತುಗಳನ್ನು ಮನಸ್ಸಿಟ್ಟು ಕೇಳಿದಳು. ತನ್ನ ಮಾತು ಕೇಳಲು ಯಾರೋ ಒಬ್ಬರು ದೊರೆತರೆಂದು ಹುಡುಗಿಗೆ ಸಂತೋಷವಾದಂತಿತ್ತು. ಆಕೆ ಒಂದೇ ಸಮನೆ, ಉದ್ವೇಗಗೊಂಡರೂ ಇಳಿಸ್ವರದಲ್ಲೇ, ಮಾತನಾಡುತ್ತ ಹೋದಳು:

"ಬೆಳೆ ಸರಿಯಾಗಿಲ್ದೆ ಹೀಗಾಗುತ್ತೇಂತ ಅಪ್ಪ ಹೇಳ್ತಾನೆ. ಈ ಎರಡು ವರ್ಷಗಳಿಂದ ಏನೂ ಬೆಳೆದಿಲ್ಲ – ಎಲ್ಲಾ ಬಾಡಿ ಬತ್ತಿಹೋಗಿದೆ. ಆದ್ದರಿಂದಲೇ ನಮ್ಮ

ರೈತರು ನೀಚರಾಗೋದು. ಅವರು ಕೂಗಾಡ್ತಾರೆ, ಹಳ್ಳಿಯ ಸಭೆಗಳಲ್ಲಿ ಜಗಳಾಡ್ತಾರೆ. ಒಮ್ಮೆ ಏನಾಯ್ತೂಂತ! ವಸ್ಯುಕೋವ್ ಅಂತ ಒಬ್ಬ ರೈತ. ಸಾಲ ತೀರ್ಸೋಕಾಗ್ಲಿಲ್ಲ. ಹೊಲ ಹರಾಜು ಹಾಕಿದ್ರು. ಆಗ ಹಳ್ಳಿಯ ಮುಖ್ಯಸ್ಥನ ಮುಖಕ್ಕೇ ವಸ್ಯುಕೋವ್ ಹ್ಯಾಗೆ ಕೊಟ್ಟಾಂತ! ಏಟುಕೊಡ್ತಾ 'ತಗೋ ಸಾಲ' ಅಂದ."

ಬಾಗಿಲಿನಾಚೆ ಭಾರವಾದ ಹೆಜ್ಜೆಯ ಸಪ್ಪಳ ಕೇಳಿಸಿತು. ತಾಯಿ ಮೇಜನ್ನು ಹಿಡಿದು ಎದ್ದು ನಿಂತಳು.

ನೀಲಿಗಣ್ಣಿನ ರೈತ ಟೋಪಿ ತೆಗೆಯದೆಯೇ ಒಳಬಂದು ಹೇಳಿದ:

"ಎಲ್ಲಿದೆ ನಿಮ್ಮ ಪೆಟ್ಟಿಗೆ?"

ಅದನ್ನು ಸುಲಭವಾಗಿ ಎತ್ತಿ ಆತ ಅಲುಗಾಡಿಸಿದ.

"ಖಾಲಿ.... ಮಾರ್ಕ, ಈ ಹೆಂಗಸಿಗೆ ನನ್ನ ಗುಡಿಸಲು ತೋರ್ಸು."

ಹಿಂತಿರುಗಿ ನೋಡದೆಯೇ ಆತ ಹೊರಹೋದ.

"ರಾತ್ರೆ ಊರಲ್ಲೇ ಇರ್ತೀಯೇನು?" ಎಂದು ಹುಡುಗಿ ಕೇಳಿದಳು.

"ಹೌದು. ಲೇಸಿಗೋಸ್ಕರ ಬಂದೆ–ನಾನು ಲೇಸು ಕೊಂಡ್ಕೋತೀನಿ...."

"ಇಲ್ಲಿ ಯಾರೂ ಲೇಸು ಹೆಣೆಯೋದಿಲ್ಲ. ತಿಂಕೋವೊದಲ್ಲೂ ದಾರ್ಯಿನೊದಲ್ಲೂ ಲೇಸು ಹೆಣೀತಾರೆ."

"ನಾಳೆ ಅಲ್ಲಿಗೆ ಹೋಗ್ತೀನಿ...."

ಚಹಾಗೆ ದುಡ್ಡು ತೆತ್ತು ತಾಯಿ, ಮೂರು ಕೊಪೆಕ್‌ಗಳನ್ನು ಪ್ರತ್ಯೇಕವಾಗಿ ಹುಡುಗಿಯ ಕೈಯಲ್ಲಿಟ್ಟಳು. ಹುಡುಗಿಗೆ ಸಂತೋಷವಾಯಿತು. ಇಬ್ಬರೂ ಹೊರ ಹೋದರು. ಬರಿಗಾಲಿನಲ್ಲಿದ್ದ ಹುಡುಗಿ ಬೇಗ ಬೇಗನೆ ಒದ್ದೆ ನೆಲದ ಮೇಲೆ ಹೆಜ್ಜೆ ಇಟ್ಟಳು.

"ಬೇಕಾದರೆ ನಾನು ದಾರ್ಯಿನೊಗೆ ಹೋಗಿ, ಎಲ್ಲಾ ಹೆಂಗಸ್ರಿಗೂ ಇಲ್ಲಿಗೇ ಲೇಸು ತಗೊಂಬನ್ನೀಂತ ಹೇಳ್ತೀನಿ. ಅವರೇ ಬರ್ತಾರೆ. ನೀವು ಅಲ್ಲಿಗೆ ಗಾಡಿ ಕಟ್ಟಿಸ್ಬೇಕಾದ್ದಿಲ್ಲ. ಅಲ್ಲದೆ, ಆ ಹಳ್ಳಿ ದೂರವೂ ಇಲ್ಲ...."

"ಬೇಡ, ಮುದ್ದು," ಎಂದು, ಹುಡುಗಿಯಷ್ಟೇ ವೇಗವಾಗಿ ನಡೆಯುತ್ತ, ತಾಯಿ ಹೇಳಿದಳು. ಶೀತಲ ಗಾಳಿಯಿಂದ ಆಕೆಗೆ ನೆಮ್ಮದಿ ಎನಿಸಿತು. ಅಸ್ಪಷ್ಟ ನಿರ್ಧಾರವೊಂದು ಮೆಲ್ಲನೆ ಆಕೆಯೊಳಗೆ ರೂಪುಗೊಂಡಿತು; ನಿಧಾನವಾಗಿ ಅಳುಕುತ್ತ ಬೆಳೆಯಿತು. ಅದು ಬೇಗನೆ ಸ್ಪಷ್ಟಗೊಳ್ಳುವಂತೆ ಮಾಡುವ ಬಯಕೆಯಿಂದ ಆಕೆ ತನ್ನೊಳಗೇ ಹೇಳುತ್ತಲಿದ್ದಳು:

"ನಾನೇನು ಮಾಡ್ಲಿ? ಎಲ್ಲವನ್ನೂ ಅವರಿಗೆ ಹೇಳಿಬಿಟ್ಟರೆ...."

ಚಳಿ–ಕತ್ತಲು–ಕೆಸರು. ಗುಡಿಸಲುಗಳ ಕಿಟಕಿಗಳಲ್ಲಿ ಕೆಂಪಗಿನ ಬೆಳಕಿತ್ತು. ಆ ನೀರವತೆಯಲ್ಲಿ ಸಣ್ಣಪುಟ್ಟ ಕೂಗುಗಳೂ ಸಾಕುಪ್ರಾಣಿಗಳ ನಿದ್ದೆಗಣ್ಣಿನ ಕರೆಗಳೂ ಕೇಳಿಸುತ್ತಿದ್ದುವು. ಕರಿದಾದ ಹೃದಯ ಹಿಂಡುವ ಧ್ಯಾನದಲ್ಲಿ ಆ ಪ್ರದೇಶ ಮುಳುಗಿತ್ತು.

ಹುಡುಗಿಯೆಂದಳು:

"ಇಗೋ, ಇದೀಗ ರಾತ್ರೆ ಮಲಗೋಕೆ ನೀನು ಆರಿಸಿದ ಮುರುಕು ಗುಡಿಸಲು. ಈತ ಕಡುಬಡವನಾದ ರೈತ."

ಆ ಹುಡುಗಿ ಬಾಗಿಲಿನತ್ತ ಕೈಚಾಚಿ ಅದನ್ನು ತೆರೆದಳು. ತಲೆಯನ್ನು ಒಳಹಾಕಿ ಕರೆದಳು.

"ಓ, ತತ್ಯಾನ ಚಿಕ್ಕಿ!"

ಅಷ್ಟು ಹೇಳಿ ಆಕೆ ಓಡಿಹೋದಳು.

"ಹೋಗಿ ಬರ್‍ತೀನಿ!" ಎಂದು ಅವಳ ಸ್ವರ ಕತ್ತಲೆಯೊಳಗಿಂದ ಕೇಳಿಸಿತು.

೧೭

ತಾಯಿ ಒಳಹಾದು, ಸರಿಯಾಗಿ ನೋಡಲೆಂದು ಕಣ್ಣುಗಳಿಗೆ ಕೈ ಏರಿಸಿದಳು. ಅಲ್ಲಿ ಹೆಚ್ಚು ಜಾಗವಿರಲಿಲ್ಲ. ಆದರೆ ಆ ಸ್ವಚ್ಛತೆಯನ್ನು ಕಂಡು ತಾಯಿ ಚಕಿತಳಾದಳು. ಯುವತಿಯೊಬ್ಬಳು ಒಲೆಯ ಬದಿಯಿಂದ ತಾಯಿಯನ್ನು ನೋಡಿ, ಮೌನವಾಗಿ ತಲೆಬಾಗಿ ವಂದಿಸಿ, ಹಿಂದೆ ಸರಿದಳು. ಮೇಜಿನ ಮೇಲೊಂದು ದೀಪ ಉರಿಯುತ್ತಿತ್ತು.

ಗುಡಿಸಲಿನ ಯಜಮಾನ ಮೇಜಿನ ಬಳಿ ಕುಳಿತು ತಾಯಿಯ ಕಣ್ಣುಗಳನ್ನು ನೋಡುತ್ತಾ ಬೆರಳುಗಳಿಂದ ಮೇಜನ್ನು ತಟ್ಟುತ್ತಿದ್ದ.

ಸ್ವಲ್ಪ ತಡೆದು ಆತನೆಂದ:

"ಒಳಗೆ ಬನ್ನಿ. ತತ್ಯಾನ, ನೀನು ಹೋಗಿ ಪ್ಯೋತ್ರ್‌ನ ಕರಿ. ಬೇಗ್ನೆ."

ಆ ಹೆಂಗಸು ಅತಿಥಿಯ ಕಡೆ ನೋಡದೆಯೇ ಹೊರಹೋದಳು. ತಾಯಿ ಆ ಮನುಷ್ಯನಿಗಿದಿರು ಬೆಂಚಿನ ಮೇಲೆ ಕುಳಿತು ಸುತ್ತಲೂ ನೋಡಿದಳು. ಆಕೆಯ ಪೆಟ್ಟಿಗೆ ಎಲ್ಲೂ ಕಾಣಿಸಲಿಲ್ಲ. ಗುಡಿಸಲ ತುಂಬ ಬೇಸರಪಡಿಸುವ ಮೌನವಿತ್ತು. ದೀಪವೊಂದೆ ಆಗಾಗ್ಗೆ ತೂರಾಡುತ್ತಾ ಆ ಮೌನಕ್ಕೆ ಭಂಗ ತರುತ್ತಿತ್ತು. ಆ ರೈತನ ಕಾತರದ ಗಂಟಿಕ್ಕಿದ ಮುಖ ತಾಯಿಯ ಕಣ್ಣುಗಳ ಮುಂದೆ ಅಸ್ಪಷ್ಟವಾಗಿ ತೂಗಿ, ಬೇಸರದ ಭಾವನೆಗೆ ಎಡೆಕೊಟ್ಟಿತು.

"ನನ್ನ ಪೆಟ್ಟಿಗೆಯೆಲ್ಲಿ?" ಎಂದು ತಾಯಿ ಒಮ್ಮೆಲೆ ಗಟ್ಟಿಯಾಗಿ ಕೇಳಿದಳು. ಆ ಸ್ವರದಿಂದ ಆಕೆಗೇ ದಿಗ್ಭ್ರಮೆಯಾಯಿತು.

ಆ ರೈತ ಭುಜ ಕುಪ್ಪಳಿಸಿದ.

"ಅದೇನೂ ಕಳೆದು ಹೋಗೋದಿಲ್ಲ," ಎಂದ. ಸ್ವರ ತಗ್ಗಿಸಿ ಮಾತು ಮುಂದುವರಿಸಿದ: "ಅಂಗಡಿಯಲ್ಲಿ ಬೇಕೂಂತ್ಲೇ, ಹುಡುಗಿಗೆ ಕೇಳಿಸ್ಲೀಂತ, ಪೆಟ್ಟಿಗೆ ಖಾಲಿಯಾಗಿದೆ ಅಂದೆ. ಅದು ಖಾಲಿಯಾಗಿಲ್ಲ. ತುಂಬ ಭಾರವಾಗಿದೆ."

"ಹೌದು, ಇದ್ದರೇನು?" ಎಂದು ತಾಯಿ ಕೇಳಿದಳು.

ಆತನೆದ್ದು, ತಾಯಿಯ ಬಳಿ ಬಂದು, ಸಮೀಪಕ್ಕೆ ಬಾಗಿ ಪಿಸುಮಾತಿನಲ್ಲಿ ಕೇಳಿದ:

"ಈ ಮನುಷ್ಯ ನಿಮಗೆ ಗುರುತೆ?"

ಆ ಪ್ರಶ್ನೆಯಿಂದ ಆಶ್ಚರ್ಯಪಟ್ಟರೂ ತಾಯಿ, ದೃಢಮನಸ್ಸಿನಿಂದ, "ಹೌದು," ಎಂದು ಉತ್ತರವಿತ್ತಳು. ಈ ಪುಟ್ಟ ಪದ, ಒಳಗಿನದೆಲ್ಲವನ್ನೂ ಒಮ್ಮೆಲೆ ಬೆಳಗಿದಂತೆ, ಎಲ್ಲವನ್ನೂ ಸ್ಪಷ್ಟಗೊಳಿಸಿದಂತೆ, ತಾಯಿಗೆ ತೋರಿತು. ಆಕೆ ಸಮಾಧಾನದ ನಿಟ್ಟುಸಿರು ಬಿಟ್ಟು ಬೆಂಚಿನ ಮೇಲೆ ಹೆಚ್ಚು ದೃಢವಾಗಿ ಕುಳಿತಳು.

ರೈತ ತುಟಿ ತೆರೆದು ಹಲ್ಲುಕಿರಿದ.

"ನೀವು ಅವನಿಗೆ ಸನ್ನೆ ಮಾಡಿದಾಗ ಹಾಗೂ ಆತ ಉತ್ತರ ಕೊಟ್ಬಾಗ್ಲೇ ಊಹಿಸ್ಕೊಂಡೆ. ನಿಮ್ಮ ಪರಿಚಯ ಉಂಟೇಂತ ಆತನನ್ನ ನಾನು ಪಿಸುಮಾತ್ನಲ್ಲಿ ಕೇಳ್ದೆ."

"ಅವನು ಏನಂದ?" ಎಂದಳು ತಾಯಿ, ತಿಳಿಯುವ ಆತುರದಿಂದ.

"ಅವನೆ? ನಾವು ಬಹಳ ಜನ ಇದ್ದೀವಿ ಅಂದ. ಬಹಳ ಜನ ಅಂತ ಹೇಳ್ದ."

ರೈತ, ಕುತೂಹಲದ ದೃಷ್ಟಿಯಿಂದ ತನ್ನ ಅತಿಥಿಯತ್ತ ನೋಡಿ, ಮತ್ತೊಮ್ಮೆ ಮುಗುಳ್ನಕ್ಕು ಹೇಳಿದ:

"ಅವನು ಮಹಾ ಬಲಶಾಲಿ! ಧೈರ್ಯವಂತ! ನೇರವಾಗಿ ಹೇಳಿದ – 'ಅವರಲ್ಲಿ ನಾನೂ ಒಬ್ಬ' ಅಂತ.... ಅವರು ಎಷ್ಟೇ ಹೊಡೀಲಿ, ಹೇಳ್ಬೇಕಾದ್ದನ್ನ ಆತ ಹೇಳ್ತಾನೇ ಇದ್ದ."

ಕ್ಷೀಣವಾಗಿದ್ದ ಅಳುಕುತ್ತಿದ್ದ ಆತನ ಸ್ವರವನ್ನು ಕೇಳುತ್ತ, ಅಪೂರ್ಣವಾಗಿದ್ದಂತೆ ಕಂಡ ಮುಖದಲ್ಲಿನ ನಿಷ್ಕಳಂಕ ಕಣ್ಣುಗಳನ್ನು ನೋಡುತ್ತ, ತಾಯಿ ಹೆಚ್ಚು ಹೆಚ್ಚು ಚೇತರಿಸಿಕೊಂಡಳು. ಭಯ ಕಸಿವಿಸಿಗಳ ಬದಲು ಕ್ರಮೇಣ ರೀಬಿನ್ನನ ಕುರಿತಾದ ತೀವ್ರ ಅನುತಾಪ ನೆಲೆಸಿತು.

"ಪಿಶಾಚಿಗಳು! ಪಶುಗಳು!" ಎಂದಾಕೆ ಕಹಿಯಾದ ಕ್ರೋಧದಿಂದ ಒಮ್ಮೆಲೆ ಕೂಗಿ ಅಳತೊಡಗಿದಳು.

ರೈತ ದುಃಖಪಡುತ್ತ ತಲೆಯಾಡಿಸುತ್ತ ದೂರ ಸರಿದ.

"ಈ ಅಧಿಕಾರಿಗಳು ತಮ್ಮ ಕೆಲವು ಭಂಟರನಿಟ್ಟುಕೊಂಡಿದ್ದಾರೆ; ನಿಜ!"

ಮತ್ತೊಮ್ಮೆ ತಾಯಿಯತ್ತ ತಿರುಗಿ ಆತ ಮೆಲುಧ್ವನಿಯಲ್ಲಿ ಹೇಳಿದ:

"ಪೆಟ್ಟಿಗೆಯಲ್ಲಿ ಪತ್ರಿಕೆಗಳಿವೇಂತ ತೋರುತ್ತೆ – ಹೌದೆ?"

"ಹೌದು," ಎಂದು ತಾಯಿ ಕಣ್ಣೀರನ್ನೊರೆಸುತ್ತ ಸರಳವಾಗಿ ಅಂದಳು: "ಅವನಿಗೆ ತಲಪಿಸೋಕೆ ಅವುಗಳನ್ನ ತಂದೆ."

ರೈತ ಹುಬ್ಬುಗಂಟಿಕ್ಕಿ, ತನ್ನ ಗಡ್ಡವನ್ನು ಬಿಗಿಯಾಗಿ ಹಿಡಿದು, ಕೊಠಡಿಯ ಮೂಲೆಯನ್ನು ನೋಡುತ್ತ ನಿಂತ. ಕೊನೆಯಲ್ಲಿ ಅವನೆಂದ:

"ಪತ್ರಿಕೆಗಳು ನಮಗೂ ತಲುಪುತ್ತಿದ್ದವು, ಪುಸ್ತಕಗಳೂ ಕೂಡಾ. ನಮಗೆ ಅವನ ಪರಿಚಯವಿತ್ತು. ನಾವು ಅವನನ್ನ ನೋಡಿದ್ದು!"

ಆತ ಮಾತು ನಿಲ್ಲಿಸಿ ಕ್ಷಣಕಾಲ ಯೋಚಿಸಿದ.

"ಈಗೇನು ಮಾಡ್ಬೇಕೂಂತಿದೀಯು – ಆ ಪೆಟ್ಗೇನ?"

ಪ್ರಶ್ನಾರ್ಥಕ ದೃಷ್ಟಿಯಲ್ಲಿ ತಾಯಿ, "ನಿಮ್ಮ ವಶ ಬಿಡ್ತೀನಿ," ಎಂದಳು.

ಆತ ಪ್ರತಿಭಟಿಸಲಿಲ್ಲ, ಆಶ್ಚರ್ಯವನ್ನೂ ತೋರಿಸಲಿಲ್ಲ.

"ನಮ್ಮ ವಶ," ಎಂದು ಆತ ಪುನರುಚ್ಚರಿಸಿದ.

ಒಪ್ಪಿಗೆಯಿಂದ ತಲೆದೂಗಿ, ಮೇಜಿನ ಬಳಿ ಕುಳಿತು, ಬೆರಳುಗಳಿಂದ ಆತ ಗಡ್ಡ ವನ್ನು ಬಾಚಿದ.

ರೀಬಿನ್‌ನಿಗೆ ದೊರೆತ ಚಿತ್ರಹಿಂಸೆಯ ಕ್ರೂರ ಚಿತ್ರ, ಆಕೆಯ ಸ್ಮರಣೆಯಲ್ಲಿ ನಿರ್ದಯವಾಗಿ ಮತ್ತೆಮತ್ತೆ ಪುಟವೇಳುತ್ತಿತ್ತು. ಆತನ ಪ್ರತಿಬಿಂಬ ಬೇರೆಲ್ಲ ವಿಚಾರ ಗಳನ್ನೂ ಆಕೆಯ ಮನಸ್ಸಿನಿಂದ ಹೊಡೆದೋಡಿಸಿತು. ಮಾನವಕೋಟಿಗಾಗಿ ಆಕೆ ಯಲ್ಲಿದ್ದ ನೋವಿನ ಅವಮಾನದ ಭಾವನೆ ಉಳಿದೆಲ್ಲ ವಿಷಯಗಳನ್ನೂ ಹೊರಕ್ಕ ಟ್ಟಿತು. ಹೀಗಾಗಿ ತನ್ನ ಪೆಟ್ಟಿಗೆಯ ಇಲ್ಲವೆ ಬೇರೆ ಯಾವ ವಿಷಯವನ್ನು ಯೋಚಿ ಸುವುದೂ ಆಕೆಯಿಂದಾಗಲಿಲ್ಲ. ಕಂಬನಿ ತಡೆಯಿಲ್ಲದೆ ಹರಿಯಿತು. ಆದರೆ ಮುಖ ಮುದ್ರೆ ಗಂಭೀರವಾಗಿತ್ತು; ಸ್ವರ ದೃಢವಾಗಿತ್ತು.

"ಮನುಷ್ಯರನ್ನ ದೋಚಿ, ಹೊಡೆದು, ಧೂಳಲ್ಲಿ ಹೊರಳಾಡಿಸ್ತಾರಲ್ಲಾ!... ಅವರೆಲ್ಲ ನಾಶವಾಗಲಿ!" ಎಂದಳು ತಾಯಿ.

"ಅವರು ಬಲಿಷ್ಠರಾಗಿದ್ದಾರೆ, ತುಂಬಾ ಬಲಿಷ್ಠರಾಗಿದ್ದಾರೆ," ಎಂದು ರೈತ ಮೆಲ್ಲನೆ ಉತ್ತರವಿತ್ತ.

ನಿರಾಶೆಯಿಂದ ತಾಯಿ ಉದ್ಗರಿಸಿದಳು:

"ಅವರಿಗೆ ಬಲ ಎಲ್ಲಿಂದ ಬರುತ್ತೆ? ನಮ್ಮಿಂದ, ಜನ ಸಾಮಾನ್ಯರಿಂದ. ಪ್ರತಿ ಯೊಂದೂ ನಮ್ಮಿಂದ್ಲೇ ಅವರಿಗೆ ಸಿಗೋದು!"

ರೈತನ ಶುಭ್ರವಾಗಿದ್ದ, ಇಂಥದೇ ಎಂದು ಹೇಳಲಾಗದಂತಹ ಚರ್ಯೆಯಿದ್ದ, ಮುಖವನ್ನು ಕಂಡು ತಾಯಿಗೆ ಅಸಮಾಧಾನವಾಯಿತು.

ಆತ ಯೋಚನಾಮಗ್ನನಾಗಿ ನಿಧಾನವಾಗಿ ಹೇಳಿದ:

"ಹೌದು.... ಚಕ್ರ...."

ಆತ ಅಷ್ಟರಲ್ಲೆ ಬೆನ್ನು ನಿಡಿದು ಕುಳಿತು, ಬಾಗಿಲಿನತ್ತ ಕಿವಿನಿಗುರಿಸಿದ.

"ಅವರು ಬರ್ತಿದ್ದಾರೆ."

"ಯಾರು?"

"ನಮ್ಮವರೇಂತ ತೋರುತ್ತೆ."

ಅವನ ಹೆಂಡತಿ ಒಳಬಂದಳು. ಅವಳ ಹಿಂದೆ ಇನ್ನೊಬ್ಬ ರೈತನಿದ್ದ. ಆತ ಟೋಪಿ ತೆಗೆದು ಕೊಠಡಿಯ ಮೂಲೆಗೆಸೆದು ನೇರವಾಗಿ ಗುಡಸಲಿನ ಯಜಮಾನನತ್ತ ಸಾಗಿ, "ಸರಿ, ಏನು ವಿಷಯ?" ಎಂದು ಕೇಳಿದ.

ಯಜಮಾನ ಹೌದೆಂದು ತಲೆಯಾಡಿಸಿದ.

ಹೆಂಗಸು ಒಲೆಯ ಬಳಿಯಿಂದ ಹೇಳಿದಳು:

"ಸ್ತೆಪಾನ್, ಅತಿಥಿಗೆ ತಿನ್ನೋಕೆ ಏನಾದರೂ ಬೇಕೋ ಏನೋ?"

"ಬೇಡವ್ಮ್ಮ, ಬೇಡ," ಎಂದಳು ತಾಯಿ.

ಎರಡನೆಯ ರೈತ ತಾಯಿಯ ಬಳಿ ಬಂದು, ವೇಗದ ಒಡೆದ ಸ್ವರದಲ್ಲಿ ಹೇಳಿದ:

"ನನ್ನ ಪರಿಚಯ ನಾನೇ ಹೇಳ್ತೀನಿ. ಪ್ಯೊತ್ರ್ ಯೆಗೋರೊವಿಚ್ ರ್ಯಬೀನಿನ್ ಅಂತ ಹೆಸರು. 'ದಬ್ಬಳ' ಅಂತ ಅಡ್ಡ ಹೆಸರು! ನಿಮ್ಮ ಕೆಲಸದ ವಿಷಯ ನನಗೂ ಸ್ವಲ್ಪ ಗೊತ್ತಿದೆ. ನನಗೆ ಓದೋದು ಬರೆಯೋದು ಬರುತ್ತೆ. ಮನಸ್ಸೂ ದುರ್ಬಲವೇನಲ್ಲ...."

ತಾಯಿ ಮುಂದಕ್ಕೆ ಚಾಚಿದ ಕೈಯನ್ನು ಹಿಡಿದು ಕುಲುಕಿ ಆತ ಸ್ತೆಪಾನ್‌ನತ್ತ ತಿರುಗಿದ.

"ನೀನೇ ನೋಡು, ಸ್ತೆಪಾನ್! ವರ್ವಾರ ನಿಕೊಲಾಯೆವ್ನ ಒಳ್ಳೆ ಸ್ತ್ರೀಯೇ ಇರಬಹುದು. ಆದರೆ ಆಕೆ ಈ ಕೆಲಸವೆಲ್ಲ ಮೂರ್ಖತನದ್ದು, ಅಪಾಯದ್ದು, ಅಂತಾಳೆ. ಚಿಕ್ಕ ಹುಡುಗರೂ ವಿದ್ಯಾರ್ಥಿಗಳೂ ಜನರ ತಲೇಲಿ ಕೆಟ್ಟ ವಿಚಾರ ತುಂಬ್ತಾರೆ ಅಂತ. ಆದರೆ ಇವತ್ತು ಅವರು ದಸ್ತಗಿರಿ ಮಾಡಿದ್ದು, ಒಳ್ಳೇ ನೂರಕ್ಕೆ ನೂರರಷ್ಟು ರೈತ ಅಂತ ನಾವೇ ನೋಡಿದ್ವಿ. ಈಗ ಇಲ್ನೋಡು. ಮಧ್ಯವಯಸ್ಸಿನ ಹೆಂಗಸು. ನೋಡೋದಕ್ಕಂತೂ ಶ್ರೀಮಂತಳ ಹಾಗೆ ಕಾಣೋದೇ ಇಲ್ಲ. ಕ್ಷಮಿಸೀ ಅಮ್ಮ, ನೀವು ಯಾರ ಪೈಕೀಂತ ಕೇಳ್ಬಹುದೆ?"

ಆತ ಬೇಗ ಬೇಗನೆ, ಸ್ಪಷ್ಟವಾಗಿ, ಉಸಿರಾಡುವುದಕ್ಕೂ ನಿಲ್ಲದೆ, ಮಾತನಾಡಿದ. ಗಡ್ಡ ಅಲುಗುತ್ತಲೆ ಇತ್ತು. ಕಣ್ಣುಗಳು ತಾಯಿಯ ಮುಖವನ್ನೂ ಆಕೃತಿಯನ್ನೂ ವೀಕ್ಷಿಸಿದುವು. ಆತನ ಉಡುಪು ಹರಿದು ಚಿಂದಿಯಾಗಿತ್ತು. ತಲೆಗೂದಲು ಚೆಲ್ಲಾಪಿಲ್ಲಿಯಾಗಿತ್ತು. ಎಲ್ಲವೂ, ಜಗಳದಲ್ಲಿ ಎದುರಾಳಿಯನ್ನು ಸೋಲಿಸಿ ಬಂದ ಸಂತೋಷದಲ್ಲಿದ್ದ ಹಾಗೆ. ಆ ಉತ್ಸಾಹಕ್ಕಾಗಿಯೂ ಸರಳವಾಗಿ ಹೃದಯ ತೆರೆದು ಮಾತನಾಡಿದ್ದಕ್ಕಾಗಿಯೂ ತಾಯಿ ಆತನನ್ನು ಆ ಕ್ಷಣವೇ ಮೆಚ್ಚಿಕೊಂಡಳು. ಆಕೆ ಮುಗುಳ್ನಗುತ್ತ ಆತನ ಮುಖವನ್ನು ನೋಡಿ, ಕೇಳಿದ ಪ್ರಶ್ನೆಗೆ ಉತ್ತರವಿತ್ತಳು. ಆ ಬಳಿಕ ಆತ, ಮತ್ತೊಮ್ಮೆ ತಾಯಿಯ ಕೈಯನ್ನು ಕುಲುಕಿ, ಒಣಗಿದ ಬಿರುಕುಬಿಟ್ಟಂತಹ ನಗೆಯನ್ನು ನಕ್ಕ.

"ಇದು ಶುದ್ಧವಾದ ಕೆಲಸ, ಸ್ತೆಪಾನ್. ಇದು ಸೊಗಸಾದ ಕೆಲಸ. ಇದು ಜನ ಸಾಮಾನ್ಯರಿಂದ್ಲೇ ಬರ್ತಿದೆ ಅಂತ ನಾನು ಹೇಳ್ಲಿಲ್ವ ನಿಂಗೆ? ಆದರೆ ಆ ಕುಲೀನ ಮಹಿಳೆ ಸತ್ಯ ಹೇಳೋದಿಲ್ಲ. ಸತ್ಯ ಹೇಳಿದ್ರೆ ಅವಳಿಗೇ ಅಪಾಯವಾಗ್ತದೆ. ಓ, ಹೀಗಿದ್ರೂ ನಾನು ಆಕೇನ ಗೌರವಿಸ್ತೀನಿ, ಅದರಲ್ಲಿ ಸಂಶಯವೇ ಇಲ್ಲ. ಅವಳು ಒಳ್ಳೆಯವಳೇನೇ. ತನಗೆ ತೊಂದರೆಯಾಗದ ಹಾಗೆ, ನಮಗೆ ಒಂದಿಷ್ಟಿಷ್ಟು ಸಹಾಯ ಮಾಡ್ಬೇಕೂಂತ ಅವಳ ಅಪೇಕ್ಷೆ. ಆದರೆ ಜನಸಾಮಾನ್ಯರು? ಅವರು ನೇರವಾಗಿ

ಮುಂದಕ್ಕೆ ನುಗ್ತಾರೆ; ಅಪಾಯ ನೋವು ಆಗ್ತದೇಂತ ಅವರೇನೂ ಹೆದರೋದಿಲ್ಲ. ತಿಳೀತೆ ವ್ಯತ್ಯಾಸ? ಅವರಿಗೆ ಜೀವಮಾನವೆಲ್ಲಾ ಅಪಾಯವೇ ಆಗೋದು, ಏನು ಮಾಡಿದರೂ ನೋವೇ ಆಗೋದು. ಎಲ್ಲಿ ತಿರುಗೋಕೂ ಅವರಿಗೆ ಜಾಗವೇ ಇಲ್ಲ. ಯಾವ ಕಡೆ ತಿರುಗಿದರೂ ಸರಿಯೆ, ಅವರಿಗೆ ಕೇಳಿಸೋ ಪದ ಒಂದೇ ಒಂದು – 'ನಿಲ್ಲು !'"

"ಹುಂ," ಎಂದ ಸ್ತೆಪಾನ್ ತಲೆದೂಗಿ. ಒಡನೆಯೇ ಆತ "ಪೆಟ್ಟಿಗೆ ಎಲ್ಲೀಂತ ಆಕೆಗೆ ಗಾಬರಿಯಾಗಿದೆ," ಎಂದ.

ಸಮಾಧಾನಪಡಿಸುವ ಹಾವಭಾವದೊಡನೆ ಆತ ಹೇಳಿದ:

"ಏನೂ ಚಿಂತಿಸ್ಬೇಡಿ. ಎಲ್ಲ ಸರಿ ಹೋಗ್ತದೆ, ಅಮ್ಮ. ನಿಮ್ಮ ಪೆಟ್ಟಿಗೆ ನನ್ನ ನೇಲಿದೆ. ಇವತ್ತು ಇವನು ನಿಮ್ಮ ವಿಷಯ ಹೇಳ್ದಾಗ – ನೀವೂ ಈ ಕೆಲಸದಲ್ಲಿದ್ದು ಆ ಮನುಷ್ಯನ ಪರಿಚಯ ನಿಮಗಿದ್ದ ಹಾಗಿದೆ ಎಂದಾಗ – ಸ್ತೆಪಾನ್, ಹುಷಾರಾಗಿರು, ಅಂದೆ ! ಇಂಥ ವಿಷಯದಲ್ಲಿ ಸಣ್ಣಪುಟ್ಟ ತಪ್ಪೂ ಮಾಡುವ ಹಾಗಿಲ್ಲ. ಅಲ್ಲಿ ನಿಮ್ಮ ಪಕ್ಕದಲ್ಲಿ ನಿಂತಾಗ ನಿಮಗೂ ನಮ್ಮ ವಿಷಯ ಸಂದೇಹ ಬಂತೂಂತ ಕಾಣುತ್ತೆ. ಪ್ರಾಮಾಣಿಕ ಮುಖ ನೋಡಿದ್ರೆ, ಗುರುತು ಹಿಡೀದೇ ಇರೋಕಾಗಲ್ವೆ. ನಿಜ ಹೇಳೋದಾದ್ರೆ ಪ್ರಾಮಾಣಿಕ ಜನರೇ ಹೆಚ್ಚಿಲ್ಲ. ನಿಮ್ಮ ಪೆಟ್ಟಿಗೇ ವಿಷಯ ಚಿಂತಿಸ್ಬೇಡಿ...."

ಆತ ತಾಯಿಯ ಬದಿಯಲ್ಲೆ ಕುಳಿತು ಸೂಕ್ಷ್ಮವಾಗಿ ಆಕೆಯತ್ತ ನೋಡಿದ:

"ಅದರೊಳಗಿರೋದನ್ನ ಕೊಟ್ಟಿಡ್ಬೇಕೂಂತಿದ್ರೆ, ನಾವು ಸಂತೋಷದಿಂದ ಸಹಾಯ ಮಾಡ್ತೇವೆ. ಆ ಪುಸ್ತಕ ಪತ್ರಿಕೆಗಳನ್ನ ನಾವು ಉಪಯೋಗಿಸ್ಬಹುದೆ?"

"ಆಕೆ ಅದನ್ನೆಲ್ಲಾ ನಮ್ಮ ವಶ ಬಿಟ್ಟು ಹೋಗ್ಬೇಕೂಂತ್ಲೇ ಇದಾರೆ" ಎಂದನು ಸ್ತೆಪಾನ್.

"ಅದು ಒಳ್ಳೇದಮ್ಮ ! ನಾವು ಪ್ರತಿಯೊಂದಕ್ಕೂ ಸರಿಯಾದ ಜಾಗವೇ ಹುಡುಕ್ತೀವಿ."

ಆತ ನಕ್ಕು ಹಾರಿನಿಂತು, ಹಿಂದಕ್ಕೂ ಮುಂದಕ್ಕೂ ಬೇಗ ಬೇಗನೆ ನಡೆಯತೊಡಗಿದ.

"ಇದೊಂದು ಅಸಾಮಾನ್ಯ ಅವಕಾಶ ! ವಿಚಿತ್ರವೇನೂ ಅಲ್ಲ ಅಂತಿಟ್ಕೊ: ಹಗ್ಗ ಒಂದು ಕಡೆ ಹರೀತು, ಇನ್ನೊಂದ್ಕಡೆ ಗಟ್ಟಿಯಾಯ್ತು. ಅದು ಸರೀನೇ. ಪತ್ರಿಕೆ ಚೆನ್ನಾಗಿದೆಯಮ್ಮ. ಪರಿಣಾಮಕಾರಿಯಾಗಿದೆ. ಕಣ್ಣುಪಟ್ಟಿಗಳನ್ನ ತೆಗೆದ್ಬಿಡ್ತದೆ. ಶ್ರೀಮಂತರಿಗೇನೂ ಅದು ಹಿಡಿಸೋದಿಲ್ಲ. ನಾನು ಇಲ್ಲೇ ಸಮೀಪದಲ್ಲಿ ಒಬ್ಬ ಯಜಮಾನಿತಿ ಕೆಳಗೆ ಕೆಲಸ ಮಾಡ್ತೀನಿ – ಬಡಗಿ ಕೆಲಸ. ಅವಳು ಒಳ್ಳೆಯವಳೇನೇ – ತನ್ನ ಪುಸ್ತಕ ಓದೋಕೆ ಕೊಟ್ಟು ಉಪಕಾರ ಮಾಡ್ತಾಳೆ. ಒಮ್ಮೊಮ್ಮೆ ಏನಾದರೂ ಕಣ್ಣು ತೆರಯುವಂದಾದ್ದು ಓದೋಕೆ ಸಿಗ್ತದೆ ! ಸಾಮಾನ್ಯವಾಗಿ ನಾವು ಅವಳಿಗೆ ಕೃತಜ್ಞರಾಗೇ ಇದ್ದೀವಿ. ಆದರೆ ಒಮ್ಮೆ ಈ ಪತ್ರಿಕೇನ ಆಕೆಗೆ ತೋರಿಸ್ದೆ. ತುಂಬಾ

ನೊಂದ್ಕೊಂಡ್ನು. ಅದನ್ನು ಓದ್ಬೇಡ, ಪ್ಯೋತ್ರ್, ಬುದ್ಧಿ ಇಲ್ಲದ ಶಾಲೆ ಹುಡುಗರು ಅದನ್ನೆಲ್ಲಾ ಬರೆಯೋದು. ಅದನ್ನೆಲ್ಲಾ ಓದಿ ತೊಂದರೆಗೆ ಸಿಕ್ಕಿ ಹಾಕ್ಕೊಳ್ತೀಯೆ – ಜೈಲೋ ಸೈಬೀರಿಯವೋ, ಅಂದ್ಲು...."

ಮತ್ತೊಮ್ಮೆ ಒಂದು ಕ್ಷಣ ಮೌನವಾಗಿ ಆತ ಕೇಳಿದ:

"ಅಮ್ಮ, ಇವತ್ತು ಕಂಡೆವಲ್ಲ ಆ ಮನುಷ್ಯ? – ಆತ ನಿಮ್ಮ ಸಂಬಂಧಿಕನೆ?"

"ಅಲ್ಲ," ಎಂದಳು ತಾಯಿ.

ಪ್ಯೋತ್ರ್ ಸದ್ದಿಲ್ಲದೆ ನಕ್ಕು, ಏನೋ ತುಂಬ ಸಂತೋಷವಾದವನಂತೆ, ತಲೆಯಾಡಿಸಿದ. ಸಂಬಂಧವಿಲ್ಲವೆಂದು ಹೇಳಿ ತಾನು ರೀಬಿನ್‌ನಿಗೆ ಅವಮಾನ ಮಾಡಿದಂತಾಯಿತೆಂದು ಮರುಕ್ಷಣವೆ ತಾಯಿಗೆ ತೋರಿತು.

"ಸಂಬಂಧಿಕನಲ್ಲ. ಆದರೆ ಬಹಳ ಕಾಲದಿಂದ ಅವನು ನನಗೆ ಗೊತ್ತು. ನನ್ನ ಅಣ್ಣನ ಹಾಗೆ ಅವನನ್ನು ಗೌರವಿಸ್ತೀನಿ!" ಎಂದಳು.

ಭಾವನೆಗಳನ್ನು ವ್ಯಕ್ತಗೊಳಿಸಲು ಸರಿಯಾದ ಪದಗಳೇ ತಾಯಿಗೆ ಸಿಗಲಿಲ್ಲ. ಇದರಿಂದ ಆಕೆಗೆ ನೋವಾಯಿತು. ಮತ್ತೊಮ್ಮೆ ಮೃದುವಾಗಿ ಆಕೆ ಅಳತೊಡಗಿದಳು. ವ್ಯಥೆಯನ್ನುಂಟುಮಾಡುತ್ತ, ಏನನ್ನೊ ನಿರೀಕ್ಷಿಸುತ್ತ, ಗುಡಿಸಲಿನಲ್ಲಿ ಮೌನ ನೆಲೆಸಿತು. ಪ್ಯೋತ್ರ್ ಯಾವುದಕ್ಕೋ ಕಿವಿಗೊಡುವವನಂತೆ ತಲೆತಗ್ಗಿಸಿ ನಿಂತ. ಸ್ತೆಪಾನ್ ಮೇಜಿನಮೇಲೆ ಮೊಣಕೈಗಳನ್ನೂರಿ, ಮೇಜನ್ನು ತಟ್ಟುತ್ತಾ ಕುಳಿತ. ಆತನ ಹೆಂಡತಿ ಅಡುಗೆಮನೆಯಲ್ಲಿ ಗೋಡೆಗೊರಗಿ ನಿಂತಳು. ಆ ಹೆಂಗಸಿನ ದೃಷ್ಟಿ ತನ್ನ ಮೇಲೆಯೇ ಇದ್ದುದರ ಅರಿವು ತಾಯಿಗಿತ್ತು. ತಾಯಿಯೂ ಸ್ವತಃ ಯುವತಿಯತ್ತ ಆಗಾಗ್ಗೆ ನೋಡುತ್ತಿದ್ದಳು. ಆಕೆಗೆ ತುಂಬಿಕೊಂಡಿದ್ದ ಸೊಗಸಾದ ಮುಖವಿತ್ತು; ನೇರವಾದ ಮೂಗು, ತೀಕ್ಷ್ಣವಾಗಿ ತಿದ್ದಿ ಮಾಡಿದ ಗಲ್ಲ. ಆಕೆಯ ಹಸುರು ಕಣ್ಣುಗಳು ಸೂಕ್ಷ್ಮವಾಗಿ ಎಲ್ಲವನ್ನು ಗಮನಿಸುತ್ತಿದ್ದುವು.

ಪ್ಯೋತ್ರ್ ಮೆಲುದನಿಯಲ್ಲಿ ಹೇಳಿದ:

"ಹಾಗಾದರೆ ಅವನು ನಿಮ್ಮ ಒಬ್ಬ ಸ್ನೇಹಿತ.... ಬುದ್ಧಿವಂತ – ಸಂಶಯವೇ ಇಲ್ಲ. ಗಟ್ಟಿಮನಸ್ಸು. ತನಗಾಗಿ ತಾನೇ ದೊಡ್ಡ ಬೆಲೆ ತೆತ್ತ. ನೋಡಿದ್ಯಾ, ತತ್ಯಾನ? ನೀನಂತೂ...."

"ಅವನಿಗೆ ಮದುವೆ ಆಗಿದೆಯೆ?" ಎಂದು ತತ್ಯಾನ, ನಡುವೆ ಮಾತನಾಡಿ, ಬಟ್ಟಬಾಯಿಯ ತುಟಿಗಳನ್ನು ಬಿಗಿದು ಕೇಳಿದಳು.

"ವಿಧುರ," ಎಂದು ತಾಯಿ ವ್ಯಥೆಯಿಂದ ಅಂದಳು.

ಆಳವಾಗಿದ್ದ ಸಮೃದ್ಧವಾಗಿದ್ದ ಸ್ವರದಲ್ಲಿ ತತ್ಯಾನ ಹೇಳಿದಳು:

"ಅದಕ್ಕೇ ಅವನು ಅಷ್ಟು ಧೈರ್ಯವಾಗಿರೋದು. ಮದುವೆಯಾಗಿ ಸಂಸಾರವಂದಿಗನಾಗಿರೋನು ಅಂಥ ದಾರಿ ಹಿಡಿಯೋದಿಲ್ಲ – ಅವನಿಗೆ ಹೆದರಿಕೆಯಾದೀತು."

"ನನ್ನ ವಿಷಯವೇನು? ನನಗೆ ಮದುವೆಯಾಗಿಲ್ವೆ?" ಎಂದನು ಪ್ಯೋತ್ರ್.

ಹೆಂಗಸು ನೀರಸವಾಗಿ ಮುಗುಳ್ನಕ್ಕು, ಆತನ ದೃಷ್ಟಿಯನ್ನು ಗಮನಿಸದೆ, ಅಂದಳು:

"ಸಾಕು, ಸಾಕು. ನೀನು ಏನು ಮಹಾಮಾಡ್ತಿರೋದು? ಬರೇ ಮಾತಾಡ್ತಿ. ಯಾವಾಗಾದರೊಮ್ಮೆ ಪುಸ್ತಕ ಗಿಸ್ತಕ ಓದ್ತಿ, ನೀನೂ ಸ್ತೆಪಾನೂ ಎಲ್ಲೋ ಕತ್ತಲೆ ಕೊಣೇಲಿ ಕೂತು ಪಿಸುಗುಟ್ಟದ್ರೆ ಜನರಿಗಾಗೋ ಪ್ರಯೋಜನ ಅಷ್ಟರಲ್ಲೇ ಇದೆ."

ಆಕೆಯ ತಿರಸ್ಕಾರದಿಂದ ನೊಂದುಕೊಂಡು ಪ್ಯೋತ್ರ್ ಮೃದುವಾಗಿಯೆ ಪ್ರತಿಭಟಿಸಿದ:

"ಎಷ್ಟೋ ಜನ ನಾನು ಹೇಳೋದಕ್ಕೆ ಕಿವಿಕೊಡ್ತಾರೆ.... ನಾನು ತಿದಿಯ ಹಾಗೆ ಕೆಲಸ ಮಾಡ್ತಿದೀನಿ.... ಹಾಗೆಲ್ಲ ನೀನು ಅನ್ಬಾರ್ದು."

ಸ್ತೆಪಾನ್ ಮೌನವಾಗಿ ಹೆಂಡತಿಯತ್ತ ನೋಡಿ ತಲೆಬಗ್ಗಿಸಿದ.

"ರೈತ ಯಾಕೆ ಮದುವೆಯಾಗ್ಬೇಕು?" ಎಂದು ತತ್ಯಾನ ಕೇಳಿದಳು. "ಕೆಲಸ ಮಾಡೋಕೆ ಒಬ್ಬ ಹೆಂಗಸು ಬೇಕು ಅಂತಾ ತಾನೆ. ಒಳ್ಳೆ ಕೆಲಸ ಇದು!"

"ನಿಂಗೇನ್ ಕಡಮೆಯಾಗಿರೋದು?" ಎಂದು ಸ್ತೆಪಾನ್ ಉತ್ಸಾಹವಿಲ್ಲದ ಧ್ವನಿಯಲ್ಲಿ ಕೇಳಿದ.

"ಇಂಥ ಕೆಲಸದಲ್ಲಿ ಏನರ್ಥ ಇದೆ? ದಿನದಿಂದ ದಿನಕ್ಕೆ ಅರೆ ಉಪವಾಸವಿದ್ದು ಬದುಕ್ತಿರೋದು. ಮಕ್ಕಳಿದ್ರೆ, ರೊಟ್ಟಿ ಸಂಪಾದನೆಯೂ ಸಾಕಷ್ಟು ಆಗದಂತಹ ಕೆಲಸ ಮಾಡಿಮಾಡಿ, ಮಕ್ಕಳ್ನೂ ನೋಡ್ಕೊಳ್ಳೋಕೆ ಪುರಸೊತ್ತಿರೋದಿಲ್ಲ."

ಆಕೆ ತಾಯಿಯತ್ತ ಬಂದು, ಬಳಿಯಲ್ಲೆ ಕುಳಿತು, ಒಂದೇ ಸಮನೆ ಮಾತನಾಡಿದಳು. ಆದರೆ ಆ ಮಾತಿನಲ್ಲಿ ದೂರಿನ-ದುಃಖದ ಧ್ವನಿ ಇರಲಿಲ್ಲ.

"ನನಗೆ ಎರಡು ಮಕ್ಕಳಿದ್ವು. ಒಂದು, ಎರಡು ವರ್ಷದಿದ್ದಾಗಲೇ ತನ್ನ ಮೇಲೆ ಕುದಿಯೋ ನೀರ್ನ ಚೆಲ್ಕಂಡು ಪ್ರಾಣ ಬಿಡ್ತು. ಇನ್ನೊಂದು, ತಿಂಗಳು ತುಂಬೋ ಕ್ಮುಂಚೆಯೇ ಸತ್ತೆ ಹುಟ್ತು. ಅದಕ್ಕೆಲ್ಲಾ ಈ ಹಾಳಾದ ಕೆಲಸವೇ ಕಾರಣ. ನನಗೆ ಅದರಿಂದೇನಾದರೂ ಸುಖ ಸಿಕ್ಕಿದೆಯೆ? ನಾನ್ಹೇಳ್ತೀನಿ – ರೈತರು ಮದುವೆಯಾಗೋದರಲ್ಲಿ ಅರ್ಥವಿಲ್ಲ. ಯಾರ ತಡೆಯೂ ಇಲ್ದೆ ಬದುಕ್ತಾ, ಒಳ್ಳೇ ಬದುಕಿಗಾಗಿ ಹೋರಾಡ್ತಾ ಇರೋದು ಬಿಟ್ಟು ಮದುವೆ ಮಾಡ್ಕೊಂಡ್ರೆ, ತಮ್ಮ ಕೈನ ತಾವೇ ಕಟ್ಟಿಕೊಂಡ ಹಾಗಾಗ್ತದೆ. ಯಾವ ಬಂಧನವೂ ಇಲ್ದಿದ್ರೆ, ಆ ಮನುಷ್ಯನ ಹಾಗೆ ನೇರವಾಗಿ ಮುನ್ನುಗ್ಗಬಹುದು.... ನಾನು ಹೇಳಿದ್ದು ಸರಿಯೆ, ಅಮ್ಮ?"

"ಸರಿ. ಸರಿ, ಮಗಳೆ. ಇಲ್ದೇ ಹೋದ್ರೆ ಈ ಜೀವನವನ್ನ ಬದಲಾಯಿಸೋಕಾಗೋದಿಲ್ಲ...." ಎಂದಳು ತಾಯಿ.

"ನಿಮಗೆ ಗಂಡ ಇರಬೇಕಲ್ವೆ?"

"ತೀರ್ಕೊಂಡ. ಮಗನಿದ್ದಾನೆ."

"ನಿನ್ನ ಜತೇಲಿ ವಾಸವಾಗಿರ್ತಾನ?"

"ಅವನು ಜೈಲಲ್ಲಿದ್ದಾನೆ," ಎಂದಳು ತಾಯಿ.

ತನ್ನ ಹೃದಯದಲ್ಲಿ ಸಾಮಾನ್ಯವಾಗಿ ಉಂಟಾಗುತ್ತಿದ್ದ ದುಃಖದ ಬದಲು, ತಾನು ಈ ಮಾತುಗಳನ್ನಾಡಿದಂತೆ ಹೆಮ್ಮೆಯ ಭಾವನೆಯೊಂದು ತಲೆದೋರಿದುದು ತಾಯಿಗೆ ಅರಿವಾಯಿತು.

"ಅವರು ಅವನನ್ನ ಜೈಲ್ನಲ್ಲಿ ಹಾಕಿರೋದು ಇದು ಎರಡ್ನೇ ಸಲ. ಇದಕ್ಕೆಲ್ಲಾ ಕಾರಣ, ಹಿರಿಯ ಸತ್ಯವನ್ನ ಅವನು ಜನರ ನಡುವೆ ಬಿತ್ತಿದ್ದು. ಅವನು ಯುವಕ ಸುಂದರ, ಜಾಣ. ನಿಮ್ಮ ಪತ್ರಿಕೆ ವಿಷಯ ಸೂಚಿಸ್ದೋನು ಅವನೇ. ಮಿಹಯಿಲ್ ಇವಾನೊವಿಚ್ ಅವನಿಗಿಂತ ವಯಸ್ನಲ್ಲಿ ಇಮ್ಮಡಿ ದೊಡ್ಡೋನಾದರೂ, ಇವನಿಗೆ ಸರಿಯಾದ ಈ ಹಾದಿ ತೋರಿಸ್ದೋನು ನನ್ನ ಮಗನೇ. ಇನ್ನು ಬೇಗ್ನೆ ಅವರು ನನ್ನ ಮಗನಿಗೆ ಶಿಕ್ಷೆ ವಿಧಿಸಿ ಸೈಬೀರಿಯಕ್ಕೆ ಕಳಿಸ್ತಾರೆ. ಆದರೆ ಅವನು ತಪ್ಪಿಸ್ಕೊಂಡು ಪುನಃ ಈ ಕೆಲಸಕ್ಕಾಗಿ ಇಲ್ಲಿಗೆ ವಾಪಸು ಬರ್ತಾನೆ...."

ಮಾತನಾಡಿದಂತೆ ಆಕೆಯ ಎದೆಯಲ್ಲಿ ಹೆಮ್ಮೆಯ ಭಾವನೆ ಬೆಳೆಯುತ್ತ ಹೋಯಿತು. ವೀರನಾಯಕನ ಪ್ರತಿಬಿಂಬವೊಂದು ಸೃಷ್ಟಿಯಾಯಿತು. ಆ ಪ್ರತಿಬಿಂಬ, ಮಾತುಗಳಲ್ಲಿ ತನ್ನ ಚಿತ್ರಣವನ್ನು ಬಯಸಿತು. ಆಕೆ ಆ ದಿನ ಅಂಧಕಾರವನ್ನು ಕಂಡಿದ್ದಳು. ಆ ಅಂಧಕಾರದ ಅರ್ಥಹೀನ ಭೀಕರತೆಯೂ ನಿರ್ಲಜ್ಜ ಕ್ರೌರ್ಯವೂ ಆಕೆಯ ತಲೆಯಲ್ಲಿ ಮಿಡಿಯುತ್ತಲೆ ಇದ್ದುವು. ಆ ಅಂಧಕಾರಕ್ಕೆ ಪ್ರತಿಯಾಗಿ, ಶುಭ್ರವಾದ ವಿವೇಚನಾಪೂರ್ಣವಾದ ಏನನ್ನಾದರೂ ಹುಡುಕುವುದು ಆಕೆಗೆ ಅತ್ಯಗತ್ಯವಾಗಿತ್ತು. ತನಗರಿಯದಂತೆಯೇ ತನ್ನ ಪೂರ್ಣವಾದ ಅಂತಃಸ್ಫೂರ್ತಿಯ ಬಯಕೆಗೆ ತಲೆಬಾಗಿ, ತನಗೆ ತಿಳಿದಿದ್ದ ಶುದ್ಧವೂ ಶುಭ್ರವೂ ಆದುದ್ದನ್ನೆಲ್ಲ, ಒಂದು ಮಹಾ ಜ್ವಾಲೆಯಾಗಿ ಆಕೆ ಒಟ್ಟುಗೂಡಿಸಿದಳು. ಅದು ಅಗಾಧವಾಗಿ ಪ್ರಜ್ವಲಿಸಿ, ಆಕೆಯನ್ನು ಕುರುಡಳನ್ನಾಗಿ ಮಾಡಿತು.

"ಈಗಾಗಲೇ ಅವನಂಥವರು ಬಹಳ ಜನರಿದ್ದಾರೆ. ಹೆಚ್ಚುಹೆಚ್ಚು ಜನ ಹುಟ್ತಾನೇ ಇದ್ದಾರೆ. ತಮ್ಮ ಕೊನೇ ಉಸಿರಿನವರೆಗೂ ಸ್ವಾತಂತ್ರ್ಯ ಮತ್ತು ಸತ್ಯಕ್ಕೋಸ್ಕರ ಹೋರಾಡ್ತಾನೇ ಇರ್ತಾರೆ...."

ಎಚ್ಚರಿಕೆಯಿಂದ ಮಾತನಾಡಬೇಕೆಂಬುದು ಆಕೆಗೆ ಮರೆತು ಹೋಯಿತು. ಆದರೆ ಯಾರ ಹೆಸರುಗಳನ್ನೂ ತಾಯಿ ಹೇಳಲಿಲ್ಲ. ಆದರೆ, ದುರಾಶೆಯ ಸಂಕೋಲೆಯೊಳಗಿಂದ ಜನ ಸಮುದಾಯವನ್ನು ವಿಮುಕ್ತಗೊಳಿಸಲು ನಡೆಯುತ್ತಿರುವ ಗುಪ್ತ ಕೆಲಸದ ಬಗೆಗೆ ತನಗೆ ತಿಳಿದುದೆಲ್ಲವನ್ನೂ ಆಕೆ ಹೇಳಿದಳು. ಜೀವನದ ಘಟನೆಗಳು ಬಲು ತಡವಾಗಿ ಆಕೆಯಲ್ಲಿ ಹೊಸತೊಂದು ಪ್ರೀತಿ ಅರಳುವಂತೆ ಮಾಡಿದ್ದುವು. ತನ್ನ ಹೃದಯಕ್ಕೆ ಸಮೀಪದ ಜನರನ್ನು ಬಣ್ಣಿಸಿದಾಗ, ಆ ಪ್ರೀತಿಯ ಎಲ್ಲ ಬಲವನ್ನೂ ವಿಪುಲತೆಯನ್ನೂ ತಾಯಿ ತನ್ನ ಮಾತುಗಳಿಗೆ ಸುರಿದಳು. ತನ್ನ ಒಳಗಣ್ಣಿನೆದುರು ಎದ್ದುನಿಂತ, ತನ್ನ ಭಾವನೆಯಿಂದ ಬೆಳಗಿ ಕೀರ್ತಿಮಯರಾದ, ಆ ವ್ಯಕ್ತಿಗಳನ್ನು ಆಕೆಯೂ ಸಂತೋಷದಿಂದ ನೋಡಿದಳು.

"…. ಜಗತ್ತಿನಲ್ಲೆಲ್ಲಾ, ಎಲ್ಲಾ ಶಹರಗಳಲ್ಲೂ ಎಲ್ಲಾ ಜಾಗಗಳಲ್ಲೂ ಒಳ್ಳೇ ಜನರು ಈ ಕೆಲಸ ಮಾಡ್ತಾನೇ ಇದ್ದಾರೆ. ಅದಕ್ಕೆ ಇತಿಮಿತಿಯಿಲ್ಲ, ತೂಕ-ಅಳತೆ ಇಲ್ಲ. ಅದು ಬೆಳೀತಾನೇ ಇರ್ತದೆ. ವಿಜಯದ ಘಳಿಗೆ ಬರೋವರೆಗೂ ಬೆಳೀತದೆ…."

ಆಕೆಯ ಸ್ವರ ಏಕಪ್ರಕಾರವಾಗಿ ಹರಿಯಿತು. ಪದಗಳನ್ನು ಹುಡುಕುವುದು ಕಷ್ಟವಾಗಲಿಲ್ಲ. ಆ ದಿನದ ರಕ್ತವನ್ನೂ ಕಲ್ಮಷವನ್ನೂ ಹೃದಯದಿಂದ ತೊಳೆಯ ಬೇಕೆಂಬ ಬಯಕೆಯ ಬಲವಾದ ದಾರಕ್ಕೆ, ಬಣ್ಣ ಬಣ್ಣದ ಮಣಿಗಳ ಹಾಗೆ ಆ ಪದಗಳನ್ನು ಆಕೆ ಇಳಿಬಿಟ್ಟಳು. ತಾನು ಹೇಳುತ್ತಿದ್ದುದನ್ನು ಕೇಳುತ್ತ ರೈತರು ಮಂತ್ರ ಮುಗ್ಧರಾಗಿ ಕುಳಿತಿದ್ದುದನ್ನು ತಾಯಿ ಕಂಡಳು. ತಮ್ಮ ಕಣ್ಣುಗಳನ್ನು ಆಕೆಯ ಮುಖದಲ್ಲಿಯೇ ನೆಟ್ಟು ಅವರು ಕದಲದೆ ಕುಳಿತರು. ತನ್ನ ಪಕ್ಕದಲ್ಲಿ ಕುಳಿತಿದ್ದ ಹೆಂಗ ಸಿನ ಪ್ರಯಾಸದ ಉಸಿರಾಟ ಆಕೆಗೆ ಕೇಳಿಸುತ್ತಿತ್ತು. ಇದೆಲ್ಲದರಿಂದ, ತಾನು ಹೇಳುತ್ತಿ ದ್ದುದರಲ್ಲೂ ಈ ಜನರೆದುರು ಕೊಡುತ್ತಿದ್ದ ಆಶ್ವಾಸನೆಯಲ್ಲೂ ಆಕೆಗಿದ್ದ ನಂಬುಗೆ ಬಲಗೊಂಡಿತು….

"ಕಷ್ಟ ಜೀವನ ಇರೋವರೆಲ್ಲಾ, ಹಿಂಸೆಯಿಂದಲೂ ಅಭಾವದಿಂದಲೂ ಬಳಲಿ ದವರೆಲ್ಲಾ, ಶ್ರೀಮಂತರಿಂದಲೂ ಶ್ರೀಮಂತರ ಸೇವಕರಿಂದಲೂ ಮರ್ದಿಸಲ್ಪಟ್ಟ ವರೆಲ್ಲಾ, ಇವರೆಲ್ಲಾ – ಅವರಿಗೋಸ್ಕರ ಕ್ರೂರ ಹಿಂಸೆಗೆ ಒಳಗಾದವರನ್ನೂ ಜೈಲಿನಲ್ಲಿ ನಾಶವಾಗ್ತಿರೋರನ್ನೂ ಸೇರೋಕೆ ಮುಂದೆ ಹೋಗ್ಬೇಕು. ತಮ್ಮ ಸ್ವಂತದ ವಿಷಯ ವಾಗಿ ಯಾವ ಯೋಚ್ನೇನೂ ಮಾಡ್ದೆ, ಎಲ್ಲಾ ಜನರ ಸೌಖ್ಯದತ್ತ ಅವರು ಹಾದಿ ತೋರಿಸ್ತಾರೆ. ಯಾವುದನ್ನೂ ಬಚ್ಚಿಡದೆ, 'ಈ ಹಾದಿ ಕಠಿನವಾದ್ದು' ಅಂತ ಹೇಳ್ತಾರೆ. ತಮ್ಮ ಜತೇಲಿ ಬನ್ನೀಂತ ಯಾರನ್ನೂ ಅವರು ಒತ್ತಾಯಿಸೋದಿಲ್ಲ. ಆದರೆ ಒಮ್ಮೆ ಒಬ್ಬ ಅವರ ಭುಜಕ್ಕೆ ಭುಜ ತಗಲಿಸಿ ನಿಂತ್ಮೇಲೆ, ಅವನು ಯಾವತ್ತೂ ಅವರ್ನ ಬಿಟ್ಟು ಹೋಗೋದಿಲ್ಲ. ಯಾಕೆಂದರೆ ಇದು ನ್ಯಾಯವಾದ್ದು – ಇದೇ ಸರಿಯಾದ ದಾರಿ, ಬೇರೆ ಇಲ್ಲ – ಅಂತ ಅವರಿಗೆ ಗೊತ್ತಾಗ್ತದೆ!"

ಎಷ್ಟೋ ದಿನಗಳಿಂದ ಬಯಸಿದ್ದನ್ನು ಈಗ ಮಾಡುತ್ತಿದ್ದೇನೆಂದು, ತಾನೇ ಸ್ವತಃ ಸತ್ಯವನ್ನ ಜನರಿಗೆ ತಿಳಿಯಹೇಳುತ್ತಿದ್ದೇನೆಂದು, ತಾಯಿಗೆ ಸಂತೋಷವಾಯಿತು.

"ಅಂಥ ಜನರ ಜತೇಲಿ ಹೋಗೋಕೆ ಜನಸಾಮಾನ್ಯರು ಹಿಂಜರೀಬೇಕಾದ್ದೇ ಇಲ್ಲ. ಎಲ್ಲೋ ಅಲ್ಪಸ್ವಲ್ಪ ಜಯ ಸಿಗ್ತೂಂತ ಆ ಜನ ತೃಪ್ತರಾಗೋದಿಲ್ಲ. ಎಲ್ಲಾ ಮೋಸವನ್ನೂ ಎಲ್ಲಾ ದುರಾಶೆಯನ್ನೂ ದುಷ್ಟತನವನ್ನೂ ತೊಡೆದುಹಾಕೋವರೆಗೂ ಅವರು ನಿಲ್ಲೋದಿಲ್ಲ. ಎಲ್ಲಾ ಜನರೂ ಒಂದಾಗಿ ನಿಂತು ಒಂದೇ ಸ್ವರದಿಂದ 'ನಾವು ಯಜಮಾನರು! ಎಲ್ಲಾ ಜನರಿಗೂ ಒಂದೇ ರೀತಿಯಾಗಿರುವಂಥ ಕಾನೂನುಗಳನ್ನ ನಾವು ಮಾಡ್ತೀವಿ!' ಅಂತ ಘೋಷಿಸುವವರೆಗೂ ಅವರು ಕೈಕಟ್ಟಿ ಸುಮ್ಮನಾಗೋ ದಿಲ್ಲ!"

ಆಯಾಸವಾಗಿ ತಾಯಿ ಮಾತು ನಿಲ್ಲಿಸಿದಳು. ತನ್ನ ಮಾತುಗಳು ವ್ಯರ್ಥವಾಗಲಿಲ್ಲ

ವೆಂಬ ಶಾಂತವಾದ ವಿಶ್ವಾಸದಿಂದ ಆಕೆ ಸುತ್ತಲೂ ನೋಡಿದಳು. ಇನ್ನೇನನ್ನೋ ನಿರೀಕ್ಷಿಸುತ್ತ ರೈತರು ಆಕೆಯನ್ನೇ ನೋಡುತ್ತ ಕುಳಿತರು. ಪ್ಯೋತ್ರ್ ತನ್ನ ಎದೆಗೆ ಅಡ್ಡವಾಗಿ ಕೈಕಟ್ಟಿ ಕಣ್ಣುಗಳನ್ನು ಕಿರಿದುಗೊಳಿಸಿದ. ಮುಗುಳ್ನಗೆಯೊಂದು ಆತನ ತುಟಿಗಳ ಮೇಲೆ ಕುಣಿಯಿತು. ಸ್ತೆಪಾನ್‌ನ ಒಂದು ಮೊಣಗೈ ಮೇಜಿನ ಮೇಲಿತ್ತು. ಇಡಿಯ ದೇಹ, ಆತನಿನ್ನೂ ಕೇಳುತ್ತಲೇ ಇದ್ದ ಹಾಗೆ ಮುಂದಕ್ಕೆ ಬಾಗಿತ್ತು. ಆತನ ಮುಖವೀಗ ನೆರಳಿನಲ್ಲಿತ್ತು. ಆ ಕಾರಣಕ್ಕಾಗಿ ಹೆಚ್ಚು ಪೂರ್ಣವಾಗಿದ್ದಂತೆ ತೋರಿತು. ತಾಯಿಯ ಬಳಿಯಲ್ಲಿ ಕುಳಿತಿದ್ದ ಆತನ ಹೆಂಡತಿ, ತನ್ನ ಮೊಣಕಾಲುಗಳ ಮೇಲೆ ಮೊಣಕೈಗಳನ್ನಿರಿಸಿ, ಮುಂದಕ್ಕೆ ಬಾಗಿ ನೆಲವನ್ನೆ ದಿಟ್ಟಿಸುತ್ತಿದ್ದಳು.

"ಇದೀಗ ನಿಜಸ್ಥಿತಿ," ಎಂದು ಪ್ಯೋತ್ರ್, ಉಸಿರು ಬಿಗಿಹಿಡಿದು ಮೆಲ್ಲನೆ ಬೆಂಚಿನ ಮೇಲೆ ಕುಳಿತುಕೊಳ್ಳುತ್ತ ಹೇಳಿದ.

ಸ್ತೆಪಾನ್ ನೆಟ್ಟಗೆ ಕುಳಿತು, ಹೆಂಡತಿಯತ್ತ ನೋಡಿ, ಅವರೆಲ್ಲರನ್ನೂ ತಬ್ಬಿಕೊಳ್ಳ ಬಯಸಿದವನಂತೆ ತೋಳುಗಳನ್ನು ಮುಂದಕ್ಕೆ ಚಾಚಿದ.

ಯೋಚನಾಮಗ್ನನಾಗಿ ಆತನೆಂದ:

"ಒಮ್ಮೆ ಈ ಕೆಲಸಕ್ಕೆ ಕೈ ಹಾಕಿದ್ಮೇಲೆ ಅದನ್ನೇ ಪೂರ್ಣಮನಸ್ಸಿನಿಂದ ಮಾಡ್ಬೇಕು...."

"ಹೌದು, ಹೌದು, ಹಿಂತಿರುಗಿ ನೋಡೋಹಾಗೆಯೇ ಇಲ್ಲ," ಎಂದ ಪ್ಯೋತ್ರ್ ಸಂತೋಷಪಡುತ್ತ.

"ಈ ಕೆಲಸ ದೊಡ್ಡ ಪ್ರಮಾಣದಲ್ಲೇ ಶುರುವಾದ ಹಾಗಿದೆ," ಎಂದು ಸ್ತೆಪಾನ್ ಮುಂದುವರಿಸಿದ.

"ಜಾಗತಿಕ ಪ್ರಮಾಣದಲ್ಲೇ," ಎಂದು ಪ್ಯೋತ್ರ್ ಮಾತು ಸೇರಿಸಿದ.

## ೧೮

ಅವರ ಶಾಂತವಾದ ಗಂಭೀರವಾದ ಮಾತುಗಳನ್ನು ಕೇಳುತ್ತ ತಾಯಿ ಗೋಡೆಗೊರಗಿ ತಲೆಯನ್ನು ಹಿಂದಕ್ಕೆ ಬಾಗಿಸಿ ಕುಳಿತಳು. ತತ್ಕ್ಷಣ ಎದ್ದು, ಸುತ್ತಲೂ ನೋಡಿ ಪುನಃ ಕುಳಿತುಕೊಂಡಳು. ತಿರಸ್ಕಾರದಿಂದಲೂ ಅತೃಪ್ತಿಯಿಂದಲೂ ರೈತರನ್ನು ಆಕೆ ನೋಡಿದಾಗ, ಆ ಹಸುರು ಕಣ್ಣುಗಳಲ್ಲಿ ಶೀತಲವಾದೊಂದು ಹೊಳಪು ಕಾಣಿಸುತ್ತಿತ್ತು. ಒಮ್ಮೆಲೆ ಅವಳು ತಾಯಿಯತ್ತ ತಿರುಗಿದಳು.

"ನಿಮ್ಮ ಜೀವನದಲ್ಲಿ ನೀವು ಎಷ್ಟೋ ದುಃಖ ಅನುಭವಿಸಿರ್ಬೇಕು," ಎಂದಳು ಆಕೆ.

"ಹೌದು, ಅನ್ಭವಿಸಿದ್ದೀನಿ," ಎಂದು ತಾಯಿ ಉತ್ತರವಿತ್ತಳು.

"ನೀವು ಚೆನ್ನಾಗಿ ಮಾತಾಡ್ತೀರಿ. ನಿಮ್ಮ ಮಾತುಗಳು ಹೃದಯದ ತಂತಿಯನ್ನೆ ಮೀಟ್ತವೆ. ನಿಮ್ಮ ಮಾತು ಕೇಳ್ತಾ ನಾನು ಯೋಚಿಸ್ತೀನಿ – ಓ ದೇವರೆ, ಆಕೆ ಬಣ್ಣೆ

ಸ್ತಿರೋ ಜನರನ್ನ ಒಮ್ಮೆ ದೂರದಿಂದ ನೋಡೋಕೆ, ಅಂಥ ಬದುಕನ್ನೇ ನೋಡೋಕೆ, ನಾನು ಏನು ತಾನೆ ಕೊಡಲಾರೆ! ಇಲ್ಲಿ ನಾವು ಎಂಥ ಜೀವನ ನೋಡ್ತೀವಿ? ಒಂದು ಕುರಿ ಮಂದೆ ಇದ್ದ ಹಾಗಿದ್ದೀವಿ ನಾವು! ಉದಾಹರಣೆಗೆ ನನ್ನನ್ನೇ ತಗೋ. ಓದೋದೂ ಬರಿಯೋದೂ ನನಗೆ ಬರತ್ತೆ. ನಾನು ಪುಸ್ತಕಗಳನ್ನ ಓದಿ ತುಂಬಾ ಯೋಚಿಸ್ತೇನೆ. ಎಷ್ಟೋ ರಾತ್ರೆ, ಯೋಚನೆಯಿಂದ ನಿದ್ದೇನೇ ಬರೋದಿಲ್ಲ. ಆದರೆ ಅದರಿಂದೇನು ಪ್ರಯೋಜನ? ಯೋಚನೆ ಮಾಡೋದು ನಿಲ್ಲಿಸಿದ್ರೆ, ಸುಮ್ಸುಮ್ನೆ ಸವೀತೀನಿ, ಯೋಚನೆ ಮಾಡ್ತಾ ಇದ್ರೂ ಅಷ್ಟೆ. ಅದರಿಂದಲೂ ಪ್ರಯೋಜನವೇನೂ ಇಲ್ಲ."

ಕಣ್ಣುಗಳಲ್ಲಿ ತಿರಸ್ಕಾರ ತೋರಿಸುತ್ತ ಆಕೆ ಮಾತನಾಡಿದಳು. ಕೆಲವೊಮ್ಮೆ ದಾರವನ್ನು ಕಚ್ಚಿದ ಹಾಗೆ ತನ್ನ ಮಾತುಗಳನ್ನೂ ಆಕೆ ಕಡಿಯುತ್ತಿದ್ದಂತೆ ತೋರಿತು. ರೈತರೇನನ್ನೂ ಹೇಳಲಿಲ್ಲ. ಗಾಳಿ ಕಿಟಕಿಯ ಗಾಜನ್ನು ತಟ್ಟಿತು, ಮೇಲ್ಗಡೆ ಚಿಮಿಣಿ ಯೊಡನೆ ಮಾತನಾಡಿತು, ಮಾಡಿನ ಮೇಲಿನ ಹುಲ್ಲಿನೊಡನೆ ಆಟವಾಡಿತು. ಒಂದು ನಾಯಿ ಬಗುಳಿತು. ಆಗೊಂದು ಈಗೊಂದು ಮಳೆ ಹನಿ, ಇಷ್ಟವಿಲ್ಲದೆಯೇ ಕಿಟಕಿಗೆ ಬಡಿಯಿತು. ದೀಪದ ಬೆಳಕು ನಡುಗಿ, ಆರಿ ಹೋದಂತಾಗಿ, ಮತ್ತೆ ಚೇತರಿಸಿ ಕೊಂಡು ಶುಭ್ರವಾಗಿ ಏಕಪ್ರಕಾರವಾಗಿ ಉರಿಯಿತು.

"ನೀವು ಮಾತಾಡೋದು ಕೇಳ್ತಾ ನಾನು ಯೋಚಿಸ್ತಿದ್ದೆ – ಹೀಗೆ ಬದುಕೋದ ರಲ್ಲಿ ಒಂದರ್ಥವಿದೆ! ಎಷ್ಟೊಂದು ವಿಚಿತ್ರ – ಕೇಳ್ತಾ ಇದ್ದಾಗ ಅದೆಲ್ಲಾ ನನಗೆ ಗೊತ್ತಿದ್ದ ಹಾಗೆ ತೋರಿತು! ಆದರೆ ಹಿಂದೆ ಇಂಥಾದ್ದನ್ನೆಂದೂ ನಾನು ಕೇಳಿರ್ಲಿಲ್ಲ. ಇಂಥ ವಿಚಾರ ಕೂಡಾ ನನಗಿರ್ಲಿಲ್ಲ...."

ಸ್ತೆಪಾನ್ ಹುಬ್ಬೇರಿಸಿ ಮೆಲ್ಲನೆ ಹೇಳಿದ:

"ನಾವು ಊಟ ಮುಗಿಸಿ ದೀಪ ಆರಿಸೋದು ಮೇಲು, ತತ್ಯಾನ. ನಮ್ಮಲ್ಲಿ ಈ ರಾತ್ರೆ ದೀಪ ಬಹಳ ಹೊತ್ತು ಉರಿತಿರೋದನ್ನ ಯಾರಾದರೂ ನೋಡಬಹುದು. ನಮಗೇನೂ ಭಯ ಇಲ್ಲ, ಆದರೆ ಅತಿಥಿಯ ದೃಷ್ಟಿಯಿಂದ ಅದು ಒಳ್ಳೇದಲ್ಲ...."

ತತ್ಯಾನ ಎದ್ದು ಒಲೆಯ ಬಳಿ ಹೋದಳು.

ಪ್ಯೋತ್ರ್ ಮುಗುಳ್ನಕ್ಕ.

"ಹೌದು.... ಈಗಿನ ಕಾಲ್ದಲ್ಲಿ ಎಚ್ಚರಿಕೆಯಿಂದ ಹೆಜ್ಜೆ ಇಡ್ಬೇಕು. ಈ ಪತ್ರಿಕೆ ಗಳು ಜನರ ಎಡೇಲಿ ಮುಖ ತೋರಿಸಿದ್ಮೇಕ್ಡ್ಲೆ...."

"ನನ್ನ ವಿಷಯ ನಾನು ಯೋಚಿಸ್ತಾ ಇಲ್ಲ. ನನ್ನನ್ನ ಅವರು ದಸ್ತಗಿರಿ ಮಾಡಿದ್ರೂ ಮಹಾ ನಷ್ಟವೇನೂ ಆಗೋದಿಲ್ಲ."

ಆತನ ಹೆಂಡತಿ ಮೇಜಿನ ಬಳಿಗೆ ಬಂದು ಹೇಳಿದಳು:

"ಏಳಲ್ಲಿಂದ."

ಆತ ಎದ್ದು ಊಟದ ತಟ್ಟೆಗಳನ್ನಾಕೆ ಮೇಜಿನ ಮೇಲಿಡುವುದನ್ನು ನೋಡುತ್ತಾ, ಇನ್ನೊಂದು ಪಕ್ಕಕ್ಕೆ ಸರಿದ.

"ನಾನು ನೀನೆಲ್ಲ ಕಾಸಿಗೊಂದು ಕೊಸರಿಗೊಂದು," ಎಂದು ಆತ ವ್ಯಂಗ್ಯವಾಗಿ ಮುಗುಳ್ನಕ್ಕು ಹೇಳಿದ.

ತಾಯಿಗೆ ಅವನ ಬಗೆಗೆ ವಿಷಾದವೆನಿಸಿತು. ಹೆಚ್ಚು ಹೆಚ್ಚಾಗಿ ಪರಿಚಯವಾದಂತೆ ತಾಯಿ ಆತನನ್ನು ಹೆಚ್ಚು ಹೆಚ್ಚಾಗಿ ಮೆಚ್ಚಿಕೊಂಡಳು. ತಾನು ಮಾತನಾಡಿದ ಮೇಲೆ, ದಿನದ ಮಾಲಿನ್ಯ ಕಳೆದು ಹೋದಂತೆ ಆಕೆಗೆ ತೋರಿತು. ತಾಯಿಗೆ ತನ್ನ ಬಗೆಗೇ ತೃಪ್ತಿ ಎನಿಸಿ, ಪ್ರತಿಯೊಬ್ಬರ ವಿಷಯದಲ್ಲೂ ಆಕೆಯ ಹೃದಯ ಸದ್ಭಾವನೆಯಿಂದ ತುಂಬಿತು.

"ನೀವು ಹಾಗೆ ಹೇಳೋದು ಸರಿಯಲ್ಲ. ನಿಮ್ಮ ರಕ್ತ ಹೀರೋ ಜನ ನಿಮಗೆ ಕಟ್ಟೋ ಬೆಲೇನ ನೀವು ಒಪ್ಕೋಬಾರದು. ನಿಮ್ಮ ಬೆಲೇನ – ನಿಮ್ಮ ಒಳಗಿರೋದರ ಬೆಲೇನ – ನೀವೇ ಕಟ್ಬೇಕು. ಮಿತ್ರರಿಗಾಗಿ ಶತ್ರುಗಳಿಗಾಗಿಯಲ್ಲ," ಎಂದು ಆಕೆ ಹೇಳಿದಳು.

"ನಮಗೆಂಥಾ ಸ್ನೇಹಿತರಿದ್ದಾರೆ? ಸ್ನೇಹಿತರು – ರೊಟ್ಟಿಗಾಗಿ ಕಿತ್ತಾಡೋವ ರೆಗೆ ಮಾತ್ರ, ನಮ್ಮ ಬೆನ್ನು ಪುಡಿಯಾಗೋವರೆಗೆ ಮಾತ್ರ."

"ಜನಸಾಮಾನ್ಯರಿಗೂ ಸ್ನೇಹಿತರೂಂತ ಇರ್ತಾರೆ."

"ಇರಬಹುದು, ಆದರೆ ಇಲ್ಲಿಯಲ್ಲ. ಅದೀಗ ಮುಖ್ಯ ವಿಷಯ."

"ಇಲ್ಲಿಯೇ ಸ್ನೇಹಿತರನ್ನು ಯಾಕೆ ಹುಡುಕ್ಬಾರ್ದು?"

ಉತ್ತರಕೊಡುವುದಕ್ಕೆ ಮುಂಚೆ ಸ್ತೆಪಾನ್ ಒಂದು ಕ್ಷಣ ಯೋಚಿಸಿದ:

"ಹುಂ. ಹೌದು. ಅದೀಗ ನಾವು ಮಾಡ್ಬೇಕಾದ್ದು."

"ಕೂತ್ಕೊಳ್ಳಿ, ಬಡಿಸಿದ್ದೀನಿ," ಎಂದು ತತ್ಯಾನ ಕರೆದಳು.

ತಾಯಿ ಹೇಳಿದ್ದನ್ನೆಲ್ಲ ಕೇಳಿ ಮೂಕನಾಗಿದ್ದ ಪ್ಯೋತ್ರ್ ಊಟ ಮಾಡುತ್ತಿದ್ದಾಗ ಮತ್ತೊಮ್ಮೆ ಚುರುಕುಗೊಂಡು ಮಾತನಾಡಿದ:

"ಯಾರ ಗಮನವನ್ನೂ ಸೆಳೀದ ಹಾಗೆ ನೀವು ಬೆಳಕು ಹರಿಯೋ ಮುಂಚೇನೆ ಹೋಗ್ಬೇಕು. ಪುನಃ ಪಟ್ಟಣದೊಳಗಿಂದ ಹೋಗ್ದೇನೇ ಇನ್ನೊಂದು ನಿಲ್ದಾಣ ಸೇರ್ಬೇಕು. ಕೋಚ್ ಗಾಡೀನೇ ಸರಿ."

"ಯಾಕೆ? ನಾನೇ ಗಾಡೀಲಿ ಕರಕೊಂಡು ಹೋಗಿ ಬಿಡ್ತೀನಿ," ಎಂದು ಸ್ತೆಪಾನೆಂದ.

"ಊಹೂಂ. ಕೂಡದು. ಅವರು ಕೇಳಿದ್ರೆ? 'ರಾತ್ರೆ ನಿನ್ಮನೇಲಿದ್ಲೆ?' 'ಹೌದು, ಇದ್ಲು.' 'ಈಗೆಲ್ಲಿದಾಳೆ?' 'ನಿಲ್ದಾಣಕ್ಕೆ ತಲಪಿಸಿ ಬಂದೆ.' 'ಆಹಾ! ಆಕೆ ಹೊರಟ್ಹೋ ಗೋದಕ್ಕೆ ಸಹಾಯ ಮಾಡ್ದೋನು ನೀನು ಹಾಗಾದ್ರೆ!' ಅಷ್ಟು ಹೇಳಿ ನಿನ್ನನ ಜೈಲಿಗೆ ಒಯ್ತಾರೆ. ಅಷ್ಟು ಅವಸರವಾಗಿ ಸೆರೆಮನೆಗೆ ಹೋಗೋದ್ರಲ್ಲಿ ಅರ್ಥವಿಲ್ಲ. ಪ್ರತಿಯೊಂದಕ್ಕೂ ಸಮಯ ಬರ್ಬೇಕು. ಗಾದೇನೇ ಇಲ್ವೆ? – ಕಾಲ ಬಂದಾಗ ದೊರೇನೂ ಸಾಯ್ತಾನೆ ಅಂತ? ಅದರ ಬದಲು, ರಾತ್ರೆ ನಮ್ಮಲ್ಲಿದ್ದು, ಬೆಳಿಗ್ಗೆ ಬಾಡಿಗೆಗೆ ಕೋಚ್

ಗಾಡಿ ಮಾಡ್ಕೊಂಡು ಹೊರಟ್ಹೋದ್ಲು. ನಮ್ಮೂರು ಮುಖ್ಯ ರಸ್ತೆ ಬದೀಲಿ ಇರೋ ದ್ರಿಂದ ಎಷ್ಟೋ ಜನ ರಾತ್ರಿ ಹೊತ್ತು ಇಲ್ಲಿ ತಂಗ್ತಾರೆ."

"ಇಷ್ಟೊಂದು ಹೆದರ್ಕೊಳ್ಳೋದು ಎಲ್ಲಿ ಕಲ್ತೆ ಪ್ಯೋತ್ರ್?" ಎಂದು ತತ್ಯಾನ ವ್ಯಂಗ್ಯವಾಗಿ ಕೇಳಿದಳು.

ತನ್ನ ಮೊಣಕಾಲನ್ನು ತಟ್ಟುತ್ತಾ ಪ್ಯೋತ್ರ್ ಎಂದ:

"ಇದೆಲ್ಲಾ ಹ್ಯಾಗ್ಮಾಡ್ಬೇಕೂಂತ ಗೊತ್ತಿರ್ಬೇಕಮ್ಮ! ಯಾವಾಗ ಹೆದರ್ಬೇಕು, ಯಾವಾಗ ಧೈರ್ಯವಾಗಿರ್ಬೇಕು ಅನ್ನೋದನ್ನೂ ತಿಳಿದಿರೋದು ಅಗತ್ಯ. ಆ ಪತ್ರಿಕೆ ಕಾರಣದಿಂದ ವಗಾನೊವ್‌ನ ಯಾವ ರೀತಿ ಹೆದರಿಸ್ಬಿಟ್ರು ಗೊತ್ತಿದೆಯೇನು? ಲಕ್ಷ ಕೊಡ್ತೀನಿ ಅಂದ್ರೂ, ಇನ್ನೊಮ್ಮೆ ಆತ ಪುಸ್ತಕ ಮುಟ್ಟೋದಿಲ್ಲ! ಆದರೆ, ನನ್ನನ್ನ ನೀವು ನಂಬಬಹುದು ತಾಯಿ. ನಾನು ಚಾಲಾಕಿ ಖದೀಮನೇ ಸರಿ. ಆ ನಿಮ್ಮ ಪತ್ರಿಕೆ ಕರಪತ್ರಗಳನ್ನೆಲ್ಲಾ ನಾನು ಹಂಚ್ತೀನಿ. ಎಷ್ಟಿದ್ದರೂ ಸರಿಯೆ, ಸರಿಯಾದ ಜಾಗಕ್ಕೇ ತಲಪಿಸ್ತೀನಿ. ನಮ್ಮ ಜನ ಹೆಚ್ಚಾಗಿ ಅನಕ್ಷರಸ್ಥರಾಗಿರೋದೂ ಹೆದರ್ಕೊಳ್ಳೋದೂ ನಿಜ. ಆದರೆ ಎಲ್ಲದಕ್ಕೂ ಮಿತಿ ಇದೆ. ಸಮಯ ಬಂದಾಗ ಕಣ್ಣು ಹೊರಳಿಸ್ದೆ ಇರೋಕೆ ಆಗೋದೇ ಇಲ್ಲ. ಈ ಕರಪತ್ರಗಳು ಸರಿಯಾಗಿಯೇ ಉತ್ತರ ಕೊಡ್ತವೆ. ಮುಖ್ಯ ವಾಗಿ – ಯೋಚಿಸೋದು ಅಗತ್ಯ; ಎರಡು ಮತ್ತು ಎರಡನ್ನು ಒಟ್ಟು ಸೇರಿಸಿ ಕೂಡಿ ಸ್ಬೇಕು. ಒಂದೊಂದ್ಸಲ ಹೀಗೂ ಆಗ್ತದೆ. ಅಕ್ಷರಸ್ಥರಿಗಿಂತಲೂ ಹೆಚ್ಚು ಅನಕ್ಷ ರಸ್ಥರು ತಿಳಕೋತಾರೆ – ಅದು ವಿಶೇಷವಾಗಿ ಅಕ್ಷರಸ್ಥರ ಹೊಟ್ಟೆ ತುಂಬಿಕೊಂಡಿ ದ್ದಾಗ. ನಾನು ಈ ಪ್ರದೇಶದಲ್ಲೆಲ್ಲಾ ತುಂಬಾ ಸಂಚಾರ ಮಾಡಿದ್ದೀನಿ, ಬೇಕಾದಷ್ಟು ನೋಡಿದೀನಿ. ಈ ಕೆಲಸ ಸರಿಯಾಗಿ ನಿರ್ವಹಿಸೋದು ನಮ್ಮಿಂದ ಸಾಧ್ಯ. ಆದರೆ ನಾವು ಮೆದುಳು ಉಪಯೋಗಿಸ್ಬೇಕು. ಮೊದಲೇ ಸಿಕ್ಕಿಬೀಳದ ಹಾಗೆ ಹುಷಾರಾ ಗಿರ್ಬೇಕು. ರೈತರು ಮೊದಲಿದ್ದ ಹಾಗೆ ಇಲ್ಲಾಂತ ಅಧಿಕಾರಿಗಳಿಗೆ ಗೊತ್ತಾಗ್ಬಿಟ್ಟಿದೆ. ಈಗ ರೈತ ಮುಗುಳ್ನಗೋದಿಲ್ಲ, ಪ್ರೀತಿ ತೋರಿಸೋದಿಲ್ಲ, ಅಧಿಕಾರಿಗಳಿಂದ ದೂರ ವಾಗಿರೋಕೆ ಇಷ್ಟಪಡ್ತಾನೆ. ಮೊನ್ನೆ ದಿನ ಸ್ಮೊಲ್ಯಕೋವೊನಲ್ಲಿ, ಅಂದರೆ ಇಲ್ಲೇ ಸಮೀಪದ ಹಳ್ಳೀಲಿ, ಕಂದಾಯ ವಸೂಲ್ಮಾಡೋಕೆ ಬಂದ್ರು. ರೈತರು ಕೈಯಲ್ಲಿ ಬಡಿಗೆ ಹಿಡಿದು ಸಿದ್ಧವಾದ್ರು! ಪೋಲೀಸರ ಮುಖ್ಯಸ್ಥ ಸುಮ್ಮಿರ್ತಾನೆಯೆ? 'ಓಹೋ, ಅರಸರಿಗಿದಿರು ನಿಲ್ತೀರಾ, ನಾಯಿ ಮಕ್ಕಳೆ!' ಅಂತ ಕೂಗಾಡಿದ. ಒಬ್ಬ ರೈತ ಇದ್ದ – ಸ್ಪಿವಾಕಿನ್ ಅಂತ ಹೆಸರು. ಅವನೆದ್ದು ಹೇಳ್ದ – 'ನಿನ್ನ ಅರಸ ನೀನು ಇಬ್ರೂ ಹೋಗಿ ನರಕಕ್ಕೆ. ನಮ್ಮ ಮೈ ಮೇಲಿನ ಕೊನೇ ಅಂಗೀನ ಕದಿಯೋವ್ನು ಅವನೆಂಥಾ ಅರಸ?...' ಪರಿಸ್ಥಿತಿ ಇಲ್ಲಿಗ್ಬಂದಿದೆ, ತಾಯಿ! ಸ್ಪಿವಾಕಿನ್‌ನ ಹಿಡ್ದು ಜೈಲಿಗೆ ಹಾಕಿ ದ್ರೂಂತಿಟ್ಕೊ. ಆದರೆ ಅವನಾಡಿದ ಮಾತು ಉಳೀತು. ಅವನು ಹೇಳಿದ್ದನ್ನ ಚಿಕ್ಕ ಹುಡುಗರೂ ನೆನಪಿಟ್ಟಿದ್ದಾರೆ. ಅವನ ಮಾತುಗಳು ಬದುಕಿಕೊಂಡು ಗಟ್ಟಿಯಾಗಿ ಪ್ರತಿಧ್ವನಿಸ್ತಾ ಇರ್ತವೆ!"

ಅವನು ಏನನ್ನೂ ತಿನ್ನಲೇ ಇಲ್ಲ. ತುಂಟತನದ ಕರಿಯ ಕಣ್ಣುಗಳಿಂದ ಧೈರ್ಯ ವಾಗಿ ಸುತ್ತಲೂ ನೋಡುತ್ತಾ, ಜೇಬಿನಿಂದ ತಾಮ್ರದ ನಾಣ್ಯಗಳನ್ನು ಸುರಿದಹಾಗೆ ರೈತ ಜೀವನದ ವಿವಿಧ ಚಿತ್ರಗಳ ಉದಾರಕಾಣಿಕೆಯನ್ನು ತಾಯಿಗೆ ಕೊಡುತ್ತಾ, ವೇಗವಾಗಿ ಪಿಸುಧ್ವನಿಯಲ್ಲಿ ಮಾತನಾಡುತ್ತಲೇ ಇದ್ದ.

ಎರಡು ಸಾರಿ ಸ್ತೆಪಾನ್, ಆತನ ಮಾತು ತಡೆದು ಹೇಳಿದ:

"ನೀನು ಊಟಾನೇ ಮಾಡ್ತಾ ಇಲ್ಲ."

ಎರಡು ಸಲವೂ ಪ್ಯೋತ್ರ್ ಒಂದು ಚೂರು ರೊಟ್ಟಿಯನ್ನೂ ಚಮಚವನ್ನೂ ಎತ್ತಿಕೊಂಡು, ಕೋಗಿಲೆ ಹಾಡುವಷ್ಟೇ ಸುಲಭವಾಗಿ ತನ್ನ ಕತೆಗಳನ್ನು ಹೇಳುತ್ತ ಹೋದ. ಊಟ ಮುಗಿದೊಡನೆ ಆತ ಒಮ್ಮೆಲೆ ಎದ್ದು ನಿಂತು ಹೇಳಿದ:

"ಸರಿ, ನಾನು ಹೊರಡ್ಬೇಕು!"

ತಾಯಿಯೊಡನೆ ಕೈಕುಲುಕುತ್ತ ಆತನೆಂದ:

"ನಮಸ್ಕಾರ, ತಾಯಿ. ಪ್ರಾಯಶಃ ನಾವಿನ್ನು ಒಬ್ಬರನೊಬ್ಬರು ನೋಡ್ತೀವೋ ಇಲ್ಲವೋ. ಆದರೆ ನಾನು ಇಷ್ಟು ಹೇಳ್ಲೇಬೇಕು. ಇದೆಲ್ಲಾ ಸೊಗಸೂಂತ ನನ್ನ ಅಭಿ ಪ್ರಾಯ. ನಿಮ್ಮನ್ನ ಕಂಡದ್ದು, ನೀವು ಹೇಳಿದ್ದನ್ನ ಕೇಳಿದ್ದು, ಎಲ್ಲಾ ಸೊಗಸು. ಪತ್ರಿಕೆ ಗಳಲ್ಲದೆ ಪೆಟ್ಟಿಗೇಲಿ ಬೇರೇನಾದರೂ ಇದೆಯೇನು? ಉಣ್ಣೆಯ ಚಾದರ ಅಂದೆಯಾ? ಒಳ್ಳೇದು – ಉಣ್ಣೆಯ ಚಾದರ. ನೆನಪಿಟ್ಕೊ, ಸ್ತೆಪಾನ್, ಇವನು ನಿಮ್ಮ ಪೆಟ್ಗೇನ ಈ ಕ್ಷಣ ತರ್ತಾನೆ. ಬಾ, ಸ್ತೆಪಾನ್! ಒಳ್ಳೇದಾಗಲಮ್ಮ – ನಮಸ್ಕಾರ!"

ಅವರು ಹೋದಮೇಲೆ, ಜಿರಳೆಗಳ ಓಡಾಟದ ಸದ್ದು ಕೇಳಿಸತೊಡಗಿತು. ಗಾಳಿ ಛಾವಣಿಯ ಮೇಲೆ ಓಡಾಡಿ ಚಿಮಿಣಿಯ ಗಂಟಲಲ್ಲಿ ಸಿಲುಕಿಕೊಂಡಿತು. ತುಂತುರು ಮಳೆ ಕಿಟಕಿಗೆ ಅಡ್ಡವಾಗಿ ಸುರಿಯಿತು. ಒಲೆಯ ಮೇಲ್ಭಾಗದ ಹಾಸಿಗೆಯಿಂದ ಹೊದಿಕೆಗಳನ್ನೆಳೆದು ಬೆಂಚಿನ ಮೇಲೆ ಹಾಸಿ, ತಾಯಿಗಾಗಿ ತತ್ಯಾನ ಹಾಸಿಗೆ ಸಿದ್ಧ ಪಡಿಸಿದಳು.

"ಅವನು ತುಂಬಾ ಚಟುವಟಿಕೆಯ ಮನುಷ್ಯ," ಎಂದಳು ತಾಯಿ.

"ಮಾತು ಜಾಸ್ತಿ. ಕೆಲಸ ಅಷ್ಟರಲ್ಲೇ ಇದೆ."

"ನಿನ್ನ ಗಂಡ ಹೇಗೆ?"

"ಪರವಾಗಿಲ್ಲ – ತಕ್ಕಮಟ್ಟಿಗೆ ಒಳ್ಳೆಯವನೆ. ಕುಡಿಯೊ ಅಭ್ಯಾಸವಿಲ್ಲ. ನಾವು ಜತೇಲಿ ಸುಖವಾಗಿದ್ದೀವಿ. ಅವನು ಸ್ವಲ್ಪ ದುರ್ಬಲ, ಅಷ್ಟೇ...."

ಆಕೆ ಬೆನ್ನು ನಿಡಿದು ನಿಂತಳು. ಸ್ವಲ್ಪ ತಡೆದು ಆಕೆ ಕೇಳಿದಳು:

"ಈಗ ನಾವೇನು ಮಾಡ್ಬೇಕು? ಜನರು ಬಂಡಾಯವೇಳೋದು ಬೇಡ್ವೆ? ಖಂಡಿತವಾಗಿಯೂ ಏಳ್ಬೇಕು! ಪ್ರತಿಯೊಬ್ಬನೂ ಯೋಚಿಸೋದೂ ಅದನ್ನೇ. ಆದರೆ ತನ್ನಷ್ಟಕ್ಕೇ ಯೋಚಿಸ್ತಾನೆ, ಅಷ್ಟೆ.... ಅವರೆಲ್ಲ ಗಟ್ಟಿಯಾಗಿ ಅದನ್ನು ಯೋಚಿಸ್ಬೇಕು – ಆದರೆ ಯಾರಾದರೊಬ್ಬರು ಮೊದಲ ಹೆಜ್ಜೆ ಇಡ್ಬೇಕು...."

ಆಕೆ ಬೆಂಚಿನ ಮೇಲೆ ಕುಳಿತು ಒಮ್ಮೆಲೆ ಕೇಳಿದಳು:

"ಶ್ರೀಮಂತರಾದ ಎಳೇ ಹುಡುಗೀರೂ ಇಂಥ ಕೆಲಸಕ್ಕೆ ಬರ್ತಾರೆ, ಕೆಲಸಗಾರರ ಜತೆ ಸೇರ್ಕೊಂಡು ಅವರಿಗೆ ಓದಿ ಹೇಳ್ತಾರೆ, ಅಂದ್ರಿ. ಇಂಥ ಕಷ್ಟದ ಕೆಲಸ ಅವರಿಂದ ಆಗುತ್ತೆ? ಅವರಿಗೆ ಹೆದರಿಕೆ ಆಗೋದಿಲ್ವೆ?"

ತಾಯಿಯ ಉತ್ತರವನ್ನು ಕೇಳಿ ಆಕೆ ಆಳವಾಗಿ ನಿಟ್ಟುಸಿರು ಬಿಟ್ಟಳು. ದೃಷ್ಟಿಯನ್ನು ಕೆಳಕ್ಕಿಳಿಸಿ ತಲೆ ಬಾಗಿಸಿ ಮುಂದುವರಿಸಿದಳು:

"ಯಾವುದೋ ಪುಸ್ತಕದಲ್ಲಿ 'ನಿರರ್ಥಕ ಜೀವನ' ಎಂಬ ಮಾತು ಬಂತು. ಅದೇನೂಂತ ನನಗೆ ಸರಿಯಾಗೇ ತಿಳೀತು–ಮೊದಲ್ನೇ ಸಲವೇ! ಅದೆಂಥ ಜೀವನ ಅನ್ನೋದು ನನಗೆ ಗೊತ್ತಿದೆ. ಅರ್ಥಗಳಿವೆ, ಆದರೆ ಒಂದಕ್ಕೊಂದು ಜೋಡಣೆಯಿಲ್ಲ. ಕುರುಬನಿಲ್ಲದ ಕುರಿಗಳ ಹಾಗೆ. ಅವುಗಳ್ನ ಒಟ್ಟಿಗೆ ಸೇರ್ಸೋಕೆ ಯಾರೂ ಇಲ್ಲ. ನಿರರ್ಥಕ ಜೀವನ ಅಂದರೆ ಅದು. ಸಾಧ್ಯವಿದ್ದರೆ, ಅಂಥ ಜೀವನದಿಂದ ತಿರುಗಿ ನೋಡದೆಯೇ ನಾನು ಓಡಿ ಹೋಗುವಾಕೆ. ಸತ್ಯ ಏನೂಂತ ಮನಗಂಡ ಮೇಲೆ ಸಹಿಸೋಕಾಗೋದಿಲ್ಲ."

ಆ ಹೆಂಗಸಿನ ಹಸುರು ಕಣ್ಣುಗಳ ಒಣಪ್ರಕಾಶದಲ್ಲಿ, ಕ್ಷೀಣವಾಗಿದ್ದ ಮುಖದಲ್ಲಿ, ಮಾತಿನ ಧ್ವನಿಯಲ್ಲಿ ಇದ್ದ ನೋವನ್ನು ತಾಯಿ ತಿಳಿದುಕೊಂಡಳು. ಆಕೆಯನ್ನು ತಬ್ಬಿಕೊಂಡು ಸಂತೈಸಬೇಕೆಂದು ತಾಯಿಗೆ ಅಪೇಕ್ಷೆಯಾಯಿತು.

"ಏನ್ಮಾಡ್ಬೇಕು ಅನ್ನೋದು ನಿನಗೆ ಗೊತ್ತು, ಮುದ್ದು...."

"ಆದರೆ, ಹ್ಯಾಗೆ ಮಾಡ್ಬೇಕು ಅನ್ನೋದು ಗೊತ್ತಿರ್ಬೇಡ್ವೆ?" ಎಂದು ತಾಯಿಯ ಮಾತನ್ನು ತಡೆದು ತತ್ಯಾನ ಮೃದುವಾಗಿ ಹೇಳಿದಳು.

"ನಿಮ್ಮ ಹಾಸಿಗೆ ಸಿದ್ಧವಾಗಿದೆ" ಎಂದಳು.

ತತ್ಯಾನ ಒಲೆಯ ಬಳಿಗೆ ಹೋಗಿ, ಗಂಭೀರವಾಗಿ ಯೋಚನೆಯಲ್ಲಿ ಮೈಮರೆತು ನೆಟ್ಟಗೆ ನಿಂತಳು. ಉಟ್ಟಿದ್ದ ಉಡುಪಿನಲ್ಲೇ ತಾಯಿ ಬೆಂಚಿನ ಮೇಲೆ ಮಲಗಿದಳು. ಆಯಾಸದ ನೋವಿನಿಂದ ದೇಹದ ಮೂಳೆಗಳು ಬಾಯ್ತೆರೆದುವು. ಆಕೆ ಮೆಲ್ಲನೆ ನರಳಿದಳು. ತತ್ಯಾನ ದೀಪವನ್ನು ನಂದಿಸಿದಳು. ಗುಡಿಸಲು ಕತ್ತಲಲ್ಲಿ ಮುಳುಗಿದಾಗ ಒಂದೇ ಸಮನಾದ ಇಳಿಸ್ವರದಲ್ಲಿ ಆಕೆ ಮಾತನಾಡತೊಡಗಿದಳು. ಕತ್ತಲಿನ ಚಪ್ಪಟೆಯಾದ ಮುಖದ ಮೇಲಿಂದ ಏನನ್ನೊ ಒರೆಸುತ್ತಿದ್ದಂತೆ ಆಕೆಯ ಸ್ವರ ಕೇಳಿಸಿತು.

"ನೀವು ಪ್ರಾರ್ಥನೆ ಮಾಡ್ಲಿಲ್ಲ.... ನಾನು ಕೂಡಾ ದೇವರಿದಾನೆ ಅಂತ ನಂಬೋದಿಲ್ಲ. ಪವಾಡಗಳಲ್ಲಿಯೂ ನನಗೆ ನಂಬಿಕೆ ಇಲ್ಲ."

ತಾಯಿ ನೆಮ್ಮದಿ ಇಲ್ಲದೆ ಬೆಂಚಿನ ಮೇಲೆ ಮಗ್ಗುಲು ಹೊರಳಿದಳು. ಕತ್ತಲೆಯ ತಳವಿಲ್ಲದ ಆಳ, ಕಿಟಕಿಯ ಎಡೆಯಿಂದ ಆಕೆಯತ್ತ ನೋಡಿ ಆಕಳಿಸಿತು. ಕತ್ತಲಲ್ಲಿ

ಅಸ್ಪಷ್ಟ ಸ್ವರಗಳು ಹರಿದಾಡಿದುವು. ತಾಯಿ, ಭಯಗೊಂಡು ಪಿಸುದನಿಯಲ್ಲಿ, ಮಾತನಾಡಿದಳು:

"ದೇವರ ವಿಷಯ ನಾನು ಖಂಡಿತವಾಗಿ ಹೇಳಲಾರೆ. ಆದರೆ ಕ್ರಿಸ್ತನಲ್ಲಿ ನನಗೆ ನಂಬಿಕೆ ಇದೆ. 'ನಿನ್ನಹಾಗೆ ನಿನ್ನ ನೆರೆಯುವನನ್ನೂ ಪ್ರೀತಿಸು' ಅನ್ನೋ ಆತನ ಮಾತು ನನಗಿಷ್ಟ. ಅದರಲ್ಲಿ ನನಗೆ ನಂಬಿಕೆ ಇದೆ."

ತತ್ಯಾನ ಮೌನವಾಗಿದ್ದಳು. ನೇರವಾಗಿ ನಿಂತಿದ್ದ ಆಕೆಯ-ಆಕೃತಿ ಅಸ್ಪಷ್ಟವಾಗಿ ತಾಯಿಗೆ ಕಾಣಿಸುತ್ತಿತ್ತು. ಕದಲದೆ ಆಕೆ ನಿಂತಿದ್ದಳು. ತಾಯಿ ದುಃಖದಿಂದ ಕಣ್ಣು ಮುಚ್ಚಿಕೊಂಡಳು. ಆ ಕ್ಷಣವೇ ಹೆಂಗಸು ಶೀತಲವಾದ ಧ್ವನಿಯಲ್ಲಿ ಹೇಳುತ್ತಿದ್ದುದು ಕೇಳಿಸಿತು:

"ನನ್ನ ಮಕ್ಕಳ ಸಾವಿಗಾಗಿ ದೇವರನ್ನಾಗಲೀ ಮನುಷ್ಯನನ್ನಾಗಲೀ ನಾನು ಎಂದಿಗೂ ಕ್ಷಮಿಸೋದು ಸಾಧ್ಯವಿಲ್ಲ, ಎಂದಿಗೂ ಇಲ್ಲ!"

ಅಂತಹ ಮಾತುಗಳನ್ನಾಡಿದ ಹೃದಯದ ನೋವನ್ನು ತಿಳಿದ ತಾಯಿ ಕಾತರ ಗೊಂಡು ಎದ್ದು ಕುಳಿತಳು.

"ನೀನಿನ್ನೂ ಚಿಕ್ಕವಳು. ನಿನಗೆ ಇನ್ನೂ ಮಕ್ಕಳಾಗ್ತವೆ," ಎಂದು ಆಕೆ ಮೃದು ವಾಗಿ ಹೇಳಿದಳು.

ಆ ಹೆಂಗಸು ತಕ್ಷಣ ಉತ್ತರಕೊಡಲಿಲ್ಲ. ಸ್ವಲ್ಪ ತಡೆದು, ಪಿಸುಮಾತಿನಲ್ಲಿ ಅಂದಳು:

"ಎಂದಿಗೂ ಆಗೋದಿಲ್ಲ. ನನ್ನೊಳಗಡೆ ಏನೋ ಆಗಿದೆ. ಇನ್ನು ಮಕ್ಕಳಾ ಗೋದಿಲ್ಲಾಂತ ಡಾಕ್ಟರು ಹೇಳಿದ್ದಾರೆ."

ಇಲಿಯೊಂದು ನೆಲದಮೇಲೆ ಓಡಿತು. ಏನೋ ಬಿದ್ದು ಗಟ್ಟಿಯಾಗಿ ಸಪ್ಪಳ ವಾಯಿತು. ಸದ್ದಿನ ಅಗೋಚರ ಮಿಂಚು ಮೌನಕ್ಕೆ ಭಂಗತಂದಿತು. ಛಾವಣಿಯ ಮೇಲೆ ಮಳೆಹನಿ ಬೀಳುತ್ತಿದ್ದುದೂ ಈ ಹನಿ ಯಾರದೋ ತೆಳ್ಳಗಿನ ಭಯ ಗೊಂಡ ಬೆರಳುಗಳಂತೆ ಛಾವಣಿಯೊಳಗಿನ ಹುಲ್ಲನ್ನು ಕೆದಕುತ್ತಿದ್ದುದೂ ಮತ್ತೊಮ್ಮೆ ಕೇಳಿಸಿತು. ರಾತ್ರಿಯ ನಿಧಾನವಾದ ನಿರ್ಗಮನವನ್ನು ಗುರುತಿಸುತ್ತ, ಮಳೆ ನೀರು ಭೂಮಿಯೊಳಕ್ಕೆ ಮಂದವಾಗಿ ಇಳಿಯಿತು. ತಾಯಿ ಮಲಗಿ ಕಣ್ಣುಮುಚ್ಚಿಕೊಂಡಳು.

ಮುಂಪರು ಬಂದಾಗ, ಮೊದಲು ಹೊರಗೂ ಅನಂತರ ಬಾಗಿಲಿ ಬಳಿಯಲ್ಲೂ ಮಂದವಾದ ಹೆಜ್ಜೆಗಳ ಸಪ್ಪಳವಾದುದು ತಾಯಿಗೆ ಅರಿವಾಯಿತು. ಜಾಗರೂಕತೆ ಯಿಂದ, ಸದ್ದಾಗದಂತೆ, ಬಾಗಿಲು ತೆರೆಯಿತು. ಯಾರೋ ಹೇಳಿದರು:

"ಮಲಕೊಂಡೆಯಾ, ತತ್ಯಾನ?"

"ಇಲ್ಲ."

"ಆಕೆಗೆ ನಿದ್ದೆ ಬಂತೆ?"

"ಬಂತೂಂತ ಕಾಣಿಸುತ್ತೆ."

ಬೆಳಕು ಹತ್ತಿಕೊಂಡಿತು. ಕ್ಷಣಕಾಲ ಚಂಚಲವಾಯಿತು. ಬಳಿಕ ಕತ್ತಲು ಆ ಬೆಳಕನ್ನು ಉಸಿರು ಕಟ್ಟಿಸಿ ಸಾಯಿಸಿತು. ಆ ರೈತ ತಾಯಿಯ ಬಳಿಗೆ ಬಂದು ಆಕೆಯ ಕಾಲ ಮೇಲೆ ಹಾಕಿದ್ದ ಹೊದಿಕೆಯನ್ನು ಸರಿಪಡಿಸಿದ. ಆ ಸೇವೆಯ ಸರಳತೆ ಹೃದಯಸ್ಪರ್ಶಿಯಾಗಿತ್ತು. ತಾಯಿ ತೆರೆದ ಕಣ್ಣುಗಳನ್ನು ಮುಗುಳ್ನಗುತ್ತ ಮತ್ತೊಮ್ಮೆ ಮುಚ್ಚಿದಳು. ಸ್ತೆಪಾನ್ ಮಾತಿಲ್ಲದೆ ಉಡುಪು ಕಳಚಿ, ಒಲೆಯ ಮೇಲುಭಾಗದಲ್ಲಿದ್ದ ಹಾಸಿಗೆಯನ್ನೇರಿದ. ಪ್ರತಿಯೊಂದೂ ಶಾಂತವಾಯಿತು.

ಸ್ವಪ್ನ ಸಮಾನವಾದ ಕತ್ತಲೆಯ ಏರಿಳಿತಗಳಿಗೆ ಸೂಕ್ಷ್ಮವಾಗಿ ಕಿವಿಗೊಡುತ್ತಾ ತಾಯಿ ನಿಶ್ಚಲವಾಗಿ ಮಲಗಿದಳು. ಆಕೆಯ ಕಣ್ಣುಗಳೆದುರು ರೀಬಿನ್ನನ ರಕ್ತಸಿಕ್ತ ಮುಖ ಎದ್ದು ನಿಂತಿತು.

ಹಾಸಿಗೆಯಿಂದ ಧ್ವನಿ ಕೇಳಿಸಿತು:

"ನೋಡು, ಎಂಥೆಂಥವರು ಈ ಕೆಲಸದಲ್ಲಿದ್ದಾರೆ! ಜೀವಮಾನವೆಲ್ಲಾ ದುಡಿದು ಸಾಕಷ್ಟು ಕಷ್ಟ ಅನುಭವಿಸಿರೋರು ವಯಸ್ಸಾದೋರು ಈ ಕೆಲಸ ಮಾಡ್ತಾರೆ. ಸುಮ್ನೆ ಸ್ವಸ್ಥವಾಗಿ ಇರೋದು ಬಿಟ್ಟು, ಅವರು ಮಾಡೋದು ಇದನ್ನು.... ಓ ಸ್ತೆಪಾನ್! ನೀನು ಯುವಕ, ಜಾಣ...."

ರೈತನ ಸ್ವರ ಆಳದಿಂದ ಬಂದು ಸಮೃದ್ಧವಾಗಿ ಉತ್ತರವಿತ್ತಿತು.

"ಮೊದಲು ಅದನ್ನೆಲ್ಲಾ ಯೋಚ್ನೆ ಮಾಡ್ಬೇಕು...."

"ಇಂಥ ಉತ್ತರ ಬೇಕಷ್ಟು ಕೇಳಿದ್ದೀನಿ."

ಒಂದು ಕ್ಷಣ ಮಾತು ನಿಂತಿತು. ಬಳಿಕ ಸ್ತೆಪಾನ್‌ನ ಸ್ವರ ಮುಂದುವರಿಯಿತು:

"ಶುರು ಮಾಡ್ಬೇಕಾದ್ದು ಹೀಗೆ – ಮೊದಲು ರೈತರ ಜತೇಲಿ ಪ್ರತ್ಯಪ್ರತ್ಯೇಕವಾಗಿ ಮಾತ್ನಾಡ್ಬೇಕು. ಉದಾಹರಣೆಗೆ – ಅಲೆಕ್ಸೇಯ್ ಮಾಕೊವ್; ಇವನಿಗೆ ಓದು ಬರುತ್ತೆ, ಧೈರ್ಯವಂತ, ಅಲ್ದೆ ಅಧಿಕಾರಿಗಳನ್ನ ಕಂಡರೆ ಅವನಿಗೆ ಆಗೊಲ್ಲ. ಸೆರ್ಗೇಯ್ ಷೋರಿನ್ ಕೂಡಾ ಜಾಣನಾದ ರೈತ. ಕ್ನಿಯಾಜೆವ್ ಪ್ರಾಮಾಣಿಕ, ಹೆದರೋದಿಲ್ಲ. ಶುರುವಿನಲ್ಲಿ ಅಷ್ಟು ಸಾಕು. ಆಕೆ ಬಣ್ಣಿಸಿದಳಲ್ಲ, ಆ ಜನರನ್ನ ಸ್ವಲ್ಪ ನೋಡಿ ಬರೋದು ಅಗತ್ಯ. ಕೊಡಲಿ ಹಿಡ್ಕೊಂಡು ಶಹರಕ್ಕೆ ಹೋಗ್ತೀನಿ – ಸೌದೆ ಒಡೆದು ಮೇಲು ಖರ್ಚಿಗೆ ನಾಲ್ಕುಕಾಸು ಜಾಸ್ತಿ ಸಂಪಾದಿಸೋಕೆ ಹೋದ ಹಾಗೆ. ನಾವು ಹುಷಾರಾಗಿರ್ಬೇಕು. ತನ್ನ ಬೆಲೇನ ತಾನೇ ಕಟ್ಬೇಕೂಂತ ಆಕೆ ಹೇಳಿದ್ದು ಸರಿ. ಈ ದಿವಸ ನೋಡ್ಲಿಲ್ವೆ? – ಆ ರೈತನ ಹಾಗೆ. ದೇವರ ಎದುರು ತಂದು ನಿಲ್ಲಿಸಿದ್ರೂ ಅವನು ಬಾಯಿ ಬಿಚ್ಕೋನಲ್ಲ. ಆದರೆ, ಆ ನಿಕೀತ ವಿಷಯ ನಿನ್ನ ಅಭಿಪ್ರಾಯವೇನು? ಅಂತೂ ಮನಸ್ಸಾಕ್ಷಿ ಇತ್ತು ಅವನಿಗೆ!"

"ನಿಮ್ಮೆದುರಲ್ಲೇ ಒಬ್ಬ ಮನುಷ್ಯನ್ನ ಅವರು ಹೊಡೆದಾಗ ನೀವು ಮಾಡಿದ್ದೇನು? ಬಾಯಿ ತೆರಕೊಂಡು ನಿಂತು ನೋಡಿದ್ದೇ!"

"ಅಷ್ಟೆಲ್ಲಾ ಮನಸ್ಸಿಗೆ ಹಚ್ಕೋಬೇಡ! ಸ್ವತಃ ನಾವೇ ಅವನಿಗೆ ಹೊಡೀಲಿಲ್ಲಾಂತ ನೀನು ಸಮಾಧಾನಪಡ್ಬೇಕು!"

ಆತ ದೀರ್ಘಕಾಲ ಪಿಸುಮಾತನಾಡುತ್ತಲೇ ಇದ್ದ. ಕೆಲವೊಮ್ಮೆ ತೀರ ಇಳಿ ಸ್ವರದಲ್ಲಿ ಮಾತನಾಡಿದಾಗ ತಾಯಿಗೆ ಏನೂ ಕೇಳಿಸುತ್ತಿರಲಿಲ್ಲ. ಮತ್ತೆ ಕೆಲವೊಮ್ಮೆ ಆಳವಾಗಿ ಗಟ್ಟಿಯಾಗಿ ಮಾತನಾಡಿದಾಗ ಅವನ ಹೆಂಡತಿ ತಡೆಯುತ್ತಿದ್ದಳು:

"ಶ್! ಅವಳ್ನ ಎಬ್ಬಿಸ್ಬಿಡ್ತೀಯಾ ನೀನು!"

ಕೊನೆಗೊಮ್ಮೆ ತಾಯಿಗೆ, ಗಾಢವಾದ ನಿದ್ದೆ ಮೋಡದ ಹಾಗೆ ಇಳಿದು ಬಂತು.

....ಬೂದು ಬಣ್ಣದ ಮುಂಜಾನೆ ಕಣ್ಣು ಮುಚ್ಚಿಕೊಂಡೇ ಗುಡಿಸಲಿನ ಕಿಟಕಿಗಳೆಡೆಯಿಂದ ನೋಡುತ್ತಿದ್ದಂತೆ, ಚರ್ಚಿನ ಗಂಟೆ ರಾತ್ರಿಯ ಕಾವಲು ಕಳೆಯಿತೆಂದು ಸದ್ದುಮಾಡಿದಂತೆ, ತತ್ಯಾನ ತಾಯಿಯನ್ನೆಬ್ಬಿಸಿದಳು.

"ಸಮೊವಾರ್‌ನ ಇಟ್ಟಿದೀನಿ. ಮೊದಲು ಒಂದು ಲೋಟ ಚಾ ಕುಡಿ. ಹಾಸಿಗೆಯಿಂದೆದ್ದ ಹಾಗೇ ಈ ಚಳೀಲಿ ಹೊರಟ್ಹೋದ್ರೆ ನಿಮಗೆ ಕಷ್ಟವಾದೀತು."

ಸ್ತೆಪಾನ್ ತನ್ನ ಪೊದೆಯಾದ ಗಡ್ಡವನ್ನು ಬಾಚಿಕೊಳ್ಳುತ್ತಾ, ತಾಯಿಯ ಶಹರದ ವಿಳಾಸವನ್ನು ಕೇಳಿ ತಿಳಿದ. ರಾತ್ರಿಯ ಅವಧಿಯಲ್ಲಿ ರೈತನ ಮುಖ ಸುಧಾರಿಸಿದಂತೆ, ಹೇಗೋ ಈಗ ಹೆಚ್ಚು ಪೂರ್ಣವಾದಂತೆ, ತಾಯಿಗೆ ತೋರಿತು.

ಚಾ ಕುಡಿಯುತ್ತಿದ್ದಂತೆಯೇ ನಕ್ಕು ಸ್ತೆಪಾನ್ ಹೇಳಿದ:

"ಇದೆಲ್ಲಾ ಈ ರೀತಿ ಆಯ್ತು ಅನ್ನೋದು ಎಷ್ಟು ವಿಚಿತ್ರ!"

"ಯಾವುದು?" ಎಂದು ಕೇಳಿದಳು ತತ್ಯಾನ.

"ನಮ್ಮ ಪರಿಚಯವಾಗಿರೋದು. ಇಷ್ಟು ಸರಳವಾಗಿ...."

"ನಮ್ಮ ಕೆಲಸಕ್ಕೆ ಸಂಬಂಧಿಸಿದ ಪ್ರತಿಯೊಂದರಲ್ಲೂ ಆಶ್ಚರ್ಯಕರವಾದ ಸರಳತೆ ಇದೆ," ಎಂದು ತಾಯಿ ಯೋಚನಾಪೂರ್ಣಳಾಗಿ ಹೇಳಿದಳು.

ತಾಯಿಯನ್ನು ಬೀಳ್ಕೊಟ್ಟಾಗ ಆ ದಂಪತಿಗಳಿಗೆ ಸಂಕಟವಾಯಿತು. ಅವರು ಹೆಚ್ಚು ಮಾತನಾಡಲಿಲ್ಲ. ಆದರೆ ಹಲವಾರು ಸಣ್ಣಪುಟ್ಟ ರೀತಿಗಳಲ್ಲಿ ಆಕೆಯ ಸೌಕರ್ಯದ ಬಗೆಗೆ ಅತ್ಯಂತ ಆಸಕ್ತಿಯನ್ನು ತೋರಿದರು.

ಕೋಚ್‌ಗಾಡಿಯಲ್ಲಿ ಕುಳಿತಾದ ಮೇಲೆ, ತಾಯಿ, ಮೊದಲು ಬಲು ಎಚ್ಚರಿಕೆಯಿಂದ ಸ್ವಲ್ಪಸ್ವಲ್ಪವಾಗಿ ಸ್ತೆಪಾನ್ ಕೆಲಸ ಆರಂಭಿಸುವನೆಂದೂ ಆದರೆ ಅವಿರಾಮವಾಗಿ ದುಡಿಯುವನೆಂದೂ ಚಿತ್ರಿಸಿಕೊಂಡಳು.... ತನ್ನ ಹೆಂಡತಿಯ ದೂರುಗಳು ಯಾವಾಗಲೂ ಅವನ ಕಿವಿಯಲ್ಲಿ ಮೊರೆಯುವುವು: ಆಕೆಯ ಹಸುರು ಕಣ್ಣುಗಳಲ್ಲಿ ದಹಿಸುವ ಬೆಂಕಿ ಸದಾಕಾಲವೂ ಉಳಿಯುವುದು; ಬದುಕಿದ್ದಷ್ಟು ಕಾಲವೂ ತನ್ನ ಅಳಿದ ಮಕ್ಕಳಿಗಾಗಿ 'ಪ್ರತೀಕಾರದ ತೋಳನಂತಹ ಹಂಬಲದಿಂದ ಆಕೆ ಮುಕ್ತಳಾಗಲಾರಳು – ಎಂದೂ ತಾಯಿ ಯೋಚಿಸಿದಳು.

ತಾಯಿಗೆ ರೀಬಿನ್ನನ ನೆನಪಾಯಿತು. ಆತನ ರಕ್ತ, ಮುಖ, ಉರಿಯುತ್ತಿದ್ದ

ಕಣ್ಣುಗಳು ಮತ್ತು ಮಾತುಗಳ ನೆನಪಾಯಿತು. ಅಮಾನುಷ ಕ್ರೌರ್ಯಕ್ಕಿದಿರಾಗಿ ತನ್ನ ಅಸಹಾಯತೆಯ ಕಹಿಭಾವನೆಯಿಂದ ತಾಯಿಯ ಹೃದಯ ಮುದುಡಿಕೊಂಡಿತು. ಶಹರಕ್ಕೆ ಹಿಂತಿರುಗುತ್ತ, ಹಾದಿಯುದ್ದಕ್ಕೂ, ಓನದ ಹಿನ್ನೆಲೆಯಲ್ಲಿ ರೀಬಿನ್ನನ ಪ್ರತಿ ಬಿಂಬವನ್ನು ತಾಯಿ ಕಂಡಳು. ಗಾಯಗೊಂಡ ತಲೆಯ, ಕೈಗಳನ್ನು ಹಿಂದಕ್ಕೆ ಕಟ್ಟಿದ, ಬಲಿಷ್ಠನಾದ, ಹರಿದ ಅಂಗಿ ತೊಟ್ಟ, ಕರಿಯ ಗಡ್ಡದ ಆಕೃತಿಯನ್ನು, ಕ್ರೋಧದಿಂದಲೂ ತಾನು ಸಮರ್ಥಿಸುತ್ತಿದ್ದ ಸತ್ಯದ ಬಗೆಗೆ ಶ್ರದ್ಧೆಯಿಂದಲೂ ತುಂಬಿದ್ದ ಮನುಷ್ಯನನ್ನು, ತಾಯಿ ಕಂಡಳು. ಅತಿ ದೈನ್ಯದಿಂದ ಭೂಮಿಗೆ ಅಂಟಿಕೊಂಡ ಅಸಂಖ್ಯ ಹಳ್ಳಿಗಳು, ನ್ಯಾಯದ ಆಗಮನವನ್ನು ಗುಪ್ತವಾಗಿ ಇದಿರುನೋಡುತ್ತಿದ್ದ ಜನರು, ಪ್ರತಿಭಟ ನೆಯಿಲ್ಲದೆ ಒಳ್ಳಿತಿನ ಯಾವ ಆಸೆಯೂ ಇಲ್ಲದೆ ಜೀವಮಾನವನ್ನೆಲ್ಲಾ ಅರ್ಥಹೀನ ದುಡಿಮೆಯಲ್ಲಿ ಕಳೆಯುವ ಸಹಸ್ರಾರು ಜನರು – ಇವರೆಲ್ಲರನ್ನೂ ಕುರಿತು ತಾಯಿ ಯೋಚಿಸಿದಳು.

ಬದುಕನ್ನು ಆಕೆ, ಮೌನವಾಗಿ ಆದರೂ ಆತುರವಾಗಿ ಉಳುವವನಿಗೋಸ್ಕರ ಕಾದಿದ್ದ ತಗ್ಗುದಿಣ್ಣೆಗಳ ಬಂಜರು ಭೂಮಿಯಾಗಿ ಚಿತ್ರಿಸಿಕೊಂಡಳು....

"ಸತ್ಯದ ನ್ಯಾಯದ ಬೀಜಗಳನ್ನು ನನ್ನಲ್ಲಿ ಬಿತ್ತಿ. ನಿಮ್ಮ ಶ್ರಮಕ್ಕೆ ನೂರು ಪಾಲಷ್ಟು ಉತ್ಪನ್ನ ನಾನು ಕೊಡುವೆ!" ಎಂದು, ಸ್ವತಂತ್ರರಾದ ಪ್ರಾಮಾಣಿಕರಾದ ಜನರೊಡನೆ ಆ ಹೊಲ ಹೇಳುವಂತಿತ್ತು.

ತನ್ನ ಯತ್ನಗಳಿಗೆ ದೊರೆತ ಯಶಸ್ಸನ್ನು ಸ್ಮರಿಸಿಕೊಳ್ಳುತ್ತ, ತಾಯಿಯ ಹೃದಯ ಶಾಂತವಾದ ಸಂತೋಷದ ಅಲೆಗಳಿಂದ ತುಂಬಿತು. ಆ ಸಂತೋಷವನ್ನಾಕೆ ಲಜ್ಜೆ ಯಿಂದ ಹತ್ತಿಕ್ಕಿದಳು.

## ೧೯

ನಿಕೊಲಾಯ್ ಆಕೆಗಾಗಿ ಬಾಗಿಲು ತೆರೆದ. ಅವನ ತಲೆಗೂದಲು ಉಡುಗೆಯೆಲ್ಲ ಅಸ್ತವ್ಯಸ್ತವಾಗಿದ್ದುವು. ಕೈಯಲ್ಲೊಂದು ಪುಸ್ತಕವಿತ್ತು.

ಆತ ಸಂತೋಷದಿಂದ ಹೇಳಿದ:

"ಇಷ್ಟು ಬೇಗನೆ ವಾಪಸು ಬಂದಿರಾ? ಬಲು ಚುರುಕು ನೀವು!"

ಆತನ ಕನ್ನಡಕದ ಹಿಂದೆ ಮೃದುವಾದ ಕಣ್ಣುಗಳು ಪಿಳಿಪಿಳಿ ಬಿಡುತ್ತಿದ್ದುವು. ತಾಯಿಯನ್ನು ಕೈಹಿಡಿದು ಒಳಕ್ಕೆ ಕರೆತಂದು ಪ್ರೀತಿಯ ಮುಗುಳ್ನಗೆಯೊಡನೆ ಆಕೆಯ ಮುಖವನ್ನು ನಿಕೊಲಾಯ್ ನೋಡಿದ.

"ಹೋದ ರಾತ್ರೆ ನಮ್ಮ ಮನೇನ ಶೋಧೆ ಮಾಡಿದ್ರು. ನಿಮಗೇನಾದರೂ ಆಗಿರ್ಬೇಕೂಂತ ನನಗೆ ಭಯವಾಯ್ತು. ಆದರೆ ಅವರು ನನ್ನನ್ನ ದಸ್ತಗಿರಿ ಮಾಡ್ಲಿಲ್ಲ. ನಿಮ್ಮನ್ನ ದಸ್ತಗಿರಿ ಮಾಡಿದ್ರೆ, ನನ್ನನ್ನೂ ಕರಕೊಂಡು ಹೋಗ್ತಿದ್ರು."

ಒಂದೇ ಸಮನೆ ಮಾತನಾಡುತ್ತಲೇ ತಾಯಿಯನ್ನು ಆತ ಅಡುಗೆಮನೆಯೊಳಕ್ಕೆ ಕರೆದೊಯ್ದ.

"ನನ್ನ ಕೆಲಸ ಹೋಗುವುದೇನೋ ಖಂಡಿತ. ಆದರೆ ಅದರಿಂದ ನನಗೇನೂ ಬೇಸರವಿಲ್ಲ. ಮೇಜಿನ ಹತ್ತಿರ ಕೂತು, ಕುದುರೆಗಳಿಲ್ಲದ ರೈತರ ಅಂಕೆಸಂಖ್ಯೆ ಬರೆದು ನನಗೆ ಸಾಕಾಗಿದೆ."

ಯಾವುದೋ ಪಿಶಾಚಿ ಬೇಕು ಬೇಕೆಂದೇ ಮನೆಯ ಗೋಡೆಗಳನ್ನು ಅಲುಗಿಸಿ ಪ್ರತಿಯೊಂದನ್ನೂ ತಲೆಕೆಳಗು ಮಾಡಿದ ಹಾಗಿತ್ತು ಕೊಠಡಿ. ಚಿತ್ರಗಳೆಲ್ಲ ನೆಲದ ಮೇಲೆ ಬಿದ್ದಿದ್ದುವು. ಗೋಡೆಗೆ ಅಂಟಿಸಿದ್ದ ಕಾಗದವನ್ನು ಕೆಲವೆಡೆ ಹರಿದಿದ್ದರು. ಒಂದೆಡೆ ನೆಲದ ಹಲಗೆಯನ್ನು ಎತ್ತಿದ್ದರು. ಕಿಟಕಿಯ ದಂಡೆ ಮುರಿದಿತ್ತು. ಒಲೆಯ ಬೂದಿಯೆಲ್ಲಾ ನೆಲದ ಮೇಲೆ ಚೆಲ್ಲಿತ್ತು. ತನಗೆ ಪರಿಚಯವಿದ್ದ ಈ ಅವ್ಯವಸ್ಥೆಯನ್ನು ಕಂಡು ತಾಯಿ ತಲೆಯಲುಗಿಸಿ, ನಿಕೊಲಾಯ್‌ನ ಮುಖವನ್ನೇ ದಿಟ್ಟಿಸಿ ನೋಡಿದಳು. ಆತನ ಮುಖದ ಮೇಲೆ ಹೊಸ ಕಳೆಯೊಂದು ಇದ್ದುದರ ಅರಿವು ತಾಯಿಗುಂಟಾಯಿತು.

ತಣಿದು ಹೋಗಿದ್ದ ಸಮೊವಾರ್ ಇತರ ತೊಳೆಯದ ಪಾತ್ರೆಗಳೊಡನೆ ಮೇಜಿನ ಮೇಲೆ ಬಿದ್ದಿತ್ತು. ಗಿಣ್ಣು ಮತ್ತು ಸಾಸೆಜ್, ತಟ್ಟೆಗಳ ಮೇಲೆ ಇರುವುದರ ಬದಲು ಕೊಂಡುಕೊಂಡ ಕಾಗದದ ಮೇಲೆಯೇ ಇದ್ದುವು. ಮೇಜಿನ ಮೇಲೆ ಪುಸ್ತಕಗಳೂ ಬ್ರೆಡ್‌ನ ತುಣುಕುಗಳೂ ಸಮೊವಾರ್‌ನ ಇದ್ದಿಲೂ ಬಿದ್ದಿದ್ದುವು. ತಾಯಿ ಸಣ್ಣನೆ ನಕ್ಕಳು. ನಿಕೊಲಾಯ್ ತಪ್ಪಿತಸ್ಥನ ಹಾಗೆ ಮುಗುಳ್ನಕ್ಕ.

"ಸಾರ್ವತ್ರಿಕ ಅರಾಜಕತೆಗೆ ನನ್ನನ್ನೂ ಸೇರಿಸಿದ್ದೀನಿ, ನೀಲೊವ್ನ. ಪರವಾಗಿಲ್ಲ ಬಿಡಿ ಅವರು ಇನ್ನೊಮ್ಮೆ ಬಂದೇ ಬರ್‍ತಾರೇಂತ ನಾನು ಯಾವುದನ್ನೂ ಸರಿಯಾಗಿ ಇಡ್ಲಿಲ್ಲ.... ಸರಿ.... ನಿಮ್ಮ ಪ್ರವಾಸದ ವಿಷಯ ಹೇಳಿ."

ಆ ಪ್ರಶ್ನೆಯ ಭಾರದಿಂದ ತಾಯಿಯ ಹೃದಯ ಕುಗ್ಗಿಹೋಯಿತು. ಮತ್ತೊಮ್ಮೆ ರೀಬಿನ್ನನ ಮೂರ್ತಿ ಆಕೆಯ ಮುಂದೆ ಎದ್ದಿತು. ಬಂದ ತಕ್ಷಣವೇ ಆತನ ವಿಷಯ ಮಾತನಾಡದೆ ತಾನು ತಪ್ಪುಮಾಡಿದೆನೆಂದು ತೋರಿತು ತಾಯಿಗೆ. ತಾಯಿ ನಿಕೊಲಾಯ್ ನತ್ತ ಬಾಗಿ, ತಾಳ್ಮೆ ಕೆಡಿಸಿಕೊಳ್ಳದೆ ಯಾವುದನ್ನೂ ಮರೆಯದೆ ಎಲ್ಲವನ್ನೂ ಹೇಳತೊಡಗಿದಳು.

"ಅವರು ಅವನನ್ನ ದಸ್ತಗಿರಿ ಮಾಡಿದ್ರು...."

ನಿಕೊಲಾಯ್‌ನ ಮುಖ ವಿವರ್ಣವಾಯಿತು.

"ನಿಜವಾಗಿಯೂ?"

ತಾಯಿ ಸನ್ನೆಮಾಡಿ ಆತನನ್ನು ತಡೆದಳು. ಮನುಷ್ಯ ಜೀವಿಗೆ ತನ್ನ ಕಣ್ಣೆದುರು ಕೊಡಲಾದ ಚಿತ್ರಹಿಂಸೆಯನ್ನು ಕುರಿತು ನ್ಯಾಯಾಧೀಶರೆದುರಲ್ಲಿ ನಿಂತು ದೂರುಕೊಡುತ್ತಿರುವಳೇನೋ ಎನ್ನುವ ಹಾಗೆ, ತಾಯಿ ಮಾತನಾಡಿದಳು. ನಿಕೊ

ಲಾಯ್ ತನ್ನ ಕುರ್ಚಿಯಲ್ಲಿ ಹಿಂದಕ್ಕೆ ಒರಗಿಕೊಂಡು, ನಿಸ್ತೇಜ ಮುಖದಿಂದ, ತುಟಿಗಳನ್ನು ಕಚ್ಚುತ್ತಾ, ತಾಯಿ ಹೇಳುತ್ತಿದ್ದುದನ್ನು ಕೇಳಿದ. ಮೆಲ್ಲನೆ ಆತ ಕನ್ನಡಕವನ್ನು ತೆಗೆದು ಮೇಜಿನ ಮೇಲಿರಿಸಿದ. ಕಣ್ಣಿಗೆ ಕಾಣಿಸದ ಜೇಡರ ಬಲೆಯನ್ನು ತೊಡೆಯುವ ಹಾಗೆ ಮುಖದ ಮೇಲೆ ಕೈಯಾಡಿಸಿದ.

ಆತನ ಮುಖ ಒಮ್ಮೆಲೆ ತೀಕ್ಷ್ಣವಾಯಿತು. ಕೆನ್ನೆಯ ಎಲುಬುಗಳು ವಿಚಿತ್ರವಾದ ರೀತಿಯಲ್ಲಿ ಎದ್ದು ಕಾಣಿಸಿದುವು. ಮೂಗಿನ ಹೊಳ್ಳೆಗಳು ಅದುರಿದುವು. ತಾಯಿ ಆ ರೀತಿ ಎಂದೂ ಆತನನ್ನು ಕಂಡಿರಲಿಲ್ಲ; ಅವಳಿಗೆ ಭಯವಾಯಿತು.

ಆಕೆ ಮುಗಿಸಿದ ಮೇಲೆ ಆತ, ತನ್ನ ಮುಷ್ಟಿಗಳನ್ನು ಜೇಬುಗಳೊಳಕ್ಕೆ ಆಳವಾಗಿ ಇಳಿ ಬಿಟ್ಟು ಅತ್ತಿತ್ತ ನಡೆದ.

ಬಿಗಿದ ಹಲ್ಲುಗಳೆಡೆಯಿಂದ ಆತ ಗೊಣಗಿದ:

"ಅವನು ದಿವ್ಯ ವ್ಯಕ್ತಿಯಾಗಿರ್ಬೇಕು. ಜೈಲಿನಲ್ಲಿ ಅವನಿಗೆ ತುಂಬ ಕಷ್ಟವಾಗ್ತದೆ. ಅಂಥವರಿಗೆ ಗೋಡೆಯೊಳಗಿನ ಜೀವನ ಸಹನೆಯಾಗೋದಿಲ್ಲ."

ಮನಸ್ಸಿನ ಕ್ಷೋಭೆಯನ್ನು ಅದುಮಿ ಹಿಡಿಯಲೆಂದು ಆತ ಮುಷ್ಟಿಗಳನ್ನು ಹಿಸುಕುತ್ತಿದ್ದ. ಆದರೆ ತಾಯಿಗೆ ಆತನ ಮನೋಸ್ಥಿತಿಯು ಅರಿವಾಯಿತು. ಆಕೆಗೂ ಅದು ತಗಲಿಕೊಂಡಿತು. ಕತ್ತಿಯ ಅಲಗುಗಳ ಹಾಗೆ ಸೂಕ್ಷ್ಮವಾಗುವವರೆಗೂ ಕಣ್ಣುಗಳನ್ನು ಆತ ಕಿರಿದುಗೊಳಿಸಿದ. ಶತಪಥ ತುಳಿಯುತ್ತ, ಕಹಿಯಾದ ಕ್ರೋಧದಿಂದ ಮತ್ತೊಮ್ಮೆ ಆತ ಮಾತನಾಡಿದ:

"ಎಷ್ಟೊಂದು ಭಯಾನಕ! ಜನರ ಮೇಲಿನ ಹಿಡಿತವನ್ನ ಉಳಿಸಿಕೊಳ್ಳೋ ಹುಚ್ಚಿನಲ್ಲಿ ಕೆಲವು ಜನ ಮೂರ್ಖರು, ಬೇರೆಯವರನ್ನೆಲ್ಲಾ ಹಿಸುಕ್ತಾ ಹೊಡೀತಾ ತುಳೀತಾ ಹೋಗ್ತಾರೆ! ಅಮಾನುಷತೆ ಜಾಸ್ತಿಯಾಗ್ತಿದೆ; ಕ್ರೌರ್ಯ ಬದುಕಿನ ನಿಯಮವಾಗ್ತಿದೆ. ಯೋಚಿಸಿ ನೋಡಿ. ಕೆಲವರು, ಜನರನ್ನ ಹೊಡೆದು ಮೃಗಗಳ ಹಾಗೆ ವರ್ತಿಸ್ತಾರೆ; ಯಾಕೆಂದರೆ ಕಾನೂನು ತಮಗೇನೂ ಮಾಡೋದಿಲ್ಲಾಂತ ಅವರಿಗೆ ಗೊತ್ತಿದೆ. ಬೇರೆಯವರಿಗೆ ಚಿತ್ರಹಿಂಸೆ ಕೊಡ್ಬೇಕು ಅನ್ನೋ ಬಯಕೆಯಿಂದ ಅವರು ಅಸ್ವಸ್ಥರಾಗ್ತಾರೆ. ಇದು ಗುಲಾಮರಿಗೆ ಅಂಟಿಕೊಂಡಿರೋ ಅಸಹ್ಯ ರೋಗ. ತಮ್ಮ ಗುಲಾಮ ಭಾವನೆ ಮೃಗೀಯ ಅಭ್ಯಾಸಗಳನ್ನ ಹರಿಬಿಡೋಕೆ ಅವಕಾಶ ದೊರೆತಾಗ ಅವರು ಮಾಡೋದೇ ಹೀಗೆ. ಇತರರು ಪ್ರತೀಕಾರದ ಬಯಕೆಯಿಂದ ಕಲುಷಿತರಾಗಿದ್ದಾರೆ. ಇನ್ನೂ ಇತರರು, ತಮಗೆ ದೊರೆಯೋ ಹೊಡೆತ ಸಹಿಸಿ ಸಹಿಸಿ ಕಿವುಡರಾಗಿದ್ದಾರೆ, ಮೂಕರಾಗಿದ್ದಾರೆ. ಜನರು, ಎಲ್ಲಾ ಜನರು, ಕೆಟ್ಟುಹೋಗ್ತಿದ್ದಾರೆ!"

ಆತ ಹಲ್ಲುಗಳನ್ನು ಕಡಿಯುತ್ತ, ಮಾತು ನಿಲ್ಲಿಸಿ ಮೌನವಾದ.

"ಈ ಮೃಗಜೀವನದಲ್ಲಿ ನಾವು, ಅಪೇಕ್ಷೆ ಪಡದೇ ಇದ್ರೂ ಮೃಗಗಳಾಗ್ತೇವೆ."

....ಆದರೆ ನಿಕೊಲಾಯ್ ಬೇಗನೆ ತನ್ನ ಕ್ಷೋಭೆಯನ್ನು ಹತೋಟಿಗೆ ತಂದು

ಕೊಂಡ. ಆತ ಅಳುತ್ತಲಿದ್ದ ತಾಯಿಯತ್ತ ತಿರುಗಿದ. ಶಾಂತವಾಗಿಯೇ ಇದ್ದ ಆ ನೋಟದಲ್ಲಿ ಏಕಪ್ರಕಾರವಾದ ಬೆಳಕಿತ್ತು.

"ನಾವು ಕಾಲಪ್ಯಯುಮಾಡಬಾರದು, ಸಂಗಾತಿ! ಪರಿಸ್ಥಿತಿ ಏನೂಂತ ನೋಡಿ ಮುಂದಿನ ಏರ್ಪಾಟು ಮಾಡೋಣ, ನೀಲೊವ್ನ...."

ದುಃಖಪೂರ್ಣವಾದ ಮುಗುಳ್ನಗೆಯೊಡನೆ ತಾಯಿಯತ್ತ ಸಾಗಿ ಆಕೆಯ ಕೈ ಹಿಸುಕಿ ಆತ ಕೇಳಿದ:

"ನಿಮ್ಮ ಪೆಟ್ಟಿಗೆ ಎಲ್ಲಿದೆ?"

"ಅಡುಗೆಮನೇಲಿ."

"ಹೊರಬಾಗಿಲಿನ ಹತ್ತಿರ ಗೂಢಚಾರರಿದ್ದಾರೆ. ಅವರ ಕಣ್ಣಿಗೆ ಬೀಳದೆ ಅಷ್ಟೊಂದು ಸಾಮಗ್ರಿ ಸಾಗಿಸೋಕೆ ಆಗೋದಿಲ್ಲ. ಬಚ್ಚಿಡೋಕೆ ಜಾಗವೂ ಇಲ್ಲ. ಈ ರಾತ್ರೆ ಇನ್ನೊಂದು ಶೋಧೆಗೆ ಅವರು ಬಂದೇ ಬರ್ತಾರೇಂತ ನನ್ನ ಅಭಿಪ್ರಾಯ. ಆದ್ದರಿಂದ, ಅದೆಷ್ಟು ವಿಷಾದಕರವಾದ್ರೂ, ಅದನ್ನೆಲ್ಲಾ ನಾವು ಸುಟ್ಟು ಹಾಕ್ಬೇಕು."

"ಯಾವುದನ್ನೆಲ್ಲ?"

"ಪೆಟ್ಟಿಗೇಲಿರೋದನ್ನೆಲ್ಲಾ."

ತಾಯಿಗೆ ಅರ್ಥವಾಯಿತು. ಆ ದುಃಖದ ಸನ್ನಿವೇಶದಲ್ಲೂ ತನ್ನ ಸಾಧನೆಯನ್ನು ಕುರಿತಾದ ಹೆಮ್ಮೆಯ ಮುಗುಳ್ನಗೆಯನ್ನು ತಡೆಹಿಡಿಯಲು ಅವಳು ಸಮರ್ಥಳಾಗಲಿಲ್ಲ.

"ಅದರಲ್ಲೇನೂ ಇಲ್ಲ–ಪತ್ರಿಕೆಯ ಒಂದು ಹಾಳೆಯೂ ಇಲ್ಲ!" ಎಂದಳು ತಾಯಿ. ತನಗೆ ಸ್ತೆಪಾನ್ ಚುಮಕೋವ್‌ನ ಪರಿಚಯವಾದುದನ್ನು ತಿಳಿಸುತ್ತ, ಮೆಲ್ಲಮೆಲ್ಲನೆ ತಾಯಿ ಚೇತರಿಸಿಕೊಂಡಳು.

ಮೊದಮೊದಲು ನಿಕೊಲಾಯ್ ಕಾತರಗೊಂಡು ಹುಬ್ಬುಗಂಟಿಕ್ಕಿದ. ಬೇಗನೆ ಮುಖದ ಮೇಲೆ ಆಶ್ಚರ್ಯದ ಭಾವನೆ ಮೂಡಿತು. ಕೊನೆಗೆ, ನಡುವೆ ಬಾಯಿಹಾಕಿ, ಉದ್ವೇಗಗೊಂಡ ಸ್ವರದಲ್ಲಿ ಹೇಳಿದ:

"ಭೇಷ್! ಎಷ್ಟೊಂದು ಸೊಗಸು! ನೀವು ಅಸಾಮಾನ್ಯ ಭಾಗ್ಯಶಾಲಿ!"

ಆಕೆಯ ಕೈಗಳನ್ನು ಬಿಗಿಹಿಡಿಯುತ್ತ ನಿಕೊಲಾಯ್ ಮೆಲ್ಲನೆ ಉದ್ಗರಿಸಿದ:

"ಜನರಲ್ಲಿ ನಿಮಗೆ ಎಷ್ಟೊಂದು ಅಪಾರ ನಂಬುಗೆ.... ನಿಮ್ಮನ್ನ ನನ್ನ ಸ್ವಂತದ ತಾಯಿಯ ಹಾಗೆಯೇ ನಾನು ಪ್ರೀತಿಸ್ತೀನಮ್ಮ!"

ಆತ ಯಾವ ಕಾರಣಕ್ಕಾಗಿ ಅಷ್ಟು ಉತ್ಸಾಹಿಯಾದ ಉದ್ವಿಗ್ನನಾದ ಎಂಬು ದನ್ನು ತಿಳಿಯದೆ ಆಶ್ಚರ್ಯಪಡುತ್ತ, ಆತನನ್ನೆ ಕುತೂಹಲದಿಂದ ನೋಡುತ್ತ ತಾಯಿ ಮುಗುಳ್ನಕ್ಕಳು.

ತನ್ನ ಕೈಗಳನ್ನು ತೀಡಿಕೊಂಡು ಮೃದುವಾಗಿ ನಗುತ್ತ ಆತನೆಂದ:

"ಎಲ್ಲಾ ಒಳ್ಳೇದೇ ಆಯ್ತು. ಈ ಕೆಲದಿನಗಳಲ್ಲಿ ನಾನೂ ಸುಖಿಯಾಗಿದ್ದೀನಿ. ಎಲ್ಲಾ ಹೊತ್ತೂ ಕೆಲಸಗಾರರ ಜತೇಲಿದ್ದು, ಅವರಿಗೆ ಓದಿ ಹೇಳ್ತಾ ಅವರೊಡನೆ

ಮಾತಾಡ್ತಾ, ಅವರನ್ನ ನಿರೀಕ್ಷಿಸ್ತಾ, ಇಷ್ಟು ದಿನ ಇದ್ದೆ. ನನ್ನ ಹೃದಯ, ಅತ್ಯಾಶ್ಚರ್ಯ ಕರವಾದ ಯಾವುದೋ – ಸಮಗ್ರವಾದ ಯಾವುದೋ – ಒಂದರಿಂದ ತುಂಬಿಕೊಂಡಿದೆ. ಅವರು ಅಷ್ಟೊಂದು ಭವ್ಯ ಜನರು, ನೀಲೊವ್ನ ! ನಾನು ಹೇಳ್ತಿರೋದು, ಬಲಿಷ್ಠರಾದ ಸೂಕ್ಷ್ಮಸ್ಪರ್ಶಿಗಳಾದ ಜ್ಞಾನಕ್ಕಾಗಿ ಹಸಿದಿರುವ ಯುವ ಕೆಲಸಗಾರರ ವಿಷಯ. ಅವರನ್ನು ನೋಡ್ತಾ ಇದ್ರೆ, ಮುಂದೆ ಒಂದು ದಿವಸ ರಷ್ಯಾ ಪ್ರಪಂಚದಲ್ಲೇ ಅತ್ಯಂತ ಪ್ರಜಾಪ್ರಭುತ್ವವಾದಿಯಾದ ರಾಷ್ಟ್ರವಾಗ್ತದೆ ಎಂಬ ಯೋಚನೆ ಬರುತ್ತೆ !"

ಆ ಮಾತು ಸತ್ಯವೆಂಬಂತೆ, ತಾನಾಡಿದ್ದು ಪ್ರತಿಜ್ಞೆ ಎಂಬಂತೆ, ಆತ ಕೈಯೆತ್ತಿ, ಕ್ಷಣಕಾಲ ತಡೆದು, ಮುಂದುವರಿಸಿದ.

"ಬೂಜುಹಿಡಿದ ಹಳೇ ಪುಸ್ತಕಗಳ ಅಂಕೆಸಂಖ್ಯೆಗಳ ಮಧ್ಯದಲ್ಲಿ ಕೂತು ನನ್ನ ಮನಸ್ಸು ಕೆಟ್ಟುಹೋಗಿದೆ. ಇಡೀ ಒಂದು ವರ್ಷ ಅಂಥ ಬಾಳ್ವೆ – ಅಮಾನುಷ ! ನನಗೆ ಕೆಲಸಗಾರರ ಜತೇಲೆ ಇದ್ದು ಅಭ್ಯಾಸ. ಅವರಿಂದ ದೂರ ಹೋದಾಗ, ಅಸ್ವಾಸ್ಥ್ಯವಾಗಿ ಖಿನ್ನನಾಗಿ, ನೀರಿನಿಂದ ಹೊರಗೆ ತೆಗೆದ ಮೀನಿನ ಹಾಗಿರ್‍ತೀನಿ.... ಈಗ ಮತ್ತೊಮ್ಮೆ ನಾನು ಸ್ವತಂತ್ರ ಮನುಷ್ಯನಾಗ್ತೀನಿ. ನಾನು ಕೆಲಸಗಾರರ್‍ನ ಸದಾ ಕಾಲವೂ ನೋಡ್ತಾ ಅವರ ಜತೇಲೆ ಕೆಲಸಮಾಡ್ತೀನಿ. ನಿಮಗೆ ಅರ್ಥವಾಯ್ತೆ? ಯೌವನದ ಕ್ರಿಯಾಶೀಲ ಶಕ್ತಿಯ ಸಾಮೀಪ್ಯದಲ್ಲಿ, ಹೊಸ ವಿಚಾರಗಳ ತೊಟ್ಟಿಲ ಹತ್ತಿರ ನಾನಿರ್‍ತೀನಿ. ಅದು ಸೋಜಿಗವೆನಿಸುವಷ್ಟು ಸರಳ, ಸುಂದರ, ಮಹಾ ಶಕ್ತಿ ಪ್ರಚೋದಕ. ಅದು ಒಬ್ಬನನ್ನ ಯುವಕನಾಗಿ ಬಲಿಷ್ಠನಾಗಿ ಮಾಡ್ತದೆ. ಅದು, ಬದುಕುವ ಶ್ರೀಮಂತ ವಿಧಾನ."

ಆತ ಸಂತೋಷದಿಂದಲೂ ಸ್ವಲ್ಪ ಸಂಕೋಚದಿಂದಲೂ ನಕ್ಕ. ತಾಯಿ ಆತನ ಆನಂದವನ್ನು ಅರ್ಥಮಾಡಿಕೊಂಡು ತಾನೂ ಅದರಲ್ಲಿ ಪಾಲುಗೊಂಡಳು.

ನಿಕೊಲಾಯ್ ಉದ್ಗರಿಸಿದ:

"ಅಲ್ಲದೆ, ನೀವು ಬಹಳ ಒಳ್ಳೆಯ ವ್ಯಕ್ತಿ ! ಜನರನ್ನ ಎಷ್ಟು ವಿವರವಾಗಿ ನೀವು ಬಣ್ಣಿಸ್ತೀರಿ; ಅವರನ್ನ ಎಷ್ಟು ಚೆನ್ನಾಗಿ ತಿಳಕೋತೀರಿ !"

ಆತ ತಾಯಿಯ ಪಕ್ಕದಲ್ಲಿ ಕುಳಿತ. ಮೊದಲು ತನ್ನ ಮುಖವನ್ನು ಬದಿಗೆ ತಿರುಗಿಸಿ ತನ್ನ ಸಂಕೋಚವನ್ನು ಮರೆಸಲೆಂದು ತಲೆಗೂದಲನ್ನು ಹಿಂದಕ್ಕೆ ಸರಿಸಿದ. ಆದರೆ, ತನ್ನ ಅನುಭವಗಳನ್ನು ಸರಳ ಸ್ಪಷ್ಟ ಮಾತುಗಳಲ್ಲಿ ತಾಯಿ ಹೇಳತೊಡಗಿ ದಂತೆ, ಆತ ಬೇಗನೆ ಆಕೆಯ ಮುಖದತ್ತ ತಿರುಗಿದ.

ತಾಯಿ ಮಾತು ನಿಲ್ಲಿಸುತ್ತಲೇ ಉತ್ಸಾಹದಿಂದ ಅವನೆಂದ:

"ಎಂಥ ಅದೃಷ್ಟಲಾಭ ! ನೀವು ಜೈಲಿಗೆ ಹೋಗೋ ಸಂಭವವೇ ಜಾಸ್ತಿ ಯಾಗಿತ್ತು. ಆದರೆ ಅದರ ಬದಲು.... ಹೌದು, ರೈತರು ಎಚ್ಚರವಾಗ್ತಿದಾರೆ ಅನ್ನೋದು ಸ್ಪಷ್ಟವಾಗಿದೆ.... ಅದು ಸ್ವಾಭಾವಿಕವೇ. ಆ ಹೆಂಗಸು – ಆಕೆ ಅತ್ಯಂತ ಸ್ಪಷ್ಟವಾಗಿ ನನ್ನ ಕಣ್ಣಿಗೆ ಕಟ್ಟಿದ ಹಾಗಿದ್ದಾಳೆ. ಗ್ರಾಮಗಳಲ್ಲಿ ಕೆಲಸ ಮಾಡೋಕೆ ಪರಿಣತರಾದವರ

ಅಗತ್ಯವಿದೆ. ಕಾರ್ಯಕರ್ತರು! ನಮ್ಮಲ್ಲಿ ಸಾಕಷ್ಟು ಜನರೇ ಇಲ್ಲ! ನೂರುಗಟ್ಟಲೆ ಜನ ನಮಗೆ ಬೇಕು!"

"ಪಾವೆಲ್, ಅಂದ್ರೇಯ್ ಸ್ವತಂತ್ರನಾಗಿದ್ದರೆ...." ಎಂದು ತಾಯಿ ಮೆಲ್ಲನೆ ಹೇಳಿದಳು.

ಆತ ತಾಯಿಯತ್ತ ನೋಡಿ ದೃಷ್ಟಿಯನ್ನು ತಗ್ಗಿಸಿದ.

"ನಾನು ಹೀಗೆ ಹೇಳೋದು ಕೇಳಿ ನಿಮಗೆ ವ್ಯಥೆಯಾಗ್ಬಹುದು, ನೀಲೊವ್ನ. ಆದರೆ ಪಾವೆಲ್‌ನ ನಾನು ಚೆನ್ನಾಗಿ ಬಲ್ಲೆ. ಆತ ಜೈಲಿನಿಂದ ಖಂಡಿತ ತಪ್ಪಿಸ್ಕೊಳ್ಳೋದಿಲ್ಲ. ವಿಚಾರಣೆಯಾಗಬೇಕು; ಪೂರ್ಣ ಭವ್ಯತೆಯವರೆಗೆ ಎದ್ದು ನಿಲ್ಲೋದಕ್ಕೆ ಅವನಿಗೊಂದು ಅವಕಾಶ ಬೇಕಾಗಿದೆ. ಇಂಥ ಅವಕಾಶವನ್ನ ಅವನು ಖಂಡಿತ ಬಿಟ್ಟುಕೊಡೋದಿಲ್ಲ. ಯಾಕೆ ಬಿಟ್ಟುಕೊಡ್ಬೇಕು? ಶಿಕ್ಷೆಯಾದ್ಮೇಲೆ. ಸೈಬೀರಿಯದಿಂದ ತಪ್ಪಿಸ್ಕೊಳ್ತಾನೆ, ಅಷ್ಟೆ."

ತಾಯಿ ನಿಟ್ಟುಸಿರು ಬಿಟ್ಟು, ನಿಧಾನವಾಗಿ ಉತ್ತರಿಸಿದಳು:

"ಸರಿ. ಯಾವುದು ಯೋಗ್ಯ ಅಂತ ಅವನಿಗೆ ತಿಳಿದಿದೆ...."

ಕನ್ನಡಕದೆಡೆಯಿಂದ ತಾಯಿಯನ್ನು ನೋಡುತ್ತ ಮರುಕ್ಷಣವೆ ನಿಕೊಲಾಯ್ ಹೇಳಿದ:

"ಹುಂ.... ಆ ರೈತ ಬೇಗ್ನೆ ಒಮ್ಮೆ ನಮ್ಮನ್ನ ನೋಡೋಕೆ ಬರ್ಲಪ್ಪ. ರೀಬಿನ್ ವಿಷಯವಾಗಿ ರೈತರಿಗೋಸ್ಕರ ಒಂದು ಕರಪತ್ರ ಬರೆಯೋದು ಅಗತ್ಯ. ಅವನೇ ಇಷ್ಟು ಬಹಿರಂಗವಾಗಿ ಮಾತನಾಡಿದ್ದಾನೆ. ಅಂದ್ಮೇಲೆ, ಕರಪತ್ರದಿಂದ ಅವನಿಗೇನೂ ಧಕ್ಕೆಯಾಗೋದಿಲ್ಲ. ಇವತ್ತೇ ಅದನ್ನ ಬರೀತೀನಿ. ಲುದ್ಮಿಲ ಕಣ್ಣು ಮುಚ್ಚೋದರೊಳಗೆ ಅಚ್ಚು ಹಾಕ್ತಾಳೆ.... ಆದರೆ ಆ ಕರಪತ್ರಗಳು ಅವರಿಗೆ ತಲಪೋ ಬಗೆ ಹೇಗೆ?"

"ನಾನು ತಗೊಂಡು ಹೋಗ್ತೀನಿ."

ನಿಕೊಲಾಯ್ ತಕ್ಷಣವೆ ಅಂದ:

"ಬೇಡವಮ್ಮ ಸದ್ಯ! ವೆಸೊವ್‌ಶ್ಚಿಕೋವ್‌ನಿಂದ ಆ ಕೆಲಸವಾದೀತೆ ಅಂತ ಯೋಚಿಸ್ತಿದ್ದೀನಿ."

"ಅವನ ಹತ್ತಿರ ಈ ವಿಷಯ ಪ್ರಸ್ತಾಪಿಸ್ಲೆ?"

"ಪ್ರಯತ್ನಿಸಿ. ಅದನ್ನ ಹ್ಯಾಗೆ ಮಾಡೋದೂಂತ ಅವನಿಗೆ ಹೇಳ್ಕೊಡಿ."

"ಆದರೆ ನನಗೇನು ಕೆಲಸವಿರುತ್ತೆ ಆಮೇಲೆ?"

"ಆ ಯೋಚ್ನೆ ಬಿಡಿ. ನಿಮಗೆ ಕೆಲಸ ಇದ್ದೇ ಇರುತ್ತೆ."

....ಆತ ಬರೆಯಲೆಂದು ಕುಳಿತ. ಮೇಜನ್ನು ಸ್ವಚ್ಛಗೊಳಿಸುತ್ತಿದ್ದಂತೆ ತಾಯಿ ಅವನನ್ನು ನೋಡಿದಳು. ಹಾಳೆಯನ್ನು ಕರಿಯ ಅಕ್ಷರಗಳ ಸಾಲುಗಳಿಂದ ಆತ ತುಂಬಿ ದಂತೆ, ಬೆರಳುಗಳ ನಡುವೆ ಲೇಖನಿ ಹೇಗೆ ಚಲಿಸುತ್ತಿತ್ತೆಂಬುದನ್ನು ತಾಯಿ ದಿಟ್ಟಿ

ಸಿದಳು. ಕೆಲವೊಮ್ಮೆ ಆತನ ಕುತ್ತಿಗೆಯ ನರಗಳು ಮುರುಟಿಕೊಳ್ಳುತ್ತಿದ್ದುವು. ತಲೆಯನ್ನು ಹಿಂದಕ್ಕೆ ಚಾಚಿ ಕಣ್ಣುಗಳನ್ನು ಮುಚ್ಚಿಕೊಂಡಾಗ ಗಲ್ಲ ಕಂಪಿಸುತ್ತಿತ್ತು. ಅದನ್ನು ಕಂಡು ತಾಯಿ ಗಾಬರಿಯಾದಳು.

ಕೊನೆಗೊಮ್ಮೆ ಎದ್ದು ಆತ ಹೇಳಿದ:

"ಬರೆದದ್ದಾಯ್ತು. ತಗೋಳ್ಳಿ ಈ ಕಾಗದವನ್ನ ನಿಮ್ಮ ಉಡುಪಿನಲ್ಲಿ ಎಲ್ಲಾದರೂ ಬಚ್ಚಿಡಿ. ಆದರೆ ಪೋಲೀಸರು ಬಂದಾಗ ನಿಮ್ಮನ್ನೂ ಶೋಧಿಸ್ತಾರೆ."

"ಅವರ ಮನೆ ಹಾಳಾಯ್ತು."

....ಆ ಸಂಜೆ ಡಾಕ್ಟರ್ ಇವಾನ್ ದನೀಲೊವಿಚ್ ಬಂದ.

ವೇಗವಾಗಿ ಕೊಠಡಿಯಲ್ಲಿ ಅತ್ತಿತ್ತ ನಡೆಯುತ್ತ ಆತ ಕೇಳಿದ:

"ಯಾಕೆ ಅಧಿಕಾರಿಗಳು ಒಮ್ಮೆಲೆ ಹೀಗಾಗಿದ್ದಾರೆ? ಹೋದ ರಾತ್ರೆ ಏಳು ಮನೆಗಳನ್ನ ಝಡ್ತಿ ಮಾಡಿದ್ರು.... ಹುಂ.... ಎಲ್ಲಿ ನನ್ನ ರೋಗಿ?"

"ನಿನ್ನೆಯೇ ಹೊರಟುಹೋದ. ಇವತ್ತು ಶನಿವಾರ. ಅವನು ಅಭ್ಯಾಸ ಕೂಟಕ್ಕೆ ಚಕ್ಕರ್ ಹಾಕೋದಿಕ್ಕೆ ಇಷ್ಟಪಡಲಿಲ್ಲ," ಎಂದ ನಿಕೊಲಾಯ್.

"ಮೂರ್ಖತನ – ಒಡೆದ ತಲೆಬುರುಡೆ ಹೊತ್ಕೊಂಡು ಅಭ್ಯಾಸ ಕೂಟದಲ್ಲಿ ಕೂತ್ಕೊಳ್ಳೋದು...."

"ನನಗಂತೂ ಹೇಳಿ ಹೇಳಿ ಸಾಕಾಯ್ತು. ಏನೂ ಪ್ರಯೋಜನವಾಗ್ಲಿಲ್ಲ...."

ತಾಯಿಯೆಂದಳು:

"ಬಹುಶಃ ತನ್ನ ಸಂಗಾತಿಗಳ ಎದುರಿಗೆ ಕೊಚ್ಕೊಳೋಕೆ ಇಷ್ಟವೇನೊ! 'ನನ್ನ ನೋಡಿ – ಆಗ್ಲೇ ನಾನು ರಕ್ತ ಬಸಿದಿದ್ದೀನಿ' ಅಂತ!..."

ಡಾಕ್ಟರು ತಾಯಿಯತ್ತ ನೋಡಿ ಮುಖ ಗಂಟಿಕ್ಕಿ ಸೋಗಿನ ಕಾಠಿನ್ಯವನ್ನು ತೋರಿಸುತ್ತ ಹೇಳಿದ:

"ಅಬ್ಬಾ! ಎಂಥ ಕಲ್ಲೆದೆಯವಳು ನೀನು!"

ನಿಕೊಲಾಯ್ ಅವಸರದಲ್ಲೆ ಹೇಳಿದ:

"ಸರಿ. ನೀನು ಇಲ್ಲಿರ್ಬೇಕಾದ ಅಗತ್ಯವೇನೂ ಇಲ್ಲ. ನಾವು ಅತಿಥಿಗಳನ್ನ ಇದಿರು ನೋಡ್ತಾ ಇದ್ದೀವಿ. ಹೊರಡು! ನೀಲೊವ್ನ, ಆ ಕಾಗದ ಅವನಿಗೆ ಕೊಡಿ."

"ಇನ್ನೊಂದು ಕಾಗದ!" ಎಂದು ಡಾಕ್ಟರು ಉದ್ಗಾರವೆತ್ತಿದ.

"ತಗೋ. ಮುದ್ರಣಾಲಯಕ್ಕೆ ಕೊಟ್ಬಿಡು...."

"....ತಗೊಂಡದ್ದಾಯ್ತು. ಕೊಡ್ತೀನಿ. ಬೇರೇನಾದರೂ ಇದೆಯೆ?"

"ಏನೂ ಇಲ್ಲ. ಬಾಗಿಲಿನಾಚೆಗೆ ಒಬ್ಬ ಗೂಢಚಾರ ನಿಂತಿದ್ದಾನೆ."

"ನಾನೂ ನೋಡ್ದೆ. ನನ್ನ ಮನೆ ಬಾಗಿಲಲ್ಲೂ ಒಬ್ಬನಿದ್ದಾನೆ. ಸರಿ, ನಮಸ್ಕಾರ. ನಮಸ್ಕಾರ, ಕೋಪೋದ್ರಿಕ್ತ ಹೆಣ್ಣೆ! ಒಂದು ವಿಷಯ, ಸ್ನೇಹಿತರೆ, ಸ್ಮಶಾನದ ಕಾದಾಟ ಕೊನೆಗೂ ಒಳ್ಳೇದಕ್ಕೇ ಆಯ್ತು. ಇಡೀ ಶಹರವೇ ಆ ವಿಚಾರ ಮಾತಾಡ್ತಿದೆ. ಆ

ವಿಷಯದ ಮೇಲೆ ನೀನು ಬರೆದ ಕರಪತ್ರ ಚೆನ್ನಾಗಿತ್ತು. ಸಮಯಕ್ಕೆ ಸರಿಯಾಗಿತ್ತು. ಕೆಟ್ಟ ಶಾಂತಿಗಿಂತ ಒಳ್ಳೆಯ ಕಾದಾಟ ಯಾವಾಗಲೂ ಮೇಲೂಂತ ನನ್ನ ಅಭಿಪ್ರಾಯ."

"ಆಗಲಿ ಆಗಲಿ, ಹೊರಡಿನ್ನು."

"ಹೀಗೆ ಓಡಿಸೋದು ಶಿಷ್ಟಾಚಾರವಲ್ಲ. ಕೈಕೊಡಿ, ನೀಲೊವ್ನ!... ಆ ಹುಡುಗ ನಿಜವಾಗಿಯೂ ಬೆಪ್ಪು ಕೆಲಸಮಾಡ್ದ. ಅವನು ವಾಸವಾಗಿರೋದು ಎಲ್ಲಿ ಗೊತ್ತೆ?"

ನಿಕೊಲಾಯ್ ಆ ಹುಡುಗನ ವಿಳಾಸವನ್ನು ಕೊಟ್ಟ.

"ನಾಳೆ ಹೋಗಿ ಅವನನ್ನ ನೋಡ್ತೀನಿ. ಒಳ್ಳೇ ಹುಡುಗ, ಅಲ್ವೆ?"

"ತುಂಬಾ ಒಳ್ಳೇ ಹುಡುಗ."

"ಅವನನ್ನು ಲಕ್ಷ್ಯಕೊಟ್ಟು ಕಾಪಾಡ್ಬೇಕು. ಆ ಭುಜಗಳ ಮೇಲೆ ಅವನಿಗೆ ಚುರುಕು ತಲೆಯಿದೆ," ಎಂದು ಹೊರಡುತ್ತ ಡಾಕ್ಟರು ಹೇಳಿದ. "ಅಂಥವರೇ ನಿಜವಾದ ಕೂಲಿಕಾರ ಬುದ್ಧಿಜೀವಿಗಳಾಗಿ, ವರ್ಗಭೇದವೇ ಇಲ್ಲದ ದೂರದ ದಡಗಳಿಗೆ ನಾವು ಹೊರಟಾಗ ನಮ್ಮ ಸ್ಥಾನವನ್ನ ಆಕ್ರಮಿಸುವಂತಾಗ್ಬೇಕು."

"ಈಗೀಗ ನಿನ್ನದು ಮಾತು ಜಾಸ್ತಿಯಾಯ್ತು."

"ಅದಕ್ಕೆ ಕಾರಣ ನಾನು ಉತ್ಸಾಹದಲ್ಲಿರೋದು.... ಹಾಗಾದರೆ ನೀನು ಜೈಲಿಗೆ ಹೋಗೋ ಸಿದ್ಧತೇಲಿದೀಯಾ ಅನ್ನು. ಆಗಲಿ ಒಳ್ಳೇ ವಿಶ್ರಾಂತಿ ತಗೋ!" ಎಂದು ಹೊರಟು ಹೋಗುತ್ತಾ ಡಾಕ್ಟರು ಹೇಳಿದ.

"ಶುಭಾಶಯಕ್ಕೆ ಕೃತಜ್ಞ. ಆದರೆ ನನಗೆ ಆಯಾಸವಾಗಿಲ್ಲ."

ಅವರ ಸಂಭಾಷಣೆಗೆ ಕಿವಿಗೊಡುತ್ತಿದ್ದ ತಾಯಿ, ಕೂಲಿಕಾರ ವರ್ಗದ ಹುಡುಗನ ವಿಷಯವಾಗಿ ಅವರಾಡಿದ ಮಾತು ಕೇಳಿ, ತೃಪ್ತಳಾದಳು.

ಡಾಕ್ಟರು ಹೊರಟುಹೋದಮೇಲೆ ತಾಯಿಯೂ ನಿಕೊಲಾಯ್‌ನೂ ಮೆಲು ದನಿಯಲ್ಲಿ ಮಾತನಾಡುತ್ತಾ, ನಿಶಾಚರರ ಆಗಮನವನ್ನು ಇದಿರುನೋಡುತ್ತಾ, ಊಟಕ್ಕೆ ಕುಳಿತರು. ಗಡೀಪಾರಾಗಿದ್ದಾಗ ತನ್ನ ಜೊತೆಯಲ್ಲಿದ್ದ ಸಂಗಾತಿಗಳ ವಿಷಯವಾಗಿ, ಅಲ್ಲಿಂದ ತಪ್ಪಿಸಿಕೊಂಡು ಬೇರೆ ಬೇರೆ ಹೆಸರಿನಿಂದ ಕೆಲಸ ಮಾಡುತ್ತಿದ್ದವರ ವಿಷಯ ವಾಗಿ, ನಿಕೊಲಾಯ್ ತಾಯಿಗೆ ಹೇಳಿದ. ಹೊಸ ಪ್ರಪಂಚದ ನಿರ್ಮಾಣಕ್ಕಾಗಿ ಜೀವ ವನ್ನೇ ತ್ಯಾಗಮಾಡಿದ ಸಾಮಾನ್ಯ ವೀರರ ಆ ಕಥೆಗಳೂ ನಂಬಲಸಾಧ್ಯವೆಂದು, ಬರಿಯ ಗೋಡೆಗಳು ನಿಕೊಲಾಯ್‌ನ ಮಾತುಗಳನ್ನು ಹಿಂದಕ್ಕೆಸೆದುವು. ಮೃದು ವಾದ ನೆರಳೊಂದು ಪ್ರೀತಿಯಿಂದ ತಾಯನ್ನಪ್ಪಿಕೊಂಡು, ಆ ಅಪರಿಚಿತ ಜನರ ಬಗೆಗೆ ಆಕೆಯ ಹೃದಯದಲ್ಲಿ ಸದ್ಭಾವನೆ ಮೂಡುವಂತೆ ಮಾಡಿತು. ಆಕೆಯ ಕಲ್ಪನೆ ಯಲ್ಲಿ ಅವರೆಲ್ಲರೂ ಒಬ್ಬರಲ್ಲೊಬ್ಬರು ಬೆರೆತರು. ಸ್ವಚ್ಛವೂ ಸರಳವೂ ಆದ ಜೀವನಸತ್ಯವನ್ನು ಜನರಿಗೆ ತೋರಿಸುವುದಕ್ಕೋಸ್ಕರ, ಶತಮಾನಗಳ ಸುಳ್ಳಿನ ವಿಷ ಕಳೆಯನ್ನು ಕೀಳುತ್ತಾ, ನಿಧಾನವಾಗಿದ್ದರೂ ದೃಢವಾದ ಹೆಜ್ಜೆಯಿಂದ, ಭೂಮಿಯ ಮೇಲೆಲ್ಲಾ ಸಂಚರಿಸುವ ನಿರ್ಭಯನಾದೊಬ್ಬ ಮಹಾನ್ ವ್ಯಕ್ತಿಯಾಗಿ ಅವರು

ಮಾರ್ಪಟ್ಟರು. ಈ ಮಹಾಸತ್ಯ, ಮತ್ತೊಮ್ಮೆ ಉದಿಸಿ, ಯಾವ ವ್ಯತ್ಯಾಸವೂ ಇಲ್ಲದೆ ಎಲ್ಲರನ್ನೂ ಕರೆಯುತ್ತಿತ್ತು. ಮಾನವದ್ವೇಷದ ಶಕ್ತಿಯಿಂದ ಜಗತ್ತನ್ನೇ ಬೆದರಿಸಿ ತಮ್ಮ ದಾಸ್ಯಕ್ಕೊಳಗುಮಾಡಿದ ಮೂವರು ದೈತ್ಯರಿಂದ – ದುರಾಶೆ, ದ್ವೇಷ ಮತ್ತು ಸುಳ್ಳಿನಿಂದ – ಪ್ರತಿಯೊಬ್ಬರಿಗೂ ವಿಮೋಚನೆಯ ಭರವಸೆಯನ್ನು ಕೊಡುತ್ತಿತ್ತು.... ಹಿಂದೆ, ಇತರ ದಿನಗಳಿಗಿಂತ ಮೇಲು ಎಂದು ತೋರಿದೊಂದು ರಾತ್ರೆ, ದೇವ ಪ್ರತಿಮೆಯ ಮುಂದೆ ಕೃತಜ್ಞತೆಯಿಂದ ಮೊಣಕಾಲೂರಿದಾಗ ಇದ್ದ ಭಾವನೆಯೇ, ಕಣ್ಣ ಮುಂದೆ ನಿಂತ ಕಲ್ಪನೆಯ ಈ ಮೂರ್ತಿಯನ್ನು ನೋಡಿದಾಗಲೂ ತಾಯಿಗೆ ಉಂಟಾಯಿತು. ಆ ದಿನಗಳು ಈಗ ತಾಯಿಗೆ ಮರೆತುಹೋಗಿದ್ದುವು. ಆದರೆ ಅವು ಉಂಟು ಮಾಡಿದ್ದ ಭಾವನೆಗಳು ವಿಸ್ತಾರಗೊಂಡಿದ್ದುವು, ಹೆಚ್ಚು ಶುಭ್ರವಾಗಿದ್ದುವು, ಸಂತೋಷದಾಯಕವಾಗಿದ್ದುವು. ಆ ಭಾವನೆಗಳು ಈಗ ಹೃದಯದ ಆಳದಲ್ಲಿ ನೆಲೆಗೊಂಡು, ಹೆಚ್ಚು ಪ್ರಬಲವಾದ ಜ್ವಾಲೆಯಾಗಿ ಉರಿದುವು.

"ಪೋಲೀಸರು ಇವತ್ತು ಬರೋದಿಲ್ಲಾಂತ ತೋರುತ್ತೆ," ಎಂದ ನಿಕೊಲಾಯ್ ಒಮ್ಮೆಲೆ.

"ಅವರು ಹಾಳಾಗಿಹೋಗಲಿ," ಎಂದು, ನಿಕೊಲಾಯ್‌ನತ್ತ ವೇಗವಾಗಿ ನೋಡಿ, ತಾಯಿ ಉತ್ತರವಿತ್ತಳು.

"ಸರಿಯೆ.... ನೀವಿನ್ನು ಸ್ವಲ್ಪ ನಿದ್ದೆ ಮಾಡ್ಬೇಕು, ನೀಲೊವ್ನ. ನಿಮಗೆ ಆಯಾಸವಾಗಿ ಸಾಕುಸಾಕಾಗಿರ್ಬೇಕು. ನಿಮ್ಮದು ಆಶ್ಚರ್ಯಕರವಾದ ಗಟ್ಟಿಮುಟ್ಟಾದ ಜೀವ ಅನ್ನೋದನ್ನ ಅಲ್ಲಗಳೆಯೋ ಹಾಗೇ ಇಲ್ಲ! ಈ ಅಪಾಯ, ಕಾತರ ಇಷ್ಟಿದ್ದರೂ ನೀವು ಶಾಂತವಾಗಿದೀರಿ. ಆದರೆ ನಿಮ್ಮ ತಲೆಕೂದಲು ಮಾತ್ರ ಬೇಗಬೇಗ್ನೆ ಬೆಳ್ಳಗಾಗ್ತಿದೆ!.... ಸರಿ, ಹೋಗಿ ಮಲಗೀ."

## ೨೦

ಗಟ್ಟಿಯಾಗಿ ಅಡುಗೆಮನೆಯ ಬಾಗಿಲು ತಟ್ಟಿದ ಸದ್ದಾಗಿ ತಾಯಿ ಎಚ್ಚರಗೊಂಡಳು. ಹೊರಗಿದ್ದ ವ್ಯಕ್ತಿ ತಡೆ ಇಲ್ಲದೆ ಸಹನೆಯಿಂದ ಬಾಗಿಲು ತಟ್ಟುತ್ತಲೇ ಇದ್ದ. ಕತ್ತಲಾಗಿದ್ದು ನೀರವತೆ ನೆಲೆಸಿತ್ತು. ಎಡೆಬಿಡದೆ ಬಾಗಿಲು ತಟ್ಟುವ ಸದ್ದು ಆ ಕತ್ತಲನ್ನು ಗಾಬರಿಗೊಳಿಸಿತು. ತಾಯಿ ಬೇಗನೆ ಬಟ್ಟೆಯೊಂದನ್ನು ಹೊದ್ದುಕೊಂಡು, ಬಾಗಿಲ ಬಳಿ ನಿಂತಳು.

"ಯಾರದು?" ಎಂದು ತಾಯಿ ಕೇಳಿದಳು.

"ನಾನು," ಎಂದಿತು ಅಪರಿಚಿತ ಸ್ವರ.

"ಯಾರು?"

"ಬಾಗಿಲು ತೆರೆಯಿರಿ," ಎಂದು ತಗ್ಗಿದ ಧ್ವನಿಯಲ್ಲಿ ಆ ವ್ಯಕ್ತಿ ವಿನಂತಿ ಮಾಡಿತು.

ತಾಯಿ ಅಗಣಿ ತೆಗೆದು, ಕಾಲಿನಿಂದೊದ್ದು ಬಾಗಿಲು ತೆರೆದಳು. ಇಗ್ನಾತ್ ಒಳಬಂದ.

"ನಾನು ಮನೆ ಸರಿಯಾಗಿಯೇ ಕಂಡು ಹಿಡ್ದೆ!" ಎಂದು ಅವನು ಸಂತೋಷ ದಿಂದ ಕೂಗಿಕೊಂಡ.

ಅವನ ನಡುವಿನವರೆಗೂ ಕೆಸರು ಸೇರಿಕೊಂಡಿತ್ತು. ಮುಖ ಬತ್ತಿ ಹೋಗಿ ಕಣ್ಣುಗಳು ಆಳಕ್ಕಿಳಿದಿದ್ದುವು. ಗುಂಗುರು ಕೂದಲು ಟೋಪಿಯೊಳಗಿಂದ ನಾಲ್ಕು ಕಡೆಗೂ ಇಣಿಕಿ ನೋಡುತ್ತಿತ್ತು.

"ನಾವು ತೊಂದರೇಲಿದ್ದೀವಿ," ಎಂದು, ಬಾಗಿಲು ಭದ್ರಗೊಳಿಸುತ್ತಾ, ಇಗ್ನಾತ್ ನೆಂದ.

"ನನಗೆ ಗೊತ್ತು."

ಆ ಉತ್ತರದಿಂದ ಹುಡುಗನಿಗೆ ಆಶ್ಚರ್ಯವಾಯಿತು.

"ನಿಮಗೆ ಹ್ಯಾಗೆ ಗೊತ್ತು?" ಎಂದು ಆತ ಪಿಳಿಪಿಳಿ ಕಣ್ಣುಬಿಡುತ್ತಾ ಕೇಳಿದ.

ಆಕೆ ಚುಟುಕಾಗಿ ವಿವರಿಸಿದಳು.

"ಇನ್ನಿಬ್ಬರಿದ್ದರಲ್ಲ, ನಿನ್ನ ಸಂಗಾತಿಗಳು. ಅವರನ್ನೂ ಹಿಡಕೊಂಡು ಹೋದ್ರೆ?"

"ಅವರು ಅಲ್ಲಿರ್ಲಿಲ್ಲ. ಮಿಲಿಟರಿ ಸೇರೋಕೆ ಹೋಗಿದ್ರು. ಮಿಹಾಯ್‌ಲೊ ಮಾವನನ್ನೂ ಸೇರಿ ಐದು ಜನರನ್ನ ಹಿಡಿದ್ರು."

ಅವನು ಆಳವಾಗಿ ಉಸಿರೆಳೆದು ಸಣ್ಣನೆ ನಕ್ಕು ಹೇಳಿದ:

"ನಾನೊಬ್ಬ ಉಳಕೊಂಡೆ. ಅವರು ನನ್ನನ್ನ ಈಗ ಹುಡುಕ್ತಿರ್ಬೇಕು."

"ಹ್ಯಾಗೆ ತಪ್ಪಿಸ್ಕೊಂಡೆ ನೀನು?" ಎಂದು ತಾಯಿ ಕೇಳಿದಳು.

ಇನ್ನೊಂದು ಕೊಠಡಿಯ ಬಾಗಿಲು ಸ್ವಲ್ಪ ತೆರೆಯಿತು.

ಒಂದು ಬೆಂಚಿನ ಮೇಲೆ ಕುಳಿತು ಸುತ್ತಲೂ ನೋಡುತ್ತಾ ಇಗ್ನಾತ್ ಹೇಳಿದ:

"ನಾನು? ಅವರು ಬರೋಕೆ ಒಂದೆರಡು ನಿಮಿಷ ಇದ್ದಾಗ, ಕಾಡಿನ ಕಾವಲು ಗಾರ ಓಡಿ ಬಂದು, ಕಿಟಿಕಿ ತಟ್ಟಿ, 'ಹುಷಾರಿ, ನಿಮ್ಮನ್ನ ಹುಡುಕ್ತಿದ್ದಾರೆ' ಅಂದ."

ಮೆಲ್ಲನೆ ನಕ್ಕು ತನ್ನ ಕೋಟಿನ ಮೇಲೆ ಆತ ಮುಖವೊರೆಸಿದ.

"ಮಹಾ ಸುತ್ತಿಗೆಯಿಂದ ಹೊಡೆದ್ರೂ ಕಡಿದು ಬೀಳೋ ಆಸಾಮಿನೆ ಮಿಹಾ ಯ್‌ಲೊ ಮಾವ! 'ಇಗ್ನಾತ್, ನೀನು ಶಹರಕ್ಕೆ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಹೋಗು. ವಯಸ್ಸಾದ ಆ ಹೆಂಗಸು ಗೊತ್ತು ತಾನೆ?' ಅಂತ ಹೇಳಿ, ಮಾತಾ ಡ್ತಿದ್ದ ಹಾಗೆಯೇ ಒಂದು ಚೀಟೀನೂ ಬರೆದು, 'ತಗೋ ಈ ಚೀಟೀನ ಆಕೆಗೆ ಕೊಡು' ಅಂದ. ನಾನು ಪೊದೆಗಳಲ್ಲಿ ಅಡಗಿಕೊಂಡೆ. ಅವರು ಬರೋ ಸದ್ದೂ ಕೇಳಿಸ್ತು. ಬಹಳ ಜನ ಇದ್ರು. ಪಿಶಾಚಿಗಳು ಎಲ್ಲಾ ಕಡೆಯಿಂದ್ಲೂ ನುಸುಕ್ಕೊಂಡು ಬಂದ್ರು. ಡಾಮರು ಕೆಲಸ ನಡೀತಿದ್ದ ಜಾಗಕ್ಕೆ ಮುತ್ತಿಗೆ ಹಾಕಿದ್ರು. ನಾನು ಪೊದೆಗಳಲ್ಲಿ ನೆಲಕ್ಕಂಟಿಕೊಂಡೇ ಕೂತೆ. ಅವರೆಲ್ಲಾ ನನ್ನ ಸಮೀಪದಿಂದ್ಲೇ ಹೋದ್ರು. ಆಮೇಲೆ ಎದ್ದು ಅಲ್ಲಿಂದ ಕಂಬಿಕಿತ್ತೆ. ಎರಡು ರಾತ್ರೆ ಒಂದು ಹಗಲು ಎಲ್ಲಿಯೂ ನಿಲ್ದೆ ನಡೀತಾನೇ ಇದ್ದೀನಿ."

ತಾನು ಮಾಡಿದ್ದರ ಬಗೆಗೆ ಆತನಿಗೆ ತೃಪ್ತಿಯಾಗಿತ್ತೆಂಬುದು ಸ್ಪಷ್ಟವಾಗಿತ್ತು. ಆತನ ಕೆಂಪಗಾಗಿದ್ದ ಕಣ್ಣುಗಳಲ್ಲಿ ಮುಗುಳ್ನಗು ಹೊಂಚಿಹಾಕುತ್ತಿತ್ತು. ಕೆಂಪಗಿನ ತುಂಬು ತುಟಿಗಳು ಅದುರುತ್ತಲೇ ಇದ್ದುವು.

"ಈ ಕ್ಷಣವೆ ನಿನಗೆ ಚಾ ಮಾಡ್ಕೊಡ್ತೀನಿ," ಎಂದು ತಾಯಿ ಸಮೊವಾರ್ ನತ್ತ ಸರಿಯುತ್ತ ಹೇಳಿದಳು.

"ಇಗೋ ಈ ಚೀಟಿ ತಗೋ."

ನೋವಿನಿಂದ ಹಾಂ ಹೂಂ ಎನ್ನುತ್ತ ಮುಖವಿಕಾರ ತೋರಿಸುತ್ತ, ಕಾಲನ್ನೆತ್ತಿ ಆತ ಬೆಂಚಿನ ಮೇಲಿರಿಸಿದ.

ನಿಕೊಲಾಯ್ ಬಾಗಿಲ ಬಳಿ ಕಾಣಿಸಿಕೊಂಡ.

"ನಮಸ್ಕಾರ, ಸಂಗಾತಿ," ಎಂದು ಆತ, ಕಣ್ಣುಗಳನ್ನು ಕಿರಿದುಗೊಳಿಸುತ್ತಾ ಹೇಳಿದ. "ತಾಳಿ, ನಾನು ಸಹಾಯ ಮಾಡ್ತೀನಿ," ಎಂದ.

ಆತ ಕಾಲಿನತ್ತ ಬಾಗಿ, ಕಾಲು ಚೀಲದ ಬದಲು ಸುತ್ತಿದ್ದ ಹೊಲಸು ಬಟ್ಟೆಯನ್ನು ಬಿಚ್ಚತೊಡಗಿದ.

"ಬೇಡಿ !" ಎಂದು ಉದ್ಗರಿಸುತ್ತ ಹುಡುಗ ಕಾಲನ್ನೆಳೆದುಕೊಂಡು, ಆಶ್ಚರ್ಯದಿಂದ ತಾಯಿಯತ್ತ ನೋಡಿದ.

"ಇವನ ಪಾದಗಳನ್ನ ವೋಡ್ಕ ಹಾಕಿ ತಿಕ್ಬೇಕು," ಎಂದು ಆಕೆ ಆತನ ದೃಷ್ಟಿಯನ್ನು ಗಮನಿಸದೆಯೇ ಹೇಳಿದಳು.

"ಖಂಡಿತವಾಗಿ," ಎಂದು ನಿಕೊಲಾಯ್ ಉತ್ತರವಿತ್ತ.

ಇಗ್ನಾತ್ ಸಂಕೋಚದಿಂದ ಗಟ್ಟಿಯಾಗಿ ತಡೆ ತಡೆದು ಉಸಿರು ಬಿಟ್ಟ.

ನಿಕೊಲಾಯ್ ಚೀಟಿಯನ್ನೆತ್ತಿಕೊಂಡು, ಮುದುಡಿದ್ದ ಬೂದು ಬಣ್ಣದ ಆ ಕಾಗದವನ್ನು ಸರಿಯಾಗಿ ಬಿಡಿಸಿ, ಕಣ್ಣಿಗೆ ಸಮೀಪವಾಗಿ ಹಿಡಿದು ಓದಿದ:

"ನಮ್ಮ ಕೆಲಸವನ್ನ ಬಿಟ್ಟು ಬಿಡ್ಬೇಡ, ತಾಯಿ. ನಮ್ಮ ಕೆಲಸದ ವಿಷಯ ಎಂದಿಗಿಂತ ಹೆಚ್ಚಾಗಿಯೇ ಬರೆಯೋಕೆ ಮರೀಬಾರ್ದೂಂತ ಆ ಎತ್ತರದ ಮಹಿಳೆಗೆ ಹೇಳು. ನಾನು ಬೇಡ್ಕೊಳ್ಳೋದು ಇಷ್ಟೆ. ನಮಸ್ಕಾರ. ರೀಬಿನ್."

ನಿಕೊಲಾಯ್ ಮೆಲ್ಲನೆ ಚೀಟಿ ಹಿಡಿದಿದ್ದ ಕೈಯನ್ನು ಕೆಳಕ್ಕಿಳಿಸಿದ.

"ಎಷ್ಟೊಂದು ಭವ್ಯ !" ಎಂದು ಆತ ಸಣ್ಣ ಧ್ವನಿಯಲ್ಲಿ ಹೇಳಿದ.

ತನ್ನ ಬರಿ ಪಾದಗಳ ಕೊಳಕಾದ ಬೆರಳುಗಳನ್ನು ಮೆಲ್ಲನೆ ಮಡಚುತ್ತಲೂ ಬಿಡುತ್ತಲೂ ಕುಳಿತಲ್ಲಿಂದಲೇ ಇಗ್ನಾತ್ ಅವರಿಬ್ಬರನ್ನೂ ನೋಡಿದ. ಅಗಲವಾದೊಂದು ಪಾತ್ರೆಯಲ್ಲಿ ಬಿಸಿ ನೀರು ತಂದು ಅವನ ಮುಂದೆ ಬಾಗಿ ಆ ಪಾದಗಳನ್ನು ಹಿಡಿಯುತ್ತ ತಾಯಿ, ತನ್ನ ಕಂಬನಿಯನ್ನು ಅವರಿಂದ ಮರೆಮಾಡಲು ಯತ್ನಿಸಿದಳು.

"ಓ ನೀವು ತೊಳೀಕೂಡ್ದು," ಎಂದು ಇಗ್ನಾತ್, ಕಾಲನ್ನು ಬೆಂಚಿನ ಕೆಳಕ್ಕೆ ಎಳೆಯುತ್ತಾ ಭೀತಿಯಿಂದ ಕೂಗಿದ.

"ಕೊಡು ಕಾಲ್ನ – ಬೇಗ್ನೆ !"

"ನಾನು ಸ್ವಲ್ಪ ಸ್ಪಿರಿಟ್ ತರ್ತೀನಿ," ಎಂದನು ನಿಕೊಲಾಯ್.

ಹುಡುಗ ತನ್ನ ಪಾದವನ್ನು ಬೆಂಚಿನ ಕೆಳಗೆ ಮತ್ತಷ್ಟು ಹಿಂದಕ್ಕೆ ಎಳೆದು "ಇದೇನು ಆಸ್ಪತ್ರೆ ಕೆಟ್ಟುಹೋಯ್ತೆ?" ಎಂದು ಗೊಣಗಿದ.

ತಾಯಿ ಮತ್ತೊಂದು ಕಾಲನ್ನು ಹಿಡಿದು ಬಟ್ಟೆಯ ಪಟ್ಟಿಯನ್ನು ಬಿಚ್ಚ ತೊಡಗಿದಳು.

ಇಗ್ನಾತ್ ತಾಯಿಯತ್ತ ನೋಡುತ್ತಿದ್ದಂತೆ, ಗಟ್ಟಿಯಾಗಿ ಉಸಿರುಬಿಡುತ್ತಾ ಅಸಮಾಧಾನದಿಂದ ಕತ್ತು ಹೊರಳಿಸುತ್ತಾ ಕುಳಿತ.

"ಅವರು ಮಿಹಾಯ್‌ಲೊ ಇವಾನೊವಿಚ್‌ಗೆ ಹೊಡೆದ್ರು, ಗೊತ್ತಾ?" ಎಂದು ತಾಯಿ ನಡುಗುವ ಸ್ವರದಲ್ಲಿ ಹೇಳಿದಳು.

"ನಿಜವಾಗಿಯೂ?" ಎಂದು ಹುಡುಗ ಮೆಲ್ಲನೆ ಉದ್ಗಾರವೆತ್ತಿದ.

"ಹೌದು. ನಿಕೋಲ್ಸ್‌ಕೊಯೆಗೆ ತಂದಾಗಲೇ ಅವನ ಸ್ಥಿತಿ ಕೆಟ್ಟಿತ್ತು. ಅಲ್ಲಿ ಪೋಲೀಸ್ ಅಧಿಕಾರಿಯೂ ಮುಖ್ಯಸ್ಥನೂ ಮೈಯೆಲ್ಲಾ ರಕ್ತ ಆಗೋ ತನಕ ಅವನ ಮುಖಕ್ಕೆ ಹೊಡೆದ್ರು, ತುಳಿದ್ರು !"

"ಆ ಕೆಲಸ ಹ್ಯಾಗ್ಮಾಡ್ಬೇಕೂಂತ ಅವರಿಗೆ ಚೆನ್ನಾಗಿ ಗೊತ್ತಿದೆ!" ಎಂದು ಹುಡುಗ ಹುಬ್ಬುಗಂಟಿಕ್ಕಿ ಹೇಳಿದ. ಆತ ಭುಜ ಕುಣಿಸಿದ. "ಅವರನ್ನು ಕಂಡರೆ ನನಗೆ ಹೆದರಿಕೆ – ಸಾವಿರ ಸೈತಾನರನ್ನು ಕಂಡಷ್ಟು.... ರೈತರೂ ಅವನಿಗೆ ಹೊಡೆದ್ರೆ?"

"ಪೋಲೀಸರ ಮುಖ್ಯಸ್ಥ ಆಜ್ಞೆಕೊಟ್ಟಾಗ ಒಬ್ಬನೇನೋ ಹೊಡೆದ. ಆದರೆ ಉಳಿದವರು ಸರಿಯಾಗಿದ್ರು. ಅವನ ಪಕ್ಷವನ್ನೇ ವಹಿಸಿದ್ರು. ಹೊಡೆಯೋಕೆ ಹಕ್ಕಿಲ್ಲ ಅಂತ ಕೂಗಾಡಿದ್ರು."

"ಹುಂ. ಯಾರು ಯಾವ ಕಡೆ ಇದ್ದಾರೆ, ಯಾಕಿದ್ದಾರೆ ಅಂತ ಯೋಚನೆ ಮಾಡೋಕೆ ರೈತರೂ ಶುರುಮಾಡ್ತಿದ್ದಾರೆ."

"ಅವರಲ್ಲೂ ಇದ್ದಾರೆ ತಿಳಿವಳಿಕೆ ಉಳ್ಳೋರು."

"ತಿಳಿವಳಿಕೆ ಉಳ್ಳೋರು ಎಲ್ಲಾ ಕಡೆನೂ ಇದ್ದಾರೆ. ಅವರನ್ನ ಆ ಸ್ಥಿತಿಗೆ ತರೋದು ಹಸಿವು. ಅಂತವರು ಎಲ್ಲೆಲ್ಲಿಯೂ ಇದ್ದಾರೆ ನಿಜ, ಆದರೆ ಅವರನ್ನು ಹುಡುಕೋದು ಕಷ್ಟ."

ನಿಕೊಲಾಯ್ ಒಂದು ಶೀಷೆ ಸ್ಪಿರಿಟ್ ತಂದ. ಸಮೊವಾರ್‌ಗೆ ಒಂದಿಷ್ಟು ಇದ್ದಿಲು ಸೇರಿಸಿ ಹಿಂತಿರುಗಿದ. ಅವನನ್ನು ಕುತೂಹಲಕಾರಿ ಕಣ್ಣುಗಳಿಂದ ದಿಟ್ಟಿಸಿ ಇಗ್ನಾತ್ ತಾಯಿಯನ್ನು ಮೆಲ್ಲನೆ ಕೇಳಿದ:

"ಈ ಮಹನೀಯರು, ಡಾಕ್ಟ್ರೆ?"

"ನಮ್ಮಲ್ಲಿ ಮಹನೀಯರು ಯಾರೂ ಇಲ್ಲ. ನಾವೆಲ್ಲಾ ಸಂಗಾತಿಗಳು."

"ಇದೆಲ್ಲಾ ತಮಾಷೆಯಾಗಿ ತೋರ್ತದೆ," ಎಂದನು ಇಗ್ನಾತ್, ಅವನ ಮುಗುಳ್ನಗೆ ಸಂದೇಹವನ್ನೂ ಸಂಕೋಚವನ್ನೂ ವ್ಯಕ್ತಪಡಿಸಿತು.

"ಯಾವುದು ತಮಾಷೆಯಾಗಿ ತೋರ್‍ತದೆ?"

"ಸಾಮಾನ್ಯವಾಗಿ ಪ್ರತಿಯೊಂದೂ. ಒಂದು ಕಡೇಲಿ ಮೂಗಿಗೆ ಗುದ್ದಿ ರಕ್ತ ಬರಿಸ್ತಾರೆ. ಇನ್ನೊಂದು ಕಡೇಲಿ ಪಾದ ತೊಳೀತಾರೆ. ಈ ಎರಡರ ನಡುವೆ ಏನಿದೆ?"

ಬಾಗಿಲು ತೆರೆದು ಒಳಕ್ಕೆ ತಲೆಹಾಕಿ ನಿಕೊಲಾಯ್ ಹೇಳಿದ:

"ಎರಡರ ನಡುವೆ, ಮೂಗಿಗೆ ಗುದ್ದಿ ರಕ್ತ ಬರಿಸುವವರ ಕೈ ನೆಕ್ಕಿ, ಮೂಗಿನಲ್ಲಿ ರಕ್ತ ಬರಿಸ್ಕೊಂಡವರ ರಕ್ತವನ್ನ ಹೀರೋ ಜನರಿದಾರೆ. ಇದೇ ಎರಡರ ನಡುವೆ ಇರೋದು!"

ಇಗ್ನಾತ್ ಗೌರವಪೂರ್ವಕವಾಗಿ ಆತನನ್ನು ನೋಡಿ ಸ್ವಲ್ಪ ತಡೆದು, "ನೀವು ಹೇಳೋದು ಸತ್ಯಾಂಶವೇ ಅಂತ ಕಾಣುತ್ತೆ," ಎಂದು ಹೇಳಿದ.

ಹುಡುಗ ಎದ್ದು ನಾಲ್ಕು ಹೆಜ್ಜೆ ದೂರ ದೃಢವಾಗಿ ನಡೆದ.

"ಹೊಸ ಪಾದಗಳ ಹಾಗಿವೆ. ಧನ್ಯವಾದ!" ಎಂದ.

ಆ ಬಳಿಕ ಅವರು ಚಾ ಕುಡಿಯಲೆಂದು ಅಡುಗೆಮನೆಗೆ ಹೋದರು. ಇಗ್ನಾತ್ ಅವರಿಗೆ ತನ್ನ ಬಾಳ್ವೆಯನ್ನು ಕುರಿತು ಆಳವಾದ ಪರಿಣಾಮಕಾರಿಯಾದ ಸ್ವರದಲ್ಲಿ ಹೇಳಿದ:

"ನಮ್ಮ ಪತ್ರಿಕೇನ ನಾನು ಹಂಚ್ತಿದ್ದೆ. ನಡಿಗೆ ವಿಷಯದಲ್ಲಿ ನನ್ನನ್ನ ಬಿಟ್ಟರಿಲ್ಲ."

"ಹಳ್ಳಿಯಲ್ಲಿ ಬಹಳ ಜನ ಅದನ್ನ ಓದ್ತಾರೇನು?" ಎಂದು ನಿಕೊಲಾಯ್ ಕೇಳಿದ.

"ಅಕ್ಷರಸ್ಥರೆಲ್ಲಾ ಓದ್ತಾರೆ. ಶ್ರೀಮಂತರಾಗಿದ್ರೂ ಓದ್ತಾರೆ. ಅವರು ಸೂಕ್ಷ್ಮ ಮತಿಗಳು. ನಮ್ಮಿಂದ ಈ ಸಾಹಿತ್ಯ ತಗೋಳ್ಳೊಲ್ಲ. ಭೂಮಾಲೀಕರ ಕಾಲಡಿಯಿಂದ ಭೂಮಿನ ತೇಲಿಸೋಕೆ ರೈತರು ತಮ್ಮ ರಕ್ತ ಸುರಿಸ್ತಾರೆ ಅನ್ನೋದು ಅವರಿಗೆ ಗೊತ್ತಿದೆ. ಒಂದ್ಸಲ ಹಾಗೆ ಮಾಡಿದ್ಮೇಲೆ ರೈತರು ಭೂಮಿನ ಹಂಚ್ಕೊಂಡು ಬಿಡ್ತಾರೆ. ಆಮೇಲೆ ಭೂಮಾಲೀಕರೂ ಇರೋದಿಲ್ಲ. ಜೀತದ ಆಳುಗಳೂ ಇರೋದಿಲ್ಲ. ಅದು ಸ್ಪಷ್ಟವಾಗಿದೆ – ಇಲ್ದಿದ್ರೆ ಜಗಳ ಮಾಡೋದಾದ್ರೂ ಯಾತಕ್ಕೆ?"

ಆತನಿಗೆ ನಿಕೊಲಾಯ್‌ನ ಪ್ರಶ್ನೆಯಿಂದ ನೋವಾದ ಹಾಗೆಯೂ ತೋರಿತು. ಆತ ನಿಕೊಲಾಯ್‌ನನ್ನು ಪ್ರಶ್ನಾರ್ಥಕವಾಗಿ ಸಂದೇಹದ ದೃಷ್ಟಿಯಿಂದ ನೋಡಿದ. ನಿಕೊಲಾಯ್ ಮುಗುಳ್ನಕ್ಕ. ಏನನ್ನೂ ಹೇಳಲಿಲ್ಲ.

"ಇವತ್ತು ನಾವು ಇಡೀ ಜಗತ್ತಿನ ವಿರುದ್ಧ ಹೋರಾಡಿ ಎಲ್ಲನ್ನೂ ಮಟ್ಟ ಹಾಕಿದ್ರೆ, ಮತ್ತೆ ನಾಳೆ ಶ್ರೀಮಂತರು ಬಡವರು ಪುನಃ ಶುರುವಾಗ್ತಾರೆ. ಏನು ಪ್ರಯೋಜನ? ಬೇಡವಪ್ಪ! ನಮ್ಮನ್ನ ಮೋಸಪಡಿಸೋಕಾಗೋದಿಲ್ಲ. ಸಂಪತ್ತು ಒಣಗಿದ ಮರಳು ಇದ್ದಹಾಗೆ. ಅದು ಸುಮ್ಮನಿರೋದಿಲ್ಲ. ಅದು ಎಲ್ಲಾ ಕಡೇನೂ ಹರಡಿಕೊಂಡು ಹೋಗ್ತದೆ! ಬೇಡವಪ್ಪ, ಅದು ನಮಗೆ ಬೇಡ!"

"ನೀನು ರೇಗ್ಬೇಡ," ಎಂದು ತಾಯಿ ನಕ್ಕಳು.

ನಿಕೊಲಾಯ್ ಯೋಚನಾಮಗ್ನನಾಗಿ ಹೇಳಿದ:

"ರೀಬಿನ್‌ನ ದಸ್ತಗಿರಿಗೆ ಸಂಬಂಧಿಸಿದ ಕರಪತ್ರವನ್ನು ಹ್ಯಾಗೆ ನಿಮ್ಮ ಜನಕ್ಕೆ ಬಲು ಬೇಗ್ನೆ ತಲಪಿಸೋದು ಅನ್ನೋದೇ ನನ್ನನ್ನು ಬಾಧಿಸಿರೋ ಚಿಂತೆ."

ಇಗ್ನಾತ್‌ನ ಕಿವಿ ಚುರುಕಾಯಿತು.

"ಅಂಥದೊಂದು ಕರಪತ್ರ ಇದೆಯೇನು?" ಎಂದು ಆತ ಕೇಳಿದ.

"ಹೌದು."

"ನನಗೆ ಕೊಡಿ. ನಾನು ತಗೊಂಡು ಹೋಗ್ತೀನಿ," ಎಂದು ಹುಡುಗ ಕೈಗಳನ್ನು ತೀಡಿಕೊಳ್ಳುತ್ತಾ ಹೇಳಿದ.

ಅವನ ಕಡೆಗೆ ನೋಡದೆಯೇ ತಾಯಿ ಮೃದುವಾಗಿ ನಕ್ಕಳು.

"ನಿನಗೆ ಆಯಾಸವಾಗಿದೆ. ಅಲ್ದೆ ಹೆದರಿಕೆ ಆಗುತ್ತೇಂತ್ಲೂ ಹೇಳ್ದೆ," ಎಂದಳು ತಾಯಿ.

ಇಗ್ನಾತ್, ವಿಶಾಲವಾದ ಅಂಗೈಯಿಂದ ಗುಂಗುರು ಕೂದಲನ್ನು ಹಿಂದಕ್ಕೆ ತಳ್ಳುತ್ತಾ, ವ್ಯಾವಹಾರಿಕ ಧ್ವನಿಯಲ್ಲಿ ಹೇಳಿದ:

"ಹೆದರಿಕೆ ಬೇರೆ, ಕೆಲಸ ಬೇರೆ. ನೀವು ಯಾಕೆ ನಗ್ತಿದ್ದೀರಾ? ಒಳ್ಳೆಯವರು ನೀವೂ!"

ಆತನ ಮಾತಿನಿಂದ ತನ್ನಲ್ಲುಂಟಾದ ಸಂತೋಷವನ್ನು ಹತ್ತಿಕ್ಕಲು ಯತ್ನಿಸುತ್ತಾ ತಾಯಿ, ತನಗರಿಯದಂತೆಯೇ ಉದ್ಗಾರವೆತ್ತಿದಳು:

"ನೀನಿನ್ನೂ ಮಗು!"

"ಹುಂ – ಮಗು!" ಎಂದು ಆತ ನಾಚಿಕೊಳ್ಳುತ್ತ ಗೊಣಗಿದ.

ಕಿರಿದುಗೊಳಿಸಿದ ತನ್ನ ಕಣ್ಣುಗಳ ಮೂಲಕ ಪ್ರೀತಿಯಿಂದ ಆತನನ್ನು ನೋಡುತ್ತಾ ನಿಕೊಲಾಯ್ ಹೇಳಿದ:

"ನೀವು ಅಲ್ಲಿಗಿನ್ನು ವಾಪಸು ಹೋಗೋದಿಲ್ಲ."

"ಯಾಕಿಲ್ಲ? ಬೇರೆಲ್ಲಿಗೆ ಹೋಗೋದು?" ಎಂದು ಇಗ್ನಾತ್ ಅಸಮಾಧಾನದಿಂದ ಕೇಳಿದ.

"ಕರಪತ್ರಗಳನ್ನ ಇನ್ನೊಬ್ಬ ತಗೊಂಡು ಹೋಗ್ತಾನೆ. ಏನ್ಮಾಡ್ಬೇಕು, ಹ್ಯಾಗ್ಮಾಡ್ಬೇಕೂಂತ ನೀವು ಅವನಿಗೆ ವಿವರವಾಗಿ ನಿರ್ದೇಶ ಕೊಡಿ. ಆಗಬಹುದಾ?"

"ಆಗಲಿ," ಎಂದು ನಿರಾಶೆಯ ಧ್ವನಿಯಲ್ಲಿ ಇಗ್ನಾತ್ ಹೇಳಿದ.

"ನಿಮಗೊಂದು ಹೊಸ ಗುರುತು ಚೀಟಿ ತರಿಸ್ಕೊಟ್ಟು, ಕಾಡಿನ ಕಾವಲುಗಾರನಾಗಿ ಕೆಲಸ ಕೊಡಿಸ್ತೀವಿ."

"ರೈತರು ಸೌದೇನೋ ಇನ್ನೇನೋ ಕದಿಯೋಕೆ ಬಂದರೆ ನಾನೇನು ಮಾಡ್ಲಿ? ಅವರನ್ನು ಹಿಡಿದು ಕಟ್ಟಿಹಾಕ್ಲೆ? ಆ ಕೆಲಸ ನನಗೆ ಸರಿಹೋಗೋದಿಲ್ಲ."

ತಾಯಿ ನಕ್ಕಳು. ನಿಕೊಲಾಯ್‌ನಿಗೂ ನಗು ಬಂತು. ಮತ್ತೊಮ್ಮೆ ಹುಡುಗನಿಗೆ ಮುಖಭಂಗವಾದಂತಾಗಿ ಅಸಮಾಧಾನವೆನಿಸಿತು.

"ಏನೂ ಯೋಚಿಸ್ಬೇಡಿ. ನೀವೇನೂ ರೈತರನ್ನ ಕಟ್ಟಿಹಾಕ್ಬೇಕಾದ್ದಿಲ್ಲ. ಆ ವಿಷಯವಾಗಿ ಮಾತುಕೊಡ್ತೀನಿ," ಎಂದು ನಿಕೊಲಾಯ್ ಸಮಾಧಾನಪಡಿಸಿದ.

"ಹಾಗಾದರೆ ಪರವಾಗಿಲ್ಲ," ಎಂದು ಇಗ್ನಾತ್ ಸಂತೋಷದಿಂದ ಮುಗುಳ್ನಕ್ಕ. "ಕಾರಖಾನೇಲಿ ಕೆಲಸಮಾಡೋದು ನನಗೆ ಇಷ್ಟ. ಕಾರಖಾನೆಯವರು ಬೇರೆಯವರಿಗಿಂತ ಚುರುಕು ಅಂತ ಕೇಳಿದ್ದೀನಿ."

ತಾಯಿ ಮೇಜಿನ ಬಳಿಯಿಂದ ಎದ್ದು ಕಿಟಕಿಯತ್ತ ನಡೆದಳು. ಆಕೆ ಯೋಚಿಸಿದಳು:

"ಜೀವನ ಎಷ್ಟೊಂದು ತಮಾಷೆಯಾಗಿದೆ! ಪ್ರತಿ ದಿನವೂ ಐದು ಸಲ ನಗೋದು, ಐದು ಸಲ ಅಳೋದು."

ಇಗ್ನಾತ್‌ನತ್ತ ನೋಡಿ ಆಕೆಯೆಂದಳು:

"ಮುಗಿಯಿತೆ, ಇಗ್ನಾತ್? ನೀನಿನ್ನು ನಿದ್ದೆಮಾಡ್ಬೇಕು."

"ನನಗೆ ನಿದ್ದೆ ಬಂದಿಲ್ಲ."

"ಬರುತ್ತೆ. ಏಳು, ಏಳು."

"ನೀವು ತುಂಬಾ ಕಟ್ಟುನಿಟ್ಟು, ಅಲ್ವಾ? ಆಗಲಿ, ಎದ್ದೆ. ಟಾ ಕೊಟ್ಟದ್ದಕ್ಕೂ.... ನೀವು ತೋರಿಸಿರೋ ದಯೆಗೂ.... ಕೃತಜ್ಞ."

ತಾಯಿಯ ಹಾಸಿಗೆಯನ್ನೇರಿ ಆತ, ತಲೆತುರಿಸಿಕೊಂಡು ಗೊಣಗಿದ:

"ಇನ್ನು ಇಲ್ಲಿ ಪ್ರತಿಯೊಂದೂ ಟಾರಿನ ವಾಸನೆ ಹೊಡೀತದೆ.... ಈ ಸಂಭ್ರಮದಲ್ಲೆಲ್ಲಾ ಅರ್ಥವಿಲ್ಲ.... ನನಗೆ ನಿದ್ದೆ ಬರುತ್ತಿಲ್ಲ.... ಆ ಎರಡರ ನಡುವೆ ವಿಷಯದಲ್ಲಿ ಎಷ್ಟು ಬೇಗ್ನೆ ಆತ ಉತ್ತರಕೊಟ್ಟ!.... ಪಿಶಾಚಿಗಳು...."

ಒಮ್ಮೆಲೆ ಆತ ಬಾಯನ್ನು ಅರೆತೆರೆದು, ಹುಬ್ಬೇರಿಸಿ, ಗಟ್ಟಿಯಾಗಿ ಗೊರಕೆ ಹೊಡೆಯುತ್ತ, ನಿದ್ದೆಹೋದ.

## ೨೧

ದೊಡ್ಡ ಕಟ್ಟಡವೊಂದರ ಕೆಳಭಾಗದಲ್ಲಿ ಒಂದು ಕೊಠಡಿಯಲ್ಲಿ, ವೆಸೊವ್‌ಶ್ಚಿಕೋವ್‌ನೆದುರು ಕುಳಿತು, ಇಳಿದನಿಯಲ್ಲಿ ಇಗ್ನಾತ್ ಹೇಳಿದ:

"ನಡುವಿನ ಕಿಟಕಿಯ ಮೇಲೆ ನಾಲ್ಕು ಸಲ...."

"ನಾಲ್ಕು?" ಎಂದು ವೆಸೊವ್‌ಶ್ಚಿಕೋವ್ ಆತುರಗೊಂಡು ಕೇಳಿದ.

"ಮೊದಲ ಮೂರು – ಹೀಗೆ," ಎಂದು ಮೇಜಿನ ಮೇಲೆ ತಟ್ಟಿ ತೋರಿಸಿದ: "ಒಂದು, ಎರಡು, ಮೂರು, ಒಂದು ಕ್ಷಣ ತಡೆದು ಮತ್ತೊಂದು."

"ತಿಳೀತು."

"ಕೆಂಪು ತಲೆಯ ಒಬ್ಬ ರೈತ ಬಾಗಿಲು ತೆರೆದು 'ಸೂಲಗಿತ್ತಿಗಾಗಿ ಬಂದಿರಾ?' ಅಂತ ಕೇಳ್ತಾನೆ. 'ಹೌದು, ಕಾರಖಾನೆಯ ಮಾಲೀಕನ ಹೆಂಡತಿಗೋಸ್ಕರ' ಅಂತ ನೀವು ಹೇಳ್ಬೇಕು. ಅಷ್ಟೆ. ಅವನಿಗೆ ಅರ್ಥವಾಗ್ತದೆ."

"ನೀನು ಹೇಳೋದು ಕೇಳಿದ್ರೆ ಬಹಳ ಸುಲಭ, ಅಂತ ತೋರುತ್ತೆ."

"ನೀನೇ ನೋಡುವಿಯಂತೆ! ಅಂತೂ ಅವರನ್ನು ಒಪ್ಪಿಸು. ನಾನೆಲ್ಲಾ ಸಿದ್ಧವಾಗಿಟ್ಟಿದೀನಿ. ಹಗ್ಗದ ಏಣಿ, ಮೇಲ್ಗಡೆ ಇಟ್ಟಂಗಿಗೆ ಕೊಂಡಿ – ಎಲ್ಲಾ. ಈ ಕೊಠಡಿ ಯಜಮಾನ ದೀಪ ಹಚ್ಚೋ ಕೆಲಸಗಾರನಾಗ್ತಾನೆ."

ಬಾಗಿಲಿನಾಚೆ ಯಾರೋ ಕೆಮ್ಮಿದರು. ಸರಸರನೆ ಡಬಡಬನೆ ಡಬ್ಬದ ಸದ್ದಾಯಿತು.

"ಅವನೇ," ಎಂದ ವೆಸೊವ್‌ಶ್ಚಿಕೋವ್.

ತಗಡಿನ ಸ್ನಾನದ ಟಬ್ಬೊಂದು ಬಾಗಿಲ ಬಳಿ ಕಾಣಿಸಿಕೊಂಡು, ಕರ್ಕಶವಾದ ಧ್ವನಿ ಕೇಳಿತು:

"ಒಳಕ್ಕೆ ಹೋಗು, ಹಳೇ ಪಿಶಾಚಿಯೇ...."

ಟಬ್ಬಿನ ಹಿಂದೆ, ಉಬ್ಬಿದ ಕಣ್ಣುಗಳ ಬಿಳಿಯ ಕೂದಲು ಮೀಸೆಗಳ ಒಳ್ಳೆಯ ಸ್ವಭಾವದ ಮುಖವನ್ನು, ಅವರು ಕಂಡರು.

ವೆಸೊವ್‌ಶ್ಚಿಕೋವ್ ಟಬ್ಬನ್ನು ಒಳತರಲು ಸಹಾಯಮಾಡಿದ. ಕೊಠಡಿಯೊಳಕ್ಕೆ ಎತ್ತರದ, ಬಾಗಿದ ಬೆನ್ನಿನ ಮನುಷ್ಯನೊಬ್ಬ ಬಂದ. ಆತ ಕರ್ಕಶವಾಗಿ ಕೆಮ್ಮಿ, ಗಡ್ಡವಿಲ್ಲದ ಕೆನ್ನೆಗಳನ್ನು ಉಬ್ಬಿಸಿ ತಗ್ಗಿಸಿ, ಉಗುಳಿ, ಅಲ್ಲಿದ್ದವರನ್ನು ನೋಡಿ ವಂದಿಸಿದ:

"ನಮಸ್ಕಾರ."

"ಕೇಳು ಆತನನ್ನ!" ಎಂದು ವೆಸೊವ್‌ಶ್ಚಿಕೋವ್ ಉದ್ಗರಿಸಿದ.

"ನನ್ನ ಕೇಳೋದು ಏನನ್ನು?"

"ತಪ್ಪಿಸ್ಕೊಳ್ಳೋ ವಿಷಯ."

"ಆ," ಎಂದನಾತ, ಕೊಳಕಾಗಿದ್ದ ಬೆರಳುಗಳಿಂದ ತನ್ನ ಮೀಸೆಯನ್ನೊರೆಸುತ್ತಾ.

"ಇದು ಅಷ್ಟು ಸುಲಭ ಅಂತ ಆಕೆ ನಂಬೋದಿಲ್ಲ, ಯಾಕೊವ್ ವಸೀಲ್ಯೆವಿಚ್."

"ನಂಬೋದಿಲ್ವೆ? ಹಾಗಾದರೆ, ಆಕೆಗೆ ಆ ಏರ್ಪಾಟು ಇಷ್ಟವಿಲ್ಲಾಂತ ಕಾಣುತ್ತೆ. ನಮಗೆ ಇಷ್ಟವಿದೆ, ಅದಕ್ಕೆ ನಂಬ್ತೀವಿ!"

ಆ ಸ್ವರ ಶಾಂತವಾಗಿತ್ತು. ಒಮ್ಮೆಲೆ ಆತ ಕೆಳಕ್ಕೆ ಬಾಗಿ ಕೆಮ್ಮಿದ. ಕೆಮ್ಮು ಮುಗಿದ ಬಳಿಕ ಕೊಠಡಿಯ ನಡುವೆ ಆತ, ಎದೆಯನ್ನು ತೀಡುತ್ತಾ ಉಬ್ಬಿದ ಕಣ್ಣುಗಳಿಂದ ತಾಯಿಯನ್ನು ಈಕ್ಷಿಸುತ್ತಾ, ನಿಂತ.

"ಪಾವೆಲ್ ಮತ್ತು ಅವನ ಸಂಗಾತಿಗಳೇ ಆ ವಿಷಯ ತೀರ್ಮಾನಿಸ್ತಾರೆ," ಎಂದಳು ತಾಯಿ.

ವೆಸೊವ್‌ಶ್ಚಿಕೋವ್ ವಿಚಾರಮಗ್ನನಾಗಿ ತಲೆತಗ್ಗಿಸಿದ.

ಯಾಕೊವ್ ಕುಳಿತುಕೊಳ್ಳುತ್ತ ಕೇಳಿದ:

"ಯಾರು ಆತ – ಪಾವೆಲ್?"

"ನನ್ನ ಮಗ."
"ಕುಲನಾಮ?"
"ವ್ಲಾಸೊವ್."
ಆತ ತಲೆಯಾಡಿಸಿ, ತಂಬಾಕಿನ ಚೀಲವನ್ನು ಹೊರತೆಗೆದು, ಕೊಳವೆಯನ್ನು ತುಂಬಿಸತೊಡಗಿದ.

"ಕೇಳಿದ್ದೀನಿ. ನನ್ನ ಸೋದರಳಿಯನಿಗೆ ಅವನ ಪರಿಚಯ ಇದೆ. ನನ್ನ ಅಳಿಯನೂ ಜೈಲಲ್ಲಿದ್ದಾನೆ – ಯೇವ್‌ಚೆಂಕೊ ಅಂತ – ಕೇಳಿದ್ದೀಯಾ? ನನ್ನ ಹೆಸರು ಗೊಬೂನ್. ಇಷ್ಟರಲ್ಲೇ ಯುವಕರನ್ನೆಲ್ಲಾ ಸೆರೆಮನೇಲಿಡ್ತಾರೆ. ಮುದುಕರಾದ ನಮಗೆಲ್ಲಾ ಇನ್ನು ಹೆಚ್ಚು ಜಾಗ! ನನ್ನ ಸೋದರಳಿಯನ್ನ ಸೈಬೀರಿಯಕ್ಕೆ ಕಳಿಸ್ತಾರೇಂತ ಒಬ್ಬ ಪೋಲೀಸ್ನೋನು ಹೇಳ್ದ. ಎಂಥ ಕೆಲಸ ಮಾಡೋಕೂ ಸಿದ್ಧವೇ ಅವರು – ನಾಯಿಗಳು!"

ಆತ ವೆಸೊವ್‌ಶ್ಚಿಕೋವ್‌ನತ್ತ ತಿರುಗಿ, ಆಗಾಗ ನೆಲದ ಮೇಲುಗುಳುತ್ತಾ ಕೊಳವೆಯನ್ನು ಸೇದತೊಡಗಿದ.

ಮಾತುಗಳನ್ನು ತಡೆತಡೆದು ಆತ ಹೇಳಿದ:

"ಹಾಗಾದರೆ ಅವಳಿಗೆ ಇಷ್ಟವಿಲ್ಲವೋ?... ಹುಂ. ಅದು ಅವಳಿಗೆ ಸೇರಿದ್ದು. ಮನುಷ್ಯ ಸ್ವತಂತ್ರನಾಗಿದ್ದಾನೆ. ಕೂತು ಬೇಜಾರಾದ್ರೆ ನಡೀತಾನೆ ಅಥವಾ ನಡೆದು ಬೇಜಾರಾದ್ರೆ ಕೂತ್ಕೋತಾನೆ. ದೋಚಿದ್ರೆ ಕಣ್ಣು ಮುಚ್ಕೊ; ಹೊಡೆದ್ರೆ ಅಳಬೇಡ; ಕೊಂದರೆ ಬಿದ್ದಿರು. ಇದು ಎಲ್ಲರಿಗೂ ಗೊತ್ತಿದೆ.... ಆದರೆ ನನ್ನ ಸೋದರಳಿಯನ್ನ ಹೊರಗೆ ತರ್ತೀನಿ – ಖಂಡಿತವಾಗಿಯೂ ತರ್ತೀನಿ."

ಆ ಚುಟುಕು ವಾಕ್ಯಗಳನ್ನು ಆತ ಹೇಳಿದ ರೀತಿಯಿಂದ ತಾಯಿಗೆ ಸೋಜಿಗವೆನಿಸಿತು. ಆದರೆ ಕೊನೆಯ ಮಾತುಗಳನ್ನು ಆಡಿದ ರೀತಿ ನೋಡಿ ಅಸೂಯೆಯಾಯಿತು.

ಬೀದಿಗಿಳಿದು, ಶೀತಲ ಗಾಳಿಯೂ ಮಳೆಯೂ ಮುಖದ ಮೇಲೆ ಬೀಳುತ್ತಿದ್ದಂತೆ ಮುನ್ನಡೆಯುತ್ತ, ತಾಯಿ ವೆಸೊವ್‌ಶ್ಚಿಕೋವ್‌ನ ವಿಷಯ ಯೋಚಿಸಿದಳು.

"ಎಷ್ಟೊಂದು ಬದಲಾಗಿದ್ದಾನೆ! ನಂಬೋಕೇ ಆಗೋದಿಲ್ಲ!"

ಗೊಬೂನ್‌ನನ್ನು ಸ್ಮರಿಸಿಕೊಂಡು, ಹೆಚ್ಚುಕಡಮೆ ಪ್ರಾರ್ಥನಾಪೂರ್ಣ ಸ್ವರದಲ್ಲಿಯೇ ತಾಯಿ ಯೋಚಿಸಿದಳು:

"ಹೊಸ ರೀತೀಲಿ ಬದುಕ್ತಿರೋದು ನಾನೊಬ್ಬಳೇ ಅಲ್ಲಾಂತ ಸ್ಪಷ್ಟವಾಗಿದೆ."

ತಕ್ಷಣವೇ ಆಕೆಯ ಹೃದಯ, ಮಗನನ್ನು ಕುರಿತಾದ ಯೋಚನೆಗಳಿಂದ ತುಂಬಿತು.

"ಆತ ಒಪ್ಪಿಗೆ ಕೊಟ್ಟರೆ!"

## ೨೨

ಮರು ಭಾನುವಾರ ಸೆರೆಮನೆಯ ಕಚೇರಿಯಲ್ಲಿ ತಾಯಿ ಪಾವೆಲ್‌ನನ್ನು ಬೀಳ್ಕೊಡುತ್ತಿದ್ದಾಗ, ಕಾಗದದ ಸಣ್ಣ ಮುದ್ದೆಯೊಂದನ್ನು ಆತ ತನ್ನ ಅಂಗೈಗೆ ತುರುಕಿ

ದಂತೆ ತಾಯಿಗೆ ಭಾಸವಾಯಿತು. ಕೈಸುಟ್ಟವಳಂತೆ ಆಕೆ ಹೌಹಾರಿದಳು. ಪ್ರಶ್ನಿಸುವ ದೃಷ್ಟಿಯಿಂದ ಮಗನ ಮುಖವನ್ನು ನೋಡಿದಳು. ಆದರೆ ಅಲ್ಲಿ ಯಾವ ಉತ್ತರವೂ ಇರಲಿಲ್ಲ. ಪಾವೆಲ್‌ನ ನೀಲಿಕಣ್ಣುಗಳು ಎಂದಿನಂತೆಯೇ ಶಾಂತವಾದ ನಿರ್ಧಾರದ ಮುಗುಳ್ನಗೆಯನ್ನು ಸೂಸುತ್ತಿದ್ದುವು.

"ಬರ್ತೀನಿ," ಎಂದಳಾಕೆ ನಿಟ್ಟುಸಿರು ಬಿಟ್ಟು.

ಮತ್ತೊಮ್ಮೆ ಪಾವೆಲ್ ಕೈಚಾಚಿದ. ಮಮತೆಯ ಛಾಯೆಯೊಂದು ಆತನ ಮುಖದ ಮೇಲೆ ಹಾದುಹೋಯಿತು.

"ಹೋಗಿ ಬಾ, ಅಮ್ಮ."

ಮಗನ ಕೈಯನ್ನು ಬಿಡದೆಯೇ ತಾಯಿ ತಡೆದು ನಿಂತಳು.

"ವ್ಯಥೆಪಟ್ಕೋಬೇಡ; ರೇಗ್ಬೇಡ," ಎಂದ ಪಾವೆಲ್.

ಈ ಮಾತುಗಳೂ ಹಣೆಯ ಮೇಲಿದ್ದ ಹಟದ ನಿರ್ಧಾರದ ಗೆರೆಯೂ ಆಕೆಗೆ ದೊರೆತ ಉತ್ತರವಾಗಿದ್ದುವು.

ತಲೆತಗ್ಗಿಸಿ ಆಕೆ ಪಿಸು ಸ್ವರದಲ್ಲಿ ಅಂದಳು:

"ಅಯ್ಯೋ, ಮುದ್ದು.... ಏನ್ಹೇಳ್ತೀದ್ದೀಯಾ...."

ತನ್ನ ಕಣ್ಣುಗಳಲ್ಲಿದ್ದ ಕಂಬನಿಯನ್ನೂ ನಡುಗುತ್ತಿದ್ದ ತುಟಿಗಳನ್ನೂ ಮಗ ಕಾಣಬಾರದೆಂದು ಆತನ ಕಡೆಗೆ ನೋಡದೆಯೇ ತಾಯಿ, ಅವಸರವಾಗಿ ಹೊರಬಿದ್ದಳು. ಮನೆಯ ಹಾದಿಯುದ್ದಕ್ಕೂ ಕಾಗದ ಹಿಡಿದಿದ್ದ ಕೈ ನೋಯುತ್ತಿದ್ದಂತೆ, ಆ ಇಡಿಯ ತೋಳೇ ಭುಜದ ಮೇಲೆ ಹೊಡೆತ ಬಿದ್ದು ಭಾರವಾಗಿ ತೂಗಾಡುತ್ತಿದ್ದಂತೆ, ತಾಯಿಗೆ ತೋರಿತು. ಮನೆ ತಲುಪಿದೊಡನೆ ಆಕೆ ನಿಕೊಲಾಯ್‌ಗೆ ಆ ಚೀಟಿ ಕೊಟ್ಟಳು. ಚೀಟಿಯನ್ನಾತ ಬಿಡಿಸುವುದನ್ನೆ ನೋಡುತ್ತ, ಇನ್ನೂ ಪೂರ್ತಿ ನಿರಾಶಳಾಗಲೊಪ್ಪದೆ, ನಿಂತಳು. ಆದರೆ ನಿಕೊಲಾಯ್ ಆಕೆಯ ನೆರವಿಗೆ ಬರಲಿಲ್ಲ.

"ನಾನು ಹೇಳಿದ್ದ ಹಾಗೆಯೇ! ಇದೀಗ ಆತ ಬರ್ದಿರೋದು:

'ಸಂಗಾತಿಗಳೇ, ನಾವು ತಪ್ಪಿಸಿಕೊಳ್ಳೋ ಪ್ರಯತ್ನಮಾಡೋದಿಲ್ಲ. ನಮ್ಮಿಂದ ಅದು ಸಾಧ್ಯವಿಲ್ಲ. ನಮ್ಮಲ್ಲಿ ಯಾರಿಂದಲೂ ಸಾಧ್ಯವಿಲ್ಲ. ನಾವು ಹಾಗೆ ಮಾಡಿದರೆ ನಮ್ಮ ಆತ್ಮಗೌರವಕ್ಕೆ ಧಕ್ಕೆ ಬರುತ್ತದೆ. ಆದರೆ, ಇತ್ತೀಚೆಗೆ ದಸ್ತಗಿರಿಯಾದ ರೈತನಿಗೆ ಸಹಾಯ ಮಾಡೋದಕ್ಕೆ ಪ್ರಯತ್ನಿಸಿ. ಆತನ ಬಗೆಗೆ ನೀವೇನಾದರೂ ಮಾಡಬೇಕು. ನಿಮ್ಮಿಂದ ಏನೇನೂ ಸಾಧ್ಯವೋ ಅದಕ್ಕೆಲ್ಲಾ ಆತ ಅರ್ಹನಾಗಿದ್ದಾನೆ: ಇಲ್ಲಿನ ಜೀವನ ಆತನಿಗೆ ದುಸ್ಸಹವಾಗಿದೆ. ಪ್ರತಿ ದಿನವೂ ಅಧಿಕಾರಿಗಳ ಜತೇಲಿ ಜಗಳವಾಡ್ತಾನೆ. ಈಗಾಗಲೇ ಅವನಿಗೆ ಇಪ್ಪತ್ತುನಾಲ್ಕು ಘಂಟೆಗಳ ಕಾಲ ಕತ್ತಲೆ ಕೋಣೆಯೂ ಲಭಿಸಿದೆ. ಇಲ್ಲಿ ಅವನಿಗೆ ಹಿಂಸೆ ಕೊಟ್ಟೇ ಸಾಯಿಸ್ತಾರೆ. ನಾವೆಲ್ಲ ಅವನ ಪರವಾಗಿ ವಿನಂತಿ ಮಾಡ್ತಿದ್ದೇವೆ. ನನ್ನ ತಾಯಿಯನ್ನು ಸಂತೈಸಿ. ಪ್ರತಿಯೊಂದನ್ನೂ ಬಿಡಿಸಿ ಹೇಳಿ. ಅವಳಿಗೆ ಅರ್ಥವಾಗ್ತದೆ.'"

ತಾಯಿ ತಲೆಯೆತ್ತಿ ಶಾಂತವಾದ ಕಂಪಿಸುತ್ತಿದ್ದ ಸ್ವರದಲ್ಲಿ ಹೇಳಿದಳು:

"ಹೇಳೋದಕ್ಕೇನಿದೆ? ನನಗೆ ಅರ್ಥವಾಗಿದೆ."

ನಿಕೊಲಾಯ್ ವೇಗವಾಗಿ ಪಕ್ಕಕ್ಕೆ ತಿರುಗಿ, ಜೇಬಿನಿಂದ ಕರವಸ್ತ್ರವನ್ನು ತೆಗೆದುಕೊಂಡು ಗಟ್ಟಿಯಾಗಿ ಮೂಗಿನ ಸೆಗಡಿ ತೆಗೆದ.

"ಶೀತವಾದ ಹಾಗಿದೆ...." ಎಂದು ಗೊಣಗಿದ.

ಕನ್ನಡಕವನ್ನು ಸರಿಪಡಿಸುವುದಕ್ಕೆಂದು ಕೈಯನ್ನೆತ್ತಿ, ಹಿಂದಕ್ಕೂ ಮುಂದಕ್ಕೂ ನಡೆಯುತ್ತಾ ಹೇಳಿದ:

"ಇನ್ನೊಂದು ಸಂಗತಿ ಎಂದರೆ, ತಪ್ಪಿಸಿಕೊಳ್ಳಲು ಏರ್ಪಾಟು ಮಾಡೋಕೆ ನಮಗೆ ಸಮಯವೂ ಸಾಲದು, ಅನ್ನಿ."

"ಸರಿ, ಆಗಲಿ. ವಿಚಾರಣೆ ನಡೀಲಿ," ಎಂದು ತಾಯಿ, ಮಂಜಿನ ಹಾಗೆ ಹೃದಯವನ್ನು ವ್ಯಥೆ ಆವರಿಸಿದಂತೆ, ಹುಬ್ಬೇರಿಸಿ ಹೇಳಿದಳು.

"ಸೇಂಟ್ ಪೀಟರ್ಸ್‌ಬರ್ಗಿನ ಒಬ್ಬ ಸಂಗಾತಿಯಿಂದ ಇದೇ ಈಗ ಒಂದು ಕಾಗದ ಬಂದಿದೆ...."

"ಆಮೇಲೆ ಸೈಬೀರಿಯದಿಂದಲೂ ತಪ್ಪಿಸ್ಕೋಬಹುದು, ಅಲ್ವೆ?"

"ಖಂಡಿತವಾಗಿ. ವಿಚಾರಣೆ ಬೇಗನೆ ನಡೀಲಿದೆ ಅಂತ ಈ ಸಂಗಾತಿ ಬರೀತಾನೆ. ಶಿಕ್ಷೆ ಏನೂಂತ ಈಗಾಗಲೇ ಗೊತ್ತುಮಾಡಿದ್ದಾರಂತೆ – ಎಲ್ಲರಿಗೂ ಗಡೀಪಾರು. ಈ ದರೋಡೆಖೋರರು ತಮ್ಮ ನ್ಯಾಯಸ್ಥಾನಗಳನ್ನು ತಾವೇ ಅಪಹಾಸ್ಯಕ್ಕೆ ಗುರಿಮಾಡ್ತಾರೆ. ಯೋಚಿಸಿ ನೋಡಿ. ಇಲ್ಲಿ ವಿಚಾರಣೆ ಶುರುವಾಗೋದಕ್ಕೆ ಮುಂಚೆಯೇ ಸೇಂಟ್ ಪೀಟರ್ಸ್‌ಬರ್ಗಿನಲ್ಲಿ ಶಿಕ್ಷೆ ಗೊತ್ತುಮಾಡ್ತಾರೆ!"

ತಾಯಿ ದೃಢವಾಗಿ ಹೇಳಿದಳು:

"ಏನೂ ಚಿಂತಿಸ್ಬೇಡಿ, ನಿಕೊಲಾಯ್ ಇವಾನೊವಿಚ್. ನೀವು ನನಗೇನೂ ವಿವರಿಸಬೇಕಾದ್ದಿಲ್ಲ ಅಥವಾ ಸಂತೈಸಬೇಕಾದ್ದಿಲ್ಲ. ಪಾವೆಲ್ ಸರಿಯಾದ್ದನ್ನೇ ಮಾಡ್ತಾನೆ. ಸುಮ್ಸುಮ್ನೆ ತಾನೂ ಸಂಗಾತಿಗಳೂ ಸಂಕಟ ಅನುಭವಿಸೋ ಹಾಗೆ ಆತ ಮಾಡಲಾರ. ನನ್ನನ್ನ ಅವನು ಪ್ರೀತಿಸ್ತಾನೆ. ನನ್ನ ವಿಷಯ ಆತ ಎಷ್ಟೊಂದು ಚಿಂತಿಸ್ತಾನೆ ಅನ್ನೋದನ್ನ ನೀವೇ ನೋಡಿದ್ದೀರಲ್ಲ. ತಾಯಿಗೆ ಬಿಡಿಸಿ ಹೇಳಿ ಸಂತೈಸಿ ಅಂತಾನೆ."

ಆಕೆಯ ಎದೆಗುಂಡಿಗೆ ತೀವ್ರಗತಿಯಿಂದ ಹೊಡೆದುಕೊಂಡಿತು. ಹೃದಯ ಉಕ್ಕೇರಿ ಬವಳಿ ಬಂದ ಹಾಗಾಯಿತು.

ಅಸ್ವಾಭಾವಿಕವಾಗಿ ಗಟ್ಟಿಯಾದ ಸ್ವರದಲ್ಲಿ ನಿಕೊಲಾಯ್ ಹೇಳಿದ:

"ನಿಮ್ಮ ಮಗ ಒಳ್ಳೆಯವನು. ಅವನ ವಿಷಯದಲ್ಲಿ ನನಗೆ ಅತ್ಯಂತ ಗೌರವ ಇದೆ."

"ರೀಬಿನ್‌ಗೆ ಸಹಾಯ ಮಾಡೋಕೆ ನಾವು ಹಾದಿ ಹುಡುಕೋಣ," ಎಂದು ತಾಯಿ ಸಲಹೆ ಮಾಡಿದಳು.

ಆಗಲೇ ಏನಾದರೂ ಮಾಡಬೇಕೆಂದು, ಎಲ್ಲಿಗಾದರೂ ಹೋಗಬೇಕೆಂದು, ಆಯಾಸವಾಗಿ ಕುಸಿಬೀಳುವ ತನಕ ನಡೆಯಬೇಕೆಂದು ತಾಯಿಗೆ ಅಪೇಕ್ಷೆಯಾಯಿತು.

ನಿಕೊಲಾಯ್ ಶತಪಥ ತುಳಿದು ಹೇಳಿದ:

"ಆಗಲಿ.... ಸಾಷ ಬೇಕಾಗಿತ್ತು ಈಗ...."

"ಬರ್ತಾಳೆ. ನಾನು ಪಾವೆಲ್‌ನ ನೋಡೋಕೆ ಹೋದ ದಿನಗಳಲ್ಲೆಲ್ಲಾ ಖಂಡಿತ ಆಕೆ ಬರ್ತಾಳೆ."

ನಿಕೊಲಾಯ್ ತಾಯಿಯ ಪಕ್ಕದಲ್ಲೆ ಕುಳಿತ. ಯೋಚನೆಯಲ್ಲಿ ತಲೆಬಾಗಿಸಿ, ತುಟಿ ಕಚ್ಚಿ ಗಡ್ಡವನ್ನಾತ ತಿರುವಿದ.

"ನನ್ನ ಅಕ್ಕ ಇದ್ದಿದ್ರೆ ಯಾವ ಕಷ್ಟವೂ ಇರ್ತಿರ್ಲಿಲ್ಲ...."

"ಪಾವೆಲ್ ಒಳಗಿರೋವಾಗ್ಲೇ ನಾವು ಏರ್ಪಾಟು ಮಾಡಿದ್ರೆ ಚೆನ್ನಾಗಿರ್ತದೆ. ಅವನಿಗೆ ಸಂತೋಷವಾಗ್ತದೆ," ಎಂದಳು ತಾಯಿ.

ಅವರೂ ಸ್ವಲ್ಪ ಹೊತ್ತು ಮೌನವಾಗಿದ್ದರು.

"ಆತ ಯಾಕೆ ಒಪ್ಕೋದಿಲ್ಲವೋ ನನಗೆ ಅರ್ಥವಾಗೋದಿಲ್ಲ...." ಎಂದು ಒಮ್ಮೆಲೆ ತಾಯಿ ಅಂದಳು.

ನಿಕೊಲಾಯ್ ಎದ್ದು ನಿಂತ. ಅಷ್ಟರಲ್ಲೆ ಬಾಗಿಲಿನ ಕರೆಗಂಟೆ ಬಾರಿಸಿತು. ಅವರು ಒಬ್ಬರನ್ನೊಬ್ಬರು ನೋಡಿದರು.

"ಬಹುಶಃ ಸಾಷಳೇ ಇರ್ಬೇಕು," ಎಂದು ನಿಕೊಲಾಯ್ ಮೃದುವಾಗಿ ಹೇಳಿದ.

"ಆಕೆಗೆ ಹ್ಯಾಗೆ ಹೇಳೋಣ?" ಎಂದು ಅಷ್ಟೇ ಮೃದುವಾಗಿ ತಾಯಿಯೆಂದಳು.

"ಹುಂ.... ಹೌದಲ್ಲ?...."

"ಅವಳ ವಿಷಯದಲ್ಲಿ ನನಗೆ ತುಂಬಾ ಕನಿಕರವಾಗ್ತದೆ."

ಮತ್ತೊಮ್ಮೆ ಗಂಟೆ ಬಾರಿಸಿತು. ಈ ಕರೆ ಮೊದಲಿನಷ್ಟು ದೃಢವಾಗಿರಲಿಲ್ಲ. ಹೊರಗಿದ್ದ ವ್ಯಕ್ತಿ, ಕರೆಯಬೇಕೋ ಬೇಡವೋ ಎಂದು ನಿರ್ಧಾರ ಮಾಡದೆ ನಿಂತ ಹಾಗಿತ್ತು. ನಿಕೊಲಾಯ್ ಮತ್ತು ತಾಯಿ ಇಬ್ಬರೂ ಬಾಗಿಲಿನೆಡೆಗೆ ನಡೆದರು. ಬಾಗಿಲನ್ನು ಸಮೀಪಿಸಿದಂತೆ ನಿಕೊಲಾಯ್ ನಿಂತು ಬೇರೆ ಕೊಠಡಿಗೆ ತಿರುಗುತ್ತ ಹೇಳಿದ:

"ನೀವು ಒಬ್ಬರೇ ಹೋಗೋದು ಮೇಲು...."

"ಆಗೋದಿಲ್ಲ ಅಂದ್ನೆ?" ಎಂದು ಸಾಷ, ತಾಯಿ ಬಾಗಿಲು ತೆರೆದೊಡನೆಯೇ, ಧೈರ್ಯವಾಗಿ ಕೇಳಿದಳು.

"ಹೌದು."

"ನನಗೆ ಗೊತ್ತಿತ್ತು," ಎಂದಷ್ಟೇ ಸಾಷ ಅಂದಳು. ಆದರೆ ಆಕೆಯ ಮುಖ ಬೆಳ್ಳಗಾಯಿತು. ಆಕೆ ಓವರ್‌ಕೋಟಿನ ಗುಂಡಿಗಳನ್ನು ಬಿಚ್ಚಿದಳು. ಪುನಃ ಕೆಳಗಿಂದ ಎರಡು ಗುಂಡಿಗಳನ್ನು ಹಾಕಿಕೊಂಡಳು. ಹಾಗೆಯೆ ಭುಜಗಳಿಂದ ಕೆಳಕ್ಕೆ ಸರಿಸಲು ಯತ್ನಿಸಿ ವಿಫಲಳಾದಳು. ಆಕೆಯೆಂದಳು:

"ಗಾಳಿ ಮತ್ತು ಮಳೆ – ಕೆಟ್ಟ ಹವಾ.... ಅವನು ಆರೋಗ್ಯವಾಗಿದ್ದಾನಾ?"

"ಹೌದು."

"ಆರೋಗ್ಯವಾಗಿದ್ದಾನೆ, ಸುಖವಾಗಿದ್ದಾನೆ," ಎಂದು ಸಾಷ, ತನ್ನ ಕೈಯನ್ನೆ ನೋಡುತ್ತ ನಿಂತುಕೊಂಡು, ಮೆಲುದನಿಯಲ್ಲಿ ಅಂದಳು.

"ನಾವು ರೀಬಿನ್‌ನ್ನ ಬಿಡಿಸೋಕೆ ಪ್ರಯತ್ನಿಸ್ಬೇಕೂಂತ ಆತ ಬರೀತಾನೆ," ಎಂದು ತಾಯಿ ಹುಡುಗಿಯತ್ತ ನೋಡದೆಯೇ ಹೇಳಿದಳು.

"ಹೌದೆ? ಯೋಜನೆ ಇದ್ದೇ ಇದೆ. ಅದನ್ನ ಉಪಯೋಗಿಸ್ಬಹುದೂಂತ ನನಗೆ ತೋರ್‍ತದೆ," ಎಂದು ಸಾಷ ನಿಧಾನವಾಗಿ ಹೇಳಿದಳು.

ನಿಕೊಲಾಯ್ ಒಮ್ಮೆಲೆ ಬಾಗಿಲ ಬಳಿ ಕಾಣಿಸಿಕೊಂಡು, "ನನಗೂ ಹಾಗೇ ಅನಿಸ್ತದೆ," ಎಂದ. ಸಾಷಳನ್ನು ನೋಡಿ ತಲೆ ಬಾಗಿಸಿ ವಂದಿಸಿದ.

ಸಾಷ ಆತನೊಡನೆ ಕೈ ಕುಲುಕಿ ಹೇಳಿದಳು:

"ಯಾಕಲ್ಲ? ಅದು ಒಳ್ಳೇ ಯೋಜನೆ ಅಂತ ಎಲ್ಲರೂ ಒಪ್ತಾರೆ."

"ಆದರೆ ಯಾರು ಆ ಕೆಲಸ ಮಾಡೋರು? ನಮಗೆ ಯಾರಿಗೂ ಬಿಡುವೇ ಇಲ್ಲ."

ಸಾಷ ಒಮ್ಮೆಲೆ ಅಂದಳು:

"ನಾನು ಮಾಡ್ತೀನಿ. ನನಗೆ ಬಿಡುವಿದೆ."

"ಆಗಲಿ. ಆದರೆ ಬೇರೆಯವರ್‍ನ ಕೇಳ್ಬೇಕು...."

"ಕೇಳ್ತೀನಿ. ಈಗ್ಲೇ ಹೋಗ್ತೀನಿ."

ತನ್ನ ತೆಳ್ಳಗಿನ ಬೆರಳುಗಳನ್ನು ದೃಢವಾಗಿ ಓಡಿಸುತ್ತ ಆಕೆ ಮತ್ತೊಮ್ಮೆ ಓವರ್ ಕೋಟಿನ ಗುಂಡಿಗಳನ್ನು ಹಾಕಿಕೊಂಡಳು.

"ನೀವು ಮೊದಲು ಸ್ವಲ್ಪ ವಿಶ್ರಾಂತಿ ತಗೊಂಡು ಹೋಗಿ," ಎಂದಳು ತಾಯಿ.

"ನನಗೆ ಆಯಾಸವಾಗಿಲ್ಲ," ಎಂದು ಹುಡುಗಿ ಶಾಂತವಾಗಿ ಮುಗುಳ್ನಗುತ್ತ ಉತ್ತರವಿತ್ತಳು.

ಮೌನವಾಗಿ ಆಕೆ ಕೈಕುಲುಕಿ, ಮತ್ತೊಮ್ಮೆ ನಿರ್ವಿಕಾರ ಮುಖಮುದ್ರೆಯಿಂದ ಕಟ್ಟುನಿಟ್ಟಾಗಿ ಹೊರಟೇಹೋದಳು.

ತಾಯಿ ಮತ್ತು ನಿಕೊಲಾಯ್ ಕಿಟಕಿಯ ಬಳಿ ನಿಂತು, ಅಂಗಳವನ್ನು ದಾಟಿ ಸಾಷ ಬೀದಿಗಿಳಿದುದನ್ನೇ ನೋಡುತ್ತ ನಿಂತರು. ನಿಕೊಲಾಯ್ ಮೆಲ್ಲನೆ ಸಿಳ್ಳು ಹಾಕುತ್ತಾ ಮೇಜಿನ ಬಳಿ ಕುಳಿತು ಬರೆಯತೊಡಗಿದ.

"ಕೈತುಂಬ ಕೆಲಸವಿದ್ದರೆ ಆಕೆ ಇದನ್ನೆಲ್ಲಾ ಹೆಚ್ಚು ಸುಲಭವಾಗಿ ಸಹಿಸ್ಕೋತಾಳೆ," ಎಂದು ತಾಯಿ ಯೋಚನಾಮಗ್ನಳಾಗಿ ಹೇಳಿದಳು.

"ಹೌದು," ಎಂದು ನಿಕೊಲಾಯ್ ಉತ್ತರವಿತ್ತ. ದಯಾಪೂರ್ಣವಾದ ತನ್ನ ಮುಖದ ಮೇಲೊಂದು ಮುಗುಳ್ನಗೆ ಮೂಡಿಸುತ್ತ, ತಾಯಿಯತ್ತ ತಿರುಗಿ ಆತ

ಹೇಳಿದ: "ಅದೊಂದು ಅನುಭವ ನಿಮಗೆ ಆಗಿಯೇ ಇಲ್ಲಾಂತ ತೋರುತ್ತೆ, ನೀಲೊವ್ನ. ನೀವು ಪ್ರೀತಿಸೋ ಮನುಷ್ಯನಿಗಾಗಿ ಹಾತೊರೆಯೋದು ಅಂದರೆ ಏನೂಂತ, ನಿಮಗೆ ಯಾವತ್ತೂ ಗೊತ್ತಿದ್ದ ಹಾಗೇ ಇಲ್ಲ."

"ಸರಿಯಪ್ಪ!" ಎಂದು ತಾಯಿ ಕೈಬೀಸಿ ಅಂದಳು. "ನನಗಿದ್ದದ್ದೊಂದೇ – ನನ್ನನ್ನ ಮದುವೆ ಮಾಡಿಕೊಟ್ಬಿಡ್ತಾರೆ ಅನ್ನೋ ಭಯ ಮಾತ್ರ!"

"ನೀವು ಯಾರನ್ನೂ ಪ್ರೀತಿಸಿಯೇ ಇರ್ಲಿಲ್ವೆ?"

"ನನಗೆ ನೆನಪಿಲ್ಲ. ಪ್ರೀತಿಸಿದ್ದೆ ಅಂತ ಕಾಣುತ್ತೆ. ಯಾರನ್ನೋ ಪ್ರೀತಿಸಿರ್ಬೇಕು. ಆದರೆ ನೆನಪಿಲ್ಲ."

ತಾಯಿ ಆತನನ್ನು ನೋಡುತ್ತ, ವ್ಯಥೆಯ ಶಾಂತ ಮುಖಭಾವದಿಂದ ಮುಂದು ವರಿಸಿದಳು:

"ನನ್ನ ಗಂಡ ನನಗೆ ಹೊಡೆದೂ ಹೊಡೆದೂ ಮದುವೆಗೆ ಮುಂಚೆ ಆದದ್ದೆಲ್ಲ ನನ್ನ ನೆನಪಿಂದ ಅಳಿಸಿಹೋಗೋ ಹಾಗೆ ಮಾಡ್ದ."

ನಿಕೊಲಾಯ್ ಮತ್ತೆ ಮೇಜಿನತ್ತ ತಿರುಗಿದ. ತಾಯಿ ಕ್ಷಣ ಹೊತ್ತು ಹೊರ ಹೋದಳು. ಆಕೆ ಹಿಂತಿರುಗಿದಾಗ, ಮಧುರ ಸ್ಮರಣೆಯಲ್ಲಿ ಮಗ್ನನಾಗಿದ್ದ ನಿಕೊಲಾಯ್ ಪ್ರೀತಿಪೂರ್ವಕವಾಗಿ ತಾಯಿಯತ್ತ ನೋಡಿದ.

"ನನ್ನ ವಿಷಯ ಹೇಳೋದಾದ್ರೆ, ಹೆಚ್ಚು ಕಡಮೆ ಸಾಷಳಿಗೆ ಆಗಿರುವಂಥದೇ ಅನುಭವ ನನಗೂ ಆಗಿದೆ. ನಾನೊಬ್ಬ ಹುಡುಗೀನ ಪ್ರೀತಿಸ್ತಿದ್ದೆ. ಆಕೆ ದಿವ್ಯ ವ್ಯಕ್ತಿ. ನಾನು ಅವಳನ್ನ ಸಂಧಿಸಿದಾಗ ನನಗೆ ಇಪ್ಪತ್ತು ವರ್ಷವಿರ್ಬೇಕು. ಆ ದಿವಸದಿಂದ ಅವಳನ್ನು ನಾನು ಪ್ರೀತಿಸಿದ್ದೀನಿ. ಆಗ ಪ್ರೀತಿಸಿದ ಹಾಗೆಯೇ ಈಗಲೂ ಪ್ರೀತಿಸ್ತೀನಿ – ಹೃತ್ಪೂರ್ವಕವಾಗಿ, ಕೃತಜ್ಞತೆಯಿಂದ, ಸದಾ ಕಾಲ."

ಬಳಿಯಲ್ಲೆ ನಿಂತಿದ್ದ ತಾಯಿಗೆ, ಆತನ ಕಣ್ಣುಗಳಲ್ಲಿ ಹೊಳೆಯುತ್ತಿದ್ದ ಬೆಚ್ಚಗಿನ ಸ್ವಚ್ಛವಾದ ಬೆಳಕು ಕಾಣಿಸುತ್ತಿತ್ತು. ತನ್ನ ಕೈಗಳನ್ನಾತ ಮೇಲಕ್ಕೆ ಕುರ್ಚಿಯ ಹಿಂಭಾಗ ದಲ್ಲಿರಿಸಿ, ತಲೆಯನ್ನು ಕೈಗಳ ಮೇಲೆ ಆನಿಸಿ, ದೂರ ಎಲ್ಲೋ ನೋಡುತ್ತ ಆತ ಕುಳಿ ತಿದ್ದ. ನೀಳವಾದ ಬಲಿಷ್ಠವಾದ ಅವನ ದೇಹ, ಸೂರ್ಯನಿಗಾಗಿ ಹಂಬಲಿಸುವ ಹೂವಿ ನಂತೆ, ಯಾವುದೋ ದೂರದ ದೃಶ್ಯವನ್ನು ಕಾಣಲು ಬಯಸುತ್ತಿತ್ತು.

"ನೀವು ಯಾಕೆ ಆಕೇನ ಮದುವೆಯಾಗ್ಬಾರ್ದು?" ಎಂದು ತಾಯಿ ಕೇಳಿದಳು.

"ಅವಳಿಗೆ ಮದುವೆಯಾಗಿ ಈಗಾಗ್ಲೇ ನಾಲ್ಕು ವರ್ಷ ಆಗಿದೆ..."

"ಮುಂಚೆಯೇ ನೀವು ಯಾಕೆ ಮದುವೆಯಾಗ್ಲಿಲ್ಲ?"

ನಿಕೊಲಾಯ್ ಒಂದು ಕ್ಷಣ ಯೋಚಿಸಿದ.

"ಯಾಕೋ ಅದು ಸಾಧ್ಯವಾಗ್ಲಿಲ್ಲ. ನಾನು ಸ್ವತಂತ್ರನಾಗಿದ್ದಾಗ, ಆಕೆ ಜೈಲಲ್ಲೋ ಗಡೀಪಾರಾಗಿಯೋ ಇರ್ತಿದ್ಲು. ಆಕೆ ಸ್ವತಂತ್ರಳಾಗಿದ್ದಾಗ ನಾನು ಜೈಲಲ್ಲಿರ್ತಿದ್ದೆ. ಅದು ಬಹಳ ಮಟ್ಟಿಗೆ ಸಾಷಳ ಪರಿಸ್ಥಿತಿಯ ಹಾಗೆಯೇ ಇದೆ, ಅಲ್ವೆ? ಕೊನೇಲಿ ಅವರು

ಆಕೆಗೆ ಹತ್ತು ವರ್ಷಗಳ ಶಿಕ್ಷೆ ವಿಧಿಸಿ, ಸೈಬೀರಿಯಕ್ಕೆ – ಅತ್ಯಂತ ದೂರವಿರೋ ಒಂದು ಪ್ರದೇಶಕ್ಕೆ – ಕಳಿಸಿದ್ರು. ಅವಳ ಜತೇಲಿ ಹೋಗ್ಬೇಕೂಂತಿದ್ದೆ. ಆದರೆ ನನಗೆ ಲಜ್ಜೆ ಯಾಯ್ತು, ಅವಳಿಗೂ ಲಜ್ಜೆಯಾಯ್ತು. ಅಲ್ಲಿ ಆಕೆಗೆ ಇನ್ನೊಬ್ಬನ ಪರಿಚಯ ವಾಯ್ತು – ಒಳ್ಳೆಯವನು, ನಮ್ಮ ಸಂಗಾತಿಗಳಲ್ಲೇ ಒಬ್ಬ. ಅವರು ಒಟ್ಟಿಗೆ ಓಡಿ ಹೋದ್ರು. ಈಗ ವಿದೇಶದಲ್ಲಿ ವಾಸವಾಗಿದ್ದಾರೆ...."

ನಿಕೊಲಾಯ್ ಕನ್ನಡಕವನ್ನು ತೆಗೆದು, ಉಜ್ಜಿ, ಬೆಳಕಿಗೆ ಹಿಡಿದು ಮತ್ತೊಮ್ಮೆ ಉಜ್ಜಿದ.

"ಅಯ್ಯೋ ಪಾಪ!" ಎಂದು ತಾಯಿ, ತಲೆಯಲುಗಿಸುತ್ತ ಪ್ರೀತಿಯಿಂದ ಉದ್ಗರಿಸಿದಳು. ಅವನ ಬಗೆಗೆ ಆಕೆಗೆ ಕನಿಕರವಾಯಿತು. ಆದರೆ ಅದೇ ಹೊತ್ತಿಗೆ, ಅವನ ಕುರಿತಾದ, ಮಾತೃವಾತ್ಸಲ್ಯದ ಭಾವನೆ ಆಕೆ ಮುಗುಳ್ನಗುವಂತೆ ಮಾಡಿತು. ಆತ ದೇಹವನ್ನು ಸರಿಸಿ ಕುಳಿತು, ಮತ್ತೊಮ್ಮೆ ಲೇಖನಿಯನ್ನೆತ್ತಿಕೊಂಡು, ಮಾತು ಗಳ ತಾಳಕ್ಕೆ ಸರಿಯಾಗಿ ಅದನ್ನು ಆಡಿಸುತ್ತಾ ಮುಂದುವರಿಸಿದ:

"ಕುಟುಂಬ ಜೀವನ ಕ್ರಾಂತಿಕಾರಿಯ ಶಕ್ತೀನ ಕಡಮೆ ಮಾಡುತ್ತೆ – ಯಾವಾ ಗಲೂ ಕಡಮೆ ಮಾಡುತ್ತೆ! ಮಕ್ಕಳು, ಬಡತನ, ಕುಟುಂಬ ಪೋಷಣೆಗಾಗಿ ದುಡಿಯ ಬೇಕಾದ ಅವಶ್ಯತೆ.... ಕ್ರಾಂತಿಕಾರಿ, ತನ್ನ ಚಟುವಟಿಕೆಗಳು ವಿಸ್ತಾರವಾಗೋ ಹಾಗೆ, ಎಡೆಬಿಡದೆ ತನ್ನ ಶಕ್ತೀನ ಹೆಚ್ಚಿಸ್ತಿರಬೇಕು. ಕಾಲಸ್ಥಿತಿ ಅಂಥಾದ್ದು. ಇತರರಿಗಿಂತ ಮುಂದೆ ನಾವು ಸಾಗ್ಬೇಕು. ಯಾಕೆಂದರೆ, ಹಳೇ ಜಗತ್ತನ್ನ ನಿರ್ನಾಮಮಾಡಿ ಹೊಸ ಜಗತ್ತನ್ನ ನಿರ್ಮಿಸೋದಕ್ಕೋಸ್ಕರ, ಇತಿಹಾಸ ಆಯ್ದುಕೊಂಡಿರೋ ಕಾರ್ಯಕರ್ತರು ನಾವು. ಆಯಾಸದಿಂದಲೋ ಯಾವುದಾದರೂ ಸಣ್ಣ ವಿಜಯದಿಂದ ಆಕರ್ಷಿತ ರಾಗಿಯೋ ನಾವು ಹಿಂದುಳಿದರೆ, ಧ್ಯೇಯಕ್ಕೆ ದ್ರೋಹ ಬಗೆದಷ್ಟೇ ದೊಡ್ಡ ತಪ್ಪನ್ನ ನಾವು ಮಾಡಿದ ಹಾಗಾಗ್ತದೆ. ನಮ್ಮ ಶ್ರದ್ಧೆಗೆ ಭಂಗ ತಾರದೆ ಇನ್ನೊಬ್ಬರ ಜತೇಲಿ ಮುಂದುವರಿಯೋದು ಸಾಧ್ಯವಿಲ್ಲ. ನಮ್ಮ ಗುರಿ ಸಣ್ಣ ಪುಟ್ಟ ಯಶಸ್ಸಲ್ಲ, ಸಂಪೂರ್ಣ ವಾದ ವಿಜಯ ಅನ್ನೋದನ್ನ ನಾವು ಯಾವತ್ತೂ ಮರೀಬಾರ್ದು."

ಆತನ ಸ್ವರ ದೃಢವಾಯಿತು. ಮುಖ ನಿಸ್ತೇಜವಾಯಿತು. ಕಣ್ಣುಗಳು ಎಂದಿ ನಂತೆ ಶಾಂತವಾದ ಹತ್ತಿಕ್ಕಿದ ಶಕ್ತಿಯಿಂದ ಹೊಳೆದುವು. ಮತ್ತೊಮ್ಮೆ ಕರೆಗಂಟೆ ಕೇಳಿಸಿತು. ಕೆನ್ನೆಗಳು ಚಳಿಯಿಂದ ಕೆಂಪಗಾಗಿ, ತೀರ ತೆಳುವಾದ ಕೋಟಿನೊಳಗೆ ದೇಹ ನಡುಗಿಸುತ್ತ, ಲುದ್ಮಿಲ ಒಳಬಂದಳು.

"ವಿಚಾರಣೆ ಮುಂದಿನ ವಾರ ನಡೆಯುತ್ತೆ," ಎಂದು ಆಕೆ, ಸವೆದು ಹೋಗಿದ್ದ ರಬ್ಬರಿನ ಮೇಲ್ ಬೂಟುಗಳನ್ನು ಕಳಚುತ್ತಾ, ಸಿಟ್ಟಿನಿಂದ ಹೇಳಿದಳು.

"ಖಂಡಿತವಾಗಿ ಗೊತ್ತೆ?" ಎಂದು ನಿಕೊಲಾಯ್ ಕೇಳಿದ. ತಾಯಿ ಅವಸರ ದಿಂದ ನಿಕೊಲಾಯ್‌ನ ಹತ್ತಿರ ಬಂದಳು. ತನಗೆ ಹೆದರಿಕೆಯಾಗಿದೆಯೋ ಅಥವಾ ಸಂತಸವಾಗಿದೆಯೋ ತಿಳಿಯದಾಯಿತು.

ಆಳವಾದ ಸ್ವರದಲ್ಲಿ ಅಣಕದ ಛಾಯೆಯನ್ನು ಬೆರೆಸುತ್ತಾ ಲುದ್ಮಿಲ ಹೇಳಿದಳು:

"ಖಂಡಿತವಾಗಿ ಗೊತ್ತು. ಶಿಕ್ಷೆ ಈಗಾಗಲೇ ವಿಧಿಸಿ ಆಗಿದೆ ಅನ್ನೋದನ್ನ ಮರೆಮಾಚೋದಕ್ಕೂ ನ್ಯಾಯಸ್ಥಾನದಲ್ಲಿ ಯಾರೂ ಪ್ರಯತ್ನಪಡೋದಿಲ್ಲ. ಆ ಪರಿಸ್ಥಿತಿಗೆ ಏನು ಕಾರಣ ಕೊಡೋಣ? ವೈರಿಗಳ ವಿಷಯದಲ್ಲಿ ತನ್ನ ಅಧಿಕಾರಿಗಳೇ ಹೆಚ್ಚು ಸಡಿಲವಾಗಿ ವರ್ತಿಸಬಹುದೂಂತ ಸರಕಾರಕ್ಕೆ ಹೆದರಿಕೆ? ತಮ್ಮ ಸೇವಕರ ಮನಸ್ಸನ್ನ ವಿರೂಪಗೊಳಿಸೋಕೆ ಇಷ್ಟೆಲ್ಲಾ ಕಾಲವ್ಯಯ ಶಕ್ತಿವ್ಯಯ ಮಾಡಿದ ಮೇಲೂ, ಆ ಸೇವಕರು ಅಷ್ಟು ತುಚ್ಛರಾಗದೇ ಇರ್‍ಬಹುದೂಂತ ಸರಕಾರಕ್ಕೆ ಭಯ?"

ಲುದ್ಮಿಲ ಕುಳಿತುಕೊಂಡು, ಕೈಗಳಿಂದ ಬತ್ತಿಹೋಗಿದ್ದ ತನ್ನ ಕೆನ್ನೆಗಳನ್ನು ತೀಡಿದಳು. ಆಕೆಯ ಕಣ್ಣುಗಳಲ್ಲಿ ಅತ್ಯಂತ ತಿರಸ್ಕಾರವಿತ್ತು. ಸ್ವರ ಹೆಚ್ಚುಹೆಚ್ಚು ಕೋಪಾವಿಷ್ಟವಾಯಿತು.

ಆಕೆಯ ಕ್ರೋಧವನ್ನು ಶಮನಮಾಡಲು ನಿಕೊಲಾಯ್ ಯತ್ನಿಸಿದ:

"ಸುಮ್ಸುಮ್ನೆ ನಿಮ್ಮ ಶಕ್ತಿಯ ವ್ಯಯಮಾಡ್ಬೇಡಿ ಲುದ್ಮಿಲ.... ಅವರಿಗೇನೂ ನಿಮ್ಮ ಮಾತು ಕೇಳ್ಸೋಲ್ಲ ನೋಡಿ...."

ತಾಯಿ ಆಕೆಯ ಮಾತುಗಳನ್ನೆಲ್ಲಾ ಕಿವಿಗೊಟ್ಟು ಕೇಳಿದಳು. ಆದರೆ ಅವಳಿಗೊಂದೂ ಅರ್ಥವಾಗಲಿಲ್ಲ. ಆಕೆಯ ಮನಸ್ಸಿನಲ್ಲಿ ಒಂದೇ ಯೋಚನೆ ತಿರುತಿರುಗಿ ಧ್ವನಿಸುತ್ತಿತ್ತು:

"ವಿಚಾರಣೆ – ಮುಂದಿನ ವಾರ !"

ಒಮ್ಮೆಲೆ, ಅದಮ್ಯವಾದ ಅಮಾನುಷವಾದ ಶಕ್ತಿಯೊಂದು ಸಮೀಪಕ್ಕೆ ಬಂದಂತೆ ತಾಯಿಗೆ ಭಾಸವಾಯಿತು.

## ೨೩

ಹೀಗೆ ತಾಯಿ, ಮಾನಸಿಕ ಗೊಂದಲದ ವಾತಾವರಣದಲ್ಲಿ, ಕಾತರದ ನಿರೀಕ್ಷಣೆಯಲ್ಲಿ, ಎರಡು ದಿನ ಕಳೆದಳು. ಮೂರನೆಯ ದಿನ ಸಾಷ ಕಾಣಿಸಿಕೊಂಡು, ನಿಕೊಲಾಯ್‌ನಿಗೆ ಹೇಳಿದಳು:

"ಎಲ್ಲ ಸಿದ್ಧತೆಯಾಗಿದೆ. ಇವತ್ತು ಒಂದು ಘಂಟೆಗೆ...."

"ಇಷ್ಟೊಂದು ಬೇಗ್ನೆ?" ಎಂದು ಆತ ಆಶ್ಚರ್ಯದಿಂದ ಕೇಳಿದ.

"ಯಾಕಾಗ಼್್ಬಾರ್‍ದು? ಉಡುಪು, ರೀಬಿನ್ ಹೋಗೋಕೆ ಒಂದು ಜಾಗ, ಇಷ್ಟನ್ನು ಮಾತ್ರ ನಾನು ಗೊತ್ತುಮಾಡೋದು ಉಳಿದಿತ್ತು. ಮಿಕ್ಕದ್ದನ್ನೆಲ್ಲಾ ಗೊಬೂನ್ ಮಾಡಿದ. ರೀಬಿನ್ ಒಂದು ಕಟ್ಟಡದಷ್ಟು ದೂರ ಮಾತ್ರ ಓಡಿದರಾಯ್ತು. ವೇಷ ಮರೆಸಿದ ವೆಸೊವ್‌ಶ್ಚಿಕೋವ್ ಅವನನ್ನ ಸಂಧಿಸ್ತಾನೆ. ಮೈಗೊಂದು ಕೋಟು ತಲೆಗೊಂದು ಹ್ಯಾಟು ಕೊಟ್ಟು, ಹಾದಿ ತೋರಿಸ್ತಾನೆ. ನಾನು, ಒಂದು ಜತೆ ಉಡುಪು ಸಿದ್ಧವಾಗಿಟ್ಕೊಂಡು ಅವನನ್ನು ಮುಂದಕ್ಕೆ ಕರಕೊಂಡು ಹೋಗ್ತೀನಿ."

"ಪರವಾಗಿಲ್ಲ. ಆದರೆ ಈ ಗೊಬೂನ್ ಯಾರು?"

"ಆತ ನಿಮಗೆ ಗೊತ್ತು. ಅವನ ಕೊಠಡೀಲಿ ನೀವೊಮ್ಮೆ ಅಭ್ಯಾಸ ಕೂಟ ನಡೆಸಿದ್ದಿರಿ."

"ಓ, ನೆನಪಾಯ್ತು. ಸ್ವಲ್ಪ ವಿಚಿತ್ರ ಮನುಷ್ಯ."

"ನಿವೃತ್ತ ಸೈನಿಕ. ಡಬ್ಬ ತಯಾರಿಸ್ತಾನೆ. ಬೆಳವಣಿಗೆ ಹೊಂದಿರೋ ಬುದ್ಧಿವಂತನೇನೂ ಅಲ್ಲ. ಆದರೆ, ಅನ್ಯಾಯ ಹಿಂಸೇನೆಲ್ಲ ಹೃದಯದ ಆಳದಿಂದ ದ್ವೇಷಿಸ್ತಾನೆ.... ಒಂದು ರೀತಿಯ ತತ್ವಜ್ಞಾನಿ," ಎಂದು ಸಾಷ ಕಿಟಕಿಯ ಹೊರಗೆ ನೋಡುತ್ತ ವಿಚಾರಮಗ್ನಳಾಗಿ ಹೇಳಿದಳು. ತಾಯಿ ಮೌನವಾಗಿ ಆ ಮಾತುಗಳನ್ನು ಆಲಿಸಿದಳು. ಅಸ್ಪಷ್ಟ ವಿಚಾರವೊಂದು ಆಕೆಯ ಮನಸ್ಸಿನೊಳಗೆ ಎದ್ದಿತು.

"ತನ್ನ ಸೋದರಳಿಯನ್ನ ಹೊರಗೆ ತರ್ಬೇಕೂಂತ ಗೊಬೂನ್‌ನ ಅಪೇಕ್ಷೆ. ಆ ಯೇವ್‌ಚೆಂಕೊ ಗೊತ್ತಲ್ಲ? ನೀವು ಅವನನ್ನ ಮೆಚ್ಕೊಂಡಿದ್ರಿ. ಸ್ವಚ್ಛವಾಗಿ ಚೊಕ್ಕಟವಾಗಿರ್ತಿದ್ದ ಯಾವಾಗ್ಲೂ."

ನೆನಪಿದೆಯೆಂದು ನಿಕೊಲಾಯ್ ತಲೆದೂಗಿದ.

ಸಾಷ ಮುಂದುವರಿಸಿದಳು:

"ಆತ ಎಲ್ಲಾ ಏರ್ಪಾಟುಗಳನ್ನೂ ಮಾಡಿದ್ದಾನೆ. ಆದರೆ ನನಗೇನೋ, ಇದು ಯಶಸ್ವಿಯಾಗ್ತದೋ ಇಲ್ಲವೋ ಅಂತ ಸಂದೇಹ ಶುರುವಾಗಿದೆ. ಎಲ್ಲಾ ಕೈದಿಗಳೂ ಗಾಳಿಸೇವನೆ ಮಾಡೋ ಹೊತ್ತಿಗೆ ಇದಾಗ್ಬೇಕು. ಏಣಿ ನೋಡಿದ ತಕ್ಷಣ, ಅದನ್ನ ಉಪಯೋಗಿಸೋಕೆ ಬಹಳ ಜನ ಮುಂದೆ ಬರ್ಬಹುದೂಂತ ನನಗೆ ಭಯ."

ಆಕೆ ಕಣ್ಣುಗಳನ್ನು ಮುಚ್ಚಿಕೊಂಡು ಮೌನವಾದಳು. ತಾಯಿ ಅವಳ ಬಳಿಗೆ ನಡೆದಳು.

"ಹೀಗೆ ಮಾಡಿ ಕೆಡಿಸ್ಬಿಡ್ತಾರೆ...."

ನಿಕೊಲಾಯ್ ಮತ್ತು ಸಾಷ, ಅವರ ಹಿಂದೆ ತಾಯಿ, ಹೀಗೆ ಮೂವರೂ ಕಿಟಕಿಯ ಬಳಿ ನಿಂತರು. ಅವರ ತೀವ್ರಗತಿಯ ಸಂಭಾಷಣೆ, ತಾಯಿಯ ಹೃದಯದಲ್ಲಿ ಮಿಶ್ರಭಾವನೆಗಳನ್ನುಂಟುಮಾಡಿತು.

"ನಾನೂ ಹೋಗ್ತೀನಿ," ಎಂದು ತಾಯಿ ಒಮ್ಮೆಲೆ ಹೇಳಿದಳು.

"ಯಾಕೆ?" ಎಂದಳು ಸಾಷ.

"ಹೋಗಬೇಡಿಯಮ್ಮ. ನಿಮಗೇನಾದರೂ ಸಂಭವಿಸ್ಬಹುದು. ಹೋಗ್ಬೇಡಿ," ಎಂದು ನಿಕೊಲಾಯ್ ಹಿತವಚನವನ್ನಾಡಿದ.

ತಾಯಿ ಆತನನ್ನು ನೋಡಿದಳು.

"ಇಲ್ಲ, ನಾನು ಹೋಗ್ತೀನಿ," ಎಂದು, ಮೃದುವಾಗಿ ಆದರೆ ದೃಢವಾಗಿ, ಆಕೆ ಹೇಳಿದಳು.

ಅವರಿಬ್ಬರೂ ಪರಸ್ಪರರನ್ನು ತೀವ್ರವಾಗಿ ನೋಡಿಕೊಂಡರು.

"ನಿಮ್ಮ ಮನಸ್ನಲ್ಲಿರೋದು ನನಗೆ ಅರ್ಥವಾಯ್ತು," ಎಂದು ಸಾಷ ಭುಜ ಕುಣಿಸಿ ಹೇಳಿದಳು. ಆ ಬಳಿಕ, ತಾಯಿಯ ತೋಳು ಹಿಡಿದುಕೊಂಡು, ಆಕೆಯ ಹೃದಯಕ್ಕೆ ಪ್ರೀತಿಪಾತ್ರವಾಗಿದ್ದ ಸರಳ ಸ್ವರದಲ್ಲಿ ಹೇಳಿದಳು:

"ಆದರೆ ಇನ್ನೂ ಆಸೆ ಇಟ್ಕೊಂಡಿರೋದರಲ್ಲಿ ಯಾವ ಅರ್ಥವೂ ಇಲ್ಲ. ಅದನ್ನು ನೀವೇ ತಿಳೀಬೇಕು."

ತಾಯಿ ಸಾಷಳನ್ನು ನಡುಗುವ ಕೈಯಿಂದ ತನ್ನೆಡೆಗೆ ಎಳೆದುಕೊಂಡು ಹೇಳಿದಳು:

"ಅಯ್ಯೋ ಮುದ್ದು: ನನ್ನ ಕರಕೊಂಡು ಹೋಗು. ನನ್ನಿಂದ ನಿಮಗೇನೂ ತೊಂದರೆಯಾಗದು! ನಾನು ಹೋಗಲೇ ಬೇಕು! ಅದು – ತಪ್ಪಿಸಿಕೊಳ್ಳೋದು – ನಿಜವಾಗಿಯೂ ಸಾಧ್ಯ ಅಂತ ನನಗೆ ನಂಬಿಕೆಯಾಗೋದೇ ಇಲ್ಲ."

"ತಾಯಿಯೂ ಬರ್ತಾಳೆ," ಎಂದು ಸಾಷ ನಿಕೊಲಾಯ್‌ಗೆ ಹೇಳಿದಳು.

"ಅದು ನಿಮಗೆ ಸೇರಿದ್ದು," ಎಂದು ಆತ ತಲೆತಗ್ಗಿಸಿ ಉತ್ತರವಿತ್ತನು.

"ಆದರೆ ನಾವು ಜತೇಲ್ಲಿ ಇರ್ರೂಕೂಡದು. ತರಕಾರಿ ತೋಟಗಳಿಗೆ ಮುಂದೆ ಬಯಲಿದೆಯಲ್ಲ, ಅಲ್ಲಿಗೆ ನೀವು ಹೋಗಿ. ಜೈಲಿನ ಗೋಡೆ ಅಲ್ಲಿಂದ ಕಾಣಿಸ್ತದೆ.... ಆದರೆ, ಯಾಕೆ ಬಂದೇಂತ ಯಾರಾದರೂ ಕೇಳಿದರೆ ಏನು ಉತ್ತರ ಕೊಡ್ತೀರಾ?"

"ಏನಾದರೂ ಹೇಳ್ತೀನಿ!" ಎಂದು ತಾಯಿ ಆತುರದಿಂದ ಉತ್ತರವಿತ್ತಳು.

ಸಾಷ ಎಚ್ಚರಿಸುತ್ತ ನುಡಿದಳು:

"ಸೆರೆಮನೆ ಕಾವಲುಗಾರರಿಗೆ ನೀವು ಗೊತ್ತು ಅನ್ನೋದನ್ನ ಮರೀಬೇಡಿ! ಅವರು ಅಲ್ಲಿ ನಿಮ್ಮನ್ನ ನೋಡಿದ್ರೆ...."

"ಅವರು ನನ್ನ ನೋಡೋದಿಲ್ಲ!"

ಅವರೆಗೂ ಆಕೆಯ ಹೃದಯದಲ್ಲೇ ರೂಪುಗೊಳ್ಳುತ್ತಿದ್ದ ಆಸೆಯೊಂದು, ಈಗ ಒಮ್ಮೆಲೆ ತಪ್ತವಾಗಿ ಪ್ರಜ್ವಲಿಸಿತು.

"ಪ್ರಾಯಶಃ ಅವನು ಕೂಡಾ!"

....ಒಂದು ಘಂಟೆಯ ಬಳಿಕ ತಾಯಿ ಸೆರೆಮನೆಯ ಹಿಂಭಾಗದ ಬಯಲಿನಲ್ಲಿದ್ದಳು. ತೀಕ್ಷ್ಣವಾದ ಗಾಳಿಯೊಂದು ಬೀಸುತ್ತಿತ್ತು. ಅದು ಆಕೆಯ ಉಡುಗೆಯನ್ನು ಹರಿಯಲೆತ್ನಿಸಿತು. ಹೆಪ್ಪುಗಟ್ಟಿದ ನೆಲಕ್ಕೆ ಹೊಡೆಯಿತು. ತಾಯಿ ದಾಟುತ್ತಿದ್ದ ತೋಟದ ಮುರುಕು ಬೇಲಿಯನ್ನು ತೂಗಾಡಿಸಿತು. ಪೂರ್ಣಶಕ್ತಿಯಿಂದ ಸೆರೆಮನೆಯ ಗೋಡೆಗೆ ಬಡೆಯಿತು. ಸೆರೆಮನೆಯೊಳಗಿನ ಅಂಗಳದಿಂದ ಮಾನವರ ಮಾತುಗಳನ್ನೆತ್ತಿ ಆಕಾಶಕ್ಕೆ ಹಾರಿಸಿತು. ಮೋಡಗಳು ಧಾವಿಸುತ್ತ, ಆಗಾಗ್ಗೆ ಕ್ಷಣಕಾಲ, ನೀಲಿ ಆಕಾಶಕ್ಕೆ ತಮ್ಮ ನಡುವೆ ಖಾಲಿ ಜಾಗವನ್ನು ತೋರಿಸುತ್ತಿದ್ದುವು.

ತಾಯಿಯ ಬೆನ್ನ ಹಿಂದೆ, ಒಂದು ಕೈದೋಟವಿತ್ತು. ಎದುರುಗಡೆ ಸ್ಮಶಾನವಿತ್ತು. ಬಲಕ್ಕೆ ಸುಮಾರು ಎಪ್ಪತ್ತು ಅಡಿಗಳಾಚೆ ಸೆರೆಮನೆಯಿತ್ತು. ಸ್ಮಶಾನದ ಬಳಿ

ಸೈನಿಕನೊಬ್ಬ ತನ್ನ ಕುದುರೆಯನ್ನು ಉದ್ದನೆಯ ಹಗ್ಗದಿಂದ ತನ್ನ ಸುತ್ತ ಓಡಿಸುತ್ತಿದ್ದ. ಇನ್ನೊಬ್ಬ ಸೈನಿಕ ಆತನ ಬಳಿಯಲ್ಲೇ ಕೂಗಾಡುತ್ತ ನಗುತ್ತ ಸಿಳ್ಳುಹಾಕುತ್ತ ನೆಲ ತುಳಿಯುತ್ತ ನಿಂತಿದ್ದ. ಸೆರೆಮನೆಯ ಬಳಿ ಬೇರೆ ಯಾರೂ ಇರಲಿಲ್ಲ.

ತಾಯಿ ಮೆಲ್ಲನೆ ಅವರನ್ನು ದಾಟಿ, ಸ್ಮಶಾನವನ್ನು ಸುತ್ತುವರಿದಿದ್ದ ಬೇಲಿಯತ್ತ ಬಂದು, ತನ್ನ ಹಿಂದುಗಡೆ ಮತ್ತು ಬಲಕ್ಕೆ ಕಳ್ಳತನದ ನೋಟ ಬೀರಿದಳು. ಒಮ್ಮೆಲೆ ತನ್ನ ಮೊಣಕಾಲುಗಳು ಶಕ್ತಿಗುಂದಿ ಕುಸಿದಂತೆ, ನೆಲದೊಡನೆ ಸೇರಿಹೋಗಿ, ಪಾದಗಳು ಹೆಪ್ಪುಗಟ್ಟಿ ಭಾರವಾದಂತೆ, ತಾಯಿಗೆ ತೋರಿತು. ಮೂಲೆಯಾಚೆಯಿಂದ, ಬೆನ್ನು ಬಾಗಿದ್ದ ದೀಪ ಹಚ್ಚುವವನೊಬ್ಬ ಹೆಗಲ ಮೇಲೆ ಏಣಿ ಇರಿಸಿಕೊಂಡು ಬಂದ. ದೀಪ ಹಚ್ಚುವವರು ವೇಗವಾಗಿ ನಡೆಯುವಂತೆ ಆತನೂ ನಡೆಯುತ್ತಿದ್ದ. ಭಯದಿಂದ ಕಣ್ಣುಬಿಡುತ್ತಾ ತಾಯಿ ಸೈನಿಕರತ್ತ ನೋಡಿದಳು: ಅವರು ಒಂದೆಡೆ ನಿಂತಿದ್ದರು. ಕುದುರೆ ಅವರ ಸುತ್ತ ಓಡುತ್ತಿತ್ತು. ತಾಯಿ ಏಣಿಯಿದ್ದ ಮನುಷ್ಯನತ್ತ ನೋಡಿದಳು: ಅತ, ಏಣಿಯನ್ನಾಗಲೆ ಗೋಡೆಗೆ ಒರಗಿಸಿ, ನಿಧಾನವಾಗಿ ಮೇಲಕ್ಕೇರುತ್ತಿದ್ದ. ಸೆರೆಮನೆಯ ಅಂಗಳದೊಳಕ್ಕೇನನ್ನೋ ಸನ್ನೆಮಾಡಿ, ಆತ ಬೇಗ ಬೇಗನೆ ಕೆಳಕ್ಕಿಳಿದು, ಮೂಲೆಯಾಚೆ ಮಾಯವಾದ. ತಾಯಿಯ ಎದೆಗುಂಡಿಗೆ ಗಟ್ಟಿಯಾಗಿ ಹೊಡೆದುಕೊಂಡಿತು. ಕ್ಷಣಗಳು ಯುಗಗಳಾದುವು. ಸೆರೆಮನೆಯ ಗೋಡೆಯ ಹಿನ್ನೆಲೆಯಲ್ಲಿ ಏಣಿ ಸರಿಯಾಗಿ ಕಾಣಿಸುತ್ತಲೇ ಇರಲಿಲ್ಲ. ಗೋಡೆ ಹೊಲಸಾಗಿಯೇ ಇತ್ತು. ಅಲ್ಲಲ್ಲಿ ಗಾರೆಯೊಡೆದು ಕೆಳಗಿನ ಇಟ್ಟಿಗೆಗಳು ಕಾಣಿಸುತ್ತಿದ್ದುವು. ಒಮ್ಮೆಲೆ ಕರಿಯ ತಲೆಯೊಂದು ಗೋಡೆಯ ಮೇಲೆ ಕಾಣಿಸಿತು. ಆಮೇಲೊಂದು ದೇಹ ಗೋಡೆಗಡ್ಡವಾಗಿ ಕಾಲುಗಳನ್ನು ಚಾಚಿ, ಕೆಳಕ್ಕಿಳಿದುಹೋಯಿತು. ಚಪ್ಪಟೆಯಾಗಿದ್ದ ಟೋಪಿ ಧರಿಸಿದ ಇನ್ನೊಂದು ತಲೆ ಕಾಣಿಸಿಕೊಂಡಿತು; ಕರಿಯ ದೇಹವೊಂದು ನೆಲದ ಮೇಲುರುಳಿ ಮೂಲೆಯಾಚೆ ಮಾಯವಾಯಿತು. ಮಿಹಾಯ್‌ಲೊ ಎದ್ದುನಿಂತು, ಸುತ್ತಲೂ ನೋಡಿ, ತಲೆಯಲುಗಿಸಿದ....

"ಓಡು, ಓಡು !" ಎಂದು ತಾಯಿ, ಪಾದಗಳಿಂದ ನೆಲವನ್ನು ತುಳಿಯುತ್ತ ಪಿಸುಗುಟ್ಟಿದಳು.

ಆಕೆಯ ಕಿವಿಗಳ ಬಳಿ ಏನನ್ನೋ ಬಾರಿಸಿದಂತಾಯಿತು. ಗಟ್ಟಿಯಾದ ಸ್ವರಗಳು ಆಕೆಗೆ ಕೇಳಿಸಿದುವು. ಗೋಡೆಯ ಮೇಲೆ ಮೂರನೆಯ ತಲೆಯೊಂದು ಕಾಣಿಸಿತು. ತಾಯಿ, ಕೈಯಿಂದ ಎದೆಯನ್ನೊತ್ತಿಕೊಳ್ಳುತ್ತಾ ಉಸಿರು ಬಿಗಿಹಿಡಿದು ನೋಡಿದಳು. ಗಡ್ಡವಿಲ್ಲದ ತೆಳುಬಣ್ಣದ ಕೂದಲಿನ ಯುವಕನೊಬ್ಬನ ತಲೆ ಹಗ್ಗಹರಿದು ಬಂದಂತೆ ಮೇಲೇರಿದರೂ ಒಮ್ಮೆಲೆ ಗೋಡೆಯ ಹಿಂದೆ ಅದೃಶ್ಯವಾಯಿತು. ಕೂಗುಗಳು ಹೆಚ್ಚು ಗಟ್ಟಿಯಾಗಿಯೂ ಹೆಚ್ಚು ಉದ್ವಿಗ್ನವಾಗಿಯೂ ಕೇಳಿಸಿದುವು. ಗಾಳಿಯು ಸಿಳ್ಳಿನ ತೀಕ್ಷ್ಣ ಸ್ವರಗಳನ್ನು ದೂರಕ್ಕೊಯ್ದಿತು. ಮಿಹಾಯ್‌ಲೊ ಗೋಡೆಯುದ್ದಕ್ಕೂ ನಡೆದ. ಸೆರೆಮನೆ ಹಾಗೂ ಶಹರದ ಮನೆಗಳ ನಡುವೆ ಇದ್ದ ಖಾಲಿ ಜಾಗವನ್ನು

ಹಾದು ಹೋದ. ಆತ ಬಹಳ ನಿಧಾನವಾಗಿ ನಡೆಯುತ್ತಿದ್ದಂತೆ, ತಲೆಯನ್ನು ಬಹಳ ಎತ್ತರವಾಗಿ ಓಡಿದಿದ್ದಂತೆ, ತಾಯಿಗೆ ತೋರುತ್ತಿತ್ತು. ಒಮ್ಮೆ ಆತನ ಮುಖವನ್ನು ನೋಡಿದವರು ಯಾರೂ ಎಂದಿಗೂ ಅದನ್ನು ಮರೆಯುವ ಹಾಗಿರಲಿಲ್ಲ.

"ಬೇಗ ! ಓಡು !" ಎಂದು ತಾಯಿ ಪಿಸುಗುಟ್ಟಿದಳು.

ಜೈಲು ಗೋಡೆಯೊಳಗಡೆ ದೊಡ್ಡ ಸಪ್ಪಳವಾಯಿತು. ಗಾಜು ಒಡೆದು ಪುಡಿಯಾದ ಸದ್ದು ಕೇಳಿಸಿತು. ಸೈನಿಕರಲ್ಲೊಬ್ಬ ಪಾದಗಳನ್ನು ಭದ್ರವಾಗಿ ನೆಲದ ಮೇಲೆ ಊರಿ, ಕುದುರೆಯನ್ನು ಕಟ್ಟಿದ್ದ ಹಗ್ಗವನ್ನೆಳೆಯುತ್ತಿದ್ದ; ಇನ್ನೊಬ್ಬ ಮುಷ್ಟಿಯನ್ನು ಬಾಯಿಯ ಮಟ್ಟಕ್ಕೇರಿಸಿ, ಸೆರೆಮನೆಯತ್ತ ನೋಡಿ ಏನನ್ನೋ ಗಟ್ಟಿಯಾಗಿ ಕೂಗಿದ. ಕೂಗಿದಮೇಲೆ, ಉತ್ತರಕ್ಕೆಂದು ಕಿವಿಗೆ ಅಂಗೈ ಆನಿಸಿ ಗಾಳಿಯತ್ತ ಕಿವಿಗೊಟ್ಟ.

ತಾಯಿ ಎಲ್ಲಾ ದಿಕ್ಕುಗಳಿಗೂ ಹೊರಳಿ ನೋಡುತ್ತ ಪ್ರಯಾಸಪಡುತ್ತ ನಿಂತಳು. ಆಕೆಯ ಕಣ್ಣುಗಳು ಪ್ರತಿಯೊಂದನ್ನೂ ನೋಡಿದವು. ಆದರೆ ಯಾವುದನ್ನೂ ನಂಬಲಿಲ್ಲ. ಜಟಿಲವಾದದ್ದು, ಗಂಡಾಂತರದ್ದು ಎಂದು ಆಕೆ ಕಲ್ಪಿಸಿದ್ದ ಘಟನೆ, ಕೆಲವೇ ನಿಮಿಷಗಳಲ್ಲಿ ಸುಲಭವಾಗಿ ಮುಗಿದುಹೋಗಿತ್ತು. ಈ ವೇಗ ಆಕೆಯನ್ನು ಮೂಕಳಾಗಿ ಮಾಡಿ, ವಿಚಾರದ ತೀಕ್ಷ್ಣತೆಯನ್ನು ಮಂದಗೊಳಿಸಿತು. ರೀಬಿನ್ ಆಗಲೆ ಕಣ್ಮರೆಯಾಗಿದ್ದ ; ಉದ್ದನೆಯ ಕೋಟು ಧರಿಸಿದ್ದ ಎತ್ತರದ ಮನುಷ್ಯನೊಬ್ಬ ಬೀದಿಯಲ್ಲಿ ನಡೆದು ಹೋಗುತ್ತಿದ್ದ; ಚಿಕ್ಕ ಹುಡುಗಿಯೊಬ್ಬಳು ವೇಗವಾಗಿ ಓಡುತ್ತಿದ್ದಳು. ಸೆರೆಮನೆಯ ಮೂವರು ಕಾವಲುಗಾರರು, ಬಲತೋಳುಗಳನ್ನು ಮುಂದಕ್ಕೆ ಚಾಚುತ್ತಾ, ಒಬ್ಬರಿಗೊಬ್ಬರು ಸಮೀಪವಾಗಿಯೆ, ಜೈಲಿನ ಮೂಲೆಯಾಚೆಯಿಂದ ಓಡಿ ಬಂದರು. ಸೈನಿಕರಲ್ಲೊಬ್ಬ ಅವರನ್ನು ಸಂಧಿಸಲೆಂದು ಓಡಿದ. ಇನ್ನೊಬ್ಬ, ಕುದುರೆಯ ಬೆನ್ನ ಮೇಲೆ ಏರಲೆಂದು ಅದರ ಸುತ್ತಲೂ ಓಡಿದ. ಆದರೆ ಆ ಪ್ರಾಣಿ ಹಟವಾದಿಯಾಗಿತ್ತು. ನಿಂತಲ್ಲಿ ನಿಲ್ಲದೆ ಕುಪ್ಪಳಿಸಿ ಕುಣಿಯುತ್ತಿತ್ತು. ಕುದುರೆಯೊಡನೆಯೇ ಉಳಿದುದೆಲ್ಲವೂ ಹಾರಾಡುತ್ತಿದ್ದ ಹಾಗೆ ತೋರಿತು. ಸಿಳ್ಳುಗಳ ಧ್ವನಿ, ಹುಚ್ಚೆದ್ದ ಛಲದಿಂದ ಗಾಳಿಯನ್ನು ಭೇದಿಸುತ್ತ ಬಂತು. ಈ ಗಾಬರಿಯ ನಿರಾಶೆಯ ಕೂಗುಗಳು, ಅಪಾಯದ ಭಾವನೆಯನ್ನು ತಾಯಿಯಲ್ಲಿ ಉಂಟುಮಾಡಿದುವು. ಆಕೆ ನಡುಗಿ, ಸ್ಮಶಾನದ ಬೇಲಿಯುದ್ದಕ್ಕೂ, ಕಾವಲುಗಾರರ ಮೇಲೆ ಕಣ್ಣಿಡುತ್ತ ನಡೆದಳು. ಆದರೆ ಅವರೂ ಸೈನಿಕರೂ ಜೈಲಿನ ಇನ್ನೊಂದು ಮೂಲೆಯಾಚೆ ಮರೆಯಾದರು. ಬೇಗನೆ, ಗುಂಡಿ ಹಾಕದೆಯೇ ಕೋಟು ಧರಿಸಿದ್ದ ವ್ಯಕ್ತಿಯೊಬ್ಬ ಅವರನ್ನು ಹಿಂಬಾಲಿಸಿದ. ಆತ ಸೆರೆಮನೆಯ ಸಹಾಯಕ ಮುಖ್ಯಸ್ಥನೆಂದು ತಾಯಿ ಗುರುತಿಸಿದಳು. ಎಲ್ಲಿಂದಲೋ ಪೋಲೀಸರೂ ಉದ್ವೇಗಗೊಂಡಿದ್ದ ಪ್ರೇಕ್ಷಕರೂ ಬಂದು ಸೇರಿದರು.

ಗಾಳಿ, ಸಂತೋಷಪಡುತ್ತಿದೆಯೋ ಎನ್ನುವಂತೆ, ಸುತ್ತು ಸುತ್ತು ಕುಣಿಯುತ್ತ ಕೆಳಕ್ಕಿಳಿಯಿತು. ತಾಯಿಯ ಕಿವಿಗಳಿಗೆ, ಕೂಗುಗಳ ಸಿಳ್ಳುಗಳ ಹರಿದ ಚೂರಾದ ಎಳೆಗಳನ್ನು ತಂದು ತಲಪಿಸಿತು.... ಈ ಗಲಭೆಯೆಲ್ಲ ತಾಯಿಗೆ ಹಿತವೆನಿಸಿತು. ಆಕೆ ಸಂತೋಷದಿಂದ, ವೇಗವಾಗಿ ಹೆಜ್ಜೆಗಳನ್ನಿಟ್ಟು ನಡೆಯುತ್ತ, ಯೋಚಿಸಿದಳು:

"ಅವನೂ ಇಷ್ಟೇ ಸುಲಭವಾಗಿ ಹೊರಬರಬಹುದಿತ್ತು...."

ಒಮ್ಮೆಲೆ ಇಬ್ಬರು ಪೋಲೀಸರು ಮೂಲೆಯಾಚೆಯಿಂದ ಧಾವಿಸಿ ಬಂದರು.

"ನಿಲ್ಲು!" ಎಂದು ಅವರಲ್ಲೊಬ್ಬ ಉಸಿರಿಗಾಗಿ ಏದುತ್ತ ಕೂಗಿದ: "ಗಡ್ಡ ವಿದ್ದ–ಒಬ್ಬ ಮನುಷ್ಯನನ್ನ–ನೀನು ನೋಡಿದ್ಯಾ?"

ತೋಟಗಳ ದಿಕ್ಕಿನತ್ತ ತಾಯಿ ಬೊಟ್ಟು ಮಾಡಿದಳು.

"ಆ ಕಡೆಗೆ ಓಡಿದ," ಎಂದು ಆಕೆ ಶಾಂತವಾಗಿ ಹೇಳಿದಳು. "ಯಾಕೆ?..."

"ಯೆಗೋರೊವ್! ಶೀಟಿ ಊದು!"

....ತಾಯಿ ಮನೆಗೆ ಹೊರಟಳು. ಯಾವುದಕ್ಕಾಗಿಯೋ ಆಕೆಗೆ ಖೇದವೆನಿಸಿತ್ತು. ಹೃದಯದಲ್ಲಿ ಕಹಿಯಾದ ವಿಷಾದದ ಒಂದು ಭಾವನೆ ಇತ್ತು. ಬಯಲು ಪ್ರದೇಶ ವನ್ನು ದಾಟಿ ಬೀದಿಗಿಳಿದಾಗ ಗಾಡಿಯೊಂದು ಆಕೆಯನ್ನು ದಾಟಿ ಹೋಯಿತು. ಆಕೆ ಗಾಡಿಯೊಳಕ್ಕೆ ದೃಷ್ಟಿ ಹಾಯಿಸಿದಳು. ಅಲ್ಲಿ, ತೆಳುಬಣ್ಣದ ಮೀಸೆಯ, ಬಾಡಿದ ಆಯಾಸಗೊಂಡ ಮುಖದ, ಒಬ್ಬ ಯುವಕ ಕುಳಿತಿದ್ದ. ಆತನೂ ಆಕೆಯನ್ನು ನೋಡಿದ. ಆತನು ಪಕ್ಕಕ್ಕೆ ತಿರುಗಿ ಕುಳಿತಿದ್ದುದರಿಂದ, ಆತನ ಬಲ ಭುಜ ಎಡ ಭುಜಕ್ಕಿಂತ ಸ್ವಲ್ಪ ಎತ್ತರವಾಗಿದ್ದಂತೆ ತೋರಿತು.

....ನಿಕೊಲಾಯ್ ಸಂತೋಷದಿಂದ ಆಕೆಯನ್ನು ಬರಮಾಡಿದ.

"ಏನಾಯ್ತು?"

"ಎಲ್ಲಾ ಸರಿಯಾಗಿಯೇ ಆಯ್ತೂಂತ ಕಾಣುತ್ತೆ."

ಪ್ರತಿಯೊಂದು ವಿವರವನ್ನೂ ನೆನಪಿಗೆ ತಂದುಕೊಳ್ಳಲೆತ್ನಿಸುತ್ತಾ, ಘಟನೆಯ ವಿಷಯವಾಗಿ ತಾಯಿ ಆತನಿಗೆ ಹೇಳಿದಳು. ಆದರೆ, ಅದು ಯಾರದೋ ಇನ್ನೊಬ್ಬ ರಿಂದ ಕೇಳಿದ, ಅದರ ಸತ್ಯಾಂಶವನ್ನು ಸ್ವತಃ ತಾನು ನಂಬದ, ಕತೆ ಎಂಬಂತೆ ತಾಯಿ ಮಾತನಾಡಿದಳು.

ತನ್ನ ಕೈಗಳನ್ನು ತಿಕ್ಕಿಕೊಳ್ಳುತ್ತಾ ನಿಕೊಲಾಯ್ ಹೇಳಿದ:

"ನಮ್ಮ ಅದೃಷ್ಟ ಚೆನ್ನಾಗಿದೆ. ನಿಮಗೇನಾದರೂ ಆಗಿಬಿಡಬಹುದೂಂತ ನಾನು ಎಷ್ಟೊಂದು ಗಾಬರಿಯಾಗಿದ್ದೆನೋ ಅದು ದೇವರಿಗೇ ಗೊತ್ತು. ಕೇಳಿ, ನೀಲೊವ್ನ. ಈ ಸ್ನೇಹಿತನ ಸಲಹೇನ ತಗೊಳ್ಳಿ. ವಿಚಾರಣೆಯ ವಿಷಯದಲ್ಲಿ ಹೆದರಿಕೆ ಬಿಟ್ಬಿಡಿ. ಅದು ಎಷ್ಟು ಬೇಗ್ನೆ ಮುಗೀತದೋ ಅಷ್ಟು ಬೇಗ್ನೆ ಪಾವೆಲ್ ವಿಮುಕ್ತನಾಗ್ತಾನೆ. ಗಡೀಪಾರಾಗಿ ಹೋಗುವಾಗ್ಲೇ ಆತ ತಪ್ಪಿಸ್ಕೊಂಡರೂ ತಪ್ಪಿಸ್ಕೋಬಹುದು. ವಿಚಾ ರಣೆಯ ವಿಷಯವಾಗಿ ಹೇಳೋದಾದ್ರೆ–ಅದು ಹೆಚ್ಚು ಕಡಮೆ ಹೀಗಿರುತ್ತೆ...."

ವಿಚಾರಣೆಯ ಕ್ರಮವನ್ನು ಆತ ಬಣ್ಣಿಸತೊಡಗಿದ. ತಾಯಿಯನ್ನು ಸಂತೈ ಸಲು ಆತ ಯತ್ನಿಸುತ್ತಿದ್ದ. ಆದರೆ ಮಾತನಾಡುತ್ತಿದ್ದಂತೆ, ಸ್ವತಃ ಆತನೇ ಯಾವುದೋ ಒಂದು ವಿಚಾರದಲ್ಲಿ ಭೀತನಾಗಿದ್ದುದನ್ನು ತಾಯಿ ಮನಗಂಡಳು.

ಆಕೆ ಒಮ್ಮೆಲೆ ಕೇಳಿದಳು:

"ಹೇಳಬಾರದ್ದನ್ನೇನಾದರೂ ನ್ಯಾಯಸ್ಥಾನದಲ್ಲಿ ನಾನು ಹೇಳಬಹುದೂಂತ ನಿಮಗೆ ಭಯವೆ? ಅಥವಾ ನಾನು ಅಲ್ಲಿ ಏನನ್ನಾದರೂ ಯಾಚಿಸ್ಬಹುದೂಂತ ಭಯವೆ?"

ಆತ ಹೌಹಾರಿ, ತಾಯಿಯ ಮಾತನ್ನು ಅಲ್ಲಗಳೆಯುವವನಂತೆ ಕೈ ಬೀಸಿದ.

"ಖಂಡಿತವಾಗಿಯೂ ಇಲ್ಲ!" ಎಂದು ಆತ ನೊಂದುಕೊಂಡ ಧ್ವನಿಯಲ್ಲಿ ಹೇಳಿದ.

"ನನಗೆ ಹೆದರಿಕೆಯಾಗ್ತದೆ. ಅದು ಸತ್ಯ. ಆದರೆ ಯಾವುದರ ಹೆದರಿಕೆ ಅನ್ನೋದು ನನಗೆ ಗೊತ್ತಿಲ್ಲ," ಎಂದಳು ತಾಯಿ.

ಆಕೆ ಮಾತು ನಿಲ್ಲಿಸಿ, ಕೊಠಡಿಯ ಉದ್ದಗಲಕ್ಕೂ ದೃಷ್ಟಿ ಹರಿಸಿದಳು.

"ಪಾಷನ ಜತೇಲಿ ಅವರು ಒರಟಾಗಿ ಮಾತಾಡ್ಬಹುದೂಂತ ಒಮ್ಮೊಮ್ಮೆ ನನಗೆ ಅನಿಸುತ್ತೆ. 'ಏ ಹೊಲಸು ರೈತ!' ಅಂತ ಅವರು ಹೇಳ್ಬಹುದು. ಇಲ್ಲವೆ, 'ಏ ದುಡಿಯೋನಿಗೆ ಹುಟ್ಟೋನೆ! ಇದೆಲ್ಲಾ ಏನು ಗಲಾಟೆ?' ಅಂತ ಅನ್ಬಹುದು. ಪಾವೆಲ್ ಸ್ವಾಭಿಮಾನಿ. ತಕ್ಕ ಪ್ರತ್ಯುತ್ತರ ಕೊಟ್ಟೇ ಕೊಡ್ತಾನೆ. ಅಥವಾ ಅಂದ್ರೇಯ್ ವ್ಯಂಗ್ಯವಾಗಿ ಏನಾದರೂ ಹೇಳ್ತಾನೆ. ಉಳಿದವರೂ ಅಷ್ಟೇ – ಸುಮ್ನಿರೋವರಲ್ಲ. ಇದೆಲ್ಲಾ ಯೋಚಿಸ್ತಾ ಏನೋ ವಿಚಾರ ಬರ್ತದೆ. ಇವರೆಲ್ಲಾ ಎದುರಾಡಿದ್ದಕ್ಕೆ, ಶಿಕ್ಷೆ – ನಾವು ಪುನಃ ಅವರನ್ನೆಂದೂ ನೋಡೋದು ಸಾಧ್ಯವಾಗದಂಥ ಶಿಕ್ಷೆ – ಕೊಟ್ಟರೆ?..."

ನಿಕೊಲಾಯ್ ಉತ್ತರವೀಯದೆ, ತನ್ನ ದಡ್ಡವನ್ನೆಳೆಯುತ್ತಾ ಹುಬ್ಬು ಗಂಟಿಕ್ಕಿದ.

ತಾಯಿ ಮೆಲುದನಿಯಲ್ಲಿ ಹೇಳಿದಳು:

"ಇಂಥ ವಿಚಾರಗಳನ್ನು ಮೆದುಳಿಂದ ಓಡಿಸೋ ಹಾಗೆಯೇ ಇಲ್ಲ.... ಆದ್ದರಿಂದಲೇ ವಿಚಾರಣೆ ಭಯಾನಕವಾಗಿ ತೋರ್ತದೆ! ಪ್ರತಿಯೊಂದನ್ನೂ ಎಳೆದು ತೆಗೆದು ಅವರು ತೂಗೋಕೆ ಶುರುಮಾಡ್ದಾಗ! ಎಷ್ಟೊಂದು ಭಯಾನಕ! ಹೆದರಿಕೆ ಹುಟ್ಟಿಸೋದು ಶಿಕ್ಷೆಯಲ್ಲ, ವಿಚಾರಣೆ. ಇದನ್ನ ಹ್ಯಾಗೆ ಹೇಳ್ಬೇಕೋ ನನಗೆ ತಿಳೀದು...."

ನಿಕೊಲಾಯ್ ತನ್ನನ್ನು ಅರ್ಥಮಾಡಿಕೊಳ್ಳಲಿಲ್ಲವೆಂದು ತಾಯಿಗೆ ತೋರಿತು. ಹೀಗಾಗಿ, ತನ್ನ ಹೃದಯದೊಳಗಿನ ಭಯಭೀತಿಗಳ ವಿಷಯ ಮಾತನಾಡುವುದು ಆಕೆಗೆ ಮತ್ತಷ್ಟು ಕಷ್ಟವಾಯಿತು.

## ೨೪

ಆಕೆಯ ಭೀತಿ, ಗಂಟಲಿಗೆ ಸುತ್ತಿಕೊಂಡಿದ್ದ ವಿಷದ ಪರೆಯಂತಿದ್ದು, ಉಸಿರಾಟವನ್ನು ದುಸ್ತರಗೊಳಿಸಿತು. ವಿಚಾರಣೆಯ ದಿನ ಬಂದಾಗ, ಹೃದಯದ ಮೇಲಿದ್ದ ಬಲು ಭಾರವಾದ ಹೊರೆಯಿಂದ ಬಾಗಿ, ತಾಯಿ ನ್ಯಾಯಸ್ಥಾನಕ್ಕೆ ಹೋದಳು.

ಕಾರಖಾನೆಯ ವಸತಿ ಪ್ರದೇಶದ ಹಲವಾರು ಪರಿಚಿತರನ್ನು ನ್ಯಾಯಸ್ಥಾನದ

ಬಳಿಯು ಬೀದಿಯಲ್ಲಿ ತಾಯಿ ಕಂಡಳು. ಅವರು ತಾಯಿಗೆ ವಂದಿಸಿದರು. ಆಕೆ ಮಾತನಾಡದೆ ಮರುವಂದನೆ ಮಾಡುತ್ತ, ಗಂಭೀರ ಮುಖಮುದ್ರೆಯ ಆ ಜನರ ಗುಂಪನ್ನು ಹಾದುಹೋದಳು. ನ್ಯಾಯಸ್ಥಾನದ ಒಳಾಂಗಣದಲ್ಲಿ ವಿಚಾರಣೆಯಾಗಲಿದ್ದವರ ಸಂಬಂಧಿಕರನ್ನು ತಾಯಿ ಕಂಡಳು. ಅವರು ಇಳಿ ಧ್ವನಿಯಲ್ಲಿ ಮಾತನಾಡುತ್ತಿದ್ದರು. ಮಾತು ಅನಗತ್ಯವೆಂದು ತಾಯಿಗೆ ತೋರಿತು. ಆಕೆಗೆ ಅವು ಅರ್ಥವಾಗಲಿಲ್ಲ. ಒಂದೇ ರೀತಿಯ ವ್ಯಥೆಯೇ ಎಲ್ಲರನ್ನೂ ಬಾಧಿಸುತ್ತಿತ್ತು. ತಾಯಿಗೆ ಇದರ ಅರಿವಿತ್ತು. ಆ ಅರಿವು ಆಕೆಯ ಹೃದಯವನ್ನು ಮತ್ತಷ್ಟು ಭಾರಗೊಳಿಸಿತು.

"ನನ್ನ ಪಕ್ಕದಲ್ಲೇ ಕೂತ್ಕೋ," ಎಂದು ಸಿಜೋವ್, ತಾನು ಕುಳಿತಿದ್ದಲ್ಲೆ ಬೆಂಚಿನ ಮೇಲೆ ಜಾಗ ಮಾಡಿಕೊಡುತ್ತ ಹೇಳಿದ.

ತಾಯಿ ಆತನ ಅಪೇಕ್ಷೆಗೆ ಅನುಸಾರವಾಗಿ ಅಲ್ಲಿಯೆ ಕುಳಿತು, ಉಡುಪನ್ನು ಸರಿಪಡಿಸಿ, ಸುತ್ತಲೂ ನೋಡಿದಳು. ಆಕೆಯ ಕಣ್ಣುಗಳ ಮುಂದೆ ಅಸ್ಪಷ್ಟವಾದ ಹಸುರು ಕೆಂಪು ಚುಕ್ಕೆಗಳೂ ಪಟ್ಟೆಗಳೂ ಸೊಗಸಾದ ಹಳದಿ ನೂಲುಗಳೂ ಕುಣಿದುವು.

"ನಮ್ಮ ಗ್ರೀಷನನ್ನ ಈ ಸ್ಥಿತಿಗೆ ತಂದೋನು ನಿನ್ನ ಮಗನೇ," ಎಂದು ತಾಯಿಯ ಪಕ್ಕದಲ್ಲಿ ಕುಳಿತಿದ್ದ ಹೆಂಗಸೊಬ್ಬಳು ಗೊಣಗಿದಳು.

"ಬಾಯ್ಮುಚ್ಚು, ನತಾಲ್ಯ," ಎಂದು ಸಿಜೋವ್ ಸಿಟ್ಟಾಗಿ ಹೇಳಿದ.

ತಾಯಿ, ಆ ಹೆಂಗಸನ್ನು ನೋಡಿದಳು. ಅವಳು ಸಮೋಯ್‌ಲೊವ್‌ನ ತಾಯಿ. ಅವಳಿಗಾಚೆ, ಬಕ್ಕತಲೆಯ ಸ್ಫುರದ್ರೂಪಿಯಾದ ನೀಳ ಮುಖದ ಇಳಿಬಿಟ್ಟಿದ್ದ ಕೆಂಪು ಗಡ್ಡದ ಆಕೆಯ ಗಂಡ ಕುಳಿತಿದ್ದ. ಮುಂದಕ್ಕೆ ನೇರವಾಗಿ ನೋಡುತ್ತಿದ್ದಂತೆ ಕಣ್ಣುಗಳನ್ನು ಆತ ಕಿರಿದುಗೊಳಿಸಿದ. ಆತ ಅನುಭವಿಸುತ್ತಿದ್ದ ಮಾನಸಿಕ ಚಿಂತೆಯ ಹೊರೆಯ ಕೆಳಗೆ ಆತನ ಗಡ್ಡ ಕಂಪಿಸಿತು.

ಎತ್ತರದ ಕಿಟಕಿಗಳಿಂದ ಮಂದವಾದ ಬೆಳಕು ನ್ಯಾಯಸ್ಥಾನದೊಳಕ್ಕೆ ಹರಿಯುತ್ತಿತ್ತು. ಹೊರಭಾಗದಲ್ಲಿ ಆ ಕಿಟಕಿಗಳಿಗೆ ಮಂಜು ಅಂಟಿಕೊಂಡಿತ್ತು. ಕಿಟಕಿಗಳ ನಡುವೆ, ಅಲಂಕೃತ ಚೌಕಟ್ಟಿನೊಳಗೆ ತ್ಸಾರ್ ಚಕ್ರವರ್ತಿಯ ಭಾವಚಿತ್ರ ತೂಗಾಡುತ್ತಿತ್ತು. ಆ ಭಾವಚಿತ್ರದ ಬದಿಗಳು, ನಸುಗೆಂಪು ಬಣ್ಣದ ಭಾರವಾದ ಕಿಟಕಿ ಪರದೆಗಳ ಮಡಿಕೆಗಳಿಂದ ಮುಚ್ಚಿದ್ದುವು. ಚಿತ್ರಕ್ಕಿದಿರಾಗಿ, ಹೆಚ್ಚು ಕಡಮೆ ಕೊಠಡಿಯಷ್ಟೇ ಅಗಲವಿದ್ದ ಮೇಜಿತ್ತು. ಹಸುರು ಬಣ್ಣದ ದೊರಗಾದ ಉಣ್ಣೆಯ ಬಟ್ಟೆಯಿಂದ ಮೇಜನ್ನು ಮುಚ್ಚಿದ್ದರು. ಬಲಬದಿಯ ಗೋಡೆಗೆ ಹೊಂದಿಕೊಂಡು ಕಂಬಿಗಳ ಹಿಂದೆ ಮರದ ಎರಡು ಬೆಂಚುಗಳನ್ನಿರಿಸಿದ್ದರು. ಎಡ ಗೋಡೆಗೆ ತಗಲಿ, ಎರಡು ಸಾಲುಗಳಲ್ಲಿ, ನಸುಗೆಂಪು ಬಣ್ಣದ ಬಟ್ಟೆ ಹೊದಿಸಿದ್ದ ಮೆತ್ತನೆಯ ಕುರ್ಚಿಗಳಿದ್ದುವು. ಹಸುರು ಕಾಲರುಗಳೂ ಚಿನ್ನಬಣ್ಣದ ಗುಂಡಿಗಳೂ ಇದ್ದ ಸಮವಸ್ತ್ರ ಧರಿಸಿದ್ದ ಸೇವಕರು, ಮೌನವಾಗಿ ಅವಸರವಾಗಿ ಹಿಂದಕ್ಕೂ ಮುಂದಕ್ಕೂ ಸರಿದಾಡುತ್ತಿದ್ದರು. ಮಬ್ಬು ವಾತಾವರಣವನ್ನು, ಪುಕ್ಕಲು ಪಿಸುಮಾತುಗಳೂ ಔಷಧಿಗಳ ಮಿಶ್ರಿತ ವಾಸನೆಗಳೂ ತುಂಬಿದ್ದುವು.

ಬಣ್ಣಗಳು, ಹೊಳಪು, ಸದ್ದುಗಳು, ವಾಸನೆಗಳು – ಇವೆಲ್ಲವೂ ಕಣ್ಣಿಗೂ ಕಿವಿಗೂ ನೋವುಂಟುಮಾಡಿದುವು. ಎದೆಯೊಳಕ್ಕೆ ಸೇರಿ, ಶೂನ್ಯವಾದ ನೋಯುತ್ತಿದ್ದ ಭಯವನ್ನು ತುಂಬಿದುವು.

ಒಮ್ಮೆಲೆ ಯಾರೋ ಗಟ್ಟಿಯಾದ ಸ್ವರದಲ್ಲಿ ಏನೋ ಹೇಳಿದ. ತಾಯಿ ಹೌಹಾರಿದಳು. ಬೇರೆಯವರೆಲ್ಲರೂ ಎದ್ದಾಗ, ಸಿಜೋವ್‌ನ ಕೈ ಹಿಡಿದುಕೊಂಡು ಆಕೆಯೂ ಎದ್ದುನಿಂತಳು.

ಎಡಕ್ಕಿದ್ದ ಎತ್ತರದ ಬಾಗಿಲೊಂದು ತೆರೆಯಿತು. ಕನ್ನಡಕ ಧರಿಸಿದ್ದ ವೃದ್ಧನೊಬ್ಬ ತಟ್ಟಾಡುತ್ತ ಒಳಬಂದ. ಆತನ ಬೂದು ಕೆನ್ನೆಗಳ ಮೇಲಿದ್ದ ತೆಳ್ಳಗಿನ ಬಿಳಿ ಮೀಸೆ ಅದುರಿತು. ಶುಭ್ರವಾಗಿ ಬೋಳಿಸಿದ್ದ ಮೇಲುತುಟಿ, ಹಲ್ಲಿಲ್ಲದ ಒಸಡಿನೊಳಕ್ಕೆ ಸೇರಿಕೊಂಡಿತ್ತು. ಆತನ ಗಲ್ಲವೂ ದವಡೆಗಳೂ ತೊಟ್ಟಿದ್ದ ಸಮವಸ್ತ್ರದ ಎತ್ತರದ ಕಾಲರಿನ ಮೇಲೆ ವಿರಮಿಸಿದ್ದುವು. ಅಂತೂ ಕೊರಳೇ ಇಲ್ಲವೇನೋ ಎನ್ನುವಂತಿತ್ತು. ಆತನಿಗೆ ಆಧಾರವಾಗಿ, ತುಂಬಿದ್ದ ದುಂಡಗಿನ ಪಿಂಗಾಣಿ ಮುಖವಿದ್ದ ಎತ್ತರದ ಯುವಕನೊಬ್ಬನಿದ್ದ. ಅವರ ಹಿಂದೆ, ಚಿನ್ನದ ಕಸೂತಿಯ ಸಮವಸ್ತ್ರ ಧರಿಸಿದ್ದ ಮೂವರೂ, ಸಾದಾ ಉಡುಪಿನಲ್ಲಿದ್ದ ಮೂವರೂ ಬಂದರು.

ಉದ್ದನೆಯ ಮೇಜಿನ ಬಳಿ ಕುಳಿತುಕೊಳ್ಳಲು ಅವರಿಗೆ ಬಹಳ ಹೊತ್ತು ಹಿಡಿಯಿತು. ಒಮ್ಮೆ ಈ ಕೆಲಸವಾದ ಮೇಲೆ, ನುಣ್ಣನೆ ಕ್ಷೌರಮಾಡಿದ್ದ ಜೀವಕಳೆಯಿಲ್ಲದ ಮುಖದವನೊಬ್ಬ, ತನ್ನ ಊದಿಕೊಂಡಿದ್ದ ತುಟಿಗಳನ್ನು ಅಡ್ಡಾದಿಡ್ಡಿಯಾಗಿ ಚಲಿಸುತ್ತ, ವೃದ್ಧನಿಗೆ ಏನನ್ನೋ ಪಿಸುಮಾತಿನಲ್ಲಿ ಹೇಳತೊಡಗಿದ. ಆ ಪಿಸುಮಾತನ್ನು ಕೇಳುತ್ತ ವೃದ್ಧ, ವಿಚಿತ್ರವೆನಿಸುವ ರೀತಿಯಲ್ಲಿ ನೆಟ್ಟಗೆ ನಿಶ್ಚಲವಾಗಿ ಕುಳಿತ. ಆ ಕನ್ನಡಕದ ಹಿಂದೆ, ಎರಡು ಶುಷ್ಕವಾದ ಪುಟ್ಟ ಚುಕ್ಕೆಗಳನ್ನು ತಾಯಿ ಕಂಡಳು.

ಮೇಜಿನ ಒಂದು ಕೊನೆಯಲ್ಲಿದ್ದ ಬರೆದುಕೊಳ್ಳುವ ಇಳಿಜಾರು ಮೇಜಿನ ಬಳಿ ಎತ್ತರದ ಬಕ್ಕತಲೆಯ ಮನುಷ್ಯ ನಿಂತ. ದಸ್ತಾವೇಜುಗಳ ಹಾಳೆಗಳನ್ನು ಮುಗುಚುತ್ತಿದ್ದಂತೆ, ಆತ, ಗಂಟಲನ್ನು ಸರಿಪಡಿಸಿಕೊಂಡ.

ವೃದ್ಧ ಮುಂದಕ್ಕೆ ಬಾಗಿ ಮಾತನಾಡತೊಡಗಿದ. ಮೊದಲ ಮಾತುಗಳು ಸ್ಪಷ್ಟವಾಗಿ ಉಚ್ಚರಿಸಲ್ಪಟ್ಟು, ಉಳಿದ ಪದಗಳೆಲ್ಲಾ ತೆಳ್ಳಗಿನ ಬೂದು ತುಟಿಯ ಮೇಲೆ ಸಿಕ್ಕುಗೊಂಡು ಹರಿದಾಡಿದುವು:

"ನಾನು ಜಾಹೀರು ಮಾಡ್ತೀನಿ.... ಕರಕೊಂಡು ಬನ್ನಿ...."

"ನೋಡು !" ಎಂದು, ತಾಯಿಯನ್ನು ಮೊಣಗೈಯಿಂದ ತಿವಿಯುತ್ತಾ, ಸಿಜೋವ್ ಪಿಸುಗುಟ್ಟಿದ.

ಕಂಬಿಗಳ ಹಿಂದಿದ್ದ ಬಾಗಿಲು ತೆರೆಯಿತು. ಬಿಚ್ಚುಖಡ್ಗವನ್ನು ಹೆಗಲ ಮೇಲಿರಿಸಿದ್ದ ಸೈನಿಕನೊಬ್ಬ ಒಳಬಂದ. ಅವನ ಹಿಂದೆ, ಪಾವೆಲ್, ಅಂದ್ರೇಯ್, ಫ್ಯೋದೊರ್ ಮಾಜಿನ್, ಇಬ್ಬರು ಗೂಸೆವ್ ಸೋದರರು, ಸಮೋಯ್‌ಲೊವ್,

ಬೂಕಿನ್, ಸೋಮೊವ್ ಮತ್ತು ಐವರು ಯುವಕರು ಬಂದರು. ಕೊನೆಯ ಐದು ಜನರ ಹೆಸರು ತಾಯಿಗೆ ಗೊತ್ತಿರಲಿಲ್ಲ. ಪಾವೆಲ್, ತಾಯಿಯನ್ನು ನೋಡಿ ಮುಗುಳ್ನಕ್ಕ. ಅಂದ್ರೇಯ್ ಹಲ್ಲು ಕಿಸಿದು ತಲೆ ಬಾಗಿಸಿ ವಂದಿಸಿದ. ಹೇಗೋ, ಅವರ ಮುಗುಳ್ನಗೆಯೂ ಉತ್ಸಾಹ ತುಂಬಿದ ಮುಖಗಳೂ ಚಲನವಲನವೂ ನ್ಯಾಯಸ್ಥಾನದ ಜಟಿಲವಾಗಿದ್ದ ಜಂಭದ ವಾತಾವರಣವನ್ನು ಹಗುರಗೊಳಿಸಿದಂತೆ ತೋರಿತು. ಸಮವಸ್ತ್ರಗಳ ಮೇಲಿದ್ದ ಚಿನ್ನದ ಕಣ್ಣುಕುಕ್ಕುವ ಹೊಳಪು ಮಾಸಿತು. ಕೈದಿಗಳು ತಮ್ಮೊಡನೆ ತಂದ, ಶಾಂತ ವಿಶ್ವಾಸದ ಹಾಗೂ ಸ್ಫೂರ್ತಿಯ ಬಲದ ಉಸಿರು, ತಾಯಿಯ ಧೈರ್ಯವನ್ನು ಮತ್ತೆ ಸಚೇತನಗೊಳಿಸಿ ಬೆಳೆಸಿತು. ಆಕೆಯ ಹಿಂದಿದ್ದ ಬೆಂಚುಗಳ ಮೇಲೆ ಆವರೆಗೂ ಜೋಲು ಮೋರೆ ಹಾಕಿಕೊಂಡು ಕುಳಿತಿದ್ದ ಜನರೆಡೆಯಿಂದ, ಈಗ ಶಾಂತವಾದ ಸ್ವರಗಳು ಹೊರಟವು.

"ಅವರು ಭಯಗೊಂಡಿಲ್ಲ !" ಎಂದು ಸಿಜೋವ್ ಪಿಸುಗುಟ್ಟಿದ. ಸಮೋಯ್‌ಲೊವ್‌ನ ತಾಯಿ ಬಿಕ್ಕತೊಡಗಿದಳು.

"ಶಾಂತರಾಗಿ !" ಎಂದು ಉಗ್ರವಾದ ಅನುಜ್ಞೆ ಬಂತು.

"ನಾನು ಎಚ್ಚರಿಕೆ ಕೊಡ್ತೀನಿ...." ಎಂದು ಆ ವೃದ್ಧ ಹೇಳಿದ.

ಪಾವೆಲ್ ಮತ್ತು ಅಂದ್ರೇಯ್, ಜತೆಯಾಗಿಯೇ ಮೊದಲ ಬೆಂಚಿನ ಮೇಲೆ ಕುಳಿತಿದ್ದರು. ಅವರ ಜೊತೆಯಲ್ಲಿ ಮಾಜಿನ್, ಸಮೋಯ್‌ಲೊವ್ ಮತ್ತು ಗೂಸೆವ್ ಸೋದರರಿದ್ದರು. ಅಂದ್ರೇಯ್ ಗಡ್ಡವನ್ನು ಬೋಳಿಸಿ ಮೀಸೆಯನ್ನು ಬೆಳೆಯಗೊಟ್ಟಿದ್ದ. ಹೀಗಾಗಿ ಮೀಸೆ ಕೆಳಕ್ಕೆ ತೂಗಿಕೊಂಡು, ಆತನ ದುಂಡಗಿನ ತಲೆ ಬೆಕ್ಕಿನ ತಲೆಯನ್ನು ಹೋಲುವಂತಾಗಿತ್ತು. ಆತನ ಮುಖದಲ್ಲೇನೋ ಹೊಸತಾದುದಿತ್ತು–ಆತನ ಬಾಯಿಯ ಬಳಿಯಲ್ಲೇನೋ ತೀಕ್ಷ್ಣವಾದುದು ಕಟುವಾದುದು, ಕಣ್ಣುಗಳಲ್ಲೇನೋ ಭಾರವಾದುದು, ಇದ್ದ ಹಾಗಿತ್ತು. ಮಾಜಿನ್ನನ ಮೇಲುತುಟಿಯಲ್ಲೆರಡು ಕರಿಯ ಗೆರೆಗಳು ಮೂಡಿದ್ದುವು, ಮುಖ ತುಂಬಿಕೊಂಡು ದುಂಡಗಿತ್ತು. ಸಮೋಯ್‌ಲೊವ್‌ನ ಗುಂಗುರು ಕೂದಲು ಎಂದಿನಂತೆಯೇ ಇದ್ದಿತು. ಇವಾನ್ ಗೂಸೆವ್ ಹಿಂದಿನಂತೆಯೆ. ಅಗಲವಾಗಿ ಬಾಯ್ತೆರೆದು ಹಲ್ಲುಕಿಸಿಯುತ್ತಿದ್ದ.

"ಛೆ ಫ್ಯೋದೊರ್, ಫ್ಯೋದೊರ್," ಎಂದು ಸಿಜೋವ್ ತಲೆಬಾಗಿಸಿ ಪಿಸುಗುಟ್ಟಿದ.

ಆ ವೃದ್ಧ ಮನುಷ್ಯ, ತನ್ನ ತಲೆಯನ್ನು ಅತ್ತಿತ್ತ ಚಲಿಸದೆ, ಕಾಲರಿನ ಮೇಲಿಟ್ಟು, ಕೈದಿಗಳನ್ನು ನೋಡದೆಯೇ ಅವರನ್ನು ಕುರಿತು ಅಸ್ಪಷ್ಟವಾಗಿ ಉಚ್ಚರಿಸುತ್ತ ಕೇಳುತ್ತಿದ್ದ ಪ್ರಶ್ನೆಗಳಿಗೆ ತಾಯಿ ಕಿವಿಗೊಟ್ಟಳು. ಮಗನು ಕೊಡುತ್ತಿದ್ದ, ಶಾಂತವಾದ ಚುಟುಕಾದ ಉತ್ತರಗಳನ್ನೂ ಆಕೆ ಕೇಳಿದಳು. ಮುಖ್ಯ ನ್ಯಾಯಾಧೀಶನೂ ಅವನ ಸಹಾಯಕರೂ ತನ್ನ ಮಗನ ವಿಷಯದಲ್ಲಿ ಕ್ರೂರಿಗಳಾಗುವುದು ಸಾಧ್ಯವಿಲ್ಲವೆಂದು ಆಕೆಗೆ ತೋರಿತು. ವಿಚಾರಣೆಯ ಫಲಿತಾಂಶವೇನಾಗಬಹುದೆಂದು ಊಹಿಸುವ ಯತ್ನ

ದಲ್ಲಿ, ಉದ್ದನೆಯ ಆ ಮೇಜಿನ ಬಳಿ ಇದ್ದ ಆ ಮುಖಗಳನ್ನೆಲ್ಲ ಈಕ್ಷಿಸುತ್ತಿದ್ದಂತೆ, ತನ್ನ ಹೃದಯದಲ್ಲಿನ ಆಸೆ ಬೆಳೆಯುತ್ತಿದ್ದುದು ತಾಯಿಗೆ ಅರಿವಾಯಿತು.

ಪಿಂಗಾಣಿ ಮುಖದ ಮನುಷ್ಯ ಒಂದು ದಸ್ತಾವೇಜನ್ನು ಬೇಸರಪಡಿಸುವ ಏಕಪ್ರಕಾರವಾದ ಸ್ವರದಲ್ಲಿ ಓದಿದ. ಆ ಸ್ವರವನ್ನು ಕೇಳುತ್ತ ಪ್ರೇಕ್ಷಕರು ಮಂತ್ರ ಮುಗ್ಧರಾದವರಂತೆ ಕದಲದೆ ಕುಳಿತರು. ನಾಲ್ವರು ವಕೀಲರು, ವಿಚಾರಣೆಗೆ ಒಳಗಾಗಿದ್ದವರೊಡನೆ ಶಾಂತವಾಗಿ ನಿರಂತರವಾಗಿ ಸಂಭಾಷಣೆ ನಡೆಸಿದರು. ಅವರ ಚಲನವಲನಗಳು ವೇಗವಾಗಿದ್ದುವು, ಬಲಿಷ್ಠವಾಗಿದ್ದುವು. ಅವರು ಕಪ್ಪನೆಯ ದೊಡ್ಡ ಹಕ್ಕಿಗಳಂತೆ ಕಂಡರು.

ವೃದ್ಧ ಮನುಷ್ಯನ ಒಂದು ಪಕ್ಕದಲ್ಲಿದ್ದ ಆರಾಮ ಕುರ್ಚಿ, ನ್ಯಾಯಾಧೀಶನೊಬ್ಬನ ಅತಿ ಗಾತ್ರದಿಂದ ತುಂಬಿ ಹೋಗಿತ್ತು. ಅವನ ಪುಟ್ಟ ಕಣ್ಣುಗಳು ಮಾಂಸದೊಳಗೆ ಹೂತು ಹೋಗಿದ್ದುವು. ವೃದ್ಧನ ಇನ್ನೊಂದು ಪಕ್ಕದಲ್ಲಿ ಬಾಗಿದ ಭುಜ, ಬಾಡಿದ ಮುಖ, ಕೆಂಪಗಿನ ಮೀಸೆಯಿದ್ದ ಒಬ್ಬ ನ್ಯಾಯಾಧೀಶ ಕುಳಿತಿದ್ದ. ಆತ ಬೇಸರದಿಂದ ತಲೆಯನ್ನು ಕುರ್ಚಿಯ ಹಿಂಭಾಗದ ಮೇಲಿಟ್ಟು ವಿರಮಿಸಿದ. ಆತನ ಕಣ್ಣುಗಳು ಮುಚ್ಚಿಕೊಂಡು ಯೋಚನೆಗಳು ದೂರಕ್ಕೆ ಸಂಚಾರಮಾಡುತ್ತಿದ್ದುವು. ಪ್ರಾಸಿಕ್ಯೂಟರ್ ಅನಾಸ್ಥೆಯ ಬೇಜಾರಿನ ಮುಖ ಭಾವವನ್ನೇ ತೋರಿಸುತ್ತಿದ್ದ. ನ್ಯಾಯಾಧೀಶರ ಹಿಂದುಗಡೆ ಮೂವರು ವ್ಯಕ್ತಿಗಳು ಕುಳಿತಿದ್ದರು: ಗಲ್ಲವನ್ನು ತಟ್ಟುತ್ತಾ ಯೋಚ ನಾಮಗ್ನನಾಗಿದ್ದ ದಪ್ಪಗಿನ ಭವ್ಯ ಆಕೃತಿಯ ವ್ಯಕ್ತಿ–ನಗರಾಧ್ಯಕ್ಷ; ಉದ್ದನೆಯ ಗಡ್ಡವೂ ವಿಶಾಲವಾದ ಸೊಗಸಾದ ಕಣ್ಣುಗಳೂ ಇದ್ದ ನರೆಗೂದಲಿನ ಕೆಂಪು ಕೆನ್ನೆಗಳ ಮನುಷ್ಯ–ಜಮೀನ್ದಾರರ ನಾಯಕ; ಮತ್ತು ಆ ಜಿಲ್ಲೆಯ ದೊಡ್ಡ ಹೊಟ್ಟೆಯ ಹಿರಿಯ ಅಧಿಕಾರಿ. ಆ ಹೊಟ್ಟೆಯ ದೆಸೆಯಿಂದ ಕೊನೆಯವನು ಸ್ವಲ್ಪ ಸಂಕೋಚ ಪಡುತ್ತಿದ್ದಂತೆ ತೋರಿತು. ಯಾಕೆಂದರೆ, ಜಾರಿ ಹೋಗುತ್ತಿದ್ದ ಕೋಟಿನ ತುದಿಗಳಿಂದ ಹೊಟ್ಟೆಯನ್ನು ಮುಚ್ಚಲು ಆತ ಅಡಿಗಡಿಗೆ ಯತ್ನಿಸುತ್ತಿದ್ದ.

"ಇಲ್ಲಿ ಅಪರಾಧಿಗಳೂ ಇಲ್ಲ ನ್ಯಾಯಾಧೀಶರೂ ಇಲ್ಲ. ಇಲ್ಲಿರೋದು, ಸೆರೆ ಯಾಳುಗಳು ಮತ್ತು ವಿಜಯಿಗಳು ಮಾತ್ರ," ಎಂದು ಪಾವೆಲ್‌ನ ದೃಢವಾದ ಸ್ವರ ಕೇಳಿಸಿತು.

ಪ್ರತಿಯೊಬ್ಬರೂ ಶಾಂತರಾದರು. ಕೆಲ ನಿಮಿಷಗಳ ತನಕ, ಅವಸರದಲ್ಲಿ ಬರೆ ಯುತ್ತಿದ್ದ ಲೇಖನಿಯ ಸರಸರ ಸದ್ದು ಮತ್ತು ತನ್ನ ಎದೆಗುಂಡಿಗೆಯ ಬಡಿತದ ಹೊರತಾಗಿ, ಬೇರೇನೂ ತಾಯಿಗೆ ಕೇಳಿಸಲಿಲ್ಲ.

ಹಿರಿಯ ನ್ಯಾಯಾಧೀಶನೂ ಕಿವಿಗೊಟ್ಟು ಕೇಳುತ್ತ, ಮುಂದೇನಾಗುವುದೆಂದು ನಿರೀಕ್ಷಿಸುತ್ತ ಕುಳಿತ ಹಾಗಿತ್ತು. ಅವನ ಸಹಾಯಕರೂ ಎಚ್ಚರಗೊಂಡರು. ಕೊನೆ ಯಲ್ಲಿ ವೃದ್ಧನೆಂದ:

"ಹುಂ. ಆಂದ್ರೇಯ್ ನಹೋದ್ಕ! ನೀವು ತಪ್ಪು ಒಪ್ಕೊಳ್ತೀರಾ...."

ಅಂದ್ರೇಯ್ ಮೆಲ್ಲನೆದ್ದು, ಭುಜಗಳನ್ನು ನಿಡಿದುನಿಂತು, ಮೀಸೆಗಳನ್ನು ಮುಟ್ಟಿ, ಕೆಳಗಿಳಿದಿದ್ದ ಹುಬ್ಬುಗಳಡಿಯಿಂದ ವೃದ್ಧನನ್ನೇ ನೋಡಿದ.

"ನಾನು ಏನೂಂತ ತಪ್ಪು ಒಪ್ಕೊಳ್ಳಲಿ?" ಎಂದು ಹೊಹೋಲ್ ತನ್ನ ಭುಜ ಕುಪ್ಪಳಿಸಿ, ಮಧುರವಾದ ಅವಸರವಿಲ್ಲದ, ಸ್ವರದಲ್ಲಿ ಕೇಳಿದ. "ನಾನು ಯಾರನ್ನೂ ಕೊಂದಿಲ್ಲ. ಏನನ್ನೂ ಕದ್ದಿಲ್ಲ. ಜನರು ಕದಿಯೋ ಹಾಗೆ ಒಬ್ಬರನ್ನೊಬ್ಬರು ಕೊಲ್ಲೋ ಹಾಗೆ ಪ್ರೇರೇಪಿಸುವಂತ ಜೀವನ ಕ್ರಮಕ್ಕೆ ನಾನು ವಿರೋಧಿ, ಅಷ್ಟೆ...."

"ನಿಮ್ಮ ಉತ್ತರಗಳನ್ನು ಚುಟುಕಾಗಿ ಕೊಡಿ," ಎಂದು ವೃದ್ಧ ಮನುಷ್ಯ ಪ್ರಯತ್ನಪೂರ್ವಕವಾಗಿ ಹೇಳಿದ.

ತನ್ನ ಹಿಂದಿನ ಬೆಂಚುಗಳ ಮೇಲೆ ಕುಳಿತಿದ್ದವರ ನೆಮ್ಮದಿ ಕದಡಿದ್ದು ತಾಯಿಗೆ ಅರಿವಾಯಿತು. ಪಿಂಗಾಣಿ ಮುಖದವನ ಮಾತುಗಳು ನೇಯ್ದಿದ್ದ ಬಲೆಗಳನ್ನೆಲ್ಲ ತೊಡೆದುಹಾಕುವಂತೆ, ಜನರು ಪಿಸುಮಾತನಾಡುವುದಕ್ಕೂ ಅತ್ತಿತ್ತ ಚಲಿಸುವುದಕ್ಕೂ ಮೊದಲು ಮಾಡಿದರು.

"ಅವರು ಏನು ಹೇಳ್ತಿದಾರೆ ಕೇಳಿದಿಯಾ?" ಎಂದು ಸಿಜೋವ್ ಪಿಸುಗುಟ್ಟಿದ.

"ಉತ್ತರಿಸು, ಫ್ಯೋದೊರ್ ಮಾಜಿನ್!"

"ಇಲ್ಲ, ನಾನು ಉತ್ತರಿಸೋದಿಲ್ಲ," ಎಂದು ಫ್ಯೋದೊರ್ ಜಿಗಿದು ನಿಂತು ಹೇಳಿದ. ಅವನ ಮುಖ ಕೆಂಪೇರಿತ್ತು. ಕಣ್ಣುಗಳು ಶುಭ್ರವಾಗಿದ್ದುವು. ಆದರೆ ಯಾವ ಕಾರಣಕ್ಕಾಗಿಯೋ ಕೈಗಳನ್ನು ಮಾತ್ರ ಆತ ಬೆನ್ನಹಿಂದೆ ಬಚ್ಚಿಟ್ಟುಕೊಂಡಿದ್ದ.

ಸಿಜೋವ್‌ಗೆ ಉಸಿರು ಕಟ್ಟಿಹೋಯಿತು. ತಾಯಿಯ ಕಣ್ಣುಗಳುಆಶ್ಚರ್ಯ ದಿಂದ ಅಗಲವಾದುವು.

"ನನ್ನ ರಕ್ಷಣೆಗಾಗಿ ವಕೀಲರು ಬೇಡಾಂತ ನಾನು ಹೇಳಿದ್ದೀನಿ. ಈಗ ಏನು ಹೇಳೋದಕ್ಕೂ ನಿರಾಕರಿಸ್ತೀನಿ. ಈ ವಿಚಾರಣೆ ಅಕ್ರಮವಾದದ್ದು! ನೀವು ಯಾರು? ನಮ್ಮನ್ನ ವಿಚಾರಣೆ ಮಾಡೋದಕ್ಕೆ ಜನರು ನಿಮಗೆ ಹಕ್ಕುಕೊಟ್ಟಿದ್ದಾರೋ? ಇಲ್ಲ, ಅವರು ಕೊಟ್ಟಿಲ್ಲ! ನಿಮ್ಮ ಅಧಿಕಾರಕ್ಕೆ ನಾನು ಮನ್ನಣೆ ಕೊಡೋದಿಲ್ಲ!"

ಆತ ಕುಳಿತು, ತನ್ನ ಕೆಂಪೇರಿದ ಮುಖವನ್ನು ಅಂದ್ರೇಯ್‌ನ ಬೆನ್ನಹಿಂದೆ ಬಚ್ಚಿಟ್ಟುಕೊಂಡ.

ದಪ್ಪಗಿನ ನ್ಯಾಯಾಧೀಶ, ಹಿರಿಯ ನ್ಯಾಯಾಧೀಶನತ್ತ ತಲೆಬಾಗಿ ಕಿವಿಯಲ್ಲೇನನ್ನೋ ಪಿಸುಗುಟ್ಟಿದ. ನಿಸ್ತೇಜ ಮುಖದ ನ್ಯಾಯಾಧೀಶ ಕಣ್ಣು ತೆರೆದು, ಕೈದಿಗಳತ್ತ ದೃಷ್ಟಿಹಾಯಿಸಿ, ತನ್ನ ಎದುರಿಗಿದ್ದ ಕಾಗದದ ಮೇಲೆ ಅದೇನನ್ನೋ ಗುರುತು ಹಾಕಿಕೊಂಡ. ಜಿಲ್ಲೆಯ ಮುಖ್ಯಸ್ಥ ತಲೆಯಾಡಿಸಿ, ತನ್ನ ಹೊಟ್ಟೆಯನ್ನು ಹೆಚ್ಚು ಸುಲಭವಾಗಿ ಮೊಣಕಾಲುಗಳ ಮೇಲಿಟ್ಟು ಕೈಗಳಿಂದ ಆತುಕೊಳ್ಳುವಂತೆ, ಪಾದಗಳನ್ನು ಚಲಿಸಿದ. ತನ್ನ ತಲೆಯನ್ನು ತಿರುಗಿಸದೆಯೇ, ಇಡಿಯ ದೇಹವನ್ನೇ ವೃದ್ಧ ಮನುಷ್ಯ, ನಿಸ್ತೇಜ ಮುಖದ ನ್ಯಾಯಾಧೀಶನತ್ತ ಕೊಂಕಿಸಿ, ಆತನಿಗೇನನ್ನೋ

ಪಿಸುಮಾತಿನಲ್ಲಿ ಹೇಳಿದ. ಎರಡನೆಯವನು ತಲೆ ತಗ್ಗಿಸಿ ಆಲಿಸಿದ. ಜಮೀನ್ದಾರರ ನಾಯಕ ಸರಕಾರಿ ವಕೀಲನಿಗೇನನ್ನೋ ಪಿಸುದನಿಯಲ್ಲಿ ತಿಳಿಸಿದ. ನಗರಾಧ್ಯಕ್ಷ ಈಗಲೂ ತನ್ನ ಕೆನ್ನೆಯನ್ನು ತಟ್ಟುತ್ತಲೇ ಅವರಿಬ್ಬರಿಗೂ ಕಿವಿಗೊಟ್ಟ. ಮತ್ತೊಮ್ಮೆ ಹಿರಿಯ ನ್ಯಾಯಾಧೀಶ ತನ್ನ ಮಂದಸ್ವರದಲ್ಲಿ ಮಾತನಾಡತೊಡಗಿದ.

ಸಿಜೋವ್ ಆಶ್ಚರ್ಯಪಡುತ್ತ ಇಳಿದನಿಯಲ್ಲಿ ತಾಯಿಗೆ ಹೇಳಿದ:

"ಹ್ಯಾಗೆ ಅವರ ಬಾಯಿ ಮುಚ್ಚಿಸ್ಬಿಟ್ಟ, ಕೇಳಿದಿಯಾ? ಅವರಲ್ಲೆಲ್ಲಾ ಅವನೇ ಅತ್ಯುತ್ತಮ !"

ಏನೂ ಅರ್ಥವಾಗದೆ ತಾಯಿ ಮುಗುಳ್ನಕ್ಕಳು. ಆಗ ನಡೆಯುತ್ತಿದ್ದುದೆಲ್ಲ, ಬೇಗನೆ ತನ್ನ ಶೀತಲ ಭೀಕರತೆಯಿಂದ ಅವರನ್ನೆಲ್ಲ ಹಿಂಡಲಿದ್ದ ಭಯಾನಕ ಸಂಭವಕ್ಕೆ, ಆಯಾಸಗೊಳಿಸುವಂತಹ ಅನಗತ್ಯವಾದ ಪೀಠಿಕೆಯೆಂದು ತಾಯಿಗೆ ತೋರಿತು. ಆದರೆ ಪಾವೆಲ್ ಮತ್ತು ಅಂದ್ರೇಯ್‌ನ ಮಾತುಗಳು, ಕಾರ್ಮಿಕರ ವಸತಿ ಪ್ರದೇಶದಲ್ಲಿದ್ದ ತಮ್ಮ ಪುಟ್ಟಮನೆಯಲ್ಲಿ ಆಡಿದಂತೆಯೇ ನಿರ್ಭಯವಾಗಿಯೂ ಬಲಶಾಲಿಯಾಗಿಯೂ ಇದ್ದುವು. ನ್ಯಾಯಸ್ಥಾನದಲ್ಲಿ ಆಡಿದ ಮಾತುಗಳ ಹಾಗೆ ಅವು ತೋರಲಿಲ್ಲ. ಫ್ಯೋದೊರ್‌ನ ಆವೇಗದ ಬಿಚ್ಚುಮಾತು ಕೇಳಿ ತಾಯಿ ಎಚ್ಚತ್ತಿದ್ದಳು. ಆ ವಿಚಾರಣೆಯಲ್ಲಿ ಧೈರ್ಯಶಾಲಿಯಾದುದೇನೋ ನಡೆಯುತ್ತಿತ್ತು. ಹಾಗೆ ಭಾವಿಸಿದವಳು ತಾನೊಬ್ಬಳೇ ಅಲ್ಲವೆಂಬುದನ್ನು, ಹಿಂಬದಿಯಲ್ಲಿ ಕಂಡು ಬಂದ ಆಸಕ್ತಿಯಿಂದ, ತಾಯಿ ತಿಳಿದಳು.

"ನಿಮ್ಮ ಅಭಿಪ್ರಾಯವೇನು?" ಎಂದು ವೃದ್ಧ ಮನುಷ್ಯ ಕೇಳಿದ.

ಬಕ್ಕ ತಲೆಯ ಪ್ರಾಸಿಕ್ಯೂಟರನು ನಿಂತು, ಇಳಿಜಾರು ಮೇಜಿನ ಮೇಲೆ ಒಂದು ಕೈಯನ್ನಿಟ್ಟು, ಅಂಕೆಸಂಖ್ಯೆಗಳನ್ನು ಉಲ್ಲೇಖಿಸುತ್ತ, ತನ್ನ ಅವಸರದ ಭಾಷಣವನ್ನು ಮಾಡಿದ. ಆತನ ಸ್ವರದಲ್ಲೂ ಭಯಗೊಳಿಸುವಂಥಾದ್ದೇನೂ ಇರಲಿಲ್ಲ.

ಅದೇ ಹೊತ್ತಿಗೆ, ಶುಷ್ಕವಾದ ಚುಚ್ಚುತ್ತಿದ್ದ ಭೀತಿಯೊಂದು ತಾಯಿಯ ಹೃದಯವನ್ನು ಆವರಿಸಿತು. ವಾತಾವರಣದಲ್ಲೇನೋ ದ್ವೇಷಪೂರ್ಣವಾದುದು ಇತ್ತೆಂದು ತಾಯಿಗೆ ಅಸ್ಪಷ್ಟವಾಗಿ ಅರಿವಾಯಿತು. ಅದು ಮುಷ್ಟಿಯಲುಗಿಸಿ ಗರ್ಜಿಸಲಿಲ್ಲ, ಅಷ್ಟೆ. ಆದರೆ ಸೂಕ್ಷ್ಮವಾಗಿ, ಕಣ್ಣಿಗೆ ಕಾಣಿಸದಂತೆಯೇ, ಅದು ಬೆಳೆಯುತ್ತಿದ್ದಂತೆ ತೋರಿತು. ನ್ಯಾಯಾಧೀಶರ ಸಮೀಪದಲ್ಲಿ ಹಾರಾಡುತ್ತಾ, ಅವರನ್ನು ದುರ್ಗಮವಾದ ಮೋಡದ ಹಾಗೆ ಮುಚ್ಚಿಕೊಂಡು, ಅಲ್ಲಿ ನಡೆಯುತ್ತಿದ್ದುದಕ್ಕೂ ಅವರಿಗೂ ಯಾವ ಸಂಬಂಧವೂ ಇರದ ಹಾಗೆ ಅದು ಮಾಡಿದಂತೆ ಕಂಡಿತು. ತಾಯಿ ನ್ಯಾಯಾಧೀಶರತ್ತ ನೋಡಿದಳು. ಅವರ ಮನಸ್ಸಿನಲ್ಲಿ ಏನಿದೆಯೆಂಬುದು ಆಕೆಗೆ ಗೊತ್ತಾಗಲೇ ಇಲ್ಲ. ಆಕೆ ನಿರೀಕ್ಷಿಸಿದಂತೆ, ಪಾವೆಲ್ ಮತ್ತು ಫ್ಯೋದೊರ್‌ನ ಮೇಲೆ ಅವರೇನೂ ಸಿಟ್ಟಾಗಲಿಲ್ಲ; ಅವಮಾನಿಸಲಿಲ್ಲ. ಆದರೆ ಅವರು, ತಾವು ಕೇಳುತ್ತಿದ್ದ ಪ್ರಶ್ನೆಗಳಿಗೆ ಸ್ವತಃ ತಾವೇ ಯಾವ ಮಹತ್ವವನ್ನೂ ಕೊಟ್ಟಂತೆ ತೋರಲಿಲ್ಲ. ಅವರ ಸ್ವರ ನಿರಾಸಕ್ತವಾಗಿತ್ತು. ಉತ್ತರವನ್ನು ಕೇಳಲು ತಮ್ಮನ್ನು ತಾವೇ ಅವರು ಒತ್ತಾಯಿಸ

ಬೇಕಾಗುತ್ತಿತ್ತು. ಎಲ್ಲವನ್ನೂ ಮುಂಚಿತವಾಗಿಯೇ ತಿಳಿದಿದ್ದಂತೆ ಅವರು ಅಲಕ್ಷ್ಯದಿಂದಿದ್ದರು.

ಪೋಲೀಸನೊಬ್ಬ ಅವರೆದುರು ನಿಂತು ದಪ್ಪನೆಯ ಸ್ವರದಲ್ಲಿ ಹೇಳಿದ:

"ಪಾವೆಲ್ ವ್ಲಾಸೊವ್ ಮುಖ್ಯ ಪ್ರೇರೇಪಕ ಅಂತ ಹೇಳಲಾಗಿದೆ...."

"ನಹೋದ್ಕ ವಿಚಾರವೇನು?" ಎಂದು ಗಾತ್ರದ ನ್ಯಾಯಾಧೀಶ ಕೇಳಿದ.

"ಅವನು ಕೂಡಾ...."

ವಕೀಲರಲ್ಲೊಬ್ಬ ಎದ್ದುನಿಂತ.

"ನಾನೊಂದು ಮಾತು ಹೇಳಬಹುದೆ?" ಎಂದು ಆತ ಕೇಳಿದ.

ವೃದ್ಧ ಮನುಷ್ಯ "ಆಕ್ಷೇಪಣೆಗಳಿವೆಯೆ?" ಎಂದು ಇತರರನ್ನು ನೋಡಿದ.

ಎಲ್ಲ ನ್ಯಾಯಾಧೀಶರೂ ಅನಾರೋಗ್ಯದಿಂದ ನರಳುತ್ತಿದ್ದಂತೆ ತಾಯಿಗೆ ತೋರಿತು. ಅವರ ವರ್ತನೆಯಲ್ಲೂ ಸ್ವರಗಳಲ್ಲೂ ಅರ್ಧಮರ್ದವಾದ ಬೇಸರವಿತ್ತು. ಅವರ ಮುಖಗಳೂ ಅದೇ ಬೇಸರವನ್ನೂ ಆಯಾಸವನ್ನೂ ತೋರಿಸಿದುವು. ತಮ್ಮ ಸಮವಸ್ತ್ರ, ನ್ಯಾಯಸ್ಥಾನ, ಪೋಲೀಸರು, ವಕೀಲರು, ಮೆತ್ತಗಿನ ಕುರ್ಚಿಗಳಲ್ಲಿ ಕುಳಿತುಕೊಂಡು ಪ್ರಶ್ನೆಗಳನ್ನು ಕೇಳುತ್ತ ನಡೆಯುತ್ತಿದ್ದುದಕ್ಕೆ ಕಿವಿಗೊಡಬೇಕಾದ ಅವಶ್ಯತೆ–ಇವೆಲ್ಲವನ್ನೂ ಬಲು ಪ್ರಯಾಸದ್ದಾಗಿ ಅವರು ಕಂಡರೆಂಬುದು ಸ್ಪಷ್ಟವಾಗಿತ್ತು.

ತಾಯಿಗೆ ಪರಿಚಯವಿದ್ದ ಅರಸಿನ ಮುಖದ ಅಧಿಕಾರಿ ಈಗ ಅವರ ಮುಂದೆ ನಿಂತು, ಪಾವೆಲ್ ಮತ್ತು ಅಂದ್ರೇಯ್‌ನ ವಿಷಯವಾಗಿ ತಾನು ತಿಳಿದುದನ್ನು, ಗಟ್ಟಿಯಾದ ಏಕಪ್ರಕಾರವಾದ ಸ್ವರದಲ್ಲಿ ಹೇಳಿದ.

"ನಿನಗೆ ತಿಳಿದಿರೋದು ಅಷ್ಟರಲ್ಲೇ ಇದೆ," ಎಂದು ಆ ಮಾತಿಗೆ ಕಿವಿಗೊಡುತ್ತ ತಾಯಿ ಯೋಚಿಸಿದಳು.

ಕಂಬಿಗಳ ಹಿಂದಿದ್ದ ಜನರನ್ನು ತಾಯಿ ನೋಡಿದಳು. ಅವರ ಬಗೆಗೆ ಆಕೆಗೀಗ ಭಯವಿರಲಿಲ್ಲ; ಅವರ ವಿಷಯವಾಗಿ ಆಕೆ ಕನಿಕರಿಸಲಿಲ್ಲ. ಕನಿಕರಿಸುವುದು ಸಾಧ್ಯವಿರಲಿಲ್ಲ. ಆಶ್ಚರ್ಯವನ್ನಷ್ಟೆ, ಆಕೆಯ ಹೃದಯವನ್ನು ತುಂಬಿದ ಪ್ರೀತಿಯ ಬೆಚ್ಚನೆಯ ತೆರೆಗಳನ್ನಷ್ಟೆ, ತಾಯಿಯಲ್ಲಿ ಅವರೀಗ ಉಂಟುಮಾಡಿದರು. ಆ ಆಶ್ಚರ್ಯ ಶಾಂತವಾಗಿತ್ತು; ಪ್ರೀತಿ ಅತ್ಯಾನಂದದಿಂದ ಹೃದಯಸ್ಪರ್ಶಿಯಾಗಿತ್ತು. ಅಲ್ಲಿ ಗೋಡೆಗೊರಗಿ ಅವರು ಕುಳಿತಿದ್ದರು–ಯುವಕರು, ಬಲಶಾಲಿಗಳು. ಸಾಕ್ಷಿಗಳ ಮತ್ತು ನ್ಯಾಯಾಧೀಶರ ಬೇಜಾರು ಹಿಡಿಸುವ ಮಾತುಗಳಿಗೂ ಪ್ರಾಸಿಕ್ಯೂಟರನೊಡನೆ ತಮ್ಮ ವಕೀಲರು ನಡೆಸುತ್ತಿದ್ದ ಚರ್ಚೆಗೂ ಅವರೇನೂ ಗಮನ ಕೊಡುತ್ತಿರಲಿಲ್ಲ. ಆಗೊಮ್ಮೆ ಈಗೊಮ್ಮೆ ಅವರಲ್ಲೊಬ್ಬ ವ್ಯಂಗ್ಯವಾಗಿ ನಗುತ್ತಿದ್ದ; ತನ್ನ ಸಂಗಾತಿಗಳಿಗೆ ಏನನ್ನಾದರೂ ಹೇಳುತ್ತಿದ್ದ. ಆಗ ಅಂಥದೇ ಅಣಕದ ನಗೆ ಅವರ ಮುಖಗಳ ಮೇಲೂ ಮೂಡುತಿತ್ತು. ರಕ್ಷಣೆಯ ವಕೀಲರಲ್ಲಿ ಒಬ್ಬನೊಡನೆ, ಪಾವೆಲ್ ಮತ್ತು ಅಂದ್ರೇಯ್ ಪಿಸುಮಾತನಾಡುತ್ತಿದ್ದರು. ತಾಯಿಗೆ ಆ ವಕೀಲನ ಗುರುತಿತ್ತು. ಹಿಂದಿನ ರಾತ್ರೆ

ನಿಕೊಲಾಯ್‌ನ ಮನೆಯಲ್ಲಿ ಅವನನ್ನು ಆಕೆ ಕಂಡಿದ್ದಳು. ಎಲ್ಲರಿಗಿಂತಲೂ ಹೆಚ್ಚು ಅಸಹನೆಯಿಂದಲೂ ಉದ್ವೇಗದಿಂದಲೂ ಕೂಡಿದ್ದ ಮಾಜಿನ್, ಅವರ ಮಾತುಗಳನ್ನು ಆಲಿಸುತ್ತ ಕುಳಿತಿರುತ್ತಿದ್ದ. ಕೆಲವೊಮ್ಮೆ ಸಮೋಯ್‌ಲೋವ್, ಇವಾನ್ ಗೂಸೆವ್‌ಗೆ ಏನನ್ನಾದರೂ ಹೇಳುತ್ತಿದ್ದ. ಅದಕ್ಕೆ ಉತ್ತರವಾಗಿ ಗೂಸೆವ್, ತನ್ನ ಸಂಗಾತಿಯನ್ನು ಮೊಣಕೈಯಿಂದ ತಿವಿದು, ತನ್ನ ನಗೆಯನ್ನು ತಡೆಹಿಡಿಯಲು ಬಲು ಪ್ರಯಾಸ ಪಡುತ್ತಿದ್ದ. ಅದರ ಫಲವಾಗಿ, ಅವನ ಮುಖ ಕೆಂಪಗಾಗುತ್ತಿತ್ತು, ಕೆನ್ನೆಗಳು ತುಂಬಿ ಕೊಳ್ಳುತ್ತಿದ್ದುವು. ಆತ ತಲೆ ತಗ್ಗಿಸುತ್ತಿದ್ದ. ಎರಡು ಸಾರಿ ಆತ ತಡೆಯಲಾಗದೆ ನಗಲೇ ಬೇಕಾಯಿತು. ಆಗ ಸ್ವಲ್ಪ ಹೊತ್ತು, ಕುಗ್ಗಿ ಸ್ವಸ್ಥವಾಗಿ ಕುಳಿತು ಸುಧಾರಿಸಿಕೊಳ್ಳಲು ಯತ್ನಿಸಿದ. ಪ್ರತಿಯೊಬ್ಬ ಕೈದಿಯಲ್ಲೂ ಯೌವನದ್ದೇ ಮೇಲುಗೈಯಾಗಿತ್ತು. ತನ್ನ ಚೈತನ್ಯಪೂರ್ಣ ವಿಕಾಸವನ್ನು ಹತ್ತಿಕ್ಕುವ ಪ್ರತಿಯೊಂದು ಯತ್ನವನ್ನೂ ಅದು ಸುಲಭವಾಗಿ ಮಣ್ಣುಗೂಡಿಸುತ್ತಿತ್ತು.

ಸಿಜೋವ್, ತಾಯಿಯ ಮೊಣಕೈಯನ್ನು ಮೆಲ್ಲನೆ ಮುಟ್ಟಿದ. ಆಕೆ ತಿರುಗಿ ನೋಡಿ, ಆತ ತೃಪ್ತನಾಗಿದ್ದುದನ್ನೂ ಆದರೆ ಸ್ವಲ್ಪ ಕಾತರನಾಗಿದ್ದುದನ್ನೂ ತಾಯಿ ಕಂಡಳು.

ಆತ ಪಿಸುಮಾತಿನಲ್ಲಿ ಹೇಳಿದ:

"ನೋಡು ನೀನು. ಈ ಹುಡುಗರು ಎಷ್ಟೊಂದು ಬಲಶಾಲಿಗಳಾಗ್ಬಿಟ್ಟಿದ್ದಾರೆ! ದೊರೆಗಳ ಹಾಗೆ!"

ನ್ಯಾಯಸ್ಥಾನದಲ್ಲಿ ಸಾಕ್ಷಿಗಳು, ತಮ್ಮ ಅವಸರದ ಶುಷ್ಕವಾದ ಸ್ವರಗಳಲ್ಲಿ ಮಾತನಾಡುತ್ತಲೇ ಇದ್ದರು. ನ್ಯಾಯಾಧೀಶರು, ಮನಸಿಲ್ಲದ ಮನಸ್ಸಿನಿಂದ ನಿರಾಸಕ್ತಿ ಯಿಂದ ಏನನ್ನಾದರೂ ಕೇಳುತ್ತಿದ್ದರು, ಹೇಳುತ್ತಿದ್ದರು. ಡೊಳ್ಳು ಹೊಟ್ಟೆಯ ನ್ಯಾಯಾ ಧೀಶ, ತನ್ನ ದಪ್ಪನೆಯ ಕೈಯನ್ನು ಬಾಯಿಗಡ್ಡವಾಗಿ ಹಿಡಿದು ಆಕಳಿಸಿದ. ಕೆಂಪು ಮೀಸೆಯವನು ಮತ್ತಷ್ಟು ನಿಸ್ತೇಜನಾಗಿದ್ದ. ಆತ ಆಗಾಗ್ಗೆ ಬೆರಳುಗಳಿಂದ ಕಿವಿಯ ಬದಿಗಳನ್ನು ಒತ್ತುತ್ತಾ, ಪ್ರಯಾಸಪಡುತ್ತಾ, ನಿರ್ಜೀವ ಕಣ್ಣುಗಳಿಂದ ಛಾವಣಿಯನ್ನು ದಿಟ್ಟಿಸುತ್ತಿದ್ದ. ಆಗೊಮ್ಮೆ ಈಗೊಮ್ಮೆ ಪ್ರಾಸಿಕ್ಯೂಟರ್ ಪೆನ್ಸಿಲಿನಿಂದ ಗುರುತು ಮಾಡಿಕೊಂಡು, ಜಮೀನ್ದಾರರ ನಾಯಕನೊಡನೆ ತನ್ನ ನೀರವ ಸಂಭಾಷಣೆಯನ್ನು ಮುಂದುವರಿಸುತ್ತಿದ್ದ. ಆ ಮಹಾನುಭಾವ, ತನ್ನ ಬೂದು ಗಡ್ಡವನ್ನು ತಟ್ಟುತ್ತಾ, ತನ್ನ ವಿಶಾಲವಾದ ಸೊಗಸಾದ ಕಣ್ಣುಗಳನ್ನು ಹೊರಳಿಸುತ್ತಾ, ತನ್ನ ಕತ್ತನ್ನು ಭವ್ಯವಾಗಿ ಕೊಂಕಿಸಿ ಮುಗುಳ್ನಗುತ್ತಿದ್ದ. ನಗರಾಧ್ಯಕ್ಷ ಕಾಲಿನ ಮೇಲೆ ಕಾಲಿರಿಸಿ, ತನ್ನ ಮೊಣಕಾಲನ್ನು ತಟ್ಟುತ್ತಾ ಬೆರಳುಗಳನ್ನೆ ದಿಟ್ಟಿಸಿದ. ಹೊಟ್ಟೆಯನ್ನು ಮೊಣ ಕಾಲುಗಳ ಮೇಲೆ ಭದ್ರವಾಗಿ ಇರಿಸಿ, ತನ್ನ ತೋಳುಗಳಿಂದ ಅದನ್ನು ಪ್ರೀತಿಪೂರ್ವಕ ವಾಗಿ ಅಪ್ಪಿಕೊಂಡು ಕುಳಿತಿದ್ದ ಜಿಲ್ಲೆಯ ಮುಖ್ಯಸ್ಥನೊಬ್ಬನೇ, ಬೇಜಾರುಪಡಿ ಸುವ ಸ್ವರಗಳಿಗೆ ಕಿವಿಗೊಡುತ್ತಿದ್ದಂತೆ ತೋರುತ್ತಿತ್ತು. ಬೇರೆ ಯಾರಿಗಾದರೂ ಬೇಕು

ಎಂದಾದರೆ, ಗಾಳಿ ಇಲ್ಲದ ದಿವಸ ನಿಶ್ಚಲವಾಗಿರುವ ಗಾಳಿಕೋಳಿಯ ಹಾಗೆ ಆರಾಮ ಕುರ್ಚಿಯ ಮೇಲೆ ಕುಳಿತಿದ್ದ ವೃದ್ಧನಿಗೆ, ಆ ಗೌರವವನ್ನು ಕೊಡುವುದು ಸಾಧ್ಯವಿತ್ತು. ಈ ವಾತಾವರಣ ದೀರ್ಘಕಾಲ ಹೀಗೆಯೇ ಇದ್ದು, ಪ್ರೇಕ್ಷಕರು ಬೇಜಾರಿನಿಂದ ಹೆಪ್ಪು ಗಟ್ಟಿ ಹೋದರು.

"ಈಗ ನ್ಯಾಯಾಲಯ...." ಎಂದು ಹೇಳುತ್ತ ವೃದ್ಧ ಮನುಷ್ಯ ಎದ್ದುನಿಂತ. ಮುಂದಿನ ಪದಗಳು ಅವನ ತೆಳು ತುಟಿಗಳ ಹಿಂದೆ ಸಿಲುಕಿಕೊಂಡುವು.

ನಿಟ್ಟುಸಿರು, ಶಾಂತ ಉದ್ಗಾರ, ಕೆಮ್ಮು, ಕಾಲ ಸಪ್ಪಳಗಳಿಂದ ನ್ಯಾಯಸ್ಥಾನ ತುಂಬಿ ಹೋಯಿತು. ಕೈದಿಗಳನ್ನು ಹೊರಕ್ಕೊಯ್ದರು. ಸಂಬಂಧಿಕರನ್ನೂ ಸ್ನೇಹಿತರನ್ನೂ ನೋಡಿ ಕೈದಿಗಳು ಮುಗುಳ್ನಗುತ್ತ ತಲೆಯಾಡಿಸಿದರು. "ಧೈರ್ಯ ಕಳಕೊ ಬೇಡ, ಯೆಗೋರ್ !" ಎಂದು, ಯಾರೋ ಒಬ್ಬನನ್ನು ಕುರಿತು ಇವಾನ್ ಗೂಸೆವ್ ಗಟ್ಟಿಯಾಗಿ ಮಾತನಾಡಿಯೂ ಬಿಟ್ಟ.

ತಾಯಿ ಮತ್ತು ಸಿಜೋವ್ ಎದ್ದು ಒಳಾಂಗಣಕ್ಕೆ ಹೋದರು.

"ಹೋಟ್ಲಿಗೆ ಹೋಗಿ ಒಂದು ಕಪ್ ಚಾ ಕುಡಿಯೋಣವೆ? ಇನ್ನೂ ಒಂದೂವರೆ ಘಂಟೆ ಬಿಡುವಿದೆ," ಎಂದು ಸಿಜೋವ್ ತುಂಬಿದ ಧ್ವನಿಯಲ್ಲಿ ಹೇಳಿದ.

"ಏನೂ ಬೇಡಾಂತ ತೋರುತ್ತೆ."

"ನನಗೂ ಬೇಕೆಂದೇನೂ ಇಲ್ಲ... ನಮ್ಮ ಹುಡುಗರ ವಿಷಯ ಏನಂತೀಯಾ, ಹುಂ? ಈ ಪ್ರಪಂಚದ ಮೇಲೆ ತಾವು ಮಾತ್ರ ಇರೋದು, ಬೇರೆಯವರು ಲೆಕ್ಕಕ್ಕೆ ಇಲ್ಲ ಅನ್ನೋ ಹಾಗೆ ಕೂತಿರ್ತಾರೆ.... ಅಲ್ಲ? ಆ ಫ್ಯೋದೊರ್ !..."

ಸಮೋಯ್‌ಲೊವ್‌ನ ತಂದೆ, ತನ್ನ ಹ್ಯಾಟನ್ನು ಕೈಲಿ ಹಿಡಿದುಕೊಂಡು, ಅವರೆಡೆಗೆ ಬಂದ. ಹಿಂದಿನ ತನ್ನ ಯೋಚನೆ ತಪ್ಪಾಗಿತ್ತೆಂಬಂತೆ ಮುಗುಳ್ನಗುತ್ತಾ ಆತ ಹೇಳಿದ:

"ನನ್ನ ಗ್ರಿಗೋರಿಯ್‌ನ ನೋಡಿದ್ಯಾ? ಯಾವ ವಕೀಲನೂ ಬೇಡ, ನಿಮ್ಜ ತೇಲಿ ಮಾತೇ ಆಡೋದಿಲ್ಲ, ಅಂದ. ಅವನೇ ಮೊದಲು ಹಾಗೆ ಹೇಳಿದ್ದು. ನಿನ್ನ ಮಗ ವಕೀಲರನ್ನಿಡಬೇಕೆಂದಿದ್ದ, ಪೆಲಗೇಯ. ಆದರೆ ನನ್ನವನು ಏನೂ ಬೇಡ ಅಂದ. ಆತ ಹಾಗೆ ಹೇಳಿದ್ಮೇಲೆ ಉಳಿದ ನಾಲ್ಕು ಜನರೂ ಬೇಡ ಅಂದರು...."

ಅವನ ಬದಿಯಲ್ಲೇ ಆತನ ಹೆಂಡತಿ ನಿಂತಿದ್ದಳು. ಒತ್ತರಿಸುತ್ತಿದ್ದ ಕಂಬನಿಯನ್ನು ತಡೆಹಿಡಿಯುತ್ತ, ಆಕೆ ತನ್ನ ಕರವಸ್ತ್ರದ ಅಂಚಿನಿಂದ ಮೂಗೊರೆಸಿಕೊಂಡಳು.

ಸಮೋಯ್‌ಲೊವ್, ತನ್ನ ಗಡ್ಡವನ್ನು ಹಿಡಿದುಕೊಳ್ಳುತ್ತಾ ನೆಲವನ್ನೆ ದಿಟ್ಟಿಸುತ್ತಾ ಹೇಳಿದ:

"ಏನು ಹೇಳೋಣ ಇದಕ್ಕೆ! ಆ ಹುಚ್ಚುಂಡೇವನ್ನ ನೋಡ್ತಾಗ, ಇಂಥ ತೊಂದರೆಗೆ ಸಿಕ್ಕಿಹಾಕ್ಕೊಂಡ್ರಲ್ಲಾ ಅಂತ ಕನಿಕರವಾಗ್ದೆ ಇರೋದಿಲ್ಲ. ತಕ್ಷಣ, ಅವರು ಮಾಡ್ತಿರೋದೇ ಸರಿಯೇನೋ ಅಂತ ಯೋಚನೆಯಾಗ್ತದೆ! ಅದೂ ಕೂಡಾ, ಕಾರಖಾನೇಲಿ ಅವರ ಸಂಖ್ಯೆ ಬೆಳೀತಾ ಇರೋದನ್ನ ನೋಡುವಾಗ.... ಪೋಲೀಸರು ಹಿಡಕೊಂಡು ಹೋಗ್ತಾನೇ ಇರ್ತಾರೆ. ಆದರೆ ಇವರು, ನದೀಲಿರೋ ಮೀನಿನ ಹಾಗೆ

ಹೆಚ್ಚಾನೇ ಇರ್ತಾರೆ. ಪುನಃ, ಅವರೇ ಬಲಿಷ್ಠರೇನೋ ಅಂತ ಯೋಚನೆಯಾಗ್ತದೆ."

"ನಮಗೆಲ್ಲಾ ಈ ವಿಷಯ ಅರ್ಥಮಾಡಿಕೊಳ್ಳೋದು ಕಷ್ಟ, ಸ್ತೆಪಾನ್ ಪೆತ್ರೋವಿಚ್," ಎಂದ ಸಿಜೋವ್.

"ಹೌದು, ಕಷ್ಟ," ಎಂದು ಆತ ಒಪ್ಪಿದ.

"ಮುಂಡೇವು ಎಲ್ಲಾ ಆರೋಗ್ಯವಾಗಿವೆ," ಎಂದು ಆತನ ಹೆಂಡತಿ, ಮೂಗಿನ ಸದ್ದು ಮಾಡುತ್ತಾ ಹೇಳಿದಳು.

ಆ ಬಳಿಕ ಆಕೆ, ವಿಶಾಲವಾದ ಊದಿಕೊಂಡಂತಿದ್ದ ಮುಖದ ಮೇಲೆ ಮುಗುಳ್ನಗೆ ಮೂಡಿಸುತ್ತ, ತಾಯಿಯತ್ತ ತಿರುಗಿದಳು.

"ನನ್ನ ಮೇಲೆ ಸಿಟ್ಟಾಗ್ಬೇಡ, ನೀಲೊವ್ನ. ಬೆಳಗ್ಗೆ, ನಿನ್ನ ಮಗನೆ ಇದಕ್ಕೆಲ್ಲಾ ಕಾರಣ ಅಂತ ದೂರು ಹೊರಿಸಿದೆ. ಆದರೆ ಇದಕ್ಕೆಲ್ಲಾ ಯಾರನ್ನು ಅತಿ ಹೆಚ್ಚು ದೂರ್ಬೇಕು ಅನ್ನೋದು ಸೈತಾನನಿಗೇ ಗೊತ್ತು. ನಮ್ಮ ಗ್ರಿಗೋರಿಯ್ ವಿಷಯ, ಪೋಲೀಸರೂ ಗೂಢಚಾರರೂ ಏನು ಹೇಳಿದ್ರು ಕೇಳಿದಿಯಾ? ಅವನೂ ಸಾಕಷ್ಟು ಮಾಡಿದ್ದಾನೆ. ಮಹಾ ತುಂಟ!"

ತನ್ನ ಮಗನ ವಿಷಯವಾಗಿ ಆಕೆ ಹೆಮ್ಮೆಪಡುತ್ತಿದ್ದಳೆಂಬುದು ಸ್ಪಷ್ಟವಾಗಿತ್ತು. ಆದರೆ ಅಂತಹ ಭಾವನೆ ತನಗಿದ್ದುದು ಆಕೆಗೆ ತಿಳಿದಿತ್ತೋ ಇಲ್ಲವೋ. ಆದರೆ ತಾಯಿ ಅದನ್ನು ಮೆಚ್ಚಿಕೊಂಡಳು. ದಯಾಪೂರ್ಣ ಮುಗುಳ್ನಗೆಯೊಡನೆ ಹೃತ್ಪೂರ್ವಕ ಮಾತುಗಳಿಂದ ತಾಯಿ ಉತ್ತರಿಸಿದಳು:

"ಎಳೇ ಹೃದಯಗಳಿಗೆ ಯಾವಾಗಲೂ ಸತ್ಯ ಹೆಚ್ಚು ಬೇಗನೆ ಗೊತ್ತಾಗ್ತದೆ...."

ಜನರು ಮೊಗಸಾಲೆಯಲ್ಲಿ ಓಡಾಡಿ, ಗುಂಪುಗಳಾಗಿ, ಉದ್ವಿಗ್ನಗೊಂಡ ಹತ್ತಿಕ್ಕಿದ ಸ್ವರಗಳಲ್ಲಿ ಮಾತನಾಡಿದರು. ಒಬ್ಬರೇ ಆಗಿ ಯಾರೂ ನಿಲ್ಲಲಿಲ್ಲ. ಮಾತನಾಡುವ, ಪ್ರಶ್ನೆಗಳನ್ನು ಕೇಳುವ, ಉತ್ತರಗಳಿಗೆ ಕಿವಿಗೊಡುವ ಬಯಕೆಯನ್ನು ಎಲ್ಲ ಮುಖಗಳೂ ವ್ಯಕ್ತಪಡಿಸಿದುವು. ಅಗಲ ಕಿರಿದಾದ ಆ ಜಾಗದಲ್ಲಿ ಬಲವಾಗಿ ಬೀಸುತ್ತಿದ್ದ ಗಾಳಿಗೆ ಒಳಗಾದವರಂತೆ ಅವರು ಹಿಂದಕ್ಕೂ ಮುಂದಕ್ಕೂ ನಡೆದರು. ಆಧರಿಸಿ ನಿಲ್ಲಲು, ಬಲವಾದ ದೃಢವಾದ ಯಾವುದನ್ನೋ ಅವರು ಹುಡುಕುತ್ತಿದ್ದಂತೆ ತೋರಿತು.

ಬೂಕಿನ್‌ನ ಹಾಗೆಯೇ ಬೆಳ್ಳಗಿನ ಮೈಯಿದ್ದ, ಎತ್ತರವಾಗಿದ್ದ, ಆತನ ಅಣ್ಣ, ಯಾವುದನ್ನೋ ಸರಿಯೆಂದು ಸಿದ್ಧಪಡಿಸಿ ಕೊಡುವ ಯತ್ನದಲ್ಲಿ, ತನ್ನ ತೋಳುಗಳನ್ನು ಬೀಸುತ್ತಾ ಸುತ್ತಲೂ ನೋಡಿದ:

"ಜಿಲ್ಲೆಯ ಮುಖ್ಯಸ್ಥ ಕ್ಲೆಪಾನೊವ್–ಆತನಿಗೆ ಏನು ಕೆಲಸವಿದೆ ಇಲ್ಲಿ?..."

"ಬಾಯಿ ಮುಚ್ಕೊಂಡಿರು, ಕೊನ್‌ಸ್ತಂತೀನ್," ಎಂದು ಆತನ ತಂದೆ, ಕುಳ್ಳನೆಯ ಮುದುಕ, ಎಚ್ಚರಿಕೆಯಿಂದ ಸುತ್ತಲೂ ದೃಷ್ಟಿ ಹರಿಸುತ್ತ ಹೇಳಿದ.

"ನಾನು ಸುಮ್ನಿರೋದಿಲ್ಲ! ಒಬ್ಬ ಗುಮಾಸ್ತನ ಹೆಂಡತಿಗೋಸ್ಕರ ಆತ ಆ ಗುಮಾಸ್ತನನ್ನೇ ಕೊಂದ ಅಂತ ಕಿಂವದಂತಿ ಇದೆ. ಈಗ ಆ ಹೆಂಗಸಿನ ಜತೇಲಿ ಈತ ವಾಸಮಾಡ್ತಿದಾನೆ. ಅದಕ್ಕೆ ಏನಂತೀರ? ಇದಲ್ಲದೆ ಅವನು ಕಳ್ಳ ಅನ್ನೋದು ಪ್ರತಿಯೊಬ್ಬರಿಗೂ ಗೊತ್ತಿದೆ...."

"ದಮ್ಮಯ್ಯ, ಸುಮ್ನಿರೋ ಕೊನ್‌ಸ್ತಂತೀನ್ !..."

ಸಮೋಯ್‌ಲೊವ್‌ನ ತಂದೆ ಹೇಳಿದ:

"ಅದ್ಸರಿ.... ಅದ್ಸರಿ.... ಈ ವಿಚಾರಣೆ ನ್ಯಾಯುವಾದ ರೀತೀಲಿ ಆಗಿದೇಂತ ಹೇಳೋ ಹಾಗೇ ಇಲ್ಲ...."

ಆ ಸ್ವರವನ್ನು ಕೇಳಿದೊಡನೆಯೇ ಕೊನ್‌ಸ್ತಂತೀನ್ ಅತ್ತ ಬಂದ. ಜತೆಯಲ್ಲೆ ಅವನ ಹಿಂದಿದ್ದವರೂ ಬಂದರು. ಆತನ ಮುಖ ಕೆಂಪಗಿತ್ತು. ಆತ ತೋಳುಗಳನ್ನು ಬೀಸುತ್ತ ಗಟ್ಟಿಯಾಗಿ ಕೂಗಿದ:

"ಕೊಲೆ ಅಥವಾ ಕಳ್ಳತನವಾದರೆ, ರೈತರ, ಶಹರದವರ ಕೆಲಸಗಾರರ ಪ್ರತಿ ನಿಧಿಗಳು ವಿಚಾರಣೆ ಮಾಡ್ತಾರೆ. ಆದರೆ ಜನರು ಅಧಿಕಾರಿಗಳ ವಿರುದ್ಧ ಹೋದರೆ ಅವರನ್ನ ವಿಚಾರಣೆ ಮಾಡೋದು ಅಧಿಕಾರಿಗಳೇ ! ಏನಂತೀರ ಇದಕ್ಕೆ? ನೀವು ನನ್ನನ್ನ ಅವಮಾನಿಸಿದ್ದಕ್ಕೆ ನಾನು ಒಂದೇಟು ಬಿಗಿದರೆ, ತೀರ್ಪು ಕೊಡೋರು ನೀವೇ. ಆಗ ಅಪರಾಧಿ ನಾನು ಅನ್ನೋದರಲ್ಲಿ ಸಂದೇಹವೇ ಇಲ್ಲ ! ಆದರೆ ಪ್ರಥಮವಾಗಿ ತಪ್ಪು ಮಾಡಿದ್ದು ಯಾರು? ನೀವು !"

ನರೆಗೂದಲಿನ, ಡೊಂಕು ಮೂಗಿನ, ಎದೆ ತುಂಬ ಪದಕ ಚುಚ್ಚಿದ್ದ ದ್ವಾರ ಪಾಲಕನೊಬ್ಬ ಜನರನ್ನು ಚೆದರಿಸಿ, ಕೊನ್‌ಸ್ತಂತೀನ್‌ನತ್ತ ಬೆರಳಾಡಿಸುತ್ತಾ ಹೇಳಿದ:

"ಕೂಗಾಡೋದು ನಿಲ್ಸು. ಇದು ಹೆಂಡದಂಗಡಿಯಲ್ಲ !"

"ಸರಿ. ನನಗೆ ಗೊತ್ತಿದೆ. ಆದರೆ, ನಾನು ನಿಮಗೊಂದು ಏಟು ಕೊಟ್ಟು, ನಾನೇ ನ್ಯಾಯಾಧೀಶನಾದರೆ, ನೀವು...."

"ನಾನು ನಿನ್ನನ್ನೀಗ ಹೊರ ಹಾಕ್ತೀನಿ, ಅಷ್ಟೆ !" ಎಂದು ಕಾವಲುಗಾರ ಉಗ್ರ ವಾಗಿಯೇ ಹೇಳಿದ.

"ಹೊರಹಾಕೋದು? ಯಾತಕ್ಕೋಸ್ಕರ?"

"ಇಷ್ಟೊಂದು ಗದ್ದಲಮಾಡಿದ್ದಕ್ಕೋಸ್ಕರ. ನಿನ್ನನ್ನ ಬೀದಿಗೆ ಇಳಿಸ್ತೀನಿ."

ಕೊನ್‌ಸ್ತಂತೀನ್, ಸುತ್ತಲೂ ಇದ್ದವರನ್ನು ನೋಡಿ, ಇಳಿಸ್ವರದಲ್ಲಿ ಹೇಳಿದ:

"ಜನ ಬಾಯ್ಮುಚ್ಚಿದರೆ ಸಾಕು. ಅಷ್ಟೆ ಅವರಿಗೆ ಬೇಕಾದ್ದು !"

"ಹೌದು. ಬೇರೆ ಏನೂಂತಿದ್ದೆ?" ಎಂದು ಕಾವಲುಗಾರ ಒರಟಾಗಿ ಹೇಳಿದ.

ಕೊನ್‌ಸ್ತಂತೀನ್ ಭುಜ ಕುಪ್ಪಳಿಸಿ, ಹೆಚ್ಚು ಮೃದುವಾಗಿ ಮಾತನಾಡತೊಡಗಿದ:

"ವಿಚಾರಣೇನ ನೋಡೋಕೆ ಜನರನ್ನು ಯಾಕೆ ಒಳಗೆ ಬಿಡಕೂಡ್ದು? ಸಂಬಂಧಿ ಕರಿಗೆ ಮಾತ್ರ ಅಂತ ಯಾಕೆ ಹೇಳ್ಬೇಕು? ವಿಚಾರಣೆ ನ್ಯಾಯುವಾದ್ದಾದರೆ, ಎಲ್ಲರೂ ಬಂದು ನೋಡ್ಲಿ ! ಹೆದರೋದು ಯಾತಕ್ಕೆ?"

"ವಿಚಾರಣೆ ನ್ಯಾಯುವಾದ ರೀತೀಲಿ ನಡೀತಿಲ್ಲ. ಆ ವಿಷಯದಲ್ಲಿ ಸಂದೇಹವಿಲ್ಲ," ಎಂದು ಸಮೋಯ್‌ಲೊವ್‌ನ ತಂದೆ ಮತ್ತೊಮ್ಮೆ ದೃಢವಾಗಿ ಒತ್ತಿ ಹೇಳಿದ.

ಈ ವಿಚಾರಣೆ ಅಕ್ರಮವಾದದ್ದೆಂಬ ವಿಷಯ ನಿಕೊಲಾಯ್ ಹೇಳಿದ್ದನ್ನು

ತಾಯಿ ಕೇಳಿದ್ದಳು. ಅದನ್ನು ಈತನಿಗೆ ತಿಳಿಸಬೇಕೆಂದು ತಾಯಿಗೆ ಅಪೇಕ್ಷೆಯಾಯಿತು. ಆದರೆ ನಿಕೊಲಾಯ್ ಹೇಳಿದ್ದೆಲ್ಲವೂ ತಾಯಿಗೆ ಅರ್ಥವಾಗಿರಲಿಲ್ಲ. ಅಲ್ಲದೆ, ಕೆಲ ಅಂಶ ಗಳು ಮರೆತು ಹೋಗಿತ್ತು. ಅದನ್ನ ಸ್ಮರಿಸಿಕೊಳ್ಳಲೆತ್ನಿಸುತ್ತಾ ತಾಯಿ ಪಕ್ಕಕ್ಕೆ ಸರಿ ದಳು. ಆಗ, ತೆಳ್ಳಗಿನ ಮೀಸೆಯಿದ್ದ ಯುವಕನೊಬ್ಬ ತನ್ನನ್ನೆ ನೋಡುತ್ತಿದ್ದುದನ್ನು ತಾಯಿ ಕಂಡಳು. ಆತ ಬಲಕೈಯನ್ನು ಷರಾಯಿ ಜೇಬಿನೊಳಗೆ ಇರಿಸಿದ್ದ. ಇದರಿಂದ, ಆತನ ಎಡಭುಜ ಬಲಭುಜಕ್ಕಿಂತ ಸ್ವಲ್ಪ ತಗ್ಗಾಗಿದ್ದಂತೆ ತೋರಿತು. ಈ ವಿಶಿಷ್ಟತೆ ಯಾಕೋ ತನಗೆ ಪರಿಚಯವಾಗಿದ್ದಂತೆ ತಾಯಿಗೆ ಅನಿಸಿತು. ಆದರೆ ಆತ ಆಕ್ಷಣವೆ ಬೆನ್ನು ತಿರುಗಿಸಿದ. ನಿಕೊಲಾಯ್‌ನ ಮಾತುಗಳನ್ನು ನೆನಪಿಗೆ ತರುವ ಪ್ರಯತ್ನದಲ್ಲಿ, ಆ ಯುವಕನನ್ನು ತಾಯಿ ಮರೆತಳು.

ಆದರೆ ಒಂದು ನಿಮಿಷದಲ್ಲೇ ತಾಯಿಗೆ, ಮೆಲುದನಿಯ ಪ್ರಶ್ನೆಯೊಂದು ತನ್ನ ಸಮೀಪದಲ್ಲೆ ಕೇಳಿಸಿದಂತಾಯಿತು.

"ಆಕೆ?"

"ಹೌದು," ಎಂಬ ಆತುರದ ಉತ್ತರ....

ತಾಯಿ ತಿರುಗಿ ನೋಡಿದಳು. ಎತ್ತಿದ ಭುಜದ ಮನುಷ್ಯ ಪಕ್ಕಕ್ಕೆ ತಿರುಗಿ ನಿಂತು, ಬಳಿಯಲ್ಲಿದ್ದವನಿಗೆ ಏನನ್ನೋ ಹೇಳುತ್ತಿದ್ದ. ಆ ಇನ್ನೊಬ್ಬನೂ ಯುವಕ ನಾಗಿದ್ದ. ಕರಿಯ ಗಡ್ಡವಿತ್ತು. ಮೊಣಕಾಲಿನವರೆಗೂ ಬೂಟು ಧರಿಸಿ ಪುಟ್ಟ ಕೋಟು ತೊಟ್ಟಿದ್ದ.

ಮತ್ತೊಮ್ಮೆ ತಾಯಿ ತನ್ನ ನೆನಪನ್ನು ಕೆದಕಿದಳು. ಕಸಿವಿಸಿಯಾಯಿತು. ನಿರ್ದಿಷ್ಟವಾದುದೇನೂ ಆಕೆಗೆ ಸಿಗಲಿಲ್ಲ. ತನ್ನ ಮಗನ ಧ್ಯೇಯವನ್ನು ಕುರಿತು ಆ ಜನರಿಗೆ ಹೇಳಬೇಕೆಂಬ ತಡೆಯಲಾಗದ ಬಯಕೆಯೊಂದು ಆಕೆಯ ಹೃದಯವನ್ನು ತುಂಬಿಕೊಂಡಿತು. ಅದಕ್ಕೆ ಇದಿರಾಗಿ ಅವರು ಏನು ಹೇಳುವರೆಂಬುದನ್ನು ತಿಳಿದು, ಅದರ ಆಧಾರದ ಮೇಲೆ ನ್ಯಾಯಸ್ಥಾನದ ತೀರ್ಮಾನವನ್ನು ಊಹಿಸಿಕೊಳ್ಳಲು ತಾಯಿ ಬಯಸಿದಳು.

ಎಚ್ಚರಿಕೆಯಿಂದ, ಶಾಂತವಾಗಿ, ಸಿಜೋವನತ್ತ ತಿರುಗಿ ತಾಯಿ ಆರಂಭಿಸಿದಳು:

"ಇದೇ ಏನು ವಿಚಾರಣೆ ನಡೆಸೋ ರೀತಿ? ಯಾರು ಯಾವುದನ್ನ ಮಾಡಿ ದ್ರೂಂತ ಕಂಡುಹಿಡಿಯೋದರಲ್ಲೇ ತಮ್ಮ ಸಮಯವನ್ನೆಲ್ಲಾ ಅವರು ಕಳೀತಾರೆ. ಅದನ್ನು ಯಾಕೆ ಮಾಡಿದ್ರು ಅನ್ನೋ ವಿಷಯಕ್ಕೆ ಅವರು ಗಮನಕೊಡೋದೇ ಇಲ್ಲ. ಅಲ್ದೆ, ಅವರೆಲ್ಲಾ ಮುದುಕರು. ಯುವಕರ ವಿಚಾರಣೇನ ಯುವಕರೇ ಮಾಡ್ಬೇಕು."

ಸಿಜೋವ್ ಆ ಮಾತನ್ನೊಪ್ಪುತ್ತ ಹೇಳಿದ:

"ಹೌದು. ಈ ವಿಷಯ ಅರ್ಥಮಾಡಿಕೊಳ್ಳೋದು ನಮಗೆ ಕಷ್ಟ, ಬಹಳ ಕಷ್ಟ."

ಯೋಚನಾಪೂರ್ಣವಾಗಿ ಆತ ತಲೆಯಲುಗಿಸಿದ,

ದ್ವಾರಪಾಲಕ ನ್ಯಾಯಾಸ್ಥಾನದ ಬಾಗಿಲು ತೆರೆದು ಕರೆದ:

"ಸಂಬಂಧಿಕರು! ನಿಮ್ಮ ಟಿಕೆಟ್ ತೋರಿಸಿ!"

"ಟಿಕೆಟ್ಟು!... ಸರ್ಕಸ್ನಲ್ಲಿದ್ದ ಹಾಗೆ!" ಎಂದು ಯಾರೋ ವ್ಯಂಗ್ಯವಾಗಿ ಅಂದರು.

ಜನರೆಡೆಯಲ್ಲಿ ಒಂದು ರೀತಿಯ ಅಸ್ಪಷ್ಟವಾದ ಸಿಡುಕು ಇದ್ದುದ್ದು ಕಾಣಿ ಸುತ್ತಿತ್ತು. ಅವರೀಗ ವಾಚಾಳಿಗಳಾಗಿದ್ದರು; ಮೈ ಸಡಿಲಬಿಟ್ಟು ಸಾಗಿದರು. ಕಾವಲು ಗಾರರೊಡನೆ ವಾದ ವಿವಾದಕ್ಕೂ ಮೊದಲು ಮಾಡಿದರು.

೨೫

ಸಿಜೋವ್ ಬೆಂಚಿನ ಮೇಲೆ ಕುಳಿತುಕೊಳ್ಳುತ್ತಿದ್ದಂತೆ ಏನನ್ನೋ ಗೊಣಗಿದ.

"ಏನದು?" ಎಂದು ತಾಯಿ ಕೇಳಿದಳು.

"ವಿಶೇಷವೇನೂ ಇಲ್ಲ.... ಜನ ಮೂರ್ಖರು...."

ಗಂಟೆ ಬಾರಿಸಿದ್ದಾಯಿತು.

"ಆರ್ಡರ್! ನ್ಯಾಯಸ್ಥಾನದಲ್ಲಿ ಸುಮ್ಮನಿರಿ!..."

ಮತ್ತೊಮ್ಮೆ ನ್ಯಾಯಾಧೀಶರು ಒಳಗೆ ಬಂದಂತೆ, ಎಲ್ಲರೂ ಎದ್ದು ನಿಂತರು. ನ್ಯಾಯಾಧೀಶರೆಲ್ಲ ಮೊದಲಿನಂತೆಯೇ ತಮ್ಮ ಸ್ಥಾನಗಳಲ್ಲಿ ಕುಳಿತರು. ಕೈದಿಗಳನ್ನು ಅವರ ಸ್ಥಾನಗಳಿಗೆ ಕರೆದೊಯ್ಯಲಾಯಿತು.

"ಕಿವಿಗೊಟ್ಟು ಕೇಳು. ಪ್ರಾಸಿಕ್ಯೂಟರನು ಈಗ ಭಾಷಣ ಮಾಡ್ತಾನೆ," ಎಂದು ಸಿಜೋವ್ ಪಿಸುಗುಟ್ಟಿದ.

ಭಯಾನಕವಾದುದೇನನ್ನೊ ಮತ್ತೊಮ್ಮೆ ನಿರೀಕ್ಷಿಸುತ್ತಾ, ಇಡಿಯ ದೇಹ ವನ್ನೇ ತಾಯಿ ಮುಂದಕ್ಕೆ ಬಾಗಿಸಿ ಕುಳಿತಳು.

ಪ್ರಾಸಿಕ್ಯೂಟರನು ನ್ಯಾಯಾಧೀಶರ ಒಂದು ಪಕ್ಕದಲ್ಲಿ, ಅವರತ್ತ ಮುಖ ತಿರುಗಿಸಿ, ಒಂದು ಮೊಣಗೈಯನ್ನು ಇಳಿಜಾರು ಮೇಜಿನ ಮೇಲಿರಿಸಿ, ನಿಂತ. ನಿಟ್ಟು ಸಿರು ಬಿಟ್ಟು, ಬಲಗೈಯನ್ನು ಬೀಸಿ, ಆತ ಮಾತನಾಡತೊಡಗಿದ. ಆತನ ಆರಂಭದ ಮಾತುಗಳೇನೆಂಬುದು ತಾಯಿಗೆ ಗೊತ್ತಾಗಲಿಲ್ಲ. ಆತನ ಸ್ವರ ದಪ್ಪಗೆ ನಯವಾಗಿ ಹರಿಯುತ್ತಿತ್ತು. ಆದರೆ ಅದು ಒಂದೇ ಸಮನಾಗಿರಲಿಲ್ಲ. ಕೆಲವೊಮ್ಮೆ ವೇಗವಾಗಿಯೂ ಕೆಲವೊಮ್ಮೆ ನಿಧಾನವಾಗಿಯೂ ಇತ್ತು. ಸ್ವಲ್ಪ ಹೊತ್ತು ಮಾತುಗಳು, ನಿಧಾನ ವಾಗಿ ನೀರಸವಾಗಿ ಪ್ರಯಾಸದಿಂದ ಹಾಕುವ ಹೊಲಿಗೆಯ ಹಾಗೆ ಬರುತ್ತಿದ್ದುವು. ಆದರೆ ಒಮ್ಮೆಲೆ ತುಂಬಿಕೊಂಡು, ಸಕ್ಕರೆಯ ಮೇಲಿನ ನೊಣಗಳ ಹಾಗೆ ಗುಂಯ್ ಗುಡುತ್ತ ಸುತ್ತುವರಿಯುತ್ತಿದ್ದುವು. ಆದರೆ ಆ ಮಾತುಗಳಲ್ಲಿ ದುಷ್ಟವಾದುದೇನೂ ತಾಯಿಗೆ ಕಾಣಿಸಲಿಲ್ಲ. ಅವು, ಹಿಮದಷ್ಟು ಶೀತಲವಾಗಿ, ಬೂದಿಯಷ್ಟು ಬಿಳಿಯಾಗಿ, ಕೊಠಡಿಯಲ್ಲೆಲ್ಲಾ ಹರಡಿಕೊಂಡುವು. ಚುಚ್ಚುವ ಸೊಗಸಾದ ಒಣಗಿದ ಪುಡಿಯಂತೆ

ಸ್ವಲ್ಪ ಸ್ವಲ್ಪವಾಗಿ ಆ ಮಾತುಗಳು ಅಲ್ಲಿ ತುಂಬಿದುವು. ಹೇರಳವಾದ ಪದಗಳಿಂದ ತುಂಬಿದ್ದ ಯಾವ ಭಾವನೆಯೂ ಇಲ್ಲದಿದ್ದ ಈ ಮಾತುಗಳು, ಪಾವೆಲ್ ಮತ್ತು ಅವನ ಸಂಗಾತಿಗಳಿಗೆ ಕೇಳಿಸಿದಂತೆಯೇ ತೋರಲಿಲ್ಲ. ಖಂಡಿತವಾಗಿಯೂ ಅದು ಅವರ ಮೇಲೆ ಯಾವ ಪರಿಣಾಮವನ್ನೂ ಮಾಡಲಿಲ್ಲ. ಅವರೆಲ್ಲ ಎಂದಿನಂತೆ ಶಾಂತ ವಾಗಿ, ಮೆಲುದನಿಯಲ್ಲಿ ಮಾತನಾಡುತ್ತ, ಕೆಲವೊಮ್ಮೆ ಮುಗುಳ್ನಗುತ್ತ, ಕೆಲವೊಮ್ಮೆ ನಗೆಯನ್ನು ಮರೆಸುವುದಕ್ಕಾಗಿ ಹುಬ್ಬುಗಂಟಿಕ್ಕುತ್ತ, ಕುಳಿತರು.

"ಅವನು ಸುಳ್ಳಾಡ್ತಿದ್ದಾನೆ," ಎಂದು, ಸಿಜೋವ್ ಪಿಸುದನಿಯಲ್ಲಿ ಹೇಳಿದ.

ತಾಯಿ ಹಾಗೆ ಹೇಳುವಂತಿರಲಿಲ್ಲ. ಪ್ರಾಸಿಕ್ಯೂಟರನ ಮಾತುಗಳನ್ನು ಆಕೆ ಕೇಳಿದಳು. ಯಾರನ್ನೂ ಬಿಡದೆ ಎಲ್ಲ ಕೈದಿಗಳ ಮೇಲೂ ಆತ ಆರೋಪ ಹೊರಿ ಸುತ್ತಿದ್ದನೆಂದು ತಾಯಿ ಮನಗಂಡಳು. ಪಾವೆಲ್‌ನ ವಿಷಯ ಮಾತನಾಡಿ ಆತ, ಫ್ಯೋದೊರ್‌ನ ವಿಷಯ ಹೇಳತೊಡಗಿದ. ಫ್ಯೋದೊರ್‌ನ ವಿಷಯ ಮುಗಿದೊಡನೆ ಆತ ಬೂಕಿನ್ ವಿಚಾರವನ್ನೆತ್ತಿಕೊಂಡ. ಅವರನ್ನೆಲ್ಲ ಆತ ಒಂದೇ ಚೀಲದಲ್ಲಿ ಸ್ವಚ್ಛ ವಾಗಿ ತುಂಬುತ್ತಿದ್ದ ಹಾಗಿತ್ತು. ಆದರೆ ಅವನ ಮಾತುಗಳ ಬರಿಯ ಶಬ್ದಾರ್ಥದಿಂದ ತಾಯಿಗೆ ತೃಪ್ತಿಯಾಗಲಿಲ್ಲ. ಅದರಿಂದ ಆಕೆಗೆ ವ್ಯಥೆಯೂ ಆಗಲಿಲ್ಲ, ಭಯವೂ ಆಗಲಿಲ್ಲ. ಇನ್ನೂ ಭೀಕರವಾದುದೇನನ್ನೊ ಆಕೆ ಇದಿರುನೋಡುತ್ತಿದ್ದಳು. ಅದನ್ನು ಆತನ ಮಾತುಗಳಾಚೆ ಮುಖದಲ್ಲಿ, ಕಣ್ಣುಗಳಲ್ಲಿ, ಧ್ವನಿಯಲ್ಲಿ, ಗಾಳಿಯಲ್ಲಿ ಒಂದೇ ಸಮನೆ ಸೊಗಸಾಗಿ ಆಡಿಸುತ್ತಿದ್ದ ಬಿಳಿಯ ಕೈಯಲ್ಲಿ, ತಾಯಿ ಹುಡುಕಿದಳು. ಭಯ ಹುಟ್ಟಿ ಸುವಂಥಾದ್ದೇನೊ ಅಲ್ಲಿತ್ತು. ತಾಯಿಗೆ ಅದರ ಅರಿವಿದ್ದರೂ ಹೃದಯ ಎಚ್ಚರಿಕೆ ಕೊಡುತ್ತಿದ್ದರೂ ಅದನ್ನು ಹಿಡಿದು, ಅದೇನೆಂದು ನಿರ್ದಿಷ್ಟಗೊಳಿಸಲು ತಾಯಿ ಅಸಮರ್ಥಳಾದಳು.

ಆಕೆ ನ್ಯಾಯಾಧೀಶರತ್ತ ನೋಡಿದಳು. ಆ ಭಾಷಣ ಕೇಳಿ ಅವರಿಗೆ ಬೇಸರ ಬಂದಿತ್ತೆಂಬುದರಲ್ಲಿ ಸಂದೇಹವಿರಲಿಲ್ಲ. ನಿರ್ಜೀವವಾದ ಬೂದು ಬಣ್ಣದ ಅರಸಿನ ಬಣ್ಣದ ಆ ಮುಖಗಳಲ್ಲಿ ಯಾವ ಭಾವನೆಯೂ ಇರಲಿಲ್ಲ. ಪ್ರಾಸಿಕ್ಯೂಟರನ ಮಾತು ಗಳು, ಕಣ್ಣಿಗೆ ಕಾಣಿಸದ ಮಂಜಿನ ಪರದೆಯನ್ನು ಸುರುಳಿ ಬಿಚ್ಚಿದುವು. ಆ ಪರದೆ ನ್ಯಾಯಾಧೀಶರ ಸುತ್ತಲೂ ದಟ್ಟವಾಗಿ ಅನಾಸಕ್ತಿಯ ಬೇಸರದ ನಿರೀಕ್ಷಣೆಯ ಮೋಡ ದಲ್ಲಿ ಅವರನ್ನು ಒಟ್ಟಾಗಿ ಬಿಗಿಯಿತು. ಹಿರಿಯ ನ್ಯಾಯಾಧೀಶ ಹೆಪ್ಪುಗಟ್ಟಿದಂತೆ ನೆಟ್ಟಗೆ ಕುಳಿತ. ಆಗಾಗ್ಗೆ, ಅವನ ಕನ್ನಡಕದ ಹಿಂದಿದ್ದ ಬೂದು ಚುಕ್ಕೆಗಳು, ಆತನ ಮುಖದ ಶುಷ್ಕ ವಿಸ್ತಾರದೊಳಗೆ ಕರುಗುತ್ತಿದ್ದುವು.

ಆ ನಿರ್ಜೀವ ನಿರಾಸಕ್ತಿಯನ್ನೂ ಭಾವಹೀನ ನಿರ್ಲಿಪ್ತತೆಯನ್ನೂ ತಾಯಿ ನೋಡಿದಳು.

"ಅವರು ಈಗಾಗಲೇ ತೀರ್ಮಾನಕ್ಕೆ ಬಂದಿರಬಹುದೆ?" ಎಂದು ತನ್ನನ್ನು ತಾನೆ ತಾಯಿ ಕೇಳಿಕೊಳ್ಳುವಂತಾಯಿತು.

ಆ ಪ್ರಶ್ನೆ ಆಕೆಯ ಹೃದಯವನ್ನು ಹಿಂಡಿತು. ಹಾಗೆ ಹಿಂಡುತ್ತ ನಿಧಾನವಾಗಿ ಭಯಾನಕವಾದುದರ ನಿರೀಕ್ಷಣೆಯನ್ನು ಹೊರಕ್ಕೆ ತಳ್ಳಿತು. ಆ ಬಳಿಕ, ನೋವಿನ ತೀಕ್ಷ್ಣ ಅನುಭವ ಮಾತ್ರ ಅಲ್ಲಿ ಉಳಿಯಿತು.

ಪ್ರಾಸಿಕ್ಯೂಟರನ ಭಾಷಣ ಅನಿರೀಕ್ಷಿತವಾಗಿ ಕೊನೆಗಂಡಿತು.

ಕೊನೆಯಲ್ಲಿ, ವೇಗವಾದ ಕೆಲವು ಹೊಲಿಗೆಗಳನ್ನಷ್ಟೆ ಮಾಡಿ, ನ್ಯಾಯಾಧೀಶರಿಗೆ ಬಾಗಿ ವಂದಿಸಿ, ಕುಳಿತುಕೊಂಡು, ಆತ ತನ್ನ ಕೈಗಳನ್ನು ತೀಡಿದ. ಜಮೀನ್ದಾರರ ನಾಯಕ ಆತನಿಗೆ ಮರುವಂದನೆ ಮಾಡಿ, ಕಣ್ಣುಗಳನ್ನು ಮೇಲಕ್ಕೆ ಹೊರಳಿಸಿದ. ನಗರಾಧ್ಯಕ್ಷ ತನ್ನ ಕೈಯನ್ನು ಮುಂದಕ್ಕೆ ಚಾಚಿದ. ಜಿಲ್ಲೆಯ ಮುಖ್ಯಸ್ಥ ತನ್ನ ಹೊಟ್ಟೆಯತ್ತ ಸುಮ್ಮನೆ ನೋಡುತ್ತ ಮುಗುಳ್ನಕ್ಕ.

ನ್ಯಾಯಾಧೀಶರಿಗೇನೂ ಆ ಭಾಷಣದಿಂದ ಸಂತೋಷವಾದ ಹಾಗೆ ತೋರಲಿಲ್ಲ. ಅವರು ಕದಲದೆ ಕುಳಿತರು.

ಒಂದು ಕಾಗದವನ್ನೆತ್ತಿ ಮುಖದೆದುರು ಹಿಡಿದು ವೃದ್ಧ ನ್ಯಾಯಾಧೀಶ ಹೇಳಿದ:

"ಈಗ ಫೆದೊಸೇಯೆವ್, ಮಾರ್ಕೊವ್ ಮತ್ತು ಜಗಾರೊವ್ ಪರ ವಕೀಲರ ಪ್ರತಿಪಾದನೆಯನ್ನು ನ್ಯಾಯಸ್ಥಾನ ಕೇಳ್ತದೆ."

ನಿಕೊಲಾಯ್‌ನ ಮನೆಯಲ್ಲಿ ತಾಯಿ ಕಂಡಿದ್ದ ವಕೀಲ ಎದ್ದು ನಿಂತ. ಆತನಿಗೆ ವಿಶಾಲವಾದ ಸದ್ಭಾವವುಳ್ಳ ಮುಖವಿತ್ತು. ಕೆಂಪಗಿನ ಹುಬ್ಬುಗಳ ಕೆಳಗಿಂದ ಎರಡು ತೀಕ್ಷ್ಣ ಧಾರೆಗಳು ಹೊರಟು ಕತ್ತರಿಯಂತೆ ವಾತಾವರಣವನ್ನು ತುಂಡುರಿಸುತ್ತಿದ್ದುವೇನೋ ಎಂಬಂತೆ, ಪುಟ್ಟ ಕಣ್ಣುಗಳು ಕಿಡಿಕಾರುತ್ತಿದ್ದುವು. ಆತ ಗಟ್ಟಿಯಾಗಿ, ಸ್ಪಷ್ಟವಾಗಿ, ಅವಸರವಿಲ್ಲದೆ ಮಾತನಾಡಿದ. ಆದರೂ ಆ ತಾಯಿಗೆ ಅದೇನೆಂದು ತಿಳಿಯುವುದು ಸಾಧ್ಯವಾಗಲಿಲ್ಲ.

ಸಿಜೋವ್ ಆಕೆಯ ಕಿವಿಯಲ್ಲಿ ಪಿಸುಗುಟ್ಟಿದ:

"ಆತ ಏನು ಹೇಳ್ದ ತಿಳೀತೆ? ಅರ್ಥವಾಯ್ತೆ? ಜನರಿಗೆ ಗಾಬರಿಯಾಗಿದೆಯಂತೆ. ತಲೆಕೆಟ್ಟಿದೆಯಂತೆ. ನನ್ನ ಫ್ಯೋದೊರ್?.."

ತುಂಬ ನಿರಾಶೆಯಾಗಿ ಉತ್ತರಿಸುವುದಾಗದೆ ತಾಯಿ ಕುಳಿತಳು. ನೋವಿನ ಭಾವನೆ ಬೆಳೆದು, ಹೃದಯದ ಮೇಲೆ ಮಹಾ ಭಾರವಾಯಿತು. ಇಲ್ಲಿ ನ್ಯಾಯ ದೊರೆತೀತೆಂದು ತಾನು ಯಾಕೆ ಭಾವಿಸಿದ್ದೆನೆಂಬುದು ತಾಯಿಗೆ ಈಗ ಅರ್ಥವಾಯಿತು. ನ್ಯಾಯಾಧೀಶರ ಸತ್ಯಕ್ಕೆದಿರು ತನ್ನ ಮಗನ ಸತ್ಯವನ್ನು ಕಟ್ಟುನಿಟ್ಟಾಗಿ ಪ್ರಾಮಾಣಿಕವಾಗಿ ಇಲ್ಲಿ ಅಳೆಯಲಾಗುವುದೆಂದು ತಾಯಿ ನಿರೀಕ್ಷಿಸಿದ್ದಳು. ಮಗನೊಳಗೆ ಏನೇನು ಆಗುತ್ತಿದೆ ಎಂಬುದನ್ನು ತಿಳಿಯಲು ನ್ಯಾಯಾಧೀಶರು, ದೀರ್ಘಕಾಲ ಆಸಕ್ತಿಯಿಂದ ಬಲು ವಿವರವಾಗಿ ಪ್ರಶ್ನಿಸುವರೆಂದು, ಆತನ ಎಲ್ಲಾ ಯೋಚನೆಗಳನ್ನೂ ವರ್ತನೆಗಳನ್ನೂ ಸೂಕ್ಷ್ಮವಾಗಿ ನೋಡಿ ಪರೀಕ್ಷಿಸುವರೆಂದು, ತಾಯಿ ನಿರೀಕ್ಷಿಸಿದ್ದಳು. ಅವರು

ಸತ್ಯವನ್ನು ಕಂಡಾಗ, ಗಟ್ಟಿಯಾದ ಸ್ವರದಲ್ಲಿ, "ಈ ಮನುಷ್ಯನದೇ ನ್ಯಾಯ !" ಎಂದು ಜಾಹೀರು ಮಾಡುವರೆಂಬುದು ಆಕೆಯ ತಿಳಿವಳಿಕೆಯಾಗಿತ್ತು.

ಆದರೆ ಅಂಥದೇನೂ ಆಗಲಿಲ್ಲ. ವಿಚಾರಣೆಗೊಳಗಾದವರು ನ್ಯಾಯಾಧೀಶರ ದೃಷ್ಟಿಗೆ ಬೀಳದಷ್ಟು ದೂರವಾಗಿದ್ದಂತೆಯೂ ವಿಚಾರಣೆಗೆ ಒಳಗಾದವರ ದೃಷ್ಟಿಯಲ್ಲಿ, ನ್ಯಾಯಾಧೀಶರಿಗೆ ಯಾವ ಮಹತ್ವವೂ ಇರದಂತೆಯೂ ತೋರಿತು. ಆ ಬೇಸರದಲ್ಲಿ ತಾಯಿಗೆ, ವಿಚಾರಣೆಯಲ್ಲಿ ಯಾವ ಆಸಕ್ತಿಯೂ ಉಳಿಯಲಿಲ್ಲ. ಆ ಮಾತುಗಳಿಗೆ ಕಿವಿಗೊಡದೆಯೆ, ತನ್ನಷ್ಟಕ್ಕೆ ಆಕೆ ಯೋಚಿಸಿದಳು:

"ಇದನ್ನ ವಿಚಾರಣೆ ಅಂತ ಕರೀತಾರಾ?"

ಸಿಜೋವ್ ವಕೀಲನ ಮಾತುಗಳನ್ನು ಕೇಳುವುದರಲ್ಲೆ ತಲ್ಲೀನನಾಗಿದ್ದ.

"ಕೊಡು ಹಾಗೆ !" ಎಂದು ಆತ ಒಪ್ಪಿಗೆ ಸೂಚಿಸುತ್ತ ಪಿಸುಗುಟ್ಟಿದ.

ಈಗ ಮಾತನಾಡುತ್ತಿದ್ದವನು ಬೇರೊಬ್ಬ ವಕೀಲ, ಕುಳ್ಳ ಮನುಷ್ಯ. ತೀಕ್ಷ್ಣವಾದ ನಿಸ್ತೇಜವಾದ ಮುಖ. ಅದರಲ್ಲಿ ತಿರಸ್ಕಾರ ತುಂಬಿತ್ತು. ಆತ ಮಾತನಾಡುತ್ತಿದ್ದಾಗ ನ್ಯಾಯಾಧೀಶರು ನಡುನಡುವೆ ಬಾಯಿಹಾಕುತ್ತಿದ್ದರು.

ಪ್ರಾಸಿಕ್ಯೂಟರನು ಹಾರಿ ಎದ್ದು ಸಿಟ್ಟಿನಿಂದ, ವಿಚಾರಣೆಯ ಕ್ರಮದ ವಿಷಯವಾಗಿ ಏನನ್ನೋ ಹೇಳಿದ. ಆಗ ವೃದ್ಧ ನ್ಯಾಯಾಧೀಶನು ಆರೋಪಿ ವಕೀಲರ ಕಡೆ ತಿರುಗಿ ದುರ್ಬಲವಾಗಿ ಪ್ರತಿಭಟಿಸಿದ. ಈ ವಕೀಲ ಗೌರವದಿಂದ ತಲೆಬಾಗಿಸಿ ಕಿವಿಗೊಟ್ಟು ಕೇಳಿ, ತನ್ನ ಭಾಷಣವನ್ನು ಮುಂದುವರಿಸಿದ.

"ಕೆದಕು. ಇನ್ನೂ ಆಳವಾಗಿ ಕೆದಕು," ಎಂದ ಸಿಜೋವ್.

ನ್ಯಾಯಸ್ಥಾನದಲ್ಲೆಲ್ಲ ಸರಸರ ಗುಲ್ಲೆದ್ದಿತು. ವಕೀಲ, ಚುಚ್ಚು ಮಾತುಗಳಿಂದ ನ್ಯಾಯಾಧೀಶರ ಗಟ್ಟಿಮುಟ್ಟಾದ ಹಳೆಯ ಚರ್ಮವನ್ನು ತುರಿಸತೊಡಗಿದನು. ಆತನ ವಾಕ್ಚಾತುರ್ಯದ ತೀಕ್ಷ್ಣವಾದ ಇರಿತಗಳನ್ನು ಸಹಿಸಲು, ಸಿಟ್ಟಾಗಿ, ಮೂತಿ ಮುಂದಕ್ಕ ಹಾಕಿ, ನ್ಯಾಯಾಧೀಶರು ಒಟ್ಟಾಗಿ ಕುಳಿತಂತೆ ತೋರಿತು....

ಪಾವೆಲ್ ಎದ್ದುನಿಂತ. ನ್ಯಾಯಸ್ಥಾನ ಒಮ್ಮೆಲೆ ಅತ್ಯಂತ ನಿಶ್ಶಬ್ದವಾಯಿತು. ತಾಯಿ ಮುಂದಕ್ಕೆ ಕತ್ತು ಚಾಚಿದಳು. ಪಾವೆಲ್ ಬಲು ಶಾಂತನಾಗಿ ಮಾತನಾಡಿದ:

"ಪಾರ್ಟಿಯ ಸದಸ್ಯನಾಗಿ ನಾನು ಮನ್ನಣೆ ಕೊಡೋದು, ಪಾರ್ಟಿಯ ತೀರ್ಮಾನಕ್ಕೆ ಮಾತ್ರ. ಆದ್ದರಿಂದ, ನನ್ನ ರಕ್ಷಣೆಗಾಗಿ ನಾನು ಮಾತನಾಡೋದಿಲ್ಲ. ಆದರೆ, ನನ್ನ ಹಾಗೆಯೇ ತಮ್ಮನ್ನು ಸಮರ್ಥಿಸಿಕೊಂಡು ಮಾತನಾಡಲು ನಿರಾಕರಿಸಿರುವ ನನ್ನ ಸಂಗಾತಿಗಳ ಅಪೇಕ್ಷೆಯ ಮೇರೆಗೆ, ನೀವು ತಿಳಿದುಕೊಳ್ಳದೇ ಇರುವ ಕೆಲ ವಿಷಯಗಳನ್ನ ನಿಮಗೆ ವಿವರಿಸಲು ಯತ್ನಿಸ್ತೇನೆ. ಸಮಾಜವಾದಿ ಪ್ರಜಾಪ್ರಭುತ್ವದ ಬಾವುಟದ ಕೆಳಗೆ ನಾವು ನಡೆಸಿದ ಪ್ರದರ್ಶನ ಮೆರವಣಿಗೆಯನ್ನ ಪ್ರಾಸಿಕ್ಯೂಟರ್, ಆಳುವ ವರ್ಗಕ್ಕೆ ವಿರುದ್ಧವಾದ ಬಂಡಾಯವೆಂದು ಕರೆದಿದ್ದಾನೆ. ಅವನು ಉದ್ದಕ್ಕೂ, ತ್ಸಾರ್ ಚಕ್ರವರ್ತಿಯನ್ನ ಪದಚ್ಯುತಮಾಡೋದಕ್ಕೆ ಪ್ರಯತ್ನಪಡುತ್ತಿರೋ ಜನ

ರಾಗಿ ನಮ್ಮನ್ನ ಕಂಡಿದ್ದಾನೆ. ನಮ್ಮ ದೇಶವನ್ನ ಕಟ್ಟಿ ಹಾಕಿರೋ ಸಂಕೋಲೆ, ಅರಸೊತ್ತಿಗೆ ಮಾತ್ರ ಅಂತ ನಾವು ಪರಿಗಣಿಸೋದಿಲ್ಲ ಅನ್ನೋದನ್ನ ಸ್ಪಷ್ಟಪಡಿಸೋದಕ್ಕೆ ನಾನು ಬಯಸ್ತೇನೆ. ಅರಸೊತ್ತಿಗೆ, ಮೊದಲ ಮತ್ತು ಸುಲಭವಾಗಿ ಕೈಗೆ ಎಟಕ್ತಿರೋ ಸಂಕೋಲೆ ಮಾತ್ರ. ನಮ್ಮ ಜನರನ್ನ ಅದರಿಂದ ವಿಮುಕ್ತಗೊಳಿಸೋದು ನಮ್ಮ ಕರ್ತವ್ಯವಾಗಿದೆ."

ಆತನ ಬಲಶಾಲಿಯಾದ ಸ್ವರದೆದುರು, ನ್ಯಾಯಸ್ಥಾನದಲ್ಲಿ ನೆಲೆಸಿದ್ದ ಮೌನ ಹೆಚ್ಚು ಗಾಢವಾಯಿತು. ಆ ಧ್ವನಿ, ನ್ಯಾಯಾಸ್ಥಾನದ ಗೋಡೆಗಳನ್ನು ಮತ್ತೂ ಹಿಂದಕ್ಕೆ ಸರಿಸಿದಂತೆ ತೋರಿತು. ಪರಿಣಾಮವಾಗಿ, ಪಾವೆಲ್ ದೂರಕ್ಕೆ ಎತ್ತಲ್ಪಟ್ಟು, ಎತ್ತರದಲ್ಲಿ ಸ್ವಚ್ಛಂದವಾಗಿ ನಿಂತಂತೆ ಕಂಡಿತು.

ನ್ಯಾಯಾಧೀಶರು ತಮ್ಮ ಕುರ್ಚಿಗಳಲ್ಲಿ, ಯೋಚಿಸುತ್ತ ಕಾತರಗೊಳ್ಳುತ್ತ ತಮ್ಮ ದೇಹವನ್ನು ಅತ್ತಿತ್ತ ಚಲಿಸಿದರು. ಜಮೀನ್ದಾರರ ನಾಯಕ, ಕತ್ತು ಬಗ್ಗಿಸಿ ಕುಳಿತಿದ್ದ ನ್ಯಾಯಾಧೀಶನಿಗೆ ಏನನ್ನೋ ಹೇಳಿದ. ಆತ ತಲೆದೂಗಿ, ಅದನ್ನು ವೃದ್ಧ ಮನುಷ್ಯನ ಬಲ ಕಿವಿಯಲ್ಲಿ ಉಸುರಿದ. ಬೊಜ್ಜಿನಿಂದ ನರಳುತ್ತಿದ್ದ ನ್ಯಾಯಾಧೀಶ ಮುದುಕನ ಎಡ ಕಿವಿಯಲ್ಲೇನನ್ನೋ ಹೇಳಿದ. ವೃದ್ಧ ಮನುಷ್ಯ ಅನಿಶ್ಚಯತೆಯಿಂದ ತಿರುಗಿ ಪಾವೆಲ್‌ಗೇನನ್ನೋ ತಿಳಿಸಿದ. ಆದರೆ ಆತನ ಸ್ವರ, ಪಾವೆಲ್‌ನ ಭಾಷಣದ ವಿಶಾಲವಾದ ಒಂದೇ ಸಮನಾದ ಪ್ರವಾಹದಲ್ಲಿ ಮುಳುಗಿ ಹೋಯಿತು.

"ನಾವು ಸಮಾಜವಾದಿಗಳು. ಅಂದರೆ, ಖಾಸಗಿ ಸೊತ್ತಿಗೆ ನಾವು ವಿರೋಧಿಗಳೆಂದಾಯಿತು. ಈ ಖಾಸಗಿ ಸೊತ್ತಿನ ಏರ್ಪಾಟು ಸಮಾಜವನ್ನು ಛಿದ್ರಗೊಳಿಸ್ತದೆ. ಜನರನ್ನ, ಒಬ್ಬರಿಗಿನ್ನೊಬ್ಬರ ಇದಿರಾಗಿ ಎತ್ತಿಕಟ್ತದೆ. ಒಂದಾಗೋದು ಸಾಧ್ಯವೇ ಇಲ್ಲದಂಥ ವಿಭಿನ್ನ ಹಿತಗಳ ವೈರತ್ವವನ್ನು ಉಂಟುಮಾಡ್ತದೆ. ಈ ವೈರತ್ವವನ್ನ ಮರೆಮಾಚುವ ಅಥವಾ ಸಮರ್ಥಿಸುವ ಪ್ರಯತ್ನದಲ್ಲಿ ಕಪಟಕ್ಕೆ ಎಡೆಕೊಡ್ತದೆ. ಸುಳ್ಳು, ವಂಚನೆ, ದುಷ್ಟವೃತ್ತಿಗಳಿಂದ ಜನರನ್ನ ಕೆಡಿಸ್ತದೆ. ವ್ಯಕ್ತಿಯನ್ನು ಶೋಷಣೆಯ ಸಾಧನವಾಗಿ ಮಾತ್ರ ಕಾಣುವ ಸಮಾಜ, ಅಮಾನುಷವಾದದ್ದೆಂತಲೂ ನಮ್ಮ ಹಿತಗಳಿಗೆ ವಿರುದ್ಧವಾದದ್ದೆಂತಲೂ ನಮ್ಮ ಅಭಿಪ್ರಾಯ. ನೀತಿಗೆ ಸಂಬಂಧಿಸಿ ಆ ಸಮಾಜದ ವಂಚನೆಯ ದ್ವಂದ್ವ ಪದ್ಧತೀನ ನಾವು ಸ್ವೀಕರಿಸೋದಿಲ್ಲ. ವ್ಯಕ್ತಿಗೆ ಸಂಬಂಧಿಸಿ ಅದು ತೋರಿಸ್ತಿರೋ ಮಾನವ ದ್ವೇಷದ ಕ್ರೂರವಾದ ಧೋರಣೆಯನ್ನು ನಾವು ಧಿಕ್ಕರಿಸ್ತೇವೆ. ಅಂಥ ಸಮಾಜ ವ್ಯಕ್ತಿಯ ಮೇಲೆ ಹೊರಿಸಿರೋ ಎಲ್ಲಾ ರೀತಿಯ ಶಾರೀರಿಕ ಮತ್ತು ನೈತಿಕ ದಾಸ್ಯಕ್ಕಿದಿರಾಗಿ, ಸ್ವಾರ್ಥದ ದುರಾಶೆಯ ಹಿತಕ್ಕೋಸ್ಕರ ಮಾನವ ಜೀವಿಗಳನ್ನು ಮರ್ದಿಸುವ ಎಲ್ಲಾ ವಿಧಾನಗಳಿಗಿದಿರಾಗಿ, ನಾವು ಹೋರಾಡೋಕೆ ಇಷ್ಟಪಡ್ತೇವೆ ಮತ್ತು ಹೋರಾಡ್ತೇವೆ. ನಾವು ಕಾರ್ಮಿಕರು – ಮಕ್ಕಳ ಆಟಿಕೆಯಿಂದ ಮಹಾ ಯಂತ್ರದವರೆಗೆ, ಪ್ರತಿಯೊಂದೂ ನಮ್ಮ ಶ್ರಮದಿಂದಲೇ ತಯಾರಾಗ್ತದೆ. ಹೀಗಿದ್ದರೂ ನಮ್ಮ ಮಾನವ ಮೌಲ್ಯವನ್ನ ರಕ್ಷಿಸಿಕೊಳ್ಳೋ ಹಕ್ಕು

ನವುಗಿಲ್ಲ. ಯಾರು ಬೇಕಾದರೂ ತನ್ನ ಸ್ವಂತದ ವೈಯುಕ್ತಿಕ ಹಿತಕ್ಕಾಗಿ ನಮ್ಮನ್ನು ಉಪಯೋಗಿಸ್ಬಹುದು. ಕ್ರಮೇಣ ಕೊನೆಯಲ್ಲಿ ಎಲ್ಲಾ ಅಧಿಕಾರವನ್ನೂ ನಮ್ಮ ಕೈಗೇ ತೆಗೆದುಕೊಳ್ಳೋದಕ್ಕೆ ಸಹಾಯಕವಾಗುವಂಥ ಸ್ವಾತಂತ್ರ್ಯವನ್ನ, ಈಗ ಸಾಧಿ ಸೋಕೆ ನಾವು ಅಪೇಕ್ಷೆಪಡ್ತೇವೆ. ನಮ್ಮ ಘೋಷಣೆಗಳು ಸರಳವಾಗಿವೆ: 'ಖಾಸಗಿ ಸೊತ್ತಿಗೆ ಧಿಕ್ಕಾರ !' 'ಎಲ್ಲ ಅಧಿಕಾರವೂ ಜನರ ಕೈಗೆ !' 'ದುಡಿಮೆ ಎಲ್ಲರ ಕರ್ತವ್ಯ !' ಇದರಿಂದ, ನಾವು ಬರೇ ಬಂಡಾಯಗಾರರು ಅಲ್ಲ ಅನ್ನೋದನ್ನ ನೀವು ನೋಡ್ಬಹುದು."

ಪಾವೆಲ್ ಸಣ್ಣನೆ ನಕ್ಕು, ತನ್ನ ಬೆರಳುಗಳನ್ನು ತಲೆಗೂದಲ ಮೇಲೆ ಮೆಲ್ಲನೆ ಓಡಿಸಿದ. ಆ ನೀಲಿಗಣ್ಣುಗಳಲ್ಲಿ ಬೆಳಕು, ಎಂದಿಗಿಂತ ಹೆಚ್ಚು ಶುಭ್ರವಾಗಿ ಪ್ರಜ್ವ ಲಿಸಿತು.

"ವಿಷಯ ಬಿಟ್ಟು ಹೋಗಕೂಡ್ದೂಂತ ನಿಮಗೆ ಹೇಳಬೇಕಾಗಿದೆ," ಎಂದು, ಗಟ್ಟಿಯಾದ ಸ್ಪಷ್ಟವಾದ ಸ್ವರದಲ್ಲಿ ವೃದ್ಧ ನ್ಯಾಯಾಧೀಶನೆಂದ. ಆತ ಪಾವೆಲ್‌ನತ್ತ ದೃಷ್ಟಿ ಹೊರಳಿಸಿದ. ಆತನ ಮಂದವಾಗಿದ್ದ ಎಡಗಣ್ಣಿನಲ್ಲಿ ದುರಾಶೆಯ ದ್ವೇಷದ ಬೆಳಕು ಮಿನುಗಿದಂತೆ ತಾಯಿಗ್ಗೆ ತೋರಿತು. ಎಲ್ಲಾ ನ್ಯಾಯಾಧೀಶರೂ ಆಕೆಯ ಮಗನತ್ತ ನೋಡಿದರು. ಎಲ್ಲರ ದೃಷ್ಟಿಗಳೂ ಆತನ ಮೇಲೆ ನೆಟ್ಟುವು; ಆತನ ಶಕ್ತಿ ಯನ್ನು ಹೀರಿದವೆಂದೂ, ಆ ರಕ್ತ ಕುಡಿಯಲು ಬಯಸಿದವೆಂದೂ, ಕ್ಷೀಣಗೊಂಡಿದ್ದ ತಮ್ಮ ದೇಹಕ್ಕೆ ಅದರಿಂದ ಕಾಯಕಲ್ಪವಾಗಲೆಂದು ಅಪೇಕ್ಷಿಸಿದವೆಂದೂ ತೋರಿತು. ಆದರೆ ಆತ ಅಲ್ಲಿ, ಎತ್ತರವಾಗಿ ನೇರವಾಗಿ ಬಲವಾಗಿ ಧೈರ್ಯವಾಗಿ, ತನ್ನ ಕೈಯನ್ನು ಮುಂದಕ್ಕೆ ಚಾಚಿ, ಹೇಳುತ್ತ ನಿಂತ:

"ನಾವು ಕ್ರಾಂತಿಕಾರರು. ಕೆಲವರು ಬರಿಯ ಯಜಮಾನರಾಗಿ, ಉಳಿದವರೆಲ್ಲ ಕೆಲಸಗಾರರು ಮಾತ್ರ ಆಗಿರುವ ಪದ್ಧತಿ ಇರುವವರೆಗೂ ಕ್ರಾಂತಿಕಾರರಾಗಿಯೇ ನಾವು ಉಳೀತೇವೆ. ಯಾವ ಸಮಾಜದ ಹಿತಗಳನ್ನ ರಕ್ಷಿಸೋದಕ್ಕೆ ನೀವು ಆಜ್ಞಾಧಾರಿಗಳಾ ಗಿದ್ದೀರೋ ಆ ಸಮಾಜಕ್ಕೆ ನಾವು ವಿರೋಧಿಗಳು. ನಾವು, ಅದರ ಹಾಗೂ ನಿಮ್ಮ, ಬದ್ಧ ವೈರಿಗಳು. ನಮ್ಮ ಹೋರಾಟದಲ್ಲಿ ನಾವು ವಿಜಯಿಗಳಾಗೋವರೆಗೂ ನಮ್ಮೊ ಳಗೆ ರಾಜಿಯಾಗೋದು ಸಾಧ್ಯವಿಲ್ಲ. ಕಾರ್ಮಿಕರಾದ ನಾವು ವಿಜಯಿಗಳಾಗೋದು ಖಂಡಿತ ! ನಿಮ್ಮ ಯಜಮಾನರು ತಾವು ಭಾವಿಸಿಕೊಂಡಷ್ಟು ಬಲಿಷ್ಠರಾಗಿಲ್ಲ ! ಯಾವು ದನ್ನ ಶೇಖರಿಸಿ ರಕ್ಷಿಸೋದಕ್ಕೋಸ್ಕರ ತಮ್ಮ ಅಧೀನದಲ್ಲಿರೋ ಲಕ್ಷಾಂತರ ಜೀವ ಗಳನ್ನ ಅವರು ಬಲಿಕೊಡ್ತಾರೋ, ಯಾವುದು ಅವರಿಗೆ ನಮ್ಮ ಮೇಲೆ ಅಧಿಕಾರ ಕೊಡ್ತದೋ, ಆ ಖಾಸಗಿ ಸೊತ್ತೇ – ಆ ಶಕ್ತಿಯೇ – ಅವರೊಳಗೇ ಒಡಕು ಹುಟ್ಟಿ ಸ್ತದೆ; ಶಾರೀರಿಕವಾಗಿಯೂ ನೈತಿಕವಾಗಿಯೂ ಅವರನ್ನ ನಾಶಮಾಡ್ತದೆ. ಖಾಸಗಿ ಸೊತ್ತನ್ನ ರಕ್ಷಿಸೋ ವೆಚ್ಚ ಬಹಳ ಜಾಸ್ತಿ. ವಾಸ್ತವವಾಗಿ, ನಮ್ಮ ಒಡೆಯರಾಗಿರೋ ನೀವೆಲ್ಲ ನಮಗಿಂತಲೂ ಹೆಚ್ಚಿನ ಗುಲಾಮರು. ನೀವು ಮಾನಸಿಕವಾಗಿ ಬಂಧಿತ ರಾಗಿದ್ದೀರಿ – ನಾವು ಶಾರೀರಿಕವಾಗಿ ಮಾತ್ರ. ಅಭ್ಯಾಸದ, ಪೂರ್ವನಿಶ್ಚಿತ ದುರಭಿಪ್ರಾಯದ

ಸೋಗದಿಂದ ಸ್ವತಂತ್ರರಾಗೋಕ್ಕೆ ನೀವು ಅಸಮರ್ಥರಾಗಿದ್ದೀರಿ. ಈ ನೊಗ ನಿಮ್ಮನ್ನ ಮಾನಸಿಕವಾಗಿ ಕೊಂದಿದೆ. ಆದರೆ ನಾವು ಮಾನಸಿಕವಾಗಿ ಸ್ವತಂತ್ರರು. ಆ ವಿಷಯ ದಲ್ಲಿ ನಮ್ಮನ್ನ ಯಾವುದೂ ಕಟ್ಟಿಹಾಕಿಲ್ಲ. ನೀವು ನಮಗೆ ಕೊಡುತ್ತಿರೋ ವಿಷ, ನಮ್ಮಲ್ಲಿರೋ ಪ್ರತಿವಿಷಕ್ಕಿಂತ ದುರ್ಬಲವಾಗಿದೆ. ಆ ಔಷಧಿಯನ್ನೂ ನಮ್ಮ ಬೋಧೆ ಯೊಳಗೆ ನೀವೇ, ನಿಮ್ಮ ಇಚ್ಛೆಗೆ ವಿರುದ್ಧವಾಗಿಯೇ, ಸುರೀತಿದ್ದೀರಿ. ಸತ್ಯದ ಅರಿವು ನಮ್ಮಲ್ಲಿ ಯಾವ ತಡೆಯೂ ಇಲ್ಲದೆ, ಹೆಚ್ಚುತ್ತಲಿರುವ ವೇಗದಿಂದ, ಬೆಳೀತಿದೆ. ಅತ್ಯುತ್ತಮ ಜನರನ್ನ – ಮಾನಸಿಕವಾಗಿ ನಿಮ್ಮ ವೃತ್ತದಿಂದಲೂ ಸಮಗ್ರವಾಗಿರೋ ಜನರನ್ನ – ಅದು ಆಕರ್ಷಿಸ್ತದೆ. ನೀವೇ ನೋಡಿ. ನೈತಿಕವಾಗಿ ನಿಮ್ಮ ವರ್ಗವನ್ನ ರಕ್ಷಿಸೋ ಸಾಮರ್ಥ್ಯ ಉಳ್ಳೋರು ನಿಮ್ಮಲ್ಲಿ ಒಬ್ಬರೂ ಇಲ್ಲ. ಚಾರಿತ್ರಿಕ ನ್ಯಾಯದ ಮಹಾ ತುಳಿತದ ಒತ್ತಡದಿಂದ ನಿಮ್ಮನ್ನ ರಕ್ಷಿಸಿಕೊಳ್ಳುವಂಥ ಎಲ್ಲಾ ವಾದಗಳನ್ನೂ ನೀವು ಈಗಾಗಲೇ ಮುಗಿಸಿಬಿಟ್ಟಿದ್ದೀರಿ. ಹೊಸ ವಿಚಾರಗಳನ್ನ ಸೃಷ್ಟಿಮಾಡಲು ನೀವು ಸಮರ್ಥರಾಗಿಲ್ಲ. ಆಧ್ಯಾತ್ಮಿಕವಾಗಿ ನೀವು ಬರಡಾಗಿದ್ದೀರಿ. ನಮ್ಮ ವಿಚಾರಗಳು ಬೆಳೀತಿವೆ; ಹೆಚ್ಚು ಶುಭ್ರವಾಗಿ ಉರೀತಿವೆ; ಜನಸಮುದಾಯಕ್ಕೆ ಸ್ಫೂರ್ತಿಕೊಡುತ್ತಾ, ಸ್ವಾತಂತ್ರ್ಯಕ್ಕೋಸ್ಕರವಾದ ಅವರ ಹೋರಾಟವನ್ನು ಸಂಘಟಿಸುತ್ತಿವೆ. ಕೂಲಿಕಾರ ವರ್ಗ ವಹಿಸಬೇಕಾದ ಮಹಾ ಪಾತ್ರದ ತಿಳಿವಳಿಕೆ, ಪ್ರಪಂಚದೆಲ್ಲಾ ಕೂಲಿಕಾರರನ್ನು ಒಂದು ಹಿರಿಯ ಶಕ್ತಿಯಾಗಿ ಬೆಸೀತಿದೆ. ಪ್ರಪಂಚಕ್ಕೆ ಅವರು ತರುತ್ತಿರೋ ನವ ಚೈತನ್ಯವನ್ನ ತಡೆಯೋದಕ್ಕೆ, ಕ್ರೌರ್ಯ ಮತ್ತು ಮಾನವ ದ್ವೇಷದ ಹೊರತಾಗಿ, ನಿಮ್ಮ ಲ್ಲೇನೂ ಇಲ್ಲ. ಆದರೆ, ಮಾನವ ದ್ವೇಷದಿಂದ ನಿಮಗೇ ಹಾನಿ. ಕ್ರೌರ್ಯ ನಮ್ಮನ್ನು ಕೆರಳಿಸ್ತದೆ, ಅಷ್ಟೆ. ಈ ದಿನ ನಮ್ಮ ಕತ್ತನ್ನು ಬಿಗಿ ಹಿಡಿದಿರೋ ಕೈಗಳು, ನಾಳೆ ಬಾಂಧ ವ್ಯದ ಹಸ್ತಲಾಘವಕ್ಕಾಗಿ ಮುಂದೆ ಚಾಚಲ್ಪಡುತ್ತವೆ. ನಿಮ್ಮ ಶಕ್ತಿಯು, ಬಂಗಾರ ವನ್ನ ಮತ್ತಷ್ಟು ಪಾಲು ಹೆಚ್ಚಿಸೋ ಯಾಂತ್ರಿಕ ಶಕ್ತಿ. ಅದು ನಿಮ್ಮನ್ನ ಗುಂಪುಗಳಾಗಿ ಒಡೀತದೆ. ಆ ಗುಂಪುಗಳು ಒಂದನ್ನೊಂದು ನುಂಗ್ತವೆ. ನಮ್ಮ ಶಕ್ತಿಯು ಮಹತ್ವದ ಸದಾ ಹೆಚ್ಚುತ್ತಲೇ ಇರುವ ದುಡಿಯುವ ಜನರೆಲ್ಲರ ಸೌಹಾರ್ದತೆಯ ತಿಳಿವಳಿಕೆ ಯಲ್ಲಿ ಅಡಕವಾಗಿದೆ. ನೀವು ಮಾಡುತ್ತಿರೋದೆಲ್ಲಾ ಮಹಾಪಾತಕ. ಯಾಕೆಂದರೆ, ಜನರನ್ನು ಜೀತದಾಳುಗಳನ್ನಾಗಿ ಮಾಡುವುದೇ ಅದರ ಉದ್ದೇಶ. ನಿಮ್ಮ ಸುಳ್ಳುಗಳು, ದುರಾಶೆ ಮತ್ತು ದುಷ್ಟತನ, ಜನರನ್ನು ಬೆದರಿಸೋದಕ್ಕಾಗಿ, ದೆವ್ವಗಳ ಪಿಶಾಚಿಗಳ ಒಂದು ಪ್ರಪಂಚವನ್ನ ನಿರ್ಮಿಸಿವೆ. ಆ ದೆವ್ವಗಳಿಂದ ಜನರನ್ನ ವಿಮುಕ್ತ ಗೊಳಿಸೋದು ನಮ್ಮ ಕರ್ತವ್ಯ. ನೀವು, ಬದುಕಿನಿಂದ ಮನುಷ್ಯನನ್ನ ಹರಿದೆಳೆದು ಆತನನ್ನ ನಾಶಗೊಳಿಸಿದ್ದೀರಿ. ಸಮಾಜವಾದವು, ನೀವು ನಾಶಗೊಳಿಸಿದ ಪ್ರಪಂಚವ ನ್ನೆತ್ತಿಕೊಂಡು, ಒಂದು ಮಹಾ ಅಖಂಡ ವಲಯವಾಗಿ ಪುನಃ ಕಟ್ತದೆ. ಹೀಗೆ ಆಗಿಯೇ ಆಗ್ತದೆ !"

ಪಾವೆಲ್ ಒಂದು ಕ್ಷಣ ತಡೆದು, ಬಲವಾದ ಮೃದು ಸ್ವರದಲ್ಲಿ ಮತ್ತೊಮ್ಮೆ ಹೇಳಿದ:

"ಹೀಗೆ ಆಗಿಯೇ ಆಗ್ತದೆ!"

ನ್ಯಾಯಾಧೀಶರು ತಮ್ಮೊಳಗೇ ಪಿಸುಮಾತನಾಡಿಕೊಂಡರು. ಪಾವೆಲ್‌ನ ಮೇಲೆ ನೆಟ್ಟಿದ್ದ ದೃಷ್ಟಿಯನ್ನು ತೆಗೆಯದೆಯೇ ಮುಖ ವಿಕಾರಗಳನ್ನು ತೋರಿದರು. ಆತನ ಆರೋಗ್ಯದ ಬಗೆಗೆ, ಶಕ್ತಿ ಮತ್ತು ಯೌವನದ ಬಗೆಗೆ, ಅಸೂಯೆಯಿಂದ ತುಂಬಿದ ತಮ್ಮ ದೃಷ್ಟಿಗಳಿಂದ ಆತನ ಬಲಿಷ್ಠ ದೇಹವನ್ನು ಅವರು ಕಲುಷಿತಗೊಳಿಸುತ್ತಿದ್ದಂತೆ ತಾಯಿಗೆ ತೋರಿತು. ಕೈದಿಗಳು ತಮ್ಮ ಸಂಗಾತಿಯ ಭಾಷಣವನ್ನು ಏಕಾಗ್ರಚಿತ್ತರಾಗಿ ಕೇಳಿದರು. ಮುಖಗಳು ಮ್ಲಾನವಾಗಿದ್ದರೂ ಕಣ್ಣುಗಳು ಸಂತೋಷದಿಂದ ಹೊಳೆಯುತ್ತಿದ್ದುವು. ಮಗನ ಪ್ರತಿಯೊಂದು ಮಾತನ್ನೂ ತಾಯಿ ಸ್ವೀಕರಿಸಿದಳು. ಆಕೆಯ ಚಿತ್ತಭಿತ್ತಿಯ ಮೇಲೆ, ಒಂದಕ್ಕೊಂದು ಒತ್ತಿಕೊಂಡಿದ್ದ ಸಾಲುಗಳಲ್ಲಿ, ಆ ಮಾತುಗಳೆಲ್ಲ ಬಲವಾಗಿ ಮುದ್ರಿತವಾದುವು. ಎಷ್ಟೋ ವೇಳೆ ವೃದ್ಧ ನ್ಯಾಯಾಧೀಶ, ಏನನ್ನೋ ಸ್ಪಷ್ಟಪಡಿಸುವುದಕ್ಕಾಗಿ ಪಾವೆಲ್‌ನನ್ನು ತಡೆದ; ಒಮ್ಮೆ ವ್ಯಥೆಯಿಂದ ಒಂದು ಮುಗುಳ್ನಗೆಯನ್ನೂ ನಕ್ಕ. ಆದರೆ ಪ್ರತಿಸಲವೂ ಪಾವೆಲ್, ತಡೆದು ನಿಂತೊಡನೆಯೇ ಮತ್ತೆ ಮುಂದುವರಿಸುತ್ತಿದ್ದ. ಆ ಶಾಂತವಾದ ದೃಢತೆ, ಆತನ ಮಾತುಗಳಿಗೆ ಕಿವಿಗೊಡುವಂತೆ ಜನರನ್ನು ಒತ್ತಾಯಿಸುತ್ತಿತ್ತು. ನ್ಯಾಯಾಧೀಶರ ಅಪೇಕ್ಷೆಯನ್ನು ಆತನ ಅಪೇಕ್ಷೆಗೆ ಒಳಗುಮಾಡುತ್ತಿತ್ತು. ಆದರೆ ಕೊನೆಗೊಮ್ಮೆ ವೃದ್ಧ ನ್ಯಾಯಾಧೀಶ ತಡೆಯಲಾರದೆ ಕೂಗಾಡಿ, ಕೈಯನ್ನು ಎದುರಿಗೆ ಚಾಚಿದ. ಅದಕ್ಕೆ ಉತ್ತರವಾಗಿ ಪಾವೆಲ್‌ನ ಸ್ವರ ವ್ಯಂಗ್ಯದ ಛಾಯೆಯೊಡನೆ ಬೆರೆತು ಹೊರಟಿತು:

"ಮುಗಿಯುತ್ತಾ ಬಂತು. ನಿಮ್ಮನ್ನ ವೈಯಕ್ತಿಕವಾಗಿ ನೋಯಿಸ್ಬೇಕು ಅನ್ನೋ ಇಚ್ಛೆ ನನಗಿಲ್ಲ. ಅದರ ಬದಲು, ನೀವು ವಿಚಾರಣೆ ಎಂತ ಕರೆದಿರೋ ಈ ಪ್ರಹಸನವನ್ನ ಇಷ್ಟವಿಲ್ದೆ ಇದ್ದರೂ ನೋಡುತ್ತ ಇಲ್ಲಿ ಕೂತಿರುವಾಗ, ನಿಮ್ಮ ವಿಷಯವಾಗಿ ಹೆಚ್ಚು ಕಡಮೆ ಸಹಾನುಭೂತಿಯೇ ನನ್ನಲ್ಲಿ ಉಂಟಾಗಿದೆ. ಎಷ್ಟೆಂದರೂ, ನೀವು ಕೂಡಾ ಮಾನವ ಜೀವಿಗಳು. ನಮ್ಮ ಧ್ಯೇಯಕ್ಕೆ ವಿರುದ್ಧವಾಗಿದ್ದರೂ ಸರಿಯೆ, ಮಾನವ ಜೀವಿಗಳು ಮೃಗೀಯ ಶಕ್ತಿಯ ಸೇವೆಯಲ್ಲಿ ನಿರ್ಲಜ್ಜವಾಗಿ ಹೊರಳಾಡ್ತಿರೋದನ್ನ, ಮಾನವ ಗೌರವದ ಎಲ್ಲ ಭಾವನೆಗಳನ್ನೂ ಕಳೆದುಕೊಂಡದ್ದನ್ನ, ಕಂಡಾಗ, ನಮಗೆ ಕೆಡುಕೆನಿಸ್ತದೆ; ಕ್ರೋಧ ಉಕ್ಕೇರ್ತದೆ...."

ನ್ಯಾಯಾಧೀಶರತ್ತ ನೋಡದೆಯೇ ಆತ ತನ್ನ ಸ್ಥಾನದಲ್ಲಿ ಕುಳಿತುಕೊಂಡ. ತಾಯಿ ಉಸಿರು ಬಿಗಿಹಿಡಿದು, ನ್ಯಾಯಾಧೀಶರನ್ನೇ ನೆಟ್ಟ ದೃಷ್ಟಿಯಿಂದ ನೋಡಿದಳು.

ಅರಳಿದ ಮುಖದೊಡನೆ ಅಂದ್ರೇಯ್ ಪಾವೆಲ್‌ನ ಕೈಯನ್ನು ಭದ್ರವಾಗಿ ಅದುಮಿದ. ಸಮೋಯ್‌ಲೊವ್, ಮಾಜಿನ್ ಮತ್ತಿತರರೆಲ್ಲರೂ ಪಾವೆಲ್‌ನತ್ತ ಬಾಗಿದರು. ತನ್ನ ಸಂಗಾತಿಗಳ ಉತ್ಸಾಹದೆದುರು ಸಂಕೋಚಗೊಳ್ಳುತ್ತ ಪಾವೆಲ್ ಮುಗುಳ್ನಕ್ಕ. ಆತ ತಾಯಿಯತ್ತ ನೋಡಿ, ತಲೆಯಾಡಿಸಿದ.

"ನಿನಗೆ ತೃಪ್ತಿಯಾಯ್ತೆ?" ಎಂದು ಆತ ಕೇಳಿದ ಹಾಗಿತ್ತು.

ತಾಯಿ ಸಂತೋಷದ ನಿಟ್ಟುಸಿರಿನೊಡನೆ ಉತ್ತರವಿತ್ತಳು. ಆಕೆಯ ಮುಖ ಒಲುಮೆಯ ಬೆಚ್ಚಗಿನ ತೆರೆಯಿಂದ ಕೆಂಪೇರಿತು.

"ಈಗ ನಿಜವಾದ ವಿಚಾರಣೆ ಶುರುವಾಯ್ತು!" ಎಂದು ಸಿಜೋವ್ ಪಿಸುಗುಟ್ಟಿದ. "ಆತ ಸರಿಯಾಗಿಯೇ ಕೊಟ್ಟ, ಅಲ್ವ?"

ತಾಯಿ ಉತ್ತರವೀಯದೆಯೇ ತಲೆದೂಗಿದಳು. ತನ್ನ ಮಗ ಅಷ್ಟು ಧೈರ್ಯವಾಗಿ ಮಾತನಾಡಿದನೆಂದು ಆಕೆಗೆ ಆನಂದವಾಗಿತ್ತು; ಪ್ರಾಯಶಃ, ಮಾತು ಮುಗಿಸಿದ ನೆಂದು ಹೆಚ್ಚು ಆನಂದವಾಗಿತ್ತು.

ಒಂದು ಪ್ರಶ್ನೆ ಆಕೆಯ ಮನಸ್ಸಿನಲ್ಲಿ ಒಂದೇ ಸಮನೆ ಮಿಡಿಯಿತು:

"ಅವರು ಇನ್ನೇನು ಮಾಡುವರು?"

೨೬

ಆಕೆಗೆ ಹೊಸತಾಗಿದ್ದುದೇನನ್ನೂ ಪಾವೆಲ್ ಹೇಳಿರಲಿಲ್ಲ. ಆತನ ಎಲ್ಲ ವಿಚಾರ ಗಳೂ ಅವಳಿಗೆ ಪರಿಚಿತವಾಗಿದ್ದುವು. ಆದರೆ ಇಲ್ಲಿ, ನ್ಯಾಯಾಸ್ಥಾನದೊಳಗಡೆ, ಆತನ ಶ್ರದ್ಧೆಯ ವಿಚಿತ್ರ ಆಕರ್ಷಣೆಯನ್ನು ತಾಯಿ ಅನುಭವಿಸಿದಳು. ಪಾವೆಲ್‌ನ ಮನೋಸ್ಥೈರ್ಯವನ್ನು ಕಂಡು ತಾಯಿಗೆ ಆಶ್ಚರ್ಯವಾಯಿತು. ಆತನ ಧ್ಯೇಯ ದಲ್ಲೂ ಅದರ ಅಂತಿಮ ವಿಜಯದಲ್ಲೂ ಪ್ರಕಾಶಮಾನವಾದ ನಂಬುಗೆಯ ನಕ್ಷ ತ್ರವಾಗಿ, ಆ ಭಾಷಣವನ್ನು ತಾಯಿ ಕಾಯ್ದಿಟ್ಟುಕೊಂಡಳು. ಈಗ ನ್ಯಾಯಾಧೀಶ ರೆಲ್ಲ, ತನ್ನ ಮಗನೊಡನೆ ತೀವ್ರ ಚರ್ಚೆ ಆರಂಭಿಸುವರೆಂದೂ ಆತ ಹೇಳಿದ್ದನ್ನೆಲ್ಲ ಸಿಟ್ಟಿನಿಂದ ಅಲ್ಲಗಳೆದು ತಮ್ಮ ಸ್ವಂತದ ಖಚಿತಾಭಿಪ್ರಾಯಗಳನ್ನು ಮುಂದಿಡುವ ರೆಂದೂ ತಾಯಿ ನಿರೀಕ್ಷಿಸಿದಳು. ಆದರೆ ಅಂದ್ರೇಯ್ ಎದ್ದು, ಮೈಮುರಿದು, ತನ್ನ ಹುಬ್ಬುಗಳ ಅಡಿಯಿಂದ ನ್ಯಾಯಾಧೀಶರತ್ತ ನೋಡಿ ಮಾತನಾಡಿದ:

"ವಕೀಲ ಮಹಾಶಯರೆ...."

"ನೀವು ಸಂಬೋಧಿಸುತ್ತಿರೋದು ನ್ಯಾಯಾಧೀಶರನ್ನು – ಪ್ರತಿವಾದಿಗಳನ್ನಲ್ಲ!" ಎಂದು ಕಾಹಿಲೆಯ ನ್ಯಾಯಾಧೀಶ ಗಟ್ಟಿಯಾದ ಸಿಟ್ಟಿನ ಸ್ವರದಲ್ಲಿ ಹೇಳಿದ. ಅಂದ್ರೇಯ್‌ನ ಮುಖದಲ್ಲಿ ತುಂಟತನದ ಭಾವವನ್ನು ತಾಯಿ ಗುರುತಿಸಿದಳು. ಆತನ ಮೀಸೆ ಕಂಪಿಸಿತು. ಅವನ ಕಣ್ಣುಗಳಲ್ಲಿ ಬೆಕ್ಕಿನ ಕಣ್ಣಿನಲ್ಲಿರುವಂತಹ ಪರಿಚಿತ ಹೊಳಪನ್ನು ತಾಯಿ ಕಂಡಳು. ತನ್ನ ಉದ್ದನೆಯ ತೆಳ್ಳಗಿನ ಕೈಯಿಂದ ತಲೆಯನ್ನು ಬಿರುಸಾಗಿ ತಿಕ್ಕಿ, ಆತ ನಿಟ್ಟುಸಿರುಬಿಟ್ಟ.

"ನಿಜವಾಗಿಯೂ?" ಎಂದಾತ ಕೇಳಿದ; "ನೀವು ನ್ಯಾಯಾಧೀಶರಲ್ಲ, ಕೇವಲ ಪ್ರತಿವಾದಿಗಳು ಅಂತ ನನ್ನ ಅಭಿಪ್ರಾಯ."

"ವಿಷಯಕ್ಕೆ ಅಂಟಿಕೊಂಡೇ ಮಾತನಾಡಿ!" ಎಂದು ವೃದ್ಧ ನ್ಯಾಯಾಧೀಶ ಒಣ ಸ್ವರದಲ್ಲಿ ಹೇಳಿದ.

"ವಿಷಯಕ್ಕೆ ಅಂಟಿಕೊಂಡು? ಆಗಲಿ, ಒಳ್ಳೇದು. ನೀವು ನಿಜವಾಗಿಯೂ ನ್ಯಾಯಾಧೀಶರು, ಗೌರವವುಳ್ಳ ಸ್ವಾತಂತ್ರ್ಯವುಳ್ಳ ಪ್ರಾಮಾಣಿಕ ಮನುಷ್ಯರು, ಅನ್ನೋ ಸಂಗತೀನ ನಾನು ಹ್ಯಾಗೂ ಒಪ್ಪಿಕೊಂಡಿದ್ದೀನಿ...."

"ಈ ನ್ಯಾಯಸ್ಥಾನಕ್ಕೆ ನಿಮ್ಮ ಪ್ರಮಾಣಪತ್ರದ ಅವಶ್ಯತೆಯಿಲ್ಲ!"

"ಹಾಗೇನು? ಆಗಲಿ. ಹ್ಯಾಗೂ ಮುಂದುವರಿಸ್ತೀನಿ. ಹಾಗಾದರೆ, ನೀವು ನಿಷ್ಪಕ್ಷಪಾತ ಜನರು, ಪೂರ್ವನಿಶ್ಚಿತ ಅಭಿಪ್ರಾಯವಿಲ್ಲದವರು, 'ನನ್ನದು' 'ನಿನ್ನದು' ಎಂಬ ಭಾವನೆಯಿಲ್ಲದವರು ಅಂತ ಹೇಳೋಣ. ನಿಮ್ಮೆದುರಿಗೆ ಇಬ್ಬರು ಜನರನ್ನ ಕರಕೊಂಡು ಬರ್‍ತಾರೆ. ಒಬ್ಬ ಹೇಳ್ತಾನೆ: 'ಆತ ನನ್ನನ್ನು ದೋಚಿದ, ಹೊಡೆದು ಮುದ್ದೆ ಮಾಡ್ದ.' ಇನ್ನೊಬ್ಬ ಹೇಳ್ತಾನೆ: 'ನನಗೆ ಜನರನ್ನು ದೋಚೋಕೂ, ಹೊಡೆದು ಮುದ್ದೆ ಮಾಡೋಕೂ ಹಕ್ಕಿದೆ; ಯಾಕೆಂದರೆ ನನ್ನ ಹತ್ತಿರ ಬಂದೂಕಿದೆ'...."

"ವಿಷಯಕ್ಕೆ ಅಂಟಿಕೊಂಡು ಮಾತಾಡೋದು ನಿಮಗೆ ಸಾಧ್ಯವಿಲ್ಲವೆ?" ಎಂದು ವೃದ್ಧ ನ್ಯಾಯಾಧೀಶ ಸ್ವರವೇರಿಸಿ ಕೇಳಿದ. ಅವನ ಕೈಗಳು ನಡುಗುತ್ತಿದ್ದುವು. ಅವನು ಸಿಟ್ಟಾದುದನ್ನು ಕಂಡು ತಾಯಿಗೆ ಸಂತೋಷವಾಯಿತು. ಆದರೆ ಅಂದ್ರೇಯ್‌ನ ವರ್ತನೆಯಿಂದ ಅವಳಿಗೆ ಅತೃಪ್ತಿ ಎನಿಸಿತು. ಯಾಕೋ ತನ್ನ ಮಗನ ಭಾಷಣದೊಂದಿಗೆ ಅಂದ್ರೇಯ್‌ನ ಮಾತುಗಳು ಹೊಂದಿಕೆಯಾಗಲಿಲ್ಲ. ಅವರ ಚರ್ಚೆಗಳು ಮಹತ್ವ ಪೂರ್ಣವೂ ಗಂಭೀರವೂ ಆಗಬೇಕೆಂದು ತಾಯಿ ಬಯಸಿದಳು.

ಹೊಹೋಲ್, ಮಾತು ಮುಂದುವರಿಸುವುದಕ್ಕೆ ಮುಂಚೆ ಮೌನವಾಗಿ ವೃದ್ಧ ಮನುಷ್ಯನನ್ನೆ ನೋಡಿದ.

"ವಿಷಯಕ್ಕೆ ಅಂಟಿಕೊಂಡು?" ಎಂದು ಆತ, ಹುಬ್ಬನ್ನೊರೆಸುತ್ತಾ ಸಾಧಾ ರಣವಾಗಿ ಹೇಳಿದ. "ನಾನು ಯಾಕೆ ನಿಮ್ಮೊಡನೆ ವಿಷಯಕ್ಕೆ ಅಂಟಿಕೊಂಡು ಮಾತಾಡ್ಲಿ? ಸದ್ಯಃ ನೀವು ಏನು ತಿಳಿದಿರ್‍ಬೇಕೋ ಅದನ್ನೆಲ್ಲಾ ನನ್ನ ಸಂಗಾತಿ ಈಗಾಗ್ಲೇ ನಿಮಗೆ ಹೇಳಿದ್ದಾನೆ. ಬೇರೆಯವರು ಸಮಯ ಬಂದಾಗ ಉಳಿದದ್ದನ್ನ ನಿಮಗೆ ಹೇಳ್ತಾರೆ...."

ವೃದ್ಧಮನುಷ್ಯ ಕುಳಿತಿದ್ದಲ್ಲಿಂದಲೆ ಎತ್ತರಿಸಿಕೊಂಡು ಹೇಳಿದ:

"ನಿಮ್ಮ ಮಾತನ್ನ ಸಾಕುಮಾಡಿ! ಇನೊಬ್ಬ, ಗ್ರಿಗೋರಿಯ್ ಸಮೋಯ್ ಲೊವ್!"

ಹೊಹೋಲ್ ತನ್ನ ತುಟಿಗಳನ್ನು ಬಿಗಿದು ಬಲು ನಿಧಾನವಾಗಿ ಬೆಂಚಿನ ಮೇಲೆ ಕುಳಿತುಕೊಂಡ. ಸಮೋಯ್‌ಲೊವ್ ಅವನ ಬದಿಯಲ್ಲೆ, ತನ್ನ ಗುಂಗುರು ಕೂದಲನ್ನು ಹಿಂದಕ್ಕೆ ತಳ್ಳುತ್ತ ಎದ್ದುನಿಂತ.

"ಪ್ರಾಸಿಕ್ಯೂಟರು ನನ್ನ ಸಂಗಾತಿಗಳನ್ನ ಅನಾಗರಿಕರು, ಸಂಸ್ಕೃತಿಯ ವೈರಿ ಗಳು, ಅಂತ ಕರೆದ್ರು...."

"ನಿಮ್ಮ ವಿಚಾರಣೆಗೆ ಸಂಬಂಧಪಟ್ಟದ್ದನ್ನಷ್ಟೇ ಹೇಳಿ."

"ಇದೂ ಅದಕ್ಕೆ ಸಂಬಂಧಪಟ್ಟದ್ದೆ. ಪ್ರಾಮಾಣಿಕ ಜನರಿಗೆ ಸಂಬಂಧಪಡದ್ದು ಯಾವುದೂ ಇಲ್ಲ. ನಾನು ಮಾತಾಡುವಾಗ ಅಡ್ಡಿಮಾಡ್ಬೇಡಿ.... ನಿಮ್ಮ ಸಂಸ್ಕೃತಿ ನಾಗರಿಕತೆ ಏನು? ಹೇಳ್ತೀರಾ?"

"ನಾವಿಲ್ಲಿರೋದು ನಿಮ್ಮ ಜತೇಲಿ ತರ್ಕ ನಡೆಸೋದಕ್ಕಲ್ಲ! ವಿಚಾರಣೆಗೆ ಸಂಬಂಧಿಸಿದ್ದು ಹೇಳಿ!" ಎಂದು ವೃದ್ಧಮನುಷ್ಯ ಹಲ್ಲುಕಿರಿದು ಗದರಿದ.

ಅಂದ್ರೇಯ್‌ನ ವರ್ತನೆಯಿಂದಾಗಿ, ನ್ಯಾಯಾಧೀಶರಲ್ಲಿ ಬದಲಾವಣೆಯಾಗಿತ್ತು. ಆತನ ಮಾತುಗಳು, ಅವರ ಮೇಲಿನದೇನನ್ನೋ ಸುಲಿದುಬಿಟ್ಟಹಾಗಿತ್ತು. ಅವರ ಬೂದು ಮುಖಗಳಲ್ಲಿ ಕೆಂಪು ಮಚ್ಚೆಗಳು ತೋರಿದುವು. ಶೀತಲವಾದ ಹಸುರು ಕಿಡಿಗಳು ಕಣ್ಣುಗಳಲ್ಲಿ ಮಿನುಗಿದುವು. ಪಾವೆಲ್‌ನ ಭಾಷಣ ಕೇಳಿ ಅವರು ರೇಗಿದ್ದರು. ಆದರೆ ಆತನ ಮಾತುಗಳ ಶಕ್ತಿ, ಅವರು ಆತನನ್ನು ಗೌರವಿಸುವಂತೆ, ತಮ್ಮ ಪ್ರತಿ ಕ್ರಿಯೆಗಳನ್ನು ವ್ಯಕ್ತಪಡಿಸದಂತೆ, ಮಾಡಿತ್ತು. ಹೊಹೋಲ್ ಅವರ ಸಂಯಮದ ಕಟ್ಟನ್ನು ಹರಿದುಹಾಕಿದ. ಒಳಗಿದ್ದುದನ್ನು ಬಯಲುಗೊಳಿಸಿದ. ಅವರೆಲ್ಲ ಒಟ್ಟಾಗಿ ಪಿಸುಮಾತನಾಡಿದರು. ವಿಚಿತ್ರವಾದ ಮುಖಭಾವಗಳನ್ನು ತೋರಿದರು. ಅಭ್ಯಾಸ ವಿಲ್ಲದಿದ್ದರೂ ಅವರ ಅಂಗಾಂಗಳು ವೇಗವಾಗಿ ಚಲಿಸಿದುವು.

"ನೀವು ಜನರನ್ನ ಗೂಢಚಾರರಾಗೋಕೆ ತರಪೇತು ಮಾಡ್ತೀರಿ. ಸ್ತ್ರೀಯರನ್ನೂ ಎಳೇ ಹುಡುಗಿಯರನ್ನೂ ವ್ಯಭಿಚಾರಕ್ಕಿಳಿಸ್ತೀರಿ. ಗಂಡಸರನ್ನು ಕಳ್ಳರಾಗಿಯೂ ಕೊಲೆಪಾತಕಿಗಳಾಗಿಯೂ ಮಾರ್ಪಡಿಸ್ತೀರಿ. ಅವರಿಗೆ ವೋಡ್ಕ ಕುಡಿಯುವ ಚಟ ಹತ್ತಿಸ್ತೀರಿ, ಅಂತರರಾಷ್ಟ್ರೀಯ ಯುದ್ಧ, ಸುಳ್ಳು, ವ್ಯಭಿಚಾರ, ಮೃಗಜೀವನ. ಇದು ನಿಮ್ಮ ನಾಗರೀಕತೆ! ಇಂಥ ನಾಗರೀಕತೆಗೆ ನಾವು ವೈರಿಗಳು!"

"ನಾನು ಪುನಃ ನಿಮಗೆ...." ಎಂದು ವೃದ್ಧಮನುಷ್ಯ ಕೂಗಾಡಿದ. ಆದರೆ ಸಮೋಯ್‌ಲೊವ್, ಮುಖ ಕೆಂಪೇರುತ್ತ ಕಣ್ಣುಗಳು ಬೆಳಗುತ್ತ, ವೃದ್ಧಮನುಷ್ಯನಿಗೆ ಉತ್ತರವಾಗಿ ಅಷ್ಟೇ ಗಟ್ಟಿಯಾಗಿ ಕೂಗಿ ನುಡಿದ:

"ಒಳಗೆ ಕೊಳೆತು ಧೃತಿಗೆಟ್ಟು ಹೋಗೋ ಹಾಗೆ ನೀವು ಜೈಲಿಗೆ ಎಸೀತೀರಲ್ಲಾ, ಆ ಜನರು ಪ್ರತಿಪಾದಿಸೋ ಇನ್ನೊಂದು ನಾಗರಿಕತೇನ ನಾವು ಗೌರವಿಸ್ತೇವೆ, ಅದಕ್ಕೆ ಬೆಲೆ ಕೊಡ್ತೇವೆ...."

"ನಿಮಗೆ ಮಾತನಾಡೊ ಅವಕಾಶ ರದ್ದುಗೊಳಿಸಲಾಗಿದೆ. ಇನ್ನೊಬ್ಬ – ಫ್ಯೋದೊರ್ ಮಾಜಿನ್!"

ಸಣ್ಣವನಾದ ಫ್ಯೋದೊರ್, ಬಾಕಿನ ಹಾಗೆ ನೆಟ್ಟಗೆ ತೆಳ್ಳಗೆ ಪುಟಿದೆದ್ದ.

"ನಾನು... ನಾನು ಆಣೆ ಇಟ್ಟು ಹೇಳ್ತೀನಿ! ನೀವು ನನಗೆ ಈಗಾಗಲೇ ಶಿಕ್ಷೆ ವಿಧಿಸಿದ್ದೀರಿ ಅಂತ ನನಗೆ ಗೊತ್ತಿದೆ...."

ಅಷ್ಟು ಹೇಳಿದಾಗ ಆತನಿಗೆ ಉಸಿರು ಕಟ್ಟಿದ ಹಾಗಾಯಿತು. ಮುಖ ಬಲು

ನಿಸ್ತೇಜವಾಗಿ, ಕಣ್ಣುಗಳು ಮಾತ್ರ ಉಳಿದಂತೆ ತೋರಿತು. ತನ್ನ ಕೈಯನ್ನು ಮುಂದಕ್ಕೆ ಚಾಚಿ ಆತ ಕೂಗಿದ:

"ನಾನು ಪ್ರಮಾಣ ಮಾಡಿ ಹೇಳ್ತೀನಿ! ನೀವು ನನ್ನನ್ನ ಎಲ್ಲಿಗೆ ಬೇಕಾದರೂ ಕಳಿಸಿ, ನಾನು ಹ್ಯಾಗಾದರೂ ಮಾಡಿ ತಪ್ಪಿಸ್ಕೊಂಡು ಬಂದು, ಯಾವಾಗಲೂ – ಜೀವಮಾನವೆಲ್ಲಾ – ಕೆಲಸಮಾಡ್ತೀನಿ! ಇದು ಸಾವಿರ ಪಾಲಿಗೆ ಸತ್ಯ!"

ಸಿಜೋವ್ ಗಟ್ಟಿಯಾಗಿ ಗಂಟಲಲ್ಲೇ ಸ್ವರ ಹೊರಡಿಸಿ, ಕುಳಿತಲ್ಲೆ ಮೈಯಾಡಿಸಿದ. ಪ್ರೇಕ್ಷಕರು ಕುಳಿತಿದ್ದ ಕಡೆ, ವಿಚಿತ್ರವಾದ ಪಿಸುಧ್ವನಿಗಳ ಸದ್ದಾಯಿತು. ಜನರು, ಎದ್ದೇಳುತ್ತಿದ್ದ ಉದ್ವಿಗ್ನತೆಯ ತೆರೆಗೆ ಬಲಿಯಾಗುತ್ತಿದ್ದರು. ಒಬ್ಬ ಹೆಂಗಸು ಬಿಕ್ಕಿ ಬಿಕ್ಕಿ ಅತ್ತಳು. ಯಾರೋ ಒಬ್ಬರನ್ನು ಕೆಮ್ಮು ಒಂದೇ ಸಮನೆ ಗೋಳಾಡಿಸಿತು. ಪೋಲೀಸರು, ಕೈದಿಗಳನ್ನು ಮಂದವಾದ ಆಶ್ಚರ್ಯದಿಂದಲೂ, ನೆರೆದಿದ್ದ ಜನರನ್ನು ಕ್ರೋಧದಿಂದಲೂ ನೋಡಿದರು. ನ್ಯಾಯಾಧೀಶರು ಕುರ್ಚಿಗಳಲ್ಲೇ ಹಿಂದಕ್ಕೂ ಮುಂದಕ್ಕೂ ತೂಗಿದರು. ವೃದ್ಧ ಮನುಷ್ಯ ಕೂಗಿ ಹೇಳಿದ:

"ಇನ್ನೊಬ್ಬ – ಇವಾನ್ ಗೂಸೆವ್!"

"ನಾನು ಹೇಳುವಂಥಾದ್ದೇನೂ ಇಲ್ಲ!"

"ಇನ್ನೊಬ್ಬ – ವಸೀಲಿಯ್ ಗೂಸೆವ್!"

"ನಾನೂ ಅಷ್ಟೆ!"

"ಫ್ಯೋದೊರ್ ಬೂಕಿನ್!"

ಬೆಳ್ಳಗಿದ್ದ, ವಿವರ್ಣನಾಗಿದ್ದ ಬೂಕಿನ್, ನಿಧಾನವಾಗಿ ಎದ್ದು ತಲೆಯಲುಗಿಸಿ ಹೇಳಿದ:

"ನಾಚಿಕೆಯಾಗಬೇಕು ನಿಮಗೆ! ನಾನು ಬೆಪ್ಪ. ಮಂದಬುದ್ಧಿ. ನನಗೆ ತಿಳಿವಳಿಕೆ ಬರೋದು ಬಲು ನಿಧಾನ. ಆದರೆ ಯಾವುದು ನ್ಯಾಯ ಅನ್ನೋದು ನನಗೆ ಕೂಡಾ ಗೊತ್ತಾಗ್ತದೆ."

ಆತ ತನ್ನ ತೋಳನ್ನು ತಲೆಯ ಮೇಲ್ಗಡೆ ಎತ್ತಿ, ದೂರದಲ್ಲಿದ್ದುದೇನನ್ನೋ ನೋಡುವಂತೆ ಕಣ್ಣುಗಳನ್ನು ಅರೆಮುಚ್ಚಿ, ಮೌನವಾದ.

"ಏನಂದಿರಿ?" ಎಂದು ವೃದ್ಧ ಮನುಷ್ಯ, ತನ್ನ ಕುರ್ಚಿಯ ಮೇಲೆ ಹಿಂದ ಕ್ಕೊರಗುತ್ತಾ ಅಸಹನೆಯ ಆಶ್ಚರ್ಯದಿಂದ ಕೇಳಿದ.

"ಫೂ....! ನಿಮ್ಮ ಮನೆ ಹಾಳಾಯ್ತು...."

ಬೂಕಿನ್ ಸಿಟ್ಟಿನಿಂದ ಕುಳಿತುಕೊಂಡ. ಆತನ ಕರಿಯ ಮಾತುಗಳಲ್ಲಿ ಅತ್ಯಂತ ಮಹತ್ವವಾದುದ್ದೇನೋ, ಸರಳವಾದ ಯಾತನೆಯ ಬೈಗಳಿಂದ ಕೂಡಿದ್ದೇನೋ ಇತ್ತು. ಪ್ರತಿಯೊಬ್ಬರಿಗೂ ಇದು ತಿಳಿಯಿತು. ಬೂಕಿನ್ ಹೇಳಿದ್ದಕ್ಕಿಂತಲೂ ಹೆಚ್ಚು ಸ್ಪಷ್ಟವಾಗಿ ಅದರ ಪ್ರತಿಧ್ವನಿ ಕೇಳಿಸುವುದೇನೋ ಎಂದು, ನ್ಯಾಯಾಧೀಶರೂ ಕಿವಿನಿಗುರಿಸಿದರು. ಜನರ ನಡುವೆ ಹೆಪ್ಪುಗಟ್ಟಿದ ಮೌನ ನೆಲೆಸಿತು. ಅಳುವಿನ ಅನಿಶ್ಚಿತವಾದ ಪೂರ್ವ

ಸೂಚನೆಗಳು ಮಾತ್ರ, ಮೌನಕ್ಕೆ ಭಂಗತರುವಂತ್ತಿದ್ದುವು. ಕೊನೆಯಲ್ಲಿ ಪ್ರಾಸಿಕ್ಯೂಟರನು ಭುಜ ಕುಪ್ಪಳಿಸಿ ಸಣ್ಣನೆ ನಕ್ಕ. ಜಮೀನ್ದಾರರ ನಾಯಕ ಕೆಮ್ಮಿದ. ನ್ಯಾಯಾಸ್ಥಾನದಲ್ಲಿ ಪಿಸುಮಾತಿನ ಅಲೆಯೊಂದು ಮತ್ತೊಮ್ಮೆ ಬೀಸಿತು.

"ನ್ಯಾಯಾಧೀಶರು ಇನ್ನು ಏನಾದರೂ ಹೇಳ್ತಾರೇನು?" ಎಂದು ತಾಯಿ, ಸಿಜೋವ್‌ನೊಡನೆ ಪಿಸುಧ್ವನಿಯಲ್ಲಿ ಕೇಳಿದಳು.

"ಎಲ್ಲಾ ಮುಗಿಯಿತು – ಶಿಕ್ಷೆ ಮಾತ್ರ ಜಾಹೀರು ಮಾಡ್ತಾರೆ...."

"ಬೇರೇನೂ ಇಲ್ವೆ?"

"ಇಲ್ಲ."

ಅದನ್ನು ನಂಬುವುದು ತಾಯಿಗೆ ಕಷ್ಟವಾಯಿತು.

ಸಮೋಯ್‌ಲೊವ್‌ನ ತಾಯಿ, ಬೆಂಚಿನ ಮೇಲೆ ನೆಮ್ಮದಿ ಇಲ್ಲದೆ, ಭುಜದಿಂದಲೂ ಮೊಣಕೈಯಿಂದಲೂ ಪೆಲಗೇಯಳನ್ನು ಒತ್ತುತ್ತಾ; ಮೈಯಲುಗಿಸಿದಳು .

"ಅದೇನು? ಅದು ಹ್ಯಾಗೆ ಸಾಧ್ಯ?" ಎಂದು ತನ್ನ ಗಂಡನನ್ನು ಆಕೆ ಕೇಳಿದಳು.

"ಹ್ಯಾಗೆ ಸಾಧ್ಯ ಅಂದರೆ? ನೋಡ್ತಾನೇ ಇದ್ದೀಯಲ್ಲ – ಆಗೇ ಹೋಯ್ತು."

"ನಮ್ಮ ಗ್ರೀಷಗೆ ಏನು ಶಿಕ್ಷೆಕೊಡ್ತಾರೆ?"

"ಓ, ಸುಮ್ನಿರೆ!"

ಸ್ವಲ್ಪ ಭಂಗವಾದುದರ, ಸ್ವಲ್ಪ ಹೆಚ್ಚು ಕಡಮೆಯಾದುದರ, ಏನೋ ಒಡೆದುದರ ಅರಿವು ಎಲ್ಲರಿಗೂ ಇತ್ತು. ಜನರು, ಏನೂ ಅರ್ಥವಾಗದೆ ಕಣ್ಣು ಪಿಳಿಪಿಳಿ ಬಿಟ್ಟರು. ರೂಪು ರೇಖೆಗಳು ಅನಿರ್ದಿಷ್ಟವಾಗಿದ್ದ, ಮಹತ್ವ ಅಸ್ಪಷ್ಟವಾಗಿದ್ದ, ಆದರೆ ಶಕ್ತಿ ಅದಮ್ಯವಾಗಿದ್ದ ಯಾವುದೋ ಒಂದು ಜ್ಯೋತಿ ಉರಿಯುತ್ತಿದ್ದುದನ್ನು ನೋಡುತ್ತ ಕುಳಿತವರಂತೆ ಅವರಿದ್ದರು. ಒಮ್ಮೆಲೆ ತಮಗೆ ತೋರಿಸಿಕೊಂಡ ಮಹಾ ವಸ್ತುವನ್ನು ತಿಳಿಯಲಾರದೆ, ತಾವು ತಿಳಿದುಕೊಂಡಂತಹ ಸಣ್ಣ ಪುಟ್ಟ ವಿಷಯಗಳಿಗಾಗಿ, ಅಪರಿಚಿತ ಭಾವನೆಗಳನ್ನು ಅವರು ಅನುಭವಿಸತೊಡಗಿದರು.

ಬೂಕಿನ್ ಅಣ್ಣ, ಸ್ವಲ್ಪ ಗಟ್ಟಿಯಾದ ಪಿಸು ಧ್ವನಿಯಲ್ಲಿ ಕೇಳಿದ:

"ನೋಡಿ, ಯಾಕೆ ಅವರು ಮಾತಾಡೋಕೆ ಬಿಡಕೂಡ್ದು? ಸರಕಾರಿ ವಕೀಲನನ್ನ ಏನು ಬೇಕಾದರೂ ಎಷ್ಟು ಹೇಳೋಕೆ ಬಿಡಲಿಲ್ವೆ?"

ಅಧಿಕಾರಿಯೊಬ್ಬ ಬೆಂಚುಗಳ ಬಳಿ ನಿಂತು ಜನರ ಮೇಲ್ಗಡೆ ಕೈಯಾಡಿಸಿದ.

"ಸುಮ್ನಿರಿ, ಸುಮ್ನಿರಿ," ಎಂದಾತ ಗದರಿದ.

ಸಮೋಯ್‌ಲೊವ್‌ನ ತಂದೆ, ತನ್ನ ಹೆಂಡತಿಯ ಬೆನ್ನ ಹಿಂದಕ್ಕೆ ಒರಗಿ, ಅಲ್ಲಿಂದ ತಡೆ ತಡೆದು ಗೊಣಗಿದ:

"ಆಗಲಿ, ಅವರು ಅಪರಾಧಿಗಳೂಂತ್ಲೇ ಹೇಳೋಣ. ಆದರೆ, ವಿವರಿಸೋಕೆ ಅವರಿಗೊಂದು ಅವಕಾಶ ಕೊಡಿ!... ಯಾರ ವಿರುದ್ಧ ಅವರು ಎದ್ದು ನಿಂತಿರೋದು?– ಅದೀಗ ನನಗೆ ತಿಳೀಬೇಕಾದ್ದು! ನನಗೂ ಹೃದಯದಲ್ಲಿ ನನ್ನ ಸ್ವಂತದ ಹಿತಗಳಿವೆ...."

"ಶ್ !" ಎಂದು ಅಧಿಕಾರಿ, ಆತನತ್ತ ಬೆರಳಾಡಿಸಿ, ಎಚ್ಚರಿಸಿದ.

ಸಿಜೋವ್ ದುಃಖಪೂರ್ಣವಾಗಿ ತನ್ನ ತಲೆಯಲುಗಿಸಿದ.

ತಾಯಿ ನ್ಯಾಯಾಧೀಶರ ಮೇಲೆಯೇ ದೃಷ್ಟಿ ನೆಟ್ಟಳು. ಅವರೆಲ್ಲ ಜೊತೆಯಾಗಿ ಅಸ್ಪಷ್ಟವಾಗಿ ಮಾತನಾಡುತ್ತಿದ್ದಂತೆ, ಅವರು ಹೆಚ್ಚು ಹೆಚ್ಚು ಉದ್ವಿಗ್ನರಾಗುತ್ತಿದ್ದುದನ್ನು ತಾಯಿ ಕಂಡಳು. ಅವರ ಸ್ವರಗಳ ಶೀತಲವಾದ ಜಿಗುಟಾದ ಧ್ವನಿ ತಾಯಿಯ ಮುಖವನ್ನು ಮುಟ್ಟುತ್ತಿತ್ತು. ಆಗ ಆಕೆಯ ಕೆನ್ನೆಗಳು ನಡುಗುತ್ತಿದ್ದುವು. ಕೆಟ್ಟ, ಯೋಗ್ಯವಲ್ಲದ, ರುಚಿಯಿಂದ ಆಕೆಯ ಬಾಯಿ ತುಂಬುತ್ತಿತ್ತು. ಅವರು, ತನ್ನ ಮಗನ ಮತ್ತು ಆತನ ಸಂಗಾತಿಗಳ ಶರೀರಗಳ ಬಗ್ಗೆ, ಬಿಸಿರಕ್ತವೂ ಜೀವಂತಶಕ್ತಿಯೂ ತುಂಬಿದ್ದ ಈ ಯುವಕರ ಅಂಗಾಂಗಗಳು ಮತ್ತು ಮಾಂಸಖಂಡಗಳ ಬಗ್ಗೆ, ಮಾತನಾಡುತಿದ್ದರೆಂದು ಯಾವುದೋ ಕಾರಣಕ್ಕಾಗಿ ತಾಯಿಗೆ ಅನಿಸಿತು. ಅಂತಹ ಶರೀರಗಳು ಅವರಲ್ಲಿ, ಭಿಕ್ಷುಕರಿಗೆ ಇರುವಂತಹ ತುಚ್ಛ ಅಸೂಯೆಯನ್ನೂ ಕಾಹಿಲೆಯವರಿಗೂ ಬಳಲಿದವರಿಗೂ ಇರುವಂತಹ ಜಿಗುಟಾದ ದುರಾಶೆಯನ್ನೂ ಉಂಟುಮಾಡುತ್ತಿದ್ದುವು. ಅವರು ತುಟಿಗಳನ್ನು ಚಪ್ಪರಿಸಿದರು. ದುಡಿಯುವ ಐಶ್ವರ್ಯವನ್ನುಂಟುಮಾಡುವ ಸಾಮರ್ಥ್ಯವುಳ್ಳ, ಕ್ರಿಯಾಶೀಲವಾದ ಮತ್ತು ಸುಖ ಸಂತೋಷಗಳನ್ನು ಬಲ್ಲ, ಈ ಶರೀರಗಳು ಕೈ ಬಿಟ್ಟು ಹೋಗುತ್ತವಲ್ಲಾ ಎಂದು ಅವರು ವಿಷಾದಪಟ್ಟರು. ಈಗ ಈ ದೇಹಗಳು ಜೀವನ ವಹಿವಾಟಿನಿಂದ ಹೊರಹೋಗುತ್ತಿದ್ದವು. ಅಂದರೆ, ಅವುಗಳನ್ನಿನ್ನು ವಶಪಡಿಸಿಕೊಳ್ಳುವುದು, ಶೋಷಿಸುವುದು, ಸೇವಿಸುವುದು ಸಾಧ್ಯವಿಲ್ಲವೆಂದಾಯಿತು. ಈ ಕಾರಣಕ್ಕಾಗಿ ಈ ಯುವಕರು ಆ ವಯಸ್ಸಾದ ನ್ಯಾಯಾಧೀಶರಲ್ಲಿ ಆಸೆಗಳನ್ನು ಕೆರಳಿಸಿದರು. ಹೊಸ ಆಹಾರ ಎದುರಿಗಿದ್ದರೂ ಅದನ್ನು ಹಿಡಿಯುವ ಸಾಮರ್ಥ್ಯವಿಲ್ಲದ ದುರ್ಬಲ ಪ್ರಾಣಿಗಳ ಹಾಗೆ, ಇತರ ಬಲಶಾಲಿ ಜೀವಿಗಳನ್ನು ಇದಿರಿಸಲಾಗದೆ ಭೂಮಿ ಆಹಾರ ಕೈ ತಪ್ಪಿ ಹೋಗುವುದಲ್ಲಾ ಎಂದು ಬೊಗಳುವ, ಗುರುಗುಟ್ಟುವ ಪ್ರಾಣಿಗಳ ಹಾಗೆ, ಅವರಲ್ಲಿ ಕರುಳು ಕಡಿಯುವ ಪ್ರತೀಕಾರದ ಕ್ರೋಧ ಉಕ್ಕೇರುತ್ತಿತ್ತು.

ಆಕೆ ಆ ನ್ಯಾಯಾಧೀಶರನ್ನು ಹೆಚ್ಚು ಆಸಕ್ತಿಯಿಂದ ಈಕ್ಷಿಸಿದ ಹಾಗೆ, ಅಂತಹ ವಿಚಿತ್ರವಾದ ಒರಟಾದ ವಿಚಾರಗಳು, ಹೆಚ್ಚು ಹೆಚ್ಚು ನಿರ್ದಿಷ್ಟ ರೂಪ ತಳೆದುವು. ಒಮ್ಮೆ ಸುಖ ಸಂತೋಷದಿಂದ ಇರುವುದೆಂದರೆ ಏನೆಂದು ತಿಳಿದಿದ್ದ ಸೊರಗಿದ ಪ್ರಾಣಿಗಳು ತೋರಿಸುವ ದುರಾಶೆಯನ್ನೂ ಬಂಜೆ ಕ್ರೋಧವನ್ನೂ ಮರೆಮಾಚಲು, ಅವರು ಯಾವ ಪ್ರಯತ್ನವನ್ನೂ ಮಾಡದಿದ್ದುದನ್ನು ತಾಯಿ ಕಂಡಳು. ಸ್ತ್ರೀಯೂ ತಾಯಿಯೂ ಆಗಿದ್ದ ಆಕೆಗೆ, ಕೊನೆಯಲ್ಲಿ ಯಾವಾಗಲೂ, ಆತ್ಮ ಎಂದು ಹೇಳಲಾದುದಕ್ಕಿಂತ ಮಗನ ಶರೀರವೇ ಹೆಚ್ಚು ಪ್ರಿಯವಾಗಿತ್ತು. ಅವರ ಮಂದದೃಷ್ಟಿ ಆತನ ಮುಖದ ಮೇಲೆ ಹರಿದು, ಎದೆಯನ್ನು ಮುಟ್ಟಿ, ಭುಜಗಳನ್ನು ತಾಕಿ, ತೋಳುಗಳಿಗೆ ಇಳಿದು, ತಮ್ಮ ಕುಗ್ಗಿ ಹೋದ ನಾಡಿಗಳಲ್ಲೂ ವ್ಯಯವಾದ ಮಾಂಸಖಂಡಗಳಲ್ಲೂ

ಹರಿಯುವ ರಕ್ತ ತಿಕ್ಕಾಟದಿಂದ ಬೆಚ್ಚಗಾಗುವುದೇನೋ ಎಂಬಂತೆ ದೇಹದ ಬಿಸಿ ಚರ್ಮವನ್ನು ತಿಕ್ಕುತ್ತಿತ್ತು. ಅದನ್ನು ಈಕ್ಷಿಸುವುದು ಬಲು ಭೀಕರವಾಗಿತ್ತು. ಇವರನ್ನು ಶಿಕ್ಷೆಗೆ ಒಳಗುಮಾಡಿ, ಆ ಶರೀರಗಳು ತಮಗೆಂದೂ ದೊರೆಯದ ಹಾಗೆ ಮಾಡಲು ಅವರು ಸಿದ್ಧರಿದ್ದರೂ, ಈ ಯುವಕರ ಯೋಚನೆಯಿಂದ ಉಂಟಾದ ದುರಾಶೆಯ ಮತ್ತು ಅಸೂಯೆಯ ಇರಿತಗಳು ಅವರನ್ನು ಸ್ವಲ್ಪ ಮಟ್ಟಿಗೆ ಚೇತನಗೊಳಿಸಿದುವು. ಈ ತೀವ್ರಮಯವಾದ ಅಸಹ್ಯವಾದ ಸ್ಪರ್ಶದ ಅರಿವು ಪಾವೆಲ್‌ಗಿದ್ದು, ಆತನ ಮೈ ಕಂಪಿಸಿ ತನ್ನನ್ನು ಆತ ನೋಡಿದಂತೆ ತಾಯಿಗೆ ಅನಿಸಿತು.

ಪಾವೆಲ್ ಶಾಂತವಾಗಿ ಮೃದುವಾಗಿ ತಾಯಿಯನ್ನು ನೋಡಿದ. ಆತನ ನೋಟದಲ್ಲಿ ಬೇಸರದ ಛಾಯೆಯಿತ್ತು. ಆಗಾಗ್ಗೆ ಆಕೆಯತ್ತ ತಲೆಬಾಗಿಸಿ ಆತ ಮುಗುಳ್ನಕ್ಕ.

"ಬೇಗನೆ ಬಿಡುಗಡೆ!" ಎಂಬ ಪದಗಳನ್ನು, ಅಪ್ಪುಗೆಯಂತಿದ್ದ ಆತನ ಮುಗುಳ್ನಗೆಯಲ್ಲಿ ತಾಯಿ ಓದಿದಳು.

ಒಮ್ಮೆಲೆ, ನ್ಯಾಯಾಧೀಶರೆಲ್ಲ ಎದ್ದರು. ತನಗರಿವಿಲ್ಲದೆಯೇ ತಾಯಿಯೂ ಎದ್ದಳು.

"ಹೊರಟರು," ಎಂದ ಸಿಜೋವ್.

"ಶಿಕ್ಷೆಯ ತೀರ್ಮಾನಕ್ಕೋಸ್ಕರವೆ?" ಎಂದು ತಾಯಿ ಕೇಳಿದಳು.

"ಹೌದು."

ಅವರೆಗೂ ಆಕೆಯನ್ನು ಕಾಡುತ್ತಿದ್ದ ಕ್ಷೋಭೆಯ ಮನೋಸ್ಥಿತಿ ಮುರಿದು, ನಿತ್ರಾಣದಿಂದಲೂ ಆಯಾಸದಿಂದಲೂ ಆಕೆ ಸಂಕಟಪಟ್ಟಳು. ಆಕೆಯ ಹುಬ್ಬುಗಳು ಕಂಪಿಸಿದುವು. ಬೆವರಿನ ಮಣಿಗಳು ಹಣೆಯ ಮೇಲೆ ಸಾಲುಗಟ್ಟಿದುವು. ನೋವಿನ ನಿರಾಶೆಯ ಭಾರವೊಂದು ಆಕೆಯ ಎದೆಗೆ ಬಡಿದು, ನ್ಯಾಯಾಧೀಶರ ಮತ್ತು ನ್ಯಾಯಸ್ಥಾನದ ಬಗ್ಗೆಯಿದ್ದ ಗೌರವ ಭಾವನೆಯು ತಿರಸ್ಕಾರವಾಗಿ ಬೇಗನೆ ಪರಿವರ್ತನೆಗೊಂಡಿತು. ತಲೆ ನೋಯುತ್ತಿತ್ತು. ಅದನ್ನು ತಿಳಿದ ತಾಯಿ, ತನ್ನ ಕೈಯಿಂದ ಹುಬ್ಬನ್ನು ಗಟ್ಟಿಯಾಗಿ ಒರೆಸುತ್ತ, ಮೇಲಕ್ಕೆ ನೋಡಿದಳು. ಕೈದಿಗಳ ಸಂಬಂಧಿಕರೆಲ್ಲ ಕಂಬಿಗಳ ಬಳಿಗೆ ಹೋಗಿದ್ದು, ನ್ಯಾಯಸ್ಥಾನ ಮಾತುಕತೆಯ ಗುಂಯಾರವದಿಂದ ತುಂಬಿತು. ಆಕೆಯೂ ಪಾವೆಲ್‌ನ ಬಳಿಗೆ ಹೋದಳು. ನೋವಿನಿಂದಲೂ ಸಂತೋಷದಿಂದಲೂ ಬಿರಿಯುತ್ತ, ಪರಸ್ಪರ ವಿರೋಧಿಯಾದ ಭಾವನೆಗಳ ಸಿಕ್ಕುಬಲೆಯಲ್ಲಿ ಸಿಲುಕಿಕೊಳ್ಳುತ್ತ, ಮಗನ ಕೈಗಳನ್ನು ಅದುಮಿಕೊಂಡು ತಾಯಿ ಅತ್ತಳು. ಪಾವೆಲ್ ಆಕೆಯೊಡನೆ ಮೃದುವಾಗಿ ಮಾತನಾಡಿದ; ಹೊಹೋಲ್ ನಗುತ್ತ ತಮಾಷೆಯ ಮಾತುಗಳನ್ನಾಡಿದ.

ಎಲ್ಲ ಹೆಂಗಸರೂ ಅತ್ತರು. ದುಃಖಕ್ಕಿಂತ ಹೆಚ್ಚಾಗಿ, ಅಭ್ಯಾಸ ಬಲದಿಂದಲೇ ಅತ್ತರು. ಅಗೋಚರವಾಗಿ ಅನಿರೀಕ್ಷಿತವಾಗಿ ಬೀಳುವಂತಹ ದುಃಖದ ಆಘಾತ

ಅಲ್ಲಿರಲಿಲ್ಲ. ಅಲ್ಲಿದ್ದುದು ತಮ್ಮ ಮಕ್ಕಳನ್ನು ಬೀಳ್ಕೊಡಬೇಕಾದ ವ್ಯಸನದ ಅವಶ್ಯತೆ ಮಾತ್ರ. ಆದರೆ ಆ ದಿನ ಕಂಡು ಕೇಳಿದ್ದ ಪ್ರತಿಯೊಂದೂ ಅದನ್ನು ಮೃದುಗೊಳಿಸಿತ್ತು, ಹಗುರಗೊಳಿಸಿತ್ತು. ತಾಯ್ತಂದೆಯರು ಮಿಶ್ರಭಾವನೆಗಳಿಂದ ತಮ್ಮ ಮಕ್ಕಳನ್ನು ನೋಡುತ್ತಿದ್ದರು. ಆ ಭಾವನೆಗಳಲ್ಲಿ, ಯೌವನವನ್ನು ಕುರಿತಾದ ಅಪನಂಬಿಕೆಯೂ ತಮ್ಮ ಸ್ವಂತದ ವಿಷಯವಾದ ಸಾಮಾನ್ಯ ವಿಶ್ವಾಸವೂ ಗೌರವಕ್ಕೆ ಸಮೀಪ ವಾದೊಂದು ಭಾವನೆಯೊಡನೆ ವಿಚಿತ್ರವಾದ ರೀತಿಯಲ್ಲಿ ಬೆರೆತ್ತಿದ್ದುವು. ಬೇರೊಂದು ಉತ್ತಮವಾದ ಜೀವನ ಪದ್ಧತಿಯನ್ನು ನಿರ್ಮಿಸುವ ವಿಷಯವಾಗಿ ಅಷ್ಟೊಂದು ಧೈರ್ಯವಾಗಿಯೂ ನಿರ್ಭಯವಾಗಿಯೂ ಮಾತನಾಡಿದ ಈ ಯುವಕರು ಅವರಲ್ಲಿ ಆಶ್ಚರ್ಯವನ್ನು ಉಂಟುಮಾಡಿದ್ದರು. ಅದರ ಎದುರಲ್ಲಿ, ಇನ್ನು ತಾವು ಹೇಗೆ ಜೀವನ ನಡೆಸಬೇಕೆಂಬ ದುಃಖದ ಯೋಚನೆಗಳೆಲ್ಲ ಮರೆಯಾದುವು.... ವ್ಯಕ್ತ ಪಡಿಸುವ ಸಾಮರ್ಥ್ಯವಿಲ್ಲದೇ ಹೋದುದರಿಂದ ಇಂತಹ ಭಾವನೆಗಳನ್ನು ಅವರು ಹತ್ತಿಕ್ಕಿದರು. ಬದಲು, ಬಟ್ಟೆ ಬರೆ, ಆರೋಗ್ಯವನ್ನು ಕಾಯ್ದುಕೊಳ್ಳುವ ಅವಶ್ಯತೆ ಗಳಂತಹ ಸರಳ ವಿಷಯಗಳಿಗೆ ಸಂಬಂಧಿಸಿ ಬೇಕಾದಷ್ಟು ಮಾತುಕತೆಗಳಾದುವು.

ಬೂಕಿನ್‌ನ ಅಣ್ಣ – ಕೊನ್‌ಸ್ತಂತೀನ್ – ತನ್ನ ತಮ್ಮನಿಗೆ ಮನಗಾಣಿಸಿ ಕೊಡುವ ಪ್ರಯತ್ನದಲ್ಲಿ ಕೈಬೀಸಿ ಹೇಳಿದ:

"ನ್ಯಾಯ – ಅದೀಗ ಮುಖ್ಯ ! ಇನ್ನು ಯಾವುದೂ ಅಲ್ಲ !"

"ಮನೆ ಗಿಣೀನ ನೋಡ್ಕೊ," ಎಂದ ತಮ್ಮ.

"ಹೂಂ. ನೋಡ್ಕೋತೀನಿ."

ಸಿಜೋವ್ ತನ್ನ ಅಳಿಯನ ತೋಳನ್ನು ಹಿಡಿದು ಹೇಳಿದ:

"ಸರಿ, ಫ್ಯೋದೊರ್. ಹಾಗಾದರೆ ನೀನು ನಮ್ಮನ್ನ ಬಿಟ್ಟು ಹೊರಡ್ತೀಂತ ಆಯ್ತು...."

ಫ್ಯೋದೊರ್ ಕೆಳ ಬಾಗಿ, ತುಂಟತನದಿಂದ ಮುಗುಳ್ನಗುತ್ತ, ಆತನ ಕಿವಿಯು ಲ್ಲೇನನ್ನೋ ಉಸುರಿದ. ಅದನ್ನು ಕಂಡು ಕಾವಲುಗಾರನೂ ಮುಗುಳ್ನಕ್ಕ; ಆದರೆ ತಕ್ಷಣವೇ ಮುಖವನ್ನು ನೇರಗೊಳಿಸಿ ಗಂಟಲು ಸರಿಪಡಿಸಿದ.

ಇತರ ಹೆಂಗಸರಂತೆ ತಾಯಿಯೂ ಬಟ್ಟೆಬರೆ ಮತ್ತು ಆರೋಗ್ಯದ ವಿಚಾರವಾಗಿ ಮಗನೊಡನೆ ಮಾತನಾಡಿದಳು. ಆದರೆ ಆಕೆಯ ಹೃದಯ, ಸಾಷ, ತಾನು ಮತ್ತು ಆತನಿಗೆ ಸಂಬಂಧಿಸಿದ ಸಾವಿರ ಪ್ರಶ್ನೆಗಳಿಂದ ತುಂಬಿತ್ತು. ಎಲ್ಲದಕ್ಕಿಂತ ಮೇಲ್ಗಡೆ ಮಗನಿಗೋಸ್ಕರವಾದ ಮಿತಿಮೀರಿದ ಪ್ರೀತಿ, ಅವನನ್ನು ತೃಪ್ತಿಪಡಿಸಬೇಕೆಂಬ, ಅವನ ಹೃದಯಕ್ಕೆ ಸಮೀಪವಾಗಿರಬೇಕೆಂಬ ಬಯಕೆ, ಮೊರೆಯುತ್ತಿದ್ದುವು. ನ್ಯಾಯಾಧೀ ಶರ ನೆನಪಿನಿಂದ ಉಂಟಾಗುತ್ತಿದ್ದ ನಡುಕ ಮತ್ತು ಆಕೆಯ ಮನಸ್ಸಿನ ಹಿಂಭಾಗದಲ್ಲಿ ಹುದುಗಿದ್ದ ಕಹಿಭಾವನೆಗಳನ್ನಷ್ಟೆ ಬಿಟ್ಟು, ಬರಲಿದ್ದುದರ ಭಯ ಮಾಸಿಹೋಯಿತು. ತಾಯಿಗೆ, ವಿಸ್ತಾರವಾದ ಶುಭ್ರವಾದ ಸಂತೋಷವೊಂದು ತನ್ನೊಳಗೆ ಹುಟ್ಟಿಕೊಂಡು

ದರ ಅರಿವಿತ್ತು. ಇದು ಆಕೆಗೆ ಅರ್ಥವಾಗಲಿಲ್ಲ. ಇದರಿಂದ ಅವಳಿಗೆ ಸಂಕೋಚವೆನಿಸಿತು. ಹೊಹೋಲ್ ಎಲ್ಲರೊಡನೆಯೂ ಮಾತನಾಡುತ್ತಿದ್ದುದನ್ನು ಕಂಡು, ಪಾವೆಲ್‌ಗಿಂತಲೂ ಹೆಚ್ಚಾಗಿ ಆತನಿಗೆ ತನ್ನ ಪ್ರೀತಿಯ ಆವಶ್ಯಕತೆ ಇದೆ ಎಂಬುದನ್ನು ಮನಗಂಡು, ತಾಯಿ ಅವನೊಡನೆ ಮಾತನಾಡಿದಳು:

"ಈ ವಿಚಾರಣೆ ನನಗೇನೂ ಹಿಡಿಸ್ಲಿಲ್ಲ!"

"ಯಾಕಮ್ಮ?" ಎಂದು ಅವನು ಕೃತಜ್ಞತೆಯ ಮುಗುಳ್ನಗೆಯೊಡನೆ ಕೇಳಿದ. "ಯಂತ್ರ ಹಳೇದು, ಆದರೆ ಬಂಗಾರದಷ್ಟು ಒಳ್ಳೇದು...."

"ಹೆದರ್ಕೊಳ್ಳೋವಂಥಾದ್ದೇನೂ ಈ ವಿಚಾರಣೇಲಿ ಇಲ್ಲ. ಆದರೆ ಯಾರು ಸರಿ ಯಾರು ತಪ್ಪೂಂತ ಇದು ಹೇಳೋದಿಲ್ಲ," ಎಂದಳು ತಾಯಿ ಅಳುಕುತ್ತ.

"ಒಹ್ಹೊ! ಅದು ತಿಳೀಬೇಕಾಗಿತ್ತೇನು ನಿಮಗೆ? ಸರಿ. ತಪ್ಪು ಹುಡುಕೋ ಆಸಕ್ತಿ ಅವರಿಗಿದೇಂತ ಯೋಚಿಸ್ತೀರಲ್ಲ ನೀವು!"

"ವಿಚಾರಣೆ ಭಯಾನಕವಾಗಿರ್‍ತದೇಂತಿದ್ದೆ," ಎಂದು ತಾಯಿ ನಿಟ್ಟುಸಿರಿನೊಡನೆಯೂ ಮುಗುಳ್ನಗೆಯೊಡನೆಯೂ ಹೇಳಿದಳು.

ಆಗ ಕೇಳಿಸಿತು:

"ಆರ್ಡರ್! ನ್ಯಾಯಸ್ಥಾನದಲ್ಲಿ ಶಾಂತವಾಗಿ!"

ಎಲ್ಲರೂ ತಂತಮ್ಮ ಸ್ಥಾನಗಳಿಗೆ ಹಿಂತಿರುಗಿದರು.

ಹಿರಿಯ ನ್ಯಾಯಾಧೀಶ ಒಂದು ಕೈಯಿಂದ ಮೇಜಿನ ಮೇಲೊರಗಿ, ಇನ್ನೊಂದರಿಂದ ಒಂದು ಕಾಗದವನ್ನು ಮುಖದೆದುರು ಹಿಡಿದು, ತೆಳ್ಳಗಿನ ಸುಂಯ್‌ಗುಡುವ ಸ್ವರದಲ್ಲಿ ಅದನ್ನು ಓದತೊಡಗಿದ.

"ತೀರ್ಪನ್ನ ಓದ್ತಿದಾರೆ," ಎಂದನು ಸಿಜೋವ್.

ನ್ಯಾಯಸ್ಥಾನ ನೀರವವಾಯಿತು. ಪ್ರತಿಯೊಬ್ಬರೂ ವೃದ್ಧಮನುಷ್ಯನ ಮೇಲೆಯೋ ದೃಷ್ಟಿನೆಟ್ಟು ಎದ್ದುನಿಂತರು. ಪುಟ್ಟ ಆಕೃತಿ, ನಿಶ್ಚಲ ನಿಲುವು, ಒಣಗಿದ ದೇಹ – ಹೀಗಿದ್ದ ಆತ, ಅಗೋಚರವಾದೊಂದು ಕೈ ಹಿಡಿದಿದ್ದ ಕೋಲನ್ನು ಬಹಳ ಮಟ್ಟಿಗೆ ಹೋಲುತ್ತಿದ್ದ. ಇತರ ನ್ಯಾಯಾಧೀಶರೂ ಎದ್ದುನಿಂತರು. ಜಿಲ್ಲೆಯ ಮುಖ್ಯಸ್ಥ ತಲೆಯನ್ನು ಒಂದು ಕಡೆಗೆ ಬಾಗಿಸಿ, ತನ್ನ ಕಣ್ಣುಗಳನ್ನು ಛಾವಣಿಗೆ ನೆಟ್ಟಿದ್ದ. ನಗರಾಧ್ಯಕ್ಷ ಎದೆಗೆ ಅಡ್ಡವಾಗಿ ಕೈಕಟ್ಟಿದ್ದ. ಜಮೀನ್ದಾರರ ನಾಯಕ ತನ್ನ ಗಡ್ಡವನ್ನು ತಟ್ಟುತ್ತಿದ್ದ. ಕಾಹಿಲೆಯ ಮುಖದ ನ್ಯಾಯಾಧೀಶ, ಊದಿಕೊಂಡಿದ್ದ ಇನ್ನೊಬ್ಬ ಸಹೋದ್ಯೋಗಿ, ಪ್ರಾಸಿಕ್ಯೂಟರ್ – ಎಲ್ಲರೂ ಕೈದಿಗಳತ್ತ ನೋಡುತ್ತಿದ್ದರು. ನ್ಯಾಯಾಧೀಶರ ಹಿಂದೆ ಗೋಡೆಯಿಂದ ತ್ಸಾರ್ ಚಕ್ರವರ್ತಿ, ತನ್ನ ಕೆಂಪು ಸಮವಸ್ತ್ರದಲ್ಲಿ ಶೋಭಾಯಮಾನನಾಗಿ, ಬಿಳಿಯ ಮುಖದಲ್ಲಿ ನಿರಾಸಕ್ತಿಯ ಛಾಯೆಯನ್ನು ತೋರುತ್ತ, ಕೆಳಕ್ಕೆ ನೋಡುತ್ತಿದ್ದ. ಆ ಮುಖಕ್ಕೆ ಅಡ್ಡಲಾಗಿ ಈಗ ಹುಳುವೊಂದು ಹರಿಯುತ್ತಿತ್ತು.

"ಗಡೀಪಾರು!" ಎಂದ ಸಿಜೋವ್, ಸಮಾಧಾನದ ನಿಟ್ಟುಸಿರುಬಿಟ್ಟು. "ಅಬ್ಬ

ದೇವರೆ! ಅಂತೂ ಮುಗಿಯಿತಲ್ಲ ಒಮ್ಮೆ! 'ಸಶ್ರಮ ಸಜೆ' ಅಂತ ಕೇಳಿಸ್ತು. ಎಲ್ಲಾ ಸರಿಹೋಗ್ತದೆ, ತಾಯಿ: ಚಿಂತಿಸ್ಬೇಡ."

"ಏನು ಶಿಕ್ಷೆ ಸಿಗ್ತದೆ ಅನ್ನೋದು ನನಗೆ ಗೊತ್ತಿತ್ತು," ಎಂದು ತಾಯಿ, ಆಯಾಸದ ಧ್ವನಿಯಲ್ಲಿ ಹೇಳಿದಳು.

"ಏನೇ ಆಗಲಿ, ಅಂತೂ ಸ್ಪಷ್ಟವಾಗಿ ತಿಳಿದ ಹಾಗಾಯ್ತು. ಯಾವ ಕ್ಷಣ ಅವ ರೇನು ಮಾಡ್ತಾರೆ ಅನ್ನೋದು ಹೇಳೋ ಹಾಗೇ ಇರ್ಲಿಲ್ಲ."

ಆಗಲೆ ಹೊರಕ್ಕೆ ಒಯ್ಯಲ್ಪಡುತ್ತಿದ್ದ ಕೈದಿಗಳತ್ತ ಸಿಜೋವ್ ತಿರುಗಿ, ಕೂಗಿ ಹೇಳಿದ:

"ಹೋಗಿ ಬಾ, ಫ್ಯೋದೊರ್! ನಮಸ್ಕಾರ, ನಿಮಗೆಲ್ಲರಿಗೂ! ದೇವರಿದ್ದಾನೆ!"

ತಾಯಿ ಮೌನವಾಗಿ ತನ್ನ ಮಗನನ್ನೂ ಇನ್ನಿತರರನ್ನೂ ನೋಡಿ ತಲೆಬಾಗಿ ಬೀಳ್ಕೊಟ್ಟಳು. ಆಕೆಗೆ ಅಳಬೇಕೆನ್ನಿಸಿತು. ಆದರೆ ಅಳುವುದು ಅವಮಾನಕರವೆಂದು ಸುಮ್ಮನಾದಳು.

## ೨೭

ನ್ಯಾಯಸ್ಥಾನದಿಂದ ಹೊರಬಿದ್ದ ತಾಯಿ, ಅಷ್ಟರಲ್ಲೆ ಕತ್ತಲಾಗಿದ್ದುದನ್ನು ಕಂಡು ಆಶ್ಚರ್ಯಪಟ್ಟಳು. ಬೀದಿಯ ಮೂಲೆಗಳಲ್ಲಿ ದೀಪಗಳು ಉರಿಯುತ್ತಿದ್ದುವು. ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿದ್ದುವು. ನ್ಯಾಯಸ್ಥಾನದ ಸಮೀಪದಲ್ಲೆ ಜನರು ಗುಂಪುಗುಂಪಾಗಿ ನೆರೆದಿದ್ದರು. ಹೊರಗೆ ವಾತಾವರಣದಲ್ಲಿ ಹಿಮ ಸುರಿದು ಪುಡಿಯಾಗುವ ಸದ್ದು ಕೇಳಿಸುತ್ತಿತ್ತು. ಎಳೆಯ ಸ್ವರಗಳು ಕೇಳಿ ಬರುತ್ತಿದ್ದುವು. ಎತ್ತರದ ಬೂದು ಟೊಪ್ಪಿಗೆಯನ್ನು ಧರಿಸಿದ್ದವನೊಬ್ಬ ಸಿಜೋವ್‌ನ ಮುಖದತ್ತ ನೋಡಿ ಬೇಗನೆ ಕೇಳಿದ:

"ಏನು ಶಿಕ್ಷೆ ಕೊಟ್ಟರು?"

"ಗಡೀಪಾರು."

"ಎಲ್ಲರಿಗೂ?"

"ಹೌದು."

ಆತ, ಉತ್ತರಕ್ಕಾಗಿ ಅಭಿವಂದಿಸಿ, ಹೊರಟು ಹೋದ.

"ನೋಡಿದಿಯಾ? ಜನರಿಗೆ ಆಸಕ್ತಿಯಿದೆ" ಎಂದ ಸಿಜೋವ್.

ಅಷ್ಟರಲ್ಲೇ, ಹತ್ತಾರು ಹುಡುಗ ಹುಡುಗಿಯರು ಅವರನ್ನು ಸುತ್ತಿಕೊಂಡು, ಪ್ರಶ್ನೆಗಳ ಮಳೆ ಸುರಿಸಿದರು. ಈ ಸಣ್ಣ ಗುಂಪು ಬೇರೆ ಜನರನ್ನೂ ಆಕರ್ಷಿಸಿತು. ತಾಯಿ ಮತ್ತು ಸಿಜೋವ್ ನಿಂತರು. ಯಾವ ಶಿಕ್ಷೆ ಕೊಟ್ಟರು? ಕೈದಿಗಳು ಹೇಗೆ ವರ್ತಿಸಿದರು? ಯಾರು ಭಾಷಣಕೊಟ್ಟರು? ಏನು ಹೇಳಿದರು?.... ಈ ಎಲ್ಲ

ಪ್ರಶ್ನೆಗಳಲ್ಲೂ ಆತುರದ ಕುತೂಹಲ ಕಂಡುಬರುತ್ತಿತ್ತು. ಆ ಪ್ರಾಮಾಣಿಕತೆ ಮತ್ತು ಉದ್ವೇಗ, ಸರಿಯಾದ ಉತ್ತರಕೊಟ್ಟು ತೃಪ್ತಿಪಡಿಸಬೇಕೆಂಬ ಅಪೇಕ್ಷೆಯನ್ನು ಹುಟ್ಟಿಸುತ್ತಿದ್ದುವು.

"ಮಹನೀಯರೆ! ಈಕೆ ಪಾವೆಲ್ ವ್ಲಾಸೊವ್‌ನ ತಾಯಿ!" ಎಂದು ಯಾರೋ ಅಂದರು. ಆ ಕ್ಷಣವೆ ಪ್ರತಿಯೊಬ್ಬರೂ ಮೌನವಾದರು.

"ನಿಮ್ಮ ಕೈ ಕುಲುಕೋದಕ್ಕೆ ಸಮ್ಮತಿ ಕೊಡಿ!"

ಯಾರದೋ ಬಲವಾದ ಕೈ ತಾಯಿಯ ಬೆರಳುಗಳನ್ನು ಬಿಗಿಹಿಡಿಯಿತು. ಬೇರೆ ಯಾರದೋ ಉದ್ವಿಗ್ನಗೊಂಡ ಸ್ವರ ಹೇಳಿತು:

"ನಿಮ್ಮ ಮಗ ನಮಗೆಲ್ಲರಿಗೂ ಧೈರ್ಯದ ಮಾದರಿಯಾಗ್ತಾನೆ...."

"ರಷ್ಯದ ಕಾರ್ಮಿಕರು ದೀರ್ಘಕಾಲ ಬಾಳಲಿ!" ಎಂದು ಗಟ್ಟಿಯಾದೊಂದು ಸ್ವರ ಕೇಳಿಸಿತು.

ಕೂಗುಗಳು ಎಷ್ಟೋ ಪಾಲು ಹೆಚ್ಚಿದುವು. ಅಲ್ಲಿ ಇಲ್ಲಿ ಹುಟ್ಟಿಕೊಂಡುವು. ಜನ ಎಲ್ಲಾ ಕಡೆಗಳಿಂದಲೂ ಓಡಿ ಬಂದು ಸಿಜೋವ್‌ನನ್ನೂ ತಾಯಿಯನ್ನೂ ಸುತ್ತುವರಿದರು. ಪೋಲೀಸರ ಶೀಟಿಗಳ ಕರ್ಕಶ ಧ್ವನಿಗಳು ಕೇಳಿಸಿದುವು. ಆದರೂ ಜನರ ಸ್ವರಗಳು ಅಡಗಲಿಲ್ಲ. ಸಿಜೋವ್ ನಕ್ಕ. ತಾಯಿಗೆ ಇದೊಂದು ಸುಂದರ ಕನಸಿನ ಹಾಗೆ ತೋರಿತು. ಆಕೆ ಮುಗುಳ್ನಗುತ್ತ ತಲೆ ಬಾಗುತ್ತ ಜನರ ಕೈಗಳನ್ನು ಕುಲುಕಿದಳು. ಆಕೆಯ ಗಂಟಲು ಸಂತೋಷದ ಕಂಬನಿಯಿಂದ ಒತ್ತರಿಸಿ ಬಂತು. ಕಾಲುಗಳು ಆಯಾಸದಿಂದ ಕಂಪಿಸಿದುವು. ಆದರೆ ಉಕ್ಕಿ ಹರಿಯುತ್ತಿದ್ದ ಆಕೆಯ ಹೃದಯ, ಶುಭ್ರ ಸರೋವರದ ಹಾಗೆ, ಭಾವನೆಗಳನ್ನು ಪ್ರತಿಬಿಂಬಿಸಿತು.

ಆಕೆಯ ಬಳಿಯಲ್ಲೇ ಇದ್ದವರು ಯಾರೋ ಸ್ಪಷ್ಟವಾದ ನಡುಗುತ್ತಿದ್ದ ಸ್ವರದಲ್ಲಿ ಮಾತನಾಡತೊಡಗಿದರು:

"ಸಂಗಾತಿಗಳೇ! ರಷ್ಯದ ಜನತೆಯನ್ನೇ ನುಂಗುತ್ತಿರೋ ದೈತ್ಯ, ಈ ದಿವಸ ಮತ್ತೊಮ್ಮೆ ತನ್ನ ದುರಾಶೆಯ ದವಡೆಯನ್ನ...."

"ತಾಯಿ, ನಾವು ಹೋಗೋದು ಮೇಲು," ಎಂದ ಸಿಜೋವ್.

ಅಷ್ಟರಲ್ಲೆ ಸಾಷ ಕಾಣಿಸಿಕೊಂಡಳು. ತಾಯಿಯ ತೋಳನ್ನು ಹಿಡಿದು, ಆಕೆಯನ್ನು ಬೀದಿಯ ಇನ್ನೊಂದು ಬದಿಗೆ ಕರೆದೊಯ್ದಳು.

"ಅವರು ಹೊಡೆತ ಅಥವಾ ದಸ್ತಗಿರಿ ಶುರುಮಾಡೋಕ್ಮುಂಚೆ ಈ ಜಾಗ ಬಿಡ್ಬೇಕು, ನಡಿ," ಎನ್ನುತ್ತ ಸಾಷ, ಅದೇ ಉಸಿರಿನಲ್ಲೆ, ಕೇಳಿದಳು: "ಗಡೀಪಾರೆ? ಸೈಬೀರಿಯಕ್ಕೆ?"

"ಹೌದು, ಹೌದು."

"ಅವನು ಹ್ಯಾಗೆ ಮಾತಾಡ್ದ? ನನಗೆ ಗೊತ್ತಿದೆ. ಆತನೇ ಅವರೆಲ್ಲರಲ್ಲಿ ಅತ್ಯಂತ ಬಲಿಷ್ಠ ಮತ್ತು ಅತ್ಯಂತ ಸರಳ. ಅತ್ಯಂತ ಕಟ್ಟುನಿಟ್ಟಿನವನು ಅನ್ನೋದೂ ಖಂಡಿ

ತವೇ. ಸ್ವಭಾವತಃ ಅವನು ಮೃದು ಮತ್ತು ಸೂಕ್ಷ್ಮಸ್ಪರ್ಶಿ. ಆದರೆ ಅದನ್ನ ತೋರಿಸಿ ಕೊಳ್ಳೋಕೆ ಇಷ್ಟಪಡೋದಿಲ್ಲ."

ಅಷ್ಟೊಂದು ಉದ್ವೇಗದಿಂದಲೇ ಪಿಸುಗುಟ್ಟಿದ ಪ್ರೀತಿಯ ಮಾತುಗಳು, ತಾಯಿಯನ್ನು ಶಾಂತಗೊಳಿಸಿ, ಆಕೆಗೆ ಹೊಸ ಶಕ್ತಿಯನ್ನು ಕೊಟ್ಟುವು.

"ನೀವು ಯಾವತ್ತು ಹೋಗಿ ಅವನನ್ನ ಸೇರ್ಕೋತೀರಾ?" ಎಂದು, ಸಾಷಳ ತೋಳನ್ನು ಪ್ರೀತಿಯಿಂದ ಅದುಮುತ್ತಾ ತಾಯಿ ಕೇಳಿದಳು.

"ನನ್ನ ಕೆಲಸ ನೋಡ್ಕೊಳ್ಳೋರು ಯಾರಾದರೊಬ್ಬರು ಸಿಕ್ಕಿದ ತಕ್ಷಣ" ಎಂದು, ಆತ್ಮವಿಶ್ವಾಸದಿಂದ ತನ್ನೆದುರು ನೋಡುತ್ತಾ ಹುಡುಗಿ ಉತ್ತರವಿತ್ತಳು. "ನಾನೂ ಒಂದು ಶಿಕ್ಷೆಯ ಹಾದಿ ನೋಡ್ತಿದ್ದೀನಿ. ಪ್ರಾಯಶಃ ನನ್ನನ್ನೂ ಅವರು ಸೈಬೀರಿಯಕ್ಕೆ ಕಳಿಸ್ಬಹುದು. ಆಗ, ಅವನಿರೋ ಜಾಗಕ್ಕೇ ನನ್ನನ್ನೂ ಕಳಿಸ್ಬೇಕೂಂತ ಕೇಳ್ತೀನಿ."

ಹತ್ತಿರ ಬಂದ ಸಿಜೋವ್ ಹೀಗೆಂದ:

"ಹಾಗೇನಾದರೂ ಇದ್ರೆ, ಪಾವೆಲ್‌ಗೆ ಅಲ್ಲಿ ನನ್ನ ನಮಸ್ಕಾರ ತಿಳಿಸಿ. ಸಿಜೋವ್ ನಿಂದ ಅಂದರೆ ಸಾಕು. ಅವನು ನನ್ನನ್ನ ಬಲ್ಲ. ನಾನು ಫ್ಯೋದೊರ್ ಮಾಜಿನ್‌ನ ಚಿಕ್ಕಪ್ಪ."

ಸಾಷ ಅವನತ್ತ ತಿರುಗಿ ಹಸ್ತಲಾಘವಕ್ಕೆ ಕೈಚಾಚಿದಳು.

"ನನಗೆ ಫ್ಯೋದೊರ್ ಗೊತ್ತು. ನನ್ನ ಹೆಸರು ಸಾಷ."

"ತಂದೆಯ ಹೆಸರು?"

ಸಾಷ, ಸಿಜೋವ್‌ನತ್ತ ನೋಡಿ ಅಂದಳು:

"ನನಗೆ ತಂದೆಯಿಲ್ಲ."

"ಸತ್ತನೆ?"

"ಇಲ್ಲ, ಸತ್ತಿಲ್ಲ."

ಅದಮ್ಯವಾದುದೇನೋ ಹುಡುಗಿಯ ಸ್ವರದೊಡನೆ ಸೇರಿಕೊಂಡು ಆಕೆಯ ಮುಖದಮೇಲೆ ಪ್ರತಿಬಿಂಬಿಸಿತು:

"ಅವನೊಬ್ಬ ಜಮೀನ್ದಾರ. ಈಗ ತಾಲ್ಲೂಕಿನ ಆಡಳಿತಾಧಿಕಾರಿ. ಆತ ರೈತ ರನ್ನ ದೋಚ್ತಾನೆ...."

"ಹುಂ...." ಎಂದನು ಸಿಜೋವ್. ಅನಂತರ ಮೌನವಾಗಿ ಆತ ಹುಡುಗಿಯ ಪಕ್ಕದಲ್ಲೆ ನಡೆಯುತ್ತ, ಆಕೆಯನ್ನು ಕುಡಿಗಣ್ಣಿನಿಂದ ನೋಡುತ್ತ, ಬಂದ.

ಕೊನೆಗೆ ಆತನೆಂದ:

"ಸರಿ, ಹೊರಡ್ತೀನಿ, ತಾಯಿ. ನಾನಿಲ್ಲೇ ಎಡಕ್ಕೆ ತಿರುಗ್ಬೇಕು.... ನಮಸ್ಕಾರ, ಹೊರಡ್ತೀನಿ, ಮಗಳೇ... ನಿನ್ನ ಆ ತಂದೆಯ ವಿಷಯದಲ್ಲಿ ತುಂಬಾ ಕಠಿನಳಾಗಿದ್ದೀ ಯಮ್ಮ, ಅಲ್ವಾ? ಹೂ. ಅದು ನಿನಗೆ ಸಂಬಂಧಿಸಿದ್ದೂಂತಿಟ್ಕೊ...."

"ನಿಮ್ಮ ಮಗ ಕೆಟ್ಟವನಾಗಿದ್ದು, ಜನರಿಗೆ ತೊಂದರೆ ಕೊಟ್ಟಾಂತಿಟ್ಕೊಳ್ಳಿ. ಅಂಥವನನ್ನ ಜನ ತುಚ್ಛೀಕರಿಸಿದ್ರೆ, ನೀವೂ ಹಾಗೆಯೇ ಹೇಳೋದಿಲ್ವೆ?" ಸಾಷಳ ಮಾತಿನಲ್ಲಿ ಆವೇಗ ತುಂಬಿತ್ತು.

"ಹುಂ. ಹಾಗೇ ಹೇಳ್ತಿದ್ದೆ ಅಂತ ತೋರುತ್ತೆ," ಎಂದು ಮುದುಕ, ಒಂದು ಕ್ಷಣ ತಡೆದು, ಉತ್ತರವಿತ್ತ.

"ಹಾಗಾದರೆ, ನ್ಯಾಯವೇ ನಿಮ್ಮ ಮಗನಿಗಿಂತಲೂ ನಿಮಗೆ ಹೆಚ್ಚು ಪ್ರೀತಿ ಪಾತ್ರವಾದದ್ದೂಂತಾಯ್ತು. ನನಗೆ ನನ್ನ ತಂದೆಗಿಂತಲೂ ಅದು ಹೆಚ್ಚು ಪ್ರೀತಿಪಾತ್ರ ವಾದದ್ದು...."

ಸಿಜೋವ್, ಮುಗುಳ್ನಕ್ಕು ತಲೆಯಾಡಿಸಿದ:

"ಹುಂ. ಘಾಟಿ ನೀವು! ಅಷ್ಟು ಶಕ್ತಿ ಇದ್ದರೆ ಹೀಗೇ ಇರಿ. ನಿಮ್ಮ ಹಿರಿಯರೇ ನಿಮ್ಮ ಹಾದಿಗೆ ಬರ್ತಾರೆ! ನೀವು ಜೋರಾಗಿದ್ದೀರಾ ಅಂತೂ! ಒಳ್ಳೇದು, ನಮ ಸ್ಕಾರ! ಶುಭಾಶಯ! ಆದರೆ ಜನರ ಮೇಲೆ ಇನ್ನೂ ಸ್ವಲ್ಪ ಹೆಚ್ಚು ದಯೆ ಇಡ ಬಾರ್ದೇನಮ್ಮ? ನಮಸ್ಕಾರ, ನೀಲೊವ್ನ! ನೀನು ಪಾವೆಲ್ನ ನೋಡ್ದಾಗ, ಅವನ ಭಾಷಣವನ್ನ ನಾನು ಕೇಳ್ದೆ ಅಂತ ಹೇಳು. ಎಲ್ಲಾ ಅರ್ಥವಾಗ್ಲಿಲ್ಲ. ಕೆಲವು ಕಡೆ ರವಷ್ಟು ಭಯವಾಯ್ತು. ಆದರೆ ಒಟ್ಟಿನಲ್ಲಿ ಸರಿಯಾಗಿತ್ತು."

ಆತ ಹ್ಯಾಟನ್ನೆತ್ತಿ, ಮೂಲೆಯಲ್ಲೆ ಮೆಲ್ಲನೆ ತಿರುಗಿಕೊಂಡ.

ಅವನು ಹೋದ ಕಡೆಯೇ ತನ್ನ ವಿಶಾಲ ಕಣ್ಣುಗಳ ಮುಗುಳ್ನಗೆಯ ನೋಟ ವನ್ನು ಬೀರಿ, ಸಾಷ ಹೇಳಿದಳು:

"ಆತ ಒಳ್ಳೆಯವನೂಂತ ಕಾಣುತ್ತೆ."

ಆ ದಿನ ಹುಡುಗಿಯ ಮುಖ ಎಂದಿನ ಹಾಗಿರದೆ, ಹೆಚ್ಚು ದಯಾಪೂರ್ಣ ವಾಗಿಯೂ ಮೃದುವಾಗಿಯೂ ಇದ್ದಂತೆ ತಾಯಿಗೆ ತೋರಿತು.

ಮನೆ ಸೇರಿದ ಬಳಿಕ ಅವರಿಬ್ಬರೂ ಪರಸ್ಪರರಿಗೆ ತಗುಲಿಕೊಂಡು ಕುಳಿತರು. ಪಾವೆಲ್‌ನ ಬಳಿಗೆ ಸಾಷ ಮುಂದೆ ಕೈಗೊಳ್ಳುವ ಪ್ರಯಾಣದ ಬಗೆಗೆ ಅವರು ಮಾತ ನಾಡಿದರು. ಆ ಮೌನದ ವಾತಾವರಣ ತಾಯಿಗೆ ಆಹ್ಲಾದಕರವಾಗಿತ್ತು. ಸಾಷ ತನ್ನ ದಪ್ಪನೆಯ ಹುಬ್ಬುಗಳನ್ನೇರಿಸಿ, ತನ್ನ ಅಗಲವಾದ ಕನಸು ಕಾಣುವ ಕಣ್ಣುಗಳಿಂದ ದೂರಕ್ಕೆ ನೋಡಿದಳು. ಆಕೆಯ ನಿಸ್ತೇಜವಾದ ಮುಖ ಶಾಂತವಾಗ ಧ್ಯಾನ ಮುದ್ರೆ ಯನ್ನು ತಳೆಯಿತು.

"ಆಮೇಲೆ ನಿಮಗೆ ಮಕ್ಕಳಾದಾಗ ನಾನೂ ಬಂದು, ದಾದಿಯಾಗಿ ಮಕ್ಕಳ ಜತೇಲಿ ಆಟವಾಡ್ತೀನಿ. ಅಲ್ಲಿ ನಮ್ಮ ಜೀವನ ಇಲ್ಲಿಗಿಂತೇನೂ ಕೆಟ್ಟದಾಗೋದಿಲ್ಲ. ಕೆಲಸ ಹುಡುಕೋದು ಪಾವೆಲ್‌ಗೆ ಕಷ್ಟವಾಗದು. ಆತ ತನ್ನ ಕೈಗಳಿಂದ ಯಾವ ಕೆಲಸ ಬೇಕಾದರೂ ಮಾಡಬಲ್ಲ...."

ನಿರೀಕ್ಷಿಸುವ ನೋಟದಿಂದ ಸಾಷ, ತಾಯಿಯನ್ನು ನೋಡಿದಳು.

"ಈಗ ಅವನ ಜತೇಲಿ ಹೋಗೋಕೆ ನೀವು ಇಷ್ಟಪಡೋದಿಲ್ಲೆ?" ಎಂದು ತಾಯಿಯನ್ನಾಕೆ ಕೇಳಿದಳು. ತಾಯಿ ನಿಟ್ಟುಸಿರುಬಿಟ್ಟು ಅಂದಳು:

"ಅವನಿಗೆ ನನ್ನಿಂದೇನು ಉಪಕಾರವಾದೀತು? ತಪ್ಪಿಸಿಕೊಳ್ಳೋಕೆ ಅವನು ಅಪೇಕ್ಷೆಪಟ್ಟರೆ, ನನ್ನಿಂದ ತೊಂದರೆಯೇ ಆದೀತು. ನಾನು ಅಲ್ಲಿಗೆ ಬರೋದಕ್ಕೆ ಅವನು ಖಂಡಿತ ಒಪ್ಪೋದಿಲ್ಲ."

ಹೌದೆಂದು ಸಾಷ, ತಲೆಯಾಡಿಸಿದಳು.

"ನೀವು ಹೇಳೋದು ಸರಿ. ಅವನು ಎಂದಿಗೂ ಒಪ್ಪೋದಿಲ್ಲ."

"ಅಲ್ದೆ, ಇಲ್ಲಿ ನನಗೆ ಮಾಡೋಕೆ ನನ್ನ ಕೆಲಸವೂ ಇದೆಯಲ್ಲ?" ಎಂದು ಹೆಮ್ಮೆಯ ಧ್ವನಿಯಲ್ಲೇ ತಾಯಿ ಅಂದಳು.

"ಹೌದು. ಅದು ಒಳ್ಳೇದು."

ಒಮ್ಮೆಲೆ, ತನ್ನಿಂದ ಏನನ್ನೋ ಎಸೆಯುವವಳಂತೆ ಸಾಷ ಎಚ್ಚತ್ತು, ಶಾಂತ ವಾಗಿ ಸರಳವಾಗಿ ಮಾತನಾಡತೊಡಗಿದಳು:

"ಅವನು ಅಲ್ಲಿ ವಾಸವಾಗಿರೋದೇ ಇಲ್ಲ. ಖಂಡಿತವಾಗಿಯೂ ಓಡಿ ಹೋಗ್ತಾನೆ...."

"ಹಾಗಾದರೆ ನೀವು? ಎಲ್ಲಾದರೂ ನಿಮಗೆ ಮಗು ಆದರೆ?"

"ಆ ಸಮಯ ಬಂದಾಗ ನೋಡಿಕೊಂಡರಾಯ್ತು. ನನ್ನ ವಿಚಾರ ಆತ ಯೋಚಿಸ್ಲೇ ಕೂಡ್ದು. ನಾನು ಅವನ ಹಾದಿಗೆ ಎಂದೂ ಅಡ್ಡ ಬರೋದಿಲ್ಲ. ಅವನಿಂದ ಬೇರೆ ಯಾಗಿರೋದು ಬಹಳ ಕಷ್ಟ. ಹಾಗಿದ್ದರೂ ನಾನು ಸುಧಾರಿಸ್ಕೋತೀನಿ. ಅವನ ಹಾದಿ ಗಡ್ಡವಾಗಿ ಮಾತ್ರ ಎಂದೂ ಬರೋದಿಲ್ಲ!"

ಸಾಷ ಹೇಳಿದ್ದನ್ನು ಮಾಡುವ ಸಾಮರ್ಥ್ಯವುಳ್ಳವಳೆಂಬುದನ್ನು ತಾಯಿ ಮನಗಂಡಳು. ಆಕೆಗೆ, ಹುಡುಗಿಯ ಬಗೆಗೆ ಕನಿಕರವೆನಿಸಿತು.

ಸಾಷಳನ್ನು ಅಪ್ಪಿಕೊಳ್ಳುತ್ತ ತಾಯಿಯೆಂದಳು:

"ನಿಮಗೆ ತುಂಬಾ ಕಷ್ಟವಾದೀತು, ಮುದ್ದು."

ಸಾಷ ಮೃದುವಾಗಿ ನಕ್ಕು, ಮತ್ತಷ್ಟು ತಾಯಿಯ ಸಮೀಪಕ್ಕೆ ಸರಿದಳು.

....ಆಗ ನಿಕೊಲಾಯ್, ಆಯಾಸದಿಂದ ಬಳಲಿಕೆಯಿಂದ ಒಳಬಂದ. ಉಡುಪು ಬಿಚ್ಚತೊಡಗಿದಂತೆಯೇ ಆತ ಬೇಗನೆ ಹೇಳಿದ:

"ಇನ್ನೂ ಅವಕಾಶ ಇರುವಷ್ಟರಲ್ಲೇ ಹೊರಟ್ಹೋಗಿ, ಸಾಷ. ಈ ಬೆಳಗ್ಗೆಯಿಂದ ಇಬ್ಬರು ಗೂಢಚಾರರು ನನ್ನನ್ನ ಹಿಂಬಾಲಿಸ್ತಿದ್ದಾರೆ. ಅವರು ಬಹಿರಂಗವಾಗಿಯೇ ಬರೋ ದಿಟ್ಟತನ ನೋಡಿದ್ರೆ ದಸ್ತಗಿರಿ ಅಂತಲೇ ಕಾಣ್ಸುತ್ತೆ. ನನ್ನ ಅಂತರಂಗದಿಂದ ಬಂದ ಸೂಚನೆ ಯಾವತ್ತೂ ಸುಳ್ಳಾಗೋದಿಲ್ಲ. ಏನೋ ಆಗಿರ್ಬೇಕು.... ಹಾಂ.... ಇಲ್ಲಿದೆ ಪಾವೆಲ್‌ನ ಭಾಷಣ. ಅದನ್ನ ಮುದ್ರಿಸ್ಬೇಕೂಂತ ತೀರ್ಮಾನಿಸಿದೀವಿ. ಅದನ್ನ ಲುದ್ಮೀಲಗೆ ಒಯ್ದು ಮುಟ್ಟಿಸಿ, ಆದಷ್ಟು ಬೇಗ್ನೆ ಮಾಡಿಕೊಡ್ಬೇಕೂಂತ

ಹೇಳಿ. ಪಾವೆಲ್ ಸೊಗಸಾದ ಭಾಷಣಮಾಡ್ದ, ನೀಲೊವ್ನ! ....ಗೂಢಚಾರರು ಹೊರಗಿದ್ದಾರೆ.... ಹುಷಾರಿ, ಸಾಷ...."

ಮಾತನಾಡುತ್ತಿದ್ದಂತೆ, ಹೆಪ್ಪುಗಟ್ಟಿದ ಕೈಗಳನ್ನಾತ, ತಿಕ್ಕಿದ. ಅಲ್ಲಿಂದ ತನ್ನ ಮೇಜಿನ ಬಳಿ ಹೋಗಿ, ಅದರೊಳಗಿಂದ ಕಾಗದಗಳನ್ನು ಹೊರತೆಗೆದ. ಕೆಲವನ್ನು ಆತ ಹರಿದುಹಾಕಿದ. ಉಳಿದುವನ್ನು ಒಂದು ಬದಿಯಲ್ಲಿರಿಸಿದ. ಆಯಾಸದ ಜೊತೆಯಲ್ಲಿ ಚಿಂತೆಯೂ ಆತನನ್ನು ಬಾಧಿಸುತ್ತಿದ್ದಂತೆ ಕಂಡಿತು.

"ಇದನ್ನೆಲ್ಲಾ ಖಾಲಿಮಾಡಿ ಬಹಳ ದಿವಸವಾಗಿಲ್ಲ, ಅಷ್ಟರಲ್ಲೇ ಇಷ್ಟೊಂದು ರಾಶಿ ಎಲ್ಲಿಂದ ಬಂತೋ ಸೈತಾನನಿಗೇ ಗೊತ್ತು!....ಈ ರಾತ್ರೆ ನೀವೂ ಮನೇಲಿ ಮಲಗದೇ ಇದ್ರೆ ಮೇಲು ಅಂತ ತೋರುತ್ತೆ, ನೀಲೊವ್ನ. ಏನ್ಹೇಳ್ತೀರಿ? ಅವರ ಶೋಧನೇನೆಲ್ಲಾ ನೋಡ್ತಾ ಇದ್ರೆ ಬೇಜಾರು ಬರುತ್ತೆ. ಅಲ್ದೆ, ಅವರು ನಿಮ್ಮನ್ನೂ ಕರಕೊಂಡು ಹೋಗ್ಬಹುದು. ನಿಮಗೆ ಪಾವೆಲ್‌ನ ಭಾಷಣ ತಗೊಂಡು ಅಲ್ಲಿಗೆ ಇಲ್ಲಿಗೆ ಓಡಾಡೋ ಕೆಲಸ ಇದೆ...."

"ನನ್ನನ್ನ ಕರಕೊಂಡು ಹೋಗಿ ಅವರೇನು ಮಾಡ್ತಾರೆ?"

ನಿಕೊಲಾಯ್, ತನ್ನ ಕಣ್ಣುಗಳ ಮುಂದೆ ಕೈಯಾಡಿಸುತ್ತಾ ದೃಢವಾಗಿ ಹೇಳಿದ:

"ಈ ನನ್ನ ಊಹೆಯೆಲ್ಲಾ ತಪ್ಪಾಗೋದಿಲ್ಲ.... ಅಲ್ದೆ, ನೀವು ಲುದ್ಮಿಲಗೆ ತುಂಬಾ ಸಹಾಯ ಮಾಡ್ಬಹುದು.... ಅಪಾಯ ಬರ್ಲಿ ಅಂತ ಇದಿರು ನೋಡೋದು ಸರಿಯಲ್ಲ."

ಮಗನ ಭಾಷಣವನ್ನು ಮುದ್ರಿಸುವ ಕಾರ್ಯದಲ್ಲಿ ನೆರವಾಗುವ ವಿಚಾರದಿಂದ ತಾಯಿಗೆ ತೃಪ್ತಿಯಾಯಿತು.

"ಹಾಗೆಂತಾದ್ರೆ ನಾನು ಹೋಗ್ತೀನಿ.... ದೇವರೆ ನನ್ನ ಕಾಪಾಡಪ್ಪ; ಇನ್ನು ನನಗೆ ಯಾವ ಹೆದರಿಕೇನೂ ಇಲ್ಲ!"

ಕೊನೆಯ ಮಾತನ್ನು ಯಾಕೆ ಹೇಳಿದೆನೆಂದು ತಾಯಿಗೇ ಆಶ್ಚರ್ಯವಾಯಿತು.

"ಭೇಷ್!" ಎಂದು ತಾಯಿಯತ್ತ ನೋಡದೆಯೇ ನಿಕೊಲಾಯ್ ಉದ್ಗರಿಸಿದ. "ಆದರೆ ಈಗ, ನನ್ನ ಪೆಟ್ಟಿಗೆ ಬಟ್ಟೆ ಬರೆ ಎಲ್ಲಿದೆ ಅಂತ ನೀವು ಹೇಳೋದು ಮೇಲು. ನಿಮ್ಮ ದೋಚಿಕೊಳ್ಳೋ ವೃತ್ತಿಯಿಂದಾಗಿ ಎಲ್ಲವನ್ನೂ ವಶಪಡಿಸ್ಕೊಂಡಿದ್ದೀರಿ. ನನ್ನ ಸಾಮಾನುಗಳು ಎಲ್ಲಿವೇಂತ ಹುಡುಕೋದು ಕೂಡಾ ನನ್ನಿಂದ ಆಗ್ತಾ ಇಲ್ಲ!"

ಸಾಷ ಮೌನವಾಗಿ, ಕಾಗದಗಳನ್ನು ಒಲೆಯಲ್ಲಿ ಸುಡುತ್ತ ಬೂದಿಯನ್ನು ಇದ್ದಲಿನೊಡನೆ ಬೆರೆಸಿದಳು.

ನಿಕೊಲಾಯ್ ಹಸ್ತಲಾಘವಕ್ಕೆಂದು ಕೈಚಾಚಿ ಹೇಳಿದ:

"ಹೊರಡೋ ಹೊತ್ತಾಯ್ತು, ಸಾಷ. ನಮಸ್ಕಾರ. ಒಳ್ಳೇ ಪುಸ್ತಕಗಳೇನಾದರೂ ಬಂದ್ರೆ ಕಳಿಸೋಕೆ ಮರೀಬೇಡಿ. ನಮಸ್ಕಾರ, ಪ್ರಿಯ ಸಂಗಾತಿ.... ಈಗ ಹೊರಡ್ತಾ ಹುಷಾರಾಗಿರಿ...."

"ದೀರ್ಘ ಜೈಲುವಾಸ ಸಿಗುತ್ತೆ, ಅಂತ್ಲೆ?" ಎಂದು ಸಾಷ ಕೇಳಿದಳು.

"ಯಾರಿಗೆ ಗೊತ್ತು? ಪ್ರಾಯಶಃ ದೀರ್ಘವಾಸವಿದ್ದೀತು. ನನ್ನ ಮೇಲೆ ಆರೋಪಗಳಿವೆ.... ನೀವೂ ಅವಳ ಜತೇಲೆ ಹೋಗೋದು ವಾಸಿ ಅಲ್ವೆ, ನೀಲೊವ್ನ? ಇಬ್ಬರನ್ನೂ ಒಂದೇ ಸಾರಿ ಹಿಂಬಾಲಿಸ್ಕೊಂಡು ಬರೋದು ಅವರಿಗೆ ಕಷ್ಟವಾಗ್ತದೆ."

"ಆಗಲಿ," ಎಂದಳು ತಾಯಿ, "ನಾನೂ ಹೊರಟ್ಬಿಟ್ಟೆ."

ನಿಕೊಲಾಯ್‌ನನ್ನು ಸೂಕ್ಷ್ಮವಾಗಿ ಆಕೆ ನಿರೀಕ್ಷಿಸಿದಳು. ಆತನ ಮುಖದ ಮೇಲೆ ಎಂದಿನಂತೆಯೇ ಇದ್ದ ದಯಾಪೂರ್ಣವಾದ ಮೃದುವಾದ ಭಾವನೆಯನ್ನು ಕಾತುರದೊಂದು ತೆರೆಮುಚ್ಚಿದ್ದು ಮಾತ್ರ ತಾಯಿಗೆ ಕಾಣಿಸಿತು. ಗಾಬರಿಯ ಚಲನವಲನಗಳಿರಲಿಲ್ಲ. ಬೇರೆಯವರಿಗಿಂತ ತನಗೇ ಹೆಚ್ಚು ಪ್ರೀತಿಪಾತ್ರನಾಗಿದ್ದ ಆ ಮನುಷ್ಯನಲ್ಲಿ ಕ್ಷೋಭೆಯ ಚಿಹ್ನೆಗಳಿರಲಿಲ್ಲ. ಆತ ಯಾವಾಗಲೂ ಒಂದೇ ಸಮನಾದ ಆಸಕ್ತಿಯಿಂದ ಎಲ್ಲರನ್ನೂ ನೋಡಿಕೊಂಡಿದ್ದ. ಯಾವಾಗಲೂ ದಯಾದೃಷ್ಟಿಯಿಂದಿದ್ದು, ಎಂದೂ ರೇಗದೆ, ಸದಾ ಶಾಂತನಾಗಿ ಒಂಟಿಯಾಗಿಯೇ ಇರುತ್ತಿದ್ದ. ಯಾವಾಗಲೂ ಇತರರ ಜೀವನಕ್ಕಿಂತ ಮುಂದೆ ಬಲು ದೂರದಲ್ಲಿ, ಗುಪ್ತವಾದ ಒಳ ಬದುಕನ್ನು ತಾನೊಬ್ಬನೇ ಜೀವಿಸುವ ಮನುಷ್ಯನಾಗಿದ್ದ. ಈಗಲೂ ಅಂತಹ ಮನುಷ್ಯನಾಗಿಯೇ ಆತ ಉಳಿದ. ಬೇರೆಯವರಿಗಿಂತ ಹೆಚ್ಚಾಗಿ ತನಗೇ ಆತ ಸಮೀಪವಾಗಿದ್ದನೆಂಬುದು ತಾಯಿಗೆ ಗೊತ್ತಿತ್ತು. ಎಷ್ಟು ಎಂದು ನಿಶ್ಚಯವಾಗಿ ಹೇಳಲಾಗದಂತಹ ಎಚ್ಚರಿಕೆಯ ಪ್ರೀತಿಯಿಂದ ತಾಯಿ ಆತನನ್ನು ಪ್ರೀತಿಸುತ್ತಿದ್ದಳು. ಈಗ ಆತನ ವಿಷಯವಾಗಿ ತಾಯಿಯ ಹೃದಯದಲ್ಲಿ ಉದಿಸಿ ಬಂದ ಕನಿಕರ ದುಸ್ಸಹವಾಗಿತ್ತು. ಅದನ್ನು ಆಕೆ ತೋರ್ಪಡಿಸಿದರೆ, ನಿಕೊಲಾಯ್‌ಗೆ ಸಂಕೋಚವಾಗಿ ಕಸಿವಿಸಿ ಎನಿಸಬಹುದಿತ್ತು. ಆಗ ಆತ ಸ್ವಲ್ಪ ಮಟ್ಟಿಗೆ ಎಳೆಯ ಹುಡುಗನ ಹಾಗೆ ವರ್ತಿಸದೆ ಬೇರೆ ದಾರಿ ಇರಲಿಲ್ಲ. ಅವನಿಗೆ ಹಾಗಾಗುವುದನ್ನು ನೋಡಲು ತಾಯಿ ಇಷ್ಟಪಡಲಿಲ್ಲ. ಹೀಗಾಗಿ, ತನ್ನ ಮನಸಿನೊಳಗಿದ್ದುದನ್ನು ಹೇಳಲು ಆಕೆ ಧೈರ್ಯಪಡಲೇ ಇಲ್ಲ.

ಒಳ ಹೋದ ತಾಯಿ ಮತ್ತೊಮ್ಮೆ ಕೊಠಡಿಗೆ ಬಂದಾಗ, ನಿಕೊಲಾಯ್ ಸಾಷಳ ಕೈಹಿಡಿದು ಹೇಳುತ್ತಿದ್ದುದನ್ನು ಕಂಡಳು:

"ಭೇಷ್! ಅವನಿಗೂ ನಿಮಗೂ ಇಬ್ಬರಿಗೂ ಅದರಿಂದ ಒಳಿತಿದೆ. ಒಂದಿಷ್ಟು ವೈಯಕ್ತಿಕ ಸುಖ ಯಾರಿಗೂ ಏನೂ ಹಾನಿ ಮಾಡೋದಿಲ್ಲ. ಸಿದ್ಧವಾಗಿದೀರಾ, ನೀಲೊವ್ನ?"

ಮುಗುಳ್ನಗುತ್ತಾ, ಕನ್ನಡಕವನ್ನು ಸರಿಗೊಳಿಸುತ್ತಾ, ಆತ ತಾಯಿಯೆಡೆಗೆ ಬಂದ.

"ಒಳ್ಳೇದು, ನಮಸ್ಕಾರ! ಮೂರು ಅಥವಾ ನಾಲ್ಕು ತಿಂಗಳು, ಆರಕ್ಕಿಂತ ಹೆಚ್ಚಂತೂ ಇರಲಾರದೂಂತ ನನ್ನ ನಂಬಿಕೆ. ಆರು ತಿಂಗಳು! ಅದು ಬದುಕಿನ ದೊಡ್ಡ

ಅಂಶವೇ! ನಿಮ್ಮ ಆರೋಗ್ಯ ಕಾಪಾಡ್ಕೊಳ್ಳಿ. ನಿಮ್ಮನ್ನು ನೀವೇ ನೋಡ್ಕೊಳ್ಳಿ... ಎಲ್ಲಿ, ಬೀಳ್ಕೊಡುವ ಅಪ್ಪುಗೆ...."

ತೆಳ್ಳಗೆ ಸೂಕ್ಷ್ಮಶರೀರನಾಗಿದ್ದ ಆತ, ತನ್ನ ಬಲವಾದ ಬಾಹುಗಳಿಂದ ತಾಯಿಯನ್ನು ಸುತ್ತುವರಿದು, ಆಕೆಯ ಕಣ್ಣುಗಳತ್ತ ನೋಡಿದ.

ನಗುತ್ತ ಆತ ಹೇಳಿದ:

"ನಿಮ್ಮ ಮೇಲೆ ನನಗೆ ಪ್ರೀತಿಯಾಗ್ಬಿಟ್ಟಿದೇಂತ ಕಾಣುತ್ತೆ.... ಹೀಗೆ ಅಪ್ಪಿಕೊಂಡೇ ಇರೋಣಾಂತ...."

ತಾಯಿ ಮಾತನಾಡದೆ, ಆತನ ಹುಬ್ಬನ್ನೂ ಕೆನ್ನೆಗಳನ್ನೂ ಮುದ್ದಿಸಿದಳು ಆದರೆ ಆಕೆಯ ಕೈಗಳು ನಡುಗುತ್ತಿದ್ದುವು. ಆತ ನೋಡಬಾರದೆಂದು, ಕೈಗಳನ್ನಾಕೆ ಮರೆ ಮಾಡಿದಳು.

"....ಹುಷಾರಾಗಿರಿ!... ನೀವು ಬೆಳಗ್ಗೆ ಒಬ್ಬ ಸಣ್ಣ ಹುಡುಗನನ್ನು ಕಳಿಸಿ. ಯಾವ ಹುಡುಗ ಅಂತ ಲುದ್ಮಿಲಗೆ ಗೊತ್ತಿದೆ. ಆತ ಇಲ್ಲಿಗೆ ಬಂದು ಹುಷಾರಾಗಿ ನೋಡ್ಕೊಂಡು ಹೋಗ್ಲಿ. ಸರಿ. ನಮಸ್ಕಾರ, ಸಂಗಾತಿಗಳೇ. ಪ್ರತಿಯೊಂದೂ ಸಮರ್ಪಕವಾಗಿದೆ."

ಇಬ್ಬರೂ ಬೀದಿಗಿಳಿದ ಮೇಲೆ ಸಾಷ ಮೆಲುಧ್ವನಿಯಲ್ಲಿ ಹೇಳಿದಳು:

"ಸಾಯಬೇಕಾದ ಸ್ಥಿತಿ ಬಂದರೂ ಅದನ್ನ ಇಷ್ಟೇ ಸರಳವಾಗಿ ಇಷ್ಟೇ ಅವಸರದಲ್ಲಿ ಆತ ಮಾಡ್ತಾನೆ. ಸಾವು ಅವನ ಮುಖಕ್ಕೆ ಇಣಕಿ ನೋಡಿದಾಗ್ಲೂ, ಕನ್ನಡಕ ಸರಿಪಡಿಸಿ, 'ಭೇಷ್' ಅಂತ್ಲೇ ಹೇಳಿ, ಸಾಯ್ತಾನೆ."

"ನಿಕೊಲಾಯ್‌ನ ಕಂಡರೆ ನನಗೆ ಪ್ರೀತಿ," ಎಂದು ತಾಯಿ ಪಿಸುಗುಟ್ಟಿದಳು.

"ಅವನನ್ನ ಕಂಡರೆ ನನಗೆ ಸೋಜಿಗವೆನಿಸ್ತದೆ. ಆದರೆ ಅವನನ್ನ ನಾನು ಪ್ರೀತಿಸೋದಿಲ್ಲ. ಅವನನ್ನ ತುಂಬಾ ಗೌರವಿಸ್ತೀನಿ. ಅವನು ಕರುಣಾಳು. ಕೆಲವೊಮ್ಮೆ ಮೃದುವಾಗಿಯೂ ಇರ್ತಾನೆ. ಆದರೆ ಅದೇನೋ ಶುಷ್ಕವಾಗಿ ತೋರ್ತದೆ.... ಆತ ಸಾಕಷ್ಟು ಮಾನವೀಯನಾಗಿಲ್ಲ. ....ನಮ್ಮನ್ನ ಹಿಂಬಾಲಿಸಿಕೊಂಡು ಬರ್‍ತಿದ್ದಾರೇಂತ ತೋರುತ್ತೆ. ಇಲ್ಲೇ ಬೇರೆಯಾಗೋಣ. ನಿಮ್ಮನ್ನ ಹಿಂಬಾಲಿಸಿಕೊಂಡು ಬರ್‍ತಾರೇಂತ ಕಂಡುಬಂದ್ರೆ, ಲುದ್ಮಿಲಳ ಮನೆಗೆ ಹೋಗ್ಬೇಡಿ."

"ಅದು ಗೊತ್ತೆ ಇದೆಯಲ್ಲ," ಎಂದಳು ತಾಯಿ

ಆದರೂ ಸಾಷ ಪುನಃ ಹೇಳಿದಳು:

"ಹೋಗ್ಬೇಡಿ. ಅದರ ಬದಲು ನನ್ನಲ್ಲಿಗೆ ಬಂದ್ಬಿಡಿ."

ಆಕೆ ಬೇಗನೆ ಹಿಂದಕ್ಕೆ ತಿರುಗಿ ಅದೇ ಹಾದಿಯಲ್ಲೆ ಹಿಂದೆ ಬಂದಳು.

೨೮

ಕೆಲ ನಿಮಿಷಗಳ ಬಳಿಕ ತಾಯಿ, ಲುದ್ಮೀಲಳ ಪುಟ್ಟ ಕೊಠಡಿಯಲ್ಲಿ ಒಲೆಯ ಬಳಿ ಮೈ ಕಾಯಿಸುತ್ತ ಕುಳಿತಳು. ಲುದ್ಮೀಲ, ಕರಿಯ ಉಡುಗೆ ತೊಟ್ಟು ಚರ್ಮದ ಬೆಲ್ಟು ಬಿಗಿದಿದ್ದಳು. ತನ್ನ ಲಂಗದ ಸರಸರ ಸದ್ದಿನಿಂದಲೂ ಭವ್ಯವಾದ ಗಂಭೀರ ಸ್ವರದಿಂದಲೂ ಕೊಠಡಿಯನ್ನು ತುಂಬುತ್ತ ಆಕೆ ಮೆಲ್ಲನೆ ಶತಪಥ ತುಳಿದಳು.

ಆ ಹೆಂಗಸಿನ ಸ್ವರ ಒಂದೇ ಸಮನಾಗಿ ಹರಿದಂತೆ, ಬೆಂಕಿ ಚಿಟ್‌ಚಿಟಿಲೆನ್ನುತ್ತ ಒಲೆಯ ಮೇಲೆ ಮೊರೆಯುತ್ತ ಗಾಳಿಯನ್ನು ಹೀರುತ್ತಿತ್ತು.

"ಜನರಲ್ಲಿ ಕೆಡುಕಿಗಿಂತಲೂ ಮೂರ್ಖತನ ಹೆಚ್ಚಾಗಿದೆ. ಕಣ್ಣ ಮುಂದಿರೋದನ್ನು, ಬೇಗ್ನೆ ಕೈಗೆಟಕುವಂಥಾದನ್ನ ಮಾತ್ರ, ಅವರು ಕಾಣ್ತಾರೆ. ಆದರೆ, ಕೈಗೆ ಸಮೀಪವಾಗಿರೋದೆಲ್ಲಾ ಅಗ್ಗ – ದೂರವಿರೋದು ಮಾತ್ರ ತುಟ್ಟಿ. ಸ್ಪಷ್ಟವಾಗಿ ನೋಡಿದಾಗ ತೋರೋದೇನು? ಬದುಕು ಹೆಚ್ಚು ಸುಲಭವಾಗಿದ್ರೆ, ಜನರು ಹೆಚ್ಚು ವಿಚಾರಿಗಳಾಗಿದ್ರೆ, ಪ್ರತಿಯೊಬ್ಬರೂ ಇನ್ನೂ ಹೆಚ್ಚು ಸುಖವಾಗಿಯೂ ಚೆನ್ನಾಗಿಯೂ ಇರಬಹುದು. ಆದರೆ ಇದನ್ನ ಸಾಧಿಸೋಕೆ ಸ್ವಲ್ಪ ಕಷ್ಟಪಡಬೇಕಾದ್ದು ಅಗತ್ಯ."

ಒಮ್ಮೆಲೆ ಆಕೆ, ತಾಯಿಯ ಎದುರು ನಿಂತಳು.

"ನಾನು ಜನರನ್ನ ಹೆಚ್ಚಾಗಿ ಸಂಧಿಸೋದಿಲ್ಲ. ಯಾರಾದರೂ ನನ್ನನ್ನು ನೋಡೋಕೆ ಬಂದ್ರೆ, ಉಪನ್ಯಾಸವನ್ನೇ ಶುರುಮಾಡ್ತೀನಿ!" ಎಂದು ಆಕೆ ಕ್ಷಮೆ ಯಾಚಿಸುವ ಸ್ವರದಲ್ಲಿ ಹೇಳಿದಳು. "ತಮಾಷೆಯಾಗಿದೆ. ಅಲ್ವೆ?"

"ಯಾಕೆ?" ಎಂದು ತಾಯಿ ಕೇಳಿದಳು.

ಈ ಹೆಂಗಸು ಮುದ್ರಣವನ್ನು ಎಲ್ಲಿ ಮಾಡುವಳೆಂಬುದನ್ನು ಕಂಡುಹಿಡಿಯಲು ತಾಯಿ ಯತ್ನಿಸಿದಳು. ಆದರೆ ಅಸಾಮಾನ್ಯವಾದುದೇನೂ ಅಲ್ಲಿ ಕಾಣಿಸಲಿಲ್ಲ. ಬೀದಿಯ ಕಡೆಗೆ ಮೂರು ಕಿಟಕಿಗಳಿದ್ದ ಆ ಕೊಠಡಿಯಲ್ಲಿ, ಗೋಡೆಗೊರಗಿದ ತಗ್ಗಾದ ಕುರ್ಚಿಯಿತ್ತು. ಪುಸ್ತಕದ ಬೀರು, ಮೇಜು, ಎತ್ತರದ ಕುರ್ಚಿಗಳು ಮತ್ತು ಹಾಸಿಗೆ ಇದ್ದುವು. ಒಂದು ಮೂಲೆಯಲ್ಲಿ ಕೈಮುಖ ತೊಳೆದುಕೊಳ್ಳುವ ಜಾಗವೂ ಇನ್ನೊಂದರಲ್ಲಿ ಒಲೆಯೂ ಕಾಣಿಸಿದುವು. ಗೋಡೆಯ ಮೇಲೆ ಭಾವಚಿತ್ರಗಳಿದ್ದುವು. ಪ್ರತಿಯೊಂದೂ ಹೊಸತಾಗಿ ಶುಭ್ರವಾಗಿ ಭದ್ರವಾಗಿತ್ತು. ಎಲ್ಲದರ ಮೇಲೆ, ಒಡತಿಯ ನಿರ್ವಿಕಾರ ಆಕೃತಿ, ಶೀತಲ ನೆರಳನ್ನು ಬೀಸಿತ್ತು. ಅಲ್ಲಿ ಬಚ್ಚಿಟ್ಟುಕೊಂಡುದೇನೋ ಇದ್ದಂತೆ ತಾಯಿಗೆ ಭಾಸವಾಯಿತು. ಆದರೆ ಎಲ್ಲಿ ಎಂಬುದನ್ನು ಊಹಿಸುವುದಾಗಲಿಲ್ಲ. ಆಕೆ ಬಾಗಿಲುಗಳತ್ತ ನೋಡಿದಳು. ಪುಟ್ಟ ಹಜಾರಕ್ಕೆ ಸಂಬಂಧಿಸಿದ್ದ ಒಂದನ್ನು ಹಾದು ಆಕೆ ಒಳಬಂದಿದ್ದಳು. ಇನ್ನೊಂದು, ಎತ್ತರವಾಗಿ ಕಿರಿದಾಗಿದ್ದುದು ಒಲೆಯ ಬಳಿಯಲ್ಲಿತ್ತು.

"ನಾನು ಕೆಲಸದ ಮೇಲೆ ಬಂದಿದ್ದೀನಿ," ಎಂದು ಸ್ವಲ್ಪ ಸಂಕೋಚಪಡುತ್ತಾ, ಲುದ್ಮೀಲ ತನ್ನನ್ನು ಸೂಕ್ಷ್ಮವಾಗಿ ನೋಡುತ್ತಿದ್ದಳೆಂಬುದನ್ನು ಗಮನಿಸುತ್ತಾ, ತಾಯಿ ಹೇಳಿದಳು.

"ನನಗೆ ಗೊತ್ತು. ಯಾರೂ ನನ್ನಲ್ಲಿಗೆ ಸುಮ್ಸುಮ್ನೆ ಬರೋದಿಲ್ಲ."

ಲುದ್ಮಿಲಳ ಸ್ವರದಲ್ಲೊಂದು ವಿಚಿತ್ರ ಛಾಯೆಯನ್ನು ತಾನು ಗುರುತಿಸಿದಂತೆ ತಾಯಿಗೆ ಭಾಸವಾಯಿತು. ಆಕೆಯ ಮುಖವನ್ನು ನೋಡುತ್ತ, ಆ ಹೆಂಗಸಿನ ತೆಳು ತುಟಿಗಳ ಕೊನೆಯಲ್ಲಿ ನಿಸ್ತೇಜವಾದೊಂದು ಮುಗುಳ್ನಗೆ ಇದ್ದುದನ್ನೂ ಬೆಳಕನ್ನೂ ಹಾಯಗೊಡದಂತಹ ಆಕೆಯ ಕಣ್ಣುಗಳು, ಕನ್ನಡಕದ ಹಿಂಬದಿಯಿಂದ ಹೊಳೆಯುತ್ತಿದ್ದುದನ್ನೂ ತಾಯಿ ಕಂಡಳು. ಆಕೆ ದೃಷ್ಟಿ ಬದಲಿಸಿ, ಪಾವೆಲ್‌ನ ಭಾಷಣದ ಪ್ರತಿಯನ್ನು ಮುಂದಕ್ಕೆ ಚಾಚಿದಳು.

"ಇದನ್ನ ಆದಷ್ಟು ಬೇಗನೆ ಮುದ್ರಿಸ್ಬೇಕೂಂತ ಅವರು ಹೇಳಿದ್ದಾರೆ."

ಆ ಬಳಿಕ, ನಿಕೊಲಾಯ್ ದಸ್ತಗಿರಿಯಾಗಬಹುದೆಂಬ ನಿರೀಕ್ಷೆಯಲ್ಲಿದ್ದುದನ್ನು ತಾಯಿ ಹೇಳಿದಳು.

ಲುದ್ಮಿಲ ಮೌನವಾಗಿ, ತಾಯಿ ಕೊಟ್ಟುದನ್ನು ಬೆಲ್ಟಿನೊಳಗೆ ಸೇರಿಸಿ ಕುಳಿತಳು. ಆಕೆಯ ಕನ್ನಡಕದ ಗಾಜುಗಳ ಮೇಲೆ ಬೆಂಕಿ ಕೆಂಪನೆ ಹೊಳೆಯಿತು. ಅದರ ಬೆಚ್ಚನೆಯ ಮುಗುಳ್ನಗೆ ಆಕೆಯ ನಿಶ್ಚಲ ಮುಖದೊಡನೆ ಆಟವಾಡಿತು.

"ನನ್ನನ್ನ ದಸ್ತಗಿರಿ ಮಾಡೋಕೆ ಬಂದಾಗ ಅವರಿಗೆ ನಾನು ಗುಂಡಿಕ್ತೀನಿ," ಎಂದು ಆಕೆ ಶಾಂತವಾಗಿ ದೃಢವಾಗಿ, ತಾಯಿಯ ಮಾತನ್ನೆಲ್ಲ ಕೇಳಿದ ಮೇಲೆ, ಹೇಳಿದಳು. "ಹಿಂಸೆಯಿಂದ ನನ್ನನ್ನ ನಾನು ರಕ್ಷಿಸಿಕೊಳ್ಳೋಕೆ ನನಗೆ ಹಕ್ಕಿದೆ. ಬೇರೆಯವರನ್ನು ನಾನು ಆಹ್ವಾನಿಸ್ತೀನಿ ಅಂದ್ಮೇಲೆ, ಹೊಡೆತ ಇದರಿಸ್ಲೂ ಬೇಕು."

ಬೆಂಕಿಯ ಪ್ರಕಾಶ ಆಕೆಯ ಮುಖದಿಂದ ಕೆಳಕ್ಕಿಳಿಯಿತು. ಮತ್ತೊಮ್ಮೆ ಆ ಮುಖ ಕಟುವಾಗಿ, ಸ್ವಲ್ಪ ದರ್ಪಯುಕ್ತವಾಗಿ, ತೋರಿತು.

"ಇವಳದು ಕಷ್ಟತರ ಜೀವನ," ಎಂದು ತಾಯಿ ಸಹಾನುಭೂತಿಯಿಂದ ಯೋಚಿಸಿದಳು.

ಲುದ್ಮಿಲ, ಪಾವೆಲ್‌ನ ಭಾಷಣವನ್ನು, ಇಷ್ಟವಿಲ್ಲದೆಯೇ ಓದತೊಡಗಿದಳು. ಆದರೆ ಮುಂದುವರಿದಂತೆ ಹಾಳೆಯನ್ನು ಮತ್ತಷ್ಟು ಸಮೀಪವಾಗಿ ಹಿಡಿದಳು. ಕೊನೆಯಲ್ಲಿ, ಆತುರದ ಅಸಹನೆಯಿಂದ ಪುಟಗಳನ್ನು ಒಂದರ ಮೇಲೊಂದಾಗಿ ಮಗುಚಿದಳು. ಕಡೆಗೆ ಆಕೆ ಎದ್ದು, ಭುಜಗಳನ್ನು ನೇರಗೊಳಿಸಿ, ತಾಯಿಯ ಬಳಿಗೆ ಬಂದಳು.

"ತುಂಬಾ ಒಳ್ಳೆಯ ಭಾಷಣ," ಎಂದಳು ಆಕೆ.

ತಲೆತಗ್ಗಿಸಿ ಒಂದು ಕ್ಷಣ ಆಕೆ ಏನನ್ನೋ ಧ್ಯಾನಿಸುತ್ತ ನಿಂತಳು.

"ನಿಮ್ಮ ಮಗನ ವಿಷಯ ನಿಮ್ಮ ಜತೇಲಿ ಮಾತಾಡಕೂಡ್ದು ಅಂತಿದ್ದೆ. ಅವನನ್ನ ನಾನೆಂದೂ ಭೇಟಿಯಾಗಿಲ್ಲ. ಯಾತನೆಯ ಸಂಭಾಷಣೆ ನನಗೆ ಇಷ್ಟವಿಲ್ಲ. ಆದರೆ – ಒಂದು ಪ್ರಶ್ನೆ ಕೇಳ್ಬೇಕಂತ – ಅಂಥ ಒಬ್ಬ ಮಗನಿರೋದರಿಂದ ಸುಖ ಅನಿಸ್ತದೆಯೆ?"

"ಬಹಳ ಸುಖ ಅನಿಸ್ತದೆ."

"ಭಯಾನಕ ಅಂತ ತೋರೋದಿಲ್ಲವೆ?"

"ಇನ್ನು ತೋರೋದಿಲ್ಲ," ಎಂದು ತಾಯಿ ಶಾಂತವಾದ ಮುಗುಳ್ನಗೆಯೊಡನೆ ಉತ್ತರವಿತ್ತಳು.

ತನ್ನ ನೀಳವಾದ ಕೂದಲನ್ನಾಕೆ ಅಗಲವಾದ ಅಂಗೈಯಿಂದ ಸವರುತ್ತ, ಕಿಟಕಿಯತ್ತ ನೋಡಿದಳು. ತೆಳ್ಳಗಿನ ನೆರಳೊಂದು – ಆಕೆ ತನ್ನೊಳಗೇ ತಡೆ ಹಿಡಿದ ಮುಗುಳ್ನಗೆಯ ನೆರಳೋ ಏನೋ – ಆಕೆಯ ಮುಖದ ಮೇಲೆ ಕುಣಿಯಿತು.

"ಬೇಗ್ನೆ ಮೊಳೆ ಜೋಡಿಸ್ತೀನಿ, ಮಲಕೊಳ್ಳಿ. ಹಗಲು ನಿಮ್ಮ ಪಾಲಿಗೇನೋ ಹಗುರವಾಗಿರ್ಲಿಲ್ಲ. ನಿಮಗೆ ಆಯಾಸವಾಗಿರ್ಬೇಕು. ನಾನು ನಿದ್ದೆಮಾಡೋದಿಲ್ಲ. ಬೇಕಾದರೆ, ನನಗೆ ಸಹಾಯಮಾಡೋಕೆ ರಾತ್ರೆ ನಿಮ್ಮನ್ನ ಎಬ್ಬಿಸ್ತೀನಿ. ಮಲಕೊಂಡಾಗ ದೀಪ ಆರಿಸ್ಬಿಡಿ"

ಸೌದೆಯ ಎರಡು ತುಂಡುಗಳನ್ನಾಕೆ ಒಲೆಗೆ ಎಸೆದು, ಅಗಲ ಕಿರಿದಾದ ಬಾಗಿಲನ್ನು ದಾಟಿ, ಅದನ್ನು ಭದ್ರವಾಗಿ ಮುಚ್ಚಿಕೊಂಡಳು. ತಾಯಿ, ಆಕೆ ಹೊರಟದ್ದನ್ನೇ ನೋಡುತ್ತಿದ್ದು, ಬಳಿಕ ಉಡುಪು ಕಳಚಿದಳು. ಆಕೆಯ ಯೋಚನೆಗಳೆಲ್ಲ ಲುದ್ಮೀಲಳನ್ನು ಕುರಿತಾಗಿಯೆ ಇದ್ದುವು.

"ಯಾವುದೋ ವಿಷಯದಲ್ಲಿ ಆಕೆ ತುಂಬಾ ದುಃಖಪಡ್ತಿದ್ದಾಳೆ...."

ತಲೆ ಆಯಾಸದಿಂದ ತಿರುಗುತ್ತಿದ್ದರೂ ಮನಸ್ಸು ಮಾತ್ರ ವಿಚಿತ್ರವಾದ ರೀತಿಯಲ್ಲಿ ಶಾಂತವಾಗಿತ್ತು. ಆಕೆಯ ಹೃದಯವನ್ನು ಸದ್ದಿಲ್ಲದೆ ಬೆಳಗಿದ ನಯವಾದ ಮೃದುವಾದ ಬೆಳಕಿನಿಂದ, ಪ್ರತಿಯೊಂದೂ ಆಕೆಯ ಕಣ್ಣುಗಳಲ್ಲಿ ಹೊಳೆಯಿತು. ಆ ಶಾಂತತೆ ಆಕೆಗೆ ಪರಿಚಿತವಾಗಿತ್ತು. ಹೃದಯವನ್ನು ಬಲವಾಗಿ ಕಲಕಿದ ಯಾವುದಾದರೂ ಮಹಾ ಸಂಭವದ ಬಳಿಕ ಆಕೆಗೆ ಹಾಗಾಗುತ್ತಿತ್ತು. ಹಿಂದೆಯಾದರೆ ಆಕೆಗೆ ಸ್ವಲ್ಪಮಟ್ಟಿಗೆ ಗಾಬರಿಯಾಗುತ್ತಿತ್ತು. ಆದರೆ ಈಗ ಆಕೆಯ ಹೃದಯ ಸುಮ್ಮನೆ ವಿಸ್ತಾರವಾಗುತ್ತಿತ್ತು; ಹಿರಿದಾದ ಶಕ್ತಿಶಾಲಿಯಾದ ಭಾವನೆಯಿಂದ ಅದನ್ನು ಬಲಪಡಿಸುತ್ತಿತ್ತು. ಆಕೆ ದೀಪ ಆರಿಸಿ, ಶೀತಲವಾಗಿದ್ದ ಹಾಸಿಗೆಯನ್ನೇರಿದಳು. ಹೊದಿಕೆಯ ಕೆಳಗೆ ಶರೀರವನ್ನು ಮುದುಡಿಕೊಂಡಳು. ಬೇಗನೆ ಆಕೆಗೆ ಗಾಢವಾದ ನಿದ್ದೆ ಬಂತು.

ತಾಯಿ ಕಣ್ಣು ತೆರೆದಾಗ, ಚಳಿಗಾಲದ ಬೆಳ್ಳಗಿನ ಶೀತಲ ಬೆಳಕಿನಿಂದ ಕೊಠಡಿ ತುಂಬಿತ್ತು. ಕೈಯಲ್ಲಿ ಪುಸ್ತಕ ಹಿಡಿದು ಒರಗಿಕೊಂಡಿದ್ದ ಲುದ್ಮೀಲ ತಾಯಿಯತ್ತ ನೋಡಿದಳು. ಆಕೆಗೆ ಸಾಮಾನ್ಯವಾಗಿ ಅಭ್ಯಾಸವಿಲ್ಲದ ಮುಗುಳ್ನಗೆ, ಮುಖದ ಮೇಲೆ ಮೂಡಿತು.

"ನಮ್ಮಪ್ಪ!" ಎಂದು ಸಂಕೋಚದಿಂದಲೂ ಗಾಬರಿಯಿಂದಲೂ ತಾಯಿ ಉದ್ಗರಿಸಿದಳು. "ನಾನೆಂಥವಳು! ಬಹಳ ಹೊತ್ತಾಯ್ತೆ?"

"ಸುಪ್ರಭಾತ! ಇಷ್ಟರಲ್ಲೇ ಹತ್ತು ಗಂಟೆಯಾಗುತ್ತೆ. ಏಳಿ ಚಾ ತಗೊಳ್ಳೋಣ."

"ಯಾಕೆ ನನ್ನನ್ನ ಎಬ್ಬಿಸ್ಲಿಲ್ಲ?"

"ಎಬ್ಬಿಸೋಕೇಂತ ಬಂದೆ. ಆದರೆ ನೀವು ಮಹಾ ನೆಮ್ಮದಿಯಿಂದ ನಿದ್ದೇಲಿ ಮುಗುಳ್ನಗ್ತಿದ್ದಿರಿ. ನಿದ್ದೆ ಕೆಡಿಸೋಕೆ ಮನಸ್ಸಾಗ್ಲಿಲ್ಲ."

ಲುದ್ಮಿಲ ಎದ್ದು, ಹಗುರವಾದ ನಡಿಗೆಯಿಂದ ಹಾಸಿಗೆಯ ಬಳಿಗೆ ಹೋಗಿ, ಬಾಗಿದಳು. ವಯಸ್ಸಿನಲ್ಲಿ ತನಗಿಂತ ಚಿಕ್ಕವಳಾದ ಆ ಹೆಂಗಸಿನ ಕಣ್ಣುಗಳಲ್ಲಿ ತಾಯಿ, ತನಗೆ ಪ್ರೀತಿಯುದೂ ಪರಿಚಿತವೂ ಆದ ಭಾವನೆಗಳನ್ನು ಗುರುತಿಸಿದಳು:

"ನಿಮಗೆ ತೊಂದರೆ ಕೊಡೋದು ಸರಿಯಲ್ಲ ಅನಿಸ್ತು. ಬಹುಶಃ, ಸುಖ ಸ್ವಪ್ನ ವೇನಾದರೂ ಬಿದ್ದಿತ್ತೇನೊ."

"ಇಲ್ಲ."

"ಇಲ್ಲದಿದ್ದರೂ ಸರಿಯೆ. ನಿಮ್ಮ ಮುಗುಳ್ನಗೆ ನನಗೆ ಇಷ್ಟವಾಯಿತು. ಅದು ಅಷ್ಟೊಂದು ಶಾಂತವಾಗಿ ಸೊಗಸಾಗಿತ್ತು, ಎಲ್ಲವನ್ನೂ ಆವರಿಸಿತ್ತು."

ಲುದ್ಮಿಲ ನಕ್ಕಳು. ಮೃದುವಾಗಿ ನವುರಾಗಿತ್ತು ಆ ನಗೆ.

"ಆ ಮುಗುಳ್ನಗು ನೋಡ್ತಾ ನಿಮ್ಮ ವಿಷಯ ಯೋಚಿಸ್ದೆ.... ನಿಮ್ಮ ಜೀವನ ಕಷ್ಟದ್ದೆ ?"

ತಾಯಿಯ ಹುಬ್ಬುಗಳು ಕಂಪಿಸಿದುವು. ಮೌನವಾಗಿ ಆಕೆ ಯೋಚಿಸತೊಡ ಗಿದಳು.

"ಕಷ್ಟದ್ದು, ನನಗೆ ಗೊತ್ತು!" ಎಂದು ಲುದ್ಮಿಲ ಉದ್ಗಾರವೆತ್ತಿದಳು.

ತಾಯಿ ನಿಧಾನವಾಗಿ ಅಂದಳು:

"ಹಾಗೇಂತ ಖಂಡಿತವಾಗಿ ಹೇಳಲಾರೆ. ಕೆಲವು ಸಲ, ಕಷ್ಟದ್ದೂಂತ ತೋರ್ತದೆ. ಆದರೆ ಅದು ಯಾವಾಗ್ಲೂ ತುಂಬಿಕೊಂಡಿರ್ತದೆ – ಅದರಲ್ಲಿ ಪ್ರತಿಯೊಂದೂ ಗಂಭೀರ ವಾಗಿದೆ, ಆಶ್ಚರ್ಯಕರವಾಗಿದೆ. ಒಂದು ಇನ್ನೊಂದನ್ನ ಬಲು ಬೇಗ್ನೆ ಹಿಂಬಾಲಿ ಸ್ತದೆ...."

ಪರಿಚಯದ ಧೈರ್ಯದ ತೆರೆ ಆಕೆಯ ಹೃದಯದಲ್ಲೆದ್ದು, ಯೋಚನೆ ಪ್ರತೀಕ ಗಳಿಂದ ಮನಸ್ಸನ್ನು ತುಂಬಿತು. ಆಕೆ ಹಾಸಿಗೆಯ ಮೇಲೆ ಎದ್ದು ಕುಳಿತು, ಯೋಚನೆ ಗಳನ್ನು ಮಾತುಗಳಿಂದ ಹೊದಿಸತೊಡಗಿದಳು.

"ಇದು ಮುಂದು ಮುಂದಕ್ಕೆ ಚಲಿಸ್ತಾನೇ ಇರ್ತದೆ. ಎಲ್ಲಾ ಒಂದೇ ಗುರಿಯ ಕಡೆಗೆ... ಆದರೆ ಕೆಲವೊಮ್ಮೆ ತುಂಬ ಕಷ್ಟವಾಗ್ತದೆ. ಜನರು ಸಂಕಟಪಡ್ತಾರೆ, ಏಟು ತಿನ್ತಾರೆ, ಕ್ರೂರವಾಗಿ ಏಟು ತಿನ್ತಾರೆ; ಎಷ್ಟೋ ಸಂತೋಷ ಅವರ ಕೈಗೆ ಎಟಕೋದೇ ಇಲ್ಲ. ಇದು ತುಂಬಾ ಕಷ್ಟದ್ದು !"

ಲುದ್ಮಿಲ ತಲೆಯನ್ನು ಹಿಂದಕ್ಕೆ ಚಲಿಸಿ, ತನ್ನ ದೃಷ್ಟಿಯಿಂದ ತಾಯಿಯನ್ನು ಮುದ್ದಿಸುತ್ತಾ ಹೇಳಿದಳು:

"ಆದರೆ, ನೀವು ನಿಮ್ಮ ವಿಷಯ ಹೇಳ್ತಾ ಇಲ್ಲ."

ತಾಯಿ ಹಾಸಿಗೆಯಿಂದೆದ್ದು ಉಡುಪು ಧರಿಸತೊಡಗಿದಳು.

"ನೀವು ಇದೊಂದನ್ನು, ಅದೊಂದನ್ನು, ಇನ್ನೊಂದನ್ನು ಪ್ರೀತಿಸುವಾಗ, ಅವರೆಲ್ಲರಿಗಾಗಿಯೂ ಹೆದರಿಕೊಂಡು ಅವರೆಲ್ಲರಿಗಾಗಿಯೂ ಕನಿಕರಪಡುವಾಗ, ಅವರೆಲ್ಲರೂ ನಿಮ್ಮ ಹೃದಯದಲ್ಲೇ ಒಟ್ಟಾಗಿ ಗುಂಪು ಕೂಡುವಾಗ, ಆ ಗುಂಪಿನಿಂದ ನಿಮ್ಮನ್ನ ಹ್ಯಾಗೆ ಪ್ರತ್ಯೇಕಿಸೋಕಾಗುತ್ತೆ, ಹೇಳಿ?"

ಅಪೂರ್ಣ ಉಡುಪಿನಲ್ಲೇ ಆಕೆ, ಕ್ಷಣಕಾಲ ಯೋಚನೆಯಲ್ಲಿ ಮೈಮರೆತು, ಕೊಠಡಿಯ ನಡುವೆ ನಿಂತಳು. ತನ್ನ ಮಗನಿಗಾಗಿ ಅಷ್ಟೊಂದು ಭಯ ಭೀತಿಯಿಂದ ತುಂಬಿದ್ದ, ಆತನ ದೇಹದ ರಕ್ಷಣೆಯನ್ನು ಹೇಗೆ ಮಾಡಬೇಕೆಂಬ ಯೋಚನೆಯಲ್ಲೆ ಮುಳುಗಿದ್ದ, ತಾನೀಗ ಹಿಂದಿನ ಹೆಂಗಸು ಅಲ್ಲವೇ ಅಲ್ಲವೆಂದು ತಾಯಿಗೆ ತೋರಿತು. ಆ ಹೆಂಗಸು ಈಗ ಇರಲೇ ಇಲ್ಲ. ಆ ಹೆಂಗಸು ಹಿಂದೆ ಸರಿದಿದ್ದಳು. ಎಲ್ಲೋ ಬಲು ದೂರ ಹೋಗಿದ್ದಳು. ಅಥವಾ ಆಕೆಯು ಭಾವೋದ್ರೇಕದ ಬೆಂಕಿಯಲ್ಲಿ ದಹಿಸಿ ಹೋಗಿದ್ದಳು. ಇದು ಆಕೆಯ ಹೃದಯವನ್ನು ಶುದ್ಧಿಗೊಳಿಸಿ ಬೆಳಗಿಸಿತ್ತು; ಹೊಸ ಶಕ್ತಿಯಿಂದ ಅದನ್ನು ತುಂಬಿತ್ತು. ತಾಯಿ, ಎದೆಗ್ಗುಂಡಿಗೆಯ ಬಡಿತಕ್ಕೆ ಕಿವಿಗೊಡುತ್ತಾ, ಹಳೆಯ ಭೀತಿಗಳು ಮರುಕಳಿಸುವವೇನೋ ಎಂದು ಭಯಪಡುತ್ತಾ, ತನ್ನ ಹೃದಯವನ್ನು ಶೋಧಿಸಿದಳು.

ಆಕೆಯ ಬಳಿ ಹೋಗಿ ಲುದ್ಮಿಲ ಕೇಳಿದಳು:

"ಏನು ಯೋಚಿಸ್ತಿದೀರಿ?"

"ನಂಗೊತ್ತಿಲ್ಲ."

ಮೌನವಾಗಿ ಅವರು ಪರಸ್ಪರರನ್ನು ನೋಡಿ ಮುಗುಳ್ನಕ್ಕರು. ಲುದ್ಮಿಲ ಕೊಠಡಿಯ ಹೊರಹೋಗುತ್ತ ಹೇಳಿದಳು:

"ಬಿಸಿನೀರಿನ ಗತಿ ಏನಾಯ್ತೊ?"

ತಾಯಿ ಕಿಟಕಿಯಿಂದ ಹೊರನೋಡಿದಳು. ಅದು ಚಳಿ ತುಂಬಿದ್ದ ತಿಳಿಯಾದ ತೀಕ್ಷ್ಣವಾದ ದಿನವಾಗಿತ್ತು. ಆಕೆಯ ಹೃದಯವೂ ಶುಭ್ರವಾಗಿತ್ತು, ಆದರೆ ಅದು ಬೆಚ್ಚಗಿತ್ತು. ಎಷ್ಟೊಂದು ವಿಷಯಗಳು ಆಕೆಯ ಹೃದಯವನ್ನು ಹೊಕ್ಕು, ಸೂರ್ಯಾಸ್ತಕ್ಕೆ ಮುಂಚಿನ ಸೊಗಸಾದ ಬೆಳಕಿನಿಂದ ಅಲ್ಲಿ ಹೊಳೆಯುತ್ತಿದ್ದುವು! ಅವುಗಳನ್ನೆಲ್ಲ ತನಗೆ ಕೊಟ್ಟುದಕ್ಕಾಗಿ ತಾಯಿ ಯಾರಿಗೋ ಕೃತಜ್ಞಳಾಗಿದ್ದಳು. ಆ ಕೃತಜ್ಞತೆಯ ಅಸ್ಪಷ್ಟ ಭಾವನೆಯಿಂದ, ದೀರ್ಘಕಾಲ, ಸುಖಿಯಾಗಿ, ಎಲ್ಲ ವಿಷಯಗಳ ಬಗೆಗೂ ಮಾತನಾಡಬೇಕೆಂದು ಆಕೆಗೆ ಅಪೇಕ್ಷೆಯಾಯಿತು. ಬಹಳ ದಿನಗಳಿಂದ ಅನುಭವವಾಗದೇ ಇದ್ದ, ಪ್ರಾರ್ಥನೆ ಮಾಡಬೇಕೆಂಬ ಬಯಕೆ, ಮತ್ತೆ ಮೂಡಿತು. ಎಳೆಯ ಮುಖವೊಂದು ಆಕೆಯ ಮನಸಿನೆದುರು ಮಿಂಚಿತು. "ಈಕೆ ಪಾವೆಲ್ ವ್ಲಾಸೊವ್‌ನ ತಾಯಿ" ಎಂದು, ಸ್ಪಷ್ಟವಾದ ಸ್ವರವೊಂದು ಕರೆದು ಹೇಳುತ್ತಿದ್ದುದು ತಾಯಿಗೆ ಕೇಳಿಸಿತು. ಸಾಷಳ ಸುಖಿಯಾಗಿದ್ದ ಮೃದುಕಣ್ಣುಗಳು, ರೀಬಿನ್ನನ ಕರಿಯ ಆಕೃತಿ,

ತನ್ನ ಮಗನ ದೃಢವಾದ ಕಂಚಿನ ಮುಖ, ನಿಕೊಲಾಯ್‌ನ ಪಿಳಿಪಿಳಿ ಬಿಡುತ್ತಿದ್ದ ಸಂಕೋಚದ ದೃಷ್ಟಿ – ಇವೆಲ್ಲವನ್ನೂ ತಾಯಿ ನೋಡಿದಳು. ಇವೆಲ್ಲವೂ ಒಮ್ಮೆಲೆ, ಆಳವಾದ ನಿಟ್ಟುಸಿರಾಗಿ ಲೀನವಾದುವು. ದೃಷ್ಟಿಹಾಯುತ್ತಿದ್ದ ತೆಳುವಾದ ಕಾಮನ ಬಿಲ್ಲಿನ ಬಣ್ಣದ ಮೋಡವಾಗಿ ಬೆರೆತವು. ಆ ಮೋಡ, ಆಕೆಯು ಯೋಚನೆಗಳನ್ನು ಶಾಂತಿಯ ಭಾವನೆಯಿಂದ ಮುಚ್ಚಿತು.

ಲುದ್ಮೀಲ ಕೊಠಡಿಯೊಳಕ್ಕೆ ಪುನಃ ಪ್ರವೇಶಿಸುತ್ತಾ ಹೇಳಿದಳು:

"ನಿಕೊಲಾಯ್‌ನ ನಿರೀಕ್ಷೆ ಸರಿಯಾಗಿತ್ತು. ಅವನನ್ನ ದಸ್ತಗಿರಿಮಾಡಿದ್ದಾರೆ. ನಿಮ್ಮ ಸಲಹೆ ಪ್ರಕಾರ ಹುಡುಗನನ್ನ ಬೆಳಿಗ್ಗೆ ಕಳಿಸಿದ್ದೆ. ಮನೆಯಂಗಳದಲ್ಲಿ ಪೋಲೀ ಸರಿದ್ದಾರಂತೆ. ಒಬ್ಬ ಪೋಲೀಸಿನವನು ಗೇಟಿನ ಹಿಂಭಾಗದಲ್ಲಿ ಅಡಗಿ ಕುಳಿತಿದ್ದ ನಂತೆ. ಸುತ್ತಲೆಲ್ಲಾ ಗೂಢಚಾರರು. ಹುಡುಗನಿಗೆ ಅವರೆಲ್ಲರ ಮುಖ ಪರಿಚಯುವಿದೆ."

"ಆ! ಅಯ್ಯೋ ಪಾಪ...." ಎಂದು ತಲೆಯುಲುಗಿಸಿ ತಾಯಿ ಹೇಳಿದಳು.

ತಾಯಿ ನಿಟ್ಟುಸಿರುಬಿಟ್ಟಳು. ಆದರೆ ಅದು ಶೋಕಮಿಶ್ರಿತವಾಗಿರಲಿಲ್ಲ. ಈ ಸಂಗತಿ, ಮನಸಿನೊಳಗೇ ಆಕೆಯುನ್ನು ಆಶ್ಚರ್ಯಪಡಿಸಿತು.

"ಇತ್ತೀಚಿಗೆ ಆತ ಶಹರದಲ್ಲಿ ಕೂಲಿಕಾರರಿಗೆ ಓದಿ ಹೇಳೋ ಕಾರ್ಯಕ್ರಮುವನ್ನ ಸ್ವಲ್ಪ ಜಾಸ್ತಿಯಾಗಿಯೇ ಇಟ್ಟುಕೊಂಡಿದ್ದ. ಅಂತೂ ಸಿಕ್ಕಿಬೀಳೋ ಸಮಯ ಆಗಿತ್ತು," ಎಂದು ಲುದ್ಮೀಲ ಮೌನವಾಗಿ, ಆದರೆ ಹುಬ್ಬುಗಂಟಿಕ್ಕಿ, ಹೇಳಿದಳು. ಹೊರಟು ಹೋಗು ಅಂತ ಅವನ ಸಂಗಾತಿಗಳು ಹೇಳಿದರು. ಆದರೆ ಆತ ಕೇಳ್ಲಿಲ್ಲ. ಅಂಥ ಸಂದರ್ಭ ಗಳಲ್ಲಿ ಜನರಿಗೆ ಆಗ್ರಹಪಟ್ಟು ಹೇಳಿ ಪ್ರಯೋಜನವಿಲ್ಲ ಅಂತ, ನನ್ನ ಅಭಿಪ್ರಾಯ. ಅವರನ್ನ ಬಲಾತ್ಕಾರವಾಗಿ ಕಳಿಸ್ಬೇಕು" ಎಂದೂ ನುಡಿದಳು.

ಅಷ್ಟರಲ್ಲಿ, ಸುಂದರವಾದ ನೀಲಿಗಣ್ಣುಗಳಿದ್ದ, ಬಾಗಿದ ಮೂಗಿದ್ದ ಕರಿ ಕೂದ ಲಿನ ಕೆಂಪು ಕೆನ್ನೆಗಳ ಹುಡುಗನೊಬ್ಬ ಬಾಗಿಲ ಬಳಿ ಕಾಣಿಸಿಕೊಂಡ.

"ಸಮೊವಾರ್ ಒಳಕ್ಕೆ ತರಲೆ?" ಎಂದು ಆ ಹುಡುಗ ಕೇಳಿದ.

"ತಾರಪ್ಪ ಸೆರ್ಗೇಯ್" ಎನ್ನುತ್ತ ಲುದ್ಮೀಲ ತಾಯಿಯತ್ತ ತಿರುಗಿ, "ಈತ ನನ್ನ ಸಾಕು ಮಗ," ಎಂದಳು.

ಲುದ್ಮೀಲ ಈ ದಿನ ಬದಲಾಗಿದ್ದಂತೆ ತಾಯಿಗೆ ತೋರಿತು: ಈ ದಿನ ಆಕೆ ಹೆಚ್ಚು ಸರಳವಾಗಿ ಸ್ನೇಹಮಯಿಯಾಗಿದ್ದಳು. ಆಕೆಯು ಸೊಗಸಾದ ಶರೀರದ ಮೋಹಕ ಚಲನವಲನದಲ್ಲಿ ತುಂಬಾ ಸೌಂದರ್ಯವಿತ್ತು, ಬಲವಿತ್ತು. ಇದು ಆಕೆಯ ನಿಸ್ತೇಜ ಗಂಭೀರ ಮುಖದ ಪ್ರಭಾವವನ್ನು ಮೃದುಗೊಳಿಸಿತು. ಕಳೆದ ಇರುಳು, ಆಕೆಯು ಕಣ್ಣುಗಳ ಸುತ್ತಲಿನ ವೃತ್ತಗಳನ್ನು ಆಳಗೊಳಿಸಿತ್ತು. ಆಕೆಯು ಹೃದಯ, ಬಿಗಿದ ತಂತಿಯ ಹಾಗೆ ಸಂದಿಗ್ಧಗೊಂಡಿದ್ದುದು ನೋಡಿದವರಿಗೆ ಅರಿವಾಗುತ್ತಿತ್ತು.

ಹುಡುಗ ಸಮೊವಾರನ್ನು ಒಳಕ್ಕೆ ತಂದ.

"ಪರಿಚಯ ಮಾಡ್ಕೊಡ್ತೀನಿ, ಸೆರ್ಗೇಯ್, ಈಕೆ ಪೆಲಗೇಯ ನೀಲೊವ್ನ. ನಿನ್ನೆ ವಿಚಾರಣೆಯಾಯ್ತಲ್ಲ? – ಆ ಕಾರ್ಮಿಕನ ತಾಯಿ."

ಸೆರ್ಗೇಯ್ ಮಾತನಾಡದೆ ತಲೆಬಾಗಿ ವಂದಿಸಿ, ತಾಯಿಯ ಕೈಯನ್ನು ಕುಲು ಕಿದ. ಕೊಠಡಿಯಿಂದ ಹೊರಹೋಗಿ ಬ್ರೆಡ್‌ನೊಡನೆ ಹಿಂತಿರುಗಿ, ಮೇಜಿನ ಬಳಿ ತನ್ನ ಜಾಗದಲ್ಲಿ ಕುಳಿತ. ಚಾ ಸುರಿಯುತ್ತ ಲುದ್ಮಿಲ, ಪೋಲೀಸರು ಕಾಯುತ್ತಿದ್ದುದು ಯಾರಿಗೋಸ್ಕರವೆಂಬುದು ಸ್ಪಷ್ಟವಾಗುವವರೆಗೂ ತಾಯಿ ಮನೆಗೆ ಹೋಗಕೂಡ ದೆಂದು ಮನಗಾಣಿಸಿಕೊಡಲು ಯತ್ನಿಸಿದಳು.

"ಅವರು ಕಾಯ್ತಿರೋದು ನಿಮಗೋಸ್ಕರವಿರಬಹುದು! ಅವರು ಪ್ರಾಯಶಃ ಪ್ರಶ್ನಿಸೋದಕ್ಕೋಸ್ಕರ ನಿಮ್ಮನ್ನ ಒಯ್ಯಬಹುದು."

"ಒಯ್ಯಲಿ!" ಎಂದಳು ತಾಯಿ. "ಬೇಕಾದರೆ ನನ್ನನ್ನು ಬಂಧಿಸಲಿ. ಅದರಿಂದೇನೂ ಮಹಾ ನಷ್ಟವಾಗೋದಿಲ್ಲ. ಪಾವೆಲ್‌ನ ಭಾಷಣವನ್ನ ಮಾತ್ರ ನಾವೊಮ್ಮೆ ಮೊದಲು ಹಂಚಿಬಿಟ್ಟರೆ!"

"ನಾನು ಈಗಾಗಲೇ ಮೊಳೆ ಜೋಡಿಸಿದ್ದೀನಿ. ಶಹರಕ್ಕೂ ಕೂಲಿಕಾರರ ವಸತಿ ಕ್ಷೇತ್ರಕ್ಕೂ ಸಾಕಾಗುವಷ್ಟು ಕರಪತ್ರಗಳು ನಾಳೆ ಸಿದ್ಧವಾಗ್ತವೆ. ನಿಮಗೆ ನತಾಷ ಗೊತ್ತೆ?"

"ಓಹೋ!"

"ಅವುಗಳನ್ನ ಆಕೆಗೆ ತಲಪಿಸಿ."

ಹುಡುಗ ಪತ್ರಿಕೆಯನ್ನೋದುತ್ತಿದ್ದ. ಅವರ ಮಾತುಕತೆಯನ್ನು ಆತ ಕೇಳು ತ್ತಿದ್ದಂತೆ ತೋರಲಿಲ್ಲ. ಆದರೆ ಆಗಾಗ್ಗೆ ಆತ ಪತ್ರಿಕೆಯ ಮೇಲಿಂದ ದೃಷ್ಟಿಹಾಯಿಸಿ ತಾಯಿಯ ಮುಖವನ್ನು ನೋಡುತ್ತಿದ್ದ. ಆತನ ಚೇತನಪೂರ್ಣವಾದ ದೃಷ್ಟಿಯನ್ನು ಸಂಧಿಸಿದಾಗ ತಾಯಿಗೆ ಸಂತೋಷವಾಗಿ ಆಕೆ ಮುಗುಳ್ನಕ್ಕಳು. ಮತ್ತೊಮ್ಮೆ ಲುದ್ಮಿಲ, ನಿಕೊಲಾಯ್‌ನ ವಿಷಯವಾಗಿ ಶೋಕಸೂಚನೆ ಇಲ್ಲದೆಯೇ ಮಾತನಾಡಿದಳು. ಇದು ಬಹಳ ಸ್ವಾಭಾವಿಕವಾಗಿ ತಾಯಿಗೆ ತೋರಿತು. ಹೊತ್ತು ಎಂದಿಗಿಂತ ಬೇಗನೆ ಕಳೆಯಿತು. ಮುಂಜಾನೆಯ ತಿಂಡಿ ಪಾನೀಯ ಮುಗಿಯುವ ಹೊತ್ತಿಗಾಗಲೇ ಮಧ್ಯಾಹ್ನ ವಾಗಿತ್ತು.

ಎಷ್ಟೊಂದು ಹೊತ್ತಾಗಿಬಿಟ್ಟಿತೆಂದು ಲುದ್ಮಿಲ ಉದ್ಗರಿಸಿದಳು.

ಅಷ್ಟರಲ್ಲೆ, ಯಾರೋ ಅವಸರವಾಗಿ ಬಾಗಿಲು ತಟ್ಟಿದ ಸದ್ದಾಯಿತು. ಹುಡುಗ ಎದ್ದು, ಕಣ್ಣು ಕಿರಿದುಗೊಳಿಸಿ ಲುದ್ಮಿಲಳತ್ತ ನೋಡಿದ.

"ಬಾಗಿಲು ತೆರೆ, ಸೆರ್ಗೇಯ್. ಯಾರಿರಬಹುದು?"

ಶಾಂತವಾದ ಚಲನೆಯಿಂದ ಆಕೆ, ಕೈಯನ್ನು ಲಂಗದ ಜೇಬಿನೊಳಗಿರಿಸಿ ತಾಯಿಗೆ ಹೇಳಿದಳು:

"ಪೋಲೀಸರಾದರೆ, ನೀವು ಆ ಮೂಲೇಲಿ ನಿಂತ್ಕೊಳ್ಳಿ, ಪೆಲಗೇಯ ನೀಲೊವ್ನ. ನೀನು, ಸೆರ್ಗೇಯ್..."

"ನನಗೆ ಗೊತ್ತಿದೆ," ಎಂದು ಹುಡುಗ ಬಾಗಿಲಿನತ್ತ ಹೋಗುತ್ತ ಉತ್ತರಿಸಿದ.

ತಾಯಿ ಮುಗುಳ್ನಕ್ಕಳು. ಇಂತಹ ಸಿದ್ಧತೆಯಿಂದೆಲ್ಲ ಅವಳಿಗೀಗ ದಿಗಿಲಾಗುತ್ತಿರಲಿಲ್ಲ. ಅವಳಿಗೆ ಗಂಡಾಂತರದ ಪೂರ್ವಸೂಚನೆಯು ಅರಿವಿರಲಿಲ್ಲ.

ಆದರೆ ಒಳಬಂದವನು, ಆ ಕುಳ್ಳನೆಯ ಡಾಕ್ಟರ್.

ಆತ ಬೇಗ ಬೇಗನೆ ಹೇಳಿದ:

"ಮೊದಲನೇದಾಗಿ, ನಿಕೊಲಾಯ್‌ನ ದಸ್ತಗಿರಿಯಾಗಿದೆ.... ಓ! ನೀವು ಇಲ್ಲಿದೀರೇನು, ನೀಲೊವ್ನ! ದಸ್ತಗಿರಿಯಾದಾಗ ನೀವು ಮನೇಲಿ ಇರ್ಲಿಲ್ವಾ?"

"ಆತ ನನ್ನನ್ನ ಇಲ್ಲಿಗೆ ಕಳಿಸ್ದ."

"ಹಂ.... ಅದರಿಂದೇನಾದರೂ ನಿಮಗೆ ಪ್ರಯೋಜನವಾಗುತ್ತೆಂತ ನಾನು ಭಾವಿಸೋದಿಲ್ಲ! ಎರಡನೆದಾಗಿ, ಕಳೆದ ರಾತ್ರಿ ಯಾರೋ ಕೆಲ ಯುವಕರು ಕೈಯಕ್ಷರದ ಅಚ್ಚೊತ್ತಿ, ಪಾವೆಲ್‌ನ ಭಾಷಣದ ಐನೂರು ಪ್ರತಿ ತಯಾರಿಸಿದ್ದಾರೆ. ನಾನು ನೋಡಿದ್ದೀನಿ – ತಕ್ಕಮಟ್ಟಿಗೆ ಚೆನ್ನಾಗಿಯೇ ಇದೆ; ಚಿತ್ತಿಲ್ದೆ ಸ್ಪಷ್ಟವಾಗಿದೆ. ಶಹರದಲ್ಲಿ ಇವತ್ತು ರಾತ್ರಿಯೇ ಅವುಗಳನ್ನ ಹಂಚ್ಬೇಕೂಂತ ಅವರ ಅಪೇಕ್ಷೆ. ನಾನು ಬೇಡ ಅಂದಿದ್ದೀನಿ. ಮುದ್ರಿಸಿರೋದನ್ನ ಶಹರದಲ್ಲಿ ಹಂಚಿ, ಅವುಗಳನ್ನು ಬೇರೆಕಡೆಗಾಗಿ ಮಿಗಿಸೋದು ವಾಸಿ."

"ನಾನು ಅವುಗಳನ್ನ ನತಾಷಗೆ ಒಯ್ದು ಮುಟ್ಟಿಸ್ತೀನಿ! ನನಗೆ ಕೊಡಿ!" ಎಂದು ತಾಯಿ ಆತುರವಾಗಿ ಹೇಳಿದಳು.

ಪಾವೆಲ್‌ನ ಭಾಷಣವನ್ನು ಆದಷ್ಟು ಬೇಗನೆ ಹಂಚಲು, ಇಡೀ ಭೂಮಿಯ ಮೇಲೆ ಮಗನ ಮಾತನ್ನು ಚೆಲ್ಲಲು, ತಾಯಿ ಅತ್ಯಂತ ಆತುರಳಾಗಿದ್ದಳು. ಉತ್ತರಕ್ಕಾಗಿ ಕಾಯುತ್ತಾ, ತಾಯಿ, ವಿನಂತಿ ಮಾಡುವ ಕಣ್ಣುಗಳಿಂದ ಡಾಕ್ಟರನ ಮುಖವನ್ನೆ ದಿಟ್ಟಿಸಿದಳು.

"ಇದನ್ನೀಗ ನೀವು ಮಾಡಬೇಕೊ ಮಾಡಬಾರದೋ ಯಾರಿಗೆ ಗೊತ್ತು!" ಎಂದು ಅಳುಕುತ್ತ ಗಡಿಯಾರವನ್ನು ಹೊರತೆಗೆಯುತ್ತ ಡಾಕ್ಟರು ನುಡಿದ. "ಈಗ ಘಂಟೆ ಹನ್ನೊಂದು ನಾಲ್ವತ್ತಮೂರು. ಎರಡು ಘಂಟೆ ಐದು ನಿಮಿಷಕ್ಕೆ ಒಂದು ಗಾಡಿ ಇದೆ. ಐದು ಗಂಟೆ ಹದಿನೈದು ನಿಮಿಷಗಳ ಪ್ರಯಾಣ. ಸಾಯಂಕಾಲ. ಅಷ್ಟೇನೂ ತಡವಲ್ಲ.... ಆದರೆ ವಿಷಯ ಅದಲ್ಲ...."

"ವಿಷಯ ಅದಲ್ಲ?" ಎಂದು ಹುಬ್ಬುಗಂಟಿಕ್ಕಿ ಲುದ್ಮೀಲ ಕೇಳಿದಳು.

ಅವನತ್ತ ಚಲಿಸುತ್ತಾ ತಾಯಿಯೆಂದಳು:

"ಯಾವುದು ವಿಷಯ? ಕೆಲಸ ಸಮರ್ಪಕವಾಗಿ ಆದರಾಯ್ತು...."

ಲುದ್ಮೀಲ ತನ್ನ ಹುಬ್ಬನ್ನೊರೆಸುತ್ತ ಪರೀಕ್ಷಿಸುವ ದೃಷ್ಟಿಯಿಂದ ತಾಯಿಯನ್ನು ನೋಡಿ ಹೇಳಿದಳು:

"ನೀವು ಆ ಕೆಲಸ ಮಾಡೋದು ಅಪಾಯಕರ."

"ಯಾಕೆ?" ಎಂದು, ಬಿಟ್ಟುಕೊಡದ ಛಲದಿಂದಲೆ ತಾಯಿ ಹೇಳಿದಳು.

ಡಾಕ್ಟರು ಬೇಗನೆ ಕಡಿದು ಕಡಿದು ಬಂದ ಸ್ವರದಲ್ಲಿ ಹೇಳಿದ:

"ಯಾಕೆಂದರೆ! ನಿಕೊಲಾಯ್‌ನ ದಸ್ತಗಿರಿಯಾಗೋಕೆ ಮುಂಚೆ ನೀವು ಮನೆ ಬಿಟ್ಟಿರಿ. ಉಪಾಧ್ಯಾಯಿನಿಯು ಚಿಕ್ಕಮ್ಮಳಾಗಿ ನೀವು ಕಾರಖಾನೆಯತ್ತ ಹೋದಿರಿ. ಆದಾದ್ಮೇಲೆ ಬೇಗ್ನೆ ಅಕ್ರಮ ಕರಪತ್ರಗಳು ಕಾರಖಾನೇಲಿ ಕಾಣಿಸ್ಕೊಂಡುವು. ಇದೆಲ್ಲಾ ಸೇರಿ ನಿಮ್ಮ ಕತ್ತಿನ ಸುತ್ತಲೂ ಒಳ್ಳೆಯ ಉರುಳಾಗ್ತದೆ."

"ಅಲ್ಲಿ ನನ್ನನ್ನ ಯಾರೂ ಗುರುತು ಹಿಡಿಯೋದಿಲ್ಲ," ಎಂದು ತಾಯಿ ಮತ್ತೂ ಹೇಳಿದಳು. "ವಾಪಸು ಬಂದಾಗ ನನ್ನನ್ನ ದಸ್ತಗಿರಿಮಾಡಿ ನಾನು ಎಲ್ಲಿದ್ದೇಂತ ಅವರು ಕೇಳಿದ್ರೆ..."

ಒಂದು ಕ್ಷಣ ಹಿಂದುಮುಂದು ನೋಡಿ ಆಕೆ ಗಟ್ಟಿಯಾಗಿ ಅಂದಳು:

"ಏನು ಹೇಳ್ಬೇಕೂಂತ ನನಗೆ ಗೊತ್ತಿದೆ! ಇಲ್ಲಿಂದ ನೇರವಾಗಿ ವಸತಿ ಪ್ರದೇಶಕ್ಕೆ ಹೋಗ್ತಿನಿ. ಅಲ್ಲಿ ನನ್ನ ಒಬ್ಬ ಸ್ನೇಹಿತನಿದ್ದಾನೆ – ಸಿಜೋವ್ ಅಂತ. ನನ್ನ ದುಃಖ ಶಮನ ಮಾಡ್ಕೊಳ್ಳೋದಕ್ಕೆ ಅಂತಲೇ ಅನ್ನಿ, ವಿಚಾರಣೆ ಮುಗಿದಮೇಲೆ ನೇರವಾಗಿ ಅವನ ಮನೆಗೆ ಹೋದೆ ಅನ್ತೀನಿ. ಅವನನ್ನೂ ಸಂತೈಸೋರು ಬೇಕಲ್ಲ? – ಅವನ ಅಳಿಯನಿಗೂ ಶಿಕ್ಷೆಯಾಗಿದೆ. ಅವನು ನನ್ನನ್ನ ಬಿಟ್ಟುಕೊಡೋದಿಲ್ಲ."

ತನ್ನ ಸೂಚನೆಗೆ ಅವರು ಖಂಡಿತವಾಗಿಯೂ ಒಪ್ಪುವರೆಂಬ ಭಾವನೆಯಿಂದ, ಅದನ್ನು ಬೇಗನೆ ಸಾಧಿಸಬೇಕೆಂಬ ಬಯಕೆಯಿಂದ, ತಾಯಿ ಒಂದೇ ಸಮನೆ ಮಾತನಾಡಿದಳು. ಕೊನೆಗೊಮ್ಮೆ ಅವರು ಒಪ್ಪಿದರು.

"ಆಗಲಿ, ಹೋಗಿ," ಎಂದು ಮನಸಿಲ್ಲದ ಮನಸಿನಿಂದ ಡಾಕ್ಟರು ಹೇಳಿದ.

ಲುದ್ಮಿಲ ಏನೂ ಮಾತನಾಡಲಿಲ್ಲ. ಯೋಚನೆಯಲ್ಲೇ ಮುಳುಗಿ ಸುಮ್ಮನೆ ಹಿಂದಕ್ಕೂ ಮುಂದಕ್ಕೂ ನಡೆದಳು. ಆಕೆಯ ಮುಖ ಅಂದಗೆಟ್ಟು ಕ್ಷೀಣವಾಯಿತು. ಕತ್ತಿನ ಬಿಗಿದ ನರಗಳು, ಎದೆಯ ಮೇಲೆ ಬಾಗುತ್ತಿದ್ದ ತಲೆಯನ್ನಾಕೆ ಬಲು ಪ್ರಯಾಸದಿಂದ ಎತ್ತಿ ಹಿಡಿದಿದ್ದಳೆಂಬುದನ್ನು ತೋರಿಸಿದುವು. ತಾಯಿ ಇದನ್ನು ಕಂಡಳು.

"ನೀವೆಲ್ಲಾ ನನ್ನ ವಿಷಯ ಚಿಂತಿಸ್ತೀರಿ. ಆದರೆ ನಿಮ್ಮ ವಿಷಯ ನೀವು ಯೋಚಿಸೋದೇ ಇಲ್ಲ," ಎಂದು ತಾಯಿ ಮುಗುಳ್ನಕ್ಕಳು.

ತಾಯಿಗೆ ಉತ್ತರವಾಗಿ ಡಾಕ್ಟರನೆಂದ:

"ಅದು ನಿಜವಲ್ಲ. ನಮ್ಮ ವಿಷಯವೂ ನಾವು ಚಿಂತಿಸ್ತೀವಿ. ನಾವು ಚಿಂತಿಸ್ಲೇ ಬೇಕಾಗಿದೆ... ಯಾವ ಪ್ರಯೋಜನವೂ ಇಲ್ದೆ, ಶಕ್ತಿ ವ್ಯಯಮಾಡೋರನ್ನ ಕಂಡಾಗ ಅವರ ಮುಂದೆ ನಾವು ವ್ಯಗ್ರರಾಗ್ತೇವೆ.... ಸರಿ, ಹಾಗಾದರೆ. ಭಾಷಣದ ಪ್ರತಿಗಳು ನಿಮಗೆ ನಿಲ್ದಾಣದಲ್ಲಿ ಸಿಗ್ತವೆ...."

ಅದರ ಏರ್ಪಾಟು ಹೇಗೆ ಎಂಬುದನ್ನು ವಿವರಿಸಿ, ತಾಯಿಯ ಮುಖವನ್ನು ನೋಡಿ, ಆತ ಹೇಳಿದ:

"ಸರಿ, ಶುಭವಾಗಲಿ ನಿಮಗೆ!"

ಹಾಗ ಹೇಳಿ ಆತ ಹೊರಹೋದ. ಅವನ ಮುಖದ ಮೇಲೆ ಅತೃಪ್ತಿಯ ನೋಟವಿತ್ತು.

ಲುದ್ಮೀಲ ತಾಯಿಯ ಬಳಿಗೆ ಬಂದಳು.

"ನಿಮ್ಮ ವರ್ತನೆ ನನಗೆ ಅರ್ಥವಾಗ್ತದೆ" ಎಂದು ಆಕೆ ಮೆಲ್ಲನೆ ನಕ್ಕು ಹೇಳಿದಳು.

ಆಕೆ ತಾಯಿಯ ತೋಳನ್ನು ಹಿಡಿದುಕೊಂಡು, ಮತ್ತೊಮ್ಮೆ ಹಿಂದಕ್ಕೂ ಮುಂದಕ್ಕೂ ನಡೆಯತೊಡಗಿದಳು.

"ನನಗೂ ಒಬ್ಬ ಮಗನಿದ್ದಾನೆ. ಅವನಿಗೆ ಈಗಾಗಲೇ ಹದಿಮೂರು ವರ್ಷ ಪ್ರಾಯ. ಆದರೆ ಆತ ತಂದೆ ಜತೇಲಿ ವಾಸಮಾಡ್ತಾನೆ. ನನ್ನ ಗಂಡ ಸರಕಾರಿ ವಕೀಲರಲ್ಲೊಬ್ಬ. ಹುಡುಗ ಅವನ ಜತೆಗಿದ್ದಾನೆ. ಮುಂದೆ ಏನಾಗ್ತಾನೋ? ಎಷ್ಟೋ ಸಲ ನಾನು ಅದೇ ಯೋಚ್ನೆ ಮಾಡ್ತೇನೆ...."

ಆಕೆಯ ಸ್ವರ ತಡವರಿಸಿ ತುಂಡಾಯಿತು: ಒಂದು ನಿಮಿಷ ಕಳೆದು, ನಿಧಾನವಾಗಿಯೂ ಯೋಚನಾಪೂರ್ಣವಾಗಿಯೂ ಆಕೆ ಮುಂದುವರಿಸಿದಳು.

"ನಾನು ಯಾರನ್ನೆಲ್ಲ ಪ್ರೀತಿಸ್ತೇನೋ, ಈ ಭೂಮಿಯ ಮೇಲೆ ಅತ್ಯಂತ ಒಳ್ಳೆಯವರೂಂತ ಯಾರನ್ನೆಲ್ಲ ಕಾಣ್ತೇನೋ, ಆ ಎಲ್ಲಾ ಜನರ ಕಡುವೈರಿಯೊಬ್ಬ ನನ್ನ ಹುಡುಗನನ್ನ ಬೆಳೆಸ್ತಿದ್ದಾನೆ. ನನ್ನ ಮಗ, ನನ್ನ ವೈರಿಯಾಗಿಯೇ ಬೆಳೀಲೂ ಬಹುದು. ಅವನು ನನ್ನ ಜತೇಲಿ ವಾಸ ಮಾಡೋಹಾಗಿಲ್ಲ – ನಾನಿರೋದೇ ಬೇರೆ ಹೆಸರಿಟ್ಟುಕೊಂಡು. ಕಳೆದ ಎಂಟು ವರ್ಷಗಳ ಕಾಲ ನಾನು ಅವನನ್ನ ನೋಡಿಲ್ಲ – ಎಂಟು ವರ್ಷಗಳ ಕಾಲ! ಎಷ್ಟೊಂದು ದೀರ್ಘ ಅವಧಿ!"

ಆಕೆ ಕಿಟಕಿಯ ಬಳಿ ನಿಂತು, ಮ್ಲಾನವಾಗಿದ್ದ ಶೂನ್ಯವಾಗಿದ್ದ ಆಕಾಶದತ್ತ ನೋಡಿದಳು.

"ಆತ ನನ್ನ ಜತೇಲೆ ಇದ್ದಿದ್ದರೆ, ನನ್ನ ಬಲ ಹೆಚ್ತಿತ್ತು. ಹೃದಯದ ಈ ನೋವಿನಿಂದ ನಾನು ಸದಾ ಸಂಕಟಪಡಬೇಕಾದ್ದಿರ್ಲಿಲ್ಲ.

"ಛೆ! ಮುದ್ದು!"

ತಾಯಿಯ ಹೃದಯ ಅನುತಾಪದಿಂದ ಬಿರಿಯಿತು.

ಕಹಿಯಾಗಿ ನಕ್ಕು ಲುದ್ಮೀಲ, ತಡೆ ತಡೆದು ಮೆಲ್ಲನೆ ಅಂದಳು:

"ನೀವು ಭಾಗ್ಯಶಾಲಿ!.... ಇದು ಅದ್ಭುತ – ತಾಯಿ ಮತ್ತು ಮಗ ಜತೆಯಲ್ಲೆ. ಇದು ಅಪೂರ್ವವಾದದ್ದು!"

"ಹೌದು, ಅದ್ಭುತವಾದದ್ದು," ಎಂದು ಪೆಲಗೇಯ ಉದ್ಗಾರವೆತ್ತಿದಳು. ಹಾಗೆ ಹೇಳಿದೆನೆಂದು ಆಕೆಗೇ ಆಶ್ಚರ್ಯವಾಯಿತು. ಆಮೇಲೆ, ಸ್ವರ ತಗ್ಗಿಸುತ್ತ, ಒಂದು ರಹಸ್ಯವನ್ನು ಹೇಳುವಂತೆ ಆಕೆಯೆಂದಳು:

"ನೀವೆಲ್ಲ, ನಿಕೊಲಾಯ್ ಇವಾನೊವಿಚ್ ಮತ್ತು ಸತ್ಯವನ್ನ ಅನುಸರಿಸೋ ಪ್ರತಿಯೊಬ್ಬರೂ, ಒಬ್ಬರ ಪಕ್ಕದಲ್ಲೊಬ್ಬರು ಒಟ್ಟಾಗಿದ್ದೀರಿ! ಒಮ್ಮೆಲೆ ಎಲ್ಲ ಜನರೂ

ಪರಸ್ಪರ ಸಂಬಂಧಿಕರಾಗಿದ್ದೀರಿ. ನಾನು ನಿಮ್ಮೆಲ್ಲರನ್ನೂ ತಿಳಿಕೊಂಡಿದ್ದೇನೆ. ಪದಗಳು ನನಗೆ ಅರ್ಥವಾಗೋದಿಲ್ಲ. ಆದರೆ ಬೇರೆ ಪ್ರತಿಯೊಂದೂ ಅರ್ಥವಾಗ್ತದೆ."

"ಹೌದು, ಅದು ಇರೋದೇ ಹಾಗೆ," ಎಂದು ಲುದ್ಮಿಲ ಕ್ಷೀಣಸ್ವರದಲ್ಲಿ ಅಂದಳು. "ಅದು ಇರೋದೇ ಹಾಗೆ...."

ತಾಯಿ ತನ್ನ ಕೈಯನ್ನು ಎದೆಯ ಮೇಲಿರಿಸಿ, ಹೆಚ್ಚು ಕಡಮೆ ಪಿಸು ಸ್ವರದಲ್ಲೇ ಆಡುತ್ತಿದ್ದ ಪದಗಳನ್ನು ತಾನೇ ರೂಪಿಸುತ್ತಿದ್ದಂತೆ, ಮಾತು ಮುಂದುವರಿಸಿದಳು:

"ನಮ್ಮ ಮಕ್ಕಳು ಭೂಮಿಯ ಮೇಲೆ ಮುಂದಕ್ಕೆ ನಡೀತಿದ್ದಾರೆ. ಇದೇ ನನಗೆ ಅರ್ಥವಾಗಿರೋದು – ನಮ್ಮ ಮಕ್ಕಳು ಭೂಮಿಯ ಮೇಲೆ ಮುಂದಕ್ಕೆ ನಡೀತಿದ್ದಾರೆ. ಇಡೀ ಭೂಮಿಯ ಮೇಲೆ – ಎಲ್ಲಾ ಮೂಲೆಗಳಿಂದ್ಲೂ – ಒಂದೇ ಗುರಿಯ ಕಡೆಗೆ. ಹೃದಯದಲ್ಲಿ ಅತ್ಯಂತ ಪರಿಶುದ್ಧರು, ಮನಸ್ಸಿನಲ್ಲಿ ಅತ್ಯಂತ ಸೊಗಸಾದವರು, ದುಷ್ಟಶಕ್ತಿಗಿದಿರಾಗಿ ನಿರ್ಭೀತರಾಗಿ ಮುಂದಕ್ಕೆ ನಡೀತಿದ್ದಾರೆ. ಅಸತ್ಯವನ್ನು ತಮ್ಮ ಬಲವಾದ ಪಾದಗಳ ಕೆಳಗೆ ಹಾಕಿ ತುಳೀತಿದ್ದಾರೆ. ಅವರು ಯುವಕರು, ಆರೋಗ್ಯ ವಂತರು, ಸುಭದ್ರರು. ಅವರೆಲ್ಲರ ಶಕ್ತಿಯೂ ಒಂದೇ ಗುರಿಯ ಕಡೆಗೆ, ನ್ಯಾಯದ ಕಡೆಗೆ, ಬೊಟ್ಟು ಮಾಡ್ತಿದೆ! ಮಾನವದುಃಖವನ್ನ ಜಯಿಸೋದಕ್ಕೋಸ್ಕರ ಅವರು ಮುನ್ನುಗ್ತಿದ್ದಾರೆ. ಎಲ್ಲಾ ದೌರ್ಭಾಗ್ಯವನ್ನೂ ತೊಡೆದುಹಾಕೋದಕ್ಕೋಸ್ಕರ ಎಲ್ಲಾ ಹೊಲಸನ್ನೂ ಸೋಲಿಸೋದಕ್ಕೋಸ್ಕರ, ತಮ್ಮ ಸೇನೆಯನ್ನ ಅವರು ರಚಿಸಿಕೊಂಡಿದ್ದಾರೆ. ಅವರು ಅದನ್ನೆಲ್ಲಾ ಸೋಲಿಸೋದು ಖಂಡಿತ! ಹೊಸ ಸೂರ್ಯನ್ನ ಹಚ್ಚಿ ಇಡ್ತೀವಿ ಅಂತ ಅವರಲ್ಲೊಬ್ಬ ನನಗೆ ಹೇಳಿದ್ದಾನೆ – ಅವರು ಅದನ್ನ ಹಚ್ಚಿಡೋದು ಖಂಡಿತ! ಭಗ್ನವಾದ ಎಲ್ಲ ಹೃದಯಗಳನ್ನು ಒಟ್ಟು ಕೂಡಿಸ್ತೀವಿ ಅಂತ ಆತ ಹೇಳಿದ್ದಾನೆ – ಅವರು ಹಾಗೆ ಒಟ್ಟುಗೂಡಿಸೋದು ಖಂಡಿತ!"

ಮರೆತುಹೋಗಿದ್ದ ಪ್ರಾರ್ಥನೆಗಳಿಂದ ಪದಗಳನ್ನು ನೆನಪಿಗೆ ತರುತ್ತಾ, ಹೊಸ ನಂಬುಗೆಯನ್ನು ಆಕೆ ಬೆಳಗಿದಳು. ಆ ಪದಗಳು ಕಿಡಿಗಳಂತೆ ಹೃದಯದಿಂದ ಚಿಮ್ಮಿದುವು:

"ನಮ್ಮ ಮಕ್ಕಳು ಸತ್ಯದ ವಿಚಾರದ ಹಾದಿ ತುಳೀತಿದಾರೆ. ಮಾನವರ ಹೃದಯಗಳಿಗೆ ಪ್ರೇಮವನ್ನು ತರ್‍ತಿದ್ದಾರೆ. ಭೂಮಿಗೆ ಹೊಸ ಸ್ವರ್ಗದ ಸೇತುವೆ ಕಟ್ತಿದ್ದಾರೆ. ಹೊಸ ಬೆಂಕಿಯಿಂದ ಭೂಮಿಯನ್ನು ಬೆಳಗ್ತಿದ್ದಾರೆ. ಅದು ಆತ್ಮಶಕ್ತಿಯ ಅಳಿಸಲಾಗದ ಬೆಂಕಿ. ಅದರ ಜ್ವಾಲೆಗಳಿಂದ, ಮಾನವ ಕೋಟಿಯ ವಿಷಯದಲ್ಲಿ ನಮ್ಮ ಮಕ್ಕಳಿಗಿರುವ ಪ್ರೇಮದಿಂದ ಹುಟ್ಟಿದ, ಹೊಸ ಬದುಕು ಚಿಮ್ಮುತ್ತಿದೆ. ಈ ಜ್ವಾಲೆಗಳನ್ನ ನಂದಿಸೋ ಸಾಮರ್ಥ್ಯ ಯಾರಿಗಿದೆ? ಯಾರಿಗೆ? ಯಾವ ಶಕ್ತಿ ಅವರನ್ನು ನಾಶಮಾಡೀತು? ಯಾವ ಶಕ್ತಿ ಅವರನ್ನು ವಿರೋಧಿಸೀತು? ಅವರು ಭೂಮಿಯಿಂದ ಹುಟ್ಟಿದ್ದಾರೆ. ಎಲ್ಲ ಬದುಕೂ – ಬದುಕೆಲ್ಲವೂ – ಅವರ ವಿಜಯಕ್ಕಾಗಿ ಹಾತೊರೀತಿದೆ!"

ಭಾವೋದ್ರೇಕದಿಂದ ಬಸವಳಿದ ತಾಯಿ, ಲುದ್ಮಿಲಳನ್ನು ಬಿಟ್ಟು, ಗಟ್ಟಿಯಾಗಿ

ಉಸಿರುಬಿಡುತ್ತಾ ಕುಳಿತುಕೊಂಡಳು. ಲುದ್ಮೀಲಳೂ ಮೌನವಾಗಿ, ಜಾಗರೂಕತೆ ಯಿಂದ, ಯಾವುದನ್ನೋ ಕದಡುವ ಭಯದಿಂದ, ನಿಧಾನವಾಗಿ ನಡೆದು ಹೋದಳು. ಕೊಠಡಿಯಲ್ಲಿ ಸೂಕ್ಷ್ಮವಾಗಿ ಆಕೆ ಅತ್ತಿತ್ತ ನಡೆದಳು. ಅವಳ ಪ್ರಕಾಶಹೀನ ಕಣ್ಣುಗಳ ನೋಟ ಆಕೆಯ ಮುಂದೆಯೇ ನೆಟ್ಟಿತ್ತು. ಆಕೆ ಹೆಚ್ಚು ಎತ್ತರವಾದಂತೆ, ನೆಟ್ಟಗಾ ದಂತೆ, ಹೆಚ್ಚು ತೆಳುವಾದಂತೆ ತೋರಿತು. ಆಕೆಯ ತೆಳ್ಳಗಿನ ಗಂಭೀರ ಮುಖ, ಗಾಢವಾದ ತಲ್ಲೀನತೆಯನ್ನು ತೋರಿಸಿತು. ತುಟಿಗಳು ಕಂಪಿಸುತ್ತಲಿದ್ದರೂ ಬಿಗಿದು ಕೊಂಡುವು. ಕೊಠಡಿಯ ಮೌನದಿಂದ ತಾಯಿ ಬೇಗನೆ ಸುಧಾರಿಸಿಕೊಂಡಳು. ಲುದ್ಮೀಲಳ ಮನೋಸ್ಥಿತಿಯನ್ನು ಕಂಡು ತಾಯಿ, ಅಪರಾಧಿನಿಯಂತೆ ಅಂದಳು:

"ಪ್ರಾಯಶಃ ಹೇಳಬಾರದ್ದೇನನ್ನಾದರೂ ನಾನು ಹೇಳಿದೆನೋ ಏನೋ?"

ಲುದ್ಮೀಲ ಬೆದರಿದವಳಂತೆ ಮುಖ ತಿರುಗಿಸಿ ತಾಯಿಯನ್ನು ನೋಡಿದಳು. ಏನನ್ನೋ ತಡೆಯಬಯಸಿದವಳಂತೆ, ತಾಯಿಯತ್ತ ಕೈಯನ್ನು ಚಾಚಿ, ಆಕೆ ವೇಗ ವಾಗಿ ಮಾತನಾಡಿದಳು:

"ಇಲ್ಲ, ಇಲ್ಲ. ಅದು ಇರೋದೇ ಹಾಗೆ – ಇರೋದೇ ಹಾಗೆ. ಆದರೆ ಆ ವಿಷಯ ನಾವಿನ್ನು ಮಾತಾಡೋದು ಬೇಡ. ಅದು ನೀವು ಹೇಳಿದಲ್ಲಿಗೇ ನಿಂತು, ಹಾಗೆಯೇ ಇರಲಿ."

ಮಾತನಾಡಿದಂತೆ ಲುದ್ಮೀಲಳ ಸ್ವರ ಹೆಚ್ಚು ಶಾಂತವಾಯಿತು. [illegible] ವರಿಸಿ ಅವಳೆಂದಳು:

"ನೀವು ಬೇಗನೆ ಹೊರಡ್ಬೇಕು – ನೀವು ಬಹಳ ದೂರ ಹೋಗ್ಬೇಕಾಗಿದೆ."

"ಬೇಗನೆ. ನನಗೆಷ್ಟು ಸಂತೋಷವಾಗಿದೇಂತ ನೀವು ತಿಳಿಯೋದು ಸಾಧ್ಯ ವಾದರೆ! ನನ್ನ ಮಗನ ಮಾತುಗಳನ್ನ, ನನ್ನದೇ ರಕ್ತ ಮಾಂಸದ ಮಾತುಗಳನ್ನ, ಬೇರೆಯುವರಿಗೆ ಒಯ್ದು ಮುಟ್ಟಿಸೋದು! ಅದು, ನನ್ನ ಆತ್ಮದಿಂದಲೇ ಏನನ್ನೋ ಕೊಟ್ಟ ಹಾಗೆ!"

ಆಕೆ ಮುಗುಳ್ನಕ್ಕಳು. ಆದರೆ ಆ ಮುಗುಳುನಗು ಅಸ್ಪಷ್ಟವಾಗಿ ಮಾತ್ರ ಲುದ್ಮೀಲಳ ಮುಖದ ಮೇಲೆ ಪ್ರತಿಬಿಂಬಿಸಿತು. ತನ್ನ ಸಂತೋಷವನ್ನು ಕಿರಿಯ ಹೆಂಗಸಿನ ಸಂಯಮ ಹತ್ತಿಕ್ಕುತ್ತಿದೆಯೆಂದು ತಾಯಿಗೆ ಭಾಸವಾಯಿತು. ಆ ಕಟ್ಟು ನಿಟ್ಟಿನ ಆತ್ಮಕ್ಕೆ ತನ್ನದೇ ಬೆಂಕಿಯನ್ನು ಸುರಿಯುವ, ಸಂತೋಷದಿಂದ ಬಿರಿಯುತ್ತಿದ್ದ ತನ್ನ ಹೃದಯದ ಕರೆಗೆ ಆ ಇನ್ನೊಬ್ಬ ಹೆಂಗಸೂ ಓಗೊಡುವಂತೆ ಮಾಡುವ, ಹಟದ ಬಯಕೆ ಒಮ್ಮೆಲೆ ತಾಯಿಯನ್ನು ಆವರಿಸಿತು. ಆಕೆ ಲುದ್ಮೀಲಳ ಕೈಗಳನ್ನೆತ್ತಿ ಮೃದು ವಾಗಿ ಅದುಮುತ್ತಾ ಹೇಳಿದಳು:

"ಪ್ರಿಯ ಮುದ್ದು! ಎಲ್ಲಾ ಜನರನ್ನೂ ಬೆಳಗೋ ಒಂದು ದೀಪ ಇದೇಂತ, ಎಲ್ಲರೂ ಅದನ್ನು ನೋಡುವ ಸಮಯ ಮುಂದೆ ಬರ್ತದೇಂತ, ತಮ್ಮ ಪೂರ್ತಿ ಹೃದಯದಿಂದ ಜನ ಅದರ ಕಡೆಗೆ ತಿರುಗ್ತಾರೇಂತ, ತಿಳಿದಿರೋದು ಎಷ್ಟೊಂದು ಒಳ್ಳೇದು!"

ತಾಯಿಯ ವಿಶಾಲವಾದ ದಯಾಪೂರ್ಣವಾದ ಮುಖದ ಮೇಲೊಂದು ನಡುಕ ಹಾದು ಹೋಯಿತು. ಆಕೆಯ ಕಣ್ಣುಗಳು ಪ್ರಕಾಶಮಾನವಾಗಿದ್ದುವು. ಅವುಗಳ ಮೇಲ್ಗಡೆ ಹುಬ್ಬುಗಳು ರೆಕ್ಕೆಗಳ ಹಾಗೆ ಕಂಪಿಸಿ, ಕಣ್ಣುಗಳ ಹೊಳಪಿಗೆ ನೆರಳೊಡ್ಡಿದುವು. ಮಹಾ ವಿಚಾರಗಳಿಂದ ಆಕೆಯ ತಲೆ ಸುತ್ತುಬರುತ್ತಿತ್ತು. ಆ ವಿಚಾರಗಳೊಳಕ್ಕೆ ತನ್ನ ಎದೆಯಲ್ಲಿ ಕುದಿಯುತ್ತಿದ್ದುದೆಲ್ಲವನ್ನೂ ತಾನು ಆ ವರೆಗೂ ಬದುಕಿನಲ್ಲಿ ಅನುಭವಿಸಿದ್ದೆಲ್ಲವನ್ನೂ ತಾಯಿ ಸುರಿದಳು. ಈ ವಿಚಾರಗಳ ಸಾರವನ್ನು ಆಕೆ, ಮಾತುಗಳ ಶುಭ್ರವಾದ ಸ್ಫಟಿಕಗಳಾಗಿ ಹಿಂಡಿದಳು. ಇವುಗಳ ಸಂಖ್ಯೆ ಎಷ್ಟೋ ಪಾಲು ಹೆಚ್ಚಿತು. ಇವು ಸೂರ್ಯನ ಕ್ರಿಯಾಶೀಲ ಶಕ್ತಿಯಿಂದ ಬೆಳಗಿದುವು. ಹೆಚ್ಚುತ್ತಲಿದ್ದ ಪ್ರಕಾಶದಿಂದ ಉರಿದುವು, ಹೊಳೆದುವು.

"ಇದು, ಜನರೆಡೆಯಲ್ಲಿ ಹೊಸ ದೇವರು ಹುಟ್ಟಿದ ಹಾಗೆ! ಪ್ರತಿಯೊಂದೂ ಎಲ್ಲರಿಗಾಗಿ, ಎಲ್ಲವೂ ಪ್ರತಿಯೊಬ್ಬರಿಗಾಗಿ! ಅದೀಗ ನನಗೆ ಅರ್ಥವಾಗೋ ರೀತಿ. ಸತ್ಯದಲ್ಲೇ ನಾವೆಲ್ಲ ಸಂಗಾತಿಗಳು; ಎಲ್ಲರೂ ಸಂಬಂಧಿಕರು; ಎಲ್ಲರೂ ಒಂದೇ ತಾಯಿಯ ಮಕ್ಕಳು. ಸತ್ಯವೇ ಆ ತಾಯಿ!"

ಮತ್ತೊಮ್ಮೆ ತಾಯಿ ಭಾವೋದ್ರೇಕದ ತೆರೆಯಲ್ಲಿ ಸಿಲುಕಿಕೊಂಡಳು. ಆಕೆ ತಡೆದು ಉಸಿರೆಳೆದು ಅಪ್ಪಿಕೊಳ್ಳುವುದಕ್ಕೋಸ್ಕರವೆಂಬಂತೆ ತೋಳುಗಳನ್ನು ಅಗಲವಾಗಿ ಮುಂದಕ್ಕೆ ಚಾಚಿ, ಹೇಳಿದಳು:

"ನಾನು ನನ್ನಷ್ಟಕ್ಕೆ 'ಸಂಗಾತಿಗಳು' ಎಂಬ ಪದವನ್ನ ಹೇಳ್ಕೊಂಡಾಗ, ಅವರು ಮುಂದಕ್ಕೆ ನಡೀತಿರೋ ಸದ್ದು ನನ್ನ ಹೃದಯದಲ್ಲಿ ಕೇಳಿಸ್ತದೆ!"

ಆಕೆಯ ಉದ್ದೇಶ ಸಫಲವಾಯಿತು. ಲುದ್ಮಿಲಳ ಮುಖ ಕೆಂಪೇರಿ, ತುಟಿಗಳು ಕಂಪಿಸಿದುವು. ದೊಡ್ಡ ದೊಡ್ಡ ಸ್ವಚ್ಛವಾದ ಕಂಬನಿ ಕೆನ್ನೆಗಳ ಮೇಲಿಂದ ಕೆಳಕ್ಕೆ ನುಸುಳಿತು.

ತಾಯಿ ಆಕೆಯನ್ನು ತೋಳುಗಳಲ್ಲಿ ತಬ್ಬಿಕೊಂಡು, ಮೌನವಾಗಿ ಮುಗುಳ್ನಕ್ಕು ತನ್ನ ಹೃದಯ ಗಳಿಸಿದ ವಿಜಯಕ್ಕೋಸ್ಕರ ಮೃದುವಾಗಿ ಸಂತೋಷಪಟ್ಟಳು.

ಅವರು ಬೇರೆ ಬೇರೆಯಾಗುವ ಹೊತ್ತು ಬಂದಾಗ ಲುದ್ಮಿಲ, ತಾಯಿಯ ಮುಖದತ್ತ ನೋಡಿ, ಮೃದುವಾಗಿ ಹೇಳಿದಳು:

"ನಿಮ್ಮ ಜತೇಲಿರೋದು ಎಷ್ಟು ಚೆನ್ನಾಗಿರ್ತದೇಂತ ನಿಮಗೆ ಗೊತ್ತೆ?"

## ೨೯

ಬೀದಿಗಿಳಿದೊಡನೆ, ಹೆಪ್ಪುಗಟ್ಟಿದ ಗಾಳಿ ಕ್ರೂರ ಅಪ್ಪುಗೆಯಲ್ಲಿ ಆಕೆಯನ್ನು ಬಿಗಿಹಿಡಿದು, ಮೂಗಿಗೆ ಕಚಗುಳಿ ಇಟ್ಟು, ಕ್ಷಣಕಾಲ ಆಕೆಯ ಉಸಿರು ಕಟ್ಟಿಹೋಗುವ ಹಾಗೆ ಮಾಡಿತು. ಆಕೆ ನಿಂತು ಸುತ್ತಲೂ ನೋಡಿದಳು. ಅಲ್ಲೇ ಸಮೀಪದ ಮೂಲೆ

ಯಲ್ಲಿ ಹರಕು ಟೋಪಿ ಧರಿಸಿದ್ದ ಒಬ್ಬ ಜಟಕಾದವನಿದ್ದ. ಬೀದಿಯಲ್ಲಿ ಮತ್ತೂ ಕೆಳಕ್ಕೆ ಮನುಷ್ಯನೊಬ್ಬ ಪೂರ್ತಿಯಾಗಿ, ಭುಜಗಳ ನಡುವೆ ತಲೆ ಹುದುಗಿಸಿ, ನಡೆಯುತ್ತಿದ್ದ. ಅವನಿಗಿಂತಲೂ ಮುಂದೆ ಸೈನಿಕನೊಬ್ಬ ತನ್ನ ಕಿವಿಗಳನ್ನು ತೀಡುತ್ತ ಓಡುತಿದ್ದ.

"ಸೈನಿಕನನ್ನ ಅಂಗಡಿಗೆ ಕಳಿಸಿದ್ದರೇನೋ," ಎಂದು ಯೋಚಿಸುತ್ತ ಆಕೆ ಮುಂದುವರಿದಳು. ಪಾದಗಳಡಿಯಲ್ಲಿ ಹೊಸ ಮಂಜು ಪುಡಿಯಾಗುತ್ತಿದ್ದ ಜೀವಂತ ಸದ್ದು ಕೇಳಿ, ಆಕೆಗೆ ಖುಷಿಯಾಯಿತು. ರೈಲು ಬರುವ ಹೊತ್ತಿಗೆ ಮುಂಚೆಯೇ ಆಕೆ ನಿಲ್ದಾಣ ತಲಪಿದಳು. ಆದರೂ ಆಗಲೆ ಹೊಲಸಾದ ಹೊಗೆ ತುಂಬಿದ ಮೂರನೇ ವರ್ಗದ ಕಾಯುವ ಕೋಣೆ, ಜನರಿಂದ ಕಿಕ್ಕಿರಿದಿತ್ತು. ಶೀತಕ್ಕೆ ಹೆದರಿ, ರೈಲು ಹಾದಿಯ ಕೆಲಸಗಾರರೂ ಗಾಡಿ ಹೊಡೆಯುವವರೂ ಮನೆಮಠಗಳಿಲ್ಲದವರೂ ಹರಕು ಚಿಂದಿಯುಟ್ಟವರೂ ಒಳಗೆ ಸೇರಿದ್ದರು. ಕೆಲ ರೈತರು, ಬೂದು ಬಣ್ಣದ ಉಣ್ಣೆಯ ಓವರ್ ಕೋಟು ಧರಿಸಿದ ದಪ್ಪಗಿನ ಒಬ್ಬ ವ್ಯಾಪಾರಿ, ಒಬ್ಬ ಪಾದ್ರಿ ಮತ್ತು ಮುಖದ ಮೇಲೆ ಸಿಡುಬಿನ ಕಲೆಗಳಿದ್ದ ಅವನ ಮಗಳು, ಐದಾರು ಜನ ಸೈನಿಕರು, ಬೇಸರಪಡುತ್ತ ನೆಮ್ಮದಿ ಇಲ್ಲದೆ ಕುಳಿತಿದ್ದ ಕೆಲ ಪುಟ್ಟ ವ್ಯಾಪಾರಸ್ಥರು, – ಹೀಗೆ ಕೆಲ ಪ್ರಯಾಣಿಕರೂ ಅಲ್ಲಿದ್ದರು. ಜನರು ತಂಬಾಕು ಸೇದುತ್ತ, ಮಾತನಾಡುತ್ತಾ, ಚಾ ಇಲ್ಲವೆ ವೋಡ್ಕ ಕುಡಿಯುತ್ತಾ ಇದ್ದರು. ಪಾನೀಯಗಳನ್ನು ಮಾರುತ್ತಿದ್ದಲ್ಲಿ ಯಾರೋ ಗೊಳ್ಳನೆ ನಕ್ಕರು. ಹೊಗೆಯ ಅಲೆಗಳು ತಲೆಗಳ ಮೇಲಿಂದ ಉರುಳಾಡಿದುವು. ಬಾಗಿಲು ತೆರೆದಾಗ ಕಿರ್ರೆಂದು ಗೋಳಾಡಿತು. ಅದನ್ನು ಬಲವಾಗಿ ಮುಚ್ಚಿದಾಗ, ಕಿಟಕಿಯ ಗಾಜುಗಳು ನಡುಗಿ ಸದ್ದು ಮಾಡಿದುವು. ಕೊಠಡಿಯಲ್ಲಿ ಹೊಗೆಸೊಪ್ಪಿನ ಮತ್ತು ಉಪ್ಪು ಹಾಕಿದ ಮೀನಿನ ವಾಸನೆ ತುಂಬಿ ಹರಿಯುತ್ತಿತ್ತು.

ತಾಯಿ ಬಾಗಿಲ ಬಳಿಯಲ್ಲೇ ಒಳಬಂದವರಿಗೆ ಕಾಣಿಸುವಂತಹ ಜಾಗದಲ್ಲೇ ಕುಳಿತು ಕಾದಳು. ಬಾಗಿಲು ತೆರೆದಾಗಲೆಲ್ಲ ಶೀತಲ ಗಾಳಿ ಆಕೆಯನ್ನು ಮುಸುಕುತ್ತಿತ್ತು. ಅದು ಆಕೆಗೆ ಹಿತಕರವಾಗಿತ್ತು. ಪ್ರತಿಸಲವೂ ಆಳವಾಗಿ ಉಸಿರೆಳೆದು ಆ ಗಾಳಿಯನ್ನು ಆಕೆ ಕುಡಿದಳು. ಎಷ್ಟೋ ಜನರು ಹೊರೆಗಳಿಂದ ತುಂಬಿರುತ್ತಿದ್ದರು. ಚಳಿಗಾಲದ ಅವರ ಪೋಷಾಕೂ ಸೇರಿ, ಬಾಗಿಲನ್ನು ಹಾದು ಒಳಬರುವುದು ಸುಲಭವಾಗಿರಲಿಲ್ಲ. ಶಪಿಸುತ್ತ, ತಮ್ಮ ಹೊರೆಗಳನ್ನು ನೆಲದ ಮೇಲೋ ಬೆಂಚುಗಳ ಮೇಲಕ್ಕೋ ಎಸೆಯುತ್ತ, ಗೊಣಗಿಕೊಂಡು, ತಮ್ಮ ಬಟ್ಟೆಬರೆ ಮೈಕೈ ಗಡ್ಡಮೀಸೆಗಳ ಮೇಲಿಂದ ಹಿಮವನ್ನು ಒದರುತ್ತಿದ್ದರು.

ಯುವಕನೊಬ್ಬ ಚರ್ಮದ ಪೆಟ್ಟಿಗೆಯನ್ನು ಕೈಲಿ ಹಿಡಿದುಕೊಂಡು ಬಾಗಿಲಿನ ಒಳಹೊಕ್ಕ. ಆತ ಸರಕ್ಕನೆ ಸುತ್ತಲೂ ನೋಡಿ ನೇರವಾಗಿ ತಾಯಿಯ ಬಳಿಗೆ ಬಂದ:

"ಮಾಸ್ಕೋಗೆ ಹೋಗ್ತಿದೀರಾ?" ಎಂದು ಆತ ಕೇಳಿದ.

"ಹೌದು, ತಾನ್ಯನ ನೋಡೋಕೆ," ಎಂದು ಆಕೆ ಉತ್ತರವಿತ್ತಳು.

"ಆ!"

ಪೆಟ್ಟಿಗೆಯನ್ನಾತ ಆಕೆಯ ಬಳಿ ಬೆಂಚಿನ ಮೇಲಿರಿಸಿ, ಒಂದು ಸಿಗರೇಟು ಹಚ್ಚಿ, ಹ್ಯಾಟನ್ನು ಸರಿಸಿ, ಇನ್ನೊಂದು ಬಾಗಿಲಿನ ಮೂಲಕ ಮರೆಯಾದ. ತಾಯಿ, ಪೆಟ್ಟಿಗೆಯ ತಣ್ಣಗಿದ್ದ ಚರ್ಮವನ್ನು ಮುಟ್ಟಿ ತಟ್ಟಿದಳು. ಮೊಣಗೈಯನ್ನು ಅದರ ಮೇಲಿಟ್ಟು ಒರಗಿದಳು. ತೃಪ್ತಿಯ ಛಾಯೆಯಿಂದ ಸುತ್ತಲಿದ್ದ ಜನರನ್ನು ಪರೀಕ್ಷಿಸಿದಳು. ಒಂದು ಕ್ಷಣ ಕಳೆದು ಆಕೆ ಅಲ್ಲಿಂದೆದ್ದು, ಹೊರ ಬೀಳುವ ಬಾಗಿಲಿನ ಸಮೀಪಕ್ಕೆ ಹೋಗಿ ಕುಳಿತಳು. ಆಕೆ ತಲೆಯೆತ್ತಿ, ಚಿಕ್ಕದೇ ಆಗಿದ್ದ ಪೆಟ್ಟಿಗೆಯನ್ನು ಸುಲಭವಾಗಿ ಎತ್ತಿಕೊಳ್ಳುತ್ತ, ಸುತ್ತಲಿದ್ದ ಮುಖಗಳನ್ನು ನೋಡುತ್ತ ನಡೆದಳು.

ಏರಿಸಿದ ಕಾಲರಿದ್ದ ಸಣ್ಣ ಕೋಟೊಂದನ್ನು ಧರಿಸಿದ್ದ ಯುವಕನೊಬ್ಬ ಬಂದು ತಾಯಿಯನ್ನು ಎಡವಿದ. ಅವನು ಮೌನವಾಗಿ ಪಕಕ್ಕೆ ಸರಿದು, ಕೈಯನ್ನು ತನ್ನ ತಲೆಯುತ್ತ ಎತ್ತಿದ. ಅವನ ಚಲನವಲನ ಪರಿಚಿತವಾಗಿದ್ದಂತೆ ತಾಯಿಗೆ ಭಾಸವಾಯಿತು. ಆಕೆ ತಿರುಗಿ ಅವನತ್ತ ನೋಡಿದಳು. ಅವನ ನಿಸ್ತೇಜ ಕಣ್ಣುಗಳಲ್ಲೊಂದು ತನ್ನ ಮೇಲೆಯೇ ನೆಟ್ಟಿದ್ದುದನ್ನು ಕಂಡಳು. ತನ್ನ ಮೇಲೆಯೇ ನೆಟ್ಟಿದ್ದ ಆತನ ದೃಷ್ಟಿ, ಚಾಕುವಿನಂತೆ ತಾಯಿಯನ್ನು ಇರಿಯಿತು. ಪೆಟ್ಟಿಗೆಯನ್ನು ಹಿಡಿದಿದ್ದ ತೋಳು, ನರಗಳು ಮುರುಟಿದಂತೆ ಅದುರಿತು. ಒಮ್ಮೆಲೆ ಆಕೆಯ ಹೊರೆ ಭಾರವಾಯಿತು.

"ಆತನನ್ನೆಲ್ಲೋ ಹಿಂದೆ ನೋಡಿದ್ದೀನಿ," ಎಂದು ತಾಯಿ ಯೋಚಿಸಿದಳು: ಹೃದಯದೊಳಗಿಂದ ಉಕ್ಕುತ್ತಿದ್ದ ಕಹಿಭಾವನೆಯನ್ನು ಹತ್ತಿಕ್ಕಲು ಆಕೆ ಯತ್ನಿಸಿದಳು. ನಿಧಾನವಾಗಿಯೇ ಆದರೂ ಅದಮ್ಯವಾಗಿ ತನ್ನ ಹೃದಯವನ್ನು ಹೆಪ್ಪುಗಟ್ಟುತ್ತಿದ್ದ ಭಾವನೆಯನ್ನು ಇಂಥದೇ ಎಂದು ತಿಳಿಯಲು ಆಕೆ ನಿರಾಕರಿಸಿದಳು. ಆದರೆ ಅದು ಬೆಳೆದು ಗಂಟಲನ್ನೇರಿತು. ಬಾಯಿಯನ್ನು ಶುಷ್ಕವಾದ ಕಹಿ ರುಚಿಯಿಂದ ತುಂಬಿತು. ತಾಯಿ 'ಇರಲಾರದು' ಎನ್ನುವ ಆಸೆಯಿಂದ, ಮತ್ತೊಮ್ಮೆ ಆತನನ್ನು ನೋಡ ಬಯಸಿದಳು. ಆಕೆ ತಿರುಗಿನೋಡಿದಾಗಲೂ ಆತ ಅದೇ ಜಾಗದಲ್ಲಿ, ಒಂದು ಪಾದದಿಂದ ಇನ್ನೊಂದು ಪಾದಕ್ಕೆ ದೇಹದ ಭಾರವನ್ನು ಬದಲಾಯಿಸುತ್ತ, ಏನನ್ನೋ ಮಾಡಲು ಬಯಸಿ, ಆದರೆ ನಿರ್ಧಾರಕ್ಕೆ ಬರಲಾಗದವನ ಹಾಗೆ, ನಿಂತಿದ್ದ. ಬಲಗೈ ಕೋಟಿನ ಗುಂಡಿಗಳೆಡೆಗೆ ಸೇರಿತ್ತು. ಎಡಗೈ ಆತನ ಜೇಬಿನೊಳಕ್ಕೆ ಹುದುಗಿತ್ತು. ಹೀಗಾಗಿ ಆತನ ಬಲಭುಜ ಎಡಭುಜಕ್ಕಿಂತ ಸ್ವಲ್ಪ ಎತ್ತರವಾಗಿದ್ದಂತೆ ಕಂಡಿತು.

ಆಕೆ ಬೇರೊಂದು ಬೆಂಚಿಗೆ ಹೋಗಿ, ತನ್ನೊಳಗಿನದೇನೋ ಕಡಿದುಹೋಗುವುದೆಂದು ಭಯಗೊಂಡವಳಂತೆ, ನಿಧಾನವಾಗಿ ಎಚ್ಚರಿಕೆಯಿಂದ ಕುಳಿತಳು. ಭೀತಿಯ ವಿಚಾರಗಳ ಒತ್ತಡದ ಕೆಳಗೆ ಆಕೆ, ತನ್ನ ಮನಸ್ಸನ್ನು ಶೋಧಿಸಿ, ಹಿಂದೆ ಎರಡು ಸಾರಿ ಈತನನ್ನು ತಾನು ಕಂಡುದೆಲ್ಲಿ ಎಂಬುದನ್ನು ನೆನಪು ಮಾಡಲು ಸಮರ್ಥಳಾದಳು: ಒಮ್ಮೆ, ರೀಬಿನ್ ತಪ್ಪಿಸಿಕೊಂಡಾಗ, ಶಹರದ ಮೂಲೆಯ ಖಾಲಿ ಜಾಗದಲ್ಲಿ; ಮತ್ತೊಮ್ಮೆ ವಿಚಾರಣೆಯ ಸ್ಥಳದಲ್ಲಿ. ರೀಬಿನ್ನನನ್ನು ಹಿಂಬಾಲಿಸಿ ಬಂದಾಗ ತನ್ನ ಸೂಚನೆಯಂತೆ ತಪ್ಪು ದಿಕ್ಕಿನಲ್ಲಿ ಓಡಿದ್ದ ಪೋಲೀಸ್ ಅಧಿಕಾರಿ, ವಿಚಾರಣೆಯ ದಿನ ಈ

ಯುವಕನ ಪಕ್ಕದಲ್ಲಿ ನಿಂತಿದ್ದ. ತನ್ನನ್ನು ಹಿಂಬಾಲಿಸಲಾಗುತ್ತಿದೆ ಎಂಬುದನ್ನು ತಾಯಿ ಮನಗಂಡಳು. ಅದು ಸ್ಪಷ್ಟವಾಗಿತ್ತು.

"ಸಿಕ್ಕಿಬಿದ್ದೆನೆ?" ಎಂದು ತನ್ನನ್ನೆ ಆಕೆ ಕೇಳಿಕೊಂಡಳು.

ಒಂದು ಕ್ಷಣ ಕಳೆದು, ಮೈ ಕಂಪಿಸಿ, ಆಕೆ ಉತ್ತರವಿತ್ತಳು.

"ಇಲ್ಲ, ಇನ್ನೂ ಇಲ್ಲ."

ಆದರೆ ಮರುಕ್ಷಣವೆ ಪ್ರಯತ್ನಪೂರ್ವಕವಾಗಿ ತೀಕ್ಷ್ಣವಾಗಿ ಆಕೆಯೆಂದಳು.

"ಸಿಕ್ಕಿಬಿದ್ದೆ!"

ಏನನ್ನೂ ಕಾಣದೆ ಆಕೆ ಸುತ್ತಲೂ ನೋಡಿದಳು. ವಿಚಾರದ ಕಿಡಿಗಳು ಒಂದರ ಹಿಂದೊಂದು ಆಕೆಯ ಮನಸ್ಸಿನಿಂದ ಹೊರಟವು.

"ಪೆಟ್ಟಿಗೇನ ಇಲ್ಲೇ ಬಿಟ್ಟು ನಾನು ಹೊರಟು ಹೋಗಲೆ?"

ಇದರ ಬದಲು ಹೆಚ್ಚು ಶುಭ್ರವಾದ ಕಿಡಿ ಬಂತು:

"ಏನು? ನನ್ನ ಮಗನ ಮಾತುಗಳನ್ನ ಹೀಗೆ ಬಿಟ್ಟು ಹೋಗೋದೆ? ಅಂಥ ಕೈಗಳಿಗೆ ಆ ಮಾತುಗಳನ್ನ ಕೊಡೋದೆ?"

ಆಕೆ ಪೆಟ್ಟಿಗೆಯನ್ನು ಭದ್ರವಾಗಿ ಹಿಡಿದುಕೊಂಡಳು.

"ಇದನ್ನೂ ತಗೊಂಡು ಹೊರಟುಹೋಗಲೆ? ಓಡಿಹೋಗಲೆ?"

ಅಂತಹ ವಿಚಾರಗಳು ಪರಕೀಯವಾಗಿದ್ದಂತೆ, ಬೇರೆ ಯಾರೋ ತನ್ನ ಮೇಲೆ ಅದನ್ನು ಒತ್ತಾಯಪೂರ್ವಕವಾಗಿ ಹೇರಿದಂತೆ, ಕಂಡಿತು. ಆ ವಿಚಾರಗಳು ಆಕೆಯ ಮನಸ್ಸನ್ನು ದಹಿಸಿ, ಬೆಂಕಿಯ ಧಾರೆಗಳಾಗಿ ಹೃದಯವನ್ನು ಇರಿದುವು. ಆ ನೋವು ಆಕೆಯನ್ನು ತನ್ನಿಂದಲೇ, ಪಾವೆಲ್‌ನಿಂದಲೇ, ತನಗೆ ಬಲು ಪ್ರಿಯವಾಗಿ ಮಾರ್ಪಟ್ಟಿದ್ದ ಎಲ್ಲದರಿಂದಲೇ, ದೂರ ಓಡಿಸಿತು. ಯಾವುದೋ ದುಷ್ಟಶಕ್ತಿ ತನ್ನ ಭುಜಗಳನ್ನೂ ಎದೆಯನ್ನು ಒತ್ತಿ ಕೆಳಕ್ಕೆ ತಳ್ಳುತ್ತಿದ್ದಂತೆ, ಸಾವಿನ ಭಯದಿಂದ ತನ್ನನ್ನು ಅವಹೇಳನ ಮಾಡುತ್ತಿದ್ದಂತೆ, ತಾಯಿಗೆ ಭಾಸವಾಯಿತು. ಕಿವಿಯ ಬಳಿ ನಾಡಿಗಳು ಭೀಕರವಾಗಿ ಮಿಡಿಯತೊಡಗಿದವು. ಆಕೆಯ ಕೂದಲ ಬುಡಗಳೆಲ್ಲ ಬೆಚ್ಚಗಾದುವು.

ಒಮ್ಮೆಲೆ ಆಕೆ ಅತ್ಯಂತ ಪ್ರಯತ್ನಪೂರ್ವಕವಾಗಿ ತನ್ನ ವಿಚಾರಗಳನ್ನೆಲ್ಲಾ ಹೊರಕ್ಕೆ ತಳ್ಳಿದಳು. ತುಚ್ಛವಾದ ದುರ್ಬಲವಾದ ಎಲ್ಲ ಕಿಡಿಗಳನ್ನು ತೊಡೆದು ಹಾಕಿದಳು. ತನಗೆ ತಾನೆ ಅಧಿಕಾರ ವಾಣಿಯಿಂದ ಹೇಳಿದಳಾಕೆ.

"ನಾಚಿಕೆಯಾಗ್ಬೇಕು ನಿನಗೆ!"

ತಕ್ಷಣವೇ ಆಕೆಗೆ, ಮೇಲೆನಿಸಿತು. ವಾಸ್ತವವಾಗಿ ಆಕೆ ಧೈರ್ಯಗೊಂಡಳು. ಆಕೆ ತನಗೆ ಮತ್ತೂ ಒಂದು ಮಾತೆಂದಳು:

"ನಿನ್ನ ಮಗನ ಹೆಸರಿಗೆ ಕಳಂಕ ತರ್ಬೇಡ! ಅವರೆಲ್ಲಾ ಎಂದಾದರೂ ಹೆದರ್ತಾರೆಯೆ?"

ಆಕೆಯ ಕಣ್ಣುಗಳು, ಯಾರದೋ ಮಂದವಾದ ದುರ್ಬಲವಾದ ನೋಟವನ್ನು ಸಂಧಿಸಿದುವು. ಆಕೆಯ ಮನಸ್ಸಿನ ಮುಂದೆ ರೀಬಿನ್ನನ ಮುಖ ಮಿಂಚಿತು.

ಕೆಲ ನಿಮಿಷಗಳ ಅಳುಕು, ಆಕೆಯ ಒಳಗಿನದೆಲ್ಲವನ್ನೂ ಭದ್ರಗೊಳಿಸಿತು. ಹೃದಯದ ತೀವ್ರಗೊಂಡಿದ್ದ ಬಡಿತ ಶಾಂತವಾಯಿತು.

"ಇನ್ನೇನಾಗುವುದು?" ಎಂದು ಆಕೆ, ಸುತ್ತಲೂ ನೋಡುತ್ತ ಯೋಚಿಸಿದಳು.

ಆ ಗೂಢಚಾರ ನಿಲ್ದಾಣದ ಕಾವಲುಗಾರನೊಬ್ಬನನ್ನು ಕರೆದು, ತನ್ನ ಕಣ್ಣು ಗಳಿಂದ ತಾಯಿಯನ್ನು ತೋರಿಸುತ್ತ ಆತನಿಗೇನನ್ನೋ ಪಿಸುಮಾತಿನಲ್ಲಿ ಹೇಳಿದ. ಕಾವಲುಗಾರ ಆತನನ್ನು ನೋಡಿ, ಹಿಂದಿರುಗಿ ಹೊರಟುಹೋದ. ಇನ್ನೊಬ್ಬ ಕಾವಲುಗಾರ ಬಂದ. ಗೂಢಚಾರ ಹೇಳಿದುದನ್ನು ಕೇಳಿ, ಹುಬ್ಬುಗಂಟಿಕ್ಕಿದ. ಆತನಿಗೆ ವಯಸ್ಸಾಗಿತ್ತು; ದಪ್ಪಗಿದ್ದ; ಬಿಳಿಗೂದಲು; ಕ್ಷೌರ ಮಾಡಿಸಿಕೊಂಡಿರಲಿಲ್ಲ. ಆತ ಗೂಢಚಾರನೆದುರು ತಲೆದೂಗಿ, ತಾಯಿ ಕುಳಿತಿದ್ದ ಬೆಂಚಿನತ್ತ ಬಂದ. ಅಷ್ಟರಲ್ಲೆ ಗೂಢಚಾರ ಮರೆಯಾದ.

ಕಾವಲುಗಾರ, ಅವಸರವಿಲ್ಲದೆ, ಅಸಂತೋಷದಿಂದ ತಾಯಿಯ ಮುಖವನ್ನೆ ಈಕ್ಷಿಸುತ್ತ, ನಡೆದುಬಂದ. ತಾಯಿ ಬೆಂಚಿನ ಮೇಲೆಯೇ ಮುದುಡಿ ಕುಳಿತಳು.

"ಇವರು ನನಗೆ ಹೊಡೆಯದಿದ್ದರೆ ಸಾಕು," ಎಂದು ಆಕೆ ಅಂದುಕೊಂಡಳು.

ಆತ ಆಕೆಯ ಎದುರು ನಿಂತು, ಒಂದು ನಿಮಿಷ ಸುಮ್ಮನಿದ್ದು, ಬಳಿಕ ಮೆಲು ದನಿಯಲ್ಲಿ ಹೇಳಿದ:

"ಏನು ನೋಡ್ತಾ ಇದೀಯಾ?"

"ಏನೂ ಇಲ್ಲ."

"ಹಾಗೊ? ಕಳ್ಳಿ! ಈ ವಯಸ್ಸನಲ್ಲೂ ಇಂಥ ವೃತ್ತಿ ಮಾಡ್ತೀಯಲ್ಲ!"

ಆ ಪದಗಳೆ ಮುಖದ ಮೇಲಿನ ಹೊಡೆತಗಳಾದುವು – ಒಂದು, ಎರಡು, ಮೂರು! ಆ ಪದಗಳ ಕರ್ಕಶ ದೂಷಣೆ ಕೇಳಿ, ಕೆನ್ನೆಯನ್ನು ಹರಿದು ಇಬ್ಭಾಗ ಮಾಡು ವಾಗ ಕಣ್ಣುಗಳನ್ನು ಕೀಳುವಾಗ ಆಗುವಷ್ಟು ನೋವಾಯಿತು ತಾಯಿಗೆ.

"ನಾನು? ನಾನು ಕಳ್ಳಿಯಲ್ಲ! ನೀನು ಸುಳ್ಳಾಡ್ತಿದೀಯ!" ಎಂದು ಸಾಧ್ಯ ವಿದ್ದಷ್ಟು ಗಟ್ಟಿಯಾಗಿ ತಾಯಿ ಕೂಗಿದಳು. ಸುತ್ತಲಿದ್ದುದೆಲ್ಲವೂ ಆಕೆಯ ರೋಷದ ದ್ವೇಷದ ಅವಮಾನದ ಬಿರುಗಾಳಿಯಲ್ಲಿ ಹಾರಾಡಿದುವು. ಪೆಟ್ಟಿಗೆಯನ್ನು ಬಿಗಿಯಾಗಿ ಎಳೆದುಕೊಂಡಳಾಕೆ. ಆ ರಭಸಕ್ಕೆ ಅದು ತೆರೆದುಹೋಯಿತು.

"ನೋಡಿ! ಪ್ರತಿಯೊಬ್ಬರೂ ನೋಡಿ!" ಎಂದು ಆಕೆ, ಹಾರಿ ಎದ್ದು ಅವರೆಲ್ಲರ ಮೇಲ್ಗಡೆಯಿಂದ ಒಂದು ಹಿಡಿ ಕರಪತ್ರವನ್ನು ಬೀಸುತ್ತ, ಕೂಗಿ ಕರೆದಳು. ತನ್ನ ಕಿವಿಗಳು ಭೋರ್ಗರೆಯುತ್ತಿದ್ದರೂ ಆಕೆ, ಎಲ್ಲಾ ಕಡೆಗಳಿಂದಲೂ ಓಡಿಬರುತ್ತಿದ್ದ ಜನರ ಉದ್ಗಾರಗಳನ್ನು ಕೇಳಿದಳು.

"ಏನಾಯಿತು?"

"ಅಲ್ಲೊಬ್ಬ – ಗೂಢಚಾರ...."

"ಅದೇನು?"

"ಈಕೆ ಕಳ್ಳಿಯಂತೆ."

"ಅಷ್ಟು ಗೌರವವಾಗಿ ಕಾಣೋ ಹೆಂಗಸು? ಛೆ! ಛೆ!...."

ತನ್ನ ಸುತ್ತಲೂ ನೆರೆಯುತ್ತಿದ್ದ ಜನರನ್ನು ಕಾಣುತ್ತ ಸ್ವಲ್ಪಮಟ್ಟಿಗೆ ಶಾಂತಳಾದ ತಾಯಿ, ಗಟ್ಟಿಯಾದ ಸ್ವರದಲ್ಲಿ ಹೇಳಿದಳು:

"ನಾನು ಕಳ್ಳಿಯಲ್ಲ!"

ಅದೇ ಧ್ವನಿಯಲ್ಲಿ ಆಕೆ ಮುಂದುವರಿಸಿದಳು:

"ನಿನ್ನೆ ರಾಜಕೀಯ ಅಪರಾಧಿಗಳ ವಿಚಾರಣೆಯಾಯ್ತು. ಅವರಲ್ಲಿ ನನ್ನ ಮಗ ವ್ಲಾಸೊವ್ ಒಬ್ಬನಾಗಿದ್ದ. ಆತ ಅಲ್ಲಿ ಒಂದು ಭಾಷಣ ಕೊಟ್ಟ – ಅದು ಇಲ್ಲಿದೆ! ಜನರೆಲ್ಲ ಅದನ್ನೋದಿ ಸತ್ಯವನ್ನ ತಿಳಕೋಬೇಕೂಂತ ಅವರಲ್ಲಿಗೆ ಅದನ್ನ ನಾನು ಒಯ್ತಿದ್ದೇನೆ..."

ಯಾವನೋ ಒಬ್ಬ ಜಾಗರೂಕತೆಯಿಂದ, ಆಕೆಯ ಕೈಯಲ್ಲಿದ್ದ ಕರಪತ್ರಗಳಿಂದ ಒಂದನ್ನು ಎಳೆದ. ಆಕೆ ಅಷ್ಟನ್ನೂ ಗಾಳಿಯಲ್ಲಿ ಬೀಸಿ ಜನರತ್ತ ಹಾರಿಸಿದಳು.

"ಇದಕ್ಕೆ ನಿನಗೆ ಶಿಕ್ಷೆಯಾಗ್ತದೆ!" ಎಂದು ಬೆದರಿದ ಧ್ವನಿಯಲ್ಲಿ ಯಾವನೋ ಕೂಗಿದ.

ಕರಪತ್ರಗಳನ್ನು ಹಾರಿಹಿಡಿದು ಕೋಟುಗಳೊಳಗೂ ಜೇಬುಗಳಿಗೂ ಜನರು ತುರುಕುತ್ತಿದ್ದುದನ್ನು ತಾಯಿ ಕಂಡಳು. ಇದರಿಂದ ಆಕೆ, ಮತ್ತೊಮ್ಮೆ ದೃಢವಾಗಿ ತನ್ನ ಪಾದಗಳ ಮೇಲೆ ನಿಲ್ಲುವಂತಾಯಿತು. ತನ್ನೊಳಗೆ ಬೆಳೆಯುತ್ತಿದ್ದ ಹೆಮ್ಮೆಯ ಸಂತೋಷದ ಅರಿವಿದ್ದು ತಾಯಿ, ಹೆಚ್ಚು ಶಾಂತವಾಗಿಯೂ ಶಕ್ತಿಪೂರ್ಣವಾಗಿಯೂ ಮಾತನಾಡತೊಡಗಿದಳು. ಮಾತನಾಡುತ್ತಿದ್ದಂತೆ ಆಕೆ ಪೆಟ್ಟಿಗೆಯಿಂದ ಕರಪತ್ರಗಳನ್ನು ಒಂದೇಸಮನೆ ಎಳೆದು ತೆಗೆಯುತ್ತಾ, ಎಡಕ್ಕೂ ಬಲಕ್ಕೂ, ಆತುರದಿಂದ ಅವುಗಳನ್ನು ಸೆಳೆದುಕೊಳ್ಳುತ್ತಿದ್ದ ಕೈಗಳತ್ತ ಎಸೆದಳು.

"ನನ್ನ ಮಗನನ್ನೂ ಅವನ ಜತೇಲಿದ್ದೋರನ್ನೂ ಅವರು ಯಾಕೆ ನ್ಯಾಯಸ್ಥಾನಕ್ಕೆ ತಂದರು ಗೊತ್ತೆ? ನಾನು ಹೇಳ್ತೀನಿ. ತಾಯಿಯ ಮಾತನ್ನ, ನರೆಗೂದಲ್ನೋಳ ಮಾತನ್ನ, ನೀವು ನಂಬಬಹುದು. ಎಲ್ಲರಿಗೂ ಅವರು, ಸತ್ಯವನ್ನ ತಿಳಿಸಿ ಹೇಳಿದ ಚಿಕ್ಕ ಕಾರಣಕ್ಕಾಗಿ, ಅವರನ್ನ ನ್ಯಾಯಾಸ್ಥಾನಕ್ಕೆ ತಂದರು! ಈ ಸತ್ಯವನ್ನ ಅಲ್ಲಗಳೆಯೋನು ಒಬ್ಬನೂ ಇಲ್ಲ – ಒಬ್ನೇ ಒಬ್ನೂ ಇಲ್ಲ – ಅನ್ನೋದು ನಿನ್ನೆ ನ್ಯಾಯಸ್ಥಾನದಲ್ಲಿ ನನಗೆ ಗೊತ್ತಾಯ್ತು!"

ಜನರ ಸಂದಣಿ ಹೆಚ್ಚಿತು. ಅವರು ಮೌನವಾಗಿದ್ದರು. ಹೆಂಗಸಿನ ಸುತ್ತಲೂ ಜೀವಂತ ದೇಹಗಳ ವ್ಯೂಹವನ್ನು ರಚಿಸಿದರು.

"ಬಡತನ, ಹಸಿವು, ರೋಗ – ಇದೇ ಈಗ ತಮ್ಮ ಕೆಲಸಕ್ಕೆ ಜನರಿಗೆ ಸಿಗೋ ಪ್ರತಿಫಲ! ಪ್ರತಿಯೊಂದೂ ನಮಗೆ ಇದಿರಾಗಿದೆ. ಜೀವಮಾನವೆಲ್ಲಾ ನಾವು ಪ್ರತಿ ನಿತ್ಯವೂ ನಮ್ಮ ಶಕ್ತಿಯ ಕೊನೇ ಗುಲಗಂಜಿ ತೂಕವನ್ನೂ ಉಪಯೋಗಿಸಿ ದುಡೀ

ತೇವೆ. ಯಾವಾಗಲೂ ಹೊಲಸಾಗಿರ್ತ್ತೇವೆ. ಯಾವಾಗಲೂ ಮೋಸಹೋಗ್ತ್ತೇವೆ! ಬೇರೆಯವರು, ಸಂಕೋಲೆಯಲ್ಲಿ ಕಟ್ಟಿದ ನಾಯಿಯ ಹಾಗೆ ನಮ್ಮನ್ನು ಅಜ್ಞಾನ ದಲ್ಲಿ ಇರಿಸಿ, ತಾವು ನಮ್ಮ ದುಡಿಮೆಯಿಂದ ಎಲ್ಲ ಸುಖವನ್ನೂ ಸೌಕರ್ಯವನ್ನೂ ಪಡೀತಾರೆ. ನಮಗೆ ಏನೂ ಗೊತ್ತಿರೋದಿಲ್ಲ. ನಾವು ದಿಗಿಲುಬೀಳ್ತೇವೆ. ಪ್ರತಿಯೊಂದಕ್ಕೂ ಹೆದರ್ತೇವೆ! ನಮ್ಮ ಬದುಕು, ಬೆಳಕೇ ಹರಿಯದಂಥ ಉದ್ದನೆಯ ಕತ್ತಲಿನ ರಾತ್ರಿಯ ಹಾಗೆ!"

"ಅದು ಸರಿ," ಎಂದು ಯಾರೋ ಮಂದವಾದ ಧ್ವನಿಯಲ್ಲಿ ಉತ್ತರವಿತ್ತರು.

"ಆಕೆಯ ಬಾಯಿ ಮುಚ್ಚಿಸಿ!"

ಜನರ ಗುಂಪಿನ ಹಿಂದೆ ಆ ಗೂಢಚಾರನನ್ನೂ ಇಬ್ಬರು ಪೋಲೀಸರನ್ನೂ ತಾಯಿ ಕಂಡಳು. ಉಳಿದ ಕರಪತ್ರಗಳನ್ನೂ ಕೊಟ್ಟುಬಿಡಲು ಆಕೆ ತವಕಗೊಂಡಳು. ಪೆಟ್ಟಿಗೆಯತ್ತ ಆಕೆಯ ಕೈ ತಿರುಗಿದಾಗ, ಆಗಲೆ ಅಲ್ಲಿದ್ದ ಇನ್ನೊಂದು ಕೈಯನ್ನು ಮುಟ್ಟಿ ದಳು.

"ತಗೊಳ್ಳಿ, ತಗೊಂಡ್ಹೋಗಿ," ಎಂದು ಬಾಗಿದ್ದಂತೆಯೆ ತಾಯಿ ಹೇಳಿದಳು.

"ಚೆದರಿ!" ಎಂದು ಪೋಲೀಸರು, ಜನರನ್ನು ಪಕ್ಕಕ್ಕೆ ತಳ್ಳುತ್ತ ಕೂಗಿದರು.

ಮನಸಿಲ್ಲದ ಮನಸಿನಿಂದ ಗುಂಪು ಸ್ವಲ್ಪ ಚಲಿಸಿತು. ಜನರು ಪೋಲೀಸರಿಗೇ ಒತ್ತಿ ನಿಂತರು. ಅವರು ಮುಂದೆ ಬರುವುದನ್ನು ತಡೆದರು. ಪ್ರಾಯಶಃ ಹಾದಿ ಬಿಡುವುದನ್ನು ಅವರು ಅಪೇಕ್ಷಿಸಲೂ ಇಲ್ಲ. ದಯಾಪೂರ್ಣವಾಗಿದ್ದ ಮುಖದಲ್ಲಿ ವಿಶಾಲವಾದ ಸ್ವಚ್ಛವಾದ ಕಣ್ಣುಗಳಿದ್ದ ನರೆಗೂದಲಿನ ಹೆಂಗಸಿನತ್ತ ಜನರು ಆಕರ್ಷಿ ತರಾದರು. ಅದು ತಡೆಯಲಾಗದ ಆಕರ್ಷಣೆಯಾಗಿತ್ತು. ಬದುಕಿನಲ್ಲಿ ಪ್ರತ್ಯೇಕಿಸ ಲ್ಪಟ್ಟ, ಒಬ್ಬರೊಬ್ಬರಿಂದ ದೂರಕ್ಕೆಸೆಯಲ್ಪಟ್ಟ ಆ ಜನ, ಈಗ ಒಂದು ದೇಹವಾಗಿ ಒಗ್ಗೂಡಿದರು. ಪ್ರಾಯಶಃ ಎಷ್ಟೋ ಹೃದಯಗಳು, ಬದುಕಿನ ಅನ್ಯಾಯದಿಂದ ನೊಂದು, ದೀರ್ಘಕಾಲದಿಂದ ಹುಡುಕುತ್ತಿದ್ದ ಪ್ರಜ್ವಲಿಸುವ ಆ ಮಾತುಗಳನ್ನು, ಅವರೆಲ್ಲರೂ ಆಳವಾದ ಆಸಕ್ತಿಯಿಂದ ಕೇಳಿದರು. ಆಕೆಗೆ ತೀರಾ ಸಮೀಪವಾಗಿ ದ್ದವರು, ತಮ್ಮ ಕಣ್ಣುಗಳನ್ನು ಆಕೆಯ ಕಣ್ಣುಗಳ ಮೇಲೆ ಆತುರದ ತಲ್ಲೀನತೆಯಿಂದ ನೆಟ್ಟು, ಮೌನವಾಗಿ ನಿಂತರು. ಅವರ ಬಿಸಿಯುಸಿರು ತನ್ನ ಮುಖವನ್ನು ತಾಕುತ್ತಿ ದ್ದುದರ ಅನುಭವ ತಾಯಿಗಾಯಿತು.

"ಮುಂದಕ್ಕೆ ಹೋಗು, ಮುದುಕಿ!"

"ಇನ್ನೊಂದು ಕ್ಷಣದಲ್ಲಿ ನಿನ್ನನ್ನ ಹಿಡೀತಾರೆ!"

"ಎಷ್ಟೊಂದು ಧೈರ್ಯವಂತೆ!"

"ಹೊರಡಿ ಇಲ್ಲಿಂದ! ಚೆದರಿ!" ಎಂದು ಪೋಲೀಸರು ಪ್ರಯಾಸದಿಂದಲೆ ಹೆಚ್ಚು ಹೆಚ್ಚು ಸಮೀಪಕ್ಕೆ ಬರುತ್ತ ಕೂಗಿದರು. ತಾಯಿಯ ಎದುರಿಗಿದ್ದ ಜನರು ತೂಗಾಡಿ ಒಬ್ಬರಿಗೊಬ್ಬರು ಅಂಟಿಕೊಂಡರು.

ತನ್ನನ್ನು ತಿಳಿದುಕೊಳ್ಳಲು, ನಂಬಲು, ಅವರು ಸಿದ್ಧರಿದ್ದಂತೆ ತಾಯಿಗೆ ಕಂಡಿತು. ಅವಸರಪಡುತ್ತ, ತನಗೆ ಗೊತ್ತಿದ್ದುದೆಲ್ಲವನ್ನೂ ಅವರಿಗೆ ಹೇಳಲು, ತಾನು ಅನುಭವಿಸಿ ಮನಗಂಡಿದ್ದ ಎಲ್ಲ ವಿಚಾರಗಳನ್ನೂ ತಿಳಿಸಿಕೊಡಲು ಆಕೆ ಬಯಸಿದಳು. ಆ ಯೋಚನೆಗಳೆಲ್ಲ ಸುಲಭವಾಗಿ ಆಕೆಯ ಹೃದಯದ ಆಳದಿಂದ ಎದ್ದು ಒಂದು ಹಾಡಾಗಿ ಮಾರ್ಪಟ್ಟುವು. ಆದರೆ ಅದನ್ನು ಹಾಡಲು ಶಕ್ತವಾದ ಕಂಠ ತನಗಿಲ್ಲವೆಂಬುದನ್ನು ವ್ಯಸನದಿಂದ ತಾಯಿ ಮನಗಂಡಳು. ಆಕೆಯ ಸ್ವರ ಒರಟಾಗಿತ್ತು, ಕಂಪಿಸುತ್ತಿತ್ತು, ಕಡಿಕಡಿದು ಬರುತ್ತಿತ್ತು.

"ನನ್ನ ಮಗನ ಮಾತುಗಳು, ತನ್ನ ಆತ್ಮವನ್ನ ಮಾರದೇ ಇರೋ ಕೂಲಿಕಾರನ ಪ್ರಾಮಾಣಿಕ ಮಾತುಗಳು... ಪ್ರಾಮಾಣಿಕ ಮಾತುಗಳು... ಅವುಗಳ ಕೆಚ್ಚಿನಿಂದಲೇ ನೀವು ಅದನ್ನ ತಿಳೀತೀರಿ!"

ಭಯವನ್ನೂ ಅತ್ಯಾನಂದವನ್ನೂ ತೋರಿಸುವ ಒಂದು ಜೊತೆ ಕಣ್ಣುಗಳು ಆಕೆಯ ಮೇಲೆಯೆ ನೆಟ್ಟಿದ್ದುವು.

ಯಾರೋ ತಾಯಿಯ ಎದೆಗೆ ಹೊಡೆದರು. ಆಕೆ ಬೆಂಚಿನ ಮೇಲೆ ಬಿದ್ದಳು. ಪೋಲೀಸರ ತೋಳುಗಳು ಜನರ ತಲೆಗಳ ಮೇಲ್ಗಡೆ ಬೀಸಿದುವು. ಜನರ ಕಾಲರುಗಳನ್ನೂ ಭುಜಗಳನ್ನೂ ಅಮುಕಿದುವು. ಜನರನ್ನು ಒಂದೆಡೆಗೆ ತಳ್ಳಿದುವು. ಟೋಪಿಗಳನ್ನು ಕಸಿದುಕೊಂಡು ಕೊಠಡಿಯ ಇನ್ನೊಂದು ಭಾಗಕ್ಕೆ ಎಸೆದುವು. ತಾಯಿಯ ಕಣ್ಣಿಗೆ ಪ್ರತಿಯೊಂದೂ ಕರಿದಾಗಿ ಸುತ್ತು ಸುತ್ತು ಬರುತ್ತಿದ್ದಂತೆ ಕಂಡಿತು. ಆದರೆ ಆಯಾಸವನ್ನು ಜಯಿಸಿ ತಾಯಿ, ತನ್ನಲ್ಲಿ ಉಳಿದಿದ್ದ ಸಾಮರ್ಥ್ಯದ ಸ್ವರದಲ್ಲಿ ಕೂಗಿದಳು:

"ಬಲವಾದ ಶಕ್ತಿಯಾಗಿ ಒಂದುಗೂಡಿ, ಜನರೇ!"

ಪೋಲೀಸನೊಬ್ಬ ತನ್ನ ಅಗಲವಾದ ಮಾಂಸ ತುಂಬಿದ ಕೈಯಿಂದ ತಾಯಿಯ ಕಾಲರನ್ನು ಹಿಡಿದು, ಆಕೆಯನ್ನು ಅಲುಗಿಸಿದ.

"ಮುಚ್ಚು ಬಾಯಿ."

ಆಕೆಯ ತಲೆ ಗೋಡೆಗೆ ಬಡಿಯಿತು. ಒಂದು ಕ್ಷಣ, ಭಯದ ಮೋಡದಿಂದ ಆಕೆಯ ಹೃದಯ ಮುಸುಕಾಯಿತು. ಆದರೆ, ಬಳಿಕ ಮತ್ತೊಮ್ಮೆ ಮೋಡವನ್ನು ಚೆದರಿಸುತ್ತ ಪ್ರಬಲವಾದ ಜ್ವಾಲೆಯಾಗಿ ಹೊರಹೊಮ್ಮಿತು.

"ನಡೀರಿ ಇಲ್ಲಿಂದ!" ಎಂದು ಪೋಲೀಸನವನು ಜನರಿಗೆ ಗದರಿಸಿದ.

"ಯಾವುದೂ ನಿಮ್ಮನ್ನು ಭಯಪಡಿಸದಿರಲಿ! ನೀವು ಬದುಕ್ತಿರೋ ಜೀವನಕ್ಕಿಂತ ಹೆಚ್ಚು ಕಹಿಯಾದದ್ದು ಇನ್ನೊಂದು ಇರಲಾರದು!..."

"ಮುಚ್ಚೀ ಬಾಯಿ!"

ಪೋಲೀಸನು ಆಕೆಯ ತೋಳನ್ನು ಹಿಡಿದು ನೂಕಿದ: ಇನ್ನೊಬ್ಬ ಪೋಲೀಸನು ಇನ್ನೊಂದು ತೋಳನ್ನು ಹಿಡಿದ. ಹಾಗೆ ಇಬ್ಬರು ಆಕೆಯನ್ನು ಎಳೆಯತೊಡಗಿದರು.

"....ಪ್ರತಿನಿತ್ಯವೂ ನಿಮ್ಮ ಹೃದಯವನ್ನ ತಿಂದು ಎದೆಗಳನ್ನ ಕಡಿಯೋ ಕಹಿಗಿಂತ...."

ಗೂಢಚಾರ ತಾಯಿಯ ಮುಂದಿದ್ದು, ಆಕೆಯ ಮುಖದೆದುರು ಮುಷ್ಟಿಯಲುಗಿಸುತ್ತಾ ಕೂಗಾಡಿದ:

"ಬಾಯ್ಮುಚ್ಚು, ನಾಯಿ!"

ಆಕೆಯ ಕಣ್ಣುಗಳು ಮಿಂಚಿ ಮಂಜಾದುವು. ದವಡೆ ಕಂಪಿಸಿತು. ನೆಲದ ಜಾರುತಿದ್ದ ಕಲ್ಲಿನ ಮೇಲೆ ಪಾದಗಳನ್ನು ಭದ್ರವಾಗಿ ಇಡುತ್ತ ಆಕೆ ಗರ್ಜಿಸಿದಳು:

"ಅವರು ನನ್ನ ಆತ್ಮವನ್ನ – ಜೀವಂತ ಆತ್ಮವನ್ನ – ಕೊಲ್ಲಲಾರರು!"

"ಥೂ ನಾಯಿ!"

ಗೂಢಚಾರ ಆಕೆಯ ಮುಖಕ್ಕೆ ಹೊಡೆದ.

ಯಾವನೋ ಒಬ್ಬ ದ್ವೇಷದ ಧ್ವನಿಯಲ್ಲಿ ಹೇಳಿದ:

"ಸರಿಯಾಯ್ತು – ಮುದಿ ಗೂಬೆ!"

ಕರಿದಾದ ಕೆಂಪಾದ ಯಾವುದೋ ಎದುರು ಬಂದು, ತಾಯಿಗೆ ಕ್ಷಣಕಾಲ ಪ್ರಜ್ಞೆ ತಪ್ಪಿದಂತಾಯಿತು. ರಕ್ತದ ಉಪ್ಪಿನ ರುಚಿ ಆಕೆಯ ಬಾಯಿಯನ್ನು ತುಂಬಿತು,

ಸಣ್ಣ ಪುಟ್ಟ ಉದ್ಗಾರಗಳ ಸದ್ದಿನಿಂದ ತಾಯಿಗೆ ಎಚ್ಚರವಾಯಿತು.

"ಮುಟ್ಬೇಡಿ ಆಕೇನ!"

"ಬನ್ನಿರೋ ಮುಂದೆ!"

"ಥೂ ದುರಾತ್ಮ!"

"ಕೊಡಿ ಅವನಿಗೆ!"

"ನಮ್ಮ ಮನಸ್ಸನ್ನ ರಕ್ತಮಯ ಮಾಡೋದು ಅವರಿಂದ ಆಗುತ್ತೇನು?"

ಪೋಲೀಸರು ಆಕೆಯ ಬೆನ್ನಿಗೆ ಗುದ್ದಿ ಕತ್ತನ್ನು ಹಿಡಿದೂ ತಳ್ಳಿದರು. ಭುಜದ ಮೇಲೂ ತಲೆಯ ಮೇಲೂ ಹೊಡೆದರು. ಕೂಗುಗಳ, ರೋದನದ, ಸಿಳ್ಳುಗಳ ಸುಂಟರಗಾಳಿಯಲ್ಲಿ ಪ್ರತಿಯೊಂದೂ ಮಿಂಚಿತು, ಸುತ್ತುವರಿಯಿತು. ಮಂದವಾದ್ದೇನೋ ಕರ್ಣಭೇದಕವಾದ್ದೇನೋ ಆಕೆಯ ಕಿವಿಗಳಿಗೆ ಬಡೆಯಿತು, ಗಂಟಲನ್ನು ತುಂಬಿತು, ಉಸಿರು ಕಟ್ಟಿಸಿತು. ನೆಲ ಬಾಯ್ಬಿಟ್ಟಂತಾಯ್ತು. ಮೊಣಕಾಲುಗಳು ಕುಸಿದುವು. ನೋವಿನ ತೀಕ್ಷ್ಣ ಇರಿತಗಳ ಕೆಳಗೆ ಮುದುಡಿಕೊಂಡು, ದೇಹ ಭಾರವಾಗಿ, ಅಸಹಾಯತೆಯಿಂದ ತೂರಾಡಿತು. ಆದರೆ ಕಣ್ಣುಗಳ ಹೊಳಪು ಹೋಗಲಿಲ್ಲ. ಬೇರೆ ಕಣ್ಣುಗಳನ್ನು ಅವು ಸಂಧಿಸಿದುವು. ಆ ಕಣ್ಣುಗಳೆಲ್ಲ, ಆಕೆಗೆ ಬಲು ಪರಿಚಿತವಾದ, ಆಕೆಯ ಹೃದಯಕ್ಕೆ ಬಲು ಪ್ರಿಯವಾದ, ಶುಭ್ರವಾದ ಬಲಶಾಲಿಯಾದ ತೇಜಸ್ಸಿನಿಂದ ಉರಿದುವು.

ಅವರು ಒಂದು ಬಾಗಿಲಿನೊಳಕ್ಕೆ ಆಕೆಯನ್ನು ತಳ್ಳಿದರು.

ಒಂದು ಕೈಯನ್ನು ಸೆಳೆದು ಬಿಡಿಸಿಕೊಂಡು ತಾಯಿ, ಬಾಗಿಲ ಅಗಣಿಯನ್ನು ಹಿಡಿದುಕೊಂಡಳು.

"ರಕ್ತಸಾಗರ ಕೂಡಾ ಸತ್ಯವನ್ನ ಮುಳುಗಿಸಲಾರದು!"

ಆ ಕೈಗೆ ಅವರು ಹೊಡೆದರು.

"ಮೂರ್ಖರೆ! ನಾವು ನಿಮ್ಮನ್ನ ದ್ವೇಷಿಸೋ ಹಾಗೆ ಮಾತ್ರ ನೀವು ಮಾಡ ಬಲ್ಲಿರಿ! ಇದೆಲ್ಲಾ ನಿಮ್ಮ ತಲೆ ಮೇಲೆಯೇ ಬರತ್ತೆ!"

ಒಬ್ಬ ಪೋಲೀಸನು ಆಕೆಯ ಕತ್ತನ್ನು ಹಿಡಿದು ಹಿಸುಕತೊಡಗಿದ.

"ನೀಚರೇ...." ಎಂದು ಆಕೆ ಉಸಿರಿಗಾಗಿ ಚಡಪಡಿಸಿದಳು.

ಉತ್ತರ ರೂಪವಾಗಿ ಯಾರೋ ಗಟ್ಟಿಯಾಗಿ ಬಿಕ್ಕಿ ಅತ್ತರು.

1907

# ಹಿನ್ನುಡಿ

ನಾವು ಗೋರ್ಕಿಯವರ ಕಾದಂಬರಿ 'ತಾಯಿ'ಯ ನಾಯಕರುಗಳಿಂದ ಬೀಳ್ಕೊಳ್ಳುತ್ತಿದ್ದೇವೆ. ಇದೀಗ ಅವರಿಗೆ ಕಷ್ಟದ ಸಮಯ. ಪಾವೆಲ್ ವ್ಲಾಸೊವ್‌ನಿಗೆ ಜೀವಾವಧಿ ಶಿಕ್ಷೆ ವಿಧಿಸಿ ಸೈಬೀರಿಯಾಕ್ಕೆ ಗಡೀಪಾರು ಮಾಡಲಿದ್ದಾರೆ; ಅವನ ತಾಯಿ ನೀಲೊವ್ನ ನಿಷಿದ್ಧ ಸಾಹಿತ್ಯವಿರುವ, ನ್ಯಾಯಾಲಯದಲ್ಲಿ ಪಾವೆಲ್ ಮಾಡಿದ ಭಾಷಣದ ಕರಪತ್ರಗಳಿರುವ, ಸೂಟ್‌ಕೇಸಿನೊಂದಿಗೆ ಪೋಲೀಸರಿಗೆ ಸಿಕ್ಕಿಬಿದ್ದಿದ್ದಾಳೆ. ಸುತ್ತ ನೆರೆದ ಜನರಿಗೆಲ್ಲ ಅವಳು ಜೀವನದ ಬಗೆಗೆ ಸತ್ಯ ಸಂಗತಿ ತಿಳಿಸುತ್ತಿರುವಾಗಲೇ ಪೋಲೀಸರು ಅವಳನ್ನು ಬಯ್ದು ಅಪಮಾನಕ್ಕೆ ಗುರಿಪಡಿಸುತ್ತಾರೆ, ಥಳಿಸುತ್ತಾರೆ. ತನ್ನನ್ನು ಹಿಂಸಿಸುತ್ತಿರುವವರತ್ತ ಅವಳು ಕೂಗಿ ಹೇಳುತ್ತಾಳೆ: "ರಕ್ತ ಸಾಗರ ಕೂಡಾ ಸತ್ಯವನ್ನ ಮುಳುಗಿಸಲಾರದ್ದು ! ಮೂರ್ಖರೆ ! ನಾವು ನಿಮ್ಮನ್ನ ದ್ವೇಷಿಸೋ ಹಾಗೆ ಮಾತ್ರ ನೀವು ಮಾಡಬಲ್ಲಿರಿ !"

ಆದರೆ ಕಾದಂಬರಿಯ ಮುಖ್ಯ ಪಾತ್ರಗಳ ಮಾತೃಕೆಗಳಾದ ಪ್ಯೋತರ್ ಜಲೋಮೊವ್ ಮತ್ತು ಅವನ ತಾಯಿ ಆನ್ನ ಕಿರೀಲ್ಲೊವ್ನರ ಗತಿ ನಿಜ ಜೀವನದಲ್ಲಿ ಏನಾಗಿದ್ದಿತು ?

ಪ್ಯೋತರ್ ಜಲೋಮೊವ್ ದೀರ್ಘ ಕಾಲ ಬಾಳಿ 1955ರಲ್ಲಿ 78ನೆಯ ವಯಸ್ಸಿನಲ್ಲಿ ಮೃತನಾದ. ಅವನ ತಾಯಿ ಆನ್ನ ಕಿರೀಲ್ಲೊವ್ನಳೂ ದೀರ್ಘ ಕಾಲ ಬಾಳಿದ್ದಳು. ಅವಳ ಬಗೆಗೆ ಗೋರ್ಕಿ ಹೀಗೆ ಬರೆದಿದ್ದಾರೆ: "....ನೀಲೊವ್ನಳು ಪ್ಯೋತರ್ ಜಲೋಮೊವ್‌ನ ತಾಯಿಯ ಭಾವಚಿತ್ರ. 1902ರಲ್ಲಿ ಸೋರ್ಮೊವೊನಲ್ಲಿ ಮೇ ದಿನದ ಪ್ರದರ್ಶನ ಏರ್ಪಡಿಸಿದುದಕ್ಕಾಗಿ ಅವನನ್ನು ಶಿಕ್ಷಿಸಲಾಯಿತು. ಅವನ ತಾಯಿಯೂ ಕ್ರಾಂತಿಕಾರಿ ಸಂಘಟನೆಯಲ್ಲಿ ಕೆಲಸ ಮಾಡುತ್ತಿದ್ದಳು. ಅವಳು ಯಾತ್ರಾರ್ಥಿಯ ವೇಷ ಧರಿಸಿಕೊಂಡು ಕ್ರಾಂತಿಕಾರಿ ಸಾಹಿತ್ಯವನ್ನು ಸ್ಥಳದಿಂದ ಸ್ಥಳಕ್ಕೆ ಒಯ್ಯುತ್ತಿದ್ದಳು..."

ಆನ್ನ ಕಿರೀಲ್ಲೊವ್ನ 1849ರಲ್ಲಿ ಮೋಚಿಯೊಬ್ಬನ ಕುಟುಂಬದಲ್ಲಿ ಜನಿಸಿದಳು. ಅವಳ ಬಾಳು ದುಃಖಮಯವಾಗಿದ್ದಿತು, ಅದರಲ್ಲೂ ಅವಳ ಗಂಡನ ಸಾವಿನನಂತರ.

ಅವಳು ಏಳು ಮಕ್ಕಳನ್ನು ಸಾಕಿ ಸಲಹಬೇಕಾಗಿತ್ತು. ಅವರು "ವಿಧವೆಯರ ಗೃಹ" ವೊಂದರ ನೆಲಮಾಳಿಗೆಯಲ್ಲಿ ಥಂಡಿಯಿಂದ ಕೊರೆಯುವ ಕತ್ತಲ ಕೋಣೆ ಯಲ್ಲಿ ವಾಸಿಸುತ್ತಿದ್ದರು. ತಾಯಿಯ ಕಾರ್ಯಶೀಲತೆ, ದೃಢ ನಿರ್ಧಾರವಷ್ಟೆ ಮಕ್ಕ ಳನ್ನು ಬದುಕಿಸಿತು. ಮಕ್ಕಳು ಬೆಳೆದರು. ಹಿರಿಯವ ಕೆಲಸ ಮಾಡತೊಡಗಿದ. ಕಿರಿ ಯವ ಶಾಲೆಗೆ ಹೋದ. ಪ್ಯೋತರ್ ಕ್ರಾಂತಿಕಾರಿ ವೃಂದವೊಂದನ್ನು ಸೇರಿದ. ಅವನ ಸೋದರಿ ಹೇಳುವಂತೆ "ನಮ್ಮ ಕುಟುಂಬದಲ್ಲಿ ಚೇತೋಹಾರಿಯಾದ ಗಾಳಿ ಬೀಸ ತೊಡಗಿತು." ಬೇಗನೆಯೇ ಜಲೋಮೊವ್ ಕುಟುಂಬದ ಎಲ್ಲ ಸದಸ್ಯರೂ ಕ್ರಾಂತಿ ಕಾರಿ ಚಳವಳಿಯಲ್ಲಿ ಭಾಗವಹಿಸತೊಡಗಿದರು.

ಅಕ್ಟೋಬರ್ ಕ್ರಾಂತಿಯ ನಂತರ ಆನ್ನ ಕಿರೀಲ್ಲೋವ್ನ ತನ್ನ ಮಕ್ಕಳ ಮನೆ ಯಲ್ಲಿ, ಕೆಲಕಾಲ ಅತ್ಯಂತ ಕಿರಿಯ ಮಗಳೊಂದಿಗೆ ಲೆನಿನ್‌ಗ್ರಾದ್‌ನಲ್ಲಿ, ಮತ್ತೆ ಕೆಲಕಾಲ ಸೋರ್ಮೋವೊನಲ್ಲಿ ತನ್ನ ಗಂಡುಮಕ್ಕಳ ಮನೆಯಲ್ಲಿ ವಾಸಿಸುತ್ತಿದ್ದಳು.

ಅವಳು ಸಣ್ಣ ಆಕೃತಿಯ ಚುರುಕಾದ ಕಣ್ಣುಗಳ ಆತ್ಮೀಯ ಮುಗುಳ್ನಗೆಯ ವೃದ್ಧಮಹಿಳೆ. ಸಾಮಾನ್ಯವಾಗಿ ನರೆಗೂದಲ ತಲೆಯ ಮೇಲೆ ಕಪ್ಪು ಕಸೂತಿಯ ಹಳೆ ಮಾದರಿಯ ಸ್ಕಾರ್ಫ್ ಕಟ್ಟಿಕೊಳ್ಳುತ್ತಿದ್ದಳು – ಲೆನಿನ್‌ಗ್ರಾದ್‌ನಲ್ಲಿ ಉರೀತ್‌ಸ್ಕಿ ಹೆಸರಿನ ಕಾರ್ಖಾನೆ ಕಾರ್ಮಿಕರು, ನೀಝ್ನಿ-ನೋವ್ಗೊರೊದ್‌ನ ಶಾಲಾಮಕ್ಕಳು, ಸೋರ್ಮೋವೊ ಕಾರ್ಮಿಕರು, ಅವಳನ್ನು ಕಂಡು ಕೇಳಿದಂಥವರೆಲ್ಲ, ಅವಳನ್ನು ನೆನ ಪಿನಲ್ಲಿಟ್ಟಿರುವುದು ಹೀಗೆಯೇ. ಇವರಿಗೆಲ್ಲ ಆಕೆ ಸರಳವಾದ ರೀತಿಯಲ್ಲಿ ಗತಕಾಲದ ಬಗೆಗೆ, ತನ್ನ ಕ್ರಾಂತಿಕಾರಿ ಕಾರ್ಯದ ಬಗೆಗೆ, ತನ್ನ ಮಗನ ಬಗೆಗೆ, ಹೇಳುತ್ತಿದ್ದಳು.

ಆನ್ನ ಕಿರೀಲ್ಲೋವ್ನ 1938ರಲ್ಲಿ ಮೃತಳಾದಳು.

ಇನ್ನು ಪ್ಯೋತರ್ ಜಲೋಮೊವ್‌ನ ವಿಷಯಕ್ಕೆ ಹಿಂದಿರುಗೋಣ. 1903ರಲ್ಲಿ ತ್ಸಾರಿಸ್ಟ್ ನ್ಯಾಯಾಲಯ ವಿಧಿಸಿದ ಶಿಕ್ಷೆಗನುಗುಣವಾಗಿ ಅವನನ್ನು ಸೈಬೀರಿಯಾಕ್ಕೆ ಗಡೀಪಾರು ಮಾಡಲಾಯಿತು. ಅಲ್ಲಿಗೆ ಅವನು ನಡೆದೇ ಹೋಗಬೇಕಾಯಿತು. ಒಂದು ವರ್ಷ ಕಾಲ ನಡೆದ ನಂತರ ಅವನು ಯೆನಿಸೇಯ್ ನದಿ ಸಮೀಪಿಸಿದ. ಅಲ್ಲಿ ಕ್ರಸ್ನೊ ಯಾರ್ಸ್ಕ್‌ನಿಂದ 300 ಕಿ. ಮೀ. ದೂರದಲ್ಲಿರುವ ಮಕ್ಲಾಕೊವ್ಕ ಎಂಬ ಪುಟ್ಟ ಹಳ್ಳಿ ಯಲ್ಲಿ ಅವನು ನೆಲಸಿದ.... "ನಾನು ಎರಡು ವರ್ಷ ಈ ಗಡೀಪಾರು ಶಿಕ್ಷೆ ಅನು ಭವಿಸುತ್ತ ಕಳೆದೆ. ಸ್ಥಳೀಯ ರೈತರುಗಳ ಮಧ್ಯೆ ಕ್ರಾಂತಿಕಾರಿ ವಿಚಾರಗಳ ಪ್ರಚಾರ ಮಾಡಿದೆ.... ಗೋರ್ಕಿಯವರು ಪ್ರತಿ ತಿಂಗಳೂ ನನಗೆ ಎಂಟು ರೂಬಲ್ ಕಳುಹಿ ಸುತ್ತಿದ್ದರು. ಆದರೆ ಅದನ್ನು ಪೋಲೀಸ್ ಇನ್‌ಸ್ಪೆಕ್ಟರ್‌ನೇ ಜೇಬಿಗೆ ಬಿಡುತ್ತಿದ್ದ. ನಾನು ಉಪವಾಸದಿಂದ ನರಳುತ್ತಿದ್ದೆ, ರಕ್ತಪಿತ್ತ ವ್ಯಾಧಿಗೆ ತುತ್ತಾದೆ...." ಎಂದು ಪ್ಯೋತರ್ ಜಲೋಮೊವ್ ನೆನಪು ಮಾಡಿಕೊಂಡು ಹೇಳಿದನು.

1904ರ ಮಾರ್ಚ್ ತಿಂಗಳ ಹೊಂಬಿಸಿಲಿನ ಒಂದು ಪ್ರಾತಃಕಾಲ ಪ್ಯೋತರ್ ನಿಗೆ ಉಜ್ವಲ ದಿನದ ಆರಂಭವಾಗಿದ್ದಿತು. ಅಂದು ಬೆಳಿಗ್ಗೆ ಅವನು ತನ್ನ ಕೋಣೆ

ಯಲ್ಲೇ ಕುಳಿತು ನೀರ್ಗಲ್ಲ ಜಾರುಮರವನ್ನ ತಯಾರಿಸುತ್ತಿದ್ದ. "ನನ್ನ ಹೃದಯ ನಿಧಾನವಾಗಿ ಸಮಾನ ಸ್ಥಾಯಿಯಲ್ಲಿ ಮಿಡಿಯುತ್ತಿತ್ತು. ಆಗ ಇದ್ದಕ್ಕಿದ್ದಂತೆ ಬಾಗಿಲು ತೆರೆಯಿತು. ಅಳಿಲು – ತುಪ್ಪುಳದ ಹಳೆಯ ಕೋಟು ತೊಟ್ಟ ಜೊಸೆಫೀನ ಎದುವಾ ರ್ದೊವ್ನ – ನನ್ನ ಕೋಣೆ ಪ್ರವೇಶಿಸಿದಳು. ಆಕೆ ಸಹಸ್ರಾರು ಕಿ. ಮೀ. ಪ್ರಯಾಣಮಾಡಿ ನನ್ನನ್ನು ಕಾಣಲೆಂದೇ ಬಂದಿದ್ದಳು."

ಕ್ರಾಂತಿಕಾರಿ ಚಟುವಟಿಕೆಗಳನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡಿದ್ದ ಈ ಇಬ್ಬರು ಪ್ರಣಯಿಗಳ ಪ್ರೇಮಜೀವನ ಕಷ್ಟತರವಾಗಿತ್ತು. ಪ್ಯೋತರ್ ಈ ಎಳೆಯ ಮಾಸ್ಕೋ ಅಧ್ಯಾಪಕಿ ಜೊಸೆಫೀನ ಗಷೇರ್‌ಳನ್ನು (ಹುಟ್ಟಿನಲ್ಲಿ ಫ್ರೆಂಚ್ ದೇಶೀಯಳು) 1901ರಲ್ಲಿ ಮೊದಲು ಸಂಧಿಸಿದ. ಅನಂತರ ಅವರಿಬ್ಬರು ಕಾರ್ಮಿಕರ ಸಭೆಗಳಲ್ಲಿ, ನೀಝ್ನಿ-ನೋವ್ಗೊರೊದ್‌ನ ಬೀದಿಗಳಲ್ಲಿ ಆಗಾಗ್ಗೆ ಸಂಧಿಸುತ್ತಿದ್ದರು. ಆದರೆ ತಮ್ಮ ಭಾವನೆಗಳನ್ನು ತಿಳಿಯಪಡಿಸಲು ಇಬ್ಬರಿಗೂ ಧೈರ್ಯವಿರಲಿಲ್ಲ. ಪ್ಯೋತರ್‌ನು ಬಂಧಿತನಾಗಿ ವಿಚಾರಣೆಗೆ ಕಾದು ಮಾಸ್ಕೋದ ಬುತೀರ್‌ಸ್ಕಯ ಜೈಲಿನಲ್ಲಿ ಇದ್ದಾಗಲಷ್ಟೆ ಜೊಸೆಫೀನ ಅವನ ತಾಯಿಯೊಂದಿಗೆ ಅವನನ್ನು ಕಾಣಲು ಅವನ "ಮದವಣಗಿತ್ತಿ" ಯಾಗಿ ಬಂದಿದ್ದಳು....

ಗೋರ್ಕಿಯವರ ಸಹಾಯದಿಂದ ಜಲೋಮೊವ್ ಗಡೀಪಾರಿನಿಂದ ತಪ್ಪಿಸಿಕೊಂಡ. ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ ಬೋಲ್ಷೆವಿಕ್‌ರ ನ್ಯಾಯಬಾಹಿರ ಚಳವಳಿಯಲ್ಲಿ ಕೆಲಸಮಾಡಿದ. 1905ರ ಕ್ರಾಂತಿಯ ಸಮಯದಲ್ಲಿ ಮಾಸ್ಕೋದಲ್ಲಿ ಕಾರ್ಮಿಕರ ಮಿಲಿಟರಿ ದಳಗಳನ್ನು ಸಂಘಟಿಸಿದ.

ಗೋರ್ಕಿ ಹಾಗೂ ಪ್ಯೋತರ್ ಜಲೋಮೊವ್‌ರ ಮಧ್ಯೆ ಮೊದಲ ಭೇಟಿ ನಡೆದುದು 1905ರಲ್ಲಿ ಸೇಂಟ್ ಪೀಟರ್ಸ್‌ಬರ್ಗ್ ಬಳಿ ಕ್ವಕ್ಕಾಲಾದಲ್ಲಿದ್ದ ಗೋರ್ಕಿಯವರ ಬೇಸಿಗೆಮನೆಯಲ್ಲಿ. ಭಾವೀ ಕಾದಂಬರಿಯ ಕರ್ತೃವೂ ಭಾವೀ ಪಾವೆಲ್ ವ್ಲಾಸೊವ್‌ನ ಮಾತೃಕೆಯೂ ಆಗಲೇ ಪರಸ್ಪರ ಪರಿಚಿತರಾಗಿದ್ದರು, ಆದರೆ ವೈಯಕ್ತಿಕವಾಗಿ ತಿಳಿದಿರಲಿಲ್ಲ. ಸೋರ್ಮೊವೊ ಮೇ ದಿನದ ಪ್ರದರ್ಶನಕ್ಕೆ ಮುನ್ನವೇ ಗೋರ್ಕಿಯವರು ಪ್ಯೋತರ್ ಜಲೋಮೊವ್‌ನನ್ನು ಸಂಧಿಸಬಯಸಿದ್ದರು. ಆದರೆ ಪ್ಯೋತರ್‌ನೇ ಅವರಿಗೆ ಅಪಾಯ ತಂದೊಡ್ಡ ಬಯಸಲಿಲ್ಲ. ಏಕೆಂದರೆ ಗೋರ್ಕಿಯವರ ಮೇಲೆ ಪೋಲೀಸರು ಆಗಲೇ ಕಣ್ಣಿಟ್ಟಿದ್ದರು, ಆ ಕ್ರಾಂತಿಕಾರಿ ಲೇಖಕರ ಕಾರ್ಯಕ್ಕೆ ಭಂಗ ತರಲು ಯಾವುದಾದರೂ ನೆಪಕ್ಕಾಗಿ ಕಾಯುತ್ತಿದ್ದರು ಎಂಬುದನ್ನು ಅವನು ತಿಳಿದಿದ್ದನು. ಮೇ ದಿನದ ಪ್ರದರ್ಶನ ಹಾಗೂ ಅದರ ನಾಯಕರ ಬಂಧನದ ನಂತರ ಗೋರ್ಕಿಯವರು ಜಲೋಮೊವ್‌ನಿಗೂ ಅವನ ಸಂಗಾತಿಗಳಿಗೂ ಸಹಾಯ ಮಾಡಿದರು. ಪ್ಯೋತರ್‌ನ ತಾಯಿ ಆನ್ನ ಜಲೋಮೊವಳ ಮೂಲಕ ಅವರು ನೀಝ್ನಿ-ನೋವ್ಗೊರೊದ್‌ನ ತಮ್ಮ ಸಹದೇಶೀಯರಿಗೆ ನೆರವಿನ ಭರವಸೆ ನೀಡಿದರು. ಪ್ರತಿ ತಿಂಗಳೂ ಅವರು ಪ್ಯೋತರ್‌ನಿಗೆ ಸೈಬೀರಿಯಾಕ್ಕೆ ಹಣ ಕಳುಹಿಸುವುದನ್ನು ಎಂದೂ ಮರೆ

ಯಲಿಲ್ಲ. ಜಲೋಮೊವ್‌ರ ಕುಟುಂಬದ ಕಷ್ಟಗಳ ಬಗೆಗೆ ತಿಳಿದು ಬಂದಾಗ ಅವರು ತಾವು ಕಳುಹಿಸುತ್ತಿದ್ದ ಹಣದ ಪ್ರಮಾಣವನ್ನು ಇಮ್ಮಡಿಗೊಳಿಸಿದರು. ಕೊನೆಯಲ್ಲಿ ಪ್ಯೋತರ್‌ನಿಗೆ ತಪ್ಪಿಸಿಕೊಳ್ಳಲು ನೆರವಾಗಲೆಂದು 300 ರೂಬಲ್ಲುಗಳನ್ನು ಕಳುಹಿಸಿಕೊಟ್ಟರು.

ಕೊನೆಗೆ ಗಡೀಪಾರಿನಿಂದ ತಪ್ಪಿಸಿಕೊಂಡು ಬಂದವನು ಈಗ ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿದ್ದಾನೆ. ಅವನು ಪ್ರಥಮತಃ ಭೇಟಿ ಮಾಡಿದವರಲ್ಲಿ ಗೋರ್ಕಿಯವರೂ ಒಬ್ಬರಾಗಿದ್ದರು.

ಗೋರ್ಕಿಯವರ ಮನೆಗೆ ಬಂದ "ಸುಳುವು" ನೀಡಬಯಸದೆ ಪ್ಯೋತರ್‌ನು ಸ್ಟೇಷನ್ ಬರುವ ಮುನ್ನವೇ ರೈಲಿನಿಂದಿಳಿದು ಒಂದು ಕಾಡು ಹೊಕ್ಕನು. ಅಲ್ಲಿಂದ ಅವನು ಲೇಖಕರ ಬೇಸಿಗೆ ಬಂಗಲೆಗೆ ಹೋದನು. ಅಲ್ಲಿ ಅಂಗಳದಲ್ಲಿ ಎತ್ತರದ ನೀಳ ವ್ಯಕ್ತಿಯೊಬ್ಬರು ನಿಂತಿದ್ದರು. ಭಾವಚಿತ್ರ ನೋಡಿದ್ದ ಅವನಿಗೆ ಅವರು ಯಾರೆಂಬುದು ಕೂಡಲೇ ತಿಳಿಯಿತು.

ಅಲೆಕ್ಸೇಯ್ ಮಕ್ಸೀಮೊವಿಚ್ ಎಂದು ಅವರನ್ನು ಸಂಬೋಧಿಸಿ ತಾನು ಯಾರೆಂದು ತನ್ನ ಹೆಸರನ್ನೂ ತಿಳಿಸಿದ.

ಗೋರ್ಕಿಯವರು ಕೂಡಲೇ ಮುಂದಾಗಿ ತಮ್ಮ ಅತಿಥಿಯನ್ನು ಸಂಧಿಸುತ್ತಾರೆ, ಮೋಹಕ ನಗೆ ಬೀರುತ್ತಾರೆ. ಈ ಸಹದೇಶೀಯರು ಪರಸ್ಪರರನ್ನು ಆಲಂಗಿಸಿಕೊಳ್ಳುತ್ತಾರೆ. ಆತಿಥೇಯ ಮನೆಗೆ ಬಂದ ಅತಿಥಿಯನ್ನು ಮುಡಿಯಿಂದ ಅಡಿಯವರೆಗೆ ನೋಡುತ್ತ, "ಓಹ್, ಹಾಗಾದರೆ ಇದೇಯೋ ನೀನು!" ಎಂದು ಉದ್ಗರಿಸುತ್ತಾರೆ.

ಮನೆಯು ಒಳಹೊಕ್ಕು ಸುಖಾಸೀನರಾದ ಕೂಡಲೇ ಇಬ್ಬರೂ ಸಾವಧಾನವಾಗಿ ಮಾತುಕತೆಗಳಲ್ಲಿ ತೊಡಗುತ್ತಾರೆ. ಗೋರ್ಕಿಯವರು ವೃತ್ತಿ-ಸಹಜ ರೀತಿಯಲ್ಲಿ ಪ್ಯೋತರ್‌ನನ್ನು ಅವನ ಜೀವನ, ತಾಯಿತಂದೆ, ಕ್ರಾಂತಿಕಾರಿ ಚಟುವಟಿಕೆ, ಸೋರ್ಮೋವೊ ಪ್ರದರ್ಶನ ಇತ್ಯಾದಿ ವಿವರಗಳನ್ನೆಲ್ಲ ಕೇಳುತ್ತಾರೆ. ಸುದೀರ್ಘ ಮಾತುಕತೆಗಳಾದನಂತರ ಅವರು ಅಗಲಿದಾಗ ಅತಿಸನಿಹದ ಸ್ನೇಹಿತರಾಗಿರುತ್ತಾರೆ, ಮತ್ತೆ ಸಂಧಿಸಲು ನಿರ್ಧರಿಸುತ್ತಾರೆ. ಅದೇ ಸಮಯದಲ್ಲಿ ಗೋರ್ಕಿ ತಮ್ಮ ಮಿತ್ರರೊಬ್ಬರಿಗೆ ಪ್ಯೋತರ್‌ನ ಬಗೆಗೆ ಹೀಗೆ ಬರೆದರು: "ಸೋರ್ಮೋವೊದಿಂದ ಒಬ್ಬಾತ ನನ್ನ ಬಳಿಗೆ ಆಗಾಗ್ಗೆ ಬರುತ್ತಿರುತ್ತಾನೆ. ಎಂಥ ಅದ್ಭುತ ಯುವಕ ಅವನು!"

ಪ್ಯೋತರ್‌ನು ಪಾರ್ಟಿ ನೀಡಿದ ಅನೇಕ ಕಾರ್ಯಭಾರಗಳನ್ನು ಪೂರೈಸುತ್ತಾನೆ. "ನನ್ನನ್ನು ಮಾಸ್ಕೋದಲ್ಲಿ ಕಾರ್ಮಿಕರ ಮಿಲಿಟರಿ ದಳಗಳನ್ನು ಸಂಘಟಿಸಲು ನೇಮಿಸಲಾಯಿತು. ಮಾಸ್ಕೋದಲ್ಲಿ ಜರುಗಿದ ಸಶಸ್ತ್ರ ಬಂಡಾಯಕ್ಕೆ ಮುನ್ನ ನಾನು ನನ್ನ ಪತ್ನಿ ಜೊಸೆಫೀನ ಎದುವಾರ್ದೊವ್ನ ಜಲೋಮೊವಳ ನೆರವಿನಿಂದ ಬಾಂಬುಗಳಿಗೆ ಜಾಕೆಟ್ಟುಗಳನ್ನು ತಯಾರಿಸುತ್ತಿದ್ದೆ. ನನ್ನ ಪತ್ನಿ ಸೈಬೀರಿಯಾದಿಂದ ಹತ್ತು

ತಿಂಗಳ ಮಗಳೊಂದಿಗೆ ನನ್ನ ಬಳಿಗೆ ಬಂದು ಸೇರಿದ್ದಳು. ಬಂಡಾಯದಲ್ಲಿ ನಾನು ಆಳ್ವೇರಿಗಳ ಬಳಿ ನಡೆದ ಕದನಗಳಲ್ಲಿ ಭಾಗವಹಿಸಿದೆ. 1906ರ ಬೇಸಿಗೆಯಲ್ಲಿ ನನ್ನ ಉಗುಳಿನಲ್ಲಿ ರಕ್ತ ಬರತೊಡಗಿದ್ದುದರಿಂದ ಅಜ್ಞಾತವಾಸದಲ್ಲಿದ್ದ ನಾನು ಹೊರ ಬರಲೇ ಬೇಕಾಯಿತು."

ಹೊರಬಂದನಂತರ ಜಲೋಮೊವ್ ರಾಜಧಾನಿ ಬಿಟ್ಟುಹೊರಟ. ಹೀಗೆ ನೀಝ್ನಿ-ನೋವ್ಗೊರೊದ್ ಕಾರ್ಮಿಕ ಪ್ಯೋತರ್ ಜಲೋಮೊವ್ ತನ್ನ ಕುಟುಂಬ ದೊಂದಿಗೆ ಕೂರ್ಸ್ಕ್ ಪ್ರಾಂತದ ಪುಟ್ಟ ಪಟ್ಟಣ ಸೂದ್ಝದಲ್ಲಿ ಕಾಣಿಸಿಕೊಂಡ. ಆದರೆ ಸೂದ್ಝದಲ್ಲಿ ಬಾಳು ಅವನಿಗೆ ವಾಸ್ತವವಾಗಿ ದ್ವಿತೀಯ ಗಡೀಪಾರಾಗಿದ್ದಿತು. ಏಕೆಂದರೆ ಊರು ಬಿಟ್ಟು ಹೊರಹೋಗದಂತೆ, ಎಲ್ಲೂ ಕೆಲಸ ಮಾಡದಂತೆ ಅವನ ಮೇಲೆ ನಿಷೇಧ ಹಾಕಲಾಗಿದ್ದಿತು. ಪೋಲೀಸರು ಅವನ ಪ್ರತಿಯೊಂದು ಹೆಜ್ಜೆಯನ್ನೂ ಗಮನಿಸುತ್ತಿದ್ದರು. ಉಪವಾಸ ಮುಷ್ಕರಗಳು, ಸೆರೆಮನೆ ಹಾಗೂ ಗಡೀಪಾರು ವಾಸಗಳಿಂದ ಶಿಥಿಲಗೊಂಡಿದ್ದ ಜಲೋಮೊವ್‌ನ ಆರೋಗ್ಯ ಮತ್ತಷ್ಟು ಕೆಟ್ಟಿತು. ಸ್ಥಳೀಯ ಶಾಲೆಯೊಂದರಲ್ಲಿ ಅಧ್ಯಾಪಕಿಯಾಗಿ ಕೆಲಸ ಮಾಡುತ್ತಿದ್ದ ಜೊಸೆಫೀನ ಎದುವಾರ್ದೊವ್ನಳು ಸಂಪಾದಿಸಿದ ಹಣದಿಂದಷ್ಟೆ ಕುಟುಂಬ ಬಾಳಬೇಕಿತ್ತು.

ಆಗ ಬಂದಿತು 1917ರ ಫೆಬ್ರುವರಿ, ಮತ್ತು ಅನಂತರ ಅಕ್ಟೋಬರ್. ಹಿಂದೆ ಧ್ವಜಧಾರಿಯಾಗಿದ್ದ ನಿಷ್ಠಾವಂತ ಕ್ರಾಂತಿಕಾರಿಯಾದ ಜಲೋಮೊವ್ ಮತ್ತೆ ಘಟನೆಗಳ ಮಧ್ಯೆ ಕಾಣಿಸಿಕೊಂಡ. ಭಾಗವಹಿಸಿದ ಮೊಟ್ಟಮೊದಲ ಸಾಮೂಹಿಕ ಸಭೆಯಲ್ಲೇ ಅವನು ಭಾವಪೂರ್ಣ ಭಾಷಣ ಮಾಡಿ ಪೆತ್ರೊಗ್ರಾದ್‌ನಲ್ಲಿ ಜರುಗಿದ ಘಟನೆಗಳ ಅರ್ಥವನ್ನು ರೈತರಿಗೂ ಕೈಕಸುಬುದಾರರಿಗೂ ವಿವರಿಸಿ ತಿಳಿಸಿದ.

ತನ್ನ ಸೋದರನಿಗೆ ಬರೆದ ಪತ್ರವೊಂದರಲ್ಲಿ ಪ್ಯೋತರ್ ಜಲೋಮೊವ್ ಕ್ರಾಂತಿಯ ಸಮಯದಲ್ಲೂ ಅಂತರ್ಯುದ್ಧದ ಸಮಯದಲ್ಲೂ ತನ್ನ ಬಾಳಿನ ಸುಸ್ಪಷ್ಟ ವಿವರಣೆ ನೀಡಿದ್ದಾನೆ:

"1917ರಲ್ಲಿ ನಾನು.... ಪ್ರಾಂತದಲ್ಲಿ ಸೋವಿಯತ್ ಪ್ರಭುತ್ವ ಸಂಘಟಿಸು ವುದರಲ್ಲಿ ಭಾಗವಹಿಸಿದ್ದೆ. ಅದಾದ ಸ್ವಲ್ಪ ಸಮಯದಲ್ಲೇ "ಕಮಿಸ್ಸಾರ್ ಆಫ್ ಲೇಬರ್" ಆಗಿ ಆಯ್ಕೆಗೊಂಡೆ. ಸೂದ್ಝ್ ಪಟ್ಟಣವನ್ನು ವಶಪಡಿಸಿಕೊಂಡನಂತರ ಶ್ವೇತದಳದವರು ನನ್ನನ್ನು ಹಲವಾರು ಬಾರಿ ಕೊಲೆಮಾಡಲು ಯತ್ನಿಸಿದರು. ಆದರೆ ನಾನು ಮೂರು ಬಾರಿ ಅವರ ನೇಣುಗುಣಿಕೆಯಿಂದ ಯಶಸ್ವಿಯಾಗಿ ತಪ್ಪಿಸಿಕೊಂಡೆ. ಕೊನೆಯ ಬಾರಿ ಜನರಲ್ ದೆನೀಕಿನ್ ದಳಗಳು ನನ್ನನ್ನು ಬಂಧಿಸಿ ಮಿಲಿಟರಿ ವಿಚಾರ ಣೆಗೆ ಗುರಿಮಾಡಿದವು. ಜೈಲರುಗಳು ಪ್ರತಿದಿನವೂ ನನ್ನನ್ನು ಗಲ್ಲಿಗೇರಿಸುವ ಅಥವಾ ಗುಂಡಿಟ್ಟು ಕೊಲ್ಲುವ ಭೀತಿ ಹಾಕುತ್ತಿದ್ದರು. ಕೆಂಪು ಸೈನ್ಯ ಬರದೆ ಹೋಗಿದ್ದರೆ ಅವರು ನನ್ನನ್ನು ವಧೆ ಮಾಡುತ್ತಿದ್ದುದು ಖಂಡಿತ."

ಕೆಂಪು ಸೈನ್ಯವು ಪ್ಯೋತರ್ ಜಲೋಮೊವ್‌ನನ್ನು ಸಾವಿನಿಂದ ಸಂರಕ್ಷಿಸಿತು.

ಆದರೆ ಅವನ ಬಲ ತುಂಬ ಉಡುಗಿ ಹೋಗಿತ್ತು. ಅವನಿಗೆ ಆಮೂಲಾಗ್ರವಾದ ವೈದ್ಯೋಪಚಾರ ಅತ್ಯಗತ್ಯವಾಗಿತ್ತು. ಜಲೋಮೊವ್ ಮಾಸ್ಕೋಗೆ ಹೋಗಿ ಬಹಳ ಕಾಲ ಆಸ್ಪತ್ರೆಯಲ್ಲಿರುತ್ತಾನೆ. ಕ್ರಮಕ್ರಮವಾಗಿ ಅವನು ಆರೋಗ್ಯವನ್ನು ಮತ್ತೆ ಬಲಪಡಿಸಿಕೊಳ್ಳುತ್ತಾನೆ, ತನ್ನ ಹಳೆಯ ಸ್ನೇಹಿತರೊಂದಿಗೆಲ್ಲ ಬಾಂಧವ್ಯವನ್ನು ಮತ್ತೆ ಬೆಳೆಸುತ್ತಾನೆ (ಉದಾಹರಣೆಗೆ, ಪ್ರಮುಖ ಕ್ರಾಂತಿಕಾರಿ ಹಾಗೂ ಲೆನಿನ್‌ವಾದಿ ಗ್ಲೆಬ್ ಕೃಜಿಜನೋವ್‌ಸ್ಕಿಯವರ ಕುಟುಂಬದವರೊಂದಿಗೆ) ಗೋರ್ಕಿಯವರ ನಾಯಕನ ಜೀವನದಲ್ಲಿ ಒಂದು ಹೊಸ ಅಧ್ಯಾಯ ತೆರೆಯುತ್ತದೆ.

ಹುಟ್ಟು ಪ್ರಕ್ಷೋಭೆಕಾರನಾದ ಪ್ಯೋತರ್ ಜಲೋಮೊವ್ ರೈತರ ಮಧ್ಯೆ ಮಹತ್ವದ ಕಾರ್ಯ ನೆರವೇರಿಸುತ್ತಾನೆ. ಅವರಿಗೆ ವೃತ್ತಪತ್ರಿಕೆಗಳನ್ನು ಓದಿಹೇಳುತ್ತಾನೆ, ಸೋವಿಯತ್ ಪ್ರಭುತ್ವವು ಗ್ರಾಮಾಂತರದಲ್ಲಿ ಅನುಸರಿಸುತ್ತಿದ್ದ ನೀತಿಯ ಬಗೆಗೂ, ಸರಕಾರದ ಹೊಸ ನಿರ್ಧಾರ ಹಾಗೂ ಶಾಸನಗಳ ಬಗೆಗೂ ಅವರಿಗೆ ಸರಳವಾದ ಸ್ಪಷ್ಟವಾದ ರೀತಿಯಲ್ಲಿ ತಿಳಿಯಹೇಳುತ್ತಾನೆ.

ಸಾಮೂಹಿಕ ಕೃಷಿ ಚಳವಳಿ ಪ್ರಾರಂಭವಾದಾಗ ಪ್ಯೋತರ್ ಸೂದ್ಜ್ ರೈತರ ಮಧ್ಯದಲ್ಲೇ ಒಂದು ಸಾಮೂಹಿಕ ಕೃಷಿಕ್ಷೇತ್ರ ಸಂಘಟಿಸಿದ. ಅದಕ್ಕೆ "ಕ್ರಾಸ್ನಿಯ್ ಒಕ್ತ್ಯಾಬ್ರ್" ("ಕೆಂಪು ಅಕ್ಟೋಬರ್") ಎಂದು ಹೆಸರಿಡಲಾಯಿತು. ಹಲವಾರು ವರ್ಷ ಅವನು ಅದರ ಅಧ್ಯಕ್ಷನಾಗಿದ್ದ, ಅನಂತರ ಅದರ ಸಲಹಾ ಮಂಡಲಿಯ ಸದಸ್ಯನಾದ.

ಅನಾರೋಗ್ಯದಿಂದಿದ್ದರೂ, ವೈದ್ಯರು ವಿಶ್ರಾಂತಿ ಅಗತ್ಯವೆಂದು ಹೇಳಿದ್ದರೂ ಪ್ಯೋತರ್ ಕೆಲಸಮಾಡುತ್ತಲೇ ಹೋದ. ತನ ಸ್ಮರಣೆಗಳನ್ನೆಲ್ಲ ಬರೆದಿಟ್ಟ. ತನ್ನ ಕ್ರಾಂತಿಕಾರಿ ಕಾರ್ಯದ ಬಗೆಗೆ, ಗೋರ್ಕಿಯವರೊಂದಿಗೆ ನಡೆಸಿದ ಭೇಟಿಸಂಭಾಷಣೆಗಳ ಬಗೆಗೆ ಬರೆದ. 'ತಾಯಿ' ಕಾದಂಬರಿಯ ಓದುಗರೊಂದಿಗೆ ವಿಪುಲ ಪತ್ರ ವ್ಯವಹಾರ ನಡೆಸಿದ. ತನ್ನ ಮಿತ್ರರಿಗೆ – ಕೃಜಿಜನೋವ್‌ಸ್ಕಿ ಕುಟುಂಬದವರಿಗೆ – ಬರೆದ ಪತ್ರವೊಂದರಲ್ಲಿ ಪ್ಯೋತರ್ ತನ್ನ ಜೀವನದ ಗುರಿಗಮ್ಯಗಳನ್ನು ಹೀಗೆ ತಿಳಿಸಿದ್ದಾನೆ: "ಗುಲಾಮನೊಬ್ಬ ತನ್ನ ಪ್ರಾಣಭಯ ನೀಗಿಕೊಂಡು ಸ್ವಾತಂತ್ರ್ಯಕ್ಕಾಗಿ ಹೋರಾಡಲು ದೃಢ ನಿರ್ಧಾರ ಮಾಡಿದ ದಿನವೇ, ಅವನಿನ್ನೂ ಸಂಕೋಲೆಗಳಿಂದ ಬಂಧಿತನಾಗಿದ್ದರೂ, ಸ್ವತಂತ್ರ ಮನುಷ್ಯನಾಗುತ್ತಾನೆ, ಎಂಬುದು ನನ್ನ ಅಭಿಪ್ರಾಯ. ಗುಲಾಮಗಿರಿ ಹೋಗಬೇಕೆಂಬುದೇ ನನ್ನ ಹೆಬ್ಬಯಕೆ. ನನಗೆ ಗುಲಾಮರನ್ನು ಕಂಡರಾಗದು. ಯೋಧರನ್ನು ನಾನು ತುಂಬ ಪ್ರೀತಿಸುತ್ತೇನೆ, ಸ್ವತಂತ್ರ ವ್ಯಕ್ತಿಯ ಕೆಚ್ಚೆದೆ ಹೊಂದಿರುವ ಜನರನ್ನು ನಾನು ತುಂಬ ಪ್ರೀತಿಸುತ್ತೇನೆ."

ಕ್ರಾಂತಿಯ ಒಬ್ಬ ಸಾಮಾನ್ಯ ಯೋಧ, ತನ್ನ ಕಾಲದಲ್ಲಿ ಗೋರ್ಕಿಯವರ ಮನ ಸೆಳೆದ ಪ್ಯೋತರ್ ಜಲೋಮೊವ್ ಇಂದೂ ತನ್ನ ಉದಾತ್ತ ಆಶೋತ್ತರಗಳಿಂದ ತನ್ನ ನೈತಿಕ ಪರಿಶುದ್ಧತೆಯಿಂದ ನಮ್ಮ ಮನ ಸೆಳೆಯುತ್ತಾನೆ. ಪ್ಯೋತರ್

ಜಲೋಮೊವ್‌ನಲ್ಲಿ, ಅವನ ಜೀವನ ಹಾಗೂ ಆಗುಹೋಗುಗಳಲ್ಲಿ, ಇಪ್ಪತ್ತನೆಯ ಶತಮಾನದ ಜಾಗೃತಿಗೊಂಡ ರಷ್ಯನ್ ಕಾರ್ಮಿಕ ಕ್ರಾಂತಿಕಾರಿಯ ಅತ್ಯುತ್ತಮ ಲಕ್ಷಣಗಳು ಬಿಂಬಿತವಾಗಿವೆ.

ಎಲೇನ ಮಿರೊಪೋಲ್‌ಸ್ಕಯ

ಓದುಗರಲ್ಲಿ ಮನವಿ

ಈ ಕಾದಂಬರಿ, ಇದರ ಅನುವಾದ ವಿನ್ಯಾಸ ಮುದ್ರಣ ಗಳ ಬಗೆಗೆ, ನಿಮ್ಮ ಅಭಿಪ್ರಾಯಗಳನ್ನೂ, ನಿಮ್ಮ ಇತರ ಅಭಿಲಾಷೆಗಳನ್ನೂ ನಮಗೆ ಬರೆದು ತಿಳಿಸಿದಲ್ಲಿ ನಾವು ಉಪಕೃತರು.

ನಮ್ಮ ವಿಳಾಸ:

17, Zubovsky Boulevard,
Moscow, USSR

ನಮ್ಮ ಪ್ರತಿಗಳು ದೊರೆಯುವ ಸ್ಥಳ:
ನವ ಕರ್ನಾಟಕ ಪಬ್ಲಿಕೇಷನ್ಸ್ (ಪ್ರೈ), ಲಿಮಿಟೆಡ್,
ಬಿ. ಆರ್. ಸಿ. ಕಾಂಪ್ಲೆಕ್ಸ್,
ಎಸ್. ಸಿ. ರೋಡ್,
ಬೆಂಗಳೂರು – 560009

ಕೆಂಪೇಗೌಡ ಸರ್ಕಲ್,
ಬೆಂಗಳೂರು – 560009

ಕೆ. ಎಸ್. ಆರ್. ರೋಡ್,
ಮಂಗಳೂರು – 575001

"ನಾನು ಗೋರ್ಕಿಯನ್ನು ಸ್ವತಃ ಅರಿತಿದ್ದೇನೆ ಹಾಗೂ ಪ್ರೀತಿಸುತ್ತೇನೆ; ಯೂರೋಪಿನಲ್ಲಿ ಖ್ಯಾತಿಪಡೆದ ಶ್ಲಾಘನಾರ್ಹ ಲೇಖಕನೆಂದು ಮಾತ್ರವಲ್ಲದೆ ಬುದ್ಧಿವಂತ, ಸಹೃದಯಿ, ಮತ್ತು ಕರುಣಾಳೆಂದು ಅರಿತಿದ್ದೇನೆ."

ಲೆವ್ ತೊಲ್‌ಸ್ತೊಯ್

(ದಿನಚರಿ ಟಿಪ್ಪಣಿಯಿಂದ)

"ಗೋರ್ಕಿಯುವರ ಪ್ರತಿಭೆಗೆ ಕೇವಲ ಒಂದೇ ಒಂದು ಹೆಸರಿದೆ – ಸತ್ಯವೇ ಆ ಹೆಸರು."

ಸ್ಟೀಫನ್ ಜ್ವೇಯ್‌ಗ್

"ಮಕ್ಸೀಂ ಗೋರ್ಕಿಯ ಕೃತಿಗಳು ಭರವಸೆ ಮತ್ತು ನಂಬಿಕೆಯುನ್ನು ತುಂಬುತ್ತವೆ."

ಬರ್ನಾರ್ಡ್ ಷಾ.

"ನೀವು ಶೀತಕಾಲದ ಅಳಿವು, ಆಗತಾನೆ ಆರಂಭವಾದ ವಸಂತ ಋತು ಅಂದರೆ ಹಗಲೂ ಇರುಳೂ ಒಂದೇ ಪ್ರಮಾಣವುಳ್ಳ ಮೇಷಸಂಕ್ರಾಂತಿಯಲ್ಲಿ ಜನ್ಮತಾಳಿದಿರಿ. ಈ ಕಾಕತಾಳೀಯತೆ ಹಳೇ ಜಗತ್ತಿನ ನಿರ್ನಾಮ ಮತ್ತು ಬಿರುಗಾಳಿಯ ನಡುವೆ ಎದ್ದ ನೂತನ ಜಗತ್ತಿಗೆ ಬೆಸೆದುಕೊಂಡಿರುವ ನಿಮ್ಮ ಜೀವನಕ್ಕೆ ಸಾಂಕೇತಿಕವಾಗಿದೆ."

ರೋಮೆನ್ ರೊಲಾನ್

(ಮಕ್ಸೀಂಗೋರ್ಕಿಯವರಿಗೆ ಬರೆದ ಪತ್ರದಿಂದ)

"ನೂತನ ಸಾಹಿತ್ಯದ ಲಾಂಛನದಲ್ಲಿ ಗೋರ್ಕಿಯವರ ಹೃದಯವಿದೆ. ಈ ಹೃದಯದಲ್ಲಿ ಇಡೀ ಜಗತ್ತಿಗೆ ಶಾಂತಿಯಿದೆ."

ಕ್ರಿಶನ್ ಚಂದರ್